# ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ



• ಡಾ। ವಿ. ಎಸ್. ಸಂಪತ್ಕುಮಾರಾಚಾರ್ಯ

ಪಠ್ಯಪುಸ್ತಕಮಾಲೆ—92

# ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ

ಸಂಪುಟ–೧

ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ




1983

**KARNATAKA SANGEETHA PARIBHASHIKA SHABDA KOSHA :** By Dr. V. S. Sampathkumaracharya, published by the Director Prasaranga, University of Mysore, Mysore–6. First Edition : 1983, Demy Octavo pp. iv+600, price : Rs. 14–00

ಮೊದಲನೆಯ ಮುದ್ರಣ : ೧೯೮೩



ಬೆಲೆ : ರೂ. 14–00

ಪ್ರಕಾಶಕರು

ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು ೬

ಮುದ್ರಕರು

ಮಾಲಿಕ್ ಪವರ್ ಪ್ರೆಸ್ 863, ಚಾಮುಂಡೇಶ್ವರಿ ರಸ್ತೆ

ಮೈಸೂರು–೪

# ಬಿನ್ನಹ

ಸಂಗೀತವೆಂಬುದು ಲಲಿತಕಲೆಗಳಲ್ಲಿ ಶ್ರೇಷ್ಠವಾದ, ಎಲ್ಲರಿಗೂ ಆಹ್ಲಾದಕರವಾದ ವಿದ್ಯೆ. ಇದು ಐಹಿಕ ಮತ್ತು ಆಮುಷ್ಮಿಕ ಆನಂದಕ್ಕೆ ಕಾರಣಭೂತವಾದುದು. ನಾದೋಪಾಸನ ರೂಪವಾದ ತಪಸ್ಸಿದ್ಧಿಯಿಂದಲೂ, ದೈವಾನುಗ್ರಹದಿಂದಲೂ ಪ್ರಾಪ್ತವಾದ ಸಂಗೀತಸುಧಾಸ್ವಾದನ ಮತ್ತು ಸ್ವರೂಪವನ್ನು ಸುಲಭವಾಗಿ ತಿಳಿಯಲು ಒಂದೇ ಗ್ರಂಥವು ದೊರಕುವುದು ದುರ್ಲಭ. ಇದು ನನ್ನ ಮನಸ್ಸಿನಲ್ಲಿತ್ತು. ನಾನು ಸುಮಾರು ೩೫ ವರ್ಷಗಳಿಂದಲೂ ಸಂಗೀತ ಕಚೇರಿಗಳನ್ನು ಕೇಳುತ್ತ ಬಂದಿದ್ದೇನೆ. ಅವುಗಳಿಗೆ ಸಂಬಂಧಿಸಿದಂತೆ ನನ್ನ ಹಲವು ಸ್ನೇಹಿತರು ಆಗಾಗ್ಗೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ಸಂಗೀತ ಕಲಾ ಪ್ರೇಮಿಗಳಿಗೆ ಸುಲಭವಾಗಿ ಅರ್ಥವಾಗುವ ಒಂದು ಕೋಶವನ್ನು ರಚಿಸಬೇಕೆಂಬ ಅಭಿಲಾಷೆ ಮೂಡಿತು. ಸಂಗೀತವನ್ನು ಕುರಿತು ಮೊದಲು ನನಗೆ ಪ್ರೋತ್ಸಾಹವಿತ್ತವರು ನನ್ನ ಸೌಭಾಗ್ಯ ವತಿಯ ಗುರುವಾದ ಸಂಗೀತ ಭೂಷಣ ಶ್ರೀ ಎಂ. ಎ. ನರಸಿಂಹಾಚಾರ್ಯರು. ತರುವಾಯ ಪ್ರೋತ್ಸಾಹಿಸಿ ಪುಸ್ತಕವನ್ನು ಬರೆಸಿದ ಹಿರಿಯ ಮಿತ್ರರಾದ ಪ್ರೊ. ವಿ. ರಾಮರತ್ನಂರವರು, ಮೈಸೂರು ವಿಶ್ವವಿದ್ಯಾನಿಲಯದ ಲಲಿತ ಕಲೆಗಳ ಕಾಲೇಜಿನ ಪ್ರಧಾನಾಚಾರ್ಯರಾಗಿದ್ದಾಗಲೇ ಮದ್ರಾಸಿನ ಪ್ರೊ. ಪಿ. ಸಾಂಬಮೂರ್ತಿ ಯವರ ಆಂಗ್ಲ ಭಾಷೆಯ ದಕ್ಷಿಣಾದಿ ಸಂಗೀತ ಕೋಶದಂತೆ ಕನ್ನಡದಲ್ಲಿ ಸಮಗ್ರವಾದ ಒಂದು ಸಂಗೀತಕೋಶವನ್ನು ರಚಿಸಬೇಕೆಂದು ಆಗ್ರಹಪಡಿಸಿದರು. ಅಂತೆಯೇ ಸುಮಾರು 6–7 ವರ್ಷಗಳ ಕಾಲ ವಿಷಯ ಸಂಗ್ರಹಣೆ ಮತ್ತು ಗ್ರಂಥರಚನೆಯಲ್ಲಿ ತೊಡಗಿದೆ. ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು, ಹಲವಾರು ಲೇಖನಗಳು, ಚರಿತ್ರೆಗಳು, ಶಾಸನಗಳು ಮುಂತಾದ ಹಲವು ಮೂಲಗಳಿಂದ ವಿಷಯ ಸಂಗ್ರಹಣೆ ಮಾಡಿ, ಪ್ರತಿಯೊಂದು ಪಾರಿಭಾಷಿಕ ಪದ ಮತ್ತು ವಿಷಯವನ್ನು ಕುರಿತು ಸುಲಭ ತಿಳಿಯುವ ರೀತಿಯಲ್ಲಿ ವಿವರಣೆಯನ್ನು ಕೊಡಲು ಪ್ರಯತ್ನಿಸಿದ್ದೇನೆ. ಮೇಲ್ಕಂಡ ವಿದ್ವಾಂಸರಿಗೆ ನನ್ನ ಅನಂತವಂದನೆಗಳು.

ಇದರಲ್ಲಿ ಕನ್ನಡ ನಾಡಿನ ಕೊಡುಗೆಯನ್ನೂ, ಕರ್ಣಾಟಕದ ವಾಗ್ಗೇಯಕಾರರ ಕೊಡುಗೆಯನ್ನೂ ಪೂರ್ತಿಯಾಗಿ ಕೊಡಲು ಪ್ರಯತ್ನಿಸಿ ಬೇರೆ ಪ್ರಾಂತ್ಯದವರು ರಚಿಸಿರುವ ಕೋಶದಲ್ಲಿರುವ ಕೊರತೆಯನ್ನು ನೀಗಿಸಲು ಪ್ರಯತ್ನಿಸಿದ್ದೇನೆ. ಸಂಗೀತದ ಪಾರಿಭಾಷಿಕ ಶಬ್ದಗಳು, ವಾಗ್ಗೇಯಕಾರರು, ಸಂಗೀತವಾದ್ಯಗಳು, ಕೇಂದ್ರಗಳು, ಶಿಲ್ಪ, ಮೂಲಗ್ರಂಥಗಳು, ಇತಿಹಾಸ, ಭರತನಾಟ್ಯದ ಮುಖ್ಯಾಂಶಗಳು, ಕಥಕಳಿ, ಯಕ್ಷಗಾನ, ಇತರ ನೃತ್ಯ ಪ್ರಕಾರಗಳು ಮುಂತಾದುವಲ್ಲದೆ ಹಿಂದಿನ ಖ್ಯಾತ ಸಂಗೀತಗಾರರ ಮತ್ತು ಇಂದಿನ ಖ್ಯಾತ ಸಂಗೀತಗಾರರ ಪರಿಚಯವನ್ನು

ಕೊಡಲಾಗಿದೆ. ಸಂಗೀತ ವಿದ್ವಾಂಸರ ಹೆಸರುಗಳಲ್ಲಿ ಕೆಲವು ಬಿಟ್ಟು ಹೋಗಿರಬಹುದು. ಅದಕ್ಕೆ ಕಾರಣ ಅವರಿಂದ ಮಾಹಿತಿ ದೊರೆಯದಿರುವುದು. ಯಾರನ್ನೂ ಉದ್ದೇಶಪೂರ್ವಕವಾಗಿ ಬಿಟ್ಟಿಲ್ಲ ಎಂಬುದನ್ನು ತಿಳಿಸಬಯಸುತ್ತೇನೆ. ಒಟ್ಟು ಸುಮಾರು ೭೦೦೦ಕ್ಕೂ ಹೆಚ್ಚು ಪದಗಳೂ ವಿಷಯಗಳೂ ಈ ಸಂಗೀತ ಕೋಶದಲ್ಲಿವೆ.

ನನ್ನ ಈ ಶ್ರಮಸಾಹಸದಲ್ಲಿ ನೆರವು ನೀಡಿದ ಮಹನೀಯರೂ, ಹಿರಿಯರೂ, ಮಿತ್ರರೂ ಅನೇಕರು. ನಾನು ಬರೆದುದನ್ನೆಲ್ಲಾ ವಿಮರ್ಶಾತ್ಮಕ ದೃಷ್ಟಿಯಿಂದ ಮೇಲಾಗಿ ಭಾಷಾದೃಷ್ಟಿಯಿಂದ ಓದಿ ಸೂಕ್ತ ಸಲಹೆಗಳನ್ನಿತ್ತವರು ಮೈಸೂರಿನ ನಿವೃತ್ತ ಜಿಲ್ಲಾ ವಿದ್ಯಾಧಿಕಾರಿ ಹಾಗೂ ಹಿರಿಯ ಗಮಕಿಗಳಾದ ಶ್ರೀ ಕೆ. ಟಿ ರಾಮಸ್ವಾಮಿ ಅಯ್ಯಂಗಾರ್ಯರು. ಸಂಗೀತಶಾಸ್ತ್ರ ಭಾಗಗಳನ್ನು ಓದಿ ಸಲಹೆ ನೀಡಿದವರು ನನ್ನ ಹಿರಿಯ ಮಿತ್ರ ಸಂಗೀತ ವಿದ್ವಾನ್ ಶ್ರೀ ಎ. ಆರ್ ಕೃಷ್ಣಮೂರ್ತಿಯವರು. ಎಲ್ಲಕ್ಕೂ ಮಿಗಿಲಾಗಿ ಮೊದಲಿಂದ ಕೊನೆಯವರೆಗೆ ಕೂಲಂಕಷವಾಗಿ ಓದಿ, ತಿದ್ದಿ, ಚರ್ಚಿಸಿ ಸಲಹೆಗಳನ್ನಿತ್ತು ನನ್ನ ಈ ಕಾರ್ಯಕ್ಕೆ ಮೆರುಗನ್ನಿತ್ತಿರುವವರು ವೈಣಿಕ ವಿದ್ವಾನ್ ಎಂ ಚೆಲುವರಾಯಸ್ವಾಮಿಯವರು. ಸಂಗೀತದ ವಿಷಯಗಳ ಬಗ್ಗೆ ನನಗೆ ಸಂದೇಹ ತೋರಿದಾಗಲೆಲ್ಲಾ ಪ್ರಯೋಗ ಮತ್ತು ಅನುಭವದಿಂದ, ಚರ್ಚೆಯ ಮೂಲಕ ಎಲ್ಲವನ್ನೂ ಪರಿಹರಿಸಿ, ಅಧ್ಯಯನ ಮತ್ತು ಲೇಖನ ವ್ಯವಸಾಯಕ್ಕೆ ಉತ್ತೇಜನಕರವಾದ ವಾತಾವರಣವನ್ನುಂಟು ಮಾಡಿ ಸಹಕರಿಸಿರುವ ನನ್ನ ಧರ್ಮಪತ್ನಿ ಸಂಗೀತ ವಿದುಷಿ ಟಿ. ಎಸ್. ಲೀಲ ಮತ್ತು ಹಸ್ತ ಪ್ರತಿಯನ್ನು ಸುಂದರವಾಗಿ ನಕಲು ಮಾಡಿಕೊಟ್ಟ ನನ್ನ ಸುಪುತ್ರ ಚಿ|| ವಿ. ಎಸ್. ಮೋಹನರಾವ್ ಇವರೆಲ್ಲರಿಗೂ ನಾನು ಚಿರಋಣಿ. ಮೇಲಾಗಿ ಈ ಗ್ರಂಥವನ್ನು ಪರಿಶೀಲಿಸಿ ಪ್ರಕಟಿಸಲು ಅಂಗೀಕರಿಸಿ ಮಹದುಪಕಾರ ಮಾಡಿ ಪ್ರೋತ್ಸಾಹಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರಾಗಿದ್ದ ಡಾ. ಪ್ರಭುಶಂಕರ ಮತ್ತು ಈಗಿನ ನಿರ್ದೇಶಕರಾದ ಶ್ರೀ. ಕೆ. ಟಿ. ವೀರಪ್ಪನವರಿಗೂ ಹಾಗೂ ಉಪನಿರ್ದೇಶಕರಾದ ಶ್ರೀ. ಆರ್. ಎಲ್. ಅನಂತರಾಮಯ್ಯನವರಿಗೂ ನಾನು ಅತ್ಯಂತ ಆಭಾರಿಯಾಗಿದ್ದೇನೆ.

ಈ ಗ್ರಂಥವು ಸಂಗೀತ ಕಲಾಭಿಮಾನಿಗಳಿಗೂ ಸಂಗೀತಾಭ್ಯಾಸಿಗಳಿಗೂ ಉಪಯುಕ್ತವಾಗುವಂತಾದರೆ ನನ್ನ ಶ್ರಮವು ಸಾರ್ಥಕವಾದೀತು.

**ವಿ. ಎಸ್. ಸಂಪತ್ಕುಮಾರಾಚಾರ್ಯ**

ಅ—ವರ್ಣಮಾಲೆಯಲ್ಲಿ ಮೊದಲನೆಯ ಅಕ್ಷರ ಮತ್ತು ಓಂಕಾರದ ಮೊದಲನೆಯ ಅಕ್ಷರ. ಅನುದಾತ್ತ, ಉದಾತ್ತ ಮತ್ತು ಸ್ವರಿತಗಳೆಂಬ ಮೂರು ಭೇದಗಳುಳ್ಳ ಹ್ರಸ್ವಾಕ್ಷರ. ವಿಷ್ಣು, ಶ್ರೀಕಂಠ, ಸುರೇಶ, ಮಹಾಬ್ರಾಹ್ಮೀ, ವಾಸುದೇವ, ಧನೇಶ, ಕೇಶವ, ಬ್ರಹ್ಮಾಣೀ, ವಿಶ್ವೇಶ, ವೈಶ್ವಾನರ, ವಾಯು, ಬ್ರಹ್ಮ ಇತ್ಯಾದಿ ಹಲವು ಅರ್ಥಗಳಿವೆ.

**ಅಕಳಂಕ**—೧೮ನೇ ಶತಮಾನಕ್ಕೆ ಸೇರಿದ 'ಸಂಗ್ರಹ ಚೂಡಾಮಣಿ' ಎಂಬ ಸಂಗೀತಶಾಸ್ತ್ರ ಗ್ರಂಥವನ್ನು ಬರೆದ ಗೋವಿಂದಾಚಾರ್ಯನ ಬಿರುದು. ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿದೆ.

**ಅಕಾರಸಾಧನ**—ಅ, ಈ, ಊ, ಏ, ಓ, ಅಂ ಮುಂತಾದ ಸ್ವರಗಳ ಸಾಧಕಮಾಡಿ ಶಾರೀರವನ್ನು ಕಸಿ ಮಾಡುವುದಕ್ಕೆ ಅಕಾರಸಾಧನವೆಂದು ಹೆಸರು. ಇದರಿಂದ ಕಂಠ ಸಂಪತ್ತಿಗೆ ಸೊಬಗು, ಮೆರುಗು ಮತ್ತು ಸೌಂದರ್ಯ ಉಂಟಾಗುತ್ತದೆ. ಗಮಕಗಳನ್ನು ಖಚಿತವಾಗಿ, ಗತಿಬದ್ಧವಾಗಿ, ಕಷ್ಟವಿಲ್ಲದೆ ಹಾಡಲು ಇದರಿಂದ ಸಾಧ್ಯ. ಶೀಘ್ರಗತಿಯಲ್ಲಿ ಸ್ವರಗಳನ್ನು ಹಾಡಲು ಅನುಕೂಲವಾಗುತ್ತದೆ ಮತ್ತು ಹಾಡುವುದರಲ್ಲಿ ಕಂಠದ ಸಂಪೂರ್ಣ ಸ್ವಾಮಿತ್ವ ದೊರಕುತ್ತದೆ.

ಅಕಾರಸಾಧನೆಯನ್ನು ಮಾಯಾಮಾಳವಗೌಳ ರಾಗದಲ್ಲಿ ಮೊದಲು ಹಾಡಿಕೊಳ್ಳಬೇಕು. ಸರಳೆವರಿಸೆಗಳನ್ನು ೪ ಕಾಲಗಳಲ್ಲಿ, ಸ್ವರಗಳನ್ನು ೧, ೨, ೩, ೪ ಕಾಲಗಳಲ್ಲಿ ಹಾಡಿ ನಂತರ ಅ, ಇ, ಉ, ಎ, ಓ, ಅಂ ಕಾರಗಳಲ್ಲಿ ಹಾಡಬೇಕು. ಹಾಡುವಾಗ ಸ್ವರಸ್ಥಾನಗಳ ಮೇಲೂ ಮತ್ತು ಶ್ರುತಿಯ ಮೇಲೂ ಬಹಳ ಗಮನವಿಟ್ಟಿರಬೇಕು. ಜಂಟೀಸರಳೆಗಳನ್ನು ೩ ಕಾಲ ಸ್ವರವನ್ನು ಹಾಡಿ ನಂತರ ಅ, ಇ, ಉ, ಎ, ಒ, ಅಂ ಕಾರಗಳಲ್ಲಿ ಸಾಧನ ಮಾಡತಕ್ಕದ್ದು. ತರುವಾಯ ಅಲಂಕಾರಗಳನ್ನು ಇದೇ ರೀತಿ ಹಾಡಿಕೊಳ್ಳಬೇಕು. ಹೀಗೆ ಅಕಾರಸಾಧನೆ ಮಾಡಿದ ನಂತರ ಮುಂದೆ ಬರೆದಿರುವ ಕೆಲವು ಮುಖ್ಯ ಸಾಧಕದ ಸ್ವರಗಳನ್ನು ಮೊದಲು ಎರಡು ಕಾಲಗಳಲ್ಲಿ ಸ್ವರವನ್ನು ಅಭ್ಯಾಸ ಮಾಡಿ ನಂತರ ಆಕಾರಗಳಲ್ಲಿ ಹಾಡಿಕೊಳ್ಳಬೇಕು. ಬೆಳಗಿನ ಜಾವದ ವೇಳೆಯಲ್ಲಿ ಸಾಧಕ ಮಾಡಿಕೊಂಡರೆ ಬಹಳ ಉತ್ತಮ. ಈ ಸಾಧನೆಯನ್ನು ಮಾಡಿದವರ ಹಾಡಿಕೆಯಲ್ಲಿ ಘನತೆ, ಶ್ರುತಿಬದ್ಧತೆ, ತಾಳದ ಮೇಲೆ ಹತೋಟಿ ಇವೆಲ್ಲವೂ ಚೆನ್ನಾಗಿ ಕಂಡು ಬರುತ್ತವೆ. ಬಾಲಪಾಠಗಳ ನಂತರ ಕೃತಿಗಳಿಗೆ ಸ್ವರವಿನ್ಯಾಸ, ಮಧ್ಯಮಕಾಲ, ರಾಗಾಲಾಪನೆ ಇತ್ಯಾದಿಗಳನ್ನು ಅಭ್ಯಾಸ ಮಾಡುವಾಗ ಆಯಾ ರಾಗದ ಸ್ವರಸ್ಥಾನಗಳನ್ನು ತಿಳಿದು ಸಾಧಕ ಮಾಡಿಕೊಂಡರೆ ಎಲ್ಲಾ ಬಗೆಯ ನುಡಿಕಾರಗಳೂ ಸ್ಫುಟವಾಗಿ ಬರುತ್ತವೆ. ಸಾಧಕ ಮಾಡುವಾಗ ಅನುಸರಿಸಬೇಕಾದ ಕೆಲವು ನಿಯಮಗಳಿವೆ.

೧. ತಂಬೂರಿಯನ್ನು ಸರಿಯಾಗಿ ಶ್ರುತಿಮಾಡಿಕೊಳ್ಳಬೇಕು.
೨ ಶಿಸ್ತಿನಿಂದ ಕುಳಿತು ಅಭ್ಯಾಸ ಮಾಡಬೇಕು
೩. ಹಾಡುವಾಗ ವಿಕಾರವಾಗದ ರೀತಿಯಲ್ಲಿ ಅಂಗಚೇಷ್ಟೆಯಿಲ್ಲದೆ, ಅಕಾರ, ಎಕಾರ, ಒಕಾರಗಳು ಮಿಶ್ರವಾಗದೆ ತುಂಬುನಾದ ಬರುವಂತೆ ಶ್ರುತಿಗೆ ಗಮನವಿಟ್ಟಿರಬೇಕು.
೪. ಈ ಸಾಧಕಕ್ಕೆ ಚತುರಶ್ರಗತಿಯ ೧ ಘಾತ (ಒಂದು ಏಟು) ಹಾಕಿಕೊಳ್ಳುತ್ತಿದ್ದರೆ ಸಾಕು. ಈ ಘಾತಕ್ಕೆ ವಿಳಂಬ, ಮಧ್ಯಮಕಾಲ, ತ್ರಿಕಾಲಗಳಲ್ಲಿ ಸ್ವರ ಅಥವಾ ಸಾಹಿತ್ಯದ ಭಾಗ ಹಾಡುತ್ತಿದ್ದರೆ ಒಂದು ಸಮನಾದ ಗತಿ ನಮಗೆ ನಿಲ್ಲುತ್ತದೆ.

೧೯೪೦ಕ್ಕೆ ಹಿಂದೆ ಗುರುಕುಲವಾಸ ಕಠಿಣತರವಾಗಿತ್ತು. ರಾಗಗಳನ್ನು ಗಂಟೆಗಟ್ಟಲೆ ಹಾಡಲು ಈ ಸಾಧಕವು ಕಾರಣವಾಗಿತ್ತು. ಹಿಂದೆ ಕಚೇರಿಗಳಲ್ಲಿ ೪-೫ ಕೀರ್ತನೆಗಳನ್ನು ಮಾತ್ರ ಹಾಡುತ್ತಿದ್ದರು. ಈ ಬಗೆಯ ಸಾಧಕದಿಂದ ಶಾರೀರಕ್ಕೆ ಘನತೆ, ಸ್ವರಸ್ಥಾನಗಳ ಶುದ್ಧತೆ ಒದಗಿ ಕಚೇರಿಗಳಲ್ಲಿ ೪-೫ ಗಂಟೆಗಳ ಕಾಲ ಶಾರೀರದ ದೋಷ ಇಲ್ಲದೆ ಹಾಡಲು ಸಾಧ್ಯ.

**ಅಕ್ಕಮಹಾದೇವಿ (೧೨ನೆ ಶ.)**—ಅಕ್ಕಮಹಾದೇವಿ ಒಬ್ಬ ಪ್ರಖ್ಯಾತ ಶಿವ ಶರಣೆ ಕರ್ಣಾಟಕದ ಶಿವಮೊಗ್ಗ ಜಿಲ್ಲೆಯ ಉಡುತಡಿ ಎನ್ನುವ ಊರಲ್ಲಿ ಸುಮತಿ, ನಿರ್ಮಲರೆಂಬ ಶೈವಭಕ್ತ ದಂಪತಿಯರ ಮಗಳಾಗಿ ಜನಿಸಿದಳು. ರೂಪ ಗುಣ ಸೌಂದರ್ಯವತಿಯಾದ ಹುಡುಗಿ ಬೆಳೆದು ಯೌವನಸ್ಥಳಾದಳು. ಒಂದು ಸಲ ಆ ಊರಿನ ದೊರೆ ಕೌಶಿಕನು ಇವಳನ್ನು ಆಕಸ್ಮಿಕವಾಗಿ ನೋಡಿ ಇವಳನ್ನು ವರಿಸುವ ಆಲೋಚನೆ ಮಾಡಿ ಸಂಧಾನ ನಡೆಸಿದನು. ದುಷ್ಟ ದೊರೆಗೆ ಹೆದರಿದ ತಂದೆ ತಾಯಿ ಅಕ್ಕನನ್ನು ಕೊಡಲು ಒಪ್ಪಿದರು. ಮದುವೆಯಾದಮೇಲೆ ಶಿವಪೂಜೆಯನ್ನೂ, ಗುರುಲಿಂಗಜಂಗಮ ಪೂಜೆಯನ್ನು ಮಾಡಬೇಕೆಂದೂ ಶಿವಶರಣರ ಕಥೆ ತತ್ತ್ವೋಪದೇಶವನ್ನು ಕೇಳುವುದಕ್ಕೂ ಅಡ್ಡಿ ಬರಬಾರದೆಂದೂ ಹಾಗೆ ಅಡ್ಡಿಪಡಿಸಿ ಮೂರು ತಪ್ಪುಗಳನ್ನು ಮಾಡಿದ್ದೇ ಆದರೆ ದೊರೆಯನ್ನು ತ್ಯಜಿಸಿಹೋಗುವುದಾಗಿಯೂ ನಿಬಂಧನೆಗಳನ್ನು ಹಾಕಿದಳು. ಕೌಶಿಕನು ಒಪ್ಪಿದನು. ಅವನನ್ನು ಮದುವೆಯಾಗಿ ಅಕ್ಕನು ಅರಮನೆ ಸೇರಿದಳು ಅಕ್ಕನ ಶಿವಾಚಾರಗಳು ಕೌಶಿಕನಿಗೆ ಸರಿಬೀಳಲಿಲ್ಲ. ಅಂತೆಯೇ ಮೂರು ಸಾರಿ ತಪ್ಪುಗಳನ್ನು ಮಾಡಿದನು. ನಂತರ ಅರಮನೆಯನ್ನು ತ್ಯಜಿಸಿ, ಕಲ್ಯಾಣ ನಗರಕ್ಕೆ ಹೋಗಿ ಅಲ್ಲಿ ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮಾದಿ ಶಿವಶರಣರ ಸಂಗಸಹವಾಸದಲ್ಲಿ ಕೆಲಕಾಲವಿದ್ದು ಶ್ರೀಶೈಲಕ್ಕೆ ಹೋಗಿ ಭಗವಂತನಾದ ಚೆನ್ನಮಲ್ಲಿಕಾರ್ಜುನನ ಧ್ಯಾನದಲ್ಲಿ ನಿರತಳಾಗಿ ಜಗಜ್ಜ್ಯೋತಿಯಲ್ಲಿ ವಿಲೀನಳಾದಳು. ಅಕ್ಕನ ವಚನಗಳು ಬಹಳ ರಸವತ್ತಾಗಿವೆ, ಕಾವ್ಯಮಯವಾಗಿವೆ. ಸೌಕುಮಾರ್ಯ, ಮಾಧುರ್ಯ, ಅರ್ಥಭಾವ, ಪದಬಂಧ ಪ್ರೌಢಿಮೆಯನ್ನೊಳಗೊಂಡು ಶ್ರೋತೃಗಳ ಹೃದಯವನ್ನು ನಾದಮಯ

ವಾಗಿಸುತ್ತವೆ. ಇವು ಅತ್ಯುತ್ತಮ ಭಾವಗೀತೆಗಳಾಗಿದ್ದು ಹಾಡಲು ಉತ್ತಮವಾಗಿರುವ ರಚನೆಗಳಾಗಿವೆ.

**ಅಕ್ಕಿಲ್ ಸ್ವಾಮಿ**—ತಮಿಳುನಾಡಿನ ಚಿದಂಬರದಲ್ಲಿ ೧೯ನೆಯ ಶತಮಾನ ದಲ್ಲಿದ್ದ ಒಬ್ಬ ವಾಗ್ಗೇಯಕಾರರು. ಇವರು ಹಲವು ಸಂಸ್ಕೃತದ ಕೀರ್ತನೆಗಳನ್ನು ರಚಿಸಿದ್ದಾರೆ. 'ತಾವಕಕರಕಮಲೇ' ಎಂಬ ಇವರ ಕಲ್ಯಾಣಿರಾಗದ ಕೀರ್ತನೆಯು ಬಹು ಪ್ರಸಿದ್ಧವಾಗಿದೆ.

**ಅರ್ಕವರ್ಧನಿ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ಸ̇

ಅ: ಸ̇ ನಿ ದ ಪ ಮ ಗ ಸ

**ಅಕ್ಬರ್ (೧೫೫೬-೧೬೦೫)**—ಮೊಗಲ್ ಚಕ್ರವರ್ತಿ ಹುಮಾಯೂನನ ನಂತರ ಅವನ ಮಗನಾದ ಮಹಮ್ಮದ್ ಜಲಾಲುದ್ದೀನ್ ಅಕ್ಬರ್ ಮೊಗಲ್ ಸಿಂಹಾಸನವನ್ನೇರಿದನು. ಇವನ ಕಾಲವು ಹಿಂದೂಸ್ಥಾನೀ ಸಂಗೀತದ ಸುವರ್ಣಕಾಲವಾಗಿತ್ತು. ಇವನು ಸ್ವತಃ ಮಹಾ ಸಂಗೀತ ಪ್ರೇಮಿ ಯಾಗಿದ್ದನು ಪ್ರಸಿದ್ಧ ಪರ್ಷಿಯನ್ ಇತಿಹಾಸಕಾರನಾದ ಅಬುಲ್ ಫಜಲ್ ಬರೆದ ಐನಿ ಅಕ್ಬರಿ ಎಂಬ ಗ್ರಂಥದಲ್ಲಿ ಅಕ್ಬರನ ಸಂಗೀತ ಪ್ರೇಮ ಮತ್ತು ಅವನ ಕಾಲ ದಲ್ಲಿದ್ದ ಸಂಗೀತಗಾರರು ಹಾಗೂ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತವಾದ್ಯಗಳ ಬಗ್ಗೆ ಮಾಹಿತಿ ದೊರಕುತ್ತದೆ. ಅಕ್ಬರನಿಗೆ ಒಳ್ಳೆಯ ಸಂಗೀತ ಜ್ಞಾನವಿತ್ತು ಗಾಯನ ಮತ್ತು ವಾದನದಲ್ಲೂ ಪ್ರವೀಣನಾಗಿದ್ದನು. ನಕ್ಕಾರ ಎಂಬ ವಾದ್ಯವನ್ನು ನುಡಿಸುವು ದರಲ್ಲಿ ಪ್ರಾವೀಣ್ಯ ಪಡೆದಿದ್ದನು. ಅವನ ದರ್ಬಾರಿನಲ್ಲಿ ೩೬ ಮಂದಿ ಸಂಗೀತ ವಿದ್ವಾಂಸರಿದ್ದರು. ಹಿಂದು, ಇರಾನಿ, ತುರಾಣಿ ಹಾಗೂ ಕಾಶ್ಮೀರಿ ಮುಂತಾದ ಅನೇಕ ಸ್ತ್ರೀ ಮತ್ತು ಪುರುಷ ಸಂಗೀತ ವಿದ್ವಾಂಸರಿದ್ದರು. ಇವರಲ್ಲಿ ೭ ವರ್ಗಗಳನ್ನು ಸ್ಥಾಪಿಸಿದ್ದು ವಾರದ ಪ್ರತಿಯೊಂದು ದಿನದಲ್ಲಿ ಅವರು ಬಂದು ಚಕ್ರವರ್ತಿಗೆ ಸಂಗೀತಾನಂದ ವನ್ನು ನೀಡಬೇಕಾಗುತ್ತಿತ್ತು. ಅವನು ಹೆಚ್ಚಾಗಿ ಧಾರ್ಮಿಕ ಸಂಗೀತವನ್ನು ಮೆಚ್ಚು ತ್ತಿದ್ದನು ದೇಶಾದ್ಯಂತ ಸಂಗೀತ ಪ್ರಸಾರವಾಗುತ್ತಿತ್ತು ಅವನ ಆಸ್ಥಾನದಲ್ಲಿದ್ದ ಪ್ರಮುಖ ಸಂಗೀತ ವಿದ್ವಾಂಸರಲ್ಲಿ ಗ್ವಾಲಿಯರ್‌ನ ಮಿಯಾ ತಾನ್‌ಸೇನ್, ಬೀನ್ ವಾದಕನಾದ ಶಿಹಾಬ್‌ಖಾನ್, ಬಾನ್‌ಸುರಿ ವಾದಕನಾದ ಉಸ್ತ್‌ಮಾಸ್ತ್, ಸ್ವರ ಮಂಡಲ ವಾದಕನಾದ ಬೀರ್‌ಮಂಡಲ್‌ಖಾ ಮುಂತಾದವರಿದ್ದರು. ಅಕ್ಬರನ ನಗಾರ ಖಾನೆಯಲ್ಲಿ ಉಪಯೋಗಿಸುತ್ತಿದ್ದ ವಾದ್ಯಗಳ ಉಲ್ಲೇಖವು ಐನಿ ಅಕ್ಬರಿಯಲ್ಲಿ ಸಿಕ್ಕು ತ್ತದೆ. ಕುವರ್ಗ ಅಥವಾ ದಮಾಮ್, ನಕ್ಕಾರ, ಕರ್ನಾ, ಸಿಂಗ, ಮಂಜಿಕಾ ಮುಂತಾದ ವಾದ್ಯಗಳಿದ್ದುವೆಂದು ತಿಳಿದುಬರುತ್ತದೆ.

**ಅಗಸ್ತ್ಯಭರತಂ (ಅಗತ್ತಿಯ ಬರತಂ)**—ಅಗಸ್ತ್ಯ ಮಹರ್ಷಿಯು ರಚಿಸಿರುವುದೆಂದು ಹೇಳಲಾಗಿರುವ ತಮಿಳು ಭಾಷೆಯಲ್ಲಿರುವ ಸಂಗೀತ ಮತ್ತು ನೃತ್ಯದ ಗ್ರಂಥ.

**ಅಗ್ಗಳದೇವ (ಸು. ೧೧೮೯)**—ಇಂಗಳೇಶ್ವರ ಎಂಬ ಊರಿನ ಜೈನಕವಿ. ಸುಲಲಿತ ಕವಿತಾ ನರ್ತಕೀ ನೃತ್ಯರಂಗ, ಕವಿಕುಲಕಲಭವ್ರಾತ ಯೂಥಾದಿನಾಥ ಇತ್ಯಾದಿ ಬಿರುದಾಂಕಿತನು. ರಾಜಸಭೆಯಲ್ಲಿ ಪ್ರಸಿದ್ಧ ಕವಿಯಾಗಿದ್ದನು. ಎಂಟನೆಯ ತೀರ್ಥಂಕರ ಚಂದ್ರಪ್ರಭನ ಚರಿತ್ರೆಯಾದ 'ಚಂದ್ರಪ್ರಭ ಪುರಾಣ' ಎಂಬ ಗ್ರಂಥವನು ಬರೆದಿದ್ದಾನೆ. ಇದು ೧೬ ಆಶ್ವಾಸಗಳಿರುವ ಗ್ರಂಥ. ಈ ಗ್ರಂಥದ ೭, ೧೧, ೧೨ ಅಧ್ಯಾಯಗಳಲ್ಲಿ ಬರುವ ಅಜಿತಸೇನ ಚಕ್ರಧರ ವಸಂತೋತ್ಸವ, ಗರ್ಭಾವತರಣ ಕಲ್ಯಾಣ ವರ್ಣನ, ಜಾತಕರ್ಮೋತ್ಸವ, ಜಗನ್ನಾಥ ಜಿನಾಭಿಷವಣ ಕಲ್ಯಾಣ ವರ್ಣನಗಳಲ್ಲಿ ಸಂಗೀತ ಮತ್ತು ನಾಟ್ಯಗಳ ಸುಂದರವಾದ ವರ್ಣನೆಗಳಿವೆ. ಆಗಿನ ಕಾಲದ ಸಂಗೀತ ಮತ್ತು ನಾಟ್ಯಗಳ ಸ್ವರೂಪವನ್ನು ಅರಿಯಲು ಸಹಾಯಕವಾಗಿವೆ

**ಅಗ್ನಿಂ**—ಹನ್ನೆರಡು ಪಟಹವಾದ್ಯಗಳಲ್ಲಿ ಇದೊಂದು ವಾದ್ಯ ವಿಶೇಷ.

**ಅಗ್ನಿ**—೭೨ ಮೇಳಕರ್ತ ಪದ್ಧತಿಯಲ್ಲಿ ಮೂರನೆಯ ಚಕ್ರದ ಹೆಸರು. ಇದು ಸಂಖ್ಯೆ ಮೂರನ್ನು ಸೂಚಿಸುತ್ತದೆ. ಮೂರು ಪವಿತ್ರಾಗ್ನಿಗಳು (ಅಗ್ನಿತ್ರಯ) ಯಾವುವೆಂದರೆ—ದಕ್ಷಿಣ, ಆಹವನೀಯ ಮತ್ತು ಗಾರ್ಹಪತ್ಯ.

ಈ ಚಕ್ರವು ೧೩ ರಿಂದ ೧೮ರ ವರೆಗಿನ ಆರು ರಾಗಗಳನ್ನು ಒಳಗೊಂಡಿದೆ: ಅವು ಯಾವುವೆಂದರೆ

| | | | | | | |
|---|---|---|---|---|---|---|
| ಅಗ್ನಿ — | ಭೂ — | ೩ನೆಯ | ಚಕ್ರದ | ೪ನೆಯ | ಮೇಳ — | ೧೬ |
| ಅಗ್ನಿ — | ಗೋ — | ,, | ,, | ೩ನೆಯ | ಮೇಳ — | ೧೫ |
| ಅಗ್ನಿ — | ಮಾ — | ,, | ,, | ೫ನೆಯ | ಮೇಳ — | ೧೭ |
| ಅಗ್ನಿ — | ಪಾ — | ,, | ,, | ೧ನೆಯ | ಮೇಳ — | ೧೩ |
| ಅಗ್ನಿ — | ಷಾ — | ,, | ,, | ೬ನೆಯ | ಮೇಳ — | ೧೮ |
| ಅಗ್ನಿ — | ಶ್ರೀ — | ,, | ,, | ೨ನೆಯ | ಮೇಳ — | ೧೪ |

**ಅಗ್ನಿ**—ಭರತ ನಾಟ್ಯದಲ್ಲಿ ಬಲಗೈಯಲ್ಲಿ ತ್ರಿಪತಾಕ, ಎಡಗೈಯಲ್ಲಿ ಲಾಂಗೂಲಹಸ್ತವಿದ್ದರೆ ಅದು ಅಗ್ನಿ ದೇವತೆಯನ್ನು ಸೂಚಿಸುತ್ತದೆ. ಇದೊಂದು ಹಸ್ತ ಭೇದ.

**ಅಗ್ನಿಕೋಪ**—ಈ ರಾಗವು ೨೦ನೆಯ ಮೇಳಕರ್ತ ನಠ ಭೈರವಿಯ ಒಂದು ಜನ್ಯರಾಗ.

(೧) ಆ: ಸ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

(೨) ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ಸ

**ಅಗ್ನಿದಾರ**—ಈ ರಾಗವು ೨೭ನೆಯ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ನಿ ದ ನಿ ಸ

ಅ: ಸ ನಿ ದ ಮ ರಿ ಸ

**ಅಗ್ರತಲ**—ಭರತ ನಾಟ್ಯದ ಆರು ಬಗೆಯ ಪಾದಭೇದಗಳಲ್ಲಿ ಒಂದು ವಿಧ. ಹಿಮ್ಮಡಿಯನ್ನು ಮೇಲೆತ್ತಿ, ಬೆರಳುಗಳನ್ನು ಅಂಚಿತವಾಗಿ ನಿಲ್ಲಿಸಿ, ಅಂಗುಷ್ಠದಿಂದ ನಿಲ್ಲುವ ಪಾದ.

**ಅಚಲವೀಣಾ**—ಇದು ಪ್ರಾಯೋಗಿಕ ವೀಣೆಯ ಹೆಸರು. ಶಾರ್ಙ್ಗದೇವನು ೨೨ ಶ್ರುತಿಗಳನ್ನು ಪ್ರದರ್ಶಿಸಲು ಬಳಸುವ ವೀಣೆ ಎಂದು ಹೇಳಿದ್ದಾನೆ. ಇದರಲ್ಲಿ ತಂತಿಗಳ ಶ್ರುತಿಯನ್ನು ಬದಲಾಯಿಸುವುದಿಲ್ಲ. ಇದಕ್ಕೆ ಧ್ರುವವೀಣೆ ಎಂದೂ ಹೆಸರು. ಚಲವೀಣೆಯು ಇದಕ್ಕೆ ವಿರುದ್ಧವಾದುದು.

**ಅಚಲನಾಟ** :—೩೬ನೆಯ ಮೇಳಕರ್ತ ಚಲನಾಟ ರಾಗದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಅಚಲಸ್ವರಗಳು**—ಷಡ್ಜ ಮತ್ತು ಪಂಚಮ ಸ್ವರಗಳು ವ್ಯತ್ಯಾಸಗೊಳ್ಳುವುದಿಲ್ಲ. ಇವು ಅವಿಕೃತ ಸ್ವರಗಳಾಗಿವೆ.

**ಅಚಲಾನಂದದಾಸರು**—ಇವರು ಸುಮಾರು ೯ನೆಯ ಶತಮಾನದಲ್ಲಿದ್ದ ಬೆಂಗಳೂರು ಜಿಲ್ಲೆಯ ಹೈಗಣಪುರದ ಕರ್ಣಾಟಕ ಬ್ರಾಹ್ಮಣರು. ನರಸಿಂಹ ದೇವರ ಉಪಾಸಕರಾಗಿದ್ದರು. ಇವರ ಮೊದಲಿನ ಹೆಸರು ನೃಸಿಂಹದಾಸ. ಮಹಾಮಹಿಮರೂ, ವಿರಕ್ತರೂ ಆಗಿದ್ದರು. ತಮ್ಮ ಶಿಷ್ಯರೊಂದಿಗೆ ನಿರಂತರವಾಗಿ ಭಾರತಾದ್ಯಂತ ಸಂಚರಿಸಿ ಭಾಗವತ ಧರ್ಮವನ್ನು ಉಪದೇಶ ಮಾಡಿದರು. ಇವರು ಒಂದು ದಿನ ಮಧ್ಯಾಹ್ನ ಚಂದ್ರಭಾಗಾ ನದಿಯಲ್ಲಿ ಅರ್ಘ್ಯ ಪ್ರದಾನ ಮಾಡುತ್ತಿರುವಾಗ ವಿಠಲನ ದರ್ಶನವಾಗಿ ಅಂದಿನಿಂದ ಅಚಲಾನಂದ ವಿಠಲ ಎಂಬ ಅಂಕಿತದಲ್ಲಿ ಕೃತಿಗಳ ರಚನೆ ಮಾಡಿ ಅರ್ಪಿಸುತ್ತ ಬಂದರು ನೇಪಾಳಕ್ಕೆ ಹೋಗಿದ್ದಾಗ ಅಲ್ಲಿ ಹಾವು ಕಚಿ ಮೃತನಾಗಿದ್ದ ರಾಜಪುತ್ರನನ್ನು ಪ್ರಜೆಗಳ ಪ್ರಾರ್ಥನೆಯಂತೆ ಗರುಡ ಮಂತ್ರದ ಪುರಶ್ಚರಣೆ ಮಾಡಿ ಬದುಕಿಸಿದರು. ರಾಜನಿಂದ ಹನ್ನೆರಡು ಕ್ಷೇತ್ರ ಸಾಲಿಗ್ರಾಮಗಳನ್ನು ಸ್ವೀಕರಿಸಿ ಹಿಂತಿರುಗಿ, ಭಾರತದ ಆರು ಸ್ಥಳಗಳಲ್ಲಿ ತಮ್ಮ ಶಾಖಾ ಪೀಠಗಳನ್ನು ಸ್ಥಾಪಿಸಿದರು. ಕರ್ಣಾಟಕದ ರಾಷ್ಟ್ರಕೂಟವಂಶದ ದೊರೆಗಳು ಇವರ ಶಿಷ್ಯರಾಗಿ ಇವರಿಗೆ ಹನ್ನೆರಡು ಗ್ರಾಮಗಳ ಜಹಗೀರನ್ನು ಕೊಟ್ಟು ಧರ್ಮಪ್ರಚಾರ ಕಾರ್ಯವನ್ನು

ಮಾಡಲು ಸಹಾಯ ಮಾಡಿದರು. ಇವರ ಸಂತತಿಯಲ್ಲಿ ಮುದ್ದು ವಿಠಲ, ಗೋಪೀನಾಥ, ಹರಿದಾಸ, ತಿಮ್ಮಣ್ಣದಾಸ ಮತ್ತು ಪಾಂಡುರಂಗದಾಸರೆಂಬುವರು ಪ್ರಖ್ಯಾತ ಹರಿದಾಸರಾದರು. ಹಾಗಲವಾಡಿಯ ಪಾಳೇಗಾರನಾಗಿದ್ದ ಅಣ್ಣಯ್ಯ ನಾಯಕನು ಪಾಂಡುರಂಗದಾಸರ ಪೂಜೆಗಾಗಿ ಒಂದು ವಿಠ್ಠಲ ದೇವಾಲಯವನ್ನು ಕಟ್ಟಿಸಿದನು. ಅದೇ ಈಗಿನ ದಾಸರಗುಡಿ. ಅಚಲಾನಂದದಾಸಕರಾರ್ಚಿತ ಪ್ರತಿಮೆಗಳೂ, ಆರು ಕ್ಷೇತ್ರ ಸಾಲಿಗ್ರಾಮಗಳೂ ಇಂದಿಗೂ ಪೂಜಿಸಲ್ಪಡುತ್ತಿವೆ. ದಾಸರ ವಂಶದವರು ತುಮಕೂರು ಜಿಲ್ಲೆಯ ತುರುವೇಕೆರೆಯಲ್ಲಿ ಇದ್ದಾರೆ.

**ಅಚೇತನ**—ಹರಿಪಾಲದೇವನು 'ಸಂಗೀತ ಸುಧಾಕರ'ವೆಂಬ ಗ್ರಂಥದಲ್ಲಿ ಸ್ವರಗಳನ್ನು ಚೇತನ, ಅಚೇತನ ಮತ್ತು ಮಿಶ್ರ ಎಂಬ ಮೂರು ಬಗೆಗಳಾಗಿ ವರ್ಗೀಕರಿಸಿದ್ದಾನೆ. ಮಾನವ ಅಥವಾ ಯಾವುದಾದರೂ ಪ್ರಾಣಿಯಿಂದ ಉಂಟಾಗುವ ಸ್ವರವು ಚೇತನ. ವೀಣೆ ಮುಂತಾದ ಅಚೇತನವಸ್ತು ಅಥವಾ ವಾದ್ಯಗಳಿಂದ ಉಂಟಾಗುವ ಸ್ವರವು ಅಚೇತನ. ಇವೆರಡರ ಗುಣಗಳನ್ನು ಹೊಂದಿರುವ ಸ್ವರವು ಮಿಶ್ರ. ಕೊಳಲು ಅಥವಾ ನಾಗಸ್ವರದಿಂದ ಉತ್ಪತಿ, ಮಾಡುವ ಸ್ವರವು ಈ ವರ್ಗಕ್ಕೆ ಸೇರಿದೆ. ಚೇತನನಾದ ಮಾನವನಿಂದ ಊದಲ್ಪಟ್ಟ ಗಾಳಿಯಿಂದ ಜಡವಸ್ತುವಾದ ವಾದ್ಯದ ಮೂಲಕ ಇಂತಹ ಸ್ವರವು ಉತ್ಪತ್ತಿಯಾಗುತ್ತದೆ.

**ಅಚ್ಯುತದಾಸರು**—ಇವರು ೧೯ನೇ ಶತಮಾನದಲ್ಲಿದ್ದ ಒಬ್ಬ ಕೃತಿ ರಚನಕಾರರು. ಸ್ವನಾಮ ಮುದ್ರೆಯಿರುವ, ವೇದಾಂತ ಮತ್ತು ತಾತ್ವಿಕ ವಿಷಯವುಳ್ಳ ಹಲವು ಕೃತಿಗಳನ್ನು ತಮಿಳಿನಲ್ಲಿ ರಚಿಸಿದ್ದಾರೆ.

**ಅಚ್ಯುತಮಧ್ಯಮ**— ಚ್ಯುತಮಧ್ಯಮ ಗಾಂಧಾರ ಸ್ವರಕ್ಕೆ ವಿರುದ್ಧವಾದ ಶುದ್ಧ ಮಧ್ಯಮಸ್ವರ.

**ಅಚ್ಯುತಪ್ಪನಾಯಕ :—(೧೫೭೨-೧೬೧೪)** ತಂಜಾವೂರಿನ ದೊರೆ ಸೇವಪ್ಪನಾಯಕನ (೧೫೩೦-೭೨) ಮಗ. ನಾಯಕ ವಂಶದ ದೊರೆಗಳಲ್ಲಿ ಎರಡನೆಯವನು. ಸಂಗೀತ ಕಲೆಗೆ ಅಪಾರ ಪೋಷಣೆ ನೀಡಿದನು. ಸಂಗೀತ ಸುಧಾ ಎಂಬ ಗ್ರಂಥ ಕರ್ತೃವಾದ ಗೋವಿಂದ ದೀಕ್ಷಿತರು ಇವನ ಪ್ರಧಾನಮಂತ್ರಿಯಾಗಿದ್ದರು.

**ಅಚ್ಯುತರಾಜೇಂದ್ರ ಮೇಳವೀಣಾ**—ರಾಮಾಮಾತ್ಯನು 'ಸ್ವರ ಮೇಳ ಕಲಾನಿಧಿ' ಎಂಬ ಗ್ರಂಥದಲ್ಲಿ ಪ್ರಸ್ತಾಪ ಮಾಡಿರುವ ಒಂದು ವಿಧವಾದ ರುದ್ರವೀಣೆ. ಇದರಲ್ಲಿ ನುಡಿಸುವ ನಾಲ್ಕು ತಂತಿಗಳನ್ನು ಮಂದ್ರ ಪಂಚಮ, ಮಂದ್ರಷಡ್ಜ, ಅನುಮಂದ್ರ ಪಂಚಮ ಮತ್ತು ಅನುಮಂದ್ರಷಡ್ಜಕ್ಕೆ ಶ್ರುತಿ ಮಾಡುತ್ತಿದ್ದರು. ಮೆಟ್ಟಿಲುಗಳು ಸ್ಥಿರವಾಗಿರಬಹುದು ಅಥವಾ ಚರವಾಗಿರಬಹುದು. ಇದರಿಂದ ಏಕರಾಗಮೇಳವೀಣಾ ಮತ್ತು ಸರ್ವರಾಗಮೇಳವೀಣಾ ಎಂಬ ಎರಡು ವಿಧವಾದ ವೀಣೆಗಳಾಗಬಹುದು. ಪಕ್ಕದ ಮೂರು ತಂತಿಗಳನ್ನು ಮಧ್ಯಷಡ್ಜ, ಮಂದ್ರ ಪಂಚಮ ಮತ್ತು ಮಂದ್ರಷಡ್ಜಕ್ಕೆ ಶ್ರುತಿ ಮಾಡಲಾಗುತ್ತಿತ್ತು.

**ಅಚ್ಯುತಷಡ್ಜ**—ಷಡ್ಜಕ್ಕಿಂತ ಸ್ವಲ್ಪ ಕಡಮೆಯಿರುವ ಮತ್ತು ಚ್ಯುತಷಡ್ಜ ನಿಷಾದಕ್ಕೆ ವಿರುದ್ಧವಾದ ಷಡ್ಜಸ್ವರ.

**ಅಜನಿ**—ವೆಂಕಟಮಖಿಯ 'ಚತುರ್ದಂಡಿ ಪ್ರಕಾಶಿಕಾ' ಎಂಬ ಗ್ರಂಥದ ಅನುಬಂಧದಲ್ಲಿ ಉಕ್ತವಾಗಿರುವ ಒಂದು ಭಾಷಾಂಗರಾಗ, ಇದು ವೇಗವಾಹಿನಿ ಮೇಳದ ಒಂದು ಜನ್ಯರಾಗ.

**ಅಜಪಾನಟನ**—ತಮಿಳುನಾಡಿನ ತಿರುವಾರೂರಿನ ದೇವರಾದ ತ್ಯಾಗರಾಜ ಸ್ವಾಮಿಯ ಒಂದು ನಾಟ್ಯ ವಿಶೇಷ

**ಅಟತಾಳ**—(೧) ಸೂಳಾದಿ ಸಪ್ತತಾಳಗಳಲ್ಲಿ ಆರನೆಯ ತಾಳದ ಹೆಸರುಲಘು. ಲಘು, ದ್ರುತ, ದ್ರುತ ಈ ತಾಳದ ಅಂಗಗಳು.

(೨) ೧೦೮ ತಾಳಗಳಲ್ಲಿ ಒಂದು ಬಗೆಯ ತಾಳ. ಲಘು, ಎರಡು, ದ್ರುತಗಳು, ಲಘು ಇದರ ಅಂಗಗಳು ಮತ್ತು ಒಂದು ಆವರ್ತವು ೩ ಮಾತ್ರೆಗಳನ್ನು ಹೊಂದಿರುತ್ತದೆ. ಕಥಕಳಿ ಸಂಗೀತದಲ್ಲಿ ಅಟತಾಳಕ್ಕೆ ಅಟಂತವೆಂದು ಹೆಸರು

**ಅಠಾಣ ಅಪ್ಪಯ್ಯ**—ಇವರು ತ್ಯಾಗರಾಜರ ಸಮಕಾಲೀನರು ಮತ್ತು ತಂಜಾವೂರು ರಾಜಾಸ್ಥಾನದ ಒಬ್ಬ ಅತ್ಯಂತ ಪ್ರಸಿದ್ಧ ಸಂಗೀತ ವಿದ್ವಾಂಸರು. ಅಠಾಣರಾಗವನ್ನು ವಿಶೇಷ ಪ್ರತಿಭೆಯಿಂದ ಹಾಡುತ್ತಿದ್ದುದರಿಂದ ಇವರಿಗೆ ಅಠಾಣ ಅಪ್ಪಯ್ಯ ಎಂಬ ಪ್ರಸಿದ್ಧಿ ಬಂದಿತು.

**ಅಠಾಣ**—

ಆ: ಸ ರಿ ಮ ಪ ನಿ ಸ

ಅ: ಸ ನಿ ಸ ದಾ ಪ ಮ ಗಾ ಮ ರೀ ಸ

(ಸ ನಿ ದಾ ಪ ಮ ಸ ಗಾ ಮ ರೀ ಸ)

ಈ ರಾಗವು ೨೯ನೆಯ ಧೀರಶಂಕರಾಭರಣ ಮೇಳದಲ್ಲಿ ಜನ್ಯವಾದ ಭಾಷಾಂಗರಾಗ. ಔಡವ ವಕ್ರ ಸಂಪೂರ್ಣರಾಗ. ಷಡ್ಜಗ್ರಹ ಸರ್ವಕಾಲೀನರಾಗ. ಈ ರಾಗದ ಜೀವಸ್ವರವಾದ ಧೈವತವು ಯಾವಾಗಲೂ ಕೈಶಿಕಿ ನಿಷಾದದಿಂದ ಕೂಡಿ ಬರುವುದರಿಂದ ಈ ರಾಗಕ್ಕೆ ವಿಶೇಷ ಕಳೆಯುಂಟು. ಕೈಶಿಕಿ ಮತ್ತು ಕಾಕಲಿ ನಿಷಾದಗಳೂ ಮತ್ತು ಅವುಗಳ ಅಕ್ಕಪಕ್ಕದ ಶ್ರುತಿಗಳೂ ಮಿಶ್ರಿತವಾಗಿ ಬರುವ ಕಾರಣ ಕೆಲವು ವಾಗ್ಗೇಯಕಾರರು ಈ ರಾಗವನ್ನು ಹರಿಕಾಂಭೋಜಿ ಮೇಳದಲ್ಲೂ ಮತ್ತೆ ಕೆಲವರು ಧೀರಶಂಕರಾಭರಣ ಮೇಳದಲ್ಲೂ ಜನ್ಯವೆಂದು ಹೇಳಿದ್ದಾರೆ. ವೆಂಕಟಮಖಿಯು ಕೈಶಿಕಿ ನಿಷಾದವನ್ನು ಲಕ್ಷಣ ಸ್ವರವನ್ನಾಗಿ ಇಟ್ಟು ಈ ರಾಗವು ೨೮ನೆಯ ಮೇಳ ಹರಿಕೇದಾರಗೌಳದಲ್ಲಿ ಜನ್ಯವೆಂದು ಹೇಳಿದ್ದಾನೆ. ಈಗ ರೂಢಿಯಲ್ಲಿ ಈ ರಾಗವನ್ನು ಧೀರಶಂಕರಾಭರಣ ಮೇಳದಲ್ಲಿ ಜನ್ಯವೆಂದೂ ಕೈಶಿಕಿ ನಿಷಾದ ಮತ್ತು ಸಾಧಾರಣ ಗಾಂಧಾರಸ್ವರವು ಅನ್ಯಸ್ವರಗಳೆಂದೂ ಅಂಗೀಕರಿಸಿರುವರು. ಬಳಕೆಯಲ್ಲಿ 'ರಿಮಪನಿ' ಎಂಬ ವರ್ಜ್ಯ ಸಂಚಾರದಿಂದ ಆರೋಹಣವನ್ನು

ಪ್ರಾರಂಭಿಸುವರು. ಲಕ್ಷಣ ಗೀತೆಯಲ್ಲಿ 'ಗಪದಸ' ಎಂಬ ಸಂಚಾರವಿದ್ದರೂ ಅದು ಈಗ ಬದಲಾಯಿಸಿದೆ 'ದಪ' ಎಂಬ ಸಂಚಾರವನ್ನು 'ದನಿಪಾ' ಎಂದೂ 'ಗರಿ' ಸಂಚಾರವನ್ನು 'ಗಮರಿ' ಎಂದು ಹಾಡುವುದು ಬಳಕೆಯಲ್ಲಿದೆ. ಈ ರಾಗದಲ್ಲಿರುವ ದೀರ್ಘ ಧೈವತ ಮತ್ತು ದೀರ್ಘ ಗಾಂಧಾರ, ಧೈವತಗಳು ಜೀವಸ್ವರಗಳಾಗಿದ್ದು ವಳಿ ಮತ್ತು ಜಾರು ಗಮಕಗಳಿಂದ ಕೂಡಿ ಪ್ರಕಾಶಿಸುತ್ತವೆ. ಇದರಲ್ಲಿ ಮಂದ್ರ ಧೈವತದಿಂದ ಕೆಳಕ್ಕೆ ಸಂಚಾರಗಳಿಲ್ಲ. ವೀರರಸ ಪ್ರಧಾನವಾದರಾಗ. ಈ ರಾಗದಲ್ಲಿ ಪ್ರಸಿದ್ಧ ವಾಗ್ಗೇಯಕಾರರು ಅನೇಕ ಕೃತಿಗಳನ್ನು ರಚಿಸಿದ್ದಾರೆ.

ವರ್ಣ : ಶ್ರೀನಿವಾಸ ನನ್ನು—ಆದಿ—ವೀಣೆ ಸುಬ್ಬಣ್ಣ

ಕೃತಿ : ಸಕಲಗ್ರಹಬಲ ನೀನೇ—ಖಂಡಛಾಪು—ಪುರಂದರದಾಸರು

| | | |
|---|---|---|
| ನಾರದಗಾನ ಲೋಲ | —ರೂಪಕ | — ತ್ಯಾಗರಾಜ |
| ಏಲಾ ನೀ ದಯರಾದು | —ಆದಿ | — ,, |
| ಅನುಪಮಗುಣಾಂಬುಧಿ | —ಖಂಡಝಂಪೆ | — ,, |
| ಭಜನಸೇಯರಾದಾ | —ರೂಪಕ | — ,, |
| ಮುಮ್ಮೂರ್ತುಲು ಗುಮಿಗೂಡಿ | —ಆದಿ | — ,, |
| ಕಟ್ಟು ಜೇಸಿನಾವು | —ಆದಿ | — ,, |
| ಏಪಾಪಮು ಜೇಸಿತಿರಾ | —ತ್ರಿಪುಟ | — ,, |
| ಚೆಡೇಬುದ್ಧಿ ಮಾನುರಾ | —ಆದಿ | — ,, |
| ರಾರಾ ರಘುವೀರ | —ಆದಿ | — ,, |
| ಶ್ರೀ ಮಹಾಗಣಪತಿಂ ಭಜೇಹಂ | —ಆದಿ | — ಜಯಚಾಮರಾಜ ಒಡೆಯರು. |
| ಪರಮಪಾವನೀ | —ಆದಿ | — ಅಣ್ಣಾಸ್ವಾಮಿಶಾಸ್ತ್ರಿ |

**ಅಡವು**—ನಾಟ್ಯಕಲೆಯ ವಿದ್ಯಾರ್ಥಿಯು ಮೊದಲು ಕಲಿಯಬೇಕಾದ ಬಾಲ್ಯ ಪಾಠದ ಅಭ್ಯಾಸಗಳು.

**ಅಡವುಜಾತಿಗಳು**—ನಾಟ್ಯದ ವಿವಿಧ ಅಭ್ಯಾಸಗಳು. ನಾಟ್ಯದ ಅಧ್ಯಯನ ದಲ್ಲಿ ಮೊಟ್ಟಮೊದಲು ಪರಿಚಯವಾಗುವ ತಾಳಜತಿಗಳು. ನಾಟ್ಯದಲ್ಲಿ ತಾಳವನ್ನು ಅಂಗವಿನ್ಯಾಸದೊಡನೆ ಪ್ರದರ್ಶಿಸುವ ಮೊದಲ ಪಾಠಾಂತರಗಳು. ಇವುಗಳಲ್ಲಿ ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೈ ಎಂಬ ಹತ್ತು ವಿಧಗಳಿವೆ ಒಂದೊಂದರಲ್ಲೂ ೧೨ ವಿಧಗಳಿದ್ದು ಒಟ್ಟು ೧೨೦ ಅಡವುಗಳಾಗುತ್ತವೆ. ಆದರೆ ೮೦ ವಿಧಗಳು ಮಾತ್ರ ಪ್ರಾಯೋಗಿಕ ವಾಗಿ ಸುಲಭಸಾಧ್ಯವಿರುವುದರಿಂದ ಪ್ರಚಾರದಲ್ಲಿವೆ.

**ಅಡಿಯಾರ್ ಕ್ಕುನಲ್ಲಾರ್**—ತಮಿಳು ಸಾಹಿತ್ಯದ ಪುರಾತನ ಕುಂಚ ಮಹಾಕಾವ್ಯಗಳಲ್ಲಿ ಒಂದಾದ ಶಿಲಪ್ಪಧಿಕಾರಂ ಎಂಬ ಗ್ರಂಥದ ಪ್ರಸಿದ್ಧ ವ್ಯಾಖ್ಯಾನ

ಕಾರ. ಈ ಗ್ರಂಥದಲ್ಲಿ ಸಂಗೀತಕ್ಕೆ ಸಂಬಂಧಿಸಿದ ಹಲವು ವಿಷಯಗಳು ಉಕ್ತವಾಗಿವೆ

**ಆಡವೀ ರಾಮದಾಸರು**—ಇವರು ಉತ್ತರ ಕರ್ಣಾಟಕದಲ್ಲಿ ಜನ್ಮತಾಳಿ ವಿಚಿತ್ರ ಮಹಿಮೆಗಳನ್ನು ತೋರಿಸಿ ಪ್ರಸಿದ್ಧರಾಗಿದ್ದರು. ಇವರ ಜೀವನ ಚರಿತ್ರೆಯ ವಿಷಯಗಳಾವುವೂ ದೊರೆತಿಲ್ಲ ಇವರ ಕನ್ನಡದ ಕೃತಿಗಳಲ್ಲಿ ‘ಕದರುಂಡಲಿಗಿ ಹನುಮಯ್ಯ’ ಎಂಬ ಮುದ್ರಿಕೆಯಿದೆ. ಇವರ ನೂರಾರು ಪದಗಳು ಪ್ರಚಾರದಲ್ಲಿವೆ. ಕಾಶ್ಮೀರದಿಂದ ಕರ್ಣಾಟಕಕ್ಕೆ ಬಂದು ನೆಲೆಸಿದ ಸಹವಾಸೀ ಬ್ರಾಹ್ಮಣರ ಮನೆತನಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ಈ ದಾಸರ ಮನೆತನದವರು ಬಹುಕಾಲ ಮೈಸೂರಿನಲ್ಲಿ ವಾಸವಾಗಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರ ಭಕ್ತಿ ಗೌರವಗಳಿಗೆ ಪಾತ್ರರಾಗಿದ್ದರೆಂದು ಮಾತ್ರ ತಿಳಿದುಬರುತ್ತದೆ.

**ಅಡಿ**—ಸ್ತೋತ್ರ ಅಥವಾ ಭಕ್ತಿ ಸಂಗೀತ ಕೃತಿಯ ಒಂದು ಭಾಗ ಅಥವಾ ಖಂಡಿಕೆ. ಭಕ್ತಿ ಸಂಗೀತ ಕೃತಿಗಳ ಎಲ್ಲಾ ಭಾಗಗಳ ಸಂಗೀತವು ಒಂದೇ ವಿಧವಾಗಿರುತ್ತದೆ.

**ಅಣ್ಣಾಕುಟ್ಟಿ ಅಯ್ಯರ್**—ಶ್ಯಾಮಾಶಾಸ್ತ್ರಿಗಳ ಒಬ್ಬ ನೆಚ್ಚಿನ ಗೆಳೆಯರು. ಇವರು ಯಾವಾಗಲೂ ಶಾಸ್ತ್ರಿಗಳ ಜೊತೆಯಲ್ಲಿದ್ದರು.

**ಅಣ್ಣಾಮಲೈ ಚೆಟ್ಟಿಯಾರ್**—(೧೮೮೧-೧೯೪೮) ಡಾಕ್ಟರ್ ರಾಜಾಸರ್ ಅಣ್ಣಾಮಲೈ ಚೆಟ್ಟಿಯಾರ್ ಸಂಗೀತದ ಪೋಷಕರಾಗಿದ್ದರು. ಅಣ್ಣಾಮಲೈ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು. ಚಿದಂಬರದಲ್ಲಿ ಸಂಗೀತ ಕಲೆಯ ಕಾಲೇಜನ್ನು ಸ್ಥಾಪಿಸಿದರು.

**ಅಣ್ಣಾಮಲೈ ರೆಡ್ಡಿಯಾರ್**—ಕಾವಡಿಚೆಂದ್ ಎಂಬ ಜನಪ್ರಿಯವಾದ ತಮಿಳು ಜಾನಪದ ಗೀತೆಗಳನ್ನು ಸ್ವನಾಮ ಮುದ್ರೆಯಲ್ಲಿ ರಚಿಸಿದ್ದಾರೆ. ಕಾವಡಿ ಚೆಂದನ್ನು ಸಂಗೀತ ಕಚೇರಿಯ ಕೊನೆಯ ಭಾಗದಲ್ಲಿ ಹಾಡುವ ಸಂಪ್ರದಾಯವಿದೆ

**ಅಣ್ಣಾಚ್ಚಿ ಅಯ್ಯರ್**—ಇವರು ತಂಜಾವೂರಿನ ಶರಭೋಜಿ ಮಹಾರಾಜನ (೧೭೯೮-೧೮೩೨) ಆಸ್ಥಾನ ವಿದ್ವಾಂಸರೂ, ಅದ್ವಿತೀಯ ಗಾಯಕರೂ ಮತ್ತು ವೈಣಿಕರೂ ಆಗಿದ್ದರು.

**ಅಣ್ಣಾವಧೂತರು (ಬಡ ಅಣ್ಣಯ್ಯಾಚಾರ್ಯರು)**—ಅಣ್ಣಾವಧೂತರು ‘ವಿಠಲವ್ಯಾಸ’ ಮುದ್ರಿಕೆಯಿರುವ ಅನೇಕ ದೇವರನಾಮಗಳನ್ನು ರಚಿಸಿದ್ದಾರೆ. ಇವರ ಪದಗಳು ಸಂಸ್ಕೃತ, ಕನ್ನಡ ಮತ್ತು ಉರ್ದು ಹೀಗೆ ಮೂರು ಭಾಷೆಗಳಲ್ಲಿವೆ. ಅವಧೂತರು ಯೋಗಾಭ್ಯಾಸ, ನ್ಯಾಯ, ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಸಾಂಸಾರಿಕ ಕ್ಲೇಶದಿಂದ ಅವಧೂತರಾದರು. ಆಡಿದ ಮಾತೇ ಶಾಪಾನುಗ್ರಹವಾಗುತ್ತಿದ್ದ ಕಾರಣ ಜನರಿಗೆ ಇವರಲ್ಲಿ ವಿಶೇಷ ಭಯ ಭಕ್ತಿಗಳಿದ್ದವು. ತುಂಗಾ ಮತ್ತು ವರದಾ ನದಿಗಳ ಮಧ್ಯಪ್ರದೇಶವು ಇವರ ಕಾರ್ಯಕ್ಷೇತ್ರ

ವಾಗಿತ್ತು. ಒಂದು ಸಲ ಇವರು ಇದ್ದಕ್ಕಿದ್ದಂತೆ ಸವಣೂರು ದಿವಾನ ಖಂಡೇರಾಯನ ಮನೆಗೆ ಹೋಗಿ ನವಾಬನನ್ನು ಭೇಟಿ ಮಾಡಿಸಬೇಕೆಂದು ಹೇಳಿದರು. ಏನಾದರೂ ಉಪಾಯ ಮಾಡಿ ನಿವಾರಿಸೋಣವೆಂದು ಪ್ರಯತ್ನಿಸಿ ಸಫಲವಾಗದೆ ಮಾರನೆಯ ದಿನ ಭೇಟಿ ಮಾಡಿಸಿದರು. ಹುಚ್ಚನಂತೆ ತೋರುತ್ತಿದ್ದ ಅವಧೂತರು ಒಂದು ಪದವನ್ನು ಹೇಳಿ ನವಾಬನು ತಲೆತೂಗುವಂತೆ ಮಾಡಿದರು ನವಾಬನು ಅವರಿಗೆ ಬಹುಮಾನ ಮಾಡಿದನು. ಮಹಲಿನಿಂದ ಹೊರಗಡೆ ಬಂದು ಎಲ್ಲವನ್ನೂ ಕಂಡ ಕಂಡವರಿಗೆ ದಾನ ಮಾಡಿದರು. ಇವರ ಒಂದು ಕನ್ನಡ ಪದ – "ದಾವಾಧಾರದ ದುರ್ವಿಷಯದಿ ನೀ ಮುಳುಗಿ ಹರಿಯುತಿದ್ದೀ ?" ಎಂಬುದು ಪೂರ್ವಿರಾಗದಲ್ಲಿ ಆದಿತಾಳದಲ್ಲಿದೆ. ಇವರ ತ್ರಿಭಾಷಾ ಪದಗಳು ಹರಿದಾಸ ಸಾಹಿತ್ಯದ ಉತ್ತಮ ಭಾಗಗಳಾಗಿವೆ. ಅಣ್ಣಾವಧೂತರು ಅಥವಾ ಬಡ ಅಣ್ಣಯ್ಯಾಚಾರ್ಯರು ಅವಧೂತ ಹರಿದಾಸರು

**ಅಣ್ಣಾಸ್ವಾಮಿ ಶಾಸ್ತ್ರಿ** (೧೮೨೭—೧೯೦೦)—ಇವರು ಕರ್ಣಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಶ್ಯಾಮಾಶಾಸ್ತ್ರಿಗಳ ಪ್ರಥಮ ಪತ್ನಿಯ ಪುತ್ರ ಪಂಜುಶಾಸ್ತ್ರಿಗಳ ಮೂರನೆಯ ಪುತ್ರರು. ಶ್ಯಾಮಾಶಾಸ್ತ್ರಿಗಳ ಎರಡನೆಯ ಮಗ ಸುಬ್ಬರಾಯ ಶಾಸ್ತ್ರಿಗಳಿಗೆ ಸಂತತಿಯಿರಲಿಲ್ಲ ಅವರು ಅಣ್ಣಾಸ್ವಾಮಿ ಶಾಸ್ತ್ರಿಗಳನ್ನು ದತ್ತು ತೆಗೆದುಕೊಂಡರು. ಶ್ಯಾಮಾಶಾಸ್ತ್ರಿಗಳು ದಿವಂಗತರಾದ ವರ್ಷದಲ್ಲಿ ಹುಟ್ಟಿದ್ದರಿಂದ ಅಣ್ಣಾಸ್ವಾಮಿಗೆ ಶ್ಯಾಮಕೃಷ್ಣ ಎಂಬ ಹೆಸರಿಟ್ಟರು. ಇತರರು ಇವರನ್ನು ಅಣ್ಣ ಎಂದು ಕರೆಯುತ್ತಿದ್ದುದ್ದರಿಂದ ಅದೇ ರೂಢಿಗೆ ಬಂದು ಅಣ್ಣಾಸ್ವಾಮಿ ಶಾಸ್ತ್ರಿಗಳಾದರು. ತಂದೆಯವರಲ್ಲಿ ಕಾವ್ಯ, ನಾಟಕ, ಅಲಂಕಾರ, ವ್ಯಾಕರಣಶಾಸ್ತ್ರ ಮತ್ತು ಸಂಗೀತವನ್ನು ಅಭ್ಯಾಸ ಮಾಡಿ ವಿದ್ವಾಂಸರಾದರು. ತೆಲುಗು ಮತ್ತು ಸಂಸ್ಕೃತದಲ್ಲಿ ಶ್ರೇಷ್ಠ ವಿದ್ವಾಂಸರಾದರು. ಅದ್ವಿತೀಯ ಗಾಯಕರಾಗಿದ್ದುದಲ್ಲದೆ ಪಿಟೀಲು ವಾದನ ಪಟುವಾಗಿದ್ದರು. ಕಷ್ಟಕರವಾದ ಪಲ್ಲವಿಗಳಿಗೆ ಕಲ್ಪನೆ ಸ್ವರಗಳನ್ನು ಹಾಡಿ ಆನಂದ ಪಡಿಸುತ್ತಿದ್ದರು ಇವರು ಹಲವು ಕೃತಿಗಳನ್ನು ರಚಿಸಿದರು. ಶ್ಯಾಮಾಶಾಸ್ತ್ರಿಗಳ ಮಧ್ಯಮಾವತಿ ರಾಗದ 'ಪಾಲಿಂಚು ಕಾಮಾಕ್ಷೀ' ಎಂಬ ಕೃತಿಗೆ ಸ್ವರ ಸಾಹಿತ್ಯವನ್ನು ಸೇರಿಸಿದರು ಇವರ ಕೃತಿಗಳು ಯಾವುವೆಂದರೆ :

(೧) ಆನಂದಭೈರವಿ ರಾಗದ 'ಪಾಹಿ ಗಿರಿರಾಜಸುತೇ'

(೨) ಉಡೈಯಾರ್ ಪಾಳ್ಯದ ದೇವರನ್ನು ಕುರಿತು ರಚಿಸಿರುವ ಸಹಾನಾರಾಗದ 'ಇಂಕೆವರುನ್ನಾರು'

(೩) ಉಡೈಯಾರ್ ಪಾಳ್ಯದ ಕಚ್ಚಿಕಲ್ಯಾಣರಂಗಪ್ಪ ಉಡೈಯರ ಪ್ರಶಂಸಾತ್ಮಕವಾದ ಕೇದಾರಗೌಳರಾಗದ (ರೂಪಕತಾಳ) ದರು 'ಕಾಮಿಂಚಿಯುನ್ನದಿರಾ'

(೪) ಶ್ರೀ ಕಾಂಚಿನಗರ ನಾಯಿಕೇ—ಆದಿ—ಅಸಾವೇರಿ

(೫) ಶ್ರೀ ಮಹಾರಾಜ್ಞೀ—ಛಾಪು—ಬಿಲಹರಿ

(೬) ನಿನುಮಿಂಚಿನ—ಆದಿ—ತೋಡಿ—ವರ್ಣ
(೭) ಶ್ರೀಕಾಮಾಕ್ಷಿ—ಆದಿ—ಸಾರಂಗ
(೮) ಪರಮಪಾವನೀ—ಆದಿ–ಅಠಾಣ

ಶರಭಶಾಸ್ತ್ರಿಗಳ ಗುರು ಮೋಳಕ್ಕಾರ ಗೋವಿಂದನ್ ಮತ್ತು ವೀಣಾಧನಂ ಅವರ ಗುರು ತಂಜಾವೂರು ಕಾಮಾಕ್ಷಿ ಇವರಿಬ್ಬರೂ ಶಾಸ್ತ್ರಿಗಳ ಪ್ರಸಿದ್ಧ ಗುರುಗಳು.

**ಅಣ್ಣಾಸ್ವಾಮಿ ಭಾಗವತರು**—ಇವರು ತಮಿಳುನಾಡಿನ ತಿರುಚಿರಪ್ಪಳ್ಳಿ ಜಿಲ್ಲೆಯ ಪೇಟೆ ಎಂಬಲ್ಲಿ ೧೮೫೯ರಲ್ಲಿ ಜನಿಸಿದರು. ತಿರುವಯ್ಯಾರ್ ಸಂಸ್ಕೃತ ಕಾಲೇಜಿನಲ್ಲಿ ಭೂವರಾಹಾಚಾರ್ ಮತ್ತು ಮಧುರೆ ರಾಮಸುಬ್ಬಶಾಸ್ತ್ರಿಗಳಲ್ಲಿ ಶಾಸ್ತ್ರಾಧ್ಯಯನ ಮಾಡಿ, ತಿರುಪ್ಪಯಣಂ ಪಂಚಾಪಕೇಶ ಭಾಗವತರಲ್ಲಿ ಕಥಾಕಾಲಕ್ಷೇಪವನ್ನೂ, ಮಾತೃಮಂಗಲಂ ನಟೇಶ ಅಯ್ಯರ್‌ರವರಲ್ಲಿ ಸಂಗೀತವನ್ನೂ ಕಲಿತು ಹರಿಕಥೆ ಮಾಡುವುದರಲ್ಲಿ ಅತ್ಯಂತ ಪ್ರಸಿದ್ಧರಾದರು. ರಕ್ತಿರಾಗಗಳನ್ನು ಅತ್ಯಂತ ಭಾವಪೂರ್ವಕವಾಗಿ ಮತ್ತು ಸೂಕ್ತವಾಗಿ ಬಳಸುವುದರಲ್ಲಿ ಹಾಗೂ ಕಥಾ ನಿರೂಪಣಾ ಕೌಶಲ್ಯದಲ್ಲಿ ಪ್ರಸಿದ್ಧರಾಗಿದ್ದರು.

**ಅಣಿ**—ಸಂಗೀತರಚನೆಗೆ ಸೌಂದರ್ಯವನ್ನೀಯುವ ವಿಶೇಷಾಂಶ. ಸಂಗತಿ, ಸ್ವರಾಕ್ಷರ, ಚಿಟ್ಟೆಸ್ವರ, ಸ್ವರಸಾಹಿತ್ಯ ಇವೆಲ್ಲವೂ ಕೃತಿಗೆ ಸೌಂದರ್ಯವನ್ನುಂಟು ಮಾಡುತ್ತವೆ ಧಾತುವಿಗೆ ಸಂಬಂಧಿಸಿದಂತೆ ಸಂಗತಿ, ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅಂತ್ಯಪ್ರಾಸ ಮತ್ತು ಅನುಪ್ರಾಸ, ಧಾತು ಮಾತುಗಳೆರಡಕ್ಕೂ ಸಂಬಂಧಿಸಿದ ಸ್ವರಾಕ್ಷರಗಳು, ಗೋಪುಚ್ಛಯತಿ, ಶ್ರೋತೋವಹ ಯತಿ ಇವೆಲ್ಲವೂ ಅಣಿಗಳು.

**ಅತಿಕೋಮಲ್**—ಕೋಮಲಸ್ವರಕ್ಕಿಂತ ಒಂದು ಶ್ರುತಿ ಕಡಿಮೆಯಿರುವ ಸ್ವರ.

**ಅತಿಕೋಮಲ**—ಇದು ಅತಿಕೋಮಲ್ ಸ್ವರಕ್ಕಿಂತ ಒಂದು ಶ್ರುತಿ ಕಡಿಮೆಯಿರುವ ಸ್ವರ.

**ಅತಿಚಿತ್ರತಮಮಾರ್ಗ**—ಇದು ಷಣ್ಮಾರ್ಗಗಳಲ್ಲಿ ಆರನೆಯದು. ಇದರಲ್ಲಿ ಪ್ರತಿತಾಳಾಕ್ಷರಕ್ಕೆ ೧/೪ ಮಾತ್ರೆ ಕಾಲವಿರುತ್ತದೆ. ಮುತ್ತುಸ್ವಾಮಿ ದೀಕ್ಷಿತರ ಶ್ರೀಮಹಾಗಣಪತಿ ಎಂಬ ಗೌಳರಾಗದ ಕೃತಿಯು ಈ ಮಾರ್ಗದಲ್ಲಿದೆ

**ಅತಿಕ್ರಾಂತ**—ಭರತನಾಟ್ಯದ ಹದಿನಾರು ಬಗೆಯ ಆಕಾಶಚಾರಿಗಳಲ್ಲಿ ಮೊದಲನೆಯದು. ಕುಂಚಿತ ಪಾದವನ್ನು ಮೇಲೆತ್ತಿ, ಮುಂದಕ್ಕೆ ಚಾಚಿ ಮತ್ತೆ ಮೇಲೆತ್ತಿ, ಪಕ್ಕದಲ್ಲಿಡುವುದು ಅತಿಕ್ರಾಂತ.

**ಅತಿದೇಶ**—ಭರತನಾಟ್ಯದ ವಾಚಕಾಭಿನಯದಲ್ಲಿ ಒಂದು ವಿಧ. ನೀನು ಹೇಳಿದ್ದನ್ನೇ ನಾನು ಹೇಳಿದೆ ಮುಂತಾದ ರೀತಿಯ ವಾಕ್ಯಾಭಿನಯ.

**ಅತಿಭಂಗಿ**—ಭರತನಾಟ್ಯದ ನಾಲ್ಕು ಬಗೆಯ ಭಾವಭಂಗಿಮಗಳಲ್ಲಿ ಒಂದು ವಿಧ. ಇದು ಸಮಭಂಗಿ, ಅಭಂಗಿ, ತ್ರಿಭಂಗಿಗಳನ್ನು ಮೀರಿ ವಿವಿಧ ಕೋನಾಂತರಗಳನ್ನು ಸೂಚಿಸುತ್ತವೆ.

**ಅತೀತಗ್ರಹ**—ಒಂದು ಹಾಡು, ಸಂಗೀತರಚನೆ ಅಥವಾ ಪಲ್ಲವಿಯು ತಾಳಕ್ಕಿಂತ ಮೊದಲು ಎಂದರೆ ಹಿಂದಿನ ಭಾವಿಸಲ್ಪಟ್ಟ ಆವರ್ತದ ಕೊನೆಯಲ್ಲಿ ಪ್ರಾರಂಭ ವಾಗುವುದು ಅತೀತಗ್ರಹ. ಪ್ರಾಸ ಅಥವಾ ಪದಗರ್ಭವನ್ನು ಹಾಡುವಾಗ ಕೆಲವು ಸಲ ಸಾಹಿತ್ಯದ ಕೆಲವು ಪದಗಳನ್ನು ಹಿಂದಿನ ತಾಳಾವರ್ತಕ್ಕೆ ಸೇರಿಸಿ ಹಾಡುತ್ತಾರೆ. ತ್ಯಾಗರಾಜರು ರಚಿಸಿರುವ ವೇಣುಗಾನ ಲೋಲುನಿ (ಕೇದಾರಗೌಳ) ಮತ್ತು ಕ್ಷೀಣಮೈ ತಿರುಗ (ಮುಖಾರಿ) ಎಂಬ ಕೃತಿಗಳ ಅನುಪಲ್ಲವಿಗಳು ಅತೀತಗ್ರಹಗಳಿಗೆ ಉತ್ತಮ ನಿದರ್ಶನ. ಅತೀತಗ್ರಹಗಳಿಗೆ ಅತೀತಎಡುಪ್ಪು ಎಂದೂ ಹೆಸರು.

**ಅತಿತಾರಸ್ಥಾಯಿ**—ತಾರಸ್ಥಾಯಿಗಿಂತ ಮೇಲ್ಪಟ್ಟಸ್ಥಾಯಿ.

**ಅತಿತೀವ್ರ**—ತೀವ್ರ ಸ್ವರಕ್ಕಿಂತ ಒಂದು ಶ್ರುತಿ ಹೆಚ್ಚು ಇರುವ ಸ್ವರ.

**ಅತಿಯಾಬೇಗಂ ಫೈಜೀರಹಮಿನ್ :**—Music of India ಎಂಬ ಗ್ರಂಥದ ಲೇಖಕಿ. ಈ ಗ್ರಂಥವು ಹಿಂದೂಸ್ಥಾನಿ ಸಂಗೀತವನ್ನು ಕುರಿತು ತಿಳಿಸುತ್ತದೆ. ಸ್ವರ, ರಾಗ, ತಾಳ, ವಾದ್ಯಗಳು, ಸಂಗೀತ ಸಾಹಿತ್ಯ, ಸಂಗೀತದ ಇತಿಹಾಸ, ಸಂಗೀತ ವಿದ್ವಾಂಸರು ಮತ್ತು ಸಂಗೀತಕ್ಕೆ ಸಂಬಂಧಿಸಿದ ಕಥೆಗಳನ್ನು ಕುರಿತು ಎಂಟು ಅಧ್ಯಾಯ ಗಳಿವೆ.

**ಅತಿಸೂಕ್ಷ್ಮ**—ಮತಂಗನು ಮಾಡಿರುವ ನಾದ ವರ್ಗೀಕರಣದ ಒಂದು ಬಗೆ.

**ಅಧಮರಾಗ** —ಸಂಗೀತ ಕೃತಿಯನ್ನು ರಚಿಸಲು ಅನರ್ಹವಾದ ರಾಗವನ್ನು ಅಧಮರಾಗವೆಂದು ರಾಮಾಮಾತ್ಯನು ಹೇಳಿದ್ದಾನೆ. ಸಂಗೀತ ರಚನೆಗೆ ಕಂಡು ಬರುವ ಅರ್ಹತೆ ಮತ್ತು ಅನರ್ಹತೆಗಳ ಆಧಾರದ ಮೇಲೆ ರಾಗಗಳನ್ನು ಉತ್ತಮ, ಮಧ್ಯಮ ಮತ್ತು ಅಧಮ ರಾಗಗಳೆಂದು ತನ್ನ ಗ್ರಂಥವಾದ 'ಸ್ವರಮೇಳ ಕಲಾನಿಧಿ' ಯಲ್ಲಿ ವರ್ಗೀಕರಣ ಮಾಡಿದ್ದಾನೆ. ಈ ಅಭಿಪ್ರಾಯವನ್ನು 'ರಾಗವಿಬೋಧ'ದ ಕರ್ತೃ ಸೋಮನಾಥನು ಪುಷ್ಟೀಕರಿಸಿದನು ಅಲ್ಲಿಂದ ಮುಂದಿನ ಲಕ್ಷಣಕಾರರು ಈ ಸಿದ್ಧಾಂತವನ್ನು ಒಪ್ಪಲಿಲ್ಲ.

**ಅಧಮ ವಾಗ್ಗೇಯಕಾರ**— ಇತರ ವಾಗ್ಗೇಯಕಾರರು ರಚಿಸಿರುವ ಕೃತಿ ಗಳ ಸಾಹಿತ್ಯಕ್ಕೆ ಬದಲಾಗಿ ತನ್ನ ಸಾಹಿತ್ಯವನ್ನು ಬಳಸಿ, ಕೃತಿಗಳು ತನ್ನ ಸ್ವಂತ ರಚನೆ ಎಂದು ಪ್ರದರ್ಶಿಸುವ ಕೃತಿಚೋರನಾದ ವಾಗ್ಗೇಯಕಾರ.

**ಅಧರಕರ್ಮ**—ಭರತನಾಟ್ಯದಲ್ಲಿ ಅಧರಗಳು ಒಂದು ಮುಖ್ಯವಾದ ಅಂಗ. ಓಷ್ಠ ಲಕ್ಷಣಗಳೆಂದು ಕರೆಯುವ ಈ ಅಧರ ಕರ್ಮಗಳು ಆರು ವಿಧ. ಅಧರವೆಂಬಲ್ಲಿ ಕ್ರಿಯಾ ಭೇದಗಳನ್ನು ಸೂಚಿಸ ವಂತಹುದು ಕೆಳತುಟಿ. ಅವು ವಿವರ್ತನ, ಕಂಪನ, ವಿಸರ್ಗ, ವಿನಿಗೂಹನ, ಸಂದಷ್ಟಕ ಮತ್ತು ಸಮುದ್ಗ.

ವಿವರ್ತನವೆಂದರೆ ತುಟಿಗಳನ್ನು ಪಕ್ಕಕ್ಕೆ ಸರಿಸಿ ಮಡಿಚುವುದು ಅಥವಾ ಮುರಿ ದಂತಾಗಿಸುವುದು. ಇದು ಅಸೂಯೆ, ಅಣಕ, ವೇದನೆ ಮುಂತಾದುವನ್ನು ಸೂಚಿ

ಸುತ್ತದೆ ಕಂಪನವೆಂದರೆ ತುಟಿಗಳನ್ನು ನಡುಗಿಸುವುದು. ಇದು ವೇದನೆ, ಶೀತ ಜ್ವರ, ಭಯ, ರೋಷ ಮುಂತಾದುವನ್ನು ಸೂಚಿಸುತ್ತದೆ.

ವಿಸರ್ಗವೆಂದರೆ ತುಟಿಗಳನ್ನು ಮುಂದಕ್ಕೆ ಚಾಚುವುದು. ಇದು ಸ್ತ್ರೀಯರ ವಿಲಾಸ, ರಂಜನೆ, ಅಣಕಗಳನ್ನು ಸೂಚಿಸುತ್ತದೆ. ವಿನಿಗೂಹನವೆಂದರೆ ಸಹಿಸಲಾಗದ ಸಿಟ್ಟು, ನಿಶ್ಶಕ್ತಿ ಮುಂತಾದುವನ್ನು ಸೂಚಿಸಲು ತುಟಿಗಳನ್ನು ಒಳಕ್ಕೆ ಸೇರಿಸಿರುವ ಕ್ರಿಯೆ. ಸಂದಷ್ಟಕವೆಂದರೆ ತುಟಿಗಳನ್ನು ಕಚ್ಚುವುದು ಇದು ಕ್ರೋಧ, ವೀರಾದಿ ರಸಗಳನ್ನು ಸೂಚಿಸುವ ಕ್ರಿಯೆ ಸಮುದ್ಗವೆಂದರೆ ತುಟಿಗಳನ್ನು ಸಹಜವಾಗಿ ಇಟ್ಟುಕೊಳ್ಳುವುದು. ಇದು ದಯೆ, ಅಭಿನಂದನೆ, ಚುಂಬನಾದಿಗಳನ್ನು ಸೂಚಿಸಲು ಬಳಸುವ ಕ್ರಿಯೆ.

**ಅಧಿದೇವತೆ**—ರಾಗಗಳು ಮತ್ತು ಸಂಗೀತವಾದ್ಯಗಳಿಗೆ ಸಂಬಂಧಿಸಿದಂತೆ ಅಧಿದೇವತೆಗಳುಂಟು. ಬಂಗಾಳರಾಗದ ಅಧಿದೇವತೆಯು ಗಣೇಶ. ಆದ್ದರಿಂದ ಶ್ರೀ ತ್ಯಾಗರಾಜರು ‘ ಗಿರಿರಾಜಸುತ ’ ಎಂಬ ಬಂಗಾಳರಾಗದ ಕೃತಿಯನ್ನು ಗಣೇಶಸ್ತುತಿ ರೂಪದಲ್ಲಿ ರಚಿಸಿದ್ದಾರೆ. ಮದ್ದಲೆಯ ಅಧಿದೇವತೆ ನಂದಿಕೇಶ್ವರ. ಚಲ್ಲಿಗ್ಗೈ ಎಂಬ ವಾದ್ಯದ ಅಧಿದೇವತೆ ದೇವೇಂದ್ರ.

**ಅಧ್ಯಾತ್ಮ ರಾಮಾಯಣ ಕೀರ್ತನಲು**—೧೯ನೆಯ ಶತಮಾನದ ಆದಿ ಭಾಗದಲ್ಲಿದ್ದ ಸುಬ್ರಹ್ಮಣ್ಯಕವಿ ಪ್ರಣೀತವಾದ ತೆಲುಗಿನ ಒಂದು ಪ್ರಸಿದ್ಧ ಗ್ರಂಥ. ರಾಮಾಯಣವನ್ನು ನೂರು ಕೃತಿಗಳಲ್ಲಿ ನಿರೂಪಿಸಲಾಗಿದೆ. ಪ್ರಾರ್ಥನಾ ಶ್ಲೋಕ ಮತ್ತು ಅರಣ್ಯಕಾಂಡದಲ್ಲಿ ಸುಂದರವಾದ ಒಂದು ಚೂರ್ಣಿಕೆಯನ್ನು ಒಳಗೊಂಡಿದೆ. ಕವಿಯು ತೆಲುಗು ಮತ್ತು ಸಂಸ್ಕೃತ ವಿದ್ವಾಂಸನಾಗಿದ್ದನು. ಇವನ ಕೃತಿಗಳು ತೆಲುಗು ಮತ್ತು ಸಂಸ್ಕೃತ ಪದ ಭೂಯಿಷ್ಠವಾಗಿವೆ. ಕೆಲವು ಕೃತಿಗಳಲ್ಲಿ ೧೨-೧೫ ಚರಣಗಳಿವೆ. ಕರ್ಣಾಟಕ ಸಾರಂಗ, ಮಂಗಳ ಕೈಶಿಕಿ, ಜುಜಾವಂತಿ, ದೇಶೀಯ ದೇವಗಾಂಧಾರಿ, ಲಲಿತ ಪಂಚಮಿ, ಮಾಂಜಿ, ಮಾರುವ, ಗೌರೀ, ಗುಮ್ಮ ಕಾಂಭೋಜಿ, ಪುರಿ ಮತ್ತು ಹಿಂದು ಘಂಟಾ ಎಂಬ ರಾಗಗಳು ಉಕ್ತವಾಗಿದೆ.

**ಅಧ್ಯಾತ್ಮ ಸಂಕೀರ್ತನಲು**—ತಿರುಪತಿಯ ಅಣ್ಣಮಾಚಾರ್ಯರಿಂದ ರಚಿಸಲ್ಪಟ್ಟ ತತ್ವವಿಚಾರವನ್ನೊಳಗೊಂಡ ತೆಲುಗು ಕೀರ್ತನೆಗಳು. ಇವುಗಳನ್ನು ತಿರುಪತಿ ದೇವಾಲಯದ ವತಿಯಿಂದ ಪ್ರಕಟಿಸಿದ್ದಾರೆ.

**ಅದ್ಬೋಧ**—ಈ ರಾಗವು ೮ನೆಯ ಮೇಳಕರ್ತ ಹನುಮ ತೋಡಿಯ ಒಂದು ಜನ್ಯರಾಗ. ಇದು ಹಿಂದೋಳರಾಗದಂತಿದೆ.

ಆ : ಸ ಗ ಮ ದ ನಿ ಸ̇

ಅ : ಸ̇ ನಿ ದ ಮ ಗ ಸ

**ಅದ್ಭುತರಸ**—ನೋಡದಿದ್ದನ್ನು ನೋಡುವುದು, ಕೇಳದಿದ್ದನ್ನು ಕೇಳುವುದು, ದಿವ್ಯದರ್ಶನ, ದೊಡ್ಡಸಭೆ, ವಿಜ್ಞಾನ, ವಿಮಾನ, ಮಾಯೆ, ಇಂದ್ರಜಾಲಾದಿಗಳನ್ನು

ಸಂಪರ್ಶಿಸುವುದೇ ಮೊದಲಾದುವುಗಳಿಂದ ಅದ್ಭುತ ರಸೋತ್ಪತ್ತಿಯಾಗುತ್ತದೆ ಈ ರಸವು ಆಶ್ಚರ್ಯಗಳಿಂದಲೇ ಪ್ರಫುಲ್ಲಿತವಾಗುವುದು. ರೆಪ್ಪೆಬಡಿಯದೆ ನೋಡುವುದು, ರೋಮಾಂಚನ, ಸ್ವೇದ, ಹರ್ಷ, ಹಾಹಾಕಾರ, ಅಧಿಕದಾನ, ಅದ್ಭುತ ವಿಜ್ಞಾನ, ಅಪಾರಪಾಂಡಿತ್ಯ, ಅತುಲೈಶ್ವರ್ಯ ಮೊದಲಾದ ನಿರೀಕ್ಷೆಯಿಲ್ಲದ ವಿಜಯಗಳಲ್ಲೂ, ಆಕಸ್ಮಿಕ ನೋಟ ಮೊದಲಾದ ಸಂದರ್ಭಗಳಲ್ಲೂ ನಾವು ಅದ್ಭುತ ರಸವನ್ನು ಗಮನಿಸಬಹುದು.

ಅತಿಶಯಾರ್ಥಗಳಿಂದುಂಟಾಗುವ ಮಾತುಗಳಲ್ಲಿ ಪ್ರಶಂಸಾತ್ಮಕ ಶಿಲ್ಪ, ಚಿತ್ರ, ಗಾನ, ನರ್ತನಾದಿಗಳಲ್ಲಿ ಅದ್ಭುತರಸವನ್ನು ತೋರಬಹುದು.

**ಅರ್ಧರೇಚಿತ**—ಇದು ಭರತ ನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಎಡಗೈಯಲ್ಲಿ ಚತುರಶ್ರ ಹಸ್ತವನ್ನೂ, ಬಲಗೈಯಲ್ಲಿ ರೇಚಿತ ಹಸ್ತವನ್ನೂ ಹಿಡಿದರೆ ಅದು ಅರ್ಧರೇಚಿತ.

**ಅರ್ಧಚಂದ್ರ**—ಇದು ಭರತನಾಟ್ಯದ ಒಂದು ಹಸ್ತಮುದ್ರೆ. ಪತಾಕಹಸ್ತದ ಉಂಗುಷ್ಠವನ್ನು ಸಾಧ್ಯವಿದ್ದಷ್ಟು ಚಾಚಿ ಹಿಡಿದರೆ ಅದು ಅರ್ಧಚಂದ್ರಹಸ್ತ ಅಂಗುಷ್ಠವು ಒಂದುಕಡೆಗೂ ಉಳಿದ ಬೆರಳುಗಳು ಮತ್ತೊಂದುಕಡೆಗೂ ಬಾಗಿರುತ್ತವೆ. ಮತ್ತು ಚಾಚಿರುತ್ತದೆ. ಈ ಹಸ್ತವು ಮೊಗ್ಗು, ಅರ್ಧಚಂದ್ರ, ಶಂಖ, ಕಲಶ, ಕಂಕಣ, ಬಲವಂತವಾಗಿ ಹೊರಕ್ಕೆ ತಳ್ಳುವುದು ಭೇದ. ಕುಂಡಲಾದಿಗಳನ್ನ ತೋರುತ್ತದೆ.

**ಅನಕ್ಷರ ಆಲಪ್ತಿ**—ಅಕ್ಷರ ಅಥವಾ ಪದಗಳನ್ನು ಬಳಸದೆ ಹಾಡುವ ಆಲಾಪನೆ. ಆದರಲ್ಲಿ ಸ್ವರಗಳನ್ನು ಮಾತ್ರ ಬಳಸಲಾಗುವುದು. ಇದು ವಾದ್ಯ ಸಂಗೀತಕ್ಕೆ ಅನ್ವಯಿಸುವುದಿಲ್ಲ. ಏಕೆಂದರೆ ವಾದ್ಯಗಳಲ್ಲಿ ಶಬ್ದಸಂಗೀತವು ಮಾತ್ರ ಕೇಳಿ ಬರುತ್ತದೆ.' ಸಾಕ್ಷರ ಆಲಪ್ತಿಯು ಇದಕ್ಕೆ ವಿರುದ್ಧವಾದುದು. ಇದರಲ್ಲಿ ತೊಂ, ನಂ, ತದನಂ ಎಂಬ ಪದಗಳನ್ನು ಬಳಸುವುದುಂಟು.

**ಅನಭ್ಯಾಸ**—ಒಂದು ರಾಗದ ಅಲ್ಪತ್ವವನ್ನು ಸೂಚಿಸುವ ವಿಧಾನ. ರಾಗದ ಅಲ್ಪತ್ವ ಸ್ವರಗಳನ್ನು ಬಹಳ ಅಪರೂಪವಾಗಿ ಹಾಡುವುದುಂಟು. ಅದನ್ನು ಪದೇ ಪದೇ ಹಾಡುವುದಿಲ್ಲ. ಅಲ್ಪತ್ವದ ಮತ್ತೊಂದು ಲಕ್ಷಣವು ಲಂಘನ. ಹೀಗೆಂದರೆ ಒಂದು ಸ್ವರವನ್ನು ತೇಲಿಸಿ ಬಿಡುವುದು.

**ಅನಲ**—ಬೆಂಕಿ ಎಂದರ್ಥ ಸಂಗೀತದ ಸಂಜ್ಞಾಸೂಚಕ ಪದ್ಧತಿಯಂತೆ ೩ನೆಯ ಸಂಖ್ಯೆಯನ್ನು ಸೂಚಿಸುತ್ತದೆ ಪ್ರತಿಸ್ಥಾಯಿಯಲ್ಲಿರುವ ದ್ವಾದಶ ಸ್ವರಗಳಲ್ಲಿ ಮೂರನೆಯದಾದ ಚತುಶ್ರುತಿ ಋಷಭವನ್ನು ಸೂಚಿಸುತ್ತದೆಂದು 'ಸ್ವರಾರ್ಣವ'ವೆಂಬ ಗ್ರಂಥದಲ್ಲಿ ಹೇಳಿದೆ. ಅಲ್ಲದೆ ೩೫ ತಾಳಗಳ ರಚನಾಕ್ರಮದಲ್ಲಿ ತಿಶ್ರಜಾತಿ ಏಕತಾಳಕ್ಕೆ 'ಅನಲ' ಎಂದು ಹೆಸರು.

**ಅನ್ನನಾದ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ತಾಳವಾದ ಹಂಸನಾದತಾಳ.

**ಅನ್ನವರಪು ರಾಮಸ್ವಾಮಿ**—ಇವರು ಆಂಧ್ರದ ಪಶ್ಚಿಮ ಗೋದಾವರಿ ಜಿಲ್ಲೆಯ ಏಲೂರು ತಾಲ್ಲೂಕಿನ ಸೋಮವರಪ್ಪಾಡು ಎಂಬ ಗ್ರಾಮದಲ್ಲಿ ಅನ್ನವರಪು ಪೆಂಟಯ್ಯ ಎಂಬ ಹೆಸರಾಂತ ನಾದಸ್ವರ ವಿದ್ವಾಂಸರ ಪುತ್ರರಾಗಿ ೧೯೨೬ರಲ್ಲಿ ಜನಿಸಿದರು. ತಮ್ಮ ಎಂಟನೆಯ ವಯಸ್ಸಿನಲ್ಲಿ ಮಗಂಟಿ ಜಗನ್ನಾಥಂ ಎಂಬುವರಲ್ಲಿ ಸಂಗೀತವನ್ನು ಅಭ್ಯಾಸ ಮಾಡಿ ನಂತರ ಗಾಯಕಸಾರ್ವಭೌಮ ಪಾರುಪಲ್ಲಿ ರಾಮಕೃಷ್ಣಯ್ಯಪಂತುಲುರವರಲ್ಲಿ ಪ್ರೌಢಶಿಕ್ಷಣ ಪಡೆದರು ಅವರ ಹಾಡು ಗಾರಿಕೆಗೆ ಮೊಟ್ಟಮೊದಲ ಬಾರಿ (೧೯೪೪) ಪಿಟೀಲು ಪಕ್ಕವಾದ್ಯ ನುಡಿಸಿದರು. ಅಲ್ಲಿಂದ ಮುಂದೆ ದಕ್ಷಿಣ ಭಾರತದ ಪ್ರಸಿದ್ಧಗಾಯಕರಿಗೆ ಪಕ್ಕವಾದ್ಯ ನುಡಿಸಿ ಪ್ರಸಿದ್ಧರಾಗಿದ್ದಾರೆ. ಇವರ ಪಿಟೀಲುವಾದನದಲ್ಲಿ ನಾದತುಷ್ಟಿ, ಇಂಪು, ತಂಪು ಗಳಿವೆ. ವಾದ್ಯರತ್ನ ಎಂಬ ಬಿರುದಾಂಕಿತರು. ಪ್ರಪಂಚಂ ಸೀತಾರಾಮ್, ಜೆ. ಎಸ್. ಶಾಸ್ತ್ರಿ, ಎ. ವಿ. ಎಸ್. ಕೃಷ್ಣರಾವ್ ಮುಂತಾದವರು ಇವರ ಪ್ರಮುಖ ಶಿಷ್ಯರು.

**ಅನ್ನಲೀಲಾ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಹಂಸಲೀಲಾ ಎಂಬ ಒಂದು ತಾಳ ವಿಶೇಷ.

**ಅನಾಗತಗ್ರಹ**—ತಾಳವು ಪ್ರಾರಂಭವಾದ ನಂತರ ಕೃತಿ ಅಥವಾ ಅದರ ಒಂದು ಭಾಗದ ಸಂಗೀತವು ಆರಂಭವಾಗುವುದಕ್ಕೆ ಕಾಲ ವ್ಯತ್ಯಾಸವು $\frac{1}{4}$, $\frac{1}{2}$, $\frac{3}{4}$, 1 $1\frac{1}{4}$, $1\frac{1}{2}$, ಅಕ್ಷರಕಾಲವಿರಬಹುದು. ಇದೇ ಅನಾಗತಗ್ರಹ.

**ಅನಾಹತನಾದ**—ಮಾನವ ದೇಹದ ಮೂಲಾಧಾರದಿಂದ ಹೊರಡುವ ನಾದಕ್ಕೆ ಅನಾಹತನಾದವೆಂದು ಹೆಸರು. ಇದು ಯೋಗಿಗಳಿಗೆ ಮಾತ್ರ ಕೇಳಿಸುತ್ತದೆ. ನಾದಯೋಗಿಗಳಾದ ತ್ಯಾಗರಾಜರು ಅನಾಹತನಾದವನ್ನು ಅನುಭವಿಸಿದ್ದರೆಂಬುದಕ್ಕೆ ಅವರ 'ಸ್ವರರಾಗ ಸುಧಾರಸ'ವೆಂಬ ಕೃತಿಯು ನಿದರ್ಶನ.

**ಅನಿಬದ್ಧ**—ಸಂಗೀತದಲ್ಲಿ ನಿಬದ್ಧ ಮತ್ತು ಅನಿಬದ್ಧ ಎಂಬ ಎರಡು ವಿಧಗಳಿವೆ. ಅಂಗಗಳಿರುವ ಧಾತುವಿನದು (ಎಂದರೆ ಸಂಗೀತ ರಚನೆಗಳು) ನಿಬದ್ಧ ಸಂಗೀತ. ಇದು ಒಂದು ತಾಳದ ಚೌಕಟ್ಟಿಗೆ ಒಳಗಾಗಿರುತ್ತದೆ. ಅನಿಬದ್ಧ ಸಂಗೀತದಲ್ಲಿ ತಾಳಬದ್ಧತೆಯಿರುವುದಿಲ್ಲ. ಇದು ಆಲಾಪನೆ ಮತ್ತು ಸ್ವರಸಂಚಾರಗಳಿಗೆ ಮಾತ್ರ ಅನ್ವಯಿಸುತ್ತದೆ.

**ಅನಿಲಮಧ್ಯ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ : ಸ ರಿ ಮ ಪ ದ ಸ

ಅ : ಸ ನಿ ದ ಪ ಮ ಗ ರಿ ಸ

**ಅನ್ನಿಯತಾಳ**—ವನಪಾದ ಚೂಡಾಮಣಿಯಿಂದ ರಚಿತವಾದ ತಾಳ ಸಮುತ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಅನಿರ್ಯುಕ್ತ**—ಮಧ್ಯಯುಗದಲ್ಲಿ ಪ್ರಬಂಧಗಳು ಅಥವಾ ಸಂಗೀತ ರಚನೆಗಳನ್ನು ನಿರ್ಯುಕ್ತ ಅಂದರೆ ನಿಯಮಬದ್ಧವಾದುದು ಮತ್ತು ಅನಿರ್ಯುಕ್ತ (ಅನಿಯಮ) ಎಂಬ ಎರಡು ವಿಧವೆಂದು ವರ್ಗೀಕರಣ ಮಾಡಿದ್ದರು. ನಿರ್ಯುಕ್ತವಾವುದು ರಾಗ, ತಾಳ, ವೃತ್ತಬದ್ಧವಾಗಿತ್ತು. ಅನಿರ್ಯುಕ್ತವಾದುದು ಇವುಗಳಿಗೆ ಬದ್ಧವಾಗಿರಲಿಲ್ಲ

**ಅನಿಲಾವಳಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ನಿ ದ ನಿ ಸ

ಅ : ಸ ನಿ ಪ ಮ ರಿ ಸ

**ಅನಿಷ್ಟ**—ಇದು ಭರತನಾಟ್ಯಾಭಿನಯದ ಇಂದ್ರಿಯದ ಅಪ್ರಸನ್ನತೆಯನ್ನು ತಿಳಿಸುವ ಒಂದು ಅಭಿನಯಕ್ರಿಯೆ. ತಲೆಯನ್ನು ಪಕ್ಕಕ್ಕೆ ತಿರುಗಿಸಿ, ಕಣ್ಣು ಮೂಗುಗಳನ್ನು ಮುರಿದಂತೆ ತೋರಿಸಿ, ದೃಷ್ಟಿಯನ್ನು ಅತ್ತಿತ್ತ ಸರಿಸುತ್ತಾ ಇಷ್ಟವಿಲ್ಲದಿರುವುದನ್ನು ತಿಳಿಸುವುದು

**ಅನುಕಾರ**—ಗಾಯಕರಲ್ಲಿ ಐದು ವರ್ಗಗಳಿವೆ. ಇನ್ನೊಬ್ಬರ ಶೈಲಿಯನ್ನು ಸಂಪೂರ್ಣವಾಗಿ ಅನುಕರಣೆ ಮಾಡುವವನು ಅನುಕಾರ.

**ಅನುನಾದ**—ಒಂದು ಮುಖ್ಯ ಸ್ವರದ ಹಿಂಬದಿಯಲ್ಲಿ ಸ್ವಲ್ಪವಾಗಿ ಕೇಳಿಬರುವ ಸ್ವರ. ಇದು ಸಹಸ್ವರ ತಂಬೂರಿಯ ಮಂದ್ರದ ತಂತಿಯನ್ನು ಮೀಟಿದಾಗ ಅಂತರ ಗಾಂಧಾರವು ಮೆದುವಾಗಿ ಕೇಳಿ ಬರುತ್ತದೆ

**ಅನುನಾಸಿಕನಾದ**—ಕೆಲವರು ಹಾಡುವಾಗ ಮೂಗಿನಿಂದ ಹೊರಡುವ ಸ್ವರ. ಇದು ಗಾಯಕನ ಒಂದು ದೋಷ ಇದಕ್ಕೆ ಅನುನಾಸಿಕವೆಂದು ಹೆಸರು

**ಅನೂಪ ಸಂಗೀತರತ್ನಾಕರ**—ಭಾವಭಟ್ಟ ವಿರಚಿತ ಸಂಸ್ಕೃತದ ಒಂದು ಸಂಗೀತ ಶಾಸ್ತ್ರಗ್ರಂಥ.

**ಅನೂಪ ಸಂಗೀತವಿಲಾಸ**—ಭಾವಭಟ್ಟನು ರಚಿಸಿದ ಒಂದು ಸಂಗೀತ ಶಾಸ್ತ್ರಗ್ರಂಥ ಸಂಸ್ಕೃತ ಭಾಷೆಯಲ್ಲಿದೆ. ಇದರಲ್ಲಿ ನಾದ, ಶ್ರುತಿ, ಸ್ವರ, ಮತ್ತು ರಾಗದ ವಿಷಯಗಳ ವಿವೇಚನೆಯಿದೆ. ಶ್ರುತಿಗಳನ್ನು ಗಾತ್ರಜ ಮತ್ತು ಯಂತ್ರಜ ಎಂಬ ಎರಡು ವಿಧವಾಗಿ ವರ್ಗೀಕರಿಸಲಾದೆ. ೭೦ ರಾಗಗಳ ವಿಚಾರವನ್ನು ಹೇಳಿದೆ. ಶಾರ್ಙ್ಗದೇವ, ಅಹೋಬಲ, ದಾಮೋದರಮಿಶ್ರ, ಪುಂಡರೀಕವಿಠಲ, ಶ್ರೀನಿವಾಸ ಮತ್ತು ಸೋಮನಾಥ ಎಂಬ ಹಿಂದಿನ ಲಾಕ್ಷಣಿಕರನ್ನು ಸ್ಮರಿಸಲಾಗಿದೆ.

**ಅನೂಪ್ ಸಿಂಗ್**—ರಾಜಾ ಅನುಪ್‌ಸಿಂಗ್ (೧೬೭೪–೧೭೦೯) ಬಿಕನೀರ್ ಸಂಸ್ಥಾನದ ದೊರೆಯಾಗಿದ್ದನು. ಇವನು ಸಂಗೀತಕಲೆಯನ್ನು ಉದಾರವಾಗಿ ಪೋಷಿಸಿದನು ಇವನ ಪೋಷಣೆ ಮತ್ತು ಪ್ರೋತ್ಸಾಹಗಳಿಂದ ಭಾವಭಟ್ಟನು

'ಅನೂಪ ಸಂಗೀತ ವಿಲಾಸ' 'ಅನೂಪ ಸಂಗೀತ ರತ್ನಾಕರ' ಮತ್ತು 'ಅನೂಪ ಸಂಗೀತಾಂಕುಶ' ಎಂಬ ಮೂರು ಸಂಗೀತ ಶಾಸ್ತ್ರಗ್ರಂಥಗಳನ್ನು ರಚಿಸಿದನು.

**ಅನುದ್ರುತ**—ತಾಳದ ಆರು ಅಂಗಗಳಲ್ಲಿ ಒಂದು ಅಂಗದ ಹೆಸರು. ಒಂದು ಅಕ್ಷರ ಕಾಲವು ಇದರ ಕಾಲ ಪ್ರಮಾಣ. ಇದನ್ನು ಒಂದು ಘಾತದಿಂದ ಸೂಚಿಸಲಾಗುವುದು.

**ಅನುದ್ರುತಮೇರು**—ಚತುರ್ದಶತಾಳ ಪ್ರಸ್ತಾರಗಳಲ್ಲಿ ಒಂದು ಪ್ರಸ್ತಾರ ವಿಶೇಷದ ಹೆಸರು

**ಅನುಪ್ರಾಸ**—ಕೆಲವು ರಚನೆಗಳ ಮಧ್ಯಭಾಗದಲ್ಲಿ ಕಂಡು ಬರುವ ಪ್ರಾಸ. ಇದು ಅಂತ್ಯಪ್ರಾಸ ಮತ್ತು ದ್ವಿತೀಯಾಕ್ಷರ ಪ್ರಾಸದಿಂದ ಬೇರೆಯಾದುದು ಇದು ಕೀರ್ತನೆಗೆ ಮೆರುಗು ಕೊಡುತ್ತದೆ.

**ಅನುಪಲ್ಲವಿ**—ಕರ್ಣಾಟಕ ಸಂಗೀತದ ರಚನಾ ವಿಶೇಷಗಳಾದ ಕೃತಿ, ವರ್ಣ, ಪದ ಮತ್ತು ಇತರ ವಿಧವಾದ ರಚನೆಗಳಲ್ಲಿರುವ ದ್ವಿತಿಯ ಭಾಗ. ಇದು ಪಲ್ಲವಿಯಷ್ಟು ಇರಬಹುದು ಅದರ ಎರಡರಷ್ಟಿರಬಹುದು. ಪಲ್ಲವಿ ಮತ್ತು ಅನುಪಲ್ಲವಿಯ ಪ್ರಾರಂಭದ ಸ್ವರಗಳಿಗೆ ಖಚಿತವಾದ ಸಂಬಂಧವಿರುತ್ತದೆ. ಇವು ಒಂದೇ ಬಗೆಯ ಸ್ವರಗಳಾಗಿರಬಹುದು ಅಥವಾ ಒಂದು ಸ್ವರಸಪ್ತಕದ ಸ್ವರಗಳಾಗಿರಬಹುದು. ಅಥವಾ ಪರಸ್ಪರ ಸಂವಾದಿ ಸ್ವರಗಳಾಗಿರಬಹುದು. ಪರಸ್ಪರ ಅನುವಾದಿ ಸ್ವರಗಳಿರುವುದು ಅಪರೂಪ.

**ಅನೂಪ ಸಂಗೀತಾಂಕುಶ**—ಭಾವಭಟ್ಟ ವಿರಚಿತವಾದ ಒಂದು ಸಂಗೀತ ಶಾಸ್ತ್ರಗ್ರಂಥ.

**ಅನುಭಾವ**—ಸ್ವಹೇತುವಾಗಿ ಮನೋಗತವಾಗಿರುವ ವಿಷಯಗಳನ್ನು ಭ್ರೂವಿಕ್ಷೇಪಾದಿಗಳಿಂದ ಹೊರಚೆಲ್ಲುವುದೇ ಅನುಭಾವ. ಅಂದರೆ ಮನಸ್ಸಿನ ಭಾವನೆಗಳನ್ನು ಪ್ರಕಟಿಸುವ ರೀತಿಯು ಅನುಭಾವ. ಇದು ನಾಲ್ಕು ವಿಧವಾಗಿದೆ.

(೧) **ಚಿತ್ತಜಾನುಭಾವ**—ಕ್ಷೋಭೆ, ಮುಖಕಾಂತಿ, ಮಾಧುರ್ಯ, ಧೈರ್ಯ, ಔದಾರ್ಯ, ಉದಾಸೀನ, ಅವಹೇಳನ ಮುಂತಾದ ಮನಸ್ಸಿನ ಭಾವನೆಗಳನ್ನು ಪ್ರಕಾಶಗೊಳಿಸುವುದು ಚಿತ್ತಜಾನುಭಾವ

(೨) **ಗಾತ್ರಜಾನುಭಾವ**—ಲೀಲೆ, ವಿಲಾಸ, ಕ್ರೀಡೆ, ವ್ಯಾಯಾಮ, ಈಜುವುದು, ಗರಡಿ ನರ್ತನ, ನಡೆಯುವುದು ಮುಂತಾದುವುಗಳಲ್ಲಿ ಪ್ರಕಟವಾಗುವ ದೈಹಿಕ ಶಕ್ತಿ ವಿನಿಮಯವು ಗಾತ್ರಜಾನುಭಾವ.

(೩) **ಬುದ್ಧ್ಯಾರಂಭಾನುಭಾವ**—ರೀತಿ, ನಡತೆ, ವೃತ್ತಿ, ಪ್ರವೃತ್ತಿಗಳಾದಿಯಾದ ಬುದ್ಧಿಗೆ ಸಂಬಂಧಿಸಿದ ಕ್ರಿಯಾ ವಿಶೇಷಣಾದಿಗಳ ಸಂಯೋಜನೆಯಲ್ಲಿ ಪ್ರಕಟಿತವಾಗುವುದು ಬುದ್ಧ್ಯಾರಂಭಾನುಭಾವ.

(೪) **ವಾಗಾರಂಭಾನುಭಾವ**—ಆಲಾಪ, ಸಲ್ಲಾಪ, ಪ್ರಲಾಪ, ವಿಲಾಪ, ಅನುಲಾಪ, ನಿರ್ದೇಶಕ, ಉಪದೇಶಕ ಮುಂತಾದ ಮಾತುಗಳ ವಿಶೇಷಣಗಳು ವಾಗಾರಂಭಾನುಭಾವ ಅವನು ಧೈರ್ಯದಿಂದ (ಇದು ಚಿತ್ತಜಾನುಭಾವ) ವೇದಿಕೆಯ ಮೇಲೆ ನಿಂತು ಭಗವಂತನ ಲೀಲಾವಿನೋದಗಳ ಬಗ್ಗೆ (ಇದು ಗಾತ್ರಜಾನು ಭಾವ) ಮಾತನಾಡುತ್ತಾ, ಜನಸಾಮಾನ್ಯರಿಗೂ ಹಿಡಿಸುವಂತೆ ಕತೆಗಳನ್ನು ಹೇಳುತ್ತಾ ಹರಿನಾಮ ಸಂಕೀರ್ತನೆಯನ್ನು ಮಾಡಿ ಉಪದೇಶವನ್ನಿತ್ತನು (ಇದು ವಾಗಾರಂಭಾನುಭಾವ) ಆ ರೀತಿಯು ಅಮೋಘವಾಗಿತ್ತು (ಇದು ಬುದ್ಧ್ಯಾ ರಂಭಾನುಭಾವ). ಈ ಉದಾಹರಣೆಯಲ್ಲಿ ಅನುಭಾವದ ವಿವಿಧ ಭೇದಗಳನ್ನು ಗಮನಿಸ ಬಹುದು.

**ಅನುಬಂಧ** ೧೮ನೆಯ ಶತಮಾನದಲ್ಲಿ ರಚಿಸಲ್ಪಟ್ಟ ತಾನವರ್ಣಗಳಲ್ಲಿ ಕೊನೆಯ ಭಾಗವು ಅನುಬಂಧವೆನಿಸಿಕೊಂಡಿದೆ. ಮುಂದಿನ ಶತಮಾನದ ವಾಗ್ಗೇಯ ಕಾರರು ಈ ಭಾಗವನ್ನು ವರ್ಣಗಳಲ್ಲಿ ಸೇರಿಸುವ ಪದ್ಧತಿಯನ್ನು ಮುಂದುವರಿಸಲಿಲ್ಲ. ಅನುಬಂಧವು ವರ್ಣಕ್ಕೆ ಸಂಪೂರ್ಣವಾದ ಮುಕ್ತಾಯವನ್ನುಂಟುಮಾಡುತ್ತಿತ್ತು. ಅನುಬಂಧವಿರುವ ವರ್ಣವನ್ನು ಹಾಡುವಾಗ ಪಲ್ಲವಿ, ಅನುಪಲ್ಲವಿ, ಮುಕ್ತಾಯಸ್ವರ, ಚರಣ ಮತ್ತು ಎತ್ತುಗಡೆ ಸ್ವರಗಳನ್ನು ಕ್ರಮವಾಗಿ ಹಾಡಿ ಕೊನೆಯ ಎತ್ತುಗಡೆ ಸ್ವರದ ನಂತರ ಚರಣವನ್ನು ಹಾಡಿ, ನಂತರ ಅನುಬಂಧವನ್ನು ಹಾಡುತ್ತಿದ್ದರು. ಇತರ ಭಾಗಗಳ ಸಾಹಿತ್ಯದ ಭಾವನೆಯನ್ನು ಅನುಬಂಧದ ಸಾಹಿತ್ಯವು ಸಂಪೂರ್ಣ ಗೊಳಿಸುತ್ತಿತ್ತು. ಕೆಲವು ಅನುಬಂಧಗಳಲ್ಲಿ ಸಾಹಿತ್ಯ ಮತ್ತು ಸ್ವರಭಾಗಗಳು ಮತ್ತು ಕೆಲವುಗಳಲ್ಲಿ ಕೇವಲ ಸಾಹಿತ್ಯ ಭಾಗ ಮಾತ್ರ ಇರುತ್ತಿದ್ದವು. ಭೈರವಿ ರಾಗದ (ಆದಿತಾಳ) ಪ್ರಸಿದ್ಧವಾದ ವಿರಿಬೋಣಿ ವರ್ಣದಲ್ಲಿ ಅನುಬಂಧವಿದ್ದಿತು. ಇದನ್ನು ಹಾಡುವ ಸಂಪ್ರದಾಯವನ್ನು ಕಾಲಕ್ರಮದಲ್ಲಿ ಕೈಬಿಟ್ಟರು. ಈ ವರ್ಣದ ಅನುಬಂಧವು 'ಚಿರು ಜೀಮತಲು' ಎಂದು ಆರಂಭವಾಗುತ್ತದೆ. ಇದನ್ನು ಹಾಡಿದ ನಂತರ 'ಶ್ರೀರಾಜಗೋಪಾಲ' ಎಂದು ಆರಂಭವಾಗುವ ಪಲ್ಲವಿಯ ದ್ವಿತೀಯ ಭಾಗವನ್ನು ಹಾಡುತ್ತಿದ್ದರು. ರಾಮಸ್ವಾಮಿ ದೀಕ್ಷಿತರು ಮತ್ತು ಸೊಂಠಿವೆಂಕಟ ಸುಬ್ಬಯ್ಯನವರು ರಚಿಸಿದ ತಾನವರ್ಣಗಳಲ್ಲಿ ಅನುಬಂಧಗಳಿದ್ದುವು. ಪಂಚರತ್ನ ಕೃತಿಯಲ್ಲಿ (ಆರಭಿ) ತ್ಯಾಗರಾಜರು 'ಸದ್ಭಕ್ತುಲ' ಎಂಬ ಪದದಿಂದ ಆರಂಭವಾಗುವ ಅನುಬಂಧವಂತಿರುವ ಭಾಗವನ್ನು ಸೇರಿಸಿದ್ದಾರೆ. 'ಸಮಯಾನಿಕಿ ತಗು ಮಾಟಲಾಡೆನೆ' ಎಂಬ ಎತ್ತುಗಡೆಪಲ್ಲವಿಯಿಂದ ಕೂಡಿದ ಭಾಗವು ಎಂಟು ಆವರ್ತಗಳನ್ನು ಹೊಂದಿದೆ. ಇದರ ಸಾಹಿತ್ಯವನ್ನು ಮಾತ್ರ ಹಾಡುವರು. ಎತ್ತುಗಡೆ ಪಲ್ಲವಿಯ ನಂತರ ಬರುವ ಸ್ವರಸಾಹಿತ್ಯ ಭಾಗಗಳಂತೆ ಹಾಡುವುದಿಲ್ಲ. ದ್ವಿತೀಯಾಕ್ಷರ ಪ್ರಾಸ ಮತ್ತು ಯತಿ ಪ್ರಾಸಗಳು ಅನುಬಂಧದ ಸಾಹಿತ್ಯದಲ್ಲಿ ಸೂಕ್ತವಾದೆಡೆಗಳಲ್ಲಿ ಇರುವ ಅನುಬಂಧವು ಎತ್ತುಗಡೆ ಪಲ್ಲವಿಯೊಂದಿಗೆ ನೇರವಾಗಿ ಸಂಬಂಧಿಸಿವೆ ಎಂಬುದಕ್ಕೆ ನಿದರ್ಶನ.

ಅನುಬಂಧವು ಪ್ರತ್ಯೇಕ ಭಾಗವಾಗಿರುವುದರಿಂದ ವಾಗ್ಗೇಯಕಾರರ ಮುದ್ರೆಯನ್ನು ಇಲ್ಲಿ ಸೇರಿಸಲಾಗಿದೆ.

**ಅನುಘಂಟೆ**—ಈ ರಾಗವು ೪೭ನೆಯ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯರಾಗ

ಆ: ಸ ರಿ ಮ ಗ ರಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಅನುದಾತ್ತ**—ವೇದಪಾರಾಯಣದಲ್ಲಿ ಬಳಸಲಾಗುವ ಮೂರು ಸ್ವರಗಳಲ್ಲಿ ಅತ್ಯಂತ ತಗ್ಗಿನಸ್ವರ. ಉದಾತ್ತ ಮತ್ತು ಸ್ವರಿತಗಳೆಂಬುವು ಮಿಕ್ಕ ಇನ್ನೆರಡು ಸ್ವರಗಳು.

**ಅನುಮಕಟಿಕ**—ಇದೊಂದು ನಾಟ್ಯ ಶಾಸ್ತ್ರಗ್ರಂಥ. ತಮಿಳುಭಾಷೆಯಲ್ಲಿರುವ ' ಭರತ ಸೇನಾಪತೀಯಂ ' ಎಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಅನುಮಕುಂಬತಾಳ**—ಇದು ತಾಳ ಸಮುತ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ ವಿಶೇಷ.

**ಅನುಮಂದ್ರ**—ವೀಣೆಯ ನಾಲ್ಕನೆಯ ತಂತಿಯ ಹೆಸರು. ಇದನ್ನು ಅನುಮಂದ್ರ ಸ್ಥಾಯಿ ಪಂಚಮಕ್ಕೆ ಶ್ರುತಿ ಮಾಡಲಾಗುವುದು.

**ಅನುಮಂದ್ರ ಸ್ಥಾಯಿ**—ಮಂದ್ರಸ್ಥಾಯಿಯ ತಗ್ಗಿನ ಸ್ಥಾಯಿ.

**ಅನ್ಯಮುಕುಂದ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ತಾಳ ವಿಶೇಷ. ಇದು ಹಲವು ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಉಕ್ತವಾಗಿದೆ.

**ಅನ್ಯರಾಗಕಾಕು**—ರಾಗಕಾಕು ಎಂದರೆ ರಾಗದಲ್ಲಿ ಅಡಗಿರುವ ಪ್ರಮುಖ ಛಾಯೆ. ಒಂದು ರಾಗವನ್ನು ಹಾಡುವಾಗ ಇನ್ನೊಂದು ರಾಗದ ಛಾಯೆಯು ಕಂಡುಬರುವುದೇ ಅನ್ಯರಾಗ ಕಾಕು. ಒಂದು ರಾಗದ ಆಲಾಪನೆ ಮಾಡುವಾಗ ಇನ್ನೊಂದು ರಾಗದ ಛಾಯೆಯು ಗ್ರಹಭೇದದ ಪರಿಣಾಮದಿಂದ ಸ್ವಲ್ಪ ಕಂಡು ಬರುತ್ತದೆ.

**ಅನುಲಾಪ**—ಭರತನಾಟ್ಯದಲ್ಲಿ ಒಂದೇ ಮಾತನ್ನು ಅನೇಕ ಸಲ ಹೇಳುವುದು ಅನುಲಾಪ. ವಾಚಕಾಭಿನಯದ ಹನ್ನೆರಡು ವಿಧಗಳಲ್ಲಿ ಇದೊಂದು ವಿಧ.

**ಅನುಲೋಮ**—ತಾಳದ ಗತಿಯನ್ನು ಒಂದೇ ಸಮನಾಗಿರುವಂತೆ ಇಟ್ಟು ಕೊಂಡು ಮೂರು ಕಾಲಗಳಲ್ಲಿ ಹಾಡುವುದು ಅನುಲೋಮ. ತಾಳವು ಮಾತ್ರ ಹಾಡುವಾಗ ಒಂದನೇ ಕಾಲದಲ್ಲಿರುತ್ತದೆ. ಮೊದಲಹಂತದಲ್ಲಿ ಒಂದು ಸಲ, ಎರಡನೆಯ ಕಾಲದಲ್ಲಿ ಎರಡು ಸಲ ಮತ್ತು ಮೂರನೆಯ ಕಾಲದಲ್ಲಿ ನಾಲ್ಕು ಸಲ ಹಾಡಿನ ವಿಷಯವನ್ನು ಕೇಳಬಹುದು. ಪಲ್ಲವಿಗಳನ್ನು ಹಾಡುವಾಗ ಮನೋಧರ್ಮ ಸಂಗೀತದ ಪ್ರೌಢಭಾಗವಾದ ಅನುಲೋಮವನ್ನು ಮಾಡುತ್ತಾರೆ. ಇದಕ್ಕೆ

ತಾಳಜ್ಞಾನ ಮತ್ತು ಕಾಲಪ್ರಮಾಣದ ಮೇಲೆ ಹಿಡಿತವು ಪರಿಪೂರ್ಣವಾಗಿರಬೇಕು. ಇದೇ ಅನುಲೋಮ ಕ್ರಿಯೆ.

**ಅನುವೃತ್ತ**—ನಂದಿಕೇಶ್ವರನು ಹೇಳಿರುವ ಭರತನಾಟ್ಯದ ಒಂದು ದೃಷ್ಟಿ ಭೇದ. ಸಿಟ್ಟು, ಎಚ್ಚರಿಕೆ, ಪ್ರಶ್ನಾರ್ಥ ಮುಂತಾದುವನ್ನು ಸೂಚಿಸಲು ಸ್ವಸ್ಥಾನದಿಂದ ಮೇಲೆ ಕೆಳಗೆ ವೇಗವಾಗಿ ಚಲಿಸುವಂತಹ ದೃಷ್ಟಿ.

**ಅನ್ಯಸ್ವರ**—ಭಾಷಾಂಗ ರಾಗಗಳಲ್ಲಿ ಬರುವ ಸ್ವರ. ಇದು ರಾಗದ ಸ್ವಕೀಯ ಸ್ವರವಲ್ಲ. ರಾಗಕ್ಕೆ ಕಳೆಕಟ್ಟಲು ಕೆಲವು ಸ್ವರ ಸಮೂಹಗಳಲ್ಲಿ ಮಾತ್ರ ಇಂತಹ ಸ್ವರವು ಬರುತ್ತದೆ.

**ಅನ್ಯಸ್ಥಾನಸ್ವರ**—ಒಂದು ಸ್ವರವು ಸ್ವಸ್ಥಾನದಲ್ಲಿಲ್ಲದೆ ಇನ್ನೊಂದು ಸ್ವರದ ಸ್ಥಾನದಲ್ಲಿ ಅಂದರೆ ಸಮೀಪದ ಸ್ವರದ ಸ್ಥಾನದಲ್ಲಿ ನುಡಿಯುವುದು. ಇಂತಹ ಸ್ವರಗಳು ಕೆಲವು ರಾಗಗಳಲ್ಲಿ ಕಂಡುಬರುತ್ತವೆ ಅಸಾವೇರಿ ರಾಗದಲ್ಲಿ ಗ ರಿ ಸ ಎಂಬ ಸ್ವರ ಸಮೂಹದಲ್ಲಿ ಗಾಂಧಾರವು ರಿಷಭ ಸ್ಥಾನದಲ್ಲಿ ನುಡಿಯುತ್ತದೆ. ಸಾಧಾರಣ ಗಾಂಧಾರದ ಕಂಪನ ಪ್ರಮಾಣವು 9/8 ಮತ್ತು 6/5 ಮೇಲಿನ ಗಾಂಧಾರವು ರಿಷಭ ಸ್ಥಾನದಲ್ಲಿ ನುಡಿಯುವುದರಿಂದ ಅದರ ಕಂಪನ ಪ್ರಮಾಣವು 9/8ಕ್ಕಿಂತ ಕಡಿಮೆಯಾಗಿರುತ್ತದೆ.

**ಅನುಸಾರಿಣಿ**—ತಂಬೂರಿಯ ಎರಡನೆಯ ತಂತಿಯ ಹೆಸರು. ಇದನ್ನು ಸಾರಣಿಯಂತೆ ಆಧಾರ ಷಡ್ಜಕ್ಕೆ ಶ್ರುತಿ ಮಾಡಲಾಗುವುದು. ಇವೆರಡು ತಂತಿಗಳನ್ನು ಸರಿಯಾಗಿ ಶ್ರುತಿಮಾಡಿ ಒಂದನ್ನು ಮೀಟಿದರೆ ಇನ್ನೊಂದು ತಾನೇ ತಾನಾಗಿ ಕಂಪನಗೊಳ್ಳುತ್ತದೆ. ಸಹ ಕಂಪನವನ್ನು ತಂಬೂರಿಯನ್ನು ಮೀಟಿದಾಗ ಚೆನ್ನಾಗಿ ಕಾಣಬಹುದು. ವೀಣೆಯ ತಾಳದ ತಂತಿಗಳಲ್ಲಿ ಮೇಲಿನ ತಂತಿಗೆ ಅನುಸಾರಿಣಿ ಎಂದು ಹೆಸರು.

**ಅನುಸ್ವರ**—ಒಂದು ರಾಗದ ಮುಖ್ಯ ಸ್ವರದ ಜೊತೆಗೆ ನುಡಿಸುವ ಸ್ವರಗಳು. ಈ ಸ್ವರಗಳಿಂದ ರಾಗದ ಸೌಂದರ್ಯವನ್ನು ಹೆಚ್ಚಿಸಿ ಆಲಾಪನೆ ಮಾಡುವುದುಂಟು. ಈ ಸ್ವರಗಳನ್ನು ಸ್ವಲ್ಪ ಮುಟ್ಟಿ ಹಾಡುವರು.

**ಅನಂಗ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ತಾಳ ವಿಶೇಷ. ಇದು ಒಂದು ಲಘು, ಪ್ಲುತ, ಲಘು ಮತ್ತು ಗುರುವನ್ನು ಹೊಂದಿದೆ. ಇದರ ಒಂದು ಆವರ್ತಕ್ಕೆ ೮ ಮಾತ್ರೆಗಳ ಕಾಲವಾಗುತ್ತದೆ.

**ಅನಂಗ ಗಾಂಧಾರಿ**—ಈ ರಾಗವು ೩೬ನೆಯ ಮೇಳಕರ್ತ ಝಾಲವ ರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ನಿ ದ ನಿ ಸ

ಅ: ಸ ನಿ ಪ ದ ಮ ಗ ಮ ರಿ ಸ

**ಅನಂತ**—ಈ ರಾಗವು ೧೭ನೆಯ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ಪ ಮ ಗ ರಿ ಸ

**ಅನಂತ ಭಾರತಿ**—(೧೮೪೫–೧೯೦೫) ಇವರು ತಮಿಳು ನಾಡಿನ ನಾಚ್ಚಿಯಾರ್ ಕೋಯಿಲ್ ಬಳಿ ಇರುವ ಉಮಯಾಳ್ಪುರದ ಸಾಮವೇದಿ ಶ್ರೀ ವೈಷ್ಣವ ಬ್ರಾಹ್ಮಣರು ಇವರ ತಂದೆ ಶ್ರೀನಿವಾಸ ಅಯ್ಯಂಗಾರ್ ಮತ್ತು ತಾಯಿ ಲಕ್ಷ್ಮಿ ಅಮ್ಮಾಳ್. ಅರುಣಾಚಲ ಕವಿರಾಯರ 'ರಾಮನಾಟಕ'ದಿಂದ ಸ್ಫೂರ್ತಿ ಪಡೆದು ಅದೇ ಶೈಲಿಯಲ್ಲಿ ರಾಮಾಯಣದ ಉತ್ತರಕಾಂಡವನ್ನು ಕೀರ್ತನೆರೂಪದಲ್ಲಿ ರಚಿಸಿದರು. ದೇಶಿಕ ಪ್ರಭಾವ ಪ್ರಕಾಶಿಕಾ ಎಂಬ ಕೀರ್ತನೆಗಳನ್ನೂ, ಶ್ರೀಮದ್ಭಾಗವತದ ದಶಮಸ್ಕಂದ ಕೀರ್ತನೆಗಳನ್ನೂ ರಚಿಸಿ ಪ್ರಸಿದ್ಧ ವಾಗ್ಗೇಯಕಾರರಾದರು.

**ಅನಂತಶಾಸ್ತ್ರಿ**—ಅನಂತಶಾಸ್ತ್ರಿಗಳು ಬೆಂಗಳೂರಿನವರು. ಮುಲಕನಾಡು ಬ್ರಾಹ್ಮಣ ಪಂಗಡದವರು. ಇವರ ಅಣ್ಣ ಅನ್ನದಾನ ಶಾಸ್ತ್ರಿ ಸಂಗೀತ ವಿದ್ವಾಂಸರಾಗಿದ್ದರು ಅನಂತ ಶಾಸ್ತ್ರಿಗಳು ಸೇಲಂ ನರಸಯ್ಯನವರ ಶಿಷ್ಯರು. ಇವರಿಗೆ ಪಲ್ಲವಿ ಶೇಷಯ್ಯನವರಲ್ಲೂ ಕೆಲವು ಕಾಲ ಪಾಠವಾಗಿತ್ತು. ಶಾಸ್ತ್ರಿಗಳು ಬೆಂಗಳೂರಿನಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದ ಸಂಗೀತ ವಿದ್ವಾಂಸರಲ್ಲಿ ಒಬ್ಬರು. ಪಾಠ ಹೇಳುವುದರಲ್ಲಿ ಹಾಡುವುದರಲ್ಲಿ ಇವರದು ಗಂಡುವಾಣಿ ತಾಳಗತಿಗೂ ಸ್ವರ ಸಂಯೋಜನೆಗೂ ಹೆಚ್ಚು ಅನುಕೂಲಿಸುವ ಕೃತಿಗಳನ್ನೇ ಆರಿಸಿಕೊಂಡು ಹಾಡುತ್ತಿದ್ದರು. ಇವರಿಗೆ ಸ್ವರಸಿಂಹಕುಟ್ಟಿ ಎಂಬ ಬಿರುದಿತ್ತು.

**ಅಪರೂಪರಾಗ—ಅಪೂರ್ವರಾಗ**—ಪರಿಚಿತವಿಲ್ಲದ ರಾಗ. ನಾದ ತರಂಗಿಣಿಯು ಒಂದು ಅಪೂರ್ವರಾಗ

**ಅಪುಷ್ಟ**—ದುರ್ಬಲವಾದ ನಾದ. ಸೂಕ್ಷ್ಮ, ಅತಿಸೂಕ್ಷ್ಮ, ಪುಷ್ಟ, ಕೃತ್ರಿಮ ಮತ್ತು ಅಪುಷ್ಟವೆಂದು ನಾದವನ್ನು ಐದು ಬಗೆಗಳಾಗಿ ವರ್ಗೀಕರಿಸಿದ್ದಾರೆ.

**ಅಪದೇಶ**—ಇದು ಭರತನಾಟ್ಯದ ವಾಚಿಕಾಭಿನಯದ ಒಂದು ವಿಭೇದ. ತಾನು ಹೇಳಬೇಕೆಂದಿರುವುದನ್ನು ಇನ್ನೊಬ್ಬನು ಹೇಳಿದಂತೆ ಹೇಳುವ ರೀತಿ.

**ಅಪನ್ಯಾಸ**—ಪುರಾತನ ಸಂಗೀತದ ತ್ರಯೋದಶ ಲಕ್ಷಣಗಳಲ್ಲಿ ಇದೊಂದು ವಿಧವಾದ ಲಕ್ಷಣ. ಒಂದು ರಾಗವನ್ನು ಹಾಡುವಾಗ ಮಧ್ಯದಲ್ಲಿ ನಿಲ್ಲಿಸಲು ಉಪಯೋಗಿಸುವ ಸ್ವರಕ್ಕೆ ಅಪನ್ಯಾಸವೆಂದು ಹೆಸರು.

**ಅಪರಾಂತಕ**—ಇದು ಮಾರ್ಗಸಂಗೀತದ ಒಂದು ರಾಗ ವಿಶೇಷ.

**ಅಪರೂಪಂ**—ಸಾರಂಗ ಪಾಣಿಯವರ ಪದಗಳಲ್ಲಿ ಕಂಡುಬರುವ ಒಂದು ಅಪೂರ್ವರಾಗ ವಲಚಿ. ಇವರು ರಚಿಸಿರುವ ಛಾಪು ತಾಳದಲ್ಲಿರುವ 'ವಲಚಿತಿ ನೇನಿಪ್ಪೈ' ಎಂಬ ಪದವು ಈ ರಾಗದಲ್ಲಿದೆ.

**ಅಪಶ್ರುತಿ** —ಹೊಂದಿಕೊಳ್ಳದ ಶ್ರುತಿ. ಶ್ರುತಿಗೆ ಹೊಂದಿಕೊಳ್ಳದ ಸ್ವರ.

**ಅಪಸ್ವರ**—ಇದು ಸುಸ್ವರಕ್ಕೆ ವಿರುದ್ಧವಾದ ಅಪಶ್ರುತಿಯ ಸ್ವರ. ಸಂಗೀತದಲ್ಲಿ ಒಳ್ಳೆಯ ಅಭಿರುಚಿಯಿರುವ ಶ್ರೋತೃಗಳಿಗೆ ಅಪಸ್ವರವನ್ನು ಕೇಳಿದರೆ ಆಘಾತವಾಗುತ್ತದೆ. ಇದನ್ನು ಕೆಟ್ಟಕೂಗು ಎಂದು ಸಾಮಾನ್ಯವಾಗಿ ಹೇಳುವುದುಂಟು.

**ಅಪಸ್ವರಿತ**—ಭರತನಾಟ್ಯದ ಕಟೀರೇಚಕಗಳಲ್ಲಿ ಮೂರು ವಿಧವಾದ ಕ್ರಿಯೆಗಳಿವೆ. ಅವುಗಳಲ್ಲಿ ಹಿಂದೆಳೆವ ಸೊಂಟದ ಕ್ರಿಯೆಯು ಅಪಸ್ವರಿತ.

**ಅಪಲಾಪ**—ಭರತನಾಟ್ಯದ ವಾಚಿಕಾಭಿನಯದ ೧೨ ವಿಧಗಳಲ್ಲಿ ಇದೊಂದು ಬಗೆ. ಮೊದಲು ಹೇಳಿದ ಮಾತನ್ನು ಮತ್ತೊಂದು ರೀತಿಯಲ್ಲಿ ಬದಲಾಯಿಸಿ ಕೊಳ್ಳುವುದೇ ಅಪಲಾಪ.

**ಅಪ್ಪರ್ (೭ನೇ ಶ)**—ಇವರು ತಮಿಳುನಾಡಿನ ಒಬ್ಬ ಪ್ರಸಿದ್ಧ ಶೈವನಾಯನಾರರು. ತೇವಾರಂ ಗೀತಗಳನ್ನು ರಚಿಸಿ ಹಾಡಿದ ಮೂವರು ಸಂತರಲ್ಲಿ ಒಬ್ಬರು. ಇವರಿಗೆ ತಿರುನಾವಕ್ಕರಸು ಮತ್ತು ವಾಗೀಶ ಎಂಬ ಹೆಸರುಗಳಿವೆ. ಇವರು ವೆಳ್ಳಾಳ ಕುಲದಲ್ಲಿ ಜನಿಸಿದರು. ಜೈನಮತಾವಲಂಬಿಯಾಗಿ ತನ್ನ ಅಪಾರ ಪಾಂಡಿತ್ಯ ಮತ್ತು ಜ್ಞಾನದಿಂದ ಧರ್ಮಸೇನ ಎಂಬ ಹೆಸರಿನಿಂದ ಜೈನಗುರುವಾದರು. ಅಣ್ಣನು ಹಿಂದೂಧರ್ಮಕ್ಕೆ ಹಿಂತಿರುಗುವಂತೆ ಬುದ್ಧಿಯನ್ನು ಕರುಣಿಸಬೇಕೆಂದು ಇವರ ತಂಗಿ ಶಿವನನ್ನು ಪ್ರಾರ್ಥಿಸಿದಳು. ಅದರಂತೆ ಸ್ವಲ್ಪ ಕಾಲಾನಂತರ ಅಪ್ಪರ್ ಹಿಂದೂಧರ್ಮವನ್ನು ಪುನಃ ಅವಲಂಬಿಸಿದನು. ಇವರು ತಿರುಜ್ಞಾನ ಸಂಬಂಧರ ಹಿರಿಯ ಸಮಕಾಲೀನರು. ಇವರ ರಚನೆಗಳನ್ನು ತಮಿಳುನಾಡಿನ ಶೈವದೇವಾಲಯ ಗಳಲ್ಲಿ ಇಂದಿಗೂ ಹಾಡುವ ಪದ್ಧತಿ ರೂಢಿಯಲ್ಲಿದೆ.

**ಅಪವೇಷ್ಟಿತ**—ನಂದಿಕೇಶ್ವರನ ಸೂತ್ರದಂತೆ ಇದು ಭರತನಾಟ್ಯದ ಹಸ್ತ ಪ್ರಾಣಗಳಲ್ಲಿ ಒಂದು ವಿಧ ಬೆರಳುಗಳನ್ನು ಕೆಳಕ್ಕೆ ಚಾಚುವುದಕ್ಕೆ ಅಪವೇಷ್ಟಿತ ಹಸ್ತವೆಂದು ಹೆಸರು.

**ಅಫ್ತಾಬ್-ಎ-ಮೌಸಿಕ್**— ಇದರ ಅರ್ಥ 'ಸಂಗೀತ ಮಾರ್ತಾಂಡ'. ಉತ್ತರ ಭಾರತದ ಪ್ರಸಿದ್ಧಗಾಯಕ ಉಸ್ತಾದ್ ಫಯಾಜ್‌ಖಾನರಿಗೆ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ಈ ಬಿರುದನ್ನು ಗೌರವಿಸಿದರು

**ಅಪ್ರಮೇಯ**—ಈ ರಾಗವು ೬೫ನೆಯ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ದ ಸ

ಅ : ಸ ನಿ ದ ಮ ಗ ಮ ರಿ ಸ

**ಅಪ್ರತಿಮಧ್ಯಮ**—ಮೇಳಾಧಿಕಾರಲಕ್ಷಣವೆಂಬ ಗ್ರಂಥದಲ್ಲಿ ಶುದ್ಧಮಧ್ಯಮ ಮತ್ತು ಪ್ರತಿಮಧ್ಯಮ ಶ್ರುತಿಗಳ ಮಧ್ಯೆ ಬರುವ ಶ್ರುತಿಗೆ ಕೊಟ್ಟಿರುವ ಹೆಸರು. ಇದು ಬೇಗಡೆ ಮಧ್ಯಮದಂತೆ.

**ಅಪಾತ್ರಲಕ್ಷಣ**—ನಂದಿಕೇಶ್ವರನ ಅಭಿನಯ ದರ್ಪಣವೆಂಬ ಗ್ರಂಥದಲ್ಲಿ ಹೇಳಿರುವಂತೆ ಹೂಗಣ್ಣಿನವಳು, ಕೂದಲಿಲ್ಲದವಳು, ದಪ್ಪತುಟಿಯವಳು, ಅತಿ ದಪ್ಪವಾಗಿ, ಅತಿಕೃಶಳಾಗಿ, ಅತಿ ಎತ್ತರ ಅಥವಾ ಕುಳ್ಳಾಗಿರುವವಳು, ಗೂನು ಬೆನ್ನಿನವಳು, ಮಧುರವಾದ ಸ್ವರವಿಲ್ಲದವಳು ನಾಟ್ಯಕ್ಕೆ ಇವರು ಯೋಗ್ಯರಲ್ಲ.

**ಅಪ್ಪಾಸ್ವಾಮಿ ಅಯ್ಯರ್**—ಇವರು ಮಹಾವೈದ್ಯನಾಥ ಅಯ್ಯರ್‌ರವರ ಕಿರಿಯ ಸಹೋದರ ಮತ್ತು ಸಂಗೀತ ವಿದ್ವಾಂಸರು.

**ಅಪ್ಪುಕುಟ್ಟಿನಟುವನ್**—ಇವರು ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಶ್ಯಾಮಾಶಾಸ್ತ್ರಿಗಳ (೧೭೬೨-೧೮೨೭) ಸಮಕಾಲೀನರಾಗಿದ್ದ ಒಬ್ಬ ಖ್ಯಾತ ಸಂಗೀತ ವಿದ್ವಾಂಸರು ಇವರಿಗೆ ತನ್ನ ಪಾಂಡಿತ್ಯದಲ್ಲಿ ಅಪಾರ ಹೆಮ್ಮೆ ಇದ್ದಿತು ಆದ್ದರಿಂದ ಸಂಗೀತ ವಿದ್ವಾಂಸರಿಗೆ ಸವಾಲು ಹಾಕುವುದು ಇವರ ಹವ್ಯಾಸವಾಗಿತ್ತು. ಇದರಿಂದ ಅನೇಕ ವಿದ್ವಾಂಸರು ಮನನೊಂದು ಶಾಸ್ತ್ರಿಗಳಿಗೆ ದೂರಿತ್ತು ತಮ್ಮನ್ನು ಕಾಪಾಡ ಬೇಕೆಂದು ಬೇಡಿಕೊಂಡರು. ನಟುವನ್‌ಗೆ ಸವಾಲು ಹಾಕಲು ಶಾಸ್ತ್ರಿಗಳು ನಾಗಪಟ್ಟಣಕ್ಕೆ ಹೋದರು. ಅವರನ್ನು ನೋಡಿದೊಡನೆ ನಟುವನ್ನರಿಗೆ ಸವಾಲನ್ನು ಸ್ವೀಕರಿಸಲು ಭಯವಾಯಿತು. " ನಾನು ನಿಮಗೆ ಸಮಾನನಲ್ಲ ನಿಮ್ಮ ಸವಾಲನ್ನು ಸ್ವೀಕರಿಸಲಾರೆ. ನನ್ನಿಂದಾಗಿ ತಾವು ಇಲ್ಲಿಯವರೆಗೆ ಬಂದಿರುವುದೇ ನನಗೆ ಸಾಕು. ತಾವು ಒಂದು ದೊಡ್ಡ ಸಿಂಹ. ನಾನಾದರೋ ತಮ್ಮ ಮುಂದೆ ಒಂದು ಇಲಿಯಂತೆ. ತಮ್ಮ ಸವಾಲನ್ನು ಸ್ವೀಕರಿಸದಿದ್ದರೆ ನನ್ನ ಘನತೆಗೆ ಯಾವ ವಿಧವಾದ ಕುಂದೂ ಉಂಟಾಗುವುದಿಲ್ಲ " ಎಂದು ಶಾಸ್ತ್ರಿಗಳಿಗೆ ಹೇಳಿದ ನಟುವನ್ ಸ್ವಲ್ಪ ಕಾಲಾನಂತರ ನಾಗಪಟ್ಟಣವನ್ನು ಬಿಟ್ಟು ಮೈಸೂರಿಗೆ ಬಂದು ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ ಗೌರವಕ್ಕೆ ಪಾತ್ರರಾದರು. ಶ್ಯಾಮಾಶಾಸ್ತ್ರಿಗಳ ಹಿರಿಮೆಯನ್ನು ತಿಳಿದು ಮಹಾರಾಜರು ಶಾಸ್ತ್ರಿಗಳನ್ನು ಮೈಸೂರಿಗೆ ಆಹ್ವಾನಿಸಲು ನಟುವನ್‌ರನ್ನು ಕಳುಹಿಸಿದರು. ನಟುವನ್ ತಂಜಾವೂರಿಗೆ ಹೋಗಿ ಮಹಾರಾಜರ ಆಶಯವನ್ನು ಶಾಸ್ತ್ರಿಗಳಿಗೆ ತಿಳಿಸಿದರು. ಆದರೆ ಶಾಸ್ತ್ರಿಗಳು ಮಹಾರಾಜರ ಆಹ್ವಾನವನ್ನು ವಿನಯದಿಂದ ನಿರಾಕರಿಸಿದರು.

**ಅಪೂರ್ಣ**—ಅಸಂಪೂರ್ಣವಾದುದು. ಸಂಪೂರ್ಣ ಆರೋಹಣ ಅವರೋಹಣ ಗಳಿಲ್ಲದ ಔಡವ ಮತ್ತು ಷಾಡವರಾಗಗಳು ಅಪೂರ್ಣ ರಾಗಗಳು.

**ಅಪೂರ್ಣಲಕ್ಷಣ ರಾಗಮಾಲಿಕಾ**— ರಾಗಮಾಲಿಕೆಯ ಒಂದೆರಡು ಲಕ್ಷಣಗಳಿಲ್ಲದಿರುವ ರಾಗಮಾಲಿಕೆ ಸ್ವಾತಿತಿರುನಾಳ್ ಮಹಾರಾಜರ ' ಪನ್ನಗೇಂದ್ರ ಶಯನ ' ಎಂಬುದು ಒಂದು ಅಪೂರ್ಣ ರಾಗಮಾಲಿಕೆಯಾಗಿದೆ ಇದರಲ್ಲಿ ರಾಗ ಮುದ್ರೆಯಿಲ್ಲ. ' ನಿತ್ಯಕಲ್ಯಾಣಿ ' ಎಂಬ ರಾಗಮಾಲಿಕೆಯಲ್ಲಿ ರಾಗಮುದ್ರೆ, ಚಿಟ್ಟೆಸ್ವರ, ವಿಲೋಮ ಕ್ರಮ ಚಿಟ್ಟೆಸ್ವರ ಮುಂತಾದ ಲಕ್ಷಣಗಳೆಲ್ಲವೂ ಇರುವುದರಿಂದ ಅದು ಪೂರ್ಣಲಕ್ಷಣ ರಾಗಮಾಲಿಕೆಯಾಗಿದೆ.

**ಅಬ್ಜನಾಭ**—ಸ್ವಾತಿತಿರುನಾಳ್ ಮಹಾರಾಜರು ತಮ್ಮ ಕೃತಿಗಳಲ್ಲಿ ಬಳಸಿರುವ ಒಂದು ಪರ್ಯಾಯ ಮುದ್ರೆ.

**ಅಬ್ದುಲ್ ಕರೀಂಖಾನ್ ಖಾನ್‌ಸಾಹೇಬ್** (೧೮೭೨-೧೯೩೭)—ಖಾನ್‌ಸಾಹೇಬ್ ಅಬ್ದುಲ್ ಕರೀಮ್‌ಖಾನರು ದಿಲ್ಲಿಯ ಬಳಿ ಕಿರಾನಾದಲ್ಲಿ ಜನಿಸಿದರು. ಕಿರಾನಾದ ಖಾನ್‌ಸಾಹೇಬ್ ವಜದ್ ಅಲ್ಲಿಖಾನ್ ದೆಹಲಿ ಸುಲ್ತಾನ್ ಮಹಮದ್ ಷಾನ ಆಸ್ಥಾನದ ಪ್ರಖ್ಯಾತ ಸಂಗೀತಗಾರ. ಅವನ ಮೂವರು ಗಂಡು ಮಕ್ಕಳಲ್ಲಿ ಕಾಲೇಖಾನನ ಹಿರಿಯ ಪುತ್ರ ಅಬ್ದುಲ್‌ಕರೀಂ. ವಜದ್‌ಖಾನನ ತಮ್ಮನ ಮಗ ನನ್ನೇಖಾನ್ ಹೈದರಾಬಾದ್‌ನಿಂದ ನಿವೃತ್ತಿಹೊಂದಿ ಕಿರಾನಾಕ್ಕೆ ಬಂದನಂತರ ಬಾಲಕ ಅಬ್ದುಲ್‌ಕರೀಂ ಸಂಗೀತದ ಪ್ರಾರಂಭದ ಶಿಕ್ಷಣ ಆರಂಭವಾಯಿತು. ಎಂಟು ವರ್ಷದ ಬಾಲಕನಾಗಿದ್ದಾಗಲೇ ಪ್ರತಿ ಶುಕ್ರವಾರ ಕಿರಿಯರಿಗಾಗಿ ಜುಮ್ಮಾ ಕಚೇರಿಗಳಲ್ಲಿ ಪಾಲುಗೊಳ್ಳುತ್ತಿದ್ದ. ಒಂದು ಸಲ ಮಿರತ್‌ನಲ್ಲಿ ಹಿರಿಯರ ಸಭೆಯಲ್ಲಿ ಅಬ್ದುಲ್‌ಕರೀಂ ಮತ್ತು ಸಹೋದರ ಅಬ್ದುಲ್ ಲತೀಫ್ ಇಬ್ಬರೂ ಉತ್ತಮವಾಗಿ ಹಾಡಿ ವಿದ್ವಾಂಸರ ಮೆಚ್ಚಿಗೆ ಪಡೆದರು. ನಂತರ ಮೈಸೂರಿನ ಆಸ್ಥಾನ ವಿದ್ವಾಂಸರಾಗಿದ್ದ ಹೈದರ್‌ಭಕ್ಷ್‌ನ ಆಶಯದಂತೆ ಸುಮಾರು ೧೮೯೦ರಲ್ಲಿ ಮೈಸೂರಿಗೆ ಹೋಗಿನಿಂತರು ಆಗ ದಸರಾ ಸಂದರ್ಭದಲ್ಲಿ ಅಬ್ದುಲ್‌ಕರೀಂನ ಕಚೇರಿ ನಡೆಯಿತು. ಮಹಾರಾಜ ಚಾಮರಾಜ ಒಡೆಯರ ಸಮ್ಮುಖದಲ್ಲಿ ದರ್ಬಾರಿನಲ್ಲಿ ಹಾಡಿ ಸನ್ಮಾನಿತರಾಗಿ ಹಿಂತಿರುಗಿದರು. ಅನಂತರ ತಮ್ಮ ತಂದೆಯವರೊಡನೆ ಕಾಥೇವಾರ್, ಮಾಳ್ವಾ, ಭಾವನಗರ, ಜುನಾಗಡ್ ಮುಂತಾದ ಕಡೆ ಹಾಡಿ ಕೀರ್ತಿವಂತರಾಗಿ, ನಂತರ ಬರೋಡ ಮಹಾರಾಜರ ಮುಂದೆ ಹಾಡಿದರು. ಮತ್ತು ಸಹೋದರರಿಬ್ಬರೂ ಅಲ್ಲಿಯ ಆಸ್ಥಾನ ವಿದ್ವಾಂಸರಾದರು

ಕರೀಂಖಾನರಿಗೆ ಶ್ರೀಕೃಷ್ಣನಲ್ಲಿ ಅಪಾರವಾದ ಭಕ್ತಿಯಿತ್ತು. ಕೃಷ್ಣನನ್ನು ಸ್ತುತಿಸುವ ಅನೇಕ ಭಕ್ತಿ ಗೀತಗಳನ್ನೂ, ಭಜನೆಗಳನ್ನೂ ಹಾಡುತ್ತ ಮೈಮರೆಯುತ್ತಿದ್ದರು. ಹಿಂದೂ ಉತ್ಸವಗಳಲ್ಲಿ ಇವರ ಸಂಗೀತ ನಡೆಯಲು ಪ್ರಾರಂಭವಾಯಿತು. ಬರೋಡ ಸಂಸ್ಥಾನದಲ್ಲಿದ್ದಾಗ ಈ ಸಹೋದರರಿಬ್ಬರೂ ಕೀರ್ತಿ, ಸಂಪತ್ತು ಮತ್ತು ಎಲ್ಲರ ಪ್ರೀತಿ ಗೌರವವನ್ನು ಸಂಪಾದಿಸಿದರು. ನಂತರ ಅಲ್ಲಿಯ ಸನ್ನಿವೇಶದ ಬದಲಾವಣೆಯಿಂದ ಮುಂಬಯಿಗೆ ಬಂದು ಸ್ವಲ್ಪಕಾಲಾನಂತರ ಮಿರಜ್‌ಗೆ ಬಂದು ನಿಂತರು. ಶಿಷ್ಯೆಯಾಗಿದ್ದ ತಾರಾಬಾಯಿಯನ್ನು ವಿವಾಹವಾದರು. ಅಲ್ಲಿಂದ ಬೆಳಗಾಂ, ಪೂನಾ, ಸಾತಾರ್, ಕೊಲ್ಹಾಪುರ, ಹುಬ್ಬಳ್ಳಿ, ಬಿಜಾಪುರ, ಸೊಲ್ಹಾಪುರ ಮುಂತಾದ ಕಡೆ ಪ್ರವಾಸಮಾಡಿ ಪ್ರಖ್ಯಾತರಾದರು. ೧೯೦೨ರಲ್ಲಿ ಸುರೇಶ್‌ಬಾಬು ಮತ್ತು ೧೯೦೫ರಲ್ಲಿ ಹೀರಾಬಾಯಿ ಬಡೋದಕರ್ ಎಂಬ ಇಬ್ಬರು ಮಕ್ಕಳಿಗೆ ಅವರ ಪತ್ನಿ ತಾರಾ ಜನ್ಮವಿತ್ತರು. ಮುಂದೆ ಕಮಲಾಬಾಯಿ, ಪಾಪಾ, ಸರಸ್ವತಿರಾಣಿ ಇವರುಗಳು ಜನಿಸಿದರು. ಸರಸ್ವತಿರಾಣಿ ಮರಾಠಿ ಗೀತಗಳ ಮಧುರಗಾಯಕಿ. ಹೀಗಿದ್ದಾಗ ಖಾನರು ತಮ್ಮ ಶಾರೀರವನ್ನು ಕಳೆದುಕೊಂಡು ಹೀನಸ್ಥಿತಿಗೆ ಬಂದರು. ಕೊನೆಗೆ ಬಿಜಾಪುರದ

ಸಮೀಪದ ಗುಡ್ಡದ ಮೇಲಿರುವ ಒಬ್ಬ ಸಂತರ ಸಮಾಧಿಯ ಬಳಿಯಿರುವ ಗಿಡಮೂಲಿಕೆಯಿಂದ ಶ್ರದ್ಧೆಯಿಂದ ಮೊದಲಿನ ಶಾರೀರವನ್ನು ಪಡೆದುಕೊಂಡರು. ೧೯೧೦ರಲ್ಲಿ ಬೆಳಗಾಂನಲ್ಲಿ ಆರ್ಯ ಸಂಗೀತ ವಿದ್ಯಾಲಯವನ್ನು ಪ್ರಾರಂಭಿಸಿದರು. ಇದು ಗುರುಕುಲದ ಮಾದರಿಯಲ್ಲಿತ್ತು. ಕೆಲವು ವರ್ಷಗಳ ನಂತರ ಈ ಸಂಸ್ಥೆಯನ್ನು ಪುಣೆಗೆ ವರ್ಗಾಯಿಸಿದರು. ಇದು ಈಗಲೂ ಇದೆ. ನಂತರ ಅಮ್ಮಳೇರದಲ್ಲಿದ್ದಾಗ ಶಿರಡಿಯ ಸಾಯಿಬಾಬಾರವರ ದರ್ಶನ ಮಾಡಿ, ಹಾಡಿ ಅವರ ಆಶೀರ್ವಾದ ಪಡೆದರು. ಅಲ್ಲಿಂದ ಮುಂದೆ ನಾಗಪುರದಲ್ಲಿದ್ದು ೧೯೧೪ರಲ್ಲಿ ಪುಣೆಗೆ ಬಂದರು. ೧೯೧೮ರವರೆಗೆ ಯುದ್ಧನಿಧಿಗಾಗಿ ಹಣ ಸಂಗ್ರಹಿಸಲು ಸಂಚರಿಸಿ ಅನೇಕ ಕಚೇರಿಗಳಲ್ಲಿ ಹಾಡಿದರು. ೧೯೧೫ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಕರೆಯಂತೆ ದಸರಾ ಉತ್ಸವದಲ್ಲಿ ಬಂದು ಹಾಡಿ ಬಹುಮಾನಿತರಾದರು. ಹೀಗಿದ್ದಾಗ ಆರ್ಯ ಸಂಗೀತ ವಿದ್ಯಾಲಯವನ್ನು ನಡೆಸುವ ವಿಚಾರ, ವ್ಯವಹಾರದಲ್ಲಿ ಇವರ ಪತ್ನಿ ತಾರಾ ಒಂದಿಗೆ ಭಿನ್ನಾಭಿಪ್ರಾಯ ಬೆಳೆದು ಕೊನೆಯಲ್ಲಿ ತಾರಾ ಸಾಕಷ್ಟು ಹಣ ಸಂಗ್ರಹಿಸಿ ಒಂದು ದಿನ ಯಾರಿಗೂ ಹೇಳದೆ ಕಾಣೆಯಾದಳು. ಖಾನರು ಪುನಃ ಪ್ರವಾಸ ಕೈಕೊಂಡರು. ೧೯೧೯ರಲ್ಲಿ ವೀಣೆ ಶೇಷಣ್ಣನವರ ಅಧ್ಯಕ್ಷತೆಯಲ್ಲಿ ಮೈಸೂರಿನಲ್ಲಿ ಒಂದು ಸನ್ಮಾನ ಸಮಾರಂಭ ಏರ್ಪಟ್ಟು ಆವರಿಗೆ ಸಂಗೀತರತ್ನ ಎಂಬ ಬಿರುದನ್ನಿತ್ತು ಹಾರವನ್ನು ತೊಡಿಸಿ ಸನ್ಮಾನಿಸಲಾಯಿತು. ೧೯೨೩ರಲ್ಲಿ ಮದ್ರಾಸ್, ೧೯೨೪ರಲ್ಲಿ ಕಲ್ಕತ್ತಗಳ ಪ್ರವಾಸ ಮಾಡಿ ಖ್ಯಾತಿಗಳಿಸಿದರು. ೧೯೨೭ರಿಂದ ಮಿರಜ್‌ನಲ್ಲಿ ನೆಲೆಯಾಗಿ ನಿಂತರು. ೧೯೩೭ರ ವೇಳೆಗೆ ತ್ಯಾಗರಾಜರ ಕೆಲವು ಕೀರ್ತನೆಗಳನ್ನು ಹಾಡಲು ರೂಢಿಮಾಡಿಕೊಂಡರು. ಇವುಗಳಲ್ಲಿ ರಾಮ ನೀ ಸಮಾನಮೆವರು ಎಂಬುದು ಧ್ವನಿಮುದ್ರಿತವಾಗಿದೆ ೧೯೩೭ರಲ್ಲಿ ತಂಜಾವೂರಿನಿಂದ ಪಾಂಡಿಚೇರಿಗೆ ಬರುತ್ತಿದಾಗ ಅನಾರೋಗ್ಯ ಉಂಟಾಗಿ ದಾರಿಯಲ್ಲಿ ಸಿಂಗಪ್ಪೆರುಮಾಳ್ ಕೋಯಿಲ್ ಎಂಬ ಊರಿನಲ್ಲಿ ಕಾಲವಾದರು.

ಇವರ ಶಿಷ್ಯವರ್ಗದಲ್ಲಿ ಪ್ರಸಿದ್ಧಿ ಪಡೆದವರೆಂದರೆ ಸವಾಯಿ ಗಂಧರ್ವ, ಬಾಲಕೃಷ್ಣ ಬುವಾ, ಕಪಿಲೇಶ್ವರಿ, ಬೆಹರೆಬುವಾ, ತಾರಾಬಾಯಿ, ಬನ್ನೂಬಾಯಿ, ಶಂಕರರಾವ್ ಸರ್‌ನಾಯಕ್ ಮೊದಲಾದವರು. ಇವರ ಪುತ್ರಿ ಹೀರಾಬಾಯಿ ರಹೀದ್ ಖಾನರಿಂದ ಸಂಗೀತವನ್ನು ಕಲಿತರು.

ಅಬ್ದುಲ್ ಕರೀಂಖಾನರ ಹಾಡುಗಾರಿಕೆಯಲ್ಲಿ ಒಂದು ಕಿಡಿ ಇರುತ್ತಿತ್ತು. ಅವರ ತಾನಗಳೆಂದರೆ ಮಿಂಚಿನಂತೆ, ಗುಡುಗುಡುಗಿದಂತೆ, ಭಾವಪೂರ್ಣವಾದ ಗಾಯನ. ಪೂರಿಯಾ, ಬಾಗೇಶ್ರೀ, ಭೂಪ್, ಶುದ್ಧಕಲ್ಯಾಣ್, ಬಸಂತ್, ತೋಡಿ, ಜೀವನ್‌ಪುರಿ, ಜೋಗಿಯಾ, ಬಿಲಾವಲ್ ಮುಂತಾದ ರಾಗಗಳನ್ನು ಬಹಳ ಚೆನ್ನಾಗಿ ಹಾಡುತ್ತಿದ್ದರು. ಇಂದಿಗೂ ಪಿಯಾಬಿನನಾಹಿ, ಜಮುನಾ ಕೇ ತೀರ್ ಎಂಬ ಗೀತೆಗಳನ್ನು ಕೇಳಿದಾಗಲೆಲ್ಲಾ ಅವರ ದಿವ್ಯಗಾಯನವು ಸ್ಮರಣೆಗೆ ಬರುತ್ತದೆ.

**ಅಬ್ಧಿ**—ಇದು ೩೫ ಸುಳಾದಿ ಸಪ್ತತಾಳಗಳಲ್ಲಿ ಚತುರಶ್ರ ಜಾತಿ ಏಕತಾಳದ ಹೆಸರು. ಇದು ಸಂಖ್ಯೆ೪ನ್ನು ಸೂಚಿಸುತ್ತದೆ. ಇದರ ಒಂದಾವರ್ತಕ್ಕೆ ೪ ಅಕ್ಷರಕಾಲ

**ಅಬ್ರಹಾಂ ಪಂಡಿತರ್**—ಅಬ್ರಹಾಂ ಪಂಡಿತರು ತಮಿಳುನಾಡಿನ ಒಬ್ಬ ಪ್ರಸಿದ್ಧ ಸಂಗೀತ ವಿದ್ವಾಂಸರು. ಇವರು ಎರಡು ಸಂಪುಟಗಳಲ್ಲಿ 'ಕರುಣಾಮೃತ ಸಾಗರಂ' ಎಂಬ ಗ್ರಂಥವನ್ನು ರಚಿಸಿದರು ಇದೊಂದು ೧೫೦೦ ಪುಟಗಳಿಗೂ ಮೀರಿದ ಬೃಹದ್ಗ್ರಂಥ. ಪುರಾತನ ಸಂಗೀತದ ಬಗ್ಗೆ ಗಣಿಯಂತಿದೆ. ೨೦ನೆಯ ಶತಮಾನದಲ್ಲಿ ಸಂಗೀತ ಸಮ್ಮೇಳನವನ್ನು ಏರ್ಪಡಿಸಿದವರಲ್ಲಿ ಇವರೆ ಮೊದಲಿಗರು. ೧೯೧೨–೧೬ರಲ್ಲಿ ಸಮ್ಮೇಳನಗಳು ತಂಜಾವೂರಿನಲ್ಲಿ ನಡೆದುವು. ೧೯೧೬ರಲ್ಲಿ ಬರೋಡೆಯಲ್ಲಿ ನಡೆದ ಪ್ರಥಮ ಅಖಿಲ ಭಾರತೀಯ ಸಂಗೀತ ಸಮ್ಮೇಳನದಲ್ಲಿ ಭಾಗವಹಿಸಿದರು. ಬ್ರಿಟಿಷ್ ಸರ್ಕಾರವು ಇವರಿಗೆ ರಾವ್‌ಸಾಹೇಬ್ ಎಂಬ ಬಿರುದನ್ನಿತ್ತು ಗೌರವಿಸಿತು

**ಅಭಯಾಂಬಾ ನವಾವರಣ ಕೀರ್ತನೆಗಳು**—ಮುತ್ತುಸ್ವಾಮಿ ದೀಕ್ಷಿತರು ಕ್ಷೇತ್ರಾಟನೆ ಮಾಡುತ್ತಾ ತಮಿಳುನಾಡಿನ ಮಯೂರಂ ಎಂಬ ಸ್ಥಳಕ್ಕೆ ಹೋದರು. ಅಲ್ಲಿ ಪ್ರಾಚೀನ ಕಾಲದ ಒಂದು ಶಿವದೇವಾಲಯವಿದೆ. ಮಯೂರನಾಥಸ್ವಾಮಿ ಮತ್ತು ಅಭಯಾಂಬಾ ಅಲ್ಲಿನ ಸ್ವಾಮಿ ಮತ್ತು ದೇವಿ ದೀಕ್ಷಿತರು ಹಲವು ತಿಂಗಳು ಮಯೂರದಲ್ಲಿಯೇ ನಿಂತು ಶಿವ ಮತ್ತು ದೇವಿಯ ಮೇಲೆ ಅನೇಕ ಕೃತಿಗಳನ್ನು ರಚಿಸಿದರು. ಅವುಗಳಲ್ಲಿ ಅಭಯಾಂಬಾ ದೇವಿಯ ಕೃತಿಗಳು ವಿಸ್ತಾರವಾಗಿ ರಾಗದ ರೂಪುರೇಖೆಗಳನ್ನು ಮತ್ತು ತಂತ್ರ ಸೂತ್ರಗಳನ್ನು ನಿರೂಪಿಸುತ್ತವೆ. ಕುಂಡಲಿನಿ ಜಾಗೃತಗೊಳಿಸುವ ಕ್ರಮವು ಕೇದಾರರಾಗದ 'ಅಂಬಿಕಾಯಾ ಅಭಯಾಂಬಿಕಾಯ' ಎಂಬ ಕೃತಿಯಲ್ಲಿದೆ. ಈ ಕೃತಿಗಳು ವಿಭಕ್ತಿ ಕೃತಿಗಳು. ಅವು ಯಾವುವೆಂದರೆ,

೧. ಅಭಯಾಂಬಾ ಜಗದಂಬ—ಕಲ್ಯಾಣಿ

೨. ಆರ್ಯಾಮಭಯಾಮಾಂ—ಭೈರವಿ

೩. ಗಿರಿಜಯ ಅಜಯ—ಶಂಕರಾಭರಣ

೪. ಅಭಯಾಂಬಿಕಾಯೈ—ಯದುಕುಲ ಕಾಂಬೋಧಿ

೫. ಅಭಯಾಂಬಿಕಾಯ—ಕೇದಾರಗೌಳ

೬. ಅಂಬಿಕಾಯಾ ಅಭಯಾಂಬಿಕಾಯ—ಕೇದಾರ

೭ ಅಭಯಾಂಬಿಕಾಯಾಂ—ಶಹನ

೮. ದಾಕ್ಷಾಯಣಿ—ತೋಡಿ

೯. ಶ್ರೀ ಅಭಯಾಂಬಾ ನಿನ್ನು—ಶ್ರೀರಾಗ

**ಅಭಾವ**—ಭಾವವಿಲ್ಲದೆ ರಾಗವನ್ನು ಹಾಡಿದರೆ ಅದು ಅಭಾವ. ರಾಗದಲ್ಲಿ ಅಲ್ಪಪ್ರಯೋಗದ ಪುನರಾವರ್ತನೆ ಮಾಡಿದರೆ ಆ ರಾಗವು ತನ್ನ ಸತ್ವ ಮತ್ತು

ವೈಶಿಷ್ಟ್ಯಗಳನ್ನು ಕಳೆದುಕೊಂಡು ಅಭಾವ ಉಂಟಾಗುತ್ತದೆ. ಶ್ರೀರಾಗದಲ್ಲಿ ಪ ದ ನಿ ಪ ಮ—ಎಂಬ ಸ್ವರಗುಚ್ಛವನ್ನು . ಹೆಚ್ಚಾಗಿ ಬಳಸಿದರೆ ಅಭಾವ ಉಂಟಾಗುವುದು.

**ಅಭ್ಯಾಸಗಾನ**—ಸಂಗೀತವನ್ನು ಕಲಿಯುವಾಗ ಅಭ್ಯಸಿಸುವ ಸಂಗೀತ ಭಾಗ. ಶಾರೀರವನ್ನು ಪಳಗಿಸಲು ಅಥವಾ ವಾದ್ಯವನ್ನು ನುಡಿಸಲು ಕಲಿಯುವ ಗೀತಗಳು, ವರ್ಣಗಳು, ಅಭ್ಯಾಸದಿಂದ ಸ್ವರಜ್ಞಾನ ಮತ್ತು ತಾಳಜ್ಞಾನ ಉಂಟಾಗುತ್ತದೆ. ಸಭಾ ಸಂಗೀತವನ್ನು ಕಲಿಯುವ ಮೊದಲು ಪ್ರತಿಯೊಬ್ಬ ಸಂಗೀತಾಭ್ಯಾಸಿಯು ಅಭ್ಯಾಸ ಗಾನ ಭಾಗವನ್ನು ಕಲಿಯಲೇ ಬೇಕು. ಇದರಿಂದ ಮುಂದೆ ಸಂಗೀತ ಕಛೇರಿಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುತ್ತದೆ.

**ಅಭಿನಯಸಾರ ಸಂಪುಟಂ**—೧೯ನೇ ಶತಮಾನದಲ್ಲಿದ್ದ ನಾರಾಯಣ ಅಯ್ಯಂಗಾರ್ ಎಂಬುವರು ರಚಿಸಿದ ತಮಿಳು ಭಾಷೆಯಲ್ಲಿರುವ ನಾಟ್ಯಶಾಸ್ತ್ರ ಗ್ರಂಥ. ಇದನ್ನು ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯು ಪ್ರಕಟಿಸಿದೆ. ಈ ಗ್ರಂಥದಲ್ಲಿ ಆರು ವಿಭಾಗಗಳಿವೆ.

೧. **ವಿವೇಕ ಪ್ರಕಾಶ ಬೋಧಂ**—ಈ ಪ್ರಕರಣದಲ್ಲಿ ಗುರುಶಿಷ್ಯರಲ್ಲಿರ ಬೇಕಾದ ಗುಣಗಳು, ಅರ್ಹತೆ ಮತ್ತು ಬೋಧನಾಕ್ರಮ ಮುಂತಾದ ವಿಷಯಗಳ ವಿವೇಚನೆ ಇದೆ.

೨. **ನಾಯಿಕಾ ನಾಯಕ ಭಾವ ಲಕ್ಷಣಂ**—ವಿವಿಧ ರಸಗಳನ್ನು ಕುರಿತು ವಿವೇಚಿಸಲಾಗಿದೆ.

೩. **ರಸಪರಿಮಳಂ**—ವಿವಿಧ ರಸಗಳನ್ನು ಕುರಿತು ವಿವೇಚಿಸಲಾಗಿದೆ.

೪. **ಉಪಮಾನ ಚಿಂತಾಮಣಿ**

೫. **ಅಭಿನಯಾಮೃತಂ**—ಶಿರಸ್ಸು, ಹಸ್ತಗಳು ಮುಂತಾದ ಅಂಗಗಳ ಚಲನೆಗಳನ್ನು ಕುರಿತು ಹೇಳಿದೆ.

೬. **ಭಾವ ಪ್ರಕಾಶಂ** - ಭಾವಗಳನ್ನು ಪ್ರಕಟನ ಮಾಡುವ ವಿಚಾರವಿದೆ.

**ಅಭಿನಯ**—ಅಭಿನಯವು ನಾಟಕದಲ್ಲಿ ಮತ್ತು ನಾಟ್ಯದಲ್ಲಿ ಮುಖ್ಯವಾದುದು ರಸಭಾವಗಳು ಜೀವವಾದರೆ ಅಭಿನಯವು ದೇಹ. ಅಭಿನಯವೆಂದರೆ ಏನೆಂಬುದನ್ನು ಭರತನು ವಿಸ್ತಾರವಾಗಿ ವ್ಯಾಖ್ಯಾನ ಮಾಡಿದ್ದಾನೆ. 'ನೀ' ಧಾತುವಿಗೆ ಮುಂದೆ ತೆಗೆದುಕೊಂಡು ಹೋಗುವುದು ಎಂಬ ಅರ್ಥ ಬರುತ್ತದೆ. 'ಅಭಿ' ಎಂದರೆ ಕಡೆಗೆ ಅಥವಾ ದಿಕ್ಕಿನಲ್ಲಿ ಎಂದರ್ಥ. ರಂಗಭೂಮಿಯಿಂದ ಪ್ರೇಕ್ಷಕರ ಕಡೆಗೆ ಎಂದರೆ ರಸಾನುಭವವನ್ನು ತೆಗೆದುಕೊಂಡು ಹೋಗುವ ಸಾಧನವೇ ಅಭಿನಯ. ನಾಟ್ಯ ಶಾಸ್ತ್ರದಂತೆ ಅಭಿನಯವು ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕ ಎಂಬ ನಾಲ್ಕು ವಿಧವಾಗಿರುತ್ತದೆ. ಇದಲ್ಲದೆ ಸಾಮಾನ್ಯಾಭಿನಯ ಮತ್ತು ಚಿತ್ರಾಭಿನಯ ಎಂಬ ಎರಡು ವಿಧಗಳನ್ನು ಹೇಳಿದ್ದಾನೆ. ಅಭಿನಯವು ಯಾಂತ್ರಿಕ

ವಾಗಿರಬಾರದು. ಅದು ಜೀವನದ ಕನ್ನಡಿಯಂತೆ ಇರಬೇಕೆಂದೂ ತನ್ನ ಸೂಚನೆಗಳನ್ನೂ, ಬದುಕಿನ ಅನುಭವಗಳನ್ನೂ ಸಮನ್ವಯಗೊಳಿಸಿಕೊಂಡರೆ ಆಗ ಅಭಿನಯ ಚೆನ್ನಾಗಿರುತ್ತದೆ ಎಂದೂ ಭರತನು ಹೇಳಿದ್ದಾನೆ.

**ಅಭಿನವ ಜಯದೇವ**—ಪದಗಳಿಗೆ ಪ್ರಸಿದ್ಧನಾಗಿರುವ ಕ್ಷೇತ್ರಜ್ಞನನ್ನು ಈ ರೀತಿ ಹೇಳುವುದು ರೂಢಿಯಲ್ಲಿದೆ.

**ಅಭಿನವ ಭಾರತೀ**—ಅಭಿನವ ಗುಪ್ತ ವಿರಚಿತವಾದ ಭರತಮುನಿಯ ನಾಟ್ಯ ಶಾಸ್ತ್ರ ಗ್ರಂಥದ ಅದ್ಭುತ ವ್ಯಾಖ್ಯಾನ ಗ್ರಂಥ. ಪ್ರಾಚೀನ ಸಂಗೀತಕ್ಕೆ ಈತನ ಉಲ್ಲೇಖನಗಳು ಪ್ರಮಾಣವಾಗಿವೆ ಇದರಲ್ಲಿ ವಿಷಯ ಸಂಗ್ರಹವು ಮುಖ್ಯ ಆಧಾರ ವಾಗಿದೆ.

**ಅಭಿನವ ಭೋಜ**—ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ತಮಿಳುನಾಡಿನ ಉಡೈಯಾರ ಪಾಳ್ಯದ ಯುವರಂಗ ಭೂಪತಿಗೆ (೧೯ ನೇ ಶ.) ಇದ್ದ ಬಿರುದು. ಇವರಿಬ್ಬರೂ ಕಲಾಪೋಷಕರೂ, ಸಾಹಿತಿಗಳೂ ಆಗಿದ್ದರು.

**ಅಭಿನಯ ದರ್ಪಣ**—ನಂದಿಕೇಶ್ವರ ಅಥವಾ ನಂದಿನ್ ಎಂಬುವನು ರಚಿಸಿರುವ ಪ್ರಸಿದ್ಧ ಸಂಸ್ಕೃತ ಗ್ರಂಥ. ಈ ಗ್ರಂಥವು ಭರತಾರ್ಣವವೆಂಬ ದೊಡ್ಡ ಗ್ರಂಥದ ಸಂಗ್ರಹ ಸ್ವರೂಪವೆಂದು ಹೇಳಲಾಗಿದೆ. ಇದು ಸುಮಾರು ೩ನೆಯ ಶತಮಾನಕ್ಕೂ ಹಿಂದಿನ ಪುರಾತನ ಗ್ರಂಥ. ಈ ಗ್ರಂಥದಲ್ಲಿ ಸಭಾ, ರಂಗ ಮಂಟಪ, ನಾಟ್ಯ, ನೃತ್ಯ ಮೊದಲಾದ ಪಾರಿಭಾಷಿಕ ಶಬ್ದಗಳಿಗೆ ಸಂಕ್ಷೇಪವಾಗಿ ಅರ್ಥವನ್ನು ವಿವರಿಸಲಾಗಿದೆ. ಹಾಗೆಯೇ ಅಂಗೋಪಾಂಗ ಭೇದಗಳು, ಅವುಗಳ ಸ್ವರೂಪ ವಿನಿಯೋಗಗಳು, ಸಂಯುತ, ಅಸಂಯುತ ಹಸ್ತಗಳು, ನವಗ್ರಹ ಹಸ್ತಗಳು, ಬಂಧು ಹಸ್ತಗಳು, ದಶಾವತಾರ ಹಸ್ತಗಳು ಮುಂತಾದುವುಗಳ ವಿವರಣೆಯಿದೆ.

**ಅಭಿನಯಗಾನ**—ಅಭಿನಯದೊಡನೆ ಹಾಡುವುದು.

**ಅಭಿನಯಹಸ್ತ**—ಅಭಿನಯ ಮಾಡುವಾಗ ಬಳಸುವ ಹಸ್ತಮುದ್ರೆಗಳು.

**ಅಭಿನವಗುಪ್ತ**—ಸಂಸ್ಕೃತ ಸಾಹಿತ್ಯದಲ್ಲಿ ಇವನಿಗೆ ಆಚಾರ್ಯ ಅಭಿನವ ಗುಪ್ತನೆಂದು ಹೆಸರಿದೆ. ಇವನು ಕಾಶ್ಮೀರದ ಶೈವಸಂಪ್ರದಾಯದ ಬ್ರಾಹ್ಮಣ. ವರಾಹ ಗುಪ್ತನ ಮಗನಾದ ನೃಸಿಂಹಗುಪ್ತನ ಮಗ ಉತ್ಪಲರಾಜ, ಭಟ್ಟೇಂದುರಾಜ, ಲಕ್ಷ್ಮಣಗುಪ್ತ ಮತ್ತು ಭಟ್ಟತಾತ ಇವನ ಗುರುಗಳು. ಕ್ಷೇಮೇಂದ್ರನು ಇವನ ಶಿಷ್ಯ. ಇವನನ್ನು ಆಚಾರ್ಯಪಾದ ; ಆಚಾರ್ಯಾಭಿನವಗುಪ್ತಪಾದ ; ಎಂದು ಗೌರವ ದಿಂದ ಕರೆಯುತ್ತಿದ್ದರು. ನಾರದನು ತನ್ನ ಸಂಗೀತಮಕರಂದವೆಂಬ ಗ್ರಂಥದಲ್ಲಿ ಇವನನ್ನು ಮಹಾಮಹೇಶ್ವರಾಚಾರ್ಯನೆಂದು ಕರೆದಿದ್ದಾನೆ. ಅಭಿನವಗುಪ್ತನು ಭರತ ಮುನಿಯ ನಾಟ್ಯಶಾಸ್ತ್ರಕ್ಕೆ ಅದ್ವಿತೀಯವಾದ ವ್ಯಾಖ್ಯಾನವನ್ನು ಬರೆದಿದ್ದಾನೆ. ಮತ್ತೊಬ್ಬ ವ್ಯಾಖ್ಯಾನಕಾರ ಕೀರ್ತಿಧರನನ್ನು ಉಲ್ಲೇಖಿಸಿದ್ದಾನೆ. ಅಭಿನವ ಭಾರತೀಯವೆಂಬ ಉದ್ಗ್ರಂಥವನ್ನು ಬರೆದು ಇತರರಿಗೆ ಆಚಾರ್ಯ ಸ್ಥಾನದಲ್ಲಿದ್ದಾನೆ.

ಬೃಹತ್ ಪ್ರತ್ಯಭಿಜ್ಞಾವಿಮರ್ಶಿನೀ ಎಂಬ ಈತನ ಗ್ರಂಥದಲ್ಲಿ ಇವನ ವಂಶಾವಳಿಯು ಗೊತ್ತಾಗುತ್ತದೆ. ಇವನ ಕಾಲ ಕ್ರಿ.ಶ ೧೦೧೩.

**ಅಭಿನವ ಭಟ್ಟಾಚಾರ್ಯ** – ಕಲ್ಲಿನಾಥ, ಕುಂಭಕರ್ಣ, ರಾಮಾಮಾತ್ಯ ಮುಂತಾದ ಹಿಂದಿನ ಲಕ್ಷಣಕಾರರ ಒಂದು ಬಿರುದು.

**ಅಭಿನವ ಭರತಸಾರಸಂಗ್ರಹ**—೧೭ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರದ ಸಾಮಂತನಾಗಿದ್ದ ಮುಮ್ಮಡಿ ಚಿಕ್ಕಭೂಪಾಲನೆಂಬುವನು ಬರೆದ ನಾಟ್ಯಶಾಸ್ತ್ರ ಗ್ರಂಥ. ಇದು ಸಂಸ್ಕೃತ ಗ್ರಂಥ. ಕನ್ನಡಲಿಪಿಯಲ್ಲಿದೆ. ಮುಮ್ಮಡಿ ಎಂಬುದು ಒಂದು ಊರು. ಈ ಗ್ರಂಥದಲ್ಲಿ ವಿದ್ಯಾರಣ್ಯರ ಸಂಗೀತಸಾರವೆಂಬ ಗ್ರಂಥದಿಂದ ಕೆಲವು ಭಾಗಗಳನ್ನು ಕೊಟ್ಟಿದೆ ವಾದ್ಯ ಮತ್ತು ಗೀತದ ವಿಚಾರವಾಗಿ ಎರಡು ಅಧ್ಯಾಯಗಳಿವೆ. ವಾದ್ಯ ಅಧ್ಯಾಯದಲ್ಲಿ ಹಿಂದಿನ ನಾಲ್ಕು ಬಗೆಯ ವರ್ಗೀಕರಣವನ್ನು ಬಿಟ್ಟು ಐದು ಬಗೆಯ ವರ್ಗೀಕರಣ ಮಾಡಿದ್ದಾನೆ. ಅವನದ್ಧ ಎನ್ನುವ ಬದಲು ಚರ್ಮಬದ್ಧವೆಂದೂ, ಮಾನವಕಂಠವು ಒಂದು ವಾದ್ಯವೆಂದೂ ಹೇಳಿದ್ದಾನೆ. ಗೀತಾಧ್ಯಾಯದಲ್ಲಿ ನಾದೋತ್ಪತ್ತಿಯು ವಿವರವಿದೆ.

**ಅಭಿನವರಾಗಮಂಜರಿ**—ಪಂಡಿತ್ ವಿಷ್ಣುನಾರಾಯಣ ಭಾತ್ಖಂಡೆಯವರು ವಿಷ್ಣುಶರ್ಮ ಎಂಬ ಹೆಸರಿನಲ್ಲಿ ಬರೆದಿರುವ ಸಂಸ್ಕೃತ ಭಾಷೆಯಲ್ಲಿರುವ ಸಂಗೀತಶಾಸ್ತ್ರ ಗ್ರಂಥ.

**ಅಭಿನವತಾಳಮಂಜರಿ** ಅಪ್ಪಾತುಳಸಿ ಎಂಬುವರು ಬರೆದಿರುವ ಒಂದು ತಾಳಶಾಸ್ತ್ರ ಗ್ರಂಥ.

**ಅಭಿನಯಾದಿವಿಚಾರ**—ತಂಜಾವೂರಿನಲ್ಲಿನ ಸರಸ್ವತೀ ಮಹಲ್ ಪುಸ್ತಕ ಭಂಡಾರದಲ್ಲಿರುವ ಒಂದು ನಾಟ್ಯಶಾಸ್ತ್ರ ಗ್ರಂಥ.

**ಅಭಿನಯಲಕ್ಷಣ**—ಮೇಲ್ಕೋಂಡ ಭಂಡಾರದಲ್ಲಿರುವ ಒಂದು ನಾಟ್ಯಶಾಸ್ತ್ರ ಗ್ರಂಥ. ಇದನ್ನು ಶೃಂಗಾರ ಶೇಖರ ಎಂಬುವನು ರಚಿಸಿದ್ದಾನೆ.

**ಅಭಿನಯಾಂಕುರಂ**—ಗೋಪಿನಾಥ್ ಮತ್ತು ನಾಗಭೂಷಣ ಎಂಬುವರಿಂದ ರಚಿತವಾದ ಕಥಕಳಿ ನೃತ್ಯದ ಗ್ರಂಥ.

**ಅಭಿರುದ್ಗತ**—ಇದು ಷಡ್ಜಗ್ರಾಮದ ಒಂದು ಮೂರ್ಛನೆ. ಕರ್ಣಾಟಕ ಸಂಗೀತ ಪದ್ಧತಿಯ ೮ನೆಯ ಮೇಳಕರ್ತ ತೋಡಿರಾಗವನ್ನು ಹೋಲುತ್ತದೆ.

**ಅಭಿಲಾಷಿತಾರ್ಥಚಿಂತಾಮಣಿ**—ಈ ಗ್ರಂಥಕ್ಕೆ ರಾಜಮಾನಸೋಲ್ಲಾಸ ಎಂಬ ಹೆಸರಿದೆ. ಇದನ್ನು ಕಲ್ಯಾಣಿಯ ಪಶ್ಚಿಮ ಚಾಳುಕ್ಯ ವಂಶದ ದೊರೆ ೩ನೆಯ ಸೋಮೇಶ್ವರನು (೧೧೨೭–೧೧೩೮) ರಚಿಸಿದನು. ಇದು ವಿಶ್ವಕೋಶದಂತಿರುವ ಗ್ರಂಥ. ಇದರ ವಿನೋದ ವಿಂಶತಿಯ ಮೂರು ಅಧ್ಯಾಯಗಳಲ್ಲಿ (೧೬, ೧೭, ೧೮) ಸಂಗೀತದ ವಿವರಣೆಯಿದೆ. ೧೬ನೆಯ ಅಧ್ಯಾಯದಲ್ಲಿ ಗಾಯಕನ ಲಕ್ಷಣ, ಮತ್ತು ಗುಣದೋಷಗಳನ್ನು ಕೊಟ್ಟಿದ್ದಾನೆ. ಇದನ್ನು 'ಸಂಗೀತ ರತ್ನಾಕರ'ವೆಂಬ

ಗ್ರಂಥದಲ್ಲಿ ಅನುಸರಿಸಲಾಗಿದೆ. ಪ್ರಾದೇಶಿಕರಾಗಗಳು ಮತ್ತು ಅವುಗಳ ಲಕ್ಷಣಗಳನ್ನು ಹೇಳಿದೆ. ಮಲ್ಲಾರೀ, ಸೌವಿರೀ, ಭೈರವಿ, ಬಂಗಾಳರಾಗ, ಸೌರಾಷ್ಟ್ರೀ, ಕಾಂಬೋಜಿ, ಪುನ್ನಾಟಕ, ನಾಗಧ್ವನಿ, ಗುರ್ಜರಿ, ಕೌಶಿಕೀ, ಶುದ್ಧವರಾಟೀ, ಶುದ್ಧನಾಟಿ, ಮೇಘರಾಗ, ಆಹೀರೀ, ಛಾಯಾನಾಟಿ, ತೋಡಿ, ವೇಳಾವಳೀ, ಛಾಯಾ ವೇಳಾವಳೀ, ಚುಂಘೀ, ರಕ್ತಹಂಸ, ಖಂಭಾರೀ, ಕಾಮೋದಾ, ಕಾಮೋದ ಸಿಂಹಳೀ, ದೇಶಾಂಕ, ಧನಾಶ್ರೀ, ಸೈಂಧವಿ, ಡೋಂಬಕೃತಿ, ರಾಮಕೃತಿ ಮತ್ತು ತುಂಡಕೃತಿ ರಾಗಗಳನ್ನು ಕೊಡಲಾಗಿದೆ. ಆಂಧ್ರಾಳೀರಾಗವು ಆಂಧ್ರದೇಶದರಾಗ. ಸೋಮರಾಗವೆಂಬ ರಾಗವನ್ನು ತಾನು ರೂಪಿಸಿದ್ದೆಂದು ಹೇಳಿದ್ದಾನೆ ಸ್ವರಮೇಳ ಕಲಾನಿಧಿಯ ರಾಮಾಮಾತ್ಯನು ಈ ರಾಗವು ಒಳ್ಳೆಯ ರಾಗವಲ್ಲವೆಂದು ಟೀಕಿಸಿದ್ದಾನೆ. ವಾದ್ಯಗಳನ್ನು ನಾಲ್ಕು ಬಗೆಗಳಾಗಿ ವರ್ಗೀಕರಿಸಲಾಗಿದೆ. ರಚನೆ ಮತ್ತು ತಂತಿಗಳ ಸಂಖ್ಯೆಯ ವ್ಯತ್ಯಾಸಕ್ಕೆ ಅನುಗುಣವಾಗಿ ಅನೇಕ ಬಗೆಯ ವೀಣೆಗಳನ್ನು ಹೆಸರಿಸಿದೆ. ಪಟಹ, ಹುಡುಕ್ಕ, ಡಕ್ಕ, ಕರಡ, ಮರ್ದಲ, ತ್ರಿವಳಿ, ಡಮರು, ರುಜಾ, ಕಾಹುಡಾ, ಸೇಲುಕಾ, ಸಾಣಕೀ, ಘಟ, ಡಕ್ಕುಲಿ, ದುಂದುಭಿ, ಭೇರಿ, ತಾಳ, ಕಾಂಸ್ಯತಾಳ, ಘಂಟಾ, ಜಯಘಂಟಾ ಎಂಬ ವಾದ್ಯಗಳನ್ನು ಹೆಸರಿಸಿದ್ದಾನೆ

**ಅಭಿಸಾರಿಕಾ**—ನಾರದನ 'ಸಂಗೀತ ಮಕರಂದ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಅಭಿಸಾರಿಕೆ**—ನಾಟ್ಯದ ಲಾಕ್ಷಣಿಕರ ಮತದಂತೆ ನಾಯಕಿಯರ ಮೂಲ ಭೇದಗಳು ಎಂಟು ವಿಧ. ಅಭಿಸಾರಿಕೆಯು ಎಂಟನೆಯ ವಿಧ. ಉದ್ದೇಶವಿಲ್ಲದೆ ಶೃಂಗಾರ ಸಾಧನಾದಿಗಳಿಂದ ಅಲಂಕರಿಸಿಕೊಂಡು, ಯೌವನಾದಿಗಳಿಂದ ಉಂಟಾಗುವ ಚೇಷ್ಟೆಯಲ್ಲಿ ಸಂತೋಷ ಪಡುತ್ತಾ ಅವಕಾಶವಿದ್ದಲ್ಲಿ ಸುಳ್ಳಿನ ಕಂತೆಯನ್ನೇ ಹರಡಿ ತನ್ನ ಘನತೆಯನ್ನು ತೋರಿಸಿಕೊಳ್ಳುವ ಸ್ವಭಾವದವಳು. ಭರತಮುನಿಯು ಹೇಳಿರುವಂತೆ ಸಮಯೋಚಿತ ವೇಷ ಭೂಷಣ ವಾಕ್ಚತುರತೆಯಿಂದ ನಾಯಕನಲ್ಲಿ ಕಪಟವಾಚರಿಸುವವಳು.

**ಅಭಿಮಾನಿನಿ**—ಈ ರಾಗವು ೫ನೆಯ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಅಭಿನಂದ**—ಎರಡು ಲಘು, ಎರಡು ದ್ರುತ ಮತ್ತು ಒಂದು ಗುರುವಿರುವ ಐದು ಮಾತ್ರಾಕಾಲವುಳ್ಳ ಒಂದು ತಾಳವಿಶೇಷ.

**ಅಭಿನಂದನ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ಬಗೆಯ ತಾಳ. ಇದರ ಅಂಗಗಳು ಎರಡು ಲಘು, ಎರಡು ದ್ರುತ ಮತ್ತು ಒಂದು ಗುರು. ಒಂದಾವರ್ತಕ್ಕೆ ೨೦ ಅಕ್ಷರಕಾಲ.

**ಅಭೀರ**—ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಹೇಳಿರುವ ಒಂದು ರಾಗ.

**ಅಭಂಗ್ನ** – ಭರತನಾಟ್ಯದಲ್ಲಿ ಇದು ಒಂದು ಕ್ರಿಯೆ. ಸ್ವಲ್ಪ ಬಗ್ಗಿರುವ ಎದೆ, ಉನ್ನತವಾದ ಬೆನ್ನು ಇದ್ದು ಅಂಸವು ಶಿಥಿಲತ್ವದಲ್ಲಿರುವುದು. ಸಂಭ್ರಮ, ವಿಷಾದ, ಮೂರ್ಛೆ, ಉನ್ಮಾದ ಮೊದಲಾದುವನ್ನು ಸೂಚಿಸಲು ಉಪಯೋಗಿಸುವ ಕ್ರಿಯೆ.

**ಅಭೋಗಚರಣ** — ವಾಗ್ಗೇಯಕಾರನ ಮುದ್ರೆ ಅಥವಾ ಅಂಕಿತವಿರುವ ಕೃತಿಯ ಕೊನೆಯ ಚರಣ. ಕೃತಿಯಲ್ಲಿ ಹಲವು ಚರಣಗಳಿದ್ದರೆ ಅಭೋಗ ಚರಣದ ವಿಚಾರವುಂಟಾಗುತ್ತದೆ ಒಂದೇ ಚರಣವಿದ್ದರೆ ಅದೇ ಮುದ್ರಾ ಚರಣವಾಗುತ್ತದೆ. ಅಭೋಗ ಚರಣದಲ್ಲಿ ಎರಡು ವಿಧಗಳುಂಟು.

(೧) ವಾಗ್ಗೇಯಕಾರನ ಮುದ್ರೆ ಇರುವ ಚರಣ

(೨) ಮುದ್ರೆಯು ಚರಣದಲ್ಲಿಲ್ಲದೆ ಪಲ್ಲವಿ ಅಥವಾ ಅನುಪಲ್ಲವಿಯಲ್ಲಿರುವುದು.

**ಅಭೋಗಿ** –ಇದು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯ ರಾಗ. ಇದೊಂದು ಉಪಾಂಗರಾಗ. ಆಭೋಗಿ ಎಂದು ಕರೆಯುವುದುಂಟು.

ಆ : ಸ ರಿ ಗ ಮ ದ ಸ

ಅ : ಸ ದ ಮ ಗ ರಿ ಸ

ಆರೋಹಣ ಅವರೋಹಣಗಳಲ್ಲಿ ಪಂಚಮನಿಷಾದಗಳಿಲ್ಲ. ಆದ್ದರಿಂದ ಔಡವ-ಔಡವ ಭೇದ, ಮಧ್ಯಮ, ಋಷಭ ಮತ್ತು ದೈವತಗಳು ಜೀವಸ್ವರಗಳು, ನ್ಯಾಸ ಮತ್ತು ಛಾಯಾಸ್ವರಗಳು. ಪಂಚಮಹೀನತ್ವದಿಂದ ಭಕ್ತಿಭಾವರಸಪುಷ್ಟಿಯಾಗುತ್ತದೆ. ಸಾರ್ವಕಾಲಿಕರಾಗ. ರಾಗವಿಸ್ತರಣೆ ಮಾಡುವಾಗ ಶ್ರೀರಂಜಿನಿ ರಾಗಕ್ಕೆ ಜಾರದಂತೆ ಗಮನವಿಟ್ಟು ಹಾಡಬೇಕು ಭಕ್ತಿರಸ ಪ್ರಧಾನವಾದ ರಾಗ ತ್ಯಾಗರಾಜರ 'ಮನಸು ನಿಲ್ಪ ಶಕ್ತಿಲೇಕಪೋತೇ' ಮತ್ತು 'ನನ್ನುಬ್ರೋವ ನೀಕಿಂತ ತಾಮಸಮಾ' ಎಂಬ ಕೃತಿಗಳೂ, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ 'ಮನಸಾವೃದ್ಧ ಗರ್ವಮೇಟಿಕೇ' ಎಂಬ ಕೃತಿಯೂ, ಗೋಪಾಲಕೃಷ್ಣ ಭಾರತಿಯ 'ಸಭಾಪತಿಕ್ಕು ವೇರುದೈವಂ' ಎಂಬ ಕೃತಿಯು ಈ ರಾಗದಲ್ಲಿರುವ ಪ್ರಸಿದ್ಧ ಕೃತಿಗಳು.

**ಅಭಂಗ**—(೧) ಒಂದು ಲಘು ಮತ್ತು ಪ್ಲುತವಿರುವ ನಾಲ್ಕು ಮಾತ್ರಾ ಕಾಲದ ಒಂದು ತಾಳವಿಶೇಷ.

(೨) ಮಧ್ಯಯುಗದಲ್ಲಿ ಮಹಾರಾಷ್ಟ್ರದ ಭಕ್ತಶ್ರೇಷ್ಠರು ತಮ್ಮ ಕಾವ್ಯ ಮತ್ತು ಸಂಗೀತ ರಚನೆಯಲ್ಲಿ ಬಳಸಿರುವ ಛಂದಸ್ಸು. ಇದನ್ನು ಮೊದಲು ಚಕ್ರಧರನೆಂಬುವನು ರೂಢಿಗೆ ತಂದನು. ನಂತರ ಮಹಾನುಭವ ಪಂಥದವರಿಂದ ಬೆಳೆಸಲ್ಪಟ್ಟು, ಮುಂದೆ ಸಂತಜ್ಞಾನೇಶ್ವರ (೧೨೭೫–೧೨೯೬) ಮುಂತಾದ ಭಕ್ತಶ್ರೇಷ್ಠರಿಂದ ಬಲಗೊಂಡಿತು. ನಂತರ ಸಂತ ತುಕಾರಾಮನ (೧೬೦೮–೧೬೫೦) ಕೈಯಲ್ಲಿ ಉನ್ನತಾವಸ್ಥೆಯನ್ನು

ಪಡೆಯಿತು. ತುಕಾರಾಮನ ಅಭಂಗಗಳು ಬಹು ಪ್ರಸಿದ್ಧವಾಗಿವೆ. ತಂಜಾವೂರಿನ ಮರಾಠಾ ದೊರೆಗಳ ಕಾಲದಲ್ಲಿ ಇವು ಬಹಳ ಜನಪ್ರಿಯವಾಗಿದ್ದುವು.

ಅಭಂಗಕ್ಕೆ ಮೂಲ ಓವೀ ಎಂಬ ಬಂಧ ಇದ್ದಿತೆಂದು ಹೇಳುತ್ತಾರೆ. ಪ್ರತಿಯೊಂದರಲ್ಲಿ ನಾಲ್ಕು ಚರಣಗಳಿದ್ದು ನಾಲ್ಕನೆಯ ಚರಣವು ಪದಭಾಗವಾಗಿರುತ್ತದೆ. ಜ್ಞಾನದೇವನ ಅಭಂಗಮಾಲೆಯೆಂಬ ಒಂದು ಕೃತಿಯಲ್ಲಿ ಒಂದು ಕನ್ನಡ ಅಭಂಗವಿದೆ. ನಾಮದೇವನ ಅಭಂಗದಲ್ಲಿ ನುಡಿಯ ಮೊದಲನೆಯ ಚರಣದಲ್ಲಿ ೧೨ ಅಕ್ಷರಗಳೂ, ಎರಡನೆಯದರಲ್ಲಿ ೧೦ ಅಕ್ಷರಗಳೂ ಇವೆ. ಮೊದಲ ಚರಣದ ಅಂತ್ಯಾಕ್ಷರವು ಎರಡನೆಯ ಚರಣದ ೬ನೆಯ ಅಕ್ಷರವಾಗಿರುತ್ತದೆ. ಕೀರ್ತನೆಗಳಂತೆಯೇ ಅಭಂಗಗಳಲ್ಲಿ ಪಲ್ಲವಿ ಮತ್ತು ಚರಣಗಳಿವೆ. ಅಭಂಗಗಳು ಭಕ್ತಿಗೀತೆಗಳು. ದಕ್ಷಿಣ ಭಾರತದಲ್ಲಿ ಹರಿಕಥೆ, ಭಜನೆಗಳು ಮತ್ತು ಸಂಗೀತ ಕಚೇರಿಗಳಲ್ಲಿ ಅಭಂಗಗಳನ್ನು ಕೇಳಬಹುದು.

**ಅಭಂಗಿ**—ಭರತನಾಟ್ಯದ ನಾಲ್ಕು ಬಗೆಯ ಭಾವಭಂಗಿಮೆಗಳಲ್ಲಿ ಒಂದು ವಿಧ. ಸಮದಿಂದ ಭಾಗಿಸಲ್ಪಟ್ಟ ಭಂಗಿಮ ನಿಲುವಿನಲ್ಲಿ ತುಂಡಾದಂಥ ಭಂಗಿಮ. ನೇರವಾದ ರೇಖೆಯು ಬಗ್ಗಿ, ಇಬ್ಭಾಗವನ್ನು ಸೂಚಿಸುತ್ತದೆ.

**ಅಭ್ಯುಚ್ಛಯ**—ಒಂದು ವಿಧವಾದ ಆರೋಹಿ ಅಲಂಕಾರ. ಇದರಲ್ಲಿ ಪ್ರತಿ ಎರಡನೆಯ ಸ್ವರವನ್ನು ಬಿಡಲಾಗುವುದು. ಸ ಗ ಪ ನಿ ಎಂಬಂತೆ.

**ಅಮರಾವಳಿ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ಸ̇

ಅ : ಸ̇ ನಿ ದ ಪ ಮ ಗ ರಿ ಸ

**ಅಮರಸಿಂಧು**—ತಾಳ್ಳಪಾಕಂ ವಾಗ್ಗೇಯಕಾರರ ಕೃತಿಗಳಲ್ಲಿ ಬಳಸಿರುವ ಒಂದು ರಾಗ.

**ಅಮರಸಿಂಹ ಮಹಾರಾಜ** (೧೭೮೮–೧೭೯೮)—ಇವನು ತಂಜಾವೂರಿನ ದೊರೆ. ಸಂಗೀತ ಕಲೆಯ ಪೋಷಕನಾಗಿದ್ದನು. ಇವನ ಆಸ್ಥಾನದಲ್ಲಿ ಆ ಕಾಲದ ಅನೇಕ ಸಂಗೀತ ವಿದ್ವಾಂಸರು ಮತ್ತು ವಾಗ್ಗೇಯಕಾರರಿದ್ದರು.

**ಅಮೀರ್ ಕಲ್ಯಾಣಿ**—ಹಮೀರ್ ಕಲ್ಯಾಣಿ ರಾಗ

**ಅಮೀರ್ ಖುಸ್ರು**—ಅಮೀರ್ ಖುಸ್ರು ದೆಹಲಿಯ ಸುಲ್ತಾನನಾಗಿದ್ದ ಅಲ್ಲಾ ಉದ್ದೀನ್ ಖಿಲ್ಜಿಯ (೧೨೯೬-೧೩೧೬) ಆಸ್ಥಾನದಲ್ಲಿದ್ದ ಪರ್ಷಿಯನ್ ಕವಿ ಮತ್ತು ಸಂಗೀತ ವಿದ್ವಾಂಸ. ಭಾರತೀಯ ರಾಗಗಳು ಮತ್ತು ಪರ್ಷಿಯನ್ ಪದ್ಧತಿಯ ಹಾಡುಗಳ ಸಮ್ಮಿಳನದಿಂದ ಹಲವು ಮಿಶ್ರರಾಗಗಳನ್ನು ಸೃಷ್ಟಿಸಿದನು. ಸರ್‌ಪರ್ದ್, ಸಜಗಿರಿ, ಝಿಲಾಪ್ ಎಂಬ ರಾಗಗಳನ್ನು ಸೃಷ್ಟಿಸಿದನೆಂದು ನಂಬಿಕೆ ಇದೆ. ಕವಾಲಿ ಶೈಲಿಯ ಹಾಡುಗಾರಿಕೆಯನ್ನು ಸೃಷ್ಟಿಸಿದನು. ದಕ್ಷಿಣ ಭಾರತದ ಸುಪ್ರಸಿದ್ಧ

ಸಂಗೀತ ವಿದ್ವಾಂಸನಾಗಿದ್ದ ಗೋಪಾಲ ನಾಯಕನಿಗೂ, ಖುಸ್ರುವಿಗೂ ಸಂಗೀತ ಸ್ಪರ್ಧೆ ನಡೆಯಿತೆಂದು ನಂಬಿಕೆಯಿದೆ.

**ಅಮೀರ್ ಖಾನ್**—ಅಮೀರ್ ಖಾನರು ಭಾರತದ ಒಬ್ಬ ಮೇರುಕಲ್ಪ ಗಾಯಕರಾಗಿದ್ದು ಸುಮಾರು ಮೂವತ್ತು ವರ್ಷಗಳಿಂದ ಹಿಂದೂಸ್ಥಾನಿ ಸಂಗೀತ ಕ್ಷೇತ್ರದ ತಾರೆಯಾಗಿದ್ದರು. ಉಸ್ತಾದರು ೧೯೧೨ರಲ್ಲಿ ಇಂದೂರಿನಲ್ಲಿ ಜನಿಸಿದರು. ಅವರ ಪೂರ್ವಿಕರು ಚಂಗೇಖಾನ್, ಘಸೀಟೇಖಾನ್ ಮುಂತಾದ ಅನೇಕರು ಮೊಗಲ್ ಚಕ್ರವರ್ತಿಗಳ ಆಸ್ಥಾನದ ಸಂಗೀತ ವಿದ್ವಾಂಸರಾಗಿದ್ದರು. ವಂಶಪಾರಂಪರ್ಯವಾಗಿ ಬಂದ ಸಂಗೀತಕ್ಕೆ ಮೊಗಲರ ನಂತರ ಈ ವಂಶದವರು ಪೋಷಣೆ ಇಲ್ಲದೆ ದೂರವಾದರು. ಅಮೀರ್ ಖಾನರ ತಂದೆ ಉಸ್ತಾದ್ ಶಮ್‌ಷೇರ್ ಖಾನರು ಪ್ರಸಿದ್ಧರಾದ ಸಾರಂಗಿ ವಾದಕರೂ, ಗಾಯಕರೂ ಆಗಿದ್ದರು. ತಂದೆಯವರಲ್ಲಿ ೧೧ನೆಯ ವರ್ಷದಲ್ಲಿ ಅಮೀರ್‌ಖಾನರಿಗೆ ಸಂಗೀತಾಭ್ಯಾಸವು ಆರಂಭವಾಯಿತು. ನಂತರ ೧೫ವರ್ಷಗಳ ನಿರಂತರ ಸಾಧನೆಯ ಮರವಾಗಿ ಖ್ಯಾಲ್ ಗಾಯನದಲ್ಲಿ ಅಪಾರ ಪ್ರೌಢಿಮೆಯನ್ನು ಪಡೆದರು. ಅಮೀರ್ ಖಾನರ ಹಾಡುಗಾರಿಕೆಯು ಅಪೂರ್ವವಾದುದು. ಕೇಳುವವರಲ್ಲಿ ನಾದ ತನ್ಮಯತೆ ಉಂಟಾಗಿ ದಿವ್ಯಾನುಭವವಾಗುತ್ತಿತ್ತು. ನೆಮ್ಮದಿಯ ಹಾಡುಗಾರಿಕೆ ಬಯಸುವವರಿಗೆ ಖಾನರ ಗಾಯನವು ಒಂದು ಅಪೂರ್ವ ಔತಣ. ಅಬ್ಬರವಿಲ್ಲದ, ಪಾಂಡಿತ್ಯ ಪ್ರದರ್ಶನದ ಆತುರವಿಲ್ಲದ, ಗಾಯನ ಶೈಲಿ ಅವರದು. ರಾಗದ ಚಿತ್ರವಿನ್ಯಾಸವನ್ನು ಸ್ಪಷ್ಟವಾಗಿ, ಸಂಪನ್ನವಾಗಿ ರೂಪಿಸುವುದರಲ್ಲಿ ಅದ್ವಿತೀಯರಾಗಿದ್ದರು. ಬೈಜೂಬಾವರಾ ಇತ್ಯಾದಿ ಕೆಲವು ಚಿತ್ರಗಳಿಗೆ ಹಿನ್ನೆಲೆ ಗಾಯನವನ್ನು ಒದಗಿಸಿದ್ದರು. ಇವರಿಗೆ ೧೯೬೭ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯೂ, ೧೯೭೧ರಲ್ಲಿ ಪದ್ಮಭೂಷಣ ಪ್ರಶಸ್ತಿಯೂ ದೊರೆತಿದ್ದುವು. ಫೆಬ್ರವರಿ ೧೩ನೇ ದಿನಾಂಕ ೧೯೭೪ರಲ್ಲಿ ಇವರು ಕಲ್ಕತ್ತದಲ್ಲಿ ಕಾರಿನ ಅಪಘಾತಕ್ಕೀಡಾದರು ಇವರ ಶಿಷ್ಯರಲ್ಲಿ ಪ್ರಸಿದ್ಧರು ದೆಹಲಿಯ ಅಮರ್‌ನಾಥ್.

**ಅಮ್ರುತ**—ಕಮಾನನ್ನು ಬಳಸಿ ನುಡಿಸಬಹುದಾದ ಒಂದು ಜಾನಪದ ತಂತೀವಾದ್ಯ.

**ಅಮ್ರುತಲಹರಿ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ಗ ರಿ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಅಮ್ರುತಧನ್ಯಾಸಿ**—ಈ ರಾಗವು ೮ನೆಯ ಮೇಳಕರ್ತ ಒಂದು ಜನ್ಯರಾಗ·

ಆ: ಸ ರಿ ಗ ಮ ಪ ನಿ ಸ̇

ಅ: ಸ̇ ನಿ ಪ ಮ ಗ ರಿ ಸ

**ಅಮೃತಪಂಚಮ**—ಈ ರಾಗವು ೪೮ನೆಯ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ಸ ರಿ ಸ

**ಅಮೃತವರ್ಷಿಣಿ**—ಇದೇ ಹೆಸರಿನ ಎರಡು ರಾಗಗಳಿವೆ.

(೧) ಇದು ೬೬ನೆಯ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ಪ ಮ ಗ ಸ

ಇದೊಂದು ಉಪಾಂಗರಾಗ. ಸಾರ್ವಕಾಲಿಕರಾಗ. ಮುತ್ತುಸ್ವಾಮಿ ದೀಕ್ಷಿತರು ರಚಿಸಿರುವ 'ಆನಂದಾಮೃತ ಕರ್ಷಿಣಿ' ಎಂಬ ಪ್ರಸಿದ್ಧ ಕೃತಿಯು ಈ ರಾಗದಲ್ಲಿದೆ. ತಿರುನೆಲ್ವೇಲಿ ಜಿಲ್ಲೆಯ ಸಮೀಪದಲ್ಲಿರುವ ಎಟ್ಟೆಯಾಪುರಕ್ಕೆ ದೀಕ್ಷಿತರು ಒಂದು ಸಲ ಹೋಗುತ್ತಿದ್ದಾಗ ಈ ಕೃತಿಯನ್ನು ಹಾಡಿದಾಗ ಮಳೆ ಬಂದಿತು.

(೨) ಇದು ೩೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ಸ

ಅ: ಸ ನಿ ಪ ದ ಮ ಗ ರಿ ಸ

**ಅಮೃತ ವಸಂತ**—ಈ ರಾಗವು ೫೭ನೆಯ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ

ಅ: ಸ ನಿ ದ ಮ ಗ ಸ

**ಅಮೃತ ತರಂಗಿಣಿ**—ಈ ರಾಗವು ೧೯ನೆಯ ಮೇಳಕರ್ತ ಝುಂಕಾರ ಧ್ವನಿಯ ಒಂದು ಜನ್ಯರಾಗ. ಇದು ಅಮೃತ ರಂಜಿನಿ ರಾಗವನ್ನು ಹೋಲುತ್ತದೆ.

(೧) ಆ: ಸ ರಿ ಗ ಮ ದ ನಿ ಸ

ಅ: ಸ ದ ನಿ ದ ಪ ಮ ಗ ರಿ ಸ

(೨) ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಅಮೃತವಾಹಿನಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಮ ಗ ರಿ ಸ

ಇದೊಂದು ಷಾಡವರಾಗ. ಮಧ್ಯಮ ಮತ್ತು ನಿಷಾದಗಳು ಜೀವಸ್ವರಗಳು ಮತ್ತು ಪರಸ್ಪರ ವಾದಿ ಸಂವಾದಿ ಸ್ವರಗಳು. ಸರ್ವಕಾಲೀನರಾಗ. ತ್ಯಾಗರಾಜರ ಶ್ರೀರಾಮಪಾದಮಾ ಎಂಬ ಕೃತಿಯು ಈ ರಾಗದ ಪ್ರಸಿದ್ಧಕೃತಿ.

**ಅಮೃತ ರಂಜಿನಿ**—ಈ ರಾಗವು ೧೯ನೆಯ ಮೇಳಕರ್ತ ಝಂಕಾರ ಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ದ ನಿ ದ ಪ ಮ ಗ ರಿ ಸ

**ಅಮೃತ ಲಹರಿ**—ಈ ರಾಗವು ೨೯ನೆಯ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ರಿ ಪ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಅಮೃತರಕ್ಷಣಿ**—ಈ ರಾಗವು ೩೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ಸ

ಅ: ಸ ನಿ ಪ ದ ಮ ಗ ರಿ ಸ

**ಅಮೃತಲಿಂಗಪಿಳ್ಳೈ**—ತ್ಯಾಗರಾಜರ ಒಬ್ಬ ಶಿಷ್ಯರು.

**ಅಮೃತಸ್ವರೂಪಿಣಿ**-ಈ ರಾಗವು ೭೨ನೆಯ ಮೇಳಕರ್ತ ರಸಿಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಅಮುಕ್ತ**—ಸುಷಿರವಾದ್ಯದ ರಂಧ್ರವನ್ನು ಬೆರಳಿನಿಂದ ಪೂರ್ತಿ ಮುಚ್ಚಿದ್ದರೆ ಅದು ಅಮುಕ್ತವೆನಿಸುತ್ತದೆ.

**ಅಯಂಗರ್ ಕೋವಿಲ್**—ತಮಿಳುನಾಡಿನ ಮಧುರೆಯ ಸಮೀಪದಲ್ಲಿರುವ ಪ್ರಸಿದ್ಧ ವೈಷ್ಣವ ದೇವಾಲಯ. ಇಲ್ಲಿ ಸುಂದರವಾದ ಸಂಗೀತ ಶಿಲಾಸ್ತಂಭವಿದೆ.

**ಅಯಂಗರ್ ಕುರವಂಜಿ**—ಅಯಂಗರ್ ಕೋವಿಲ್‌ನ ಸುಂದರರಾಜ ಪೆರುಮಾಳ್ ದೇವರನ್ನು ಕುರಿತು ತಮಿಳಿನ ಪ್ರಸಿದ್ಧಕವಿ ಮತ್ತು ವಾಗ್ಗೇಯಕಾರರಾಗಿದ್ದ ಕವಿಕುಂಜರ ಭಾರತಿಯು (೧೮೧೦-೧೮೯೬) ರಚಿಸಿರುವ ಕುರವಂಜಿ ಶೈಲಿಯ ನಾಟಕ.

**ಅಯಂಗಿಯ ಚೊಕ್ಕನಾಥರ್**—ತಮಿಳುನಾಡಿನ ತಿರುನೆಲ್ವೇಲಿಯಲ್ಲಿದ್ದ ವಾಗ್ಗೇಯಕಾರ. ತಮಿಳು ಪದಗಳನ್ನು ರಚಿಸಿದ್ದಾನೆ.

**ಅಯ್ಯರ್ ಸಿ ಎಸ್**—Grammar of South Indian Music ಮತ್ತು Art and Technique of Violin Play ಎಂಬ ಗ್ರಂಥಗಳ ಲೇಖಕರು. ಕರ್ಣಾಟಕ ಸಂಗೀತದ ಶ್ರುತಿ ಬಗ್ಗೆ ಬಹುವಾಗಿ ಸಂಶೋಧನೆ ಮಾಡಿ ಲೇಖನಗಳನ್ನು ಪ್ರಕಟಿಸಿದ್ದಾರೆ.

**ಅಯ್ಯಾಭಾಗವತರ್**—ತ್ಯಾಗರಾಜರ ಒಬ್ಬ ಮುಖ್ಯ ಶಿಷ್ಯರು. ಪಲ್ಲವಿ ಹಾಡುವುದರಲ್ಲಿ ಅದ್ವಿತೀಯ ವಿದ್ವಾಂಸರಾಗಿದ್ದರು. ಪಿಟೀಲು ಮತ್ತು ವೀಣೆಯ ವಿದ್ವಾಂಸರಾಗಿದ್ದರು.

**ಅಯ್ಯರ್‌ವಾಳ್**—ತಮಿಳುನಾಡಿನಲ್ಲಿ ತ್ಯಾಗರಾಜರನ್ನು ಅಯ್ಯರ್‌ವಾಳ್ ಎಂದು ಕರೆಯುತ್ತಾರೆ. ಅಯ್ಯರ್‌ವಾಳ್ ಕೃತಿ ಎಂದರೆ ತ್ಯಾಗರಾಜರ ಕೃತಿ.

**ಅಯ್ಯಾಸಾಮಿ** —ಮುತ್ತುಸ್ವಾಮಿ ದೀಕ್ಷಿತರ ಶಿಷ್ಯರು. ತಾನವರ್ಣಗಳು ಮತ್ತು ಪವಗಳನ್ನು ರಚಿಸಿರುವ ವಾಗ್ಗೇಯಕಾರರು.

**ಅಯ್ಯಾವಾಳ್ (೧೮ನೇ ಶ.)**—ಶ್ರೀಧರವೆಂಕಟೇಶ್ವರ ದೀಕ್ಷಿತರು ತಮಿಳು ನಾಡಿನ ತಿರುವಿಶೈನಲ್ಲೂರು ಅಥವಾ ತಿರುವೈಯಲೂರಿನವರು. ಜನರು ಇವರನ್ನು ಅಯ್ಯಾವಾಳ್ ಎಂದು ಸಂಬೋಧಿಸುತ್ತಿದ್ದರು. ಇವರು ಸದಾಶಿವ ಬ್ರಹ್ಮೇಂದ್ರ ಮತ್ತು ಬೋಧೇಂದ್ರ ಸದ್ಗುರು ಸ್ವಾಮಿಯ ಸಮಕಾಲೀನರು. ಇವರು ಹಲವು ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾಗಿರುವರು. ಆಖ್ಯಾಷಷ್ಠಿ, ಸಾಹೇಂದ್ರವಿಲಾಸ ಕಾವ್ಯ, ಶಿವಭಕ್ತಿ ಕಲ್ಪಲತಿಕಾ, ಆರ್ಥಿಹರಸ್ತೋತ್ರ, ಜಂಬುನಾಥಾಷ್ಟಕ, ಗಂಗಾಶತಕ ಇವು ಅವರ ಕೃತಿಗಳು. ಇವರು ಶ್ರೇಷ್ಠ ದೈವಭಕ್ತರಾಗಿದ್ದರು. ಹಲವು ಭಕ್ತಿ ಗೀತಗಳನ್ನು ರಚಿಸಿದರು. ನಾಮ ಸಂಕೀರ್ತನ ಮತ್ತು ಭಜನ ಪದ್ಧತಿಯನ್ನು ಜನಪ್ರಿಯವನ್ನಾಗಿಸಿ ಅವುಗಳಿಗೆ ನವಚೈತನ್ಯ ನೀಡಿದರು ಭಕ್ತೇ ಶ್ರೀಧರವೆಂಕಟ ಗುರುವರ್ಯ ಎಂಬ ಕೇದಾರಗೌಳರಾಗ ಆದಿತಾಳದ ಕೃತಿಯು ಇವರ ಸ್ತುತಿರೂಪವಾದ ಕೃತಿ. ಪ್ರತಿವರ್ಷವೂ ತಿರುವಿಶೈನಲ್ಲೂರಿನಲ್ಲಿ ಇವರ ಸ್ಮರಣ ಮತ್ತು ಗೌರವಾರ್ಥವಾಗಿ ಉತ್ಸವಗಳು ನಡೆಯುತ್ತವೆ. ಇವುಗಳಲ್ಲಿ ಸಾವಿರಾರು ಜನರು ಭಾಗವಹಿಸುತ್ತಾರೆ. ಉತ್ಸವದ ೧೦ ದಿನಗಳಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರ ಕಚೇರಿಗಳಾಗುತ್ತವೆ. ಇವರ ಜೀವಿತ ಕಾಲವಲ್ಲಿ ಕಾರ್ತಿಕಮಾಸದ (ನವೆಂಬರ್) ಅಮಾವಾಸ್ಯೆಯ ದಿನ ಒಂದು ಪವಾಡವು ನಡೆಯಿತೆಂದು ಹೇಳುತ್ತಾರೆ. ಅಂದು ಅವರ ತಂದೆಯ ಪುಣ್ಯತಿಥಿ. ಅದಕ್ಕಾಗಿ ಸಿದ್ಧತೆಗಳಾಗುತ್ತಿದ್ದುವು ಹಸಿವಿನಿಂದ ಕಂಗಾಲಾಗಿದ್ದ ಒಬ್ಬ ಚಂಡಾಲನು ಬಂದು ಊಟ ಬೇಡಿದ. ದೀಕ್ಷಿತರು ಸ್ವಲ್ಪವೂ ಹಿಂದು ಮುಂದು ನೋಡದೆ ಅವನಿಗೆ ಊಟ ಹಾಕುವಂತೆ ತಮ್ಮ ಪತ್ನಿಗೆ ಹೇಳಿದರು: ಅವನಿಗೆ ಊಟವಾಯಿತು. ಇದರಿಂದ ಆ ಊರಿನ ವೈದಿಕ ಬ್ರಾಹ್ಮಣರಿಗೆ ಕೋಪ ಬಂದಿತು. ಅವರು ದೀಕ್ಷಿತರಿಗೆ ಬಹಿಷ್ಕಾರ ಹಾಕುವುದಾಗಿ ಹೆದರಿಸಿದರು. ಶ್ರಾದ್ಧಮಾಡಕೂಡದೆಂದು ಹೇಳಿದರು. ದೀಕ್ಷಿತರು ಗಂಗಾಸ್ನಾನ ಮಾಡುವುದೊಂದೇ ದಾರಿಯೆಂದು ಕೆಲವರು ಹೇಳಿದರು. ತಾವು ಮಾಡಿದ ಕೆಲಸವು ಧಾರ್ಮಿಕವಾದುದೆಂದು ದೀಕ್ಷಿತರಿಗೆ ದೃಢ ವಿಶ್ವಾಸವಿತ್ತು. ಮರುಮಾತಾಡದೆ ತಮ್ಮ ಮನೆಯ ಹಿತ್ತಲಿನ ಬಾವಿಯ ಮುಂದೆ ಕುಳಿತು ಗಂಗಾಷ್ಟಕವನ್ನು ಹಾಡಿದರು. ಕೂಡಲೇ ಆ ಬಾವಿಯ ನೀರು ಉಕ್ಕಿ ಹರಿದು, ಅವರ ಮನೆ ಮತ್ತು ಆ ಊರಿನ ಬೀದಿಗಳಲ್ಲಿ ತುಂಬಿ ಹರಿಯಿತು. ಅವರ ಪತ್ನಿಯು

ಶ್ರಾದ್ಧಕ್ಕೆ ಹೊಸಸಿದ್ಧತೆ ಮಾಡಿದರು. ದೈವಲೀಲೆಯೋ ಎಂಬಂತೆ ಇಬ್ಬರು ಬ್ರಾಹ್ಮಣರು ಅವರ ಮನೆಗೆ ಬಂದರು. ದೀಕ್ಷಿತರು ಶ್ರಾದ್ಧ ನಡೆಸಿದರು ಭೋಜನಾನಂತರ ಅವರಿಬ್ಬರು ಮನೆಯ ಜಗಲಿಯಲ್ಲಿ ಕುಳಿತು ತಾಂಬೂಲ ದಕ್ಷಿಣೆಯನ್ನು ಸ್ವೀಕರಿಸಿದರು. ಕೆಲಸದ ನಿಮಿತ್ತ ಒಳಕ್ಕೆ ಹೋಗಿದ್ದ ದೀಕ್ಷಿತರು ಹೊರಗೆ ಬಂದು ನೋಡಿದಾಗ ಆ ಬ್ರಾಹ್ಮಣರು ಅದೃಶ್ಯರಾಗಿದ್ದರು. ಈ ಪವಾಡವನ್ನು ನೋಡಿದ ಆ ಊರಿನ ಜನರು ದೀಕ್ಷಿತರ ಹಿರಿಮೆಯನ್ನು ತಿಳಿದರು. ಎಲ್ಲರೂ ಬಂದು ಅವರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ತಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಈ ಪವಾಡವು ನಡೆದ ದಿನ ಪ್ರತಿವರ್ಷವೂ ಅಲ್ಲಿ ಉತ್ಸವವನ್ನು ಭಕ್ತಿಯಿಂದ ಮಾಡುತ್ತಾ ಬಂದಿದ್ದಾರೆ. ಸಾವಿರಾರು ಜನರು ಆ ದಿನ ಇವರ ಮನೆಯ ಆ ಪವಿತ್ರ ಬಾವಿಯಲ್ಲಿ ಸ್ನಾನ ಮಾಡುತ್ತಾರೆ.

**ಅರಛಾಪು**—ಮೃದಂಗದ ಬಲದ ಮೇಲೆ ಕೊಡುವ ಛಾಪು

**ಅರಝಂಪ**—ಅರ್ಧಝಂಪೆತಾಳ ಇದರಕಾಲ ಗಣನೆಯು ೧, ೨, ೧, ೨, ೩, ಅಂದರೆ ತಕ ತಕಿಟ. ಇದರ ಹೆಸರು ಖಂಡಛಾಪುತಾಳ. ಇದರ ಒಂದಾವರ್ತಕ್ಕೆ ೫ ಅಕ್ಷರಕಾಲ.

**ಅರಾಗ**—ಪಾಲೈಯಾಳ್‌ನಿಂದ ಉಂಟಾದ ಒಂದು ಪುರಾತನರಾಗ.

**ಅರಬಟ್ಟೆನಾವಲರ್**—ಬರತಶಾಸ್ತಿರಂ ಎಂಬ ಸಂಗೀತ ಮತ್ತು ನಾಟ್ಯಶಾಸ್ತ್ರ ಗ್ರಂಥವನ್ನು ರಚಿಸಿರುವ ತಮಿಳುನಾಡಿನ ವಿದ್ವಾಂಸ.

**ಅರಾಳ**—ಇದು ಭರತನಾಟ್ಯದ ಒಂದು ಬಗೆಯ ಹಸ್ತಮುದ್ರೆ. ತರ್ಜನಿಯನ್ನು ಧನುರಾಕಾರವಾಗಿ ಬಗ್ಗಿಸಿ, ಅಂಗುಷ್ಠವನ್ನು ಕುಂಚಿತವಾಗಿ ಹಿಡಿದು ಉಳಿದ ಬೆರಳುಗಳನ್ನು ನೇರವಾಗಿ ಮೇಲಕ್ಕೆ ಚಾಚಿರುವಂತಹ ಹಸ್ತ. ತರ್ಜನಿ ಮತ್ತು ಹೆಬ್ಬೆರಳು ಒಂದರೊಡನೊಂದು ಸೇರಿಸಬಾರದು. ಮೇಲೆ ಚಾಚಲ್ಪಟ್ಟ ಮಿಕ್ಕ ಬೆರಳುಗಳು ಸ್ವಲ್ಪ ಹಿಂದಕ್ಕೆ ಬಗ್ಗಿರುವಂತೆ ತೋರುತ್ತಿರಬೇಕು ಧೈರ್ಯ, ಸ್ಥೈರ್ಯ, ಗರ್ವ, ಉತ್ಸಾಹ, ಕ್ಷೋಭೆ, ದಿವ್ಯವಸ್ತು, ಗಾಂಭೀರ್ಯ, ಆಸೆ, ಹಿತವಾದ ಭಾವಗಳು, ವಿವರಣೆ, ಸ್ತ್ರೀಯರು ಜಡೆಹಾಕಿಕೊಳ್ಳುವುದು, ಬಿಚ್ಚುವುದು ಮೊದಲಾದುವನ್ನು ಸೂಚಿಸುತ್ತದೆ

**ಅರಾಳಕಟಕಾಮುಖ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಭೇದ· ಅಂಗೈಗಳು ಹೊರಮುಖವಾಗಿರುವ ಎರಡು ಅಲಪಲ್ಲವ ಹಸ್ತಗಳನ್ನು ಪದ್ಮಕೋಶಹಸ್ತಗಳನ್ನಾಗಿ ಬದಲಾಯಿಸಿ ನಂತರ ಒಂದು ಹಸ್ತವನ್ನು ಅರಾಳವಾಗಿಯೂ ಮತ್ತೊಂದನ್ನು ಕಟಕಾಮುಖವಾಗಿಯೂ ಹಿಡಿದಾಗ ಅದು ಅರಾಳಕಟಕಾಮುಖ ಹಸ್ತವಾಗುತ್ತದೆ.

**ಅರಿಯಕುಡಿ ರಾಮಾನುಜ ಅಯ್ಯಂಗಾರ್** (೧೮೯೦–೧೯೬೭)—ಅರಿಯಕುಡಿ ರಾಮಾನುಜ ಅಯ್ಯಂಗಾರ್ಯರ ಹೆಸರನ್ನು ಇಂದಿನ ಸಂಗೀತ ಪ್ರಪಂಚ

ದಲ್ಲಿ ಕೇಳದವರಿಲ್ಲ. ಇವರು ೫೦ ವರ್ಷಗಳಿಗೂ ಮೀರಿದ ಕಾಲ ಅಖಂಡವಾದ ಸೇವೆ ಸಲ್ಲಿಸಿ ಕರ್ಣಾಟಕ ಸಂಗೀತದ ಸೊಬಗನ್ನೂ, ವೈಖರಿಯನ್ನೂ ಮತ್ತು ಮಹತ್ವವನ್ನೂ ಪ್ರದರ್ಶಿಸಿದರು. ಇವರು ತಮಿಳುನಾಡಿನ ರಾಮನಾಥಪುರಂ ಜಿಲ್ಲೆಯ ಕಾರೈಕ್ಕುಡಿಗೆ ಸಮೀಪವಲ್ಲಿರುವ ಅರಿಯಕುಡಿ ಎಂಬ ಅಗ್ರಹಾರದಲ್ಲಿ ೧೯-೫-೮೯೦ರಲ್ಲಿ ಜನಿಸಿದರು. ಇವರ ತಂದೆ ವೇದಾಧ್ಯಯನ ಸಂಪನ್ನರೂ, ಜ್ಯೋತಿಷಿಯೂ ಆಗಿದ್ದ ತಿರುವೆಂಕಟಾಚಾರ್ಯರು. ಅಯ್ಯಂಗಾರ್ಯರನ್ನು ಅವರ ದೊಡ್ಡಪ್ಪ ಕುಪ್ಪುಸ್ವಾಮಿ ಅಯ್ಯಂಗಾರ್ಯರು ದತ್ತು ತೆಗೆದುಕೊಂಡಿದ್ದರು.

ಪುದುಕೋಟೆ ಮಲಯಪ್ಪ ಅಯ್ಯರ್ ಎಂಬುವರಲ್ಲಿ ಪ್ರಾರಂಭದ ಸಂಗೀತ ಶಿಕ್ಷಣವನ್ನು ಪಡೆದು ತರುವಾಯ ಪ್ರಸಿದ್ಧ ಪಲ್ಲವಿ ವಿದ್ವಾಂಸರಾಗಿದ್ದ ನಾಮಕ್ಕಲ್ ನರಸಿಂಹ ಅಯ್ಯಂಗಾರ್ಯರಲ್ಲಿ ಶಿಕ್ಷಣ ಪಡೆದರು. ನಂತರ ತ್ಯಾಗರಾಜರ ಪ್ರಶಿಷ್ಯ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ ಶಿಷ್ಯರೂ, ಖ್ಯಾತ ಗಾಯಕರೂ, ವಾಗ್ಗೇಯಕಾರರೂ ಆಗಿದ್ದ ಪೂಚ್ಚಿ ಅಯ್ಯಂಗಾರ್ಯರಲ್ಲಿ (ರಾಮನಾಡ್ ಶ್ರೀನಿವಾಸ ಅಯ್ಯಂಗಾರ್) ಸುಮಾರು ೧೨ ವರ್ಷಗಳ ಕಾಲ ಶಿಕ್ಷಣ ಪಡೆದರು. ತಮ್ಮ ೨೦ನೆಯ ವಯಸ್ಸಿನಲ್ಲಿ ಒಂದು ಮದುವೆ ಮನೆ ಕಚೇರಿಯಲ್ಲಿ ಅಲ್ಲಿ ನೆರೆದಿದ್ದ ಪ್ರಖ್ಯಾತ ವಿದ್ವಾಂಸರು ಮತ್ತು ಗುರುವಿನ ಸಮ್ಮುಖದಲ್ಲಿ ಹಾಡಿ ಎಲ್ಲರ ಮೆಚ್ಚುಗೆ ಪಡೆದು, ಅಂದಿನಿಂದ ಸ್ವತಂತ್ರವಾಗಿ ಕಚೇರಿಗಳಲ್ಲಿ ಹಾಡಲು ತೊಡಗಿ ಅತ್ಯಂತ ಖ್ಯಾತರಾದರು.

ಅರಿಯಕುಡಿಯವರ ಕಚೇರಿಗಳು ಪಂಡಿತ ಮತ್ತು ಪಾಮರ ರಂಜಕವಾಗಿರುತ್ತಿದ್ದುವು. ಸಂಪ್ರದಾಯದ ಚೌಕಟ್ಟಿನಲ್ಲಿ ಸ್ವತಂತ್ರಿಸಿ ರಾಗದ ಮತ್ತು ಸ್ವರದ ಹಲವು ಮುಖಗಳನ್ನು ಹೊರಗೆಡಹುವ ಕಲೆ ಇವರಿಗೆ ಅಧೀನವಾಗಿತ್ತು. ಇವರ ರೀತಿ ಮಧ್ಯಮಾರ್ಗ ಅಥವಾ ಸುವರ್ಣಮಾರ್ಗ. ಯಾವ ಭಾಗವನ್ನೇ ಆಗಲಿ ವಿಪರೀತವಾಗಿ ಹಾಡುತ್ತಿರಲಿಲ್ಲ. ಎಲ್ಲವನ್ನೂ ಹಿತ ಮತ್ತು ಮಿತವಾಗಿ ಗಮಕಯುಕ್ತವಾಗಿ, ಪಾಂಡಿತ್ಯಪೂರ್ಣವಾಗಿ, ಅಚ್ಚುಕಟ್ಟಾಗಿ ಹಾಡುತ್ತಿದ್ದರು. ಸಾಧಾರಣವಾಗಿ ಯಾವ ರಾಗದ ವರ್ಣದಿಂದ ಕಚೇರಿಯನ್ನು ಆರಂಭಿಸುತ್ತಿದ್ದರೋ ಆ ರಾಗದಲ್ಲೇ ಪಲ್ಲವಿಯನ್ನು ಹಾಡುತ್ತಿದ್ದರು. ಮಧ್ಯಮಕಾಲದ ಕೃತಿಗಳು, ಶುದ್ಧಮಧ್ಯಮ ರಾಗಗಳು, ಪ್ರತಿಮಧ್ಯಮ ರಾಗಗಳು, ವಿಳಂಬ ಕಾಲದ ಕೃತಿಗಳು ಎಲ್ಲವನ್ನೂ ಸಮಯೋಚಿತವಾಗಿ ಹಾಡುತ್ತಿದ್ದರು. ತಾರಸ್ಥಾಯಿ ಪಂಚಮದಲ್ಲಿ ಲೀಲಾಜಾಲವಾಗಿ ಸಂಚರಿಸುತ್ತಿದ್ದರು. ಪ್ರಾರಂಭದಿಂದಲೇ ಸಂಗೀತದ ವಾತಾವರಣವನ್ನು ನಿರ್ಮಿಸಿ, ಒಂದಾದ ನಂತರ ಇನ್ನೊಂದು ರಚನೆಯನ್ನು ಮಧ್ಯದಲ್ಲಿ 'ವಿರಾಮ 'ವಿಲ್ಲದೆ ಅವ್ಯಾಹತವಾಗಿ ೪ ಗಂಟೆಗಳ ಕಾಲದ ಕಚೇರಿ ಮಾಡುತ್ತಿದ್ದರು. ರಾಗಗಳನ್ನು ೩, ೪ ನಿಮಿಷಗಳ ಕಾಲ ಹಾಡಿ ಅವುಗಳ ಸ್ವರೂಪವನ್ನು ತೋರಿಸಿ ತೃಪ್ತಿಪಡಿಸುತ್ತಿದ್ದರು. ಪಕ್ಕವಾದ್ಯ ವಿದ್ವಾಂಸರೊಡನೆ ವ್ಯರ್ಥವಾದ ಗಣಿತ ಮತ್ತು ಗದ್ದಲಮಯವಾದ ಗುದ್ದಾಟ ಮಾಡುತ್ತಿರಲಿಲ್ಲ. ವೇದಿಕೆಯ ಅನುಭವವನ್ನು ಆಗ ತಾನೇ ಪಡೆಯುತ್ತಿದ್ದ ತರುಣ ಪಕ್ಕವಾದ್ಯಗಾರ

ರೊಡನೆ ಸಹಕರಿಸಿ ಕಚೇರಿಯನ್ನು ಯಶಸ್ವಿಯಾಗಿಸುತ್ತಿದ್ದರು. ಇವರ ಹಾಡುಗಾರಿಕೆಯಲ್ಲಿ ಪ್ರತಿಯೊಂದು ಅಂಶವೂ ಅಚ್ಚುಕಟ್ಟಾಗಿರುತ್ತಿತ್ತು. ಇವರು ಕಚೇರಿಯಲ್ಲಿ ಕುಳಿತುಕೊಳ್ಳುತ್ತಿದ್ದ ಶೈಲಿ, ಶಿಸ್ತು, ಹಾಡುತ್ತಿದ್ದ ರೀತಿ, ಹುಮ್ಮಸ್ಸು ಪ್ರಶಂಸನೀಯವಾಗಿದ್ದುವು

ಅರಿಯಕುಡಿಯುವರು ವಿವಿಧ ರೀತಿಯ ಸಂಗೀತ ರಚನೆಗಳನ್ನು ತಿಳಿದಿದ್ದರು. ಇವರು ಸಂಪ್ರದಾಯಬದ್ಧರಾದರೂ ಪ್ರಯೋಗ ಕುಶಲತೆಯುಳ್ಳವರು ಅನೇಕ ಕೃತಿಗಳಿಗೆ, ರಚನೆಗಳಿಗೆ ಸ್ವರಮಟ್ಟುಗಳನ್ನು ಹಾಕಿ ಅವುಗಳನ್ನು ಪ್ರಕಟಿಸಿ ಮುಂದಿನ ಪೀಳಿಗೆಯವರಿಗೆ ಉಪಕಾರ ಮಾಡಿದ್ದಾರೆ. ಆಂಡಾಳ್ ದೇವಿಯ ತಿರುಪ್ಪಾವೈಯ ಮೂವತ್ತು ಪದ್ಯಗಳನ್ನು ಸ್ವರಪಡಿಸಿ ಹಾಡಿ ಅವುಗಳ ಸೌಂದರ್ಯವನ್ನು ತೋರಿಸಿಕೊಟ್ಟರು. ಅರುಣಾಚಲ ಕವಿರಾಯರ 'ರಾಮನಾಟಕಂ' ಎಂಬ ಗೇಯನಾಟಕದ ಕೃತಿಗಳನ್ನು ಸ್ವರಪಡಿಸಿ ಪ್ರಚುರಪಡಿಸಿದರು. ತ್ಯಾಗರಾಜರ ಹಲವು ಕೃತಿಗಳನ್ನು ಹಾಡುವುದನ್ನು ತಮ್ಮದೇ ಆದ ಶೈಲಿ, ರೀತಿಯನ್ನು ಸ್ಥಾಪಿಸಿದರು.

ಅರಿಯಕುಡಿಯವರಿಗೆ ಸಂದ ಬಿರುದುಗಳು ಮತ್ತು ಸನ್ಮಾನಗಳು ಅನೇಕ. ಇವರು ಮೈಸೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ೧೯೩೮ರಲ್ಲಿ ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯ 'ಸಂಗೀತಕಲಾನಿಧಿ' ಎಂಬ ಪ್ರಶಸ್ತಿಯನ್ನೂ ೧೯೫೮ರಲ್ಲಿ ರಾಷ್ಟ್ರಾಧ್ಯಕ್ಷರಿಂದ ಪದ್ಮಭೂಷಣ ಎಂಬ ಪ್ರಶಸ್ತಿಯನ್ನೂ ಪಡೆದರು. ಪಾಲ್‌ಘಾಟ್ ಕೆ. ವಿ. ನಾರಾಯಣ ಸ್ವಾಮಿ, ಬಿ. ರಾಜಂ ಅಯ್ಯರ್, ಮಧುರೆ ಕೃಷ್ಣನ್ ಇವರ ಪ್ರಮುಖ ಶಿಷ್ಯರು.

**ಅರಿಯ ಕುಡಿ ಪಂಥ**—ದಕ್ಷಿಣ ಭಾರತದ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಅರಿಯ ಕುಡಿ ರಾಮಾನುಜ ಅಯ್ಯಂಗಾರ್ಯರ (೧೮೯೦-೧೯೬೭) ಗಾಯನ ಶೈಲಿ. ಇವರು ತಮ್ಮದೇ ಆದ ಕಚೇರಿ ಶೈಲಿಯ ಪ್ರವರ್ತಕರು ಹಿತಮಿತವಾಗಿ, ಗಮಕಯುಕ್ತವಾಗಿ, ವಿದ್ವತ್ಪೂರ್ಣವಾಗಿ, ಕಲಾತ್ಮಕವಾಗಿ, ಹಾಗೂ ವೈವಿಧ್ಯಮಯವಾಗಿರುವ ಗಾಯನ ಶೈಲಿಗೆ ಅರಿಯ ಕುಡಿ ಪಂಥವೆನ್ನುವುದು ವಾಡಿಕೆ.

**ಅರಿತಾಳ**—ಅರಬಟ್ಟನಾವಲರ್ ವಿರಚಿತವಾದ 'ಬರತ ಶಾಸ್ತಿರಂ' ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಅರುಣಕಾಂತ**—ಈ ರಾಗವು ೨೮ನೆಯ ಮೇಳ ಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ಮ ದ ನಿ ಸ<br>
ಅ : ಸ ನಿ ದ ಪ ಮ ದ ಮ ಗ ರಿ ಸ.

**ಅರುಣಕ್ರಿಯ**—ಈ ರಾಗವು ೫೭ನೆಯ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ

ಆ: ಸ ರಿ ಮ ಪ ನಿ ಸ
ಅ: ಸ ನಿ ದ ಪ ಮ ಗ ರಿ ಸ

**ಅರುಣಾಚಲ ಕವಿರಾಯರ್** (ಕ್ರಿ. ಶ. ೧೭೧೧-೧೭೮೮)—ಇವರು ತಮಿಳು ನಾಡಿನ ತಂಜಾವೂರು ಜಿಲ್ಲೆಯ ತಿಲ್ಲೆಯಾಡಿ ಎಂಬ ಗ್ರಾಮದಲ್ಲಿ ಜನಿಸಿದರು. ನಲ್ಲ ತಂಬಿಯಾ ಪಿಳ್ಳೆ ಮತ್ತು ವಲ್ಲಿಯ ಮ್ಮೆ ಇವರ ತಂದೆ ತಾಯಿ. ಇವರು ಧರ್ಮಪುರಂ ಮಠದ ಅಂಬಲವಾಣ ಕವಿರಾಯರಲ್ಲಿ ತಮಿಳು, ತೆಲುಗು ಮತ್ತು ಸಂಸ್ಕೃತ ವಿದ್ಯಾಭ್ಯಾಸ ಮಾಡಿದರು ದರು ಮತ್ತು ಪದ್ಯರೂಪದಲ್ಲಿ 'ರಾಮನಾಟಕಂ' ಎಂಬ ಸಂಗೀತ ನಾಟಕವನ್ನು ೧೭೭೧ರಲ್ಲಿ ರಚಿಸಿದರು. ಸಾಹಿತ್ಯವನ್ನು ಸಂಗೀತಕ್ಕೆ ಅಳವಡಿಸುವುದರಲ್ಲಿ ಇವರ ಶಿಷ್ಯರಾಗಿದ್ದ ಕೋದಂಡರಾಮ ಅಯ್ಯರ್ ಮತ್ತು ವೆಂಕಟರಾಮ ಅಯ್ಯರ್ ಸಹಾಯ ಮಾಡಿದರು. ಇವರಿಬ್ಬರೂ ತಮಿಳು ನಾಡಿನ ಚಟ್ಟನಾಥ ಪುರದವರು. ತಮಿಳು ಮತ್ತು ಸಂಗೀತ ವಿದ್ವಾಂಸರು. 'ರಾಮನಾಟಕ'ವು ಬಹು ಬೇಗ ಜನಪ್ರಿಯವಾಯಿತು. ಭಾಷೆಯು ಸರಳ ಮತ್ತು ಸುಂದರವಾಗಿರುವುದರಿಂದ ಜನತೆ ಮೆಚ್ಚಿತು. ಭಾವಕ್ಕೆ ತಕ್ಕರಾಗಗಳು ಮತ್ತು ಹಲವು ಗಾದೆಗಳು ಇದರ ಹಾಡುಗಳಲ್ಲಿವೆ. ಹಲವು ಶತಮಾನಗಳ ಹಿಂದೆ ಕಂಬರ್ ಕವಿಯ ರಾಮಾಯಣವು ಪ್ರಪ್ರಥಮವಾಗಿ ಪ್ರಕಟವಾದ ಶ್ರೀರಂಗದ ದೇವಾಲಯದಲ್ಲಿ ಈ ನಾಟಕವನ್ನು ಪ್ರಕಟಿಸಲಾಯಿತು.

ಕವಿರಾಯರು ಶೀರ್ಗಾಳಿ ಸ್ಥಳಪುರಾಣಂ, ಶೀರ್ಗಾಳಿ ಕೋವೈ, ಹನುಮಾರ್ ಪಿಳ್ಳೈ ತಮಿಳ್, ಅಜೋಮುಖಿನಾಟಕಂ ಮತ್ತು ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ. ತಂಜಾವೂರಿನ ತುಳಜಾಜಿ ಮಹಾರಾಜ, ಪಾಂಡುಚೇರಿಯ ಆನಂದರಂಗಂಪಿಳ್ಳೆ, ಉಡೈಯರ್ ಪಾಳ್ಯದ ಯುವರಂಗ ಭೂಪತಿ, ಮಣಾಳಿಯ ಮುತ್ತು ಕೃಷ್ಣ ಮುದಲಿಯಾರ್, ತೇಪ್ಪೆರುಮಾಳ್ ಚೆಟ್ಟಿಯಾರ್ ಮುಂತಾದವರು ಅರುಣಾಚಲ ಕವಿರಾಯರಿಗೆ ಸನ್ಮಾನ ಮಾಡಿ ಗೌರವಿಸಿದರು.

**ಅರುಣಾಚಲಪ್ಪ, ಹಾರ್ಮೋನಿಯಂ** (೧೮೯೯—೧೯೭೭)—ಹಾರ್ಮೋನಿಯಂ ವಾದ್ಯಕ್ಕೆ ಮನೆಮಾತಾಗಿದ್ದ ಅರುಣಾಚಲಪ್ಪನವರು ಬೆಂಗಳೂರಿನ ಅರಳೇಪೇಟೆಯಲ್ಲಿದ್ದ ಮಧ್ಯಮವರ್ಗದ ಶ್ರೀಮಂತ ವೀರಶೈವ ದಂಪತಿಗಳಾದ ಗೌರಮ್ಮ ಮತ್ತು ವೀರಭದ್ರಯ್ಯನವರ ಪುತ್ರನಾಗಿ ಜನಿಸಿದರು. ಜರತಾರಿ ಸೀರೆಗಳನ್ನು ನೇಯುವುದು ಇವರ ಕುಲಕಸಬು. ಅರುಣಾಚಲಪ್ಪನವರಿಗೆ ಮೂರನೆಯ ವಯಸ್ಸಿನಲ್ಲೇ ಮಾತೃ ವಿಯೋಗವಾಯಿತು. ಇವರ ತಂದೆಯ ದ್ವಿತೀಯಪತ್ನಿ ನಂಜಮ್ಮನವರು ಬಾಲಕನನ್ನು ವಿಶ್ವಾಸದಿಂದ ಸಾಕಿ ಬೆಳೆಸಿದರು. ೬-೭ನೆಯ ವಯಸ್ಸಿನಲ್ಲಿ ಪಿತೃವಿಯೋಗವಾಯಿತು. ನಂತರ ಇವರ ಚಿಕ್ಕಪ್ಪನವರು ಸಾಕಿ ಬೆಳೆಸಿದರು. ಕೂಲಿಮಠದಲ್ಲಿ ಓದುವುದರ ಜೊತೆಗೆ ಮನೆತನದಕಸಬು, ಸಂಗೀತ ಕಲಿಯುವುದು, ಗರಡಿಯಲ್ಲಿ ಸಾಮು ಮಾಡುವುದು, ಬ್ಯಾಂಡ್ ಮಿಂಟನ್ ಮತ್ತು ಫುಟ್‌ಬಾಲ್

ಆಡುವುದು ಇವರ ಹವ್ಯಾಸಗಳಾಗಿದ್ದುವು. ಇವರ ಚಿಕ್ಕಪ್ಪನ ಅಳಿಯಂದಿರಾದ ಸುಬ್ಬ ರಾಮಪ್ಪನವರಲ್ಲಿ ಹಾರ್ಮೋನಿಯಂ ಶಿಕ್ಷಣ ಪಡೆದರು. ಮನ್ಮಥವಿಜಯ ಎಂಬ ನಾಟಕವಲ್ಲಿ ಹಾರ್ಮೋನಿಯಂ ನುಡಿಸಿದರು. ನಂತರ ನಾರಾಯಣಸ್ವಾಮಿ ಎಂಬುವ ರಲ್ಲಿ ಸಂಗೀತವನ್ನು ಕಲಿತು ಹೆಬ್ಬಣಿ ಕೃಷ್ಣಶಾಸ್ತ್ರಿ, ವೆಂಕಣ್ಣದಾಸರು ಮತ್ತು ನರಸಿಂಗ ರಾಯರು ಮುಂತಾದವರು ಮಾಡುತ್ತಿದ್ದ ಹರಿಕಥೆಗಳಲ್ಲಿ ಹಾರ್ಮೋನಿಯಂ ನುಡಿಸಿದರು. ೧೯೧೭-೧೮ರಲ್ಲಿ ಇವರ ವಿವಾಹವಾಯಿತು. ಶನಿವಾರಗಳಂದು ನಡೆಯುತ್ತಿದ್ದ ಭಜನೆಗಳಲ್ಲಿ ಎಲ್ಲಾ ವಿದ್ವಾಂಸರಿಗೆ ಪಕ್ಕವಾದ್ಯ ನುಡಿಸುತ್ತಿದ್ದರು ನಾಟಕ ಶಿರೋಮಣಿ ವರದಾಚಾರ್ಯರಿಂದ ಆಹ್ವಾನಿತರಾಗಿ ಅವರ ನಾಟಕಗಳಲ್ಲಿ ಹಾರ್ಮೋನಿಯಂ ನುಡಿಸಿದರು. ಬೆಂಗಳೂರು ಪುಟ್ಟಪ್ಪನವರಲ್ಲಿ ಪ್ರೌಢ ಶಿಕ್ಷಣ ಪಡೆದರು. ಒಂದು ಸಲ ಭೈರವಿ ಕೆಂಪೇಗೌಡರು ಇದ್ದಕ್ಕಿದ್ದ ಹಾಗೆ ಬಂದು ಬೇಗಡೆ ಮತ್ತು ಭೈರವಿರಾಗಗಳನ್ನು ಹಾಡಿ ಇವರನ್ನು ಹರಸಿದರು.

ಬಿ. ಎಸ್. ರಾಜಯ್ಯಂಗಾರ್, ತಬಲ ರಂಗಪ್ಪ ಮತ್ತು ಮುನಿಸ್ವಾಮಪ್ಪನವರ ಬೆಂಬಲದಿಂದ ಸಂಗೀತ ರಂಗವನ್ನು ಪ್ರವೇಶಿಸಿದರು. ಬಿ. ಎಸ್. ರಾಜಯ್ಯಂಗಾರ್ಯರ ಓಡಿಯನ್ ಗ್ರಾಮಾಫೋನ್ ರೆಕಾರ್ಡ್‌ಗಳಿಗೆ ಹಾರ್ಮೋನಿಯಂ ನುಡಿಸಿದರು. ನಾಲ್ವಡಿ ಕೃಷ್ಣರಾಜ ಒಡೆಯರು ಇರುವವರೆಗೂ ವರ್ಷಕ್ಕೆ ಎರಡು ಸಲ ಅರಮನೆ ಯಲ್ಲಿ ಬಿ. ಎಸ್. ರಾಜಅಯ್ಯಂಗಾರ್ಯರ ಹಾಡುಗಾರಿಕೆಗೆ ಪಕ್ಕವಾದ್ಯ ನುಡಿಸು ತ್ತಿದ್ದರು. ಹಾಗೆಯೇ ಬಿಡಾರಂ ಕೃಷ್ಣಪ್ಪನವರ ರಾಮ ಮಂದಿರದಲ್ಲಿ ಪ್ರತಿವರ್ಷವೂ ತಪ್ಪದೇ ಇವರ ಕಚೇರಿಗಳಾಗುತ್ತಿದ್ದುವು ಪ್ರಸಿದ್ಧ ಮೃದಂಗ ವಿದ್ವಾಂಸರಾಗಿದ್ದ ದಕ್ಷಿಣಾಮೂರ್ತಿ ಪಿಳ್ಳೆಯವರ ಮೃದಂಗದೊಡನೆ ಹಲವು ಕಚೇರಿಗಳನ್ನು ಮಾಡಿದರು. ದಕ್ಷಿಣ ಭಾರತದ ಪ್ರಮುಖ ಸ್ಥಳಗಳು, ಪೂನಾ, ಬೊಂಬಾಯಿ, ಕರಾಚಿ, ಲಾಹೋರ್, ದೆಹಲಿ, ಅಹಮದಾಬಾದ್, ಕಲ್ಕತ್ತಗಳಲ್ಲಿ ಕಚೇರಿಗಳಲ್ಲಿ ನುಡಿಸಿ ಜಯಭೇರಿ ಹೊಡೆದು ಬಂದರು. ಪಂಡಿತ ಮದನಮೋಹನ ಮಾಳವೀಯರು ಇವರ ವಾದನವನ್ನು ಕೇಳಿ ಮೆಚ್ಚಿ ಪ್ರಶಂಶಿಸಿದರು. ೧೯೩೩ರಲ್ಲಿ ಬೆಂಗಳೂರಿನ ಬಳೇಪೇಟೆಯಲ್ಲಿ ಅರುಣಾ ಮ್ಯೂಸಿಕಲ್ಸ್ ಎಂಬ ಸಂಗೀತವಾದ್ಯಗಳ ಅಂಗಡಿಯನ್ನು ಪ್ರಾರಂಭಿಸಿದರು. ಹಾರ್ಮೋನಿಯಂ ವಾದ್ಯವನ್ನು ಬಹುವಾಗಿ ಪರಿಶೀಲಿಸಿ ಅದನ್ನು ಉತ್ತಮಗೊಳಿಸಲು ಪ್ರಯತ್ನಿಸುತ್ತಿದ್ದರು. ಅದರ ಪರಿಣಾಮವೇ ಕಟ್‌ಬೆಲ್ಲೋಸ್ ಹಾರ್ಮೋನಿಯಂ ಬೆಲ್ಲೋಸ್‌ನ್ನು ಒತ್ತಿ ಎಡಗೈ ಎತ್ತಿದರೆ ಕೂಡಲೇ ಒಳಗಿರುವ ಗಾಳಿಗೆ ತಡೆಯಾಗ ಬೇಕು. ಇದರಿಂದ ಬೆಲ್ಲೋಸನ್ನು ಹತೋಟಿಯಲ್ಲಿಡಬಹುದು ಇದೊಂದು ನೂತನ ವಿಧಾನ ಮತ್ತು ತಂತ್ರ. ಇದರಿಂದ ಗಮಕಗಳನ್ನು ಅಂಕೆಯಲ್ಲಿಟ್ಟುಕೊಳ್ಳಲು ಸಾಧ್ಯ ವಾಯಿತು. ಸಂಗೀತರತ್ನ ಟಿ. ಚೌಡಯ್ಯ, ನಾಯನಾಪಿಳ್ಳೆಯವರ ಶಿಷ್ಯ ನಾರಾಯಣಸ್ವಾಮಿ ಭಾಗವತರ್, ಡಿ. ಸುಬ್ಬರಾಮಯ್ಯ, ಚಿಂತನಪಲ್ಲಿ ರಾಮಚಂದ್ರ ರಾಯರು ಮುಂತಾದವರೊಂದಿಗೆ ನೂರಾರು ಕಚೇರಿಗಳಲ್ಲಿ ನುಡಿಸಿದರು. ೧೯೬ಳ

ರಲ್ಲಿ ಬಾಲಮುರಳಿಕೃಷ್ಣರವರ ಕಚೇರಿಗೆ ಹಾರ್ಮೋನಿಯಂ ನುಡಿಸಿದರು. ಇವರ ವಾದನವು ಕೊಳಲೋ, ಷಹನಾಯ್ ವಾದ್ಯವೋ ಅಥವಾ ವಿಶಿಷ್ಟ ತಂತ್ರದ ತಂತೀ ವಾದ್ಯವೋ ಎನ್ನುವಷ್ಟು ಸೊಗಸಾಗಿದ್ದಿತು. ಹಾರ್ಮೋನಿಯಂ ವಾದ್ಯದ ಯುಗ ಪುರುಷನಾಗಿದ್ದ ಅರುಣಾಚಲಪ್ಪನವರು ೧೯೬೬ರಲ್ಲಿ ಕಾಲವಾದರು. ಮುನಿರಾಮಯ್ಯ, ನರಸಿಂಹಯ್ಯ, ಗುಂಡಪ್ಪ, ಪಾಪಯ್ಯ, ಹೊನ್ನಪ್ಪ ಭಾಗವತರು ಮುಂತಾದವರು ಇವರ ಶಿಷ್ಯರು. ಇವರು ಮಂತ್ರಾಲಯದ ರಾಘವೇಂದ್ರಸ್ವಾಮಿಗಳ ಭಕ್ತರಾಗಿದ್ದರು.

**ಅರುಣಗಿರಿ**—ಈ ರಾಗವು ೬೪ನೆಯ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ

ಆ : ಸ ರಿ ಗ ಮ ದ ಸ

ಅ : ಸ ದ ಮ ಗ ರಿ ಸ

**ಅರುಣಗಿರಿನಾಥರ್**—ಅರುಣಗಿರಿನಾಥರು ೧೫ನೆಯ ಶತಮಾನದಲ್ಲಿ ವಿಜಯನಗರದ ದೊರೆ ೨ನೆಯ ಪ್ರೌಢ ಪ್ರತಾಪದೇವರಾಯನ (೧೪೨೨–೧೪೪೪) ಕಾಲದಲ್ಲಿದ್ದ ತಮಿಳು ದೇಶದ ಪ್ರಸಿದ್ಧ ಭಕ್ತ ಮತ್ತು ಕವಿ. ತಾಯಿಯ ಹೆಸರು ಮುತ್ತಮ್ಮೈ. ತಿರುವಣ್ಣಾಮಲೆಯು ಜನ್ಮಸ್ಥಳ. ಅಕ್ಕನ ಆರೈಕೆಯಲ್ಲಿ ಬೆಳೆದ ಅರುಣಗಿರಿ ಚಿಕ್ಕಂದಿನಲ್ಲಿ ದುರ್ವ್ಯಸನಗಳಿಗೆ ಬಲಿಯಾಗಿ, ಸೋದರಿಯ ಬಿರುನುಡಿಗಳಿಂದ ನೊಂದು ಆತ್ಮಹತ್ಯೆಗೆ ಪ್ರಯತ್ನಿಸಿದಾಗ ತಿರುವಣ್ಣಾಮಲೆಯ ದೇವಾಲಯದ ಸನ್ಯಾಸಿಯು ಇವರನ್ನು ರಕ್ಷಿಸಿ ಜ್ಞಾನೋಪದೇಶ ಮಾಡಿದನು. ನಂತರ ಷಣ್ಮುಖನ ಭಕ್ತನಾಗಿ ತಿರುಪ್ಪುಗಳ್ ಎಂಬ ಪ್ರಸಿದ್ಧವಾದ ಸ್ತೋತ್ರಗಳನ್ನು ಹಾಡಿದರು. ಇವು ೧೦೦೦ಕ್ಕಿಂತಲೂ ಹೆಚ್ಚುಸಿಕ್ಕಿವೆ. ಇವು ನೂತನ ಶೈಲಿ, ಪದಲಾಲಿತ್ಯ ಮತ್ತು ಬಂಧಗಳಿಗೆ ಪ್ರಸಿದ್ಧವಾಗಿವೆ. ಅರುಣಗಿರಿನಾಥರಿಗೆ ಸಂಸ್ಕೃತ ಮತ್ತು ತಮಿಳಿನಲ್ಲಿ ಅಪಾರ ಪಾಂಡಿತ್ಯವಿತ್ತು. ಚಂಡಪಾವಳಪ್ಪೆರುಮಾನ್ ಎಂಬ ಬಿರುದಿತ್ತು. ಇವರು ಅನೇಕ ವೃತ್ತಗಳಲ್ಲಿ ಕವಿತೆಗಳನ್ನು ರಚಿಸಿದ್ದರು. ಇತರ ' ತೇವಾರಂ ' ಕವಿಗಳಂತೆ, ಇವರು ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ಅಧಿದೇವತೆಗಳನ್ನು ಕುರಿತು ಸ್ತೋತ್ರಗಳನ್ನು ಹಾಡಿದರು. ಇವರ ಕೃತಿಗಳು ಷಣ್ಮುಖಭಕ್ತಿಯಿಂದ ಕೂಡಿವೆ. ಮತ್ತು ಹಲವು ನೂತನ ಅಥವಾ ಅಪರಿಚಿತ ತಾಳಗಳಿಗೆ ಲಕ್ಷ್ಯಗಳಾಗಿವೆ. ೩೫, ೧೭೫, ಮತ್ತು ೧೦೮ ತಾಳಗಳ ವರ್ಗಕ್ಕೆ ಸೇರಿದ ಹಲವು ತಾಳಗಳಲ್ಲಿ ಇವರ ಕೃತಿಗಳಿರುವುದಲ್ಲದೆ ಸಂಕೀರ್ಣತಾಳಗಳಲ್ಲಿ ಹಲವು ರಚನೆಗಳಿವೆ. ಇವರು ಸುಮಾರು ೧೬೦೦೦ ಕೃತಿಗಳನ್ನು ರಚಿಸಿದರೆಂದು ಪ್ರತೀತಿ ಅವುಗಳಲ್ಲಿ ಈಗ ಸುಮಾರು ೨೦೦೦ ಕೃತಿಗಳು ದೊರಕಿವೆ. ಇವರು ಸಾಹಿತ್ಯ ಸ್ಪರ್ಧೆಯೊಂದರಲ್ಲಿ ತಮಿಳು ಕವಿ ವಿಲ್ಲಿಪುತ್ತೂರರ್ ಎಂಬುವರನ್ನು ಸೋಲಿಸಿದರು. ಬೂತವೇತಾಳವಗುಪ್ಪು ಎಂಬ ಕೃತಿಯಲ್ಲಿ ಕೆಲವು ಪುರಾತನರಾಗಗಳು, ೧೦೮ ತಾಳಗಳು, ತಮಿಳು ಪಣ್‌ಗಳು ಮತ್ತು ಅವನದ್ಧ ವಾದ್ಯಗಳು ಉಕ್ತವಾಗಿವೆ. ಇವರು ರಚಿಸಿರುವ ಇತರ ಗ್ರಂಥಗಳು—ಕಂದರ್ ಅನುಭೂತಿ, ಕಂದರ್ ಅಂದಾದಿ,

ಕಂದರ್ ಅಲಂಕಾರಂ, ತಿರುವಗುಪ್ಪು, ವೇಲ್ ವಿರುತ್ತಂ, ಮತ್ತು ಮಯಿಲ್ ವಿರುತ್ತಂ. ಇವರು ರಚಿಸಿರುವ ಹಾಡುಗಳು ತಾಳಬದ್ಧವಾಗಿ ಹಾಡಲು ಅನುಕೂಲವಾಗುವಂತೆ ಅನುಪ್ರಾಸಾದಿಗಳಿಂದ ಕೂಡಿದ ರಚನೆಗಳಾಗಿವೆ. ಗಾಯಕರು ಕಚೇರಿಯ ಕೊನೆಯಲ್ಲಿ ಒಂದೆರಡು ತಿರುಪ್ಪುಗಳನ್ನು ಹಾಡುವುದನ್ನು ಕೇಳಬಹುದು. ತುಳ್ಳುವದವೇಳ್ಕ್ಕು ಕಣೆಯಾಲೇ ಎಂಬ ಹಂಸಾನಂದಿ ರಾಗದ ತಿರುಪ್ಪುಗಳ್ ಬಹಳ ಪ್ರಸಿದ್ಧ. ಇವರ ತಿರಪ್ಪುಗಳ್‌ಗಳಿಂದ ಸ್ಫೂರ್ತಿಪಡೆದ ಒಬ್ಬ ತಮಿಳು ಕವಿಯು ಇಡೀ ರಾಮಾಯಣವನ್ನು ತಿರುಪ್ಪುಗಳ್ ಶೈಲಿಯಲ್ಲಿ ರಚಿಸಿದ್ದಾರೆ. ಇದಕ್ಕೆ ರಾಮಾಯಣ ತಿರುಪ್ಪುಗಳ್ ಎಂದು ಹೆಸರು.

**ಅರುಣಾಚಲಶಾಸ್ತ್ರಿ**—ಇವರು ತ್ಯಾಗರಾಜರ ನಂತರ ಇದ್ದ ಒಬ್ಬ ವಾಗ್ಗೇಯಕಾರ. ಅರುಣಗಿರಿ, ಅರುಣಾಚಲ, ಅರುಣಾದ್ರಿ ಎಂಬ ಅಂಕಿತಗಳಲ್ಲಿ ಸಂಸ್ಕೃತದ ಕೃತಿಗಳನ್ನು ರಚಿಸಿರುವರು. ಬೇಗಡೆ ರಾಗದ ‹ ಶಿವಶಂಕರಶಂಭೋ › ಮತ್ತು ಹುಸೇನಿ ರಾಗದ " ಶ್ರೀ ಮಹಾಗಣಾಧಿಪತಿಂ " ಎಂಬ ಎರಡು ಕೃತಿಗಳು ಬಹು ಪ್ರಸಿದ್ಧವಾಗಿವೆ.

**ಅರುಣಚಂದ್ರಿಕೆ**—ಈ ರಾಗವು ೩೬ನೆಯ ಮೇಳಕರ್ತ ಚಲನಾಟದ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ಪ ಮ ಗ ಸ

**ಅರುಣ ಜ್ವಲಿತ**—ಈ ರಾಗವು ೫೯ನೆಯ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಅರುಣಾಂಬರಿ**—ಈ ರಾಗವು ೩೮ನೆಯ ಮೇಳಕರ್ತ ಜಲಾರ್ಣವದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ನಿ ಪ ದ ಮ ಗ ರಿ ಸ

**ಅರುತ್ತಾ**—೧೯ನೆಯ ಶತಮಾನದಲ್ಲಿದ್ದ ಒಬ್ಬ ತಮಿಳು ಕವಿ ಮತ್ತು ವಾಗ್ಗೇಯಕಾರ. ಇವರು ರಚಿಸಿರುವ ಸ್ತುತಿಗಳಿಗೆ ಅರುತ್ತಾಗಳೆಂದು ಹೆಸರು.

**ಅರುದಿ**— ಇದು ಪಲ್ಲವಿಯ ಒಂದು ಭಾಗ. ಇದನ್ನು ಪದಗರ್ಭ ಎಂದೂ ಕರೆಯುತ್ತಾರೆ. ಪಲ್ಲವಿಯ ಸಾಹಿತ್ಯ ಮತ್ತು ತಾಳಗಳ ಪೂರ್ವಾಂಗವಾದ ನಂತರ ಸಾಹಿತ್ಯದಲ್ಲಿ ಕಂಡುಬರುವ ದೀರ್ಘವಿರಾಮವನ್ನು ಅರುದಿ ಅಥವಾ ಪದಗರ್ಭವೆನ್ನುತ್ತೇವೆ. ಪದಗರ್ಭವು ತಾಳದ ಪೂರ್ಣ ಘಾತದ ಮೇಲೆ ಸಂಭವಿಸುತ್ತದೆ. ತ್ರಿಪುಟ ತಾಳ, ಅಟ್ಟತಾಳಗಳಲ್ಲಿ ಮೊದಲ ದ್ರುತದಲ್ಲಿಯೂ ಮತ್ತು ಝಂಪೆ ತಾಳದಲ್ಲಿ ಅನು ದ್ರುತದಲ್ಲಿಯೂ ಅರುದಿಯು ಕಂಡುಬರುತ್ತದೆ.

**ಅರುಟ್ಪ್ಪರಿ**—ಪುರಾತನ ತಮಿಳು ಸಂಗೀತದ ರಾಗಗಳಲ್ಲಿ ಒಂದಾದ ಕುರಿಂಜಿ ಯಾಳ್. ಇದು ಪಿಂಗಲಾಂಡೈನಲ್ಲಿ ಉಕ್ತವಾಗಿದೆ.

**ಅರೈಯರ್**—ದಕ್ಷಿಣ ಭಾರತದ ವೈಷ್ಣವ ದೇವಾಲಯಗಳಲ್ಲಿ ನಾಟ್ಯವಾಡುವ ಪುರೋಹಿತವರ್ಗದವರಿಗೆ ಅರೈಯರ್ ಎಂದು ಹೆಸರು. ಉತ್ಸವ ಸಂದರ್ಭಗಳಲ್ಲಿ ನಾಟ್ಯದ ಮೂಲಕ ಕೃಷ್ಣಲೀಲೆಯನ್ನು ಇವರು ಅಭಿನಯಿಸುತ್ತಾರೆ

**ಅರೈಯರ್‌ನಟನ**—ಇದು ಶ್ರೀರಂಗ ಮತ್ತು ಇತರ ಸ್ಥಳಗಳಲ್ಲಿರುವ ದಕ್ಷಿಣ ಭಾರತದ ವೈಷ್ಣವ ದೇವಾಲಯಗಳಲ್ಲಿ ನಡೆಯುವ ನಾಟ್ಯಸೇವೆ. ಶ್ರೀರಂಗದ ರಂಗನಾಥಸ್ವಾಮಿ ದೇವಾಲಯದಲ್ಲಿ ಡಿಸೆಂಬರ್–ಜನವರಿ ತಿಂಗಳಲ್ಲಿ ಈ ನಾಟ್ಯವನ್ನು ನೋಡಬಹುದು.

**ಅರಂಗ್ರೇಟಂ**—ಹಲವು ವರ್ಷಗಳ ಕಾಲ ಶಿಕ್ಷಣವನ್ನು ಪಡೆದು ಕಲಾ ಪರಿಣತಿಯನ್ನು ಹೊಂದಿದ ಗಾಯಕ, ನಟ ಅಥವಾ ನಾಟ್ಯಪಟು ವಿದ್ವಾಂಸರ ಸಭೆಯ ಮುಂದೆ ಪ್ರಥಮ ಪ್ರದರ್ಶನ ನೀಡುವುದಕ್ಕೆ ತಮಿಳಿನಲ್ಲಿ ಅರಂಗೇಟ್ರಂ ಎಂದು ಹೆಸರು.

**ಅಲಸೂರು ಕೃಷ್ಣಯ್ಯರ್**—ಸಂಗೀತದ ತ್ರಿಮೂರ್ತಿಗಳಲ್ಲೊಬ್ಬರಾದ ಶ್ಯಾಮಾಶಾಸ್ತ್ರಿಗಳ ಶಿಷ್ಯರಲ್ಲಿ ಒಬ್ಬರು ಅಲಸೂರು ಕೃಷ್ಣಯ್ಯರ್. ಇವರು ಮೈಸೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ಕಷ್ಟವಾದ ಪಲ್ಲವಿಗಳನ್ನು ಹಾಡುವುದರಲ್ಲಿ ನಿಷ್ಣಾತರಾಗಿದ್ದರು.

**ಅಲಕವರಾಳಿ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ. ಇದಕ್ಕೆ ಅಲಕಾವಳಿ ಎಂದೂ ಹೆಸರಿದೆ.

ಆ : ಸ ರಿ ಮ ಪ ದ ಸ

ಅ : ಸ ನಿ ದ ಪ ಮ ಗ ರಿ ಗ ಸ

**ಅಲಕೋಜ**—ಇದೊಂದು ಗ್ರಾಮೀಣ ಸುಷಿರವಾದ್ಯ. ಇದರಲ್ಲಿ ಒಂದು ಸ್ವರನಾಡಿ ಮತ್ತು ಒಂದು ಶ್ರುತಿನಾಡಿ ಇದೆ. ಇದನ್ನು ಗ್ರಾಮದ ಉತ್ಸವಗಳಲ್ಲಿ ನುಡಿಸುತ್ತಾರೆ

**ಅಳಗನಂಬಿಪಿಳ್ಳೈ**—ಇವರು ೨೦ನೆ ಶತಮಾನದ ಪೂರ್ವಾರ್ಧದಲ್ಲಿ ಬಹು ಪ್ರಸಿದ್ಧರಾಗಿದ್ದ ಮೃದಂಗ ವಿದ್ವಾಂಸರು. ತಮಿಳು ನಾಡಿನ ಕುಂಭ ಕೋಣದವರು. ಇವರ ನುಡಿಕಾರವು ಖಚಿತವಾಗಿ, ಕಲಾತ್ಮಕವಾಗಿ ಮತ್ತು ಹಿತವಾಗಿ, ಮಧುರ ವಾಗಿತ್ತು. ಇವರು ಬಹಳ ಶ್ರೇಷ್ಠ ಪಕ್ಕವಾದ್ಯ ವಿದ್ವಾಂಸರಾಗಿದ್ದರು.

**ಅಲಪದ್ಮ**—ಇದು ಭರತನಾಟ್ಯದ ಹಸ್ತಭೇದಗಳಲ್ಲಿ ಒಂದು ಬಗೆಯ ಅಸಂಯುತ ಹಸ್ತ ವಿರಳವಾದ ಕಿರುಬೆರಳು ಮೊದಲಾದುವು ಆವರ್ತಿತವಾದರೆ ಅದು ಅಲಪದ್ಮಹಸ್ತ. ಅರಳಿದ ಕಮಲ, ಬೇಲ ಮುಂತಾದ ಹಣ್ಣು, ತಿರುಗುವುದು, ಸ್ತನ, ವಿರಹ, ಕನ್ನಡಿ, ಪೂರ್ಣಚಂದ್ರ, ಸುಂದರವಾದ ವಸ್ತು, ತುರುಬು, ಚಂದ್ರಶಾಲೆ,

ಗ್ರಾಮ, ಎತ್ತರ, ಕೋಪ, ಕೆರೆ, ಗಾಡಿ, ಚಕ್ರವಾಕ, ಕಲಕಲಶಬ್ದ, ಮೆಚ್ಚಿಗೆಯ ನುಡಿ, ಇವುಗಳನ್ನು ಸೂಚಿಸಲು ಈ ಹಸ್ತವನ್ನು ವಿನಿಯೋಗಿಸುವರು

**ಅಲಪಲ್ಲವ** — ಇದು ಭರತನಾಟ್ಯದ ಒಂದು ಬಗೆಯ ಹಸ್ತಮುದ್ರೆ. ಬೆರಳುಗಳನ್ನು ಬಿಡಿಬಿಡಿಯಾಗಿ ಅಂಗೈಯೊಳಗೆ ಬಗ್ಗಿಸಿ ಹಿಡಿದಲ್ಲಿ ಅದು ಅಲಪಲ್ಲವ. ನೀನ್ಯಾರು ? ಎಂಬ ಪ್ರಶ್ನೆ, ದಬಾಯಿಸುವುದು, ಶೂನ್ಯವಚನಾದಿಗಳು, ಸುಳ್ಳು ಮೊದಲಾದುವುಗಳಲ್ಲಿ ಮಾತು ಮಾತಿಗೆ ಸ್ತ್ರೀಯರು ತನ್ನನ್ನು ತಾವು ನಿರ್ದೇಶಿಸಿ ಕೊಳ್ಳುವುದನ್ನು ಸೂಚಿಸುತ್ತದೆ.

**ಅಲ್ಪತ್ವ**—ಇದು ರಾಗದಲ್ಲಿ ಅತ್ಯಲ್ಪವಾಗಿ ಉಪಯೋಗಿಸಲ್ಪಡುವ ಸ್ವರ. ಇದರಲ್ಲಿ ಲಂಘನ ಮತ್ತು ಅನಭ್ಯಾಸವೆಂಬ ಎರಡು ವಿಧಗಳಿವೆ. ಹಾಡುವಾಗ ಒಂದು ಸ್ವರವನ್ನು ಬಿಟ್ಟು ಮುಂದಿನ ಸ್ವರವನ್ನು ಹಾಡುವುದು ಲಂಘನವಾಗುತ್ತದೆ. ಒಂದು ಸ್ವರವನ್ನು ಬಹು ಸ್ವಲ್ಪವಾಗಿ ಬಳಸಿದಾಗ ಅದು ಅನಭ್ಯಾಸವೆನಿಸಿಕೊಳ್ಳುತ್ತದೆ.

**ಅಲಬುಸಾರಂಗಿ**—ಕಮಾನಿನಿಂದ ನುಡಿಸಲ್ಪಡುವ ಉತ್ತರ ಭಾರತದ ಒಂದು ತಂತೀವಾದ್ಯ.

**ಅಲಾನ್‌ಡನೀಲೊ**—ಫ್ರೆಂಚ್ ಸಂಗೀತ ಶಾಸ್ತ್ರಜ್ಞ. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಸಂಶೋಧಕ ಸಂಗೀತ ಪ್ರಾಧ್ಯಾಪಕನಾಗಿದ್ದನು. Introduction to the Study of musical scales and Northern Indian Music ಎಂಬ ಎರಡು ಗ್ರಂಥಗಳ ಕರ್ತೃ .

**ಅಲರು**—ಈ ರಾಗವು ೩೭ನೆಯ ಮೇಳಕರ್ತ ಸಾಲಗದ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ

ಅ : ಸ ನಿ ದ ಮ ಗ ಸ

**ಅಲರಿಪು**—“ ತತ್ತೈಯ್ಯಾಂ ತ್ತೆಯ್ಯಿದತ್ತತಾಂ ” ಎಂಬ ಶೊಲ್ಕಟ್ಟಿನಿಂದ ಪ್ರಾರಂಭವಾಗುವ ಈ ನರ್ತನವು “ ತಾಂ ಧಿತ್ತಾಂ ತ್ತೈಧಿತ್ತೈ ” ಎಂಬ ನುಡಿತದಲ್ಲಿ ನಡೆಯುವುದು. ಹಂಸಧ್ವನಿರಾಗದಲ್ಲಿ ಚತುರಶ್ರಜಾತಿ ರೂಪಕತಾಳದಲ್ಲಿ ರಚಿತವಾದ ಈ ‘ ಅಲರಿಪು ’, ಸಂಪ್ರದಾಯದ ಮೊದಲ ನೃತ್ಯ ಇದು ಕತ್ತು, ಕಣ್ಣು, ಭುಜ, ಕೈಕಾಲುಗಳೊಂದಿಗೆ ತನ್ನದೇ ಆದ ಒಂದು ಚಲನಾವಿಧಾನವನ್ನು ಪಡೆದ ನೃತ್ಯ. ಇದು ತಿಶ್ರ, ಮಿಶ್ರ, ಖಂಡ, ಸಂಕೀರ್ಣ ಜಾತಿಗಳ ನಡೆಯಲ್ಲಿ ಅಚಲನಾ ವಿಧಾನವನ್ನು ಅಳವಡಿಸಿಕೊಂಡು ಒಟ್ಟು ಐದು ಅಲರಿಪುಗಳೆಂದು ಪ್ರಯೋಗಿಸುವುದುಂಟು. ಇದು ರಂಗಪ್ರವೇಶದ ಪ್ರಥಮ ನೃತ್ಯ. ನಾಟ್ಯಕಾರ್ಯದ ಕಣ್ಣು, ಕತ್ತು, ಹಸ್ತಪಾದಾದಿ ಗಳ ವಿವಿಧ ಚಲನೆಗಳ ಪ್ರಯೋಗದಿಂದ ಅಂಗಾಂಗಗಳನ್ನು ಚುರುಕುಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತದೆ.

**ಅಲವ** — ಈ ರಾಗವು ೬೩ನೆಯ ಮೇಳಕರ್ತ ರಘುಪ್ರಿಯದ ಒಂದು ಜನ್ಯ ರಾಗ.

ಆ : ಸ ಗ ಮ ದ ನಿ ಸ
ಅ : ಸ ನಿ ದ ಮ ಗ ಸ

**ಅಲಿವರ್ಧನಿ**—ಈ ರಾಗವು ೧೭ನೆಯ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ : ಸ ರಿ ಗ ಮ ನಿ ಸ
ಅ : ಸ ನಿ ದ ಪ ಮ ಗ ರಿ ಸ

**ಅಲಿಯಾಬಿಲಾವಲ್**—ಶಂಕರಾಭರಣ ಮೇಳಕ್ಕೆ ಸೇರಿದ ಹಿಂದೂಸ್ಥಾನೀ ಸಂಗೀತದ ಒಂದು ರಾಗ.

**ಅಲ್ಲೂರಿ ವೆಂಕಟಾದ್ರಿಸ್ವಾಮಿ** – ತೆಲುಗಿನಲ್ಲಿ ಭಕ್ತಿಗೀತೆಗಳನ್ನು ರಚಿಸಿರುವ ವಾಗ್ಗೇಯಕಾರರು.

**ಅಲಂಕಾರ**—(೧) ಅಲಂಕಾರವೆಂದರೆ ಶೃಂಗಾರವೆಂದು ಸಾಮಾನ್ಯ ಅರ್ಥ. ನಾಟ್ಯದ ಭಾವಾನುಭಾವ ಪ್ರಯೋಗಾದಿಗಳಲ್ಲಿ ವೈಯುಕ್ತಿಕ ಚೈತನ್ಯಸತ್ವ ಸದೃಶ ವಾದುದು ಸತ್ವಾಲಂಕಾರ. ಚಪಲತ್ವ, ಅಂಗಾಂಗ ವಿಭೇದ ಸಂಯೋಜನಕಾರ್ಯದ ಚುರುಕುತನ, ಚಲನವಲನಗಳ ವಿಸ್ತರಣೆ ಮೊದಲಾದುವು ಅಭಿನಯಾಲಂಕಾರ. ಹೆಜ್ಜೆಹೆಜ್ಜೆಗಳಲ್ಲಿ ಮೊಳಗುವ ಗೆಜ್ಜೆನಾದ ಶಬ್ದವು ಜತಿಯಲಂಕಾರ. ಗೀತೆ, ಆಲಾಪನೆ ಮೊದಲಾದುವು ನಾದಾಲಂಕಾರ. ವಸ್ತ್ರಗಳು, ಆಭರಣಗಳು, ಪುಷ್ಪಗಳು, ವಿಲೇಪನ ಗಳು ಮುಂತಾದುವು ಅಲಂಕಾರ ಸಾಧನಗಳು.

(೨) ಸಪ್ತತಾಳಗಳು ಮತ್ತು ಇತರ ತಾಳಗಳಲ್ಲಿರುವ ಪ್ರಾರಂಭದ ಸಂಗೀತದ ಅಭ್ಯಾಸಗಳಿಗೆ ಅಲಂಕಾರಗಳೆಂದು ಹೆಸರು. ಇವು ಅಭ್ಯಾಸ ಗಾನಕ್ಕೆ ಸಂಬಂಧಿಸಿವೆ.

(೩) ಪುರಾತನ ಸಂಗೀತ ಪದ್ಧತಿಯಲ್ಲಿದ್ದ ಸ್ವರಸಮೂಹ ಮಾದರಿಗಳಿಗೆ ಅಲಂಕಾರಗಳೆಂದು ಹೆಸರು. ಸ್ಥಾಯಿ, ಆರೋಹಿ, ಅವರೋಹಿ, ಸಂಚಾರಿವರ್ಣ ಗಳನ್ನನುಸರಿಸಿ ಕಲಾತ್ಮಕವಾಗಿ ಸ್ವರಸಮೂಹಗಳನ್ನು ಮಾಡುತ್ತಿದ್ದರು. ಪುರಾತನ ಸಂಗೀತದಲ್ಲಿ ಇವು ಗಮಕಗಳ ಕೆಲಸ ಮಾಡುತ್ತಿದ್ದುವು.

**ಅಲಂಕಾರ ಪ್ರಿಯ**—ಈ ರಾಗವು ೧೦ನೆಯ ಮೇಳಕರ್ತ ನಾಟಕಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಗ ಮ ದ ನಿ ಸ
ಅ : ಸ ನಿ ದ ಮ ಗ ರಿ ಸ

**ಅಲಂಕಾರಿಣಿ**—ಇದು ಭಾವಭಟ್ಟನ ಮತದಂತೆ ಮಧ್ಯಮ ಸ್ವರದ ನಾಲ್ಕನೆಯ ಶ್ರುತಿಯ ಹೆಸರು.

**ಅಲಂಕೃತ** – ಒಂದು ಸ್ವರ ಸಪ್ತಕದಲ್ಲಿರುವ ಸಂಗೀತಭಾಗವನ್ನು ಇನ್ನೊಂದು ಸ್ವರಸಪ್ತಕದಲ್ಲಿ ಹಾಡುವುದು ಅಲಂಕೃತ. ಇದು ಸಂಗೀತಕ್ಕೆ ಸೌಂದರ್ಯವೀಯುವ

ದಶವಿಧ ಅಲಂಕಾರಗಳಲ್ಲಿ ಒಂದೆಂದು ನಾರದ ಶಿಕ್ಷಾ ಎಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಅಲಂಘನ**—ಇದು ರಾಗದ ಲಕ್ಷಣವನ್ನು ತೋರಿಸುವ ಒಂದು ವಿಧಾನ. ಇದಕ್ಕೆ ಬಹುತ್ವವೆಂದು ಹೆಸರು. ಒಂದು ಸ್ವರವನ್ನು ತೇಲಿಸದೆ ಚೆನ್ನಾಗಿ ಪ್ರಯೋಗಿಸುವುದು ಈ ವಿಧಾನ.

**ಅವಘಾತ**—ಇದು ನಾಟ್ಯ ಶಾಸ್ತ್ರದಲ್ಲಿ ಹೇಳಿರುವ ಆರಭಟಿ ವೃತ್ತಿಯ ನಾಲ್ಕು ವಿಧಗಳಲ್ಲಿ ಒಂದು ಬಗೆಯ ಭಾವನೆಯ ಪ್ರಕಟನೆ. ಅಧಿಕವಾದ ಆನಂದ, ಭಯಗಳಿಂದುಂಟಾಗುವ ಆವೇಗ ಪ್ರಧಾನವಾದ ಚೇಷ್ಟೆಯೇ ಅವಘಾತ. ಪಾತ್ರ ಪ್ರವೇಶ, ನಿರ್ಗಮನಗಳಲ್ಲಿ ರಭಸವಾದ ಓಟ ಇತ್ಯಾದಿಗಳಲ್ಲಿ ಉಂಟಾಗುವ ಆವೇಗವೇ ಅವಘಾತ.

**ಅವನದ್ಧ ಕುಟಪ**—ಚರ್ಮವಾದ್ಯಗಳನ್ನು ನುಡಿಸುವ ವಿದ್ವಾಂಸರ ಕೂಟ.

**ಅವೇಷ್ಟಿತ**—ಭರತನಾಟ್ಯದ ಒಂದು ಬಗೆಯ ಹಸ್ತಭೇದ. ಹಸ್ತಗಳನ್ನು ತಿರುಗಿಸುವಾಗ ತರ್ಜನಿ ಮೊದಲಾದ ಬೆರಳುಗಳನ್ನು ಎದೆಯ ಕಡೆಗೆ ತಿರುಗಿಸಿಕೊಳ್ಳುವುದು ಅವೇಷ್ಟಿತ.

**ಅವಿದ್ಧವಕ್ತ್ರ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತ ಮುದ್ರೆ. ಅಂಸ ಕೂರ್ಪರ ಭುಜಾಗ್ರಗಳಲ್ಲಿ ಸುವಿಲಾಸವಾಗಿ ಆವರ್ತಿತವಾದ ಎರಡು ಪತಾಕ ಹಸ್ತಗಳ ಅಂಗೈಗಳು ಪರಾನ್ಮುಖವಾದರೆ ಅವಿದ್ಧ ವಕ್ತ್ರ ಹಸ್ತವೆನ್ನುತ್ತಾರೆ.

**ಅವರೋಹಣ ಕ್ರಮ**—ಶಬ್ದ ಪರಿಮಿತಿಯಲ್ಲಿ ಅವರೋಹಣವಾಗಿರುವ ಸ್ವರ ಸಮೂಹ.

**ಅವಲೋಕಿತ**—ಇದು ನಂದಿಕೇಶ್ವರನು ಭರತನಾಟ್ಯದಲ್ಲಿ ಹೇಳಿರುವ ಒಂದು ಮೂಲ ದೃಷ್ಟಿಭೇದ. ನೆರಳು, ವಿಚಾರ, ಪಠನ, ನಾಚಿಕೆ, ಕೇಳ್ಮೆ, ವಿನಯ ಮೊದಲಾದುವುಗಳನ್ನು ಸೂಚಿಸಲು ಉಪಯೋಗಿಸುವ ಕ್ರಿಯೆ. ಇದು ಕೆಳಗೆ ನೋಡುವ ದೃಷ್ಟಿ.

**ಅವಂಜಿ**—ಹಸುವಿನ ತೊಗಲಿನಿಂದ ಮುಚ್ಚಲ್ಪಟ್ಟಿರುವ ಅವನದ್ಧವಾದ್ಯ.

**ಅಸತಿ**—ಈ ರಾಗವು ೩೪ನೆಯ ಮೇಳಕರ್ತ ಧರ್ಮವತಿಯ ಒಂದು ಜನ್ಯ ರಾಗ.

ಆ: ಸ ಗ ಮ ದ ನಿ ಸ̇

ಅ: ಸ̇ ನಿ ದ ಮ ಗ ಸ

**ಅಸಾಧಾರಣ**—ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೩೩ ಸಂಕೀರ್ಣ ಸ್ಥಾಯಗಳಲ್ಲಿ ಒಂದು ಬಗೆಯ ಸ್ಥಾಯ.

**ಅಸಾವೇರಿ**—
ಆ: ಸ ರಿ ಮ ಪ ದ ಸ
ಅ: ಸ ನಿ ದ ಪ ಮ ಗ ರಿ ಸ
(ಸ ನೀ ಸ ಪ ದ ಮ ಪ ಮ ರಿ ಗಾ ರಿ ಸ)

ಈ ರಾಗವು ೮ನೆಯ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ. ಆರೋಹಣದಲ್ಲಿ ಗಾಂಧಾರ ನಿಷಾದಗಳು ವರ್ಜ್ಯವಾಗಿರುವ ಒಂದು ಪ್ರಾಚೀನ ರಾಗ. ಔಡವ ರಾಗ, ಭಾಷಾಂಗರಕ್ತಿರಾಗ, ಗಮಕವರಿಕ, ಸಾರ್ವಕಾಲಿಕರಾಗ. ಆರೋಹಣದಲ್ಲಿ ಚತುಶ್ರುತಿ ರಿಷಭವು ಸಮಯೋಚಿತವಾಗಿಯೂ, ಅವರೋಹಣದಲ್ಲಿ ಗಾಂಧಾರವು ಕಡಿಮೆಯಾಗಿರುವುದು. ಸಂಚಾರಗಳಲ್ಲಿ ಚತುಃಶ್ರುತಿ ರಿಷಭ ಮತ್ತು ಶುದ್ಧ ಗಾಂಧಾರ ಪ್ರಯೋಗಗಳುಂಟು. ಶೋಕರಸ ಪ್ರಧಾನವಾದ ರಾಗ, ತ್ಯಾಗರಾಜರ ' ರಾ ರಾಮ ಯಿಂಟಿದಾಕಾ ' (ಆದಿತಾಳ) ಮತ್ತು ಮುತ್ತುಸ್ವಾಮಿ ದೀಕ್ಷಿತರ ' ಚಂದ್ರಂ ಭಜ ಮಾನಸ ' (ಮತ್ಯತಾಳ) ಎಂಬ ಕೃತಿಗಳು ಈ ರಾಗದಲ್ಲಿ ಪ್ರಸಿದ್ಧವಾದ ರಚನೆಗಳು.

**ಅಸೂಯೆ**—ಇದು ಸಂಚಾರಿ ಭಾವಗಳಲ್ಲಿ ಒಂದು ವಿಧ. ವಿವಿಧ ಅಪರಾಧ, ದ್ವೇಷ, ಗುಣ ನಿರಸನ, ಈರ್ಷೆ, ಕ್ರೋಧ ಮುಂತಾದುವುಗಳಿಂದ ಉಂಟಾಗುವಂತಹ ಭಾವನೆ ಮತ್ತೊಬ್ಬರಲ್ಲಿರುವ ಸೌಭಾಗ್ಯ, ಬುದ್ಧಿ, ಐಶ್ವರ್ಯ, ಆರೋಗ್ಯ, ವಿಲಾಸ, ವಿದ್ಯೆ, ವಿಚಾರ, ವ್ಯವಹಾರಿಕ ರೀತಿ, ನೀತಿ, ನಡತೆ, ನಿಯಮ, ಶುಭ್ರತೆ, ಜ್ಞಾನ, ಅಲಂಕಾರ, ಅನುಕೂಲ, ಸೌಂದರ್ಯ ಮೊದಲಾದುವುಗಳನ್ನು ಕಂಡುಸಹಿಸಲಾಗದಿದ್ದಾಗ ಉಂಟಾಗುವ ಈರ್ಷಾಜನ್ಯಭಾವವೇ ಅಸೂಯೆ.

**ಅಸಂಕೀರ್ಣಸ್ಥಾಯಿ**—ರಾಗದ ಆಲಾಪನೆಗೆ ಸಂಬಂಧಿಸಿದ ೨೦ ಬಗೆಯ ಸ್ಥಾಯಿಗಳಲ್ಲಿ ಇದು ಒಂದು ಬಗೆಯ ಸ್ಥಾಯಿ

**ಅಸಂಬಾದ**—ಈ ರಾಗವು ೨೯ನೆಯ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.
ಆ: ಸ ರಿ ಸ ಮ ಪ ದ ನಿ ದ ಸ
ಅ: ಸ ನಿ ದ ಪ ಮ ಗ ಸ ರಿ ಸ

**ಅಸಂಪೂರ್ಣಮೇಳ**—ಸಂಪೂರ್ಣವಾಗಿ ಸಪ್ತ ಸ್ವರಗಳನ್ನೂ ಆರೋಹಣ ಮತ್ತು ಅವರೋಹಣಗಳಲ್ಲಿ ಹೊಂದಿಲ್ಲದಿರುವ ರಾಗ. ಅದು ಔಡವ ಅಥವಾ ಷಾಡವರಾಗವಾಗಿರುತ್ತದೆ ಕನಕಾಂಬರಿ–ಫೇನದ್ಯುತಿ ಮೇಳಪದ್ಧತಿಯಲ್ಲಿ ಅನೇಕ ಮೇಳಗಳು ಅಸಂಪೂರ್ಣವಾಗಿವೆ.

**ಅಸಂಪೂರ್ಣತಾನ**—ಸಪ್ತಸ್ವರಗಳೆಲ್ಲವೂ ಇಲ್ಲದಿರುವ ಸ್ವರಗುಚ್ಛ ಇಂತಹವುಗಳಲ್ಲಿ ೨, ೩, ೪, ೫ ಅಥವಾ ೬ ಸ್ವರಗಳಿರುತ್ತವೆ.

**ಅಸಂಯುಕ್ತ ಹಸ್ತಮುದ್ರೆಗಳು**—ಭರತನಾಟ್ಯದಲ್ಲಿ ಭಾವಾಭಿನಯಕ್ಕೆ ಅನುಕೂಲವಾಗುವಂತಹ ವಿವಿಧ ಅರ್ಥಗಳನ್ನು ಸೂಚಿಸುವ ಕೈ ಬೆರಳುಗಳ

ವಿಡಚುವಿಕೆಯುಳ್ಳ ಹಲವು ಹಸ್ತ ಮುದ್ರೆಗಳಿವೆ. ಈ ಹಸ್ತಭೇದಗಳಲ್ಲಿ ಎರಡು ವಿಧ–ಅಸಂಯುತ ಮತ್ತು ಸಂಯುತ ಹಸ್ತ ಭೇದಗಳು. ಒಂದು ಕೈಯಿಂದ ತೋರು ವಂತಹುದು ಅ ಸಂಯುತ ಇದರಲ್ಲಿ ಪತಾಕ, ತ್ರಿಪತಾಕ, ಅರ್ಧಪತಾಕ, ಕರ್ತರೀಮುಖ, ಮಯೂರ, ಅರ್ಧಚಂದ್ರ, ಅರಾಳ, ಶುಕತುಂಡ, ಮುಷ್ಟಿ, ಶಿಖರ, ಕಪಿತ್ಥ, ಕಟಕಾಮುಖ, ಸೂಚಿ, ಚಂದ್ರಕಲ, ಪದ್ಮಕೋಶ, ಸರ್ಪಶಿರ, ಮೃಗಶಿರ, ಸಿಂಹಮುಖ, ಕಾಂಗೂಲ, ಅಲಪದ್ಮ, ಚತುರ, ಭ್ರಮರ, ಹಂಸಾಸ್ಯ, ಹಂಸಪಕ್ಷ, ಸಂದಂಶ, ಮುಕುಳ, ತಾಮ್ರ ಚೂಡ, ತ್ರಿಶೂಲ ಎಂಬ ಇಪ್ಪತ್ತೆಂಟು ವಿಧಗಳಿವೆ

**ಅಶ್ವಕ್ರಾಂತ**—ಇದು ಪುರಾತನ ಷಡ್ಜಗ್ರಾಮದ ಗಾಂಧಾರ ಮೂರ್ಛನದ ಹೆಸರು ಇದು ಕರ್ಣಾಟಕ ಸಂಗೀತದ ಕಲ್ಯಾಣಿಮೇಳವನ್ನು ಹೋಲುತ್ತದೆ.

**ಅಶ್ವತಾನ**—ಇದು ಮನೋಧರ್ಮ ಸಂಗೀತದ ಒಂದು ಬಗೆಯ ತಾನ. ಇದ ರಲ್ಲಿ ಸಪ್ತಸ್ವರ ಸಮೂಹಗಳನ್ನು ಮುಖ್ಯವಾಗಿ ಬಳಸುವರು

**ಅಶ್ವರೂಢಾ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಪ್ರಮುಖವಾದ ವಸಂತರಾಗದ ಆರು ರಾಗಿಣಿಗಳಲ್ಲಿ ಒಂದು ರಾಗಿಣಿಯ ಹೆಸರು.

**ಅಶ್ವತಿ ತಿರುನಾಳ್** (೧೭೫೬–೧೭೮೮)—ತಿರುವಾಂಕೂರಿನ ರಾಜಮನೆತನಕ್ಕೆ ಸೇರಿದ ಅಶ್ವತಿ ತಿರುನಾಳ್ ಸಂಸ್ಕೃತ ವಿದ್ವಾಂಸರಾಗಿದ್ದರು. ಇವರು ಹಲವಾರು ಕೀರ್ತನೆಗಳನ್ನು ರಚಿಸಿದರು. ಈ ಕೀರ್ತನೆಗಳನ್ನು ಇಂದಿಗೂ ತಿರುವನಂತಪುರದ ಪದ್ಮನಾಭಸ್ವಾಮಿ ದೇವಾಲಯದಲ್ಲಿ ಹಾಡುತ್ತಾರೆ ಇವರ ಕಾಲದಿಂದ ತಿರುವಾಂಕೂರಿನಲ್ಲಿ ಸಂಗೀತವು ಅಭಿವೃದ್ಧಿಯಾಗಲು ತೊಡಗಿತು.

**ಅಶ್ವಿನೀ ದೇವತೆಗಳು**—ಭರತನಾಟ್ಯಾಭಿನಯದಲ್ಲಿ ಎರಡು ಕೈಯಲ್ಲಿ ಪದ್ಮ ಕೋಶ ಹಸ್ತವನ್ನು ಹಿಡಿದು ಎಡಗೈಯಲ್ಲಿ ತ್ರಿಪತಾಕ ಮತ್ತು ಬಲಗೈಯಲ್ಲಿ ಅರ್ಧ ಪತಾಕವನ್ನು ಹಿಡಿದು ಅದನ್ನು ಭೂಮುಖವಾಗಿರಿಸಿ, ಬಳಿಕ ಆ ಬಲಗೈಯನ್ನು ಪಕ್ಕೆಲಬುಗಳ ಎದುರು ಬರುವಂತೆ ತಂದು, ಅದರಲ್ಲಿ ಮುಕುಳಹಸ್ತವನ್ನು ಹಿಡಿದರೆ ಅದು ಅಶ್ವಿನೀ ದೇವತೆಗಳಿಗೆ ಸಲ್ಲುತ್ತದೆ ಎರಡು ಕೈಗಳಲ್ಲಿರಬೇಕಾದ ಪದ್ಮಕೋಶ ಹಸ್ತಗಳು ಅಮೃತಮಯವಾದ ಆರೋಗ್ಯಸೂಚಕ. ಎಡಗೈಯ ತ್ರಿಪತಾಕವು ತೇಜ ಸೂಚಕ. ಮೃಗಶೀರ್ಷ ಹಸ್ತವು ಶಕ್ತಿ ಮತ್ತು ಉಲ್ಲಾಸ ಸೂಚಕ. ಅರ್ಧಪತಾಕಾದಿಗಳು ಭೂಮುಖವಾಗುವುದು ವ್ಯಾಧಿ ಸೂಚಕ. ಪಕ್ಕೆಲಬುಗಳ ಎದುರು ಸುಳಿ ಬೀಳುವ ಹಸ್ತವು ಶಸ್ತ್ರ ಕ್ರಿಯಾದಿಗಳ ಸೂಚಕ. ಅಲ್ಲಿಂದ ಮುಕುಳ ಹಸ್ತವಾಗುವುದು ಬಲೀಹರಣ ಅಥವಾ ನೂತನಾವತರಣಾದಿಗಳ ಸೂಚಕ. ಈ ರೀತಿ ಹಸ್ತ ಮುದ್ರೆಗಳ ವ್ಯಾಪ್ತಿ ಬಹುಮುಖ.

**ಅಶ್ರು**—ಜೀವನದಲ್ಲಿ ಕಣ್ಣೀರಿಡುವ ಅನೇಕ ಸಂದರ್ಭಗಳು ಅನೇಕ ರೀತಿಗಳಲ್ಲಿ ಒದಗಿ ಬರುತ್ತವೆ. ನೆನಪು, ಚಿಂತೆ, ವೇದನೆ, ಆನಂದ, ಅರ್ಪಣೆ,

ಆಶಯ, ಆಸೆ, ಕ್ರೋಧ, ರೋಷ, ಮರಣ, ವ್ಯಾಧಿ ಮೊದಲಾದ ಅನೇಕ ಸಂದರ್ಭಗಳಲ್ಲಿ, ಬೇಕು ಬೇಡಗಳಲ್ಲಿಯೂ ಕೂಡ ಕಣ್ಣೀರಿಡುವುದುಂಟು. ಇದಕ್ಕೆ ಅಶ್ರುವೆಂದು ಹೆಸರು. ಇವು ಸಾತ್ವಿಕ ಭಾವವಿಭೇದಗಳು.

**ಅಹೋಬಲ** (೧೭ನೆ ಶ)—ಅಹೋಬಲನು ಸಂಗೀತ ಪಾರಿಜಾತವೆಂಬ ಗ್ರಂಥವನ್ನು ಸು. ೧೬೫೦ರಲ್ಲಿ ರಚಿಸಿದನು. ಇವನ ತಂದೆಯ ಹೆಸರು ಶ್ರೀ ಕೃಷ್ಣ. ಇವನು ದಕ್ಷಿಣ ಭಾರತೀಯನೆಂದೂ, ಉತ್ತರ ಭಾರತಕ್ಕೆ ಹೋಗಿ ನೆಲೆಸಿದನೆಂದೂ ಹೇಳುವರು. ವೀಣೆಯ ತಂತಿಯ ಉದ್ದವನ್ನು ಅನುಸರಿಸಿ ಸ್ವರಗಳನ್ನು ವಿವರಿಸಿರುವ ಲಾಕ್ಷಣಿಕರಲ್ಲಿ ಇವನೇ ಮೊದಲಿಗನು. ಇವನು ಬರೆದಿರುವ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವ ಹಿಂದೂಸ್ಥಾನಿ ಸಂಗೀತಕ್ಕೆ ಸಂಬಂಧಿಸಿದ ಒಂದು ಚಿಕ್ಕ ಗ್ರಂಥ.

**ಅಂಕ**—ಇದು ೯ನೆಯ ಸ್ವರಸ್ಥಾನವಾದ ಶುದ್ಧ ಧೈವತವನ್ನು ಸೂಚಿಸುವ ಸಂಜ್ಞಾ ಸೂಚಕಪದ. ಇದು ೯ನೆ ಸಂಖ್ಯೆಯನ್ನು ಸೂಚಿಸುತ್ತದೆ. ಸ್ವರಾರ್ಣವವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಅಂಕಣ್ಣನ್**—ಇವನು ೨೦ನೆ ಶತಮಾನದ ಆದಿಭಾಗದಲ್ಲಿದ್ದ ತಮಿಳುನಾಡಿನ ತಂಜಾವೂರಿನ ಒಬ್ಬ ಪ್ರಖ್ಯಾತ ಮೃದಂಗ ವಿದ್ವಾಂಸ.

**ಅಂಕೀ**—ಉದ್ದವಾಗಿ ಹಾಗೂ ಸಣ್ಣದಾಗಿರುವ ಒಂದು ಚರ್ಮವಾದ್ಯ.

**ಅಂಕಿಯಗೀತಗಳು**—ಅಸ್ಸಾಂ ರಾಜ್ಯದ ನಾಟಕಗಳಲ್ಲಿ ಬರುವ ಕಥಾಗೀತಗಳು.

**ಅಂಕುರ**—(೧) ಭರತಮುನಿಯು ಹೇಳಿರುವ ಆಂಗಿಕಾಭಿನಯದ ಆರು ವಿಧಗಳಲ್ಲಿ ಇದೊಂದು ಬಗೆಯ ಅಭಿನಯ. ವಾಕ್ಯದಲ್ಲಿ ಸೇರಿರುವ ವಸ್ತುವನ್ನು ಅಥವಾ ವಿಷಯವನ್ನು ಆಂಗಿಕಾಭಿನಯದಿಂದ ಚಮತ್ಕಾರವಾಗಿ ವ್ಯಕ್ತಪಡಿಸುವುದು.

**ಅಂಗ**—ಸಂಗೀತ ರಚನೆಯ ಒಂದು ಭಾಗಕ್ಕೆ ಅಂಗವೆಂದು ಹೆಸರು. ಕೃತಿಯಲ್ಲಿ ಪಲ್ಲವಿ, ಅನುಪಲ್ಲವಿ, ಚರಣವೆಂಬ ಮೂರು ಅಂಗಗಳಿವೆ. ಸಪ್ತಸ್ವರಗಳಲ್ಲಿ ಮೊದಲಿನ ನಾಲ್ಕು ಸ್ವರಗಳಾದ 'ಸರಿಗಮ'ವು ಪೂರ್ವಾಂಗ. ನಂತರದ 'ಪದನಿಸ'ವು ಉತ್ತರಾಂಗ.

(೨) ತಾಳದ ಕ್ರಿಯೆಗಳಿಗೆ ಅಂಗಗಳೆಂದು ಹೆಸರು.

(೩) ಭರತನಾಟ್ಯಶಾಸ್ತ್ರದಂತೆ ತಲೆ, ಹಸ್ತ, ಎದೆ, ಪಕ್ಕೆಗಳು, ಪೃಷ್ಠ, ಪಾದಗಳು—ಈ ಆರನ್ನು ಅಂಗಗಳೆಂದು ಕರೆಯಲಾಗಿದೆ.

**ಅಂಗತಾಳ**—ಭರತನಾಟ್ಯಶಾಸ್ತಿರಂ ಎಂಬ ೧೭ನೆ ಶತಮಾನದ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ ವಿಶೇಷ.

**ಅಂಗತಾಳಗಳು**—ಪುರಾತನ ಕಾಲದ ೧೦೮ ತಾಳಗಳ ಹೆಸರು.

**ಅಂಗಷ್ಪೈಕಿನ್ನರಿ**—ಕಮಾನಿನಿಂದ ನುಡಿಸಲ್ಪಡುವ ಏಕ ತಂತಿಯ ಒಂದು ಗ್ರಾಮೀಣವಾದ್ಯ. ತೆಂಗಿನ ಅರ್ಧಕರಟ ಒಂದರ ಮೇಲೆ ಚರ್ಮವನ್ನು ಎಳೆದು

ಕಟ್ಟಲಾಗಿದೆ ಒಂದು ಬಿದುರಿನ ಕೋಲನ್ನು ಬೆರಳುಗಳಿಂದ ನುಡಿಸುವ ಸಲವಾಗಿ ಈ ಕರಟಕ್ಕೆ ಕಟ್ಟಲಾಗಿದೆ. ಪಿಟೀಲನ್ನು ನುಡಿಸುವಂತೆ ಇದನ್ನು ನುಡಿಸುತ್ತಾರೆ. ಕರಟವನ್ನು ಮುಚ್ಚಿರುವ ಚರ್ಮದ ಮಧ್ಯ ಭಾಗದಲ್ಲಿ ಕುದುರೆಯನ್ನು ಸೇರಿಸಲಾಗಿದೆ. ಇದು ತುಂಡಾಗಿರುವ ವಾದ್ಯವಾದುದರಿಂದ ಇದರ ಶ್ರುತಿಯು ತೀವ್ರ. ಇದಕ್ಕೆ ರಾವಣಹಸ್ತವೆಂಬ ಹೆಸರಿತ್ತು.

ಇದು ಭರತ ನಾಟ್ಯದ ನವಗ್ರಹ ಹಸ್ತಗಳಲ್ಲಿ ಒಂದು ಹಸ್ತಭೇದ. ಎಡಗೈಯಲ್ಲಿ ಸೂಚೀ ಹಸ್ತವನ್ನೂ, ಬಲಗೈಯಲ್ಲಿ ಮುಷ್ಟಿ ಹಸ್ತವನ್ನೂ ಪ್ರದರ್ಶಿಸುವುದು ಅಂಗಾರಕ ಹಸ್ತವೆನಿಸುತ್ತದೆ.

**ಅಂಗಲತಾ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ನಿ ಸ

ಅ: ಸ ದ ಮ ಗ ರಿ ಮ ಗ ಸ

**ಅಂಗಲಕ್ಷಣ**—ನಾಟ್ಯಕಲೆಯ ಸ್ವರೂಪವನ್ನು ಪ್ರದರ್ಶಿಸುವುದರಲ್ಲಿ ಅಂಗ ಲಕ್ಷಣಗಳ ಪಾತ್ರ ಪ್ರಮುಖವಾದುದು. ಇವುಗಳ ನಿರ್ದಿಷ್ಟ ಸ್ವರೂಪವೇ ಕಲೆಯ ಶಾಸ್ತ್ರೀಯ ಅಂಶಗಳು. ಭರತನಾಟ್ಯವನ್ನು ನೋಡಿ, ಅದರ ನತ್ವನನ್ನು ತಿಳಿದು ಕೊಳ್ಳುವವರಿಗೆ ಮತ್ತು ಅಭ್ಯಾಸಿಗಳಿಗೆ ಇದು ಅಗತ್ಯ. ಮುಖ್ಯವಾದ ಅಂಶಗಳಾವು ವೆಂದರೆ—

(೧) ಮುಖಲಕ್ಷಣಗಳು (೨) ಮುಖರಾಗಗಳು (೩) ಭೂಪುಟತಾರಾ ಕರ್ಮಗಳು (೪) ನಾಸಿಕ, ಗಂಡ, ಅಧರು ಚಿಬುಕ ಭೇದಗಳು (೫) ದೃಷ್ಟಿಭೇದಗಳು (೬) ಶಿರೋ ಭೇದಗಳು (೭) ಗ್ರೀವಾ ಭೇದಗಳು (೮) ಎದೆ, ಪಾರ್ಶ್ವ, ಸೊಂಟ, ತೊಡೆ, ಮೊಳಕಾಲು, ಪಾದ ಭೇದಗಳು ಮತ್ತು ಅಂಗ ಭಂಗಿಯ ಭೇದಗಳು.

**ಅಂಗಹಾರಿ** —ಹಾವಭಾವಗಳು, ರಂಗ ಸ್ಥಳ, ನಾಟ್ಯಮಂದಿರ

**ಅಂಗುರು**—ಈ ರಾಗವು ೭ನೆಯ ಮೇಳಕರ್ತ ಸೇನಾಪತಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

**ಅಂಗುಳಿಸ್ಥಾನ**—ಬೆರಳುಗಳಿಂದ ನುಡಿಸುವ ಸಂಗೀತ ವಾದ್ಯದ ಭಾಗ.

**ಅಂಘ್ರಿ**—ಮತಂಗನ 'ಬೃಹದ್ದೇಶಿ' ಎಂಬ ಸಂಗೀತ ಶಾಸ್ತ್ರಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಅಂಚಿತ**—ಭರತನಾಟ್ಯದ ಗ್ರೀವಾ ಭೇದಗಳು. ಅಂದರೆ ಕತ್ತಿನ ಚಲನೆಯಲ್ಲಿ ಒಂದು ವಿಧ. ಭರತಮುನಿಯು ಹೇಳಿರುವಂತೆ ಈ ಭೇದಗಳು ಒಂಭತ್ತು ವಿಧ.

ಅಂಚಿತವೆಂದರೆ ಅಹಿತ, ನಡೆ, ನೋಡುವುದು ಮೊದಲಾದುವನ್ನು ಸೂಚಿಸಲು, ತಲೆಯೊಂದಿಗೆ ಹಿಂದಕ್ಕೆ ಕತ್ತನ್ನು ತಿರುಗಿಸಿ ಮುಖ ತೋರದಿರುವ ಕ್ರಿಯೆ.

**ಅಂಜಲಿಹಸ್ತ**—ಭರತ ಮುನಿಯು ಹೇಳಿರುವ ಒಂದು ಬಗೆಯ ಸಂಯುತ ಹಸ್ತಮುದ್ರೆ. ಎರಡು ಪತಾಕಹಸ್ತಗಳು ಅಭಿಮುಖವಾಗಿ ಕೂಡುವುದರಿಂದ ಉಂಟಾಗುವ ಹಸ್ತಮುದ್ರೆ. ದೇವತೆಗಳಿಗೆ, ಗುರುಗಳಿಗೆ, ಮಿತ್ರರಿಗೆ ಮಾಡುವ ಅಭಿವಾದನದಲ್ಲಿ ಉಪಯೋಗಿಸಲಾಗುತ್ತದೆ. ದೇವತಾವಂದನೆಯಲ್ಲಿ ತಲೆಯ ಮೇಲ್ಭಾಗದಲ್ಲೂ, ಗುರುವಂದನೆಯಲ್ಲಿ ಮುಖದ ಎದುರಿನಲ್ಲೂ, ಮಿತ್ರವಂದನೆಯಲ್ಲಿ ಎದೆಯ ಮುಂಭಾಗದಲ್ಲೂ ಈ ಹಸ್ತಮುದ್ರೆಯನ್ನು ಉಪಯೋಗಿಸಬೇಕು.

**ಅಜಂತ ಗುಹೆಗಳು** —ಆಂಧ್ರ ಪ್ರದೇಶದ ವಾಯುವ್ಯದ ಗಡಿಯಲ್ಲಿ ಔರಂಗಾಬಾದಿನ ಸಮೀಪದಲ್ಲಿ ಅಜಂತ ಗುಡ್ಡಗಳಿವೆ. ಇಲ್ಲಿ ವಾಘೋರ ಎಂಬ ಸಣ್ಣನದಿ ಹರಿಯುತ್ತದೆ. ಈ ಗುಡ್ಡಗಳಿಗೆ ಈಶಾನ್ಯದಲ್ಲಿ ಸುಮಾರು ಒಂದೂವರೆ ಸಾವಿರ ವರ್ಷಗಳ ಹಿಂದೆ ವಿದರ್ಭ ರಾಜ್ಯಕ್ಕೆ ಸೇರಿದ ಇಂದು ಕಾಂತವೆಂಬ ಪಟ್ಟಣವೊಂದು ಇದ್ದಿತೆಂದು ಚರಿತ್ರಕಾರರು ಹೇಳುತ್ತಾರೆ. ಇಲ್ಲಿಗೆ ಬರುತ್ತಿದ್ದ ಬೌದ್ಧ ಸಂನ್ಯಾಸಿಗಳು ಮನಶ್ಶಾಂತಿಗೂ ತಪಸ್ಸಿಗೂ ಅನುಕೂಲಿಸುವಂತೆ ನಿರ್ಜನವಾದ, ಸುಂದರವಾದ ಶಾಂತವಾದ ಕೆಲವು ಗುಹೆಗಳಲ್ಲಿ ವಾಸಿಸುತ್ತಿದ್ದರು. ಸಂನ್ಯಾಸಿಗಳ ಸಂಖ್ಯೆ ಹೆಚ್ಚಿದಂತೆಲ್ಲಾ ಗವಿಗಳನ್ನು ಕೊರೆಯುತ್ತಿದ್ದರು. ಹೀಗೆ ಅಜಂತದಲ್ಲಿ ೨೯ ಗವಿಗಳು ಕೊರೆಯಲ್ಪಟ್ಟಿವೆ. ಇವು ಪ್ರಾಚೀನ ಭಾರತದ ಕಲಾ ಕೇಂದ್ರವಾದುವು. ಇವುಗಳ ಕಾಲ ಸುಮಾರು ಕ್ರಿ.ಪೂ. ೨೦೦ ರಿಂದ ಕ್ರಿ.ಶ. ೬೦೦ರವರೆಗೆ. ಇಲ್ಲಿ ಈಗ ಆರು ಗವಿಗಳಲ್ಲಿ ಮಾತ್ರ ಚಿತ್ರಗಳು ಉಳಿದು ಕೊಂಡಿವೆ. ಇವೆಲ್ಲಾ ಬೇರೆ ಬೇರೆ ಕಾಲದವು. ಅಜಂತ ಚಿತ್ರ ಕಲೆಯು ಭಾರತೀಯ ಹೃದಯದಿಂದ ಜನಿಸಿದುದು. ಭಾರತೀಯರ ಅತಿಶ್ಲಾಘ್ಯರಾದ ಮನೋಭಾವವನ್ನು ನಿರೂಪಿಸುತ್ತದೆ. ಇವುಗಳ ಪ್ರಧಾನ ಭಾವವು ವೈರಾಗ್ಯ. ಮನುಷ್ಯರ ಕಲೆಗಳ ಇತಿಹಾಸದಲ್ಲಿ ಇವಕ್ಕೆ ಉನ್ನತ ಸ್ಥಾನವು ಸಹಜವಾಗಿ ದೊರೆತಿದೆ ಮೊದಲನೆಯ ಗುಹೆಯ ಚಿತ್ರ ಒಂದರಲ್ಲಿ ಒಬ್ಬ ದೇವಲೋಕದ ಸಂಗೀತಗಾರನು ಮ್ಯಾಂಡೊಲಿನ್ ವಾದ್ಯವನ್ನು ಹೋಲುವ ಒಂದು ತಂತೀ ವಾದ್ಯವನ್ನು ನುಡಿಸುತ್ತಿದ್ದಾನೆ. ಬುದ್ಧನ ತ್ಯಾಗದ ದೃಶ್ಯವಿರುವ ಚಿತ್ರ ಒಂದರಲ್ಲಿ ಕೊಳಲುಗಳನ್ನು ನುಡಿಸುತ್ತಿರುವ ಕೂಟಚಿತ್ರವಿದೆ. ಈ ಕೊಳಲುಗಳನ್ನು ವಾದಕನ ಬಲಗಡೆಗೆ ಹಿಡಿದಿರುವುದು ಕಂಡು ಬರುತ್ತದೆ. ಈ ಗುಹೆಯ ಹೊರ ಭಾಗದಲ್ಲಿ ಪುರಾತನ ವಾದ್ಯವಾದ ಯಾಳ್‌ನ ಒಂದು ಚಿತ್ರವಿದೆ.

ಎರಡನೆಯ ಗುಹೆಯಲ್ಲಿ ಪ್ರಸಿದ್ಧ ನೃತ್ಯ ಒಂದರ ದೃಶ್ಯವಿದೆ. ನಾಟ್ಯಗಾರರ ತೆಳುವಾದ ಉಡುಪು ಗಮನಾರ್ಹ ಪಕ್ಕವಾದ್ಯಗಾರರಾದ ಸ್ತ್ರೀಯರು ತಬಲ, ಬಾಯಾ, ಮೃದಂಗ, ಶಂಖ ಮತ್ತು ಕೊಳಲನ್ನು ನುಡಿಸುತ್ತಿದ್ದಾರೆ. ಯುದ್ಧದ ನಗಾರಿಯ ಚಿತ್ರವೂ ಈ ಗುಹೆಯಲ್ಲಿದೆ. ೧೭ನೆಯ ಗವಿಯಲ್ಲಿ ಅರಮನೆಯ

ದೃಶ್ಯವಿದೆ. ಒಂದು ದೊಡ್ಡ ಮದ್ದಲೆ, ಕಮಾನಿನಿಂದ ತಂತೀವಾದ್ಯ ಒಂದನ್ನು ನುಡಿಸುತ್ತಿರುವ ಸ್ತ್ರೀ, ಬಲಗೈಯಿಂದ ಕೊಳಲು ನುಡಿಸುತ್ತಿರುವ ಒಬ್ಬ ಸ್ತ್ರೀಯ ಚಿತ್ರವಿದೆ. ೧೭ನೆ ಗುಹೆಯಲ್ಲಿ ಹಲವು ಚರ್ಮವಾದ್ಯಗಳ ಚಿತ್ರವಿದೆ ಇಲ್ಲಿಯ ಚಿತ್ರಗಳಲ್ಲಿ ಒಂದೊಂದು ವ್ಯಕ್ತಿಯೂ ಸ್ವಭಾವ ಸುಂದರವಾಗಿ ಕಾಣುವುದಲ್ಲದೆ, ಲಾಲಿತ್ಯ ಸೌಂದರ್ಯಭಾವಗಳಿಂದ ತುಂಬಿ, ಒಟ್ಟು ಚಿತ್ರದ ರಸಭಾವಗಳೂ ಸ್ಪಷ್ಟವಾಗಿ ಪ್ರಕಟವಾಗಿವೆ.

**ಅಂಗಾರಕ**—(೧) ನವಗ್ರಹಗಳಲ್ಲಿ ಮೂರನೆಯ ಗ್ರಹ. ಕರ್ಣಾಟಕ ಸಂಗೀತದ ತ್ರಿರತ್ನರಲ್ಲಿ ಒಬ್ಬರಾದ ಮುತ್ತುಸ್ವಾಮಿ ದೀಕ್ಷಿತರು ಸುರಟಿರಾಗದಲ್ಲಿ ಅಂಗಾರಕ ಗ್ರಹವನ್ನು ಕುರಿತು ಅಂಗಾರಕಮಾಶ್ರಯಾಮ್ಯಹಂ ಎಂಬ ಕೃತಿಯನ್ನು ರಚಿಸಿದ್ದಾರೆ. ಮಂಗಳವಾರವೆಂಬ ಹೆಸರಿದ್ದರೂ ಅದು ಅಮಂಗಳವಾರ. ಅಂದು ಯಾವ ಶುಭಕಾರ್ಯವನ್ನೂ ಮಾಡುವುದಿಲ್ಲ ಮಂಗಳ ಗ್ರಹವನ್ನು ಕುರಿತು ಸುರಟಿರಾಗದಲ್ಲಿ ಕೃತಿ ರಚನೆ ಮಾಡಿರುವುದು ಅತ್ಯಂತ ಸೂಕ್ತವಾಗಿದೆ. ಮಂಗಳವನ್ನು ಸುರಟಿರಾಗದಲ್ಲಿ ಹಾಡುವುದು ರೂಢಿಯಲ್ಲಿದ್ದರೂ ಒಂದು ದೃಷ್ಟಿಯಲ್ಲಿ ಇದು ಅಮಂಗಳ. ಏಕೆಂದರೆ ಗುರುವು ತನ್ನ ಶಿಷ್ಯನಿಗೆ ಈ ರಾಗವನ್ನು ಹೇಳಿ ಕೊಡುವುದಿಲ್ಲ ಇದೊಂದು ಸಂಪ್ರದಾಯವು ಹಿಂದಿನಿಂದ ಬಂದಿದೆ. ಮಂಗಳವೂ ಅಮಂಗಳವೂ ಆದ ರಾಗವನ್ನು ಮಂಗಳವೆಂಬ ಹೆಸರಿದ್ದರೂ ಅಮಂಗಳಕರವಾದ ಗ್ರಹವನ್ನು ಕುರಿತು ಕೃತಿ ರಚನೆ ಮಾಡಲು ಬಳಸಿರುವುದು ದೀಕ್ಷಿತರ ಸಂಗೀತ ಪ್ರತಿಭೆಯ ಪ್ರತೀಕ. ಮೂರನೆಯ ಗ್ರಹವನ್ನು ಕುರಿತ ಕೃತಿಗೆ ೩ನೆಯ ತಾಳವಾದ ರೂಪಕ ತಾಳವನ್ನು ಬಳಸಿರುವುದು ಗಮನಾರ್ಹ. ಅಭಂಗಿ, ತ್ರಿಭಂಗಿ, ಅತಿಭಂಗಿ ಎಂಬ ನಾಲ್ಕುವಿಧಗಳೂ, ಇವುಗಳಲ್ಲಿ ನೃತ್ತಾಂಗ, ದೇವತಾ, ಮಾನವಿಕ ಮತ್ತು ಪ್ರಾಕೃತಿಕ ಎಂಬ ನಾಲ್ಕು ವಿಭೇದಗಳಿವೆ.

**ಅಂಗರಚನೆ**—ಭರತನಾಟ್ಯದಲ್ಲಿ ಅಂಗರಚನೆಯೆಂದರೆ ಬಣ್ಣಬಣ್ಣದ ಕೆಲಸ. ಇವರಲ್ಲಿ ಬಿಳಿ, ನೀಲಿ, ಹಳದಿ, ಕೆಂಪು ಬಣ್ಣಗಳು ಸ್ವಭಾವಜ ಅಥವಾ ಸಹಜ ಸ್ವಭಾವದವು. ವಿವಿಧ ಬಣ್ಣಗಳ ಸಂಯೋಗದಿಂದುಂಟಾಗುವ ಮಿಶ್ರ ಬಣ್ಣಗಳಾದ ಹಸಿರು, ನಸುಗೆಂಪು, ಕಾಷಾಯ ವರ್ಣ ಮುಂತಾದುವುಗಳು ಸಂಯೋಗಜವು. ಮೂರುನಾಲ್ಕು ರೀತಿಯ ಬಣ್ಣಗಳಿಂದ ವಿವಿಧ ರೀತಿಯಲ್ಲಿ ವಿವಿಧಾಂಶಗಳಿಂದ ಅಂಗ ವರ್ತನವನ್ನಾಗಿಸುವುದು ಉಪವರ್ಣ. ಸಹಜವಾದ ರೂಪವನ್ನು ವ್ಯತ್ಯಾಸಗೊಳಿಸಿ, ತಮಗೆ ಬೇಕಾದಂತೆ ವ್ಯಕ್ತಿಗತವಾದ ಆಕಾರವನ್ನು ಪರಿವರ್ತಿಸುವ ಅದ್ಭುತ ಕಲೆಯು ಅಂಗರಚನೆ.

**ಅಂಬಾಮನೋಹರಿ**—ಈ ರಾಗವು ೨೩ನೆಯ ಮೇಳಕರ್ತ ಗೌರೀ ಮನೋಹರಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ನಿ ಸ

ಅ : ಸ ನಿ ದ ಮ ಗ ರಿ ಸ

**ಅಂಬಾರಿಯಂ**—೧೯ನೆ ಶತಮಾನದ ಆದಿಯಲ್ಲಿದ್ದ ಒಬ್ಬ ಪ್ರಸಿದ್ಧ ಪಿಟೀಲು ವಿದ್ವಾಂಸರು. ಪೈದಾಳ ಗುರುಮೂರ್ತಿ ಶಾಸ್ತ್ರಿಗಳು ಇವರ ವಿಶೇಷ ಪ್ರಾವೀಣ್ಯಕ್ಕೆ ಮಾರು ಹೋಗಿ ಮರಿಸಿಂಹ ಎಂಬ ಬಿರುದನ್ನಿತ್ತರು. ಇವರ ಐದು ಮಂದಿ ಪುತ್ರರೂ ಸಂಗೀತ ವಿದ್ವಾಂಸರಾಗಿದ್ದರು. ಹಿರಿಯ ಮಗ ಅಪ್ಪುಕ್ಕುಟ್ಟಿ ಪಿಟೀಲು ವಿದ್ವಾಂಸರಾಗಿದ್ದರು.

**ಅಂಭಣ**—ವೇದಯುಗದಲ್ಲಿದ್ದ ವೀಣೆಯ ಅನುರಣನ ಭಾಗದ ಹೆಸರು.

**ಅಂಭೋಗಿನಿ** ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ಸ

ಅ : ಸ ದ ಮ ಗ ರಿ ಸ

**ಅಂಭೋರುಹ**—ಈ ರಾಗವು ೪೪ನೆಯ ಮೇಳಕರ್ತ ಭವಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಗ ಪ ದ ನಿ ಸ

ಅ : ಸ ನಿ ಪ ದ ಮ ಗ ರಿ ಸ

**ಅಂಬುಜನಾಭ**—ಸ್ವಾತಿ ತಿರುನಾಳ್ ಮಹಾರಾಜರ ಕೃತಿಗಳಲ್ಲಿ ಕಂಡು ಬರುವ ಒಂದು ಪರ್ಯಾಯ ಮುದ್ರೆ.

**ಅಂಬಾಹೇರಿ**—ಈ ರಾಗವು ಟಕ್ಕರಾಗದ ಒಂದು ಭಾಷಾರಾಗವೆಂದು ಸಂಗೀತ ರತ್ನಾಕರದಲ್ಲಿ ಉಕ್ತವಾಗಿದೆ.

**ಅಂಬಾಹೇರಿಕಾ**—ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೨೧ ಟಕ್ಕ ಭಾಷೆಗಳಲ್ಲಿ ಒಂದು.

**ಅಂತರಾ**—ಹಿಂದೂಸ್ತಾನಿ ರಾಗದ ಎರಡನೆಯ ಭಾಗ.

**ಅಂತರಭಾಷಾ**—ಮಾರ್ಗ ಸಂಗೀತದ ಒಂದು ರಾಗ ವಿಶೇಷ. ಇದು ‘ ಸಂಗೀತ ರತ್ನಾಕರ ’ವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಅಂತರ ಭಾಷಾ ಭಾಷಾ ವಲಿತ**—ಸಂಗೀತ ರತ್ನಾಕರದಲ್ಲಿ ಉಕ್ತವಾಗಿರುವ, ಈಗ ರೂಢಿಯಲ್ಲಿಲ್ಲದಿರುವ ರಾಗ.

**ಅಂತರ ಭಾಷಾ ಕಿರಣಾವಳಿ**—ಈ ರಾಗವು ಒಂದು ಬಗೆಯ ಕಿರಣಾವಳಿ ರಾಗ. ‘ ಸಂಗೀತ ರತ್ನಾಕರ ’ದಲ್ಲಿ ಉಕ್ತವಾಗಿದೆ.

**ಅಂತರ ಭಾಷಾ ಶಾಕಾ ವಲಿತ**—ಸಂಗೀತ ರತ್ನಾಕರದಲ್ಲಿ ಉಕ್ತವಾಗಿರುವ ಈಗ ಪ್ರಚಲಿತವಿಲ್ಲದಿರುವ ಒಂದು ರಾಗ.

**ಅಂತರಧ್ರುವ**—ನಾಟಕಗಳಲ್ಲಿ ಹಾಡಲ್ಪಡುವ ಒಂದು ಬಗೆಯ ಹಾಡು ಅಥವಾ ಧ್ರುವ.

**ಅಂತರದುಂದುಭಿ**—ದೇವಲೋಕದ ನಗಾರಿ.

**ಅಂತರಕ್ರೀಡ**—ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ತಾಳ ವಿಶೇಷ. ಮೂರುದ್ರುತ ಮತ್ತು ಒಂದು ಅನುದ್ರುತವನ್ನು ಹೊಂದಿದೆ. ಒಂದು ಆವರ್ತಕ್ಕೆ ೭ ಅಕ್ಷರಗಳಕಾಲ ಅಥವಾ 1¾ ಮಾತ್ರೆಗಳ ಕಾಲ

**ಅಂತರಮಾರ್ಗ**—ಇದು ರಾಗದ ತ್ರಯೋದಶ ಲಕ್ಷಣಗಳಲ್ಲಿ ಒಂದು ಲಕ್ಷಣ. ರಾಗದಲ್ಲಿ ಅನ್ಯಸ್ವರವನ್ನು ಸೇರಿಸುವುದು ಅಥವಾ ಬೇರೊಂದು ರಾಗದ ಛಾಯೆಯನ್ನು ಮುಖ್ಯರಾಗದ ಚೌಕಟ್ಟಿನಲ್ಲಿ ಉಂಟು ಮಾಡುವುದಕ್ಕೆ ಅಂತರಮಾರ್ಗವೆಂದು ಹೆಸರು. ಹೀಗೆ ಮಾಡಲು ಕೆಲವು ರಾಗಗಳಲ್ಲಿ ಮಾತ್ರ ಸಾಧ್ಯ. ಇದು ಶಾಸ್ತ್ರೀಯವಾಗಿರಬೇಕು ಮತ್ತು ಕೇಳಲು ರಂಜಕವಾಗಿದ್ದು ಮೂಲರಾಗದ ಸ್ವರೂಪವನ್ನು ಕೆಡಿಸದಂತಿರಬೇಕು.

**ಅಂತರವಾಹಿನಿ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ರಿ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಅಂತರಿ**—(೧) ಶಿಲಪ್ಪದಿಕಾರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಚರ್ಮವಾದ್ಯ.

(೨) ಗೀತದ ಎರಡು ಭಾಗಗಳನ್ನು ಸೇರಿಸುವ ಸಂಗೀತ ಭಾಗಕ್ಕೆ ಅಂತರಿ ಎಂದು ಹೆಸರು ರಾಗಾಂಗರಾಗ ಲಕ್ಷಣಗೀತದಲ್ಲಿ ಅಂತರಿಯು ಸೂತ್ರಖಂಡ ಮತ್ತು ಉಪಾಂಗಖಂಡಗಳ ನಡುವೆ, ಭಾಷಾಂಗಖಂಡಕ್ಕೆ ಮೊದಲು ಬರುತ್ತದೆ. ಉದಾ: ರವಿಕೋಟಿತೇಜಎಂಬ ಮಾಯಾಮಾಳವ ರಾಗದ ಲಕ್ಷಣಗೀತೆಯಲ್ಲಿ ನೋಡಬಹುದು. ಕೆಲವು ಗೀತೆಗಳಲ್ಲಿ ಅಂತರಿಯು ಪುನರಾವರ್ತವಾಗಿರುವುದುಂಟು. ಇವರ ಸಾಹಿತ್ಯವು ಒಂದೇ ವಿಧವಾಗಿಯೋ ಅಥವಾ ಬೇರೆ ಬೇರೆ ವಿಧವಾಗಿಯೋ ಇರಬಹುದು.

**ಅಂತ್ಯಪ್ರಾಸ**—ಸಂಗೀತ ರಚನೆಗಳ ವಾಕ್ಯಗಳ ಕೊನೆಯ ಪದಗಳ ಪ್ರಾಸ. ಜಯದೇವನ ಅಷ್ಟಪದಿಗಳಲ್ಲಿ ಸುಂದರವಾದ ಅಂತ್ಯಪ್ರಾಸಗಳಿವೆ.

**ಅಂತಃಪ್ರಾಣಗಳು**—ಚಟುವಟಿಕೆ, ಸ್ಥಿರತೆ, ನಿಲುವು, ಸಮತ್ವ, ನೋಟ, ಶ್ರಮವಿಲ್ಲದಿರುವಿಕೆ, ಬುದ್ಧಿ, ಶ್ರದ್ಧೆ, ಒಳ್ಳೆಯಮಾತು, ಹಾಡು—ಈ ಹತ್ತು ಅಂತಃಪ್ರಾಣಗಳು (ಅಭಿನಯದರ್ಪಣ—ನಂದಿಕೇಶ್ವರ)

**ಅಕ್ಷರ**—(೧) ತಾಳದ ಕಾಲಗಣನೆಯಲ್ಲಿ ಮೂಲ ಘಟಕ.

(೨) ರಾಮಸ್ವಾಮಿದೀಕ್ಷಿತರ ೧೦೮ ರಾಗತಾಳ ಮಾಲಿಕವಲ್ಲಿರುವ ಒಂದು ಅಪರೂಪವಾದ ತಾಳದ ಹೆಸರು.

**ಅಕ್ಷರಕಾಲ**—ಸಂಗೀತದ ತಾಳದ ಲೆಕ್ಕದಲ್ಲಿ ಮೂಲ ಘಟಕ ಕಾಲ.

**ಅಷ್ಟಕ**—ಎಂಟು ಪದ್ಯಗಳ ಒಂದು ಗುಚ್ಛಕ್ಕೆ ಅಷ್ಟಕವೆಂದು ಹೆಸರು. ಇವು ಸ್ತೋತ್ರ ಸಾಹಿತ್ಯದ ಸಾಲಿಗೆ ಸೇರಿವೆ. ಭಕ್ತಿ ಮತ್ತು ವೈರಾಗ್ಯವು ಮುಖ್ಯ ವಿಷಯ. ಇವು ವೃತ್ತಗಳಾಗಿರಬಹುದು, ಕಂದ ಪದ್ಯಗಳಾಗಿರಬಹುದು, ಷಟ್ಪದಿಗಳಾಗಿರಬಹುದು. ಎಂಟು ಪದ್ಯಗಳು ಇರಬೇಕೆಂಬ ನಿಯಮವಿಲ್ಲ. ಅದು ಹತ್ತು ಅಥವಾ ಹನ್ನೊಂದು ಇರಬಹುದು. ಉದಾ : ಲಿಂಗಾಷ್ಟಕ. ಒಂಭತ್ತು ಪದ್ಯಗಳಿರುವ ಅಷ್ಟಕಗಳೇ ಹೆಚ್ಚಾಗಿವೆ. ಇವು ದೇವರಸ್ತುತಿ ರೂಪವಾದ ಭಕ್ತಿಗೀತೆಗಳು. ಕೆಲವು ರಾಜನ ಸ್ತುತಿಗಳೂ ಇವೆ ಉದಾ : ದೇವರಾಜ ವಲ್ಲಭಾಷ್ಟಕ. ಪ್ರತಿಯೊಂದು ಪದ್ಯದ ಕೊನೆಯಲ್ಲಿ ಇಷ್ಟದೈವದ ಸಂಬೋಧನೆ ಇದೆ. ಸಂಸ್ಕೃತದಲ್ಲಿ ಅಷ್ಟಕಗಳು ಅನೇಕ ವಾಗಿವೆ. ಇವಕ್ಕೆ ಸ್ತೋತ್ರ ಸಾಹಿತ್ಯದಲ್ಲಿ ಗಣನೀಯ ಸ್ಥಾನವಿದೆ. ಬೃಹತ್‌ಸ್ತೋತ್ರ ರತ್ನಾಕರದಲ್ಲಿ ಐವತ್ತು ಅಷ್ಟಕಗಳಿವೆ. ಶ್ರೀ ಶಂಕರಾಚಾರ್ಯರು ಗಂಗಾಷ್ಟಕ, ಯಮುನಾಷ್ಟಕ, ಅಂಬಾಷ್ಟಕ, ಗುರ್ವಷ್ಟಕ, ಧನಾಷ್ಟಕ ಮುಂತಾದುವುಗಳನ್ನು ರಚಿಸಿದ್ದಾರೆ. ಗೋವಿಂದಾಷ್ಟಕ, ಮುಕುಂದಾಷ್ಟಕ, ಕೃಷ್ಣಾಷ್ಟಕ ಇವೆಲ್ಲವೂ ಪ್ರಸಿದ್ಧ ಇವುಗಳಲ್ಲಿ ಭಕ್ತಿಯೇ ಪ್ರಧಾನವಾದುದು.

**ಅಷ್ಟತಾಳ**—ಕರ್ಣಾಟಕದ ಯಕ್ಷಗಾನಗಳಲ್ಲಿ ಕಂಡುಬರುವ ಒಂದು ತಾಳ ವಿಶೇಷ.

**ಅಷ್ಟವಾದ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ : ಸ ಮ ಪ ದ ನಿ ಸ

ಅ : ಸ ನಿ ದ ಪ ಮ ಸ

**ಅಷ್ಟಗಣಗಳು**—ತಾಳಪದ್ಧತಿ ಮತ್ತು ಛಂದಸ್ಸಿನಲ್ಲಿ ಎಂಟು ಗಣಗಳು ಅಥವಾ ಗುಂಪುಗಳು. ೧೦೮ ತಾಳಗಳ ಲಕ್ಷಣಗಳನ್ನು ವಿವರಿಸುವ ಶ್ಲೋಕಗಳಲ್ಲಿ ತಾಳದ ಅಂಗಗಳನ್ನು ಗಣಗಳೆಂದು ಹೇಳಿದೆ. ಗುರುವಿನ ಸಂಜ್ಞೆ ಆ, ಲಘುವಿನ ಸಂಜ್ಞೆ ೧.

ಎಂಟು ಗಣಗಳು ಈ ರೀತಿ ಇವೆ.

ಮ ಗಣ — ಆಆಆ
ಭ ಗಣ — ಆ೧೧
ಜ ಗಣ — ೧ಆ೧
ಸ ಗಣ — ೧೧ಆ
ನ ಗಣ — ೧೧೧
ಯ ಗಣ — ೧ಆಆ
ರ ಗಣ — ಆ೧ಆ
ತ ಗಣ — ಆಆ೧

**ಅಷ್ಟಭುಜ ಕೃಷ್ಣ**—ತಮಿಳುನಾಡಿನ ಚಿಂಗಲ್ಪೇಟೆ ಜಿಲ್ಲೆಯ ಕಾಂಚೀಪುರದಲ್ಲಿರುವ ವರದ ರಾಜಸ್ವಾಮಿ ದೇವಾಲಯದ ನೂರು ಕಂಬಗಳ ಮಂಟಪದಲ್ಲಿ ಅಷ್ಟಭುಜಕೃಷ್ಣನು ಕೊಳಲು ನುಡಿಸುತ್ತಿರುವ ಶಿಲ್ಪವಿದೆ. ದಿಂಡಿಗಲ್ ಸಮೀಪದಲ್ಲಿರುವ ತಾಡಿಕ್ಕೊಂಬು ಎಂಬಲ್ಲಿರುವ ಸೌಂದರರಾಜಪೆರುಮಾಳ್ ದೇವಾಲಯದ ಅಮ್ಮನವರ ಸನ್ನಿಧಿಯ ಮುಂಭಾಗದ ಮಂಟಪದಲ್ಲಿ ಇಂತಹ ಕೃಷ್ಣನ ಒಂದು ಶಿಲ್ಪವಿದೆ.

**ಅಷ್ಟಭುಜನಟರಾಜ**—ಆಂಧ್ರದ ಎಲ್ಲೋರಗವಿಗಳಲ್ಲಿ ಅಷ್ಟಭುಜ ನಟರಾಜನ ಮೂರ್ತಿ ಶಿಲ್ಪವಿದೆ.

**ಅಷ್ಟದಶಾಂಗುಲ**—ಇದು 'ಸಂಗೀತ ರತ್ನಾಕರ'ದಲ್ಲಿ ಉಕ್ತವಾಗಿರುವ ಒಂದು ಬಗೆಯ ಕೊಳಲು. ಬಾಯಿಂದ ಊದುವ ರಂಧ್ರಕ್ಕೂ ಬೆರಳಿನಿಂದ ನುಡಿಸುವ ರಂಧ್ರಕ್ಕೂ ೧೮ ಅಂಗುಲ ದೂರವಿರುತ್ತದೆ. ಇದರ ಒಂದು ಮತ್ತು ಏಳನೆಯ ರಂಧ್ರಗಳನ್ನು ಮುಚ್ಚಿ ಊದಿದರೆ ಮಂದ್ರಷಡ್ಜವು ಕೇಳಿ ಬರುತ್ತದೆ.

**ಅಷ್ಟಮಹಿಷಿ ಕಲ್ಯಾಣಮು**—ಸುಮಾರು ೧೫೪೫ರಲ್ಲಿ ಚಿನ್ನಯ್ಯ ಅಥವಾ ತಿರುವೆಂಗಡನಾಥ ಎಂಬುವರು ರಚಿಸಿದ ಒಂದು ತೆಲುಗು ಗ್ರಂಥ. ಇದು ದ್ವಿಪದಿ ಛಂದಸ್ಸಿನಲ್ಲಿರುವ ಐದು ಅಂಕಗಳ ಗ್ರಂಥ. ಶ್ರೀಕೃಷ್ಣ ಮತ್ತು ಅವನ ಅಷ್ಟಮಹಿಷಿಯರ ವಿವಾಹವು ಈ ಗ್ರಂಥದ ಮುಖ್ಯ ವಿಷಯ.

**ಅಷ್ಟೋತ್ತರ ಶತರಾಗತಾಳಮಾಲಿಕಾ**—ಇದು ೧೦೮ ತಾಳಗಳು ರಾಗಗಳಲ್ಲಿರುವ ರಾಗಮಾಲಿಕೆ. ಇಂತಹ ಅದ್ವಿತೀಯವಾದ ರಚನಾವಿಶೇಷವನ್ನು ರಾಮಸ್ವಾಮಿ ದೀಕ್ಷಿತರು (೧೭೩೫–೧೮೧೭) ರಚಿಸಿದರು. ಭಾರತೀಯ ಸಂಗೀತದ ರಚನೆಗಳಲ್ಲಿ ಇದು ಅತ್ಯಂತ ದೀರ್ಘವಾದುದು. ಇದನ್ನು ಪೂರ್ತಿಯಾಗಿ ಹಾಡಲು ೩ ಗಂಟೆಗಳ ಕಾಲಬೇಕು. ಈ ರಚನೆಯ ಪ್ರತಿ ವಿಭಾಗದಲ್ಲಿ ಅದರ ತಾಳ ಮತ್ತು ರಾಗ ಮುದ್ರೆಗಳಿವೆ. ಶ್ರೀಮುತ್ತುಸ್ವಾಮಿ ಮುಂತಾದ ಅಪರೂಪ ರಾಗಗಳು ಈ ತಾಳಮಾಲಿಕೆಯಲ್ಲಿವೆ.

**ಅಷ್ಟೋತ್ತರ ಶತತಾಳಗಳು**—೧೦೮ ತಾಳಗಳು ಈ ರೀತಿ ಇವೆ: ಚಚ್ಚತ್ಪುಟ, ಚಾಚತ್ಪುಟ, ಷಟ್ಪಿತಾ ಪುತ್ರಿಕ, ಸಂಪದ್ವೇಷ್ಟಕ, ಉದ್ಘಟ್ಟ, ಆದಿ, ದರ್ಪಣ, ಚರ್ಚರಿ, ಸಿಂಹಲೀಲಾ, ಕಂದರ್ಪ, ಸಿಂಹ ವಿಕ್ರಮ, ಶ್ರೀರಂಗ, ರತಿಲೀಲ, ರಂಗತಾಳ, ಪರಿಕ್ರಮ, ಪ್ರತ್ಯಂಗ, ಗಜಲೀಲ, ತ್ರಿಭಿನ್ನ, ವೀರವಿಕ್ರಮ, ಹಂಸಲೀಲ, ವರ್ಣಭಿನ್ನ, ರಂಗದ್ಯೋತನ, ರಾಜ ಚೂಡಾಮಣಿ, ರಾಜತಾಳ, ಸಿಂಹವಿಕ್ರೀಡಿತ, ವನಮಾಲಿ, ಚತುರಸ್ರವರ್ಣ, ತ್ರಯಸ್ರವರ್ಣ, ಮಿಶ್ರವರ್ಣ, ರಂಗಪ್ರದೀಪ, ಹಂಸನಾದ, ಸಿಂಹನಾದ, ಮಲ್ಲಿಕಾಮೋದ, ಶರಭಲೀಲ, ರಂಗಾಭರಣ, ತುರಂಗಲೀಲ, ಸಿಂಹನಂದನ, ಜಯಶ್ರೀ, ವಿಜಯಾನಂದ, ಪ್ರತಿತಾಳ, ದ್ವಿತೀಯ, ಮಕರಂದ, ಕೀರ್ತಿ, ವಿಜಯ, ಜಯಮಂಗಳ, ರಾಜವಿದ್ಯಾಧರ, ಮಠ್ಯ, ಜಯ, ಕುಡುಕ್ಕ, ನಿಸ್ಸಾರುಕ, ಕ್ರೀಡ, ತ್ರಿಭಂಗಿ, ಕೋಕಿಲ ಪ್ರಿಯ, ಶ್ರೀಕೀರ್ತಿ, ಬಿಂದುಮಾಲಿ, ಸಮತಾಳ, ನಂದನ,

ಉದೀಕ್ಷಣ, ಮಟ್ಟಿಕ, ಢೇಂಕಿತ, ವರ್ಣಮಟ್ಟಿಕ, ಅಭಿನಂದನ, ಅಂತರಕ್ರೀಡ, ಮಲ್ಲತಾಳ, ದೀಪಕ, ಅನಂಗ, ವಿಷಮ, ನಂದಿ, ಮುಕುಂದ, ಕಂಡುಕ, ಏಕತಾಳ, ಅಟತಾಳ, ಪೂರ್ಣಕಂಕಾಳ, ಖಂಡಕಂಕಾಲ, ಸಮಕಂಕಾಳ, ವಿಷಮಕಂಕಾಳ, ಚತಸ್ತಾಳ, ಡೋಂಬುಲೀ, ಅಭಂಗ, ಜಗಝಂಪ, ಚತುರ್ಮುಖ, ಝಂಪ, ಪ್ರತಿಮಠ್ಯ, ಗಾರುಗಿ, ವಸಂತ, ಲಲಿತ, ರತಿತಾಳ, ಕರಣಯತಿ, ಯತಿ, ಷಟ್ತಾಳ, ವರ್ಧನ, ವರ್ಣಯತಿ, ರಾಜನಾರಾಯಣ, ಮದನ, ಕಾರಿಕ, ಪಾರ್ವತಿಲೋಚನ, ಶ್ರೀನಂದನ, ಲೀಲ, ವಿಲೋಕಿತ, ಲಲಿತಪ್ರಿಯ, ಝುಲ್ಲಕ, ಜನಕ, ಲಕ್ಷ್ಮೀಶ, ರಾಗವರ್ಧನ ಮತ್ತು ಉತ್ಸವ.

**ಅಷ್ಟಿ**—ಈ ರಾಗವು ೨೪ನೆಯ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ

ಅ : ಸ ನಿ ದ ಮ ಗ ಸ

**ಅಷ್ಟಾದಶವಾದ್ಯ**—ದಕ್ಷಿಣ ಭಾರತದ ದೇವಾಲಯಗಳಲ್ಲಿ ಉತ್ಸವ ಕಾಲದಲ್ಲಿ ನುಡಿಸುವ ೧೮ ಬಗೆಯ ಸಂಗೀತವಾದ್ಯಗಳು.

**ಅಷ್ಟಪದಿ**—ಜಯದೇವ ಕವಿಯ ಗೀತಗೋವಿಂದವೆಂಬ ಕಾವ್ಯವನ್ನು ಅಷ್ಟಪದಿ ಎನ್ನುವುದು ರೂಢಿ. ಇದರಲ್ಲಿ ೨೪ ಗೀತಗಳಿವೆ. ಪ್ರತಿಗೀತದಲ್ಲಿ ಎಂಟು ಪಾದಗಳು ಅಥವಾ ಚರಣಗಳಿವೆ. ಆದ್ದರಿಂದ ಇವುಗಳಿಗೆ ಅಷ್ಟಪದಿಗಳೆಂಬ ಹೆಸರು ರೂಢಿಗೆ ಬಂದಿದೆ. ಇವು ದ್ವಿಧಾತು ಪ್ರಬಂಧಗಳು. ಇದರಲ್ಲಿ ಉದ್ಗ್ರಾಹ ಮತ್ತು ಧ್ರುವ ಎಂಬ ಎರಡು ಭಾಗಗಳಿವೆ. ಇವೇ ಮುಂದೆ ಪಲ್ಲವಿ ಮತ್ತು ಚರಣ ಎಂದಾದುವು. ಈ ಕಾವ್ಯದಲ್ಲಿ ದ್ವಿತೀಯಾಕ್ಷರಪ್ರಾಸವಿಲ್ಲ. ಅಂತ್ಯಪ್ರಾಸಗಳಿವೆ.

**ಆ**—ದ್ವಿತೀಯ ಸ್ವರವರ್ಣ. ಪಿತಾಮಹ, ವಿನಾಯಕ, ವಿಜಯಾನಂತ, ಕ್ಷೀರೋದಧಿ, ನಾರಾಯಣ, ರುದ್ರ ಎಂಬ ಅರ್ಥಗಳಿವೆ

**ಆಕಾಶಗ**—ಭರತನಾಟ್ಯದಲ್ಲಿ ಮಂಡಲಗಳು ಇಪ್ಪತ್ತು ಬಗೆಗಳಿವೆ. ಇವುಗಳಲ್ಲಿ ಆಕಾಶಗ ಮತ್ತು ಭೂಮಿಗ ಎಂದು ಎರಡು ವಿಧ. ಆಕಾಶಗಗಳಲ್ಲಿ ಅತಿಕ್ರಾಂತ, ವಿಚಿತ್ರ, ಲಲಿತ ಸಂಚರ, ಸೂಚಿವದ್ಧ, ದಂಡಪಾದ, ವಿಹೃತ, ಅಲಾತಕ, ವಾಮವಿದ್ಧ, ಲಲಿತ ಮತ್ತು ಕ್ರಾಂತ ಎಂದು ಹತ್ತು ವಿಧ. ಇವೆಲ್ಲವೂ ಪಾದಕ್ರಿಯಾ ಸಂಚಲನೆಗಳು.

**ಆಕಾಶವೀಣಾ**—ಪಾಲ್ಕುರಿಕೆ ಸೋಮನಾಥ ವಿರಚಿತ 'ಪಂಡಿತಾರಾಧ್ಯ ಚರಿತ್ರಮು' ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ವೀಣೆ.

**ಆಕು**—ನಾಗಸ್ವರದ ಪೀಪಿಯನ್ನಾಗಿ ಬಳಸಲಾಗುವ ಒಂದು ಬಗೆಯ ಎಲೆ. ಇದನ್ನು ಪರಿಷ್ಕರಿಸಿ ನಂತರ ಉಪಯೋಗಿಸುತ್ತಾರೆ

**ಆಕಾಶಚಾರಿಗಳು**—ಭರತ ನಾಟ್ಯದಲ್ಲಿ ಪ್ರಯೋಗಿಸುವ ಪಾದಕ್ರಿಯಾ ಸಂಚಲನೆಯಲ್ಲಿ ಒಂದು ಬಗೆ. ಆಕಾಶಚಾರಿಗಳು ಹದಿಮೂರು ವಿಧ ಅವು

ಅತಿಕ್ರಾಂತ, ಅಪಕ್ರಾಂತ, ಪಾರ್ಶ್ವಕ್ರಾಂತ, ಊರ್ಧ್ವ ಜಾನು, ಸೂಚಿ, ನೂಪುರ ಪಾದಿತ, ಡೋಲಾಪಾದ, ಆಕ್ಷಿಪ್ತ ಅವಿದ್ಧ, ಊರ್ಧ್ವವೃತ್ತ, ವಿದ್ಯುದ್ಭ್ರಾಂತ, ಅಲಾತ, ಭುಜಂಗ ತ್ರಾಸಿಕ, ಹರಿಣಪ್ಲುತ ದಂಡಪಾದ ಮತ್ತು ಭ್ರಮರಿ.

**ಆಗಮಪ್ರಿಯ** – ಈ ರಾಗವು ೪೫ನೆಯ ಮೇಳಕರ್ತ ಶುಭ ಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ಪ ದ ನಿ ಪ ಮ ಗ ರಿ ಗ ಸ

**ಆಘಾತ**—ನೃತ್ಯದಲ್ಲಿ ನುಡಿಸಲಾಗುವ ಒಂದು ಲಾಸ್ಯ

**ಆಘಾತಿ**—ಋಗ್ವೇದ ಮತ್ತು ಅಥರ್ವವೇದಗಳಲ್ಲಿ ಉಕ್ತವಾಗಿರುವ ಒಂದು ತಾಳವಾದ್ಯ.

**ಆರ್ಚಿಕ**—ಒಂದು ಸ್ವರದಲ್ಲಿ ಹಾಡುವುದು. ಅರ್ಚಿನೋಗಾಯಂತಿ ಎಂದರೆ ಋಗ್ವೇದದ ಒಂದು ಭಾಗವನ್ನು ಒಂದು ಸ್ವರದಲ್ಲಿ ಹಾಡುವ ವಿಧಾನ.

**ಆಚಾರ್ಯಮುದ್ರೆ**—ಇದು ಸಂಗೀತ ರಚನೆಗಳಲ್ಲಿ ಕಂಡು ಬರುವ ದ್ವಾದಶ ಮುದ್ರೆಗಳಲ್ಲಿ ಒಂದು ಬಗೆಯ ಮುದ್ರೆ. ವಾಗ್ಗೇಯಕಾರನು ತನ್ನ ಕೃತಿಯ ಸಾಹಿತ್ಯದಲ್ಲಿ ತನ್ನ ಆಚಾರ್ಯನ ಹೆಸರನ್ನು ಅಂಕಿತವಾಗಿಟ್ಟಿರುತ್ತಾನೆ. ನಾಟರಾಗದ 'ಗಾನವಿದ್ಯಾಧುರಂಧರ' ಎಂಬ ಗೀತವು ಇದಕ್ಕೆ ನಿದರ್ಶನ.

**ಆದವಾನಿಯರಾಮಸುಂದರದಾಸರು**—ಇವರು ಜಗನ್ನಾಥದಾಸರ ಸಮ್ಮುಖದಲ್ಲಿ ಕೀರ್ತನಮಾಡಿ ಅವರಿಂದ ಸ್ವರೂಪ ಜ್ಞಾನ ಪಡೆದ ಮಹನೀಯರು. ರಾಮಸುಂದರ ವಿಠಲ ಎಂಬ ಮುದ್ರಿಕೆಯಿಂದ ಭಾಗವತವನ್ನು ಕೀರ್ತನ ರೂಪದಲ್ಲಿ ರಚಿಸಿ ಸುಂದರವಾದ ಕವಿತೆಗಳನ್ನು ಮಾಡಿದ್ದಾರೆ. ಪೋಗಿ ಬರುವೆ ಗೋಪ ನಾಗವೇಣಿಯರೆ ಎಂಬ ಇವರ ದೇವರ ನಾಮವು ಕರ್ಣಾಟಕದಲ್ಲೆಲ್ಲಾ ಪ್ರಸಿದ್ಧವಾಗಿದೆ.

**ಆದಿ**—(೧) ೩೫ ಸುಳಾದಿತಾಳಗಳಲ್ಲಿ ಚತುರಶ್ರಜಾತಿ ತ್ರಿಪುಟತಾಳದ ಹೆಸರು. ಇದರ ಒಂದಾವರ್ತಕ್ಕೆ ಎಂಟು ಅಕ್ಷರಕಾಲ.

(೨) ಒಂದು ಲಘು ಇರುವ ತಾಳ. ಇದು ೧೦೮ ತಾಳಗಳ ಗುಂಪಿಗೆ ಸೇರಿದೆ. ಇದರ ಕಾಲಾವಧಿಯು ನಾಲ್ಕು ಅಕ್ಷರಕಾಲ ಅಥವಾ ಒಂದು ಮಾತ್ರಾ ಕಾಲ.

(೩) ಮೇಳಾಧಿಕಾರ ಲಕ್ಷಣವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೪೬೨೪ ಸಂಪೂರ್ಣ ಮೇಳಪದ್ಧತಿಯ ಮೊದಲನೆಯ ಮೇಳದ ಹೆಸರು. ಈ ಮೇಳವು ಷಡ್ಜ, ಪಂಚಮ, ಪ್ರತಿಶುದ್ಧರಿಷಭ, ಪ್ರತಿಶುದ್ಧಗಾಂಧಾರ, ಶುದ್ಧಮಧ್ಯಮ, ಪ್ರತಿಶುದ್ಧಧೈವತ, ಮತ್ತು ಪ್ರತಿಶುದ್ಧ ನಿಷಾದವನ್ನು ಹೊಂದಿದೆ. ಷಡ್ಜವು ಇದರ ಗ್ರಹ, ಅಂಶ ಮತ್ತು ನ್ಯಾಸಸ್ವರ.

**ಆದಿ ಅಪ್ಪಯ್ಯ**—ಪಚ್ಚಿಮಿರಿಯಂ ಆದಿ ಅಪ್ಪಯ್ಯನವರು ಮಾಧ್ವ ಬ್ರಾಹ್ಮಣರು. ತಂಜಾವೂರಿನ ಪ್ರತಾಪಸಿಂಹ ಮಹಾರಾಜ (೧೭೪೧–೧೭೬೪) ಮತ್ತು

ತುಳಜಾಜಿ ಮಹಾರಾಜನ (೧೭೬೫-೧೭೮೭) ಆಸ್ಥಾನ ವಿದ್ವಾಂಸರಾಗಿದ್ದರು. ಪ್ರಸಿದ್ಧ ವೈಣಿಕರೂ, ವಾಗ್ಗೇಯಕಾರರೂ ಆಗಿದ್ದರು. ಪುದುಕೋಟೆ ಸಂಸ್ಥಾನ ಮತ್ತು ಉಡೈಯಾರ್ ಪಾಳ್ಯದ ಜಮೀನ್ದಾರರ ಗೌರವಕ್ಕೆ ಪಾತ್ರರಾಗಿದ್ದರು. ಇವರಿಗೆ 'ತಾನವರ್ಣ ಮಾರ್ಗದರ್ಶಿ' ಎಂಬ ಬಿರುದಿತ್ತು. ಅತ್ಯಂತ ಪ್ರಸಿದ್ಧವಾಗಿರುವ ಭೈರವಿರಾಗದ ವೀರಿಬೋಣಿ ಎಂಬ ವರ್ಣವನ್ನೂ, ಇತರ ಹಲವು ವರ್ಣಗಳು ಮತ್ತು ಕೀರ್ತನೆಗಳನ್ನೂ ರಚಿಸಿದ್ದಾರೆ. ಇವರು ರಾಗಾಲಾಪನೆ, ತಾನ ಮತ್ತು ಪಲ್ಲವಿ ಲಕ್ಷ್ಯಕ್ರಮವನ್ನು ಪರಿಷ್ಕರಿಸಿದರು. ಮೈಸೂರಿನ ವೀಣೆಶೇಷಣ್ಣನವರು ಇವರ ವಂಶದವರು. ಶ್ಯಾಮಾಶಾಸ್ತ್ರಿಗಳು, ಘನಂಕೃಷ್ಣಯ್ಯರ್, ಪಲ್ಲವಿ ಗೋಪಾಲಅಯ್ಯರ್, ಪಲ್ಲವಿ ಸಂಜೀವಅಯ್ಯರ್ ಮುಂತಾದವರು ಇವರ ಶಿಷ್ಯರಾಗಿದ್ದರು.

**ಆದಿಕಾಮೋದ**—ಇದೊಂದು ಭಾಷಾಂಗ ಸಂಪೂರ್ಣರಾಗ. ಪಾರ್ಶ್ವದೇವನ 'ಸಂಗೀತ ಸಮಯಸಾರ'ದಲ್ಲಿ ಉಕ್ತವಾಗಿದೆ.

**ಆದಿಕಾಮೋದಿ**—ರಘುನಾಥನು 'ಸಂಗೀತಸುಧಾ' ಎಂಬ ಗ್ರಂಥದಲ್ಲಿ ಹೇಳಿರುವ ೨೦ ಭಾಷಾಂಗ ರಾಗಗಳಲ್ಲಿ ಒಂದು ರಾಗ. ಈ ರಾಗವು 'ಸಂಗೀತ ರತ್ನಾಕರ'ದಲ್ಲೂ ಉಕ್ತವಾಗಿದೆ.

**ಆದಿಗುರು**—ಪುರಂದರದಾಸರಿಗೆ ಅನ್ವಯವಾಗುವ ಹೆಸರು. ಸಂಗೀತಾಭ್ಯಾಸಿಗಳಿಗೆ ಅನುಕೂಲವಾಗುವಂತಹ ಕ್ರಮಬದ್ಧವಾದ ಸ್ವರಾವಳಿಗಳು, ಅಲಂಕಾರಗಳು, ಘನರಾಗಗೀತಗಳು, ಸುಳಾದಿಗಳನ್ನು ರಚಿಸಿ ಕರ್ಣಾಟಕ ಸಂಗೀತವನ್ನು ವೈಜ್ಞಾನಿಕವಾದ ತಳಹದಿಯ ಮೇಲೆ ನಿಲ್ಲಿಸಿದ್ದಾರೆ.

**ಆದಿತ್ಯ**—(೧) ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಕೊಳಲು. ಇದರಲ್ಲಿ ಊದುವ ರಂಧ್ರಕ್ಕೂ ನುಡಿಸುವ ರಂಧ್ರಕ್ಕೂ ಹನ್ನೆರಡು ಅಂಗುಲ ಅಂತರವಿದೆ. ೧-೭ನೆಯ ರಂಧ್ರಗಳನ್ನು ಮುಚ್ಚಿ ಊದಿದಾಗ ಮಂದ್ರಸ್ಥಾಯಿ ಮಧ್ಯಮವು ಕೇಳಿ ಬರುತ್ತದೆ.

(೨) ಆದಿತ್ಯವೆಂದರೆ ಸಂಗೀತದ ಸಂಜ್ಞೆಯಲ್ಲಿ ೧೨ನ್ನು ಸೂಚಿಸುತ್ತದೆ. ೭೨ ಮೇಳಕರ್ತ ಪದ್ಧತಿಯಲ್ಲಿ ೧೨ನೆಯ ಚಕ್ರದ ಹೆಸರು. ಇದು ೬೭ ರಿಂದ ೭೨ ಮೇಳಗಳನ್ನು ಒಳಗೊಂಡಿದೆ.

ಆದಿತ್ಯ — ಭೂ — ೪ ನೆಯ ಮೇಳ — ೭೦ ನೆಯ ರಾಗ

ಆದಿತ್ಯ — ಗೋ — ೩ ನೆಯ ಮೇಳ — ೬೯ ನೆಯ ರಾಗ

ಆದಿತ್ಯ — ಮಾ — ೫ ನೆಯ ಮೇಳ — ೭೧ ನೆಯ ರಾಗ

ಆದಿತ್ಯ — ಪಾ — ೧ ನೆಯ ಮೇಳ — ೬೭ ನೆಯ ರಾಗ

ಆದಿತ್ಯ — ಷಾ — ೬ ನೆಯ ಮೇಳ — ೭೨ ನೆಯ ರಾಗ

ಆದಿತ್ಯ — ರಿ — ೨ ನೆಯ ಮೇಳ — ೬೮ ನೆಯ ರಾಗ

**ಆದಿದ್ವಿಪಾದ**—ನೃತ್ಯನಾಟಕವು ಆರಂಭವಾಗುವ ಮೊದಲು ಅದರ ಕತೆಯ ಸಾರಾಂಶವನ್ನುಳ್ಳ ದ್ವಿಪಾದ ವೃತ್ತದಲ್ಲಿರುವ ಸಾರಾಂಶವನ್ನು ಹಾಡುವರು. ಇದಕ್ಕೆ ಆದಿದ್ವಿಪಾದವೆಂದು ಹೆಸರು.

**ಆದಿದೇಶ್ಯ**—ಈ ರಾಗವು ೩೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಆಧಾರಂಗ್**—ಹಿಂದೂಸ್ತಾನಿ ಸಂಗೀತದ ಖಯಾಲ್‌ಗಳ ಪ್ರಸಿದ್ಧ ವಾಗ್ಗೇಯಕಾರ. ಇವನು ಕೊನೆಯ ಮೊಗಲ್ ಚಕ್ರವರ್ತಿ ಮಹಮದ್‌ಷಾವಿನ ಆಸ್ಥಾನ ವಿದ್ವಾಂಸನಾಗಿದ್ದನು.

**ಆಧಾರಷಡ್ಜ**—ಶ್ರುತಿಗೆ ಆಧಾರವಾದ ಸ್ವರ. ಇದು ಮಧ್ಯಮ ಸ್ಥಾಯಿಯ ಷಡ್ಜ.

**ಆಧುನಿಕಪದ್ಧತಿ**—ಈಗ ಪ್ರಚಲಿತವಿರುವ ಸಂಗೀತ ಪದ್ಧತಿ.

**ಆಧುನಿಕ ಪ್ರಸಿದ್ಧರಾಗಗಳು**—ಆಧುನಿಕ ಕಾಲದಲ್ಲಿ ಚಿರಪರಿಚಿತವಾಗಿರುವ ರಾಗಗಳು ಹಿಂದೆ ಪ್ರಸಿದ್ಧವಾಗಿದ್ದ ರಾಗಗಳಿಗೆ ಪ್ರಾಕ್ ಪ್ರಸಿದ್ಧರಾಗಗಳೆಂದು ಹೆಸರು. ಈ ಬಗೆಯ ವರ್ಗೀಕರಣವು ಶಾರ್ಙ್ಗದೇವನ ಸಂಗೀತ ರತ್ನಾಕರದಲ್ಲಿ ಕಂಡುಬರುತ್ತದೆ.

**ಆದಿಪಂಚಮ**—ಈ ರಾಗವು ೪೮ನೇ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಆದಿಪ್ರಾಸ**—ಸಂಗೀತ ರಚನೆಗಳಲ್ಲಿ ಪ್ರತಿಯೊಂದು ಪಾದದ ಮೊದಲನೆಯ ಪದದ ೨ನೆಯ ಅಕ್ಷರವು ಒಂದೇ ವಿಧವಾಗಿರುವುದು ಆದಿಪ್ರಾಸ. ಇದನ್ನು ದ್ವಿತೀಯಾಕ್ಷರ ಪ್ರಾಸವೆಂದೂ, ಖಂಡಪ್ರಾಸವೆಂದೂ ಕರೆಯುತ್ತಾರೆ. ಆದಿಪ್ರಾಸದಲ್ಲಿ ೬ ಪ್ರಭೇದಗಳಿವೆ. ಅವು ಸಿಂಹ, ಗಜ, ವೃಷಭ, ಅಜ, ಶರಭ ಮತ್ತು ಹಯ ಪ್ರಾಸಗಳು.

**ಆದಿಭಟ್ಲ ನಾರಾಯಣದಾಸರು**(೧೮೬೪-೧೯೪೫)—ನಾರಾಯಣದಾಸರು ಮೊದಲು ಬೊಬ್ಬಿಲಿ ಸಂಸ್ಥಾನದ ವಿದ್ವಾಂಸರಾಗಿದ್ದ ವಾಸಾಸಾಂಬಯ್ಯನವರಲ್ಲಿ ವೀಣಾ ವಾದನದಲ್ಲಿ ಶಿಕ್ಷಣವನ್ನು ಪಡೆದು ತರುವಾಯ ವಿಜಯನಗರದ ಮಹಾವೈಣಿಕ ವೆಂಕಟರಮಣದಾಸರಲ್ಲಿ ಉನ್ನತ ಶಿಕ್ಷಣವನ್ನು ಪಡೆದರು. ೧೮೮೪ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಮಾಡಿ ಸ್ವಲ್ಪಕಾಲ ವಿಜಯನಗರದ ಮಹಾರಾಜಾ ಕಾಲೇಜಿನಲ್ಲಿ ವ್ಯಾಸಂಗ ಮಾಡಿದರು. ದಾಸರು ಎತ್ತರವಾದ ಆಕರ್ಷಕ ವ್ಯಕ್ತಿಯಾಗಿದ್ದರು. ಹರಿಕಥಾ ವಿದ್ವಾಂಸರಾಗಿ ಖ್ಯಾತರಾದರು. ಸಂಗೀತ, ಕವಿತ್ವ, ನಿರೂಪಣೆಯ

ವೈಖರಿ ಇವರ ಪ್ರತಿಭೆಯ ದ್ಯೋತಕವಾಗಿದ್ದುವು. ವಿಜಯನಗರದಲ್ಲಿ ಸಂಗೀತದ ಕಾಲೇಜು ೧೯೧೯ರಲ್ಲಿ ಆರಂಭವಾದಾಗ ನಾನಾಮುಖ ಪ್ರತಿಭೆಯುಳ್ಳದಾಸರನ್ನು ಪ್ರಥಮ ಪ್ರಧಾನಾಚಾರ್ಯರನ್ನಾಗಿ ನೇಮಿಸಲಾಯಿತು ಇವರ ಆಡಳಿತ ಕಾಲದಲ್ಲಿ ಕಾಲೇಜು ಬಹಳ ಪ್ರಗತಿಯನ್ನು ಸಾಧಿಸಿತು. ಇವರು ಸಂಸ್ಕೃತ ಮತ್ತು ತೆಲುಗಿನಲ್ಲಿ ವಿದ್ವಾಂಸರಾಗಿದ್ದುದಲ್ಲದೆ ಇಂಗ್ಲೀಷ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಪ್ರವೀಣರಾಗಿದ್ದರು. ೧೯೩೩ರಲ್ಲಿ ನಡೆದ ಒಂದು ಕಥಾಕಾಲಕ್ಷೇಪದಲ್ಲಿ ಜಯಪುರದ ರಾಜಾವಿಕ್ರಮ ದೇವವರ್ಮನು ಇವರಿಗೆ ಸಂಗೀತಸಾಹಿತ್ಯ ಸಾರ್ವಭೌಮ ಎಂಬ ಬಿರುದನ್ನಿತ್ತು ಗೌರವಿಸಿದನು. ಪದ್ಯಗಳನ್ನು ಪೂರ್ವ ಸಿದ್ಧತೆಯಿಲ್ಲದೆ ಹಾಡುವುದರಲ್ಲಿ ನಿಸ್ಸೀಮ ರಾಗಿದ್ದರು. ಇವರ ಕವಿತೆ ಮತ್ತು ಸ್ವರಾಕ್ಷರಗಳು ಒಡವೆಯ ನವರತ್ನಗಳಂತೆ ಮಿನುಗುತ್ತಿದ್ದುವು.

**ಆದಿನಾರಾಯಣದಾಸರು(೧೯ನೆ ಶ.)**—ಇವರು ಭದ್ರಾಚಲರಾಮದಾಸರ ವಂಶದವರು. ಮದ್ರಾಸಿನ ಮೂಂಬಲಂನಲ್ಲಿ ವಾಸವಾಗಿದ್ದರು. ಅನೇಕ ಭಕ್ತಿಕೀರ್ತನೆಗಳನ್ನು ರಚಿಸಿದರು ಪ್ರತಿವರ್ಷವೂ ರಾಮೋತ್ಸವವನ್ನು ಬಹಳ ಭಕ್ತಿಯಿಂದ ಆಚರಿಸುತ್ತಿದ್ದರು. ಟಿ.ಪಿ. ಕೋದಂಡರಾಮಯ್ಯರ್‌ರವರು ಬರೆದಿರುವ 'ಭಾಗವತ ಭಜನ ಪದ್ಧತಿ' ಎಂಬ ಗ್ರಂಥದಲ್ಲಿ ಇವರ ಕೆಲವು ಕೀರ್ತನೆಗಳು ಪ್ರಕಟವಾಗಿವೆ. ಇವರು ಸ್ವನಾಮ ಮುದ್ರೆಯನ್ನು ಬಳಸಿದ್ದಾರೆ.

**ಆದಿಪಂಚಮ**—ಈ ರಾಗವು ೪೮ನೆಯ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಆದಿಪ್ರಾಸ**—ದ್ವಿತೀಯಾಕ್ಷರ ಪ್ರಾಸವು ಸಂಗೀತ ರಚನೆಗಳ ಪಾದಗಳಲ್ಲಿ ಕಂಡು ಬರುತ್ತದೆ. ಇದಕ್ಕೆ ಆದಿಪ್ರಾಸವೆಂದು ಹೆಸರು.

ಉದಾ: ತೆರತೀಯಗರಾದ? ಲೋನಿ,

ಪಲ್ಲವಿ: ತಿರುಪತಿ ವೆಂಕಟರಮಣ! ಮತ್ಸರಮನು.

ಅ. ಪ: ಪರಮಪುರುಷ! ಧರ್ಮಾದಿ ಮೋಕ್ಷಮುಲ ಪಾರ ದೋಲು ಚುನ್ನದಿ, ನಾ ಲೋನಿ.

**ಆದಿರಸ**—ಶೃಂಗಾರ ರಸವನ್ನು ಮೊದಲನೆಯ ರಸವೆಂದು ಹೇಳುತ್ತಾರೆ

**ಆದಿಶುದ್ಧರಾಮಕ್ರಿಯ** - ಇದು 'ರಾಗತಾಳಚಿಂತಾಮಣಿ' ಎಂಬ ಒಂದು ತೆಲುಗು ಸಂಗೀತ ಶಾಸ್ತ್ರಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಆದಿಸ್ವರಗಳು**—ಇವು ಭಾರತೀಯ ಸಂಗೀತದ ಅತ್ಯಂತ ಪುರಾತನ ಸ್ವರಗಳು. ಇವು ವೇದಗಳ ಉದಾತ್ತ, ಅನುದಾತ್ತ ಮತ್ತು ಸ್ವರಿತಸ್ವರಗಳು ಪಾಣಿನಿಯು ಈ ಸ್ವರಗಳನ್ನು ಆದಿಸ್ವರಗಳೆಂದು ಹೆಸರಿಸಿದ್ದಾನೆ.

**ಆದಿವಾಗ್ಗೇಯಕಾರ**— ವಾಲ್ಮೀಕಿ ಮಹರ್ಷಿಗೆ ಆದಿವಾಗ್ಗೇಯಕಾರರೆಂದು ಹೆಸರು. ಶ್ರೀಮದ್ರಾಮಾಯಣವನ್ನು ಸಂಗೀತಕ್ಕೆ ಅಳವಡಿಸಿ ಲವ, ಕುಶರಿಗೆ ಕಲಿಸಿದರು. ಲವ, ಕುಶರು ಅದನ್ನು ಶ್ರೀರಾಮನ ಆಸ್ಥಾನದಲ್ಲಿ ಹಾಡಿದರು.

**ಆದಿವರಾಳಿ**—ಈ ರಾಗವು ೫೭ನೆಯ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ನಿ ದ ಪ ಮ ರಿ ಮ ಗ ಸ

**ಆದಿವಸು**—ಈ ರಾಗವು ೪೧ ನೆಯ ಮೇಳಕರ್ತ ಪಾವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ದ ಮ ಗ ಸ

**ಆಲಂಬನವಿಭಾವ**—ರಸಗಳೂ ಸ್ಥಾಯಿ ಭಾವಗಳು ಯಾವುದನ್ನು ಆಶ್ರಯಿಸಿರುತ್ತವೋ ಅವು ಆಲಂಬನ ವಿಭಾವ. ರಸಗಳೂ, ಸ್ಥಾಯಿ ಭಾವಗಳೂ 'ನಾಯಕ–ನಾಯಕಿ'ಯರನ್ನು ಆಶ್ರಯಿಸುತ್ತವೆ. ನಾಯಕ–ನಾಯಕಿಯರ ವ್ಯಕ್ತಿತ್ವಗಳ, ಶೀಲ, ರೀತಿ, ನೀತಿ, ಸತ್ವದ ಸೂಕ್ಷ್ಮ ಸ್ವರೂಪದ ದರ್ಶನವು ಆಲಂಬನ ವಿಭಾವ.

**ಆರಭಟಿವೃತ್ತಿ** ಭರತನಾಟ್ಯಶಾಸ್ತ್ರರೀತ್ಯಾ ರೌದ್ರ, ಕ್ರೋಧ, ಆವೇಗಾದಿಗಳು, ಗುಣಗಳು, ವಿವಿಧ ರೀತಿಯ ಕಪಟತ್ವ, ವಂಚನೆ, ಗರ್ವ, ಅನೃತ ವಾಕ್ಯಗಳು ಮೊದಲಾದುವುಗಳಿಂದ ಪ್ರಕಟಿಸಲ್ಪಡುವ ಉದ್ಧತ ಭಾವನೆಗೆ ಆರಭಟ ವೃತ್ತಿ ಎಂದು ಹೆಸರು. ಇದರಲ್ಲಿ ಸಂಕ್ಷಿಪ್ತಕ, ಅವಘಾತ, ವಸ್ತು ಸ್ಥಾಪನ, ಸಂಪೇಟ ಎಂದು ನಾಲ್ಕು ವಿಧಗಳಿವೆ.

**ಆದಿವಾಯಿಲಾರ್**—ಇವರು ಭರತನಾಟ್ಯ ಶಾಸ್ತ್ರಗ್ರಂಥವಾದ 'ಭರತ ಸೇನಾಪತೀಯಂ' ಎಂಬ ತಮಿಳು ಗ್ರಂಥವನ್ನು ತಮಿಳಿನ ವೆಂಬಾ ವೃತ್ತದಲ್ಲಿ ರಚಿಸಿದ್ದಾರೆ. ಶಿಲಪ್ಪದಿಕಾರಂ ಎಂಬ ಗ್ರಂಥದ ವ್ಯಾಖ್ಯಾನಕಾರನಾದ ಅಡಿಯಾರ್ಕ್ಕುನಲ್ಲಾರ್ ಎಂಬುವನು ಈ ಗ್ರಂಥದಿಂದ ಅನೇಕ ಅಂಶಗಳನ್ನು ಉದ್ಧರಿಸಿದ್ದಾನೆ. ತೋಲ್ಕಾಪ್ಪಿಯಂ ಮತ್ತು ತಿರುಮುರುಗಾರುಪ್ಪಡೈ ಎಂಬ ಗ್ರಂಥಗಳ ವ್ಯಾಖ್ಯಾನಗಳಲ್ಲಿ ನಾಚಿನಾರ್ಕ್ಕಿನಿಯರ್ 'ಎಂಬ ವಿದ್ವಾಂಸನೂ 'ಭರತಸೇನಾಪತೀಯ'ದಿಂದ ಹಲವು ಭಾಗಗಳನ್ನು ಉದ್ಧರಿಸಿದ್ದಾನೆ. ಇದೇ ಹೆಸರಿನ ಮತ್ತೊಂದು ಗ್ರಂಥವನ್ನು ಮದ್ರಾಸಿನ ಕಲಾಕ್ಷೇತ್ರವು ಪ್ರಕಟಿಸಿದೆ.

**ಆತ್ಮನಾಥ ಭಾಗವತರು**—ಇವರು ೧೯ನೆ ಶತಮಾನದಲ್ಲಿದ್ದ ಒಬ್ಬ ಪ್ರಸಿದ್ಧ ಸಂಗೀತ ವಿದ್ವಾಂಸರು. ಇವರು ತ್ರಿಸ್ಥಾಯಿಗಳಲ್ಲಿ ಬಹು ಸುಲಭವಾಗಿ ಸೊಗಸಾಗಿ ಹಾಡುತ್ತಿದ್ದುದರಿಂದ ಇವರಿಗೆ 'ವಜ್ರಕಂಠಭಾಗವತರ್' ಎಂಬ ಬಿರುದು ಬಂದಿತು.

**ಆತೋದ್ಯ ತುಂಬುರು**—ಕಂಚಿಯ ೨ನೆಯ ನರಸಿಂಹವರ್ಮ ಪಲ್ಲವನಿಗೆ (ಕ್ರಿ ಶ ೬೮೦-೭೨೦) ಈ ಬಿರುದು ಇದ್ದಿತು. ವಾದ್ಯ ವಿದ್ಯಾಧರ ಮತ್ತು ವೀಣಾನಾರದ ಎಂಬ ಇನ್ನೆರಡು ಬಿರುದುಗಳೂ ಇದ್ದುವು.

**ಆದ್ರ್ರದೇಶೀ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ ನಿ ಸ

ಅ: ಸ ದ ಪ ಮ ಗ ರಿ ಸ

ಉಪಾಂಗರಾಗ, ಸಾರ್ವಕಾಲಿಕವಾದ ಶೋಕರಸ ಪ್ರಧಾನರಾಗ. ಸ ನಿ ದ ಪ ಎಂಬುದು ಅಪರೂಪ ಪ್ರಯೋಗ. ಗ ಗ ಗ ರಿ ಸ ಮತ್ತು ದ ದ ದ ಸ ನಿ ಸ ಎಂಬ ಸ್ವರಗುಚ್ಛಗಳ ಪ್ರಯೋಗಗಳು ರಾಗದ ಸೌಂದರ್ಯ ವಿಶೇಷವನ್ನು ಹೊರಗೆಡಹುತ್ತವೆ. ಮುತ್ತುಸ್ವಾಮಿದೀಕ್ಷಿತರ 'ಶ್ರೀ ಗಣೇಶಾತ್ಪರಂ' (ಝಂಪ) ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

ಇದೇ ಹೆಸರಿನ ಇನ್ನೆರಡು ರಾಗಗಳಿವೆ. ಇವೂ ಸಹ ೧೫ನೆಯ ಮೇಳಕರ್ತದ ಜನ್ಯರಾಗಗಳು.

**ಆದ್ರ್ರದೇಶಿಕ**—ಈ ರಾಗವು ೧೫ನೇ ಮೇಳಕರ್ತ ಮಾಯಾ ಮಾಳವಗೌಳ ವದ ಒಂದು ಜನ್ಯರಾಗ

(೧) ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

(೨) ಆ: ಸ ರಿ ಗ ಮ ನಿ ದ ನಿ ಸ

ಅ: ಸ ದ ಮ ಸ ರಿ ಸ ರಿ ಸ

(೩) ಆ: ಸ ರಿ ಮ ಪ ನಿ ದ ಸ

ಅ: ಸ ನಿ ದ ನಿ ಪ ದ ಮ ಗ ರಿ ಗ ಸ

**ಆದ್ರಾ್ರಂಬರಿ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ರಿ ಸ

**ಆಧಾರಷಡ್ಜ**—ಶ್ರುತಿಗೆ ಆಧಾರವಾದ ಸ್ವರ. ಇದು ಮಧ್ಯಮ ಸ್ಥಾಯಿ ಷಡ್ಜ.

**ಆಧಾರಂಗ್**—ಹಿಂದುಸ್ಥಾನೀ ಸಂಗೀತದ ಖಯಾಲ್‌ಗಳ ಪ್ರಸಿದ್ಧ ವಾಗ್ಗೇಯ ಕಾರ. ಇವನು ಕೊನೆಯ ಮೊಗಲ್ ಚಕ್ರವರ್ತಿ ಮಹಮದ್ ಷಾನ ಆಸ್ಥಾನ ವಿದ್ವಾಂಸನಾಗಿದ್ದನು.

**ಆಧುನಿಕ ಪದ್ಧತಿ**—ಈಗ ಪ್ರಚಲಿತವಿರುವ ಸಂಗೀತ ಪದ್ಧತಿ.

**ಆಧುನಿಕ ಪ್ರಸಿದ್ಧ ರಾಗಗಳು** — ಆಧುನಿಕ ಕಾಲದಲ್ಲಿ ಚಿರಪರಿಚಿತವಾಗಿರುವ ರಾಗಗಳು. ಹಿಂದೆ ಪ್ರಸಿದ್ಧವಾಗಿದ್ದ ರಾಗಗಳಿಗೆ ಪ್ರಾಕ್ಪ್ರಸಿದ್ಧರಾಗಗಳೆಂದು ಹೆಸರು. ಈ ಬಗೆಯ ವರ್ಗೀಕರಣವು ಶಾರ್ಙ್ಗದೇವನ 'ಸಂಗೀತ ರತ್ನಾಕರ'ದಲ್ಲಿ ಕಂಡು ಬರುತ್ತದೆ.

**ಆಹಾರ್ಯಾಭಿನಯ** — ಒಡವೆ ವಸ್ತ್ರ ವರ್ಣಾದಿಗಳಿಂದ ಅಲಂಕೃತವಾದ ಅಂಗಾದ್ಯಭಿನಯ ಪ್ರಯುಕ್ತವಾಗಿ ಅಭಿವ್ಯಕ್ತವಾಗುವಂತಹುದು ಆಹಾರ್ಯಾಭಿನಯ. ನಾಟ್ಯಪ್ರಯೋಗದ ಯಶಸ್ಸಿಗೆ ಇದು ಸಹಕಾರಿ ಆಭರಣಾದಿ ವೇಷಭೂಷಣಗಳಿಂದ ಭಾವಪುಷ್ಟಿಯನ್ನು ಸೂಚಿಸುವಂತಹ ಈ ಆಹಾರ್ಯಾಭಿನಯವನ್ನು ನೇಪತ್ಯವಿಧಿ ಎಂದು ಕರೆಯುತ್ತಾರೆ ಇದರಲ್ಲಿ ಪುಸ್ತ, ಅಲಂಕಾರ, ಅಂಗರಚನ ಮತ್ತು ಸಂಜೀವ ಎಂಬ ನಾಲ್ಕು ವಿಧಗಳಿವೆ.

**ಆಂಗಿಕಾಭಿನಯ:** — ಭರತನಾಟ್ಯದಲ್ಲಿ ನಾಲ್ಕು ಬಗೆಯ ಅಭಿನಯಗಳಿವೆ. ಇವುಗಳಲ್ಲಿ ಆಂಗಿಕವು ಒಂದು ವಿಧ. ಇದರಲ್ಲಿ ವಾಕ್ಯ, ಸೂಚ್ಯ, ಅಂಕುರ, ಶಾಖ, ನಾಟ್ಯಾಯಿತ ಮತ್ತು ನಿವೃತ್ಯಂಕುರ ಎಂಬ ಆರು ವಿಧಗಳಿವೆ.

**ಆಂಧಾಳಿ** — ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ಪ ಮ ರಿ ಗ ಮ ರಿ ಸ

ಇದು 'ಸಂಗೀತ ಸಮಯಸಾರ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಪುರಾತನ ರಾಗ ಸಂಗೀತ ಸಂಪ್ರದಾಯ ಪ್ರದರ್ಶಿನಿ ಎಂಬ ಗ್ರಂಥದಲ್ಲಿ ಈ ರಾಗಕ್ಕೆ ಷಾಡವ ಆರೋಹಣ-ಅವರೋಹಣಗಳನ್ನು ಕೊಟ್ಟಿದೆ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

ಆದರೆ ಇದಕ್ಕೆ ಲಕ್ಷ್ಯದ ಆಧಾರವು ಕಂಡು ಬರುವುದಿಲ್ಲ.

ಇದೊಂದು ಉಪಾಂಗರಾಗ. ಸಾರ್ವಕಾಲಿಕ ರಾಗ. ತ್ಯಾಗರಾಜರ 'ಅಭಿಮಾನ ಮುಲೇದೇಮಿ' ಮತ್ತು ಮುತ್ತುಸ್ವಾಮಿ ದೀಕ್ಷಿತರ 'ಬೃಹನ್ನಾಯಕಿ' ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಆಂಧಾಳಿಭಾಷಾ** — 'ಸಂಗೀತ ರತ್ನಾಕರ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗದ ಹೆಸರು.

**ಆಂಧದೇಶಿಕ** — ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಆಂಧ್ರಿ**— 'ಸಂಗೀತ ರತ್ನಾಕರ' ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಹನ್ನೊಂದು ವಿಕೃತ ಜಾತಿಗಳಲ್ಲಿ ಒಂದರ ಹೆಸರು

**ಆನಯ್ಯ**—ದಕ್ಷಿಣ ಭಾರತದ ಒಬ್ಬ ಪ್ರಸಿದ್ಧ ವಾಗ್ಗೇಯಕಾರರಾದ ಆನಯ್ಯನವರು ಮಹಾವೈದ್ಯನಾಥ ಅಯ್ಯರ್‌ರವರ ಸ್ವಗ್ರಾಮವಾದ ತಂಜಾವೂರು ಜಿಲ್ಲೆಯ ವೈಯ್ಯಚೇರಿಯವರು. ಇವರ ತಂದೆ ವೆಂಕಟಸುಬ್ಬಯ್ಯರ್. ಆನಯ್ಯನವರು ಸಂಸ್ಕೃತ, ತೆಲುಗು ಮತ್ತು ತಮಿಳಿನಲ್ಲಿ ವಿದ್ವಾಂಸರಾಗಿದ್ದು ತಂಜಾವೂರಿನ ಸರ್ಫೋಜಿ ಮಹಾರಾಜನ ಆಸ್ಥಾನ ವಿದ್ವಾಂಸರಾಗಿದ್ದರು. ಇವರ ಸಹೋದರ ಅಯ್ಯಾ ಅಯ್ಯರ್ ಸಂಗೀತ ವಿದ್ವಾಂಸರಾಗಿದ್ದರು. ಮಹಾವೈದ್ಯನಾಥ ಅಯ್ಯರ್‌ರವರು ಆನಯ್ಯನವರ ಶಿಷ್ಯರಾಗಿದ್ದರು. ಉಮಾದಾಸ - ಎಂಬ ಅಂಕಿತದಲ್ಲಿ ಆನಯ್ಯನವರು ಹಲವು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಸಿದ್ಧವಾಗಿರುವ ಕೆಲವು ಕೃತಿಗಳು—

| | |
|---|---|
| ಇಂತ ಪರಾಕ | — ನಾದನಾಮಕ್ರಿಯ |
| ಭಜನ ಸೇಯವೇ ಓ ಮನಸಾ | — ಕೇದಾರ |
| ಮಹಿಮತೆಲಿಯ ತರಮಾ | — ಶಂಕರಾಭರಣ |
| ಪರಾಕೇಲ ಬಾಲ | — ರೀತಿಗೌಳ |
| ಎನ್ನತ್ತ್ಕಕ್ಕುದು ವಿ ಇಕ್ಕಾಯಂ | — ಶುದ್ಧ ಸಾವೇರಿ |
| ಕಾಣ ಕಣ್ಣಾಯಿರಂ | — ನೀಲಾಂಬರಿ |
| ಎಲಿಯೇನ್ನೈ | — ಯದುಕುಲಕಾಂಭೋಜಿ |
| ಪೋದಂ ಪೋದುವಯ್ಯಾ | — ಪುನ್ನಾಗವರಾಳಿ. |

**ಆನಾಯನಾಯನಾರ್**—ತಮಿಳು ದೇಶದ ಶೈವಸಂತರಾದ ೬೩ ನಾಯನಾರರಲ್ಲಿ ಇವರು ಒಬ್ಬರು. ಕೊಳಲು ನುಡಿಸುವುದರಲ್ಲ ಮಹಾಪ್ರವೀಣರಾಗಿದ್ದರು. ಇವರ ವೇಣುಗಾನವನ್ನು ಪಶು, ಗಿಡ ಮರಗಳೂ ಕೇಳುತ್ತಿದ್ದುವಂತೆ.

**ಆನಕ**—ಪುರಾತನ ಕಾಲದಲ್ಲಿ ಶುಭ ಪ್ರಸಂಗಗಳಲ್ಲಿ ಬಾರಿಸುತ್ತಿದ್ದ ಒಂದು ದೊಡ್ಡ ಮದ್ದಲೆ.

**ಆನಕದುಂದುಭಿ**—ಯುದ್ಧ ಕಾಲದಲ್ಲಿ ಬಾರಿಸುತ್ತಿದ್ದ ನಗಾರಿ.

**ಆನೀಕಿನಿ**—ಈ ರಾಗವು ೭ನೆಯ ಮೇಳಕರ್ತ ಸೇನಾವತಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ದ ಸ̇

ಅ : ಸ̇ ನಿ ದ ಪ ಮ ಗ ರಿ ಸ

**ಆನೂರು ರಾಮಕೃಷ್ಣ**—ಇವರು ೧೯೩೧ರಲ್ಲಿ ಬೆಂಗಳೂರಿನ ಸಮೀಪದಲ್ಲಿರುವ ಹುಣಸಮಾರನ ಹಳ್ಳಿಯಲ್ಲಿ ವೈಣಿಕರ ಕುಟುಂಬದಲ್ಲಿ ಜನಿಸಿದರು. ಇವರ ತಂದೆ ಶ್ಯಾಮಣ್ಣನವರು, ತಾಯಿ ಮಹಾಲಕ್ಷಮ್ಮ ಮತ್ತು ತಾತ ಸುಬ್ಬರಾಯಶಾಸ್ತ್ರಿಯವರೂ ವೈಣಿಕರು. ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಆನೂರು

ಇವರ ಹಿಂದಿನ ಸ್ಥಳ. ಚಿಕ್ಕಪ್ಪ ಆನೂರು ಸೂರ್ಯ ನಾರಾಯಣ ಹಿರಿಯ ಗಾಯಕರು. ಇವರ ಪ್ರಭಾವ ಚಿಕ್ಕಂದಿನಲ್ಲೇ ಉಂಟಾಯಿತು. ತಂದೆಯವರಲ್ಲಿ ಪ್ರಥಮ ಶಿಕ್ಷಣ. ನಂತರ ರತ್ನಗಿರಿ ಸುಬ್ಬಾಶಾಸ್ತ್ರಿಯವರಲ್ಲಿ ಎರಡು ವರ್ಷಗಳ ಕಾಲ ಕಲಿತು, ತರುವಾಯ ಸಂಗೀತ ವಿದ್ಯಾಸಾಗರ ಆರ್. ಆರ್. ಕೇಶವಮೂರ್ತಿಯವರಲ್ಲಿ ಶಿಕ್ಷಣ ಪಡೆದರು. ಚಿಕ್ಕಪ್ಪನವರ ಕೂಡ ಕಚೇರಿಗಳಿಗೆ ಹೋಗುತ್ತಿದ್ದರು. ಕೊಳಲು ವಿದ್ವಾಂಸ ಎಂ. ಆರ್. ದೊರೆಸ್ವಾಮಿಯವರ ಪ್ರೋತ್ಸಾಹ ಸಿಕ್ಕಿತು. ಪ್ರಥಮವಾಗಿ ತಂಜಾವೂರು ಎಂ. ತ್ಯಾಗರಾಜನ್‌ರವರ ಗಾಯನಕ್ಕೆ ಪಕ್ಕವಾದ್ಯವನ್ನು ೧೯೬೧ರಲ್ಲಿ ನುಡಿಸಿದರು ಅಲ್ಲಿಂದ ಮುಂದೆ ಸ್ಥಳೀಯ ಮತ್ತು ಪ್ರಸಿದ್ಧರಾದ ಹೊರಗಿನ ಪ್ರಾಂತ್ಯಗಳ ವಿದ್ವಾಂಸರ ಕಚೇರಿಗಳಿಗೆ ನುಡಿಸಿ ಪ್ರಖ್ಯಾತರಾಗಿದ್ದಾರೆ. ೧೯೫೩ರಲ್ಲಿ ಚೌಡಯ್ಯನವರ ಅಯ್ಯನಾರ್ ಸಂಗೀತ ಕಲಾಶಾಲೆಯಲ್ಲಿ ಅಧ್ಯಾಪಕರಾದರು. ೧೯೭೩ರಲ್ಲಿ ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ಸಂಗೀತದ ಅಧ್ಯಾಪಕರಾದರು. ಇವರ ನುಡಿಸುವಿಕೆಯಲ್ಲಿ ಮಾಧುರ್ಯ, ಲಯಜ್ಞಾನ, ಇಂಪಾದ ಲಲಿತವಾದ ಶೈಲಿ ಎದ್ದು ಕಾಣುತ್ತವೆ.

**ಆನೂರು ಸೂರ್ಯನಾರಾಯಣ**—೫೫ ವರ್ಷಗಳಿಗೂ ಹಿಂದೆ ಜನ್ಮವೆತ್ತಿದ ಖ್ಯಾತ ಸಂಗೀತ ವಿದ್ವಾಂಸರಾದ ಸೂರ್ಯನಾರಾಯಣರು ವೀಣಾ ಸುಬ್ಬರಾಯಶಾಸ್ತ್ರಿಯವರ ಕಿರಿಯ ಪುತ್ರ. ತಂದೆಯವರಲ್ಲಿ ಬಾಲ್ಯದಲ್ಲೇ ಶಿಕ್ಷಣ ಪಡೆದು ನಂತರ ಆ ಕಾಲದಲ್ಲಿ ಪ್ರಖ್ಯಾತ ಶಿಕ್ಷಕರೂ, ವಿದ್ವಾಂಸರೂ ಆಗಿದ್ದ ಪಾಲ್‌ಘಾಟ್ ಸೋಮೇಶ್ವರ ಭಾಗವತರಲ್ಲಿ ಉನ್ನತ ಶಿಕ್ಷಣ ಪಡೆದರು ಭಾಗವತರ ಮರಣಾನಂತರ ಕರೂರು ಕೃಷ್ಣರಾಯರಲ್ಲೂ, ಹಿರಿಯ ಸಹೋದರ ವೀಣೆ ಶ್ಯಾಮಣ್ಣನವರಲ್ಲೂ ಶಿಕ್ಷಣ ಪಡೆದರು. ಸರ್ ಸಿ. ವಿ. ರಾಮನ್‌ರವರ ಅಧ್ಯಕ್ಷತೆಯಲ್ಲಿ ಒಂದು ಶಾಲಾವಾರ್ಷಿಕೋತ್ಸವದಲ್ಲಿ ಪ್ರಥಮವಾಗಿ ಕಚೇರಿ ಮಾಡಿ ಅವರ ಮೆಚ್ಚಿಗೆ ಪಡೆದರು. ಸರಸ್ವತಿ ಆರ್ಕೆಸ್ಟ್ರಾ ಎಂಬ ಕಲಾವಿದರ ವೃಂದದ ಪ್ರಮುಖ ಗಾಯಕರಾದರು. ಪ್ರಸಿದ್ಧ ನಾಟ್ಯಕಲಾಕೋವಿದರಾದ ಯು. ಎಸ್ ಕೃಷ್ಣರಾವ್ ಮತ್ತು ರಾಮಗೋಪಾಲ್‌ರ ವೃಂದಕ್ಕೆ ಅವರ ಕೋರಿಕೆಯಂತೆ ಸೇರಿ ಅವರ ನೃತ್ಯಪ್ರದರ್ಶನದ ಕಾರ್ಯಕ್ರಮಗಳಲ್ಲಿ ಪದಗಳು ವರ್ಣಗಳನ್ನು ನಿರೂಪಿಸುವ ಕೆಲಸದಲ್ಲಿ ಸಹಾಯಕರಾದರು. ಇದರಿಂದ ಬಹಳ ಪ್ರಖ್ಯಾತರಾದರು. ಭರತನಾಟ್ಯ ಪ್ರದರ್ಶನಗಳಲ್ಲಿ ಹಾಡುವುದಲ್ಲದೆ, ಕರ್ಣಾಟಕ ಮತ್ತು ಹೊರಗಡೆ ಪ್ರಾಂತ್ಯಗಳಲ್ಲಿ ಕಚೇರಿಗಳಲ್ಲಿ ಮತ್ತು ಮದ್ರಾಸ್, ಬೆಂಗಳೂರು ಮತ್ತು ಮೈಸೂರು ಆಕಾಶವಾಣಿ ಕೇಂದ್ರಗಳಿಂದ ಹಾಡುತ್ತಿದ್ದರು. ತಂಜಾವೂರಿಗೆ ಹೋಗಿ 'ತಾತ' ಎಂದು ಪ್ರಸಿದ್ಧರಾಗಿದ್ದ ಪಂದನಲ್ಲೂರು ಮೀನಾಕ್ಷಿಸುಂದರಂಪಿಳ್ಳೆಯವರಲ್ಲಿ ನಟುವಾಂಗಂ ಹಾಡುವುದರಲ್ಲಿ ತರಬೇತಿ ಪಡೆದರು. ನಂತರ ಪ್ರಸಿದ್ಧ ನಾಟ್ಯ ಕಲಾಕೋವಿದೆಯರಾದ ತಾರಾ ಚೌಧುರಿ, ಇಂದ್ರಾಣಿ ರೆಹಮಾನ್ ಮುಂತಾದವರ ತಂಡದಲ್ಲಿ ಸೇರಿ

ಸಹಕರಿಸಿದರು. ಭಾರತ ಸರ್ಕಾರದ ಸಾಂಸ್ಕೃತಿಕ ನಿಯೋಗದ ಸದಸ್ಯರಾಗಿ ರಷ್ಯ, ಪೋಲೆಂಡ್, ಸ್ವಿಟ್ಸರ್‌ಲೆಂಡ್, ಜೆಕೊಸ್ಲೊವಾಕಿಯಾ ಮುಂತಾದ ದೇಶಗಳಿಗೆ ಭೇಟಿ ಇತ್ತರು. ಪ್ರಸಿದ್ಧ ಗುರು ಕುಂಜು ಕುರುಪ್‌ರವರಲ್ಲಿ ಕಥಕಳಿ ನೃತ್ಯದ ಶಿಕ್ಷಣ ಪಡೆದರು ಸಂಗೀತ ಮತ್ತು ನೃತ್ಯಕ್ಷೇತ್ರಗಳೆರಡರಲ್ಲೂ ತಮ್ಮ ಹಿರಿಯ ಸ್ಥಾನವನ್ನು ಉಳಿಸಿಕೊಂಡು ಬಂದರು. ದೇವುಡು ನರಸಿಂಹಶಾಸ್ತ್ರಿಗಳ ಇಚ್ಛೆಯಂತೆ ಭಕ್ತಮಾರ್ಕಂಡೇಯ ಮುಂತಾದ ನಾಟಕಗಳಲ್ಲಿ ಪಾತ್ರವಹಿಸಿದುದಲ್ಲದೆ ಸುಬ್ಬಯ್ಯನಾಯ್ಡುರವರ ಸಂಗೀತ ಸಾಮ್ರಾಜ್ಯ ನಾಟಕ ಮಂಡಲಿಯ ಹಲವು ನಾಟಕಗಳಲ್ಲಿ ಪಾತ್ರವಹಿಸಿದರು. ೧೯೪೦ರಲ್ಲಿ ಲಲಿತಕಲಾ ಭಾರತಿ ಎಂಬ ಸಂಗೀತ ಕಲಾ ಶಾಲೆಯನ್ನು ಸ್ಥಾಪಿಸಿದರು ಇಲ್ಲಿ ವೀಣೆ ಮತ್ತು ಗಾಯನದಲ್ಲಿ ಶಿಕ್ಷಣ ಕೊಡಲಾಗುತ್ತಿದೆ. ನೃತ್ಯ ಪ್ರದರ್ಶನಗಳ ತಂಡಗಳೊಡನೆ ವಿದೇಶಗಳಿಗೆ ಹೋದಾಗ ವೀಣೆ ಕಚೇರಿಗಳನ್ನು ಮಾಡಿದ್ದಾರೆ. ಪದಗಳನ್ನು ಹಾಡುವುದರಲ್ಲಿ ಟೈಗರ್ ವರದಾಚಾರ್ಯರಿಂದ ತಾವು ಕಲಿತುದನ್ನು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಇತ್ತೀಚೆಗೆ ಶ್ರೀ ಶಂಕರನಾರಾಯಣ ಶಾಸ್ತ್ರಿಗಳು ಸ್ಥಾಪಿಸಿರುವ ಶ್ರೀ ಲಲಿತಾ ಪರಮೇಶ್ವರಿ ಸನ್ನಿಧಾನ ಎಂಬ ಜಪ ಮತ್ತು ಧ್ಯಾನ ಕೇಂದ್ರವನ್ನು ಸೇರಿ ಶಾಸ್ತ್ರಿಗಳ ಶಿಷ್ಯರಾಗಿ, ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದಾರೆ. ತಮ್ಮ ತಾಯಿಯ ನೆನಪಿಗಾಗಿ ತಮ್ಮ ಆರಾಧ್ಯ ದೇವಿಯಾದ ಲಲಿತಾ ಪರಮೇಶ್ವರಿಯನ್ನು ಕುರಿತು ೩೦ ಕೃತಿಗಳನ್ನೂ, ಹಲವು ವರ್ಣಗಳು, ಜಾವಳಿ ಮತ್ತು ತಿಲ್ಲಾನಗಳನ್ನೂ ರಚಿಸಿದ್ದಾರೆ. ಪ್ರಭಾತ್ ಕಲಾವಿದರು ಎಂಬ ಕಲಾವೃಂದದ ಸಂಗೀತ ಮತ್ತು ನಾಟ್ಯ ನಿರ್ದೇಶಕರೂ ಆಗಿ ಸೇವೆಸಲ್ಲಿಸಿದ್ದಾರೆ. ಇವರಿಗೆ ಗಾನ ವಿದ್ಯಾಧರ ಎಂಬ ಬಿರುದು ಇದೆ. ಸೂರ್ಯನಾರಾಯಣರು ಗೀತ ಮತ್ತು ನೃತ್ಯದ ಮಧುರ ಸಂಗಮದ ಪ್ರತೀಕವಾಗಿದ್ದಾರೆ.

**ಆನಂದ** —ವಿವಾಹದ ಸಂದರ್ಭಗಳಲ್ಲಿ ಮಂಗಳಸೂತ್ರ ಧಾರಣೆಯಾದ ನಂತರ ನಾಗಸ್ವರವಾದಕರು ನುಡಿಸುವ ಮಂಗಳಕರವಾದ ಹಾಡು. ಇದು ಭೈರವಿರಾಗದಲ್ಲಿದ್ದು 'ಆನಂದ ಆನಂದ ಮಾಯೆನೆ' ಎಂದು ಆರಂಭವಾಗುತ್ತದೆ.

**ಆನಂದಕ್ಕಲಿಪ್ಪ್**—ತಮಿಳು ಜಾನಪದದಲ್ಲಿ ನಾದ ನಾಮಕ್ರಿಯ ರಾಗಕ್ಕೆ ಈ ಹೆಸರಿದೆ ಇದು ಗೇಯನಾಟಕಗಳಲ್ಲಿ ಬರುತ್ತದೆ

**ಆನಂದಕುಮಾರಸ್ವಾಮಿ** (೧೮೭೭–೧೯೪೭) – ಸಂಗೀತ, ನಾಟ್ಯ ಮತ್ತು ಕಲೆಯನ್ನು ಕುರಿತು ಹಲವು ಉದ್ಗ್ರಂಥಗಳು ಮತ್ತು ಪ್ರಬಂಧಗಳನ್ನು ಬರೆದಿರುವ ಪ್ರಸಿದ್ಧ ವಿದ್ವಾಂಸ ಮತ್ತು ಕಲಾ ವಿಮರ್ಶಕ. ಇವರ ತಂದೆ ಸಿಂಹಳ ದೇಶದ ಹಿಂದು ಮತ್ತು ತಾಯಿ ಸ್ಕಾಟ್ಲೆಂಡಿನವಳು. ಭಾರತದ ಕಲೆ, ಪುರಾಣ, ದರ್ಶನ, ಸಾಹಿತ್ಯ, ಶಿಲ್ಪ ಮತ್ತು ಧರ್ಮ ಇವುಗಳನ್ನು ಕುರಿತು ಕೂಲಂಕಷವಾಗಿ ಆಳವಾಗಿ ಅಧ್ಯಯನ ಮಾಡಿ ಗ್ರಂಥಗಳನ್ನು ಬರೆದರು. ಡ್ಯಾನ್ಸ್ ಆಫ್ ಶಿವ ಎಂಬುದು ಇವರ ಒಂದು

ಬಹು ಪ್ರಸಿದ್ಧ ಗ್ರಂಥ. ಇದು ಭಾರತೀಯ ಕಲೆಯ ಹೃದಯವನ್ನು ತೆರೆದು ತೋರಿಸುವ ವಿದ್ವತ್ಪೂರ್ಣವಾದ ಗ್ರಂಥ. ಭಾರತ ಮತ್ತು ಇಂಡೋನೇಷ್ಯದ ಕಲೆಯ ಇತಿಹಾಸ ಎಂಬುದು ಇವರ ಮತ್ತೊಂದು ಉದ್ಗ್ರಂಥ. ಇವರು ಭಾರತ ಹಾಗೂ ಏಷ್ಯದ ಕಲೆಯ ಹಿರಿಮೆಯನ್ನು ಜಗತ್ತಿಗೆ ಮನವರಿಕೆ ಮಾಡಿಕೊಟ್ಟ ಮಹಾ ವಿದ್ವಾಂಸರು.

**ಆನಂದಗಜಪತಿ**—ಇವರು ೧೯ನೆಯ ಶತಮಾನದಲ್ಲಿದ್ದ ವಿಜಯನಗರಂ ಸಂಸ್ಥಾನದ ದೊರೆ. ವಿದ್ವಾಂಸರ ಮತ್ತು ಕಲೆಯ ಪೋಷಕರಾಗಿದ್ದು ಹಲವು ಕೃತಿಗಳನ್ನು ರಚಿಸಿದ್ದಾರೆ. ತಚ್ಚೂರು ಶಿಂಗರಾಚಾರ್ಲು ಸಹೋದರರ ಕರ್ಣಾಟಕ ಸಂಗೀತದ ಗ್ರಂಥಗಳನ್ನು ಪ್ರಕಟಿಸಲು ಸಹಾಯ ಮಾಡಿದರು.

**ಆನಂದಭೈರವಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ

ಆ: ಸ ಗ ರಿ ಗ ಮ ಪ ದ ಪ ಸ̇

ಅ ಸ̇ ನಿ ದ ಪ ಮ ಗ ರಿ ಸ

ತ್ರಿಸ್ವರ ಭಾಷಾಂಗರಾಗ ಆರೋಹಣದಲ್ಲಿ ವಕ್ರಸಂಪೂರ್ಣ. ಅವರೋಹಣದಲ್ಲಿ ಕ್ರಮ ಸಂಪೂರ್ಣ. ಮೇಳದಲ್ಲಿ ಶುದ್ಧ ಧೈವತವಿದ್ದರೂ ಚತುಶ್ರುತಿ ಧೈವತ ಪ್ರಯೋಗವು ಸುಮಾರು ೨೦೦ ವರ್ಷಗಳಿಂದೀಚೆಗೆ ರೂಢಿಗೆ ಬಂದಿದೆ ಪ ದ ಪ ಮ, ಮ ದ ಪ ಮ ಎಂಬ ಪ್ರಯೋಗಗಳಲ್ಲಿ ಶುದ್ಧ ಧೈವತವು ಕಂಡುಬರುತ್ತದೆ. ಸಾಧಾರಣ ಮತ್ತು ಅಂತರಗಾಂಧಾರಗಳು, ಶುದ್ಧ ಮತ್ತು ಚತುಶ್ರುತಿ ಧೈವತಗಳು, ಕೈಶಿಕಿ ಮತ್ತು ಕಾಕಲಿ ನಿಷಾದಗಳು ಸಮಯೋಚಿತವಾಗಿ ಬರುತ್ತವೆ. ಸಾ ಗಾ, ಮಾ, ನೀ ಗಳು ಜೀವ ಸ್ವರಗಳು. ಜಾರುಗಮಕ, ತಿರುಪ, ರವೆ, ವಳಿ ಮತ್ತು ಖಂಡಿಸುವ ಒತ್ತು ಗಮಕಗಳು ಬರುತ್ತವೆ. ಸಾರ್ವಕಾಲಿಕರಾಗ. ಭಕ್ತಿ, ವೀರ ಮತ್ತು ಶೃಂಗಾರಾದಿರಸಗಳಿಗೆ ಒಪ್ಪುವ ಸುಂದರರಾಗ. ಈ ರಾಗದಲ್ಲಿ ಶ್ಯಾಮಾಶಾಸ್ತ್ರಿಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಗೇಯನಾಟಕಗಳಲ್ಲಿ ಮತ್ತು ಶ್ಲೋಕ ಮತ್ತು ಪದ್ಯಗಳನ್ನು ಹಾಡಲು ಹೆಚ್ಚಾಗಿ ಈ ರಾಗದಲ್ಲಿ ಹಾಡುತ್ತಾರೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | |
|---|---|---|---|
| ಸ್ವರಜತಿ | — ರಾವೇಮುಗುವಾ | — ಆದಿ | |
| ಕೃತಿ | — ಕ್ಷೀರಸಾಗರ | — ಆದಿ | — ತ್ಯಾಗರಾಜ |
| | ನೀಕೇ ತೆಲಿಯಕ ಪೋತೇ | — ಆದಿ | — ತ್ಯಾಗರಾಜ |
| | ಕಮಲಾಂಬಾ | — | — ದೀಕ್ಷಿತರು |
| | ಮಾನಸ ಗುರುಗುಹ | — ರೂಪಕ | — ದೀಕ್ಷಿತರು |
| | ತ್ಯಾಗರಾಜಯೋಗ | — ರೂಪಕ | — ದೀಕ್ಷಿತರು |
| | ನೀ ಮದಿಚಲ್ಲಗ | — ಆದಿ | — ಕವಿಮಾತೃಭೂತಯ್ಯ |

| | | | |
|---|---|---|---|
| ಶ್ರೀನಿವಾಸ ನೀನೇ | — ರೂಪಕ — | ಪುರಂದರದಾಸರು |
| ರಾಮನಾಮ ಪಾಯಸಕ್ಕೆ | — — | ಪುರಂದರದಾಸರು |
| ಓ ಜಗದಂಬ | — ಆದಿ — | ಶ್ಯಾಮಾಶಾಸ್ತ್ರಿ |
| ಮರಿವೇರೇಗತಿ | — ಛಾಪು — | ಶ್ಯಾಮಾಶಾಸ್ತ್ರಿ |
| ಮಹಾವಿಷ್ಣು | — ರೂಪಕ — | ಮುತ್ತಯ್ಯ ಭಾಗವತರು |
| ಸದ್ಭಕ್ತಿಯು | — ರೂಪಕ — | ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ |
| ಜಾವಳಿ | — ವನಿತರು — | |
| ಅಷ್ಟಪದಿ—ವಹತಿಮಲಯ ಸಮೀರೇ / ತವ ವಿರಹೇ ವನಮಾಲಿ | } — | ಜಯದೇವ |

**ಆನಂದೈ**—ಪುರಾತನ ತಮಿಳು ಸಂಗೀತದ ಕುರಿಂಜಿಯಾಳ್‌ನ ಒಂದು ಜನ್ಯ ರಾಗ.

**ಆನಂದಿನಿ ಜಾತಿ ಪ್ರಬಂಧ**—ಐದು ಅಂಗಗಳಿರುವ ಪ್ರಬಂಧ.

**ಆನಂದ ತಾಂಡವ** ಚಿದಂಬರದ ನಟರಾಜಸ್ವಾಮಿಯ ಪ್ರಸಿದ್ಧವಾದ ತಾಂಡವ ನೃತ್ಯ.

**ಆನಂದ ದಾಸರು**—ತಮ್ಮ ಹೆಸರನ್ನು ಸಾರ್ಥಕಗೊಳಿಸಿಕೊಂಡು ಪ್ರಸಿದ್ಧರಾದ ದಾಸರೆಂದರೆ ಸುರಪುರದ ಆನಂದದಾಸರು. ಇವರ ಮಾತುಗಳು, ಕೃತಿಗಳು, ಕವಿತೆ, ಗಾನ, ವೀಣಾವಾದನ ಎಲ್ಲವೂ ಆನಂದದಾಯಕ. ಇವರು ತುಂಗಭದ್ರಾ ತೀರವಲ್ಲಿರುವ ಚೀಕಲಪರವಿ ಎಂಬ ಗ್ರಾಮದಲ್ಲಿ ಜನಿಸಿದರು. ಆನಂದ ಮತ್ತು ಸಹೋದರ ಶೇಷ ವಿದ್ಯಾಭ್ಯಾಸಕ್ಕಾಗಿ ರಾಜಾಚಾರ್ಯರೆಂಬ ಮಹಾಪಂಡಿತರ ಬಳಿಗೆ ಸುರಪುರಕ್ಕೆ ಹೋಗಿ ನಿಂತರು. ಆನಂದರು ಸಂಗೀತ ವಿದ್ವಾಂಸರಲ್ಲಿ ಗಾನವಿದ್ಯೆಯನ್ನು ಕಲಿತರು. ಸುರಪುರದ ರಾಜನ ಪ್ರೀತಿಗೆ ಪಾತ್ರರಾಗಿ ವಿದ್ವತ್‌ವೇತನವನ್ನು ಪಡೆದರು. ಆನಂದರಿಗೆ ಗಾನವಿದ್ಯೆ, ವೇದಾಂತ ಮುಂತಾದುವುಗಳಲ್ಲಿ ಪ್ರೌಢಿಮೆ ಇದ್ದರೂ ಕೀರ್ತನ ಮಾಡುವುದೆಂದರೆ ಭಗ್ನ ಮನೋರಥರ ಭಿಕ್ಷಾವೃತ್ತಿ ಎಂಬ ಭಾವನೆಯಿತ್ತು. ಒಂದು ಸಲ ಜಗನ್ನಾಥದಾಸರ ಶಿಷ್ಯರಾದ ಹುಂಡೇಕಾರದಾಸ ಅಥವಾ ಶ್ರೀಶ ವಿಠಲಾಂಕಿತದಾಸರು ಸುರಪುರಕ್ಕೆ ಬಂದರು. ರಾಜಾಚಾರ್ಯರ ಮನೆಯಲ್ಲಿ ಇವರ ಕೀರ್ತನವಾಯಿತು. ಅದನ್ನು ಕೇಳಿದ ಆನಂದರ ತಪ್ಪು ತಿಳುವಳಿಕೆಯು ಬದಲಾಯಿಸಿತು. ತಾನೂ ಕೀರ್ತನಕಾರನಾಗಬೇಕೆಂಬ ಹಂಬಲ ಹೆಚ್ಚಿತು. ಶ್ರೀಶದಾಸರಲ್ಲಿ ಅಂಕಿತೋಪದೇಶವನ್ನು ಪಡೆದು 'ಕಮಲೇಶವಿಠಲ' ಎಂಬ ಅಂಕಿತದಿಂದ ಹರಿದಾಸರಾದರು. ಆನಂದದಾಸರು ಕೀರ್ತನರಂಗಕ್ಕೆ ಕಾಲಿಟ್ಟಕೂಡಲೇ ಅವರಿಗೆ ಅನನ್ಯಸಾಧಾರಣವಾದ ಪ್ರಾಶಸ್ತ್ಯವು ಬಂದಿತು. ಭಗವದ್ಗೀತೆಯನ್ನು ಅನುಸರಿಸಿ ಕೀರ್ತನ ಗೀತೆ ಎಂಬ ಗ್ರಂಥವನ್ನು ಬರೆದರು. ಇದು ಕನ್ನಡಿಗರಿಗೆ ಗೀತೆಯ ಒಂದು ಕೈಪಿಡಿ

ಯಂತಿದೆ ಸುರಪುರದ ರಾಜನು ಇವರ ಕೀರ್ತನವನ್ನು ಕೇಳಿ ಕನಕಾಭಿಷೇಕ ಮಾಡಿ ಗೌರವಿಸಿದನು ಇವರ ಕೀರ್ತಿಯು ಗದ್ವಾಲ, ವನಪರ್ತಿ, ದೋಮಕೊಂಟೆ ಮುಂತಾದ ರಾಜರ ಆಸ್ಥಾನಗಳಲ್ಲಿ ದಾಸರ ಕೀರ್ತನಗಳಾದುವು. ದಾಸರು ವೈಭವ ದಿಂದ ಕೂಡಿದ ಜೀವನ ನಡೆಸುತ್ತಿದ್ದರು.

ಹೀಗಿರಲು ಆಗಿನ ಸುರಪುರದ ರಾಜನು ಮೃತನಾಗಿ ಅವನ ಉತ್ತರಾಧಿಕಾರಿ ಯಾದವನು ವಿದ್ವಜ್ಜನರಿಗೆ ಆಶ್ರಯದಾತನಾಗಿರಲಿಲ್ಲ ದಾಸರ ಮಾಸಾಶನವು ನಿಂತಿತು. ಊಟಕ್ಕೆ ಅಭಾವವಾಯಿತು. ಆಗ ದಾಸರು ಶ್ರೀ ಮಹಾಲಕ್ಷ್ಮಿಯ ಉಪಾಸನೆ ಮಾಡಿ ಕೊಲ್ಹಾಪುರಕ್ಕೆ ಹೋಗಿ ದೇವಿಯದರ್ಶನ ಮಾಡಿ ಹಾಡಿ ಪ್ರಾರ್ಥಿ ಸಿದರು. ದಾಸರ ಗಾನವನ್ನು ಕೇಳಿದ ಶಿವಾಜಿ ಮಹಾರಾಜನು ಅವರನ್ನು ಆಹ್ವಾನಿಸಿ ಗಾಯನ ಕೀರ್ತನ ಮಾಡಿಸಿ ಸನ್ಮಾನಿಸಿದನು. ದೇವಿಯ ಕರುಣೆಯಿಂದ ದಾರಿದ್ರ್ಯವು ದೂರವಾಯಿತು. ಅನಂತರ ದಾಸರು ಉಡುಪಿಗೆ ಪ್ರಯಾಣ ಮಾಡಿ ಅಲ್ಲಿ ಬೇಲೂರು ಕೇಶವದಾಸರ ತಂದೆ ವೆಂಕಟೇಶದಾಸರ ಮನೆಯಲ್ಲಿ ಬಿಡಾರ ಮಾಡಿ ಭಾಗವತದ ದಶ ಮಸ್ಕಂದವನ್ನು ಕನ್ನಡ ಕೀರ್ತನ ರೂಪಕ್ಕಿಳಿಸಿ ಶ್ರೀಕೃಷ್ಣನಿಗೆ ಸಮರ್ಪಿಸಿದರು. ತರು ವಾಯ ಮೈಸೂರಿಗೆ ಬಂದರು ಎರಡು ವರ್ಷಗಳ ಕಾಲ ಬಿಡಾರ ಮಾಡಿದ್ದು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಕೀರ್ತನ ಮಾಡಲು ಅವಕಾಶ ದೊರೆ ಯಲಿಲ್ಲ. ಆಗ ಶ್ರೀ ಕೃಷ್ಣದೇವಾಲಯದಲ್ಲಿ ಕೀರ್ತನ ಮಾಡಿದರು. ಇದನ್ನು ಕೇಳಿಸಿಕೊಂಡ ದೊರೆಯಿಂದ ಆಹ್ವಾನ ಬಂದಿತು. ನಂತರ ಅವರಿಂದ ರಚಿತವಾದ ನಲವತ್ತು ಕೀರ್ತನೆಗಳನ್ನು ಕೇಳಿದ ಕೃಷ್ಣರಾಜರು ದಾಸರಿಗೆ ಕನಕಾಭಿಷೇಕ ಮಾಡಿ ಗೌರವಿಸಿದರು.

ಸುರಪುರವು ಬ್ರಿಟಿಷರಿಗೆ ಸೇರಿದ ಮೇಲೆ ದಾಸರು ಮಂತ್ರಾಲಯದಲ್ಲಿ ಕೆಲವು ಕಾಲ ವಾಸಿಸುತ್ತಿದ್ದರು ಅಲ್ಲಿ ಒಂದು ದಿನ ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನದ ಸನ್ನಿಧಿಯಲ್ಲಿ ರುದ್ರ ವೀಣೆಯನ್ನು ನುಡಿಸುತ್ತಿದ್ದಾಗ ಅಂತರ್ಮುಖಿಗಳಾಗಿ ಗುರು ರಾಜರ ಅನುಗ್ರಹವನ್ನು ಪಡೆದರು ಅಲ್ಲಿಂದ ಮುಂದೆ ಪಂಚಮುಖನ ಸನ್ನಿಧಿಗೆ ಹೋಗಿ ಏಕಾಂತದಲ್ಲಿದ್ದು ತಮ್ಮ ಕುಲದೈವವಾದ ನೃಸಿಂಹ ಮಂತ್ರೋಪಾಸನೆ ಮಾಡಿದರು. ಆರಾಧನಾ ಮಹೋತ್ಸವಕ್ಕೆಂದು ಮಂತ್ರಾಲಯಕ್ಕೆ ಬರುವಾಗ ತುಂಬಿ ಹರಿಯುತ್ತಿದ್ದ ತುಂಗಭದ್ರೆಯನ್ನು ದೋಣಿಯಲ್ಲಿ ದಾಟುವಾಗ ಅಪಾಯ ಒದಗಿತು. ಆಗ ಗುರು ರಾಘವೇಂದ್ರರು ಕಾಣಿಸಿಕೊಂಡು ಪಾರುಮಾಡಿ ಮಂಚಾಲೆಗೆ ಕರೆದು ಕೊಂಡು ಹೋದರು ದಾಸರನ್ನು ಕ್ಷೇಮದಿಂದ ಸೇರಿಸಿದ ನಂತರ ಆಶೀರ್ವದಿಸಿ ಗುರು ರಾಜರು ಅದೃಶ್ಯರಾದರು ಪುನಃ ಬೆಳಗ್ಗೆ ಪ್ರದಕ್ಷಿಣೆ ಮಾಡುತ್ತಿದ್ದಾಗ ಗುರು ರಾಘವೇಂದ್ರರು ದರ್ಶನಕೊಟ್ಟು ಉದಯರಾಗದ ಹಾಡನ್ನು ಹಾಡಿಸಿದರು. ಆನಂದ ದಾಸರು ಅಪರೋಕ್ಷ ಜ್ಞಾನಿಗಳಾದರು. ಯಾವಾಗಲೂ ಕೀರ್ತನ ಮಾಡುತ್ತ ಹತ್ತು ವರ್ಷಗಳ ಕಾಲವಿದ್ದರು. ಅವರ ಅಂತಿಮ ಕಾಲವೂ ಆನಂದಮಯವಾಗಿತ್ತು.

ಪುರಪುರದ ಗೋಪಾಲಕೃಷ್ಣ ದೇವಾಲಯದ ಬಹಿರಾಂಗಣದಲ್ಲಿ ಸಾವಿರಾರು ಜನರ ಸಮ್ಮೇಳನದಲ್ಲಿ ಕೀರ್ತನೆ ಮಾಡುತ್ತಾ ಆ ಆನಂದದಲ್ಲಿ ಅಂತರ್ಮುಖಿಗಳಾಗಿ ಭಗವಂತನಲ್ಲಿ ಲೀನವಾದರು. ಎಷ್ಟೋ ಹೊತ್ತಿನಮೇಲೆ ಅವರು ಭಗವಂತನಲ್ಲಿ ಸೇರಿ ಹೋದುದು ಜನರಿಗೆ ತಿಳಿಯಿತು.

ಆನಂದದಾಸರು ತಮ್ಮ 'ಕೀರ್ತನ ಗೀತೆ'ಯಲ್ಲಿ ಪ್ರತಿ ಅಧ್ಯಾಯಕ್ಕೂ ಎರಡು ಪದಗಳು, ಕೆಲವು ಆರ್ಯಗಳು ಮತ್ತು ಷಟ್ಪದಿಗಳನ್ನು ಬರೆದಿದ್ದಾರೆ. ವಿಶ್ವರೂಪ ದರ್ಶನದ ವರ್ಣನೆಯು ಕನ್ನಡ ದಂಡಕವು ಶ್ರೀ ರಾಮಾನುಜಾಚಾರ್ಯರ ವೈಕುಂಠ ಗದ್ಯದಂತೆ ಬಹುಸುಂದರವಾಗಿದೆ. ಪುರಾಣದ ಕಥೆಗಳನ್ನು ಕೀರ್ತನಕ್ಕೆ ಹೊಂದಿಸಿ ಪದ, ಪದ್ಯಗಳನ್ನಾಗಿ ಬರೆದಿಟ್ಟರು. ಭರತನಾಟ್ಯಕ್ಕೆ ಅನುಕೂಲವಾದ ನಾಯಕ–ನಾಯಕೀ ಭಾವದಿಂದ ಕೂಡಿದ ಅನೇಕ ಜಾವಳಿಗಳನ್ನು ರಚಿಸಿದರು. ಇವರ ಪದ ಗಳಲ್ಲಿ ಹಿಂದೂಸ್ಥಾನಿ ಮತ್ತು ಕರ್ಣಾಟಕ ಸಂಗೀತ ಪದ್ಧತಿಗಳ ಸಾಮರಸ್ಯವು ಬಹಳ ಚೆನ್ನಾಗಿದೆ. ಅಪರೂಪರಾಗಗಳಲ್ಲಿ ವರ್ಣಮಟ್ಟುಗಳನ್ನೆತ್ತುವುದು, ಅದರಲ್ಲಿ ಕಾಲ ಭೇದ, ತಾಳಭೇದ ಮಾಡಿ ತೋರಿಸುವುದರಲ್ಲಿ ದಾಸರು ಅದ್ವಿತೀಯರಾಗಿದ್ದರು. ಇವರ ಸಾಹಿತ್ಯದಲ್ಲಿ ಜೀವನದ ಸುಂದರ ಭಾವನೆಗಳು, ಅಶ್ಲೀಲವಲ್ಲದ ಶೃಂಗಾರ, ಕಟ್ಟಲೆ ಗಳಿಲ್ಲದ ಭಕ್ತಿ, ಜಿಜ್ಞಾಸೆಗೆ ಅವಕಾಶವಿಲ್ಲದ ತತ್ವಗಳು ಪ್ರಮುಖವಾಗಿವೆ. ಇವರು 'ಕಮಲೇಶವಿಠಲ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದರು. ಇವುಗಳಲ್ಲಿ ಅತ್ಯಂತ ಪ್ರಸಿದ್ಧವಾಗಿರುವುದು 'ಕಂಡು ಧನ್ಯನಾದೆನೋ ಉಡುಪಿ ಕೃಷ್ಣನ' ಎಂಬ ಬೇಹಾಗ್ ರಾಗದ ಕೀರ್ತನೆ.

**ಆನಂದ ಮುಖಿ** — ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಆನಂದ ನಟನಿ**—ಈ ರಾಗವು ೨ನೆಯ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಆನಂದ ಲೀಲಾ**—ಈ ರಾಗವು ೩೩ನೆಯ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಆನಂದ ವಾರಿಧಿ**— ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಆನಂದ ಲಹರಿ**—ಕಮಾನಿನಿಂದ ನುಡಿಸಲ್ಪಡುವ ಒಂದು ಪುರಾತನ ತಂತ್ರೀ ವಾದ್ಯ.

**ಆಭೋಗಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

ಔಡವರಾಗ. ಆರೋಹಣ ಮತ್ತು ಅವರೋಹಣಗಳಲ್ಲಿ ಪಂಚಮ, ನಿಷಾದಗಳು ವರ್ಜ್ಯ. ರಿಷಭ, ಧೈವತಗಳು ಪರಸ್ಪರವಾದಿ ಸಂವಾದಿ ಸ್ವರಗಳು. ಗ ಮತ್ತು ಧ ಜೀವಸ್ವರಗಳು. ಶುದ್ಧಮಧ್ಯಮ ಮತ್ತು ಚತುಶ್ರುತಿ ಧೈವತಗಳು ರಾಗಛಾಯಾ ಸ್ವರಗಳು ಮತ್ತು ನ್ಯಾಸ ಸ್ವರಗಳು. ಇವುಗಳು ದ್ವಿತವಾಗಿ ಬಂದರೆ ರಾಗಕ್ಕೆ ಕಳೆ ಹೆಚ್ಚುತ್ತದೆ. ಭಕ್ತಿರಸ ಪ್ರಧಾನವಾದ ಎಲ್ಲಾ ವೇಳೆಗಳಲ್ಲೂ ಹಾಡಬಹುದಾದ ರಾಗ. ಷಡ್ಜ, ಚತುಶ್ರುತಿರಿಷಭ, ಶುದ್ಧ ಮಧ್ಯಮ ಮತ್ತು ಚತುಶ್ರುತಿ ಧೈವತಗಳು ಸ್ವರಸ್ಥಾನಗಳು. ರಾಗವಿಸ್ತರಣೆಯಲ್ಲಿ ಶ್ರೀರಂಜನಿರಾಗಕ್ಕೆ ಹೊರಳದಂತೆ ಎಚ್ಚರಿಕೆ ವಹಿಸಬೇಕು. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | |
|---|---|---|
| ವರ್ಣ—ಎವ್ವರಿ ಬೋಧ | — ಆದಿ — | ಪಟ್ಣಂ ಸುಬ್ರಹ್ಮಣ್ಯಅಯ್ಯರ್ |
| ಕೃತಿ —ಬಾಬಾ ರಂಗ | — ಆದಿ — | ಪುರಂದರದಾಸರು |
| ಮನಸುನಿಲ್ಪ | — ಆದಿ — | ತ್ಯಾಗರಾಜರು |
| ನನ್ನು ಬ್ರೋವ | — ಆದಿ — | ತ್ಯಾಗರಾಜರು |
| ಶ್ರೀ ಲಕ್ಷ್ಮೀವರಾಹಂ | — — | ಮುತ್ತುಸ್ವಾಮಿ ದೀಕ್ಷಿತರು |
| ನೀಕೆಪುಡು | — ಆದಿ — | ಮೈಸೂರು ಸದಾಶಿವರಾವ್ |
| ಮನಸಾ ವೃಥಾ ಗರ್ವಮೇಟಿಕೆ— | — | ಪಟ್ಣಂ ಸುಬ್ರಹ್ಮಣ್ಯಅಯ್ಯರ್ |
| ಸಭಾಪತಿಕ್ಕು ವೇರುದೈವಂ | — — | ಗೋಪಾಲಕೃಷ್ಣ ಭಾರತಿ |

**ಆಭೀರನಾಟಿ**—ಸೋಮನಾಥನ ‘ ರಾಗ ವಿಬೋಧ ’ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೨೩ ಮೇಳಗಳಲ್ಲಿ ಒಂದು ಮೇಳದ ಹೆಸರು.

**ಆಭೀರಿ**—ಇದು ‘ ಸಂಗೀತ ರತ್ನಾಕರ ’ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಮಾಳವ ಕೈಶಿಕಾ ಭಾಷಾ ರಾಗಗಳಲ್ಲಿ ಒಂದು ರಾಗ. ‘ ಸಂಗೀತ ಸಮಯಸಾರ ’ ವೆಂಬ ಗ್ರಂಥದಲ್ಲಿ ಇದನ್ನು ಒಂದು ಭಾಷಾಂಗ ಸಂಪೂರ್ಣರಾಗವೆಂದು ಹೇಳಿದೆ. ‘ ಸಂಗೀತ ಸುಧಾ ’ ಎಂಬ ಗ್ರಂಥದಲ್ಲಿ ಇದನ್ನು ಮಾಳವಕೈಶಿಕಾದ ೧೩ ಭಾಷಾರಾಗಗಳಲ್ಲಿ ಒಂದೆಂದು ಹೇಳಿದೆ. ‘ ರಾಗವಿಬೋಧ ’ವೆಂಬ ಗ್ರಂಥದಂತೆ ಇದು ಸಾಯಂಕಾಲದ ವೇಳೆಯಲ್ಲಿ ಹಾಡಬಹುದಾದ ಒಂದು ಸಂಪೂರ್ಣ ರಾಗ.

**ಆಭೀರು**—ಈ ರಾಗವು ೪೭ನೆಯ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯ ರಾಗ. ಇದರಲ್ಲಿ ಮೂರು ಪಕ್ಷಗಳಿವೆ.

(೧) ಆ: ಸ ರಿ ಗ ನಿ ಸ
ಅ: ಸ ದ ಪ ಮ ಪ ಗ ರಿ ಸ
(೨) ಆ: ಸ ರಿ ಗ ರಿ ಮ ಪ ನಿ ಸ
ಅ: ದ ಪ ಮ ಗ ರಿ ಸ
(೩) ಆ: ಸ ಗ ರಿ ನಿ ನಿ ಸ ಗ ಗ ರಿ ನಿ ಸ
ಅ: ದ ಪ ಮ ಪ ಗ ಸ ಸ ದ ಪ ಗ ಸ

**ಆಭೋಗ**—ಇದು ಪುರಾತನ ಪ್ರಬಂಧದ ನಾಲ್ಕು ಅಂಗಗಳು ಅಥವಾ ಧಾತುಗಳಲ್ಲಿ ಒಂದು ಧಾತು ಇದು ಕೊನೆಯ ಧಾತುವಿನ ಹೆಸರು. ಇತರ ಧಾತುಗಳು ಉದ್ಗ್ರಾಹ, ಮೇಲಾಪಕ ಮತ್ತು ಧ್ರುವ.

**ಆಭೋಗಚರಣ**—ಕೃತಿಯಲ್ಲಿ ವಾಗ್ಗೇಯಕಾರನ ಅಂಕಿತವಿರುವ ಕೊನೆಯ ಚರಣ. ಇದು ಹಲವು ಚರಣಗಳಿರುವ ಕೃತಿಗಳಿಗೆ ಅನ್ವಯಿಸುತ್ತದೆ. ಒಂದೇ ಚರಣವಿರುವ ಕೃತಿಯಲ್ಲಿ ಆ ಚರಣವೇ ಮುದ್ರೆಯಿರುವ ಚರಣವಾಗುತ್ತದೆ. ಇದು ತೇವಾರಂ ಹಾಡುಗಳ ತಿರುಕ್ಕಡೈಕ್ಕಾಪ್‌ನ್ನು ಹೋಲುತ್ತದೆ. ಆಭೋಗಚರಣದಲ್ಲಿ ವಾಗ್ಗೇಯಕಾರನ ಮುದ್ರೆಯಿರುವ ಮತ್ತು ಇಲ್ಲದಿರುವ ಎರಡು ಬಗೆಗಳುಂಟು. ಎರಡನೆ ಬಗೆಯಲ್ಲಿ ಮುದ್ರೆಯು ಪಲ್ಲವಿ ಅಥವಾ ಅನುಪಲ್ಲವಿಯಲ್ಲಿರುತ್ತದೆ.

**ಆಭ್ರದೇಶಿ**—ಈ ರಾಗವು ೨೨ನೆಯ ಮೇಳಕರ್ತ ಋಷಭಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ದ ಸ
ಅ: ಸ ನಿ ದ ಪ ಮ ಗ ರಿ ಗ ಸ

**ಆಭ್ರಕೇಶಿ**—ಈ ರಾಗವು ೬೨ನೆಯ ಮೇಳಕರ್ತ ಋಷಭಪ್ರಿಯದ ಒಂದು ಜನ್ಯರಾಗ. ಇದೇ ಹೆಸರಿನ ಮತ್ತೊಂದು ರಾಗವಿದೆ.

(೧) ಆ: ಸ ಗ ಮ ಪ ದ ನಿ ದ ಸ
ಅ: ಸ ದ ನಿ ಪ ಮ ಗ ಸ
(೨) ಆ: ಸ ಗ ಮ ಪ ದ ನಿ ದ ಸ
ಅ: ಸ ನಿ ದ ಪ ಮ ಗ ಸ

**ಆಭೀರಿಕಾ**—'ಸಂಗೀತರತ್ನಾಕರ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಕಕುಭದ ವಿಭಾಷರಾಗಗಳಲ್ಲಿ ಒಂದು ರಾಗ. 'ಸಂಗೀತ ಸುಧಾ' ಎಂಬ ಗ್ರಂಥದಲ್ಲಿ ಈ ರಾಗವು ಪಂಚಮದ ಹತ್ತು ಭಾಷಾ ರಾಗಗಳಲ್ಲಿ ಒಂದೆಂದು ಹೇಳಿದೆ.

**ಆಭ್ಯಂತರ**—ಇದು ಭರತನಾಟ್ಯದ ಸಾತ್ವಿಕಾಭಿನಯದ ಮೂರು ವಿಧಗಳಲ್ಲಿ ಒಂದು ವಿಧ. ಉದ್ರೇಕಕಾರಕವಲ್ಲದಿರುವ, ಸಂಭ್ರಮಾದಿಗಳಿಂದಿರುವಂತಹ ಅವಿದ್ಧ

ವಾದ, ಅಂಗಚೇಷ್ಟೆಗಳಿಲ್ಲದಿರುವ ಲಯ, ತಾಳ, ನಿಯಮಿತವಾದ ಅಕ್ಷರಪ್ರಯೋಗ ಗಳುಳ್ಳ, ಶಾಸ್ತ್ರ ಶುಭಯುಕ್ತವಾದ ವಿಷಯಗಳಿಂದ ಕೂಡಿದ, ಪೌರುಷರಹಿತವಾದ, ಸಾತ್ವಿಕಗುಣವುಳ್ಳ ಅಭಿನಯವು ಆಭ್ಯಂತರ.

**ಆಮುಖ**—ಇದು ಭರತನಾಟ್ಯದ ಭಾರತೀವೃತ್ತಿ ಅಥವಾ ಮಾತಿನ ವೃತ್ತಿಯು ನಾಲ್ಕು ವಿಧಗಳಲ್ಲಿ ಒಂದು ಬಗೆ. ನಟ ವಿದೂಷಕಾದಿಗಳು ಸೂತ್ರಧಾರನೊಂದಿಗೆ ಮಾಡುವ ಸಂಭಾಷಣೆ ಅಥವಾ ಸಂಲಾಪನೆ. ಇದು ಕವಿಯು ವಾಚಕರಿಗಾಗಿ ಪ್ರಕಟಿಸುವ ಪೀಠಿಕೆಯ ಮುಖ.

**ಆಮ್ರದೇಶಿ**—ಈ ರಾಗವು ೭೨ನೆಯ ಮೇಳಕರ್ತ ಋಷಭಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಗ ಸ

**ಆಮಪಂಚಮ**—ಈ ರಾಗವು ೪೮ನೆಯ ಮೇಳಕರ್ತ ದಿವ್ಯಮಣಿಯ ಒಂದು ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ಗ ಸ

**ಆಮ್ರಪಂಚಮ**—ಈ ರಾಗವು ೪೮ನೆಯ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ. ಇದರಲ್ಲಿ ಎರಡು ಪಕ್ಷಗಳಿವೆ.

(೧) ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

(೨) ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

ಈ ರಾಗವು 'ಸಂಗೀತ ಸಮಯಸಾರ'ವೆಂಬ ಗ್ರಂಥದಲ್ಲಿ ಉಕ್ತವಾಗಿದೆ. 'ಸಂಗೀತ ರತ್ನಾಕರ'ವೆಂಬ ಗ್ರಂಥಕರ್ತನು ಈ ರಾಗವು ಆಗಿನ (೧೩ನೆ ಶ.) ಹತ್ತು ಪ್ರಸಿದ್ಧ ದೇಶೀರಾಗಗಳಲ್ಲಿ ಒಂದು ರಾಗವೆಂದು ಹೇಳಿದ್ದಾನೆ.

**ಆರತಿ ಹಾಡು**—ಪೂಜೆ ಮತ್ತು ಶುಭಕಾರ್ಯಗಳಲ್ಲಿ ಕೊನೆಯಲ್ಲಿ ಆರತಿ ಅಥವಾ ಮಂಗಳಾರತಿ ಮಾಡುವುದು ಪದ್ಧತಿ. ಆ ಸಂದರ್ಭದಲ್ಲಿ ಗಾನ ಮಾಡುವ ಹಾಡುಗಳಿಗೆ ಆರತಿ ಹಾಡುಗಳೆಂದು ಹೆಸರು. ಇವು ಅನೇಕವಾಗಿವೆ. ಕೆಲವು ಪ್ರಸಿದ್ಧವಾದುವು :—

ಕ್ಷೀರಾಬ್ಧಿಕನ್ಯಲಕು — ಖಂಡಛಾಪು — ಕುರಂಜಿ — ಅಣ್ಣಮಾಚಾರ್ಯ

ಶ್ರೀನಾಥಗೋವಿಂದ — ಹಮೀರ್‌ಕಲ್ಯಾಣಿ–ಖಂ.ಝಂಪ — ಪುರಂದರದಾಸರು

ಪತಿಕಿ ಹಾರತಿ — ಆರಭಿ — ತ್ಯಾಗರಾಜ

ಪತಿಕಿ ಹಾರತಿರೇ — ಸುರಟಿ — ತ್ಯಾಗರಾಜ

ಸೀನಾಮರೂಪಮುಲಕು – ಆದಿ—ಸೌರಾಷ್ಟ್ರ — ತ್ಯಾಗರಾಜ

**ಆಯಾತ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ೨೨ ಶ್ರುತಿಗಳನ್ನು ಕುರಿತು ಹೇಳಿರುವ ಐದು ಜಾತಿಗಳಲ್ಲಿ ಒಂದು ಲಕ್ಷಣ.

**ಆಯರ್ ಕುಯಳ್**—ಕುರುಬನ ಕೊಳಲಿಗೆ ತಮಿಳಿನಲ್ಲಿ ಹೀಗೆಂದು ಹೆಸರು.

**ಆಯಿಲಂ ತಿರುನಾಳ್**—ತಿರುವಾಂಕೂರು ರಾಜ್ಯದ ದೊರೆ, ಶ್ರೇಷ್ಠ ಪಲ್ಲವಿ ಗಾಯಕ ಮತ್ತು ಸಂಗೀತ ಕಲಾಪೋಷಕ. ತೋಡಿರಾಘವಯ್ಯರ್, ವೀಣೆಕಲ್ಯಾಣ ಕೃಷ್ಣಭಾಗವತರು, ಪಿಟೀಲು ಮಹದೇವ ಭಾಗವತರು, ಸ್ವರಬತ್ ಕುಂಜರಿರಾಜ, ಕಿಟ್ಟು ಭಾಗವತರು ಮುಂತಾದ ಪ್ರಸಿದ್ಧ ವಿದ್ವಾಂಸರು ಈ ಮಹಾರಾಜನ ಆಸ್ಥಾನ ವನ್ನು ಅಲಂಕರಿಸಿದ್ದರು. ಇವರ ಕಾಲದಲ್ಲಿ ಮಹಾವೈದ್ಯನಾಥ ಅಯ್ಯರ್ ಮತ್ತು ಕೊಯಮತ್ತೂರು ರಾಘವಯ್ಯರ್ ಇವರಿಬ್ಬರಿಗೂ ಸಂಗೀತದ ಸ್ಪರ್ಧೆ ನಡೆಯಿತು.

**ಆಯಿಟ್ಟಂ**—ರಾಗಾಲಾಪನೆಯ ಪ್ರಥಮ ಭಾಗವಾದ ಆಕ್ಷಿಪ್ತಿಕಾ.

**ಆರಭಿ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ರಿ ಮ ಪ ದ ಸ

ಅ : ಸ ನಿ ದ ಪ ಮ ಗ ರಿ ಸ

ಔಡವ ಸಂಪೂರ್ಣರಾಗ ಆರೋಹಣದಲ್ಲಿ ಗಾಂಧಾರ ನಿಷಾದಗಳು ವರ್ಜ್ಯ. ಅವ ರೋಹಣದಲ್ಲಿ ಕ್ರಮಸಂಪೂರ್ಣ. ಉಪಾಂಗ ಘನರಾಗ. ಗಮಕವರಿಕ ರಕ್ತಿರಾಗ. ಮಧ್ಯಮ ಕಾಲದ ನಡೆಯುಳ್ಳದ್ದು. ರಿಷಭ, ಮಧ್ಯಮ ಮತ್ತು ಧೈವತವು ಜೀವಸ್ವರ ಗಳು. ಗಾಂಧಾರ ನಿಷಾದಗಳು ದುರ್ಬಲ ಸ್ವರಗಳು. ರಿಷಭ, ಪಂಚಮಗಳು ನ್ಯಾಸಸ್ವರಗಳು ರಿಷಭ ಧೈವತಗಳು ಪರಸ್ಪರವಾದಿ ಸಂವಾದಿಗಳು. ಅವುಗಳಿಗೆ ಕಂಪಿತ ಮತ್ತು ಜಾರುಗಮಕಗಳುಂಟು. ಜಂಟಿ ಸ್ವರ ಪ್ರಯೋಗಗಳು ಈ ರಾಗಕ್ಕೆ ಮೆರುಗು ಕೊಡುತ್ತವೆ ತ್ರಿಸ್ಥಾಯಿ, ಮತ್ತು ಎಲ್ಲಾ ವೇಳೆಗಳಲ್ಲೂ ಹಾಡಬಹುದಾದ ರಾಗ. ಶ್ಲೋಕ, ವೃತ್ತ, ಆರಂಭ ಮತ್ತು ಮಂಗಳಗಳು ಈ ರಾಗದಲ್ಲಿ ಪ್ರಚಲಿತ ವಾಗಿವೆ ಶೃಂಗಾರ, ವೀರ ಮತ್ತು ಅದ್ಭುತ ರಸಗಳಿಗೆ ಎತ್ತಿದ ರಾಗ. ಉತ್ಸಾಹ, ಆವೇಗ, ಹರ್ಷ, ಮದ ಮುಂತಾದ ಸ್ಥಿತಿಗಳು ವ್ಯಕ್ತವಾಗಲು ಅರ್ಹವಾದ ರಾಗ. ಪ್ರಖ್ಯಾತ ವಾಗ್ಗೇಯಕಾರರು ಈ ರಾಗದಲ್ಲಿ ಅನೇಕ ರಚನೆಗಳನ್ನು ರಚಿಸಿದ್ದಾರೆ. ಕೆಲವು ಪ್ರಸಿದ್ಧ ರಚನೆಗಳು :—

ಗೀತ — ರೇ ರೇ ಶ್ರೀರಾಮ — ತ್ರಿಪುಟ

ವರ್ಣ — ಸರಸಿಜ ಮುಖ — ಅಟ — ಪಲ್ಲವಿದೊರೆಸ್ವಾಮಿಅಯ್ಯರ್

ಕೃತಿ — ಆಡಿದನೋ ರಂಗ — ಆದಿ — ಪುರಂದರದಾಸರು

ಇಂದಿರಾರಮಣ — ಆದಿ — ಪುರಂದರದಾಸರು

ನಿನ್ನೇ ನೆರನಮ್ಮಿ — ರೂಪಕ — ತ್ಯಾಗರಾಜರು
ಚಾಲಕಲ್ಲಿಲಾಡುಕೋನ್ನ — ಆದಿ — ,,
ಓ ರಾಜೀವಾಕ್ಷ — ಛಾಪು — ,,
ನರಸಿಂಹಮಾಮವ — ಮಿಶ್ರಛಾಪು — ,,
ಅಂಬ ಸೌರಂಬ — ಛಾಪು — ,,
ಪಂಚರತ್ನ—ಸಾಧಿಂಚೆನೆ — ಆದಿ — ,,
ಪಾಹಿ ಪರ್ವತ — ಆದಿ — ಸ್ವಾತಿ ತಿರುನಾಳ್
ಶ್ರೀ ಸರಸ್ವತೀ — ರೂಪಕ — ಮುತ್ತುಸ್ವಾಮಿ ದೀಕ್ಷಿತರು
ಅನಂತ ಪದ್ಮನಾಭಂ — ಆದಿ — ಮುತ್ತಯ್ಯ ಭಾಗವತರು

**ಆರ್ಯ ಸಂಗೀತ**—ಪುರಾತನಕಾಲದ ಆರ್ಯರ ಸಂಗೀತ. ಹಿಂದೂಸ್ಥಾನಿ ಮತ್ತು ಕರ್ಣಾಟಕ ಸಂಗೀತ ಪದ್ಧತಿಗಳು ಬೆಳೆಯುವ ಮುನ್ನವೇ ಆರ್ಯರ ಸಂಗೀತದ ಮುಖ್ಯಾಂಶಗಳೆಲ್ಲವೂ ಭಾರತೀಯ ಸಂಗೀತದಲ್ಲಿ ಸೇರಿಹೋದುವು.

**ಆರಿಯಕುಚ್ಚರಿ**—ಮರುದಯಾಳ್ ಎಂಬ ಪುರಾತನ ತಮಿಳು ಮೇಳದ ೧೬ ಜನ್ಯಗಳಲ್ಲಿ ಒಂದು ರಾಗ

**ಆರಿಯ ನೇಳರ್ ಕೊಲ್ಲಿ**—ಶೆವ್ವಲಿಯಾಳ್ ಎಂಬ ಪುರಾತನ ತಮಿಳು ಮೇಳದ ೧೬ ಜನ್ಯಗಳಲ್ಲಿ ಒಂದು ರಾಗ.

**ಆರೋಹ**—ದಶವಿಧ ಗಮಕಗಳಲ್ಲಿ ಮೊದಲನೆಯದು ಇದು ಏರುತ್ತಿರುವ ಸ್ವರಗಳಲ್ಲಿ ಅಡಕವಾಗಿದೆ.

ಉದಾ : ಸ ರಿ ಗ ಮ ಪ ದ ನಿ ಸ

**ಆರೋಹಣ**—ಏರುಶ್ರುತಿಯಲ್ಲಿ ಕ್ರಮವಾಗಿರುವ ಸ್ವರ ಸಮೂಹ.

ಉದಾ : ಸ ರಿ ಗ ಮ ಪ ದ ನಿ ಸ

**ಆರೋಹಣಸ್ಥಾಯಿ**—ರಾಗಾಲಾಪನೆಯ ಮೂರನೆಯ ಭಾಗ. ಇದನ್ನು ರಾಗವರ್ಧನಿಯ ಹಂತಗಳಲ್ಲಿ ತಾನಕ್ಕೆ ಮೊದಲು ಮಾಡಲಾಗುವುದು. ಈ ಆಲಾಪನೆಯಲ್ಲಿ ಸ್ಥಾಯಿ ಸ್ವರಗಳು ಆರೋಹಣ ಕ್ರಮದಲ್ಲಿರುತ್ತವೆ. ಪ್ರತಿ ಸ್ಥಾಯಿಸ್ವರದಿಂದ ಆರಂಭವಾಗುವ ಆಲಾಪನೆಯ ಸ್ವರ ಸಮೂಹಗಳು ಅವರೋಹಣ ಕ್ರಮದಲ್ಲಿರುತ್ತವೆ.

**ಆರೋಹಣ—ಅವರೋಹಣ ಪ್ರಸ್ತಾರ**—ಸ್ವರಗಳನ್ನು ಆರೋಹಣ ಮತ್ತು ಅವರೋಹಣದಲ್ಲಿ ವಿವಿಧ ಮಾದರಿಗಳಲ್ಲಿ ಜೋಡಿಸಿ ಹಾಡುವುದೇ ಸ್ವರಪ್ರಸ್ತಾರ. ಆರೋಹಣ ಮತ್ತು ಅವರೋಹಣಗಳು ಕ್ರಮಗತಿ ಅಥವಾ ವಕ್ರಗತಿಯಲ್ಲಿರುತ್ತವೆ. ಕ್ರಮಷಾಡವದಲ್ಲಿ ಆರು ಮಾದರಿಗಳು ಮತ್ತು ಕ್ರಮ ಔಡವದಲ್ಲಿ ಹದಿನೈದು ಮಾದರಿಗಳಿವೆ. ಸಂಪೂರ್ಣ ಷಾಡವ ಔಡವ ಮಾದರಿಗಳು ೪೮೪೪ ರಷ್ಟು ಸಾಧ್ಯವಿದೆ.

| | | | | |
|---|---|---|---|---|
| ಸಂಪೂರ್ಣ | — | ಸಂಪೂರ್ಣ | — | ೧ |
| ಸಂಪೂರ್ಣ | — | ಷಾಡವ | — | ೬ |
| ಸಂಪೂರ್ಣ | — | ಔಡವ | — | ೧೫ |
| ಷಾಡವ | — | ಸಂಪೂರ್ಣ | — | ೬ |
| ಷಾಡವ | — | ಷಾಡವ | — | ೩೬ |
| ಷಾಡವ | — | ಔಡವ | — | ೯೦ |
| ಔಡವ | — | ಸಂಪೂರ್ಣ | — | ೧೫ |
| ಔಡವ | — | ಷಾಡವ | — | ೯೦ |
| ಔಡವ | — | ಔಡವ | — | ೨೨೫ |
| | | ಒಟ್ಟು | | ೪೮೪ ಮಾದರಿಗಳು |

ಈ ಬಗೆಯ ಸ್ವರ ಸಮೂಹದ ಮಾದರಿಗಳು ಪ್ರತಿ ಮೇಳಕರ್ತದಲ್ಲಿ ಸಾಧ್ಯವಿದೆ.

**ಆರೋಹಿ ವರ್ಣ**—ಆರೋಹಣ ಕ್ರಮದಲ್ಲಿರುವ ಸುಂದರವಾದ ಸ್ವರ ಗುಚ್ಛಗಳು.

ಉದಾ : ಸ ರಿ ಗ ಮ, ರಿ ಗ ಮ ಪ ಇತ್ಯಾದಿ.

**ಆಲಾಪ**—(೧) ರಾಗದ ಆಲಾಪನೆ

(೨) ಗಾಂಧಾರ ಗ್ರಾಮದ ಮಧ್ಯಮ ಮೂರ್ಛನದ ಹೆಸರು.

(೩) ಭರತನಾಟ್ಯದ ಆಂಗಿಕಾಭಿನಯದ ಒಂದು ವಿಭೇದ.

**ಆಲಾಪನೆ**—ರಾಗವನ್ನು ವಿಸ್ತಾರವಾಗಿ ಹಾಡುವುದಕ್ಕೆ ಆಲಾಪನೆಯೆಂದು ಹೆಸರು. ರಾಗಾಲಾಪನೆಯು ಮನೋಧರ್ಮ ಸಂಗೀತದ ಬಹುಮುಖ್ಯವಾದ ಭಾಗ ರಾಗದ ಸಂಪೂರ್ಣ ಸ್ವರೂಪವನ್ನು ರಂಜಕವಾಗಿ ಹಾಡಿ ಚಿತ್ರಿಸುವುದು. ಇದಕ್ಕೆ ತಾಳವಿಲ್ಲ. ಹಾಡುವಾಗ ತಾಳ ಹಾಕಿ ತೋರಿಸದಿದ್ದರೂ, ರಾಗವು ಒಂದು ಅಂತರ್ಗತ ವಾದ ಗತಿಯಿಂದ ಕೂಡಿರುತ್ತದೆ. ಸಂಗತಿಗಳನ್ನು ಹಾಡುವಾಗ ೨ನೆಯ ಕಾಲ ಮತ್ತು ತ್ರಿಕಾಲದಲ್ಲಿ ನುಡಿಕಾರಗಳು ಬರುತ್ತವೆ. ರಾಗವನ್ನು ಎತ್ತಿದ ಕಾಲಕ್ಕೆ ಅನುಗುಣವಾಗಿ ಮಧ್ಯಮಕಾಲ ಮತ್ತು ತ್ರಿಕಾಲದಲ್ಲಿ ಗತಿಗೆ ಸರಿಯಾಗಿ ಪಲಿಕಿದಾಗಲೇ ಶ್ರೋತೃಗಳಿಗೆ ರಾಗರಂಜನೆಯಾಗುತ್ತದೆ. ಆಲಾಪನೆಯಲ್ಲಿ ತದರಿನೊಂತಂ ಅಥವಾ ದೇವರ ಹೆಸರನ್ನು ಬಳಸಿ ಗಾಯಕನು ಆಲಾಪನೆ ಮಾಡುತ್ತಾನೆ. ಇದರಲ್ಲಿ ಅಕ್ಷಿಪ್ತಿಕ ಎಂದರೆ ಪ್ರಾರಂಭದ ಪರಿಚಯ ಮಾಡಿಕೊಡುವ ಭಾಗ, ರಾಗವರ್ಧಿನಿ ಅಥವಾ ಆಲಾಪನೆಯ ಮುಖ್ಯ ಭಾಗ ಮತ್ತು ಸ್ಥಾಯಿ ಮತ್ತು ಮಕರಿಣಿ ಎಂಬ ಮುಕ್ತಾಯ ಭಾಗವೆಂಬ ಹಂತಗಳಿವೆ.

**ಆಲಾಪಿ**—ಈ ರಾಗವು ೩೭ನೆಯ ಮೇಳಕರ್ತ ಸಾಲಗದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ
ಅ: ಸ ನಿ ದ ಪ ಮ ಗ ರಿ ಸ

**ಆಳ್ವಾರ್ ತಿರುನಗರಿ** – ಇದು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಒಂದು ಪ್ರಸಿದ್ಧ ಶ್ರೀವೈಷ್ಣವ ಕ್ಷೇತ್ರ. ಪ್ರಮುಖ ಆಳ್ವಾರರಾದ ನಮ್ಮಾಳ್ವಾರ್‌ರ ಜನ್ಮಸ್ಥಳ. ಇಲ್ಲಿರುವ ದೇವಾಲಯದಲ್ಲಿ ಸುಂದರವಾದ ಸಂಗೀತ ಸ್ತಂಭಗಳಿವೆ. ಶಿಲೆಯಿಂದ ಮಾಡಿದ ಅಪರೂಪವಾದ ನಾದಸ್ವರವನ್ನು ನುಡಿಸುತ್ತಾರೆ.

**ಆಲೋಲಿತ**—ನಂದಿಕೇಶ್ವರನು ಹೇಳಿರುವಂತೆ ಭರತನಾಟ್ಯದಲ್ಲಿರುವ ಎಂಟು ಮೂಲ ದೃಷ್ಟಿಭೇದಗಳಲ್ಲಿ ಒಂದು ವಿಧ ನಿರೀಕ್ಷಣೆ, ಚಕ್ರ, ತಿರುಗುವುದು, ಕ್ರೋಧ, ರೌದ್ರಾದಿಗಳನ್ನು ಸೂಚಿಸಲು ಉಪಯೋಗಿಸುವ ಒಂದು ಕ್ರಿಯೆ. ಇದು ಸಮದೃಷ್ಟಿಯನ್ನು ಸುತ್ತಲೂ ಚಕ್ರಾಕಾರವಾಗಿ ತಿರುಗಿಸುತ್ತಾ ಸ್ಪುಟವಾಗಿ ನೋಡುವ ಕ್ರಿಯೆ. ನಾಟ್ಯಶಾಸ್ತ್ರದಲ್ಲಿ ಹೇಳಿರುವ ಒಂದು ಶಿರೋಭೇದ. ತಲೆಯನ್ನು ಚಕ್ರಾಕಾರವಾಗಿ ತಿರುಗಿಸುವ ಕ್ರಿಯೆ.

**ಆವಡೈಯಾರ್ ಕೋವಿಲ್**—ತಮಿಳುನಾಡಿನ ಸಂತ ಮಾಣಿಕ್ಯವಾಚಕರ್ ಉಪದೇಶ ಪಡೆದ ದೇವಾಲಯ. ಇದು ತಂಜಾವೂರು ಜಿಲ್ಲೆಯಲ್ಲಿದೆ. ಇಲ್ಲಿ ಸಂಗೀತ ವಾದ್ಯಗಳು, ಸಂಗೀತಗಾರರು ಮತ್ತು ನಾಟ್ಯವಾಡುವವರ ಸುಂದರವಾದ ಶಿಲ್ಪಗಳಿವೆ.

**ಆವಾಪ**—ಇದು ತಾಳವನ್ನು ಲೆಕ್ಕಮಾಡುವ ಒಂದು ವಿಧಾನ. ಮಾರ್ಗ ಕ್ರಿಯಾಷ್ಟಕಗಳಲ್ಲಿ ಇದೊಂದು ನಿಶ್ಯಬ್ದ ಕ್ರಿಯೆ. ಕೈಯನ್ನು ಮೇಲಕ್ಕೆತ್ತಿ ಬೆರಳುಗಳನ್ನು ಮಡಿಚಿಕೊಳ್ಳುವುದು

**ಆವರ್ತ**—ತಾಳದ ಅಂಗಗಳನ್ನು ಪೂರ್ತಿ ಲೆಕ್ಕಮಾಡಲು ಬೇಕಾಗುವ ಕಾಲ. ತಾಳದ ಪೂರ್ತಿ ಕಾಲ. ಆದಿತಾಳಕ್ಕೆ ೮ ಅಕ್ಷರಗಳ ಕಾಲವನ್ನು ಎಣಿಸುವುದು ಒಂದು ಆವರ್ತವಾಗುತ್ತದೆ.

**ಆಲತ್ತೂರ್ ಸಹೋದರರು** ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಆಲತ್ತೂರು ಸಹೋದರರು ಪ್ರಮುಖ ವಿದ್ವಾಂಸರು. ಅವರು ಸಹೋದರರಲ್ಲದಿದ್ದರೂ ಸಂಗೀತದಲ್ಲಿ ಸಹೋದರರು. ಶಿವಸುಬ್ರಹ್ಮಣ್ಯ ಅಯ್ಯರ್ ಆಂಧ್ರದವರು. ಶ್ರೀನಿವಾಸ ಅಯ್ಯರ್ ತಮಿಳರು. ಇಬ್ಬರೂ ಶಿವಸುಬ್ರಹ್ಮಣ್ಯ ಅಯ್ಯರ್‌ರವರ ತಂದೆ ಆಲತ್ತೂರ್ ವೆಂಕಟೇಶ ಅಯ್ಯರ್‌ರವರಲ್ಲಿ ಸಂಗೀತ ಶಿಕ್ಷಣ ಪಡೆದರು. ಇಬ್ಬರೂ ತಿರುವಾಂಕೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ಇವರಲ್ಲಿ ಕಿರಿಯವರಾದ ಶಿವಸುಬ್ರಹ್ಮಣ್ಯ ಅಯ್ಯರ್ ೧೯೬೫ರಲ್ಲಿ ತೀರಿಕೊಂಡರು.

**ಆಲತ್ತೂರು ಶ್ರೀನಿವಾಸಅಯ್ಯರ್** (೧೯೧೨–೧೯೮೦) ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಪ್ರಸಿದ್ಧರಾದ ಆಲತ್ತೂರ್ ಸಹೋದರರಲ್ಲಿ ಹಿರಿಯರು ಶ್ರೀನಿವಾಸ ಅಯ್ಯರ್ ಈ ಸಹೋದರರಲ್ಲಿ ಕಿರಿಯವರು ಕೀರ್ತಿಶೇಷರಾದ ಶಿವಸುಬ್ರಹ್ಮಣ್ಯ ಅಯ್ಯರ್. ಇವರ ತಂದೆ ಆಲತ್ತೂರ್ ವೆಂಕಟೇಶ ಅಯ್ಯರ್ ತ್ಯಾಗರಾಜರ ಶಿಷ್ಯರಾದ

ಮಾನಂಬುಚಾವಡಿ ವೆಂಕಟಸುಬ್ಬಯ್ಯರ್‌ರವರ ಶಿಷ್ಯರು. ಶ್ರೀನಿವಾಸಅಯ್ಯರ್‌ರವರ ತಂದೆಯ ಕೋರಿಕೆಯಂತೆ ವೆಂಕಟೇಶಯ್ಯರ್ ಸಂಗೀತ ಶಿಕ್ಷಣ ನೀಡಲು ಒಪ್ಪಿ ಶಿಕ್ಷಣ ನೀಡಿದರು. ನಂತರ ಆಲತ್ತೂರ್ ಸಹೋದರರ ಕಚೇರಿಗಳು ಆರಂಭವಾದುವು. ೧೯೬೫ರಲ್ಲಿ ಶಿವಸುಬ್ರಹ್ಮಣ್ಯ ಅಯ್ಯರ್ ಹಠಾತ್ತನೆ ತೀರಿಕೊಂಡಾಗ ಶ್ರೀನಿವಾಸ ಅಯ್ಯರ್ ಹಾಡುವುದನ್ನು ನಿಲ್ಲಿಸಿ ಅಜ್ಞಾತವಾಸಿಗಳಾದರು. ಪಾಲಘಾಟ್ ಮಣಿ ಅಯ್ಯರ್‌ರವರು ಇವರನ್ನು ಬಲವಂತ ಮಾಡಿ ಇವರ ಕಚೇರಿಗಳಿಗೆ ತಾವೇ ಮೃದಂಗ ನುಡಿಸುವುದಾಗಿ ಹೇಳಿ ಒಪ್ಪಿಸಿದರು. ಅಲ್ಲಿಂದ ಶ್ರೀನಿವಾಸಅಯ್ಯರ್‌ರ ಜೀವನದಲ್ಲಿ ಮತ್ತೊಂದು ಅಧ್ಯಾಯ ಆರಂಭವಾಯಿತು. ಅಲ್ಲಿಂದ ಮುಂದೆ ಇವರ ಸಂಗೀತ ಸೇವೆ ಒಂದೇ ಸಮನಾಗಿ ಪುನಃ ಆರಂಭವಾಯಿತು. ೧೯೬೫ರಲ್ಲಿ ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯ ಅಧ್ಯಕ್ಷರಾಗಿ ‘ ಸಂಗೀತ ಕಲಾನಿಧಿ ’ ಎಂಬ ಬಿರುದನ್ನು ಪಡೆದರು. ೧೯೭೪ರಲ್ಲಿ ರಾಷ್ಟ್ರಾಧ್ಯಕ್ಷರ ಪ್ರಶಸ್ತಿ ದೊರಕಿತು

ಶ್ರೀನಿವಾಸ ಅಯ್ಯರ್‌ರವರ ಗಾಯನದಲ್ಲಿ ಕರ್ಣಾಟಕ ಸಂಗೀತದ ಸತ್ಸಂಪ್ರದಾಯವು ಎದ್ದು ಕಾಣುತ್ತದೆ. ರಾಗವಿಸ್ತರಣೆಯ ವಿಧಾನ, ಕೃತಿಗಳ ಚಿಟ್ಟೆ, ನೆರವಲ್ ಕ್ರಮ, ಪ್ರತಿಭಾಪೂರ್ಣವಾದ ಸ್ವರಪ್ರಸ್ತಾರ ಮುಂತಾದುವು ಇವರ ಹಾಡುಗಾರಿಕೆಯ ಪ್ರಮುಖ ಅಂಶಗಳು. ಇವರು ಕ್ಲಿಷ್ಟವಾದ ಪಲ್ಲವಿಗಳನ್ನು ಹಾಡುವುದರಲ್ಲಿ ಪ್ರವೀಣರಾಗಿದ್ದರು. ಕರ್ಣಾಟಕದ ಸಂಗೀತ ರಸಿಕರಿಗೆ ಇವರ ಗಾಯನವು ಚಿರಪರಿಚಿತ.

**ಆಲವಣಿ**—ಇದು ಹರಿಪಾಲದೇವನ ಸಂಗೀತ ಸುಧಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ವೀಣೆ

**ಆಲಿಂಗ್ಯ**—ವಾದ್ಯವನ್ನು ನುಡಿಸಲು ಇಟ್ಟುಕೊಳ್ಳುವ ರೀತಿಯನ್ನು ತಿಳಿಸುವ ಪದ. ಮೃದಂಗವನ್ನು ಉದ್ದುದ್ದವಾಗಿ ಇಟ್ಟುಕೊಂಡು ನುಡಿಸುವುದು ಆಲಿಂಗ್ಯ. ತಬಲವನ್ನು ನೆಟ್ಟಗೆ ಮೇಲ್ಮುಖವಾಗಿ ಇಟ್ಟುಕೊಳ್ಳುವುದು ಊರ್ಧ್ವಕ.

**ಆಲಾಪಿಕವಂಶ**—ಋಗ್ವೇದದಲ್ಲಿ ಉಕ್ತವಾಗಿರುವ ಒಂದು ಬಗೆಯ ಕೊಳಲು.

**ಆಲಾಪಿನಿ**—(೧) ಭರತನ ಮತದಂತೆ ೨೨ ಶ್ರುತಿಗಳಲ್ಲಿ ಸ್ವರದ ನಾಲ್ಕನೆಯ ಶ್ರುತಿಯ ಹೆಸರು.

(೨) ಬೊಂಬಿನಿಂದ ತಯಾರಿಸಿರುವ ದಂಡಿಯಿರುವ ತಂತೀವಾದ್ಯದ ಹೆಸರು.

**ಆಲಪ್ತಿ**—ಆಲಾಪನೆ ಇದರಲ್ಲಿ ಆಲಪ್ತಿ ಮತ್ತು ರೂಪಕ ಆಲಪ್ತಿ ಎಂಬ ಎರಡು ವಿಧಗಳಿವೆ. ವಿಷಯವಿಲ್ಲದೆ ಆಲಾಪನೆ ಮಾಡಿದರೆ ಅದು ಆಲಪ್ತಿ. ವಿಷಯದ ಆಧಾರಿತವಾದ ಆಲಾಪನೆಯು ರೂಪಕ ಆಲಪ್ತಿ. ಅಂದರೆ ಪಲ್ಲವಿಯ ಆಧಾರದ ಮೇಲೆ ಬೆಳೆಸುವ ಆಲಾಪನೆ.

**ಆಲಿಕ್ರಮ ಪ್ರಬಂಧ**—ಶಾರ್ಙ್ಗದೇವ ಮತ್ತು ಇತರ ಲಕ್ಷಣಕಾರರು ಪ್ರಬಂಧಗಳನ್ನು ಮೂರು ವಿಧವಾಗಿ ವರ್ಗೀಕರಿಸಿದ್ದಾರೆ. ಅವು ಸೂಡಪ್ರಬಂಧ, ವಿಪ್ರಕೀರ್ಣ ಪ್ರಬಂಧ ಮತ್ತು ಆಲಿಕ್ರಮ ಪ್ರಬಂಧ. ಆಲಿಕ್ರಮ ಪ್ರಬಂಧವು ಪ್ರಾಕೃತ ಮತ್ತು

ದಕ್ಷಿಣದ ಭಾಷೆಗಳಲ್ಲಿ ಹೆಚ್ಚಾಗಿದ್ದಿತು ಕೆಲವು ಪ್ರಬಂಧಗಳು ಉತ್ತರ ಭಾರತದ ಪ್ರಾದೇಶಿಕ ಭಾಷೆಗಳಲ್ಲಿದ್ದುವು

**ಆವರ್ತಿತ**—ಇದು ಭರತನಾಟ್ಯದಲ್ಲಿ ಹೇಳಿರುವ ಐದು ಬಗೆಯ ಮೊಳಕಾಲು ಭೇದಗಳಲ್ಲಿ ಒಂದು ವಿಧ. ಎಡಗಡೆಯಿಂದ ಬಲಗಡೆಗೆ, ಬಲಗಡೆಯಿಂದ ಎಡಗಡೆಗೆ ಪಾದಗಳನ್ನಿಟ್ಟು ನಡೆಯುವಾಗ ಉಂಟಾಗುವ ಮೊಳಕಾಲಿನ ನಡೆಯ ಭೇದವೇ ಆವರ್ತಿತ ಅಥವಾ ಮೊಳಕಾಲುಗಳನ್ನು ಸ್ವಸ್ತಿಕಾಕಾರವಾಗಿ ನಡೆಯುವುದು ಆವರ್ತಿತ.

**ಆಲಂಬನ ವಿಭಾವ**—ರಸಗಳೂ ಸ್ಥಾಯಿಭಾವಗಳೂ ಯಾವುದನ್ನು ಆಶ್ರಯಿಸಿರುತ್ತವೋ ಅವು ಆಲಂಬನ ವಿಭಾವ. ರಸಗಳೂ, ಸ್ಥಾಯಿಭಾವಗಳೂ ನಾಯಕ–ನಾಯಕಿಯನ್ನು ಆಶ್ರಯಿಸಿರುತ್ತವೆ. ರಾಮ–ಸೀತೆ ಇಂತಹ ನಾಯಕ ನಾಯಕಿಯರ ವ್ಯಕ್ತಿತ್ವದ ರೀತಿ, ಶೀಲ, ನೀತಿ, ಸತ್ಯದ ಸೂಕ್ಷ್ಮಸ್ವರೂಪ ದರ್ಶನವೇ ಆಲಂಬನ ವಿಭಾವ

**ಆಶ್ರಿತರಂಜಿನಿ**—ಈ ರಾಗವು ೬೭ನೆಯ ಸುಚರಿತ್ರ ಮೇಳಕರ್ತದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಆಹತ**—(೧) ಗಾನೋತ್ಪತ್ತಿಕಾರಿಯಾದ ಶ್ರುತಿ ಸ್ವರ ಗ್ರಾಮಾದಿಗಳಿಂದ ಜನರಿಗೆ ರಂಜನೆಯನ್ನುಂಟುಮಾಡುವ ಸಂಗೀತ. ಮಾನವನ ಪ್ರಯತ್ನದಿಂದ ಉಂಟಾಗುವ ಸಂಗೀತ. ಇದು ಗೀತ, ವಾದ್ಯ, ನೃತ್ಯಗಳೆಂಬ ಮೂರು ಬಗೆಗಳನ್ನು ಒಳಗೊಂಡಿದೆ.

(೨) ಇದೊಂದು ವಿಧವಾದ ಗಮಕ ವೀಣೆಗೆ ಸಂಬಂಧಿಸಿದೆ ಒಂದು ಸ್ವರವನ್ನು ಮಿಾಟಿ ಇನ್ನೊಂದು ಸಲ ತಂತಿಯನ್ನು ಮಿಾಟದೆ ಮತ್ತೊಂದು ಸ್ವರವನ್ನು ಉಂಟುಮಾಡುವುದು ಇದು ಗಾಯನದಲ್ಲಿ ಸರ್ವಸಾಮಾನ್ಯವಾಗಿ ಬಳಸುವ ಗಮಕ ವಿಶೇಷ. ಇದು ದಶ ವಿಧ ಮತ್ತು ಪಂಚದಶ ಗಮಕಗಳಲ್ಲಿ ಒಂದಾಗಿದೆ.

**ಆಹತಿ**—ಇದು ವೀಣೆಯ ತಂತಿಗಳನ್ನು ಮಿಾಟುವ ಒಂದು ವಿಧಾನ. 'ರಾಗ ವಿಬೋಧ'ವೆಂಬ ಗ್ರಂಥದಲ್ಲಿ ಸೋಮನಾಥನು ಈ ಪದವನ್ನು ಬಳಸಿದ್ದಾನೆ.

**ಆಹಾರ್ಯ**—ಭರತನಾಟ್ಯದ ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು ವಿಧವಾದ ಅಭಿನಯ. ನಾಟಕದ ಸಫಲ ಪ್ರಯೋಗಕ್ಕೆ ಅಲಂಕರಣವು ಇತರ ಭಾಗಗಳಂತೆ ಬಹಳ ಅಗತ್ಯ. ಈ ಸಿದ್ಧತೆಗಳಿಗೆಲ್ಲ ಆಹಾರ್ಯಾಭಿನಯವೆಂದು ಹೆಸರು. ಮುಖ, ಮೈ, ಕೈಗಳಿಗೆ ಬಣ್ಣ ಬಳಿದುಕೊಳ್ಳುವುದು, ಪಾತ್ರಕ್ಕೆ ಸಲ್ಲುವ ಉಡುಗೆ, ಆಭರಣಗಳ ನಿರ್ಮಾಣ, ಹಿನ್ನೆಲೆಯ ಚಿತ್ರಣ, ದೃಶ್ಯ ಜೋಡಣೆ, ರಂಗಸಜ್ಜಿಕೆ ಮುಂತಾದುವೆಲ್ಲವೂ ಸೇರುತ್ತವೆ. ಹೂಮಾಲೆ, ಕೊರಳಿನ ಸರಗಳು ಮುಂತಾದ

ಆಭರಣಗಳು, ಉಡುಗೆತೊಡುಗೆಗಳ ಸಿದ್ಧತೆ ಮುಂತಾದುವು ಅಲಂಕರಣವೆನಿಸಿಕೊಳ್ಳುತ್ತವೆ. ಆಹಾರ್ಯಾಭಿನಯದ ಉದ್ದೇಶ, ನಾಟಕವು ಜೀವಂತ ಕಳೆಯಿಂದ ಕೂಡುವಂತೆ ಮಾಡುವುದು ಎಂದು ಸ್ಪಷ್ಟವಾಗಿ ಭರತನು ಹೇಳಿದ್ದಾನೆ

ನಾಟ್ಯಪ್ರಯೋಗದ ಯಶಸ್ಸಿಗೆ ಆಹಾರ್ಯಾಭಿನಯವು ಮುಖ್ಯವಾದುದು. ಒಡವೆ ವಸ್ತ್ರವರ್ಣಾದಿಗಳಿಂದೊಡಗೂಡಿದ, ಅಂಗಾದ್ಯಭಿನಯ ಪ್ರಯುಕ್ತವಾಗಿ ಅಭಿವ್ಯಕ್ತವಾಗುವುದೇ ಆಹಾರ್ಯಾಭಿನಯ. ಆಭರಣಾದಿ ವೇಷಭೂಷಣಗಳಿಂದ ಭಾವ ಪುಷ್ಟಿಯನ್ನು ಸೂಚಿಸುವಂತಹ ಈ ಆಹಾರ್ಯಾಭಿನಯವನ್ನು ನೇಪಥ್ಯವಿಧಿ ಎಂದು ಕರೆಯುತ್ತಾರೆ.

**ಆಹಿರಿ** — ಈ ರಾಗವು ೧೪ನೆ ಮೇಳಕರ್ತ ವಕುಳಾಭರಣದ ಒಂದು ಜನ್ಯರಾಗ.

ಆ : ಸ ರಿ ಸ ಮ ಗ ಮ ಪ ದ ನಿ ಸ

ಅ : ಸ ನಿ ದಾ ಪ ಮ ಗ ಮ ಗ ರೀ ಸ

ಈ ರಾಗವು ಅತಿಪ್ರಾಚೀನವಾದುದು. ಮತಂಗನ ಬೃಹದ್ದೇಶಿ ಎಂಬ ಗ್ರಂಥದಲ್ಲಿ ಈ ರಾಗವು ಗ್ರಾಮರಾಗಗಳಲ್ಲಿ ಒಂದಾದ ಮಾಳವ ಕೈಶಿಕಿ ರಾಗದ ಭಾಷೆಯೆಂದು ಹೇಳಿದೆ ಇದು ಸಂಪೂರ್ಣ ಸಪ್ತಸ್ವರಗಳಲ್ಲದೆ ಇತರ ಸ್ವರಗಳನ್ನೂ ಪ್ರಯೋಗದಲ್ಲಿ ಒಳಗೊಂಡಿದೆ. ರಾಮಾಮಾತ್ಯನ ದೃಷ್ಟಿಯಲ್ಲಿ ತೀವ್ರಋಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಕೈಶಿಕಿ ನಿಷಾದ, ಶುದ್ಧ ಧೈವತ, ತೀವ್ರ ನಿಷಾದ ಈ ರಾಗದ ಸ್ವರಸ್ಥಾನಗಳು. ಆದರೆ ವೆಂಕಟಮುಖಿಯ ಸಂಪ್ರದಾಯದಲ್ಲಿ ಇದು ನಾರಿ ರೀತಿಗೌಳರಾಗದಲ್ಲಿ (ನಠಭೈರವಿ) ಜನ್ಯವಾಗಿಯೂ, ಭಾಷಾಂಗ ರಾಗವಾಗಿಯೂ, ಪ್ರತಿ ಮಧ್ಯಮ ಒಂದನ್ನು ಬಿಟ್ಟು ಮಿಕ್ಕೆಲ್ಲ ಸ್ವರಗಳೂ ಸಮಯಾನುಸಾರ ಬರುವುದೆಂದೂ ಹೇಳಿದ್ದಾರೆ.

೧೯೩೦ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯಲ್ಲಿ ಟಿ ವಿ. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಈ ರಾಗವನ್ನು ಕುರಿತು ಚರ್ಚೆ ನಡೆಯಿತು ವಿದ್ವಾಂಸರಾದ ಸಭೇಶ ಅಯ್ಯರ್, ಸುಬ್ರಹ್ಮಣ್ಯಶಾಸ್ತ್ರಿ, ಟಿ. ಎಲ್. ವೆಂಕಟರಾಮ ಅಯ್ಯರ್ ಇದರಲ್ಲಿ ಭಾಗವಹಿಸಿದ್ದರು

ಈ ರಾಗವು ೮ನೇ ಮೇಳ ಹನುಮತೋಡಿಯಲ್ಲಿ ಜನ್ಯವೆಂದು ಕೆಲವರೂ, ೧೪ನೆ ಮೇಳ ವಕುಳಾಭರಣದಲ್ಲಿ ಜನ್ಯವೆಂದು ಕೆಲವರೂ, ೧೫ನೆ ಮೇಳ ಮಾಯಾಮಾಳವದಲ್ಲಿ ಜನ್ಯವೆಂದು ಕೆಲವರೂ ಹೇಳುತ್ತಾರೆ. ಅನೇಕ ವಿದ್ವಾಂಸರ ಅಭಿಪ್ರಾಯದಲ್ಲಿ ಇಷ್ಟೆಲ್ಲಾ ವಾದವಿವಾದಗಳಿಗೆ ಆವಶ್ಯಕತೆಯೇ ಇಲ್ಲ ಪ್ರತಿ ಮಧ್ಯಮ ಒಂದನ್ನು ಬಿಟ್ಟರೆ ಮಿಕ್ಕೆಲ್ಲಾ ೧೧ ಸ್ವರಗಳೂ ಈ ರಾಗದಲ್ಲಿ ಬರುತ್ತವೆ. ಎಂದ ಮೇಲೆ ೩೬ ಶುದ್ಧ ಮಧ್ಯಮ ಮೇಳಗಳಲ್ಲಿ ಯಾವುದರಲ್ಲಿ ಬೇಕಾದರೂ ಇದು ಜನ್ಯವಾಗಲು ಸಾಧ್ಯ. ಕೆಲವು ರಚನೆಗಳಲ್ಲಿ ಸಾಧಾರಣ ಗಾಂಧಾರವು ಕಂಡುಬಂದರೂ ರಾಗವನ್ನು ಹಾಡುವಾಗ ಅಂತರ ಗಾಂಧಾರದ ಪ್ರಯೋಗವು ಇದ್ದೇ ಇರುತ್ತದೆ. ಆದ್ದರಿಂದ ಇದು

ಭಾಷಾಂಗರಾಗವಲ್ಲವೆಂಬುದು ಖಚಿತ. ಪ್ರಕೃತ ಇದು ವಕುಳಾಭರಣ ಜನ್ಯವೆಂದು ಮಾನ್ಯವಾಗಿದೆ. ಇದೊಂದು ಸಂಕೀರ್ಣರಾಗ. ಮಧ್ಯಮ ಮತ್ತು ನಿಷಾದವು ಜೀವ ಸ್ವರಗಳು. ದೀನರಸ ಪ್ರಧಾನವಾದ ರಾಗ. ಇದನ್ನು ಬೆಳಗಿನ ವೇಳೆಯಲ್ಲಿ ಹಾಡಿದರೆ ಅಂದು ಹಾಡಿದವನಿಗೆ ಊಟ ದೊರಕುವುದಿಲ್ಲವೆಂಬ ನಂಬಿಕೆಯಿದೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು :

| | | | |
|---|---|---|---|
| ಕೃತಿ— | ಚಲ್ಲರೆ ರಾಮಚಂದ್ರು ನಿ ಪೈ | — ಛಾಪು | — ತ್ಯಾಗರಾಜರು |
| | ಪೂಲಪಾಂಪು ಮಿಾದಬಾಗ | — ತಿಶ್ರಲಘು | — ,, |
| | ಎಟುಲಗಾಪಾಡುದುವೋ | — ತ್ರಿಪುಟ | — ,, |
| | ಮಾಯಮ್ಮ | — | — ಶ್ಯಾಮಾಶಾಸ್ತ್ರಿ |
| | ಶ್ರೀ ಕಮಲಾಂಬಾ ಜಯತಿ | — | — ಮುತ್ತುಸ್ವಾಮಿದೀಕ್ಷಿತರು |
| ಪದ— | ಏ ರೀತಿ ವೇಗಿಂತುನೆ | — ತ್ರಿಪುಟ | — ಕ್ಷೇತ್ರಜ್ಞ |
| | ಏಮಿನೇತುನೇ | — ತ್ರಿಪುಟ | — ಕ್ಷೇತ್ರಜ್ಞ |
| | ರಾಮರಾಮ ಪ್ರಾಣಸಖಿ | — ತ್ರಿಪುಟ | — ಕ್ಷೇತ್ರಜ್ಞ |
| | ತಾಳರಾದಮ್ಮಾ ! ಓಯಮ್ಮ | — ತ್ರಿಪುಟ | — ಕ್ಷೇತ್ರಜ್ಞ |

**ಆಹಿರಿನಾಟ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸಂ

ಅ: ಸಂ ನಿ ಪ ದ ನಿ ಪ ಗ ಮ ಗ ಸ

ಇದೇ ಹೆಸರಿನ ಮತ್ತೊಂದು ರಾಗವಿದೆ. ಇದೂ ಸಹ ಮೇಲಿನ ಮೇಳಕರ್ತದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸಂ

ಅ: ಸ ನಿ ಪ ದ ನಿ ಪ ಗ ಮ ಮ ಗ ಸ

**ಆಹಿರಿತೋಡಿ**—ಈ ರಾಗವು ೮ನೆಯ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

**ಆಹೋರಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಆಹುರಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯ ರಾಗ.

ಆ: ಸ ರಿ ಗ ರಿ ಮ ಪ ದ ನಿ ದ ಸಂ

ಅ: ಸಂ ನಿ ದ ಮ ಗ ರಿ ಸ

**ಆಹಂಸ**—ಪುರಾತನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ರಾಗಾಂಗರಾಗ

**ಆಂದಾಳಿ ಕುರಂಜಿ**—ತೇವಾರಂ ಹಾಡುಗಳ ಸಂಗೀತದಲ್ಲಿ ಕಂಡುಬರುವ ಒಂದು ಪಣ್. ಇದು ಈಗಿನ ಸಾಮರಾಗವನ್ನು ಹೋಲುತ್ತದೆ.

**ಆಂದೋಳ**—ನಾರದನ 'ಸಂಗೀತ ಮಕರಂದ'ವೆಂಬ ಗ್ರಂಥದಲ್ಲಿ ಹೇಳಿರುವ ಸೂರ್ಯಾಂಶ ರಾಗಗಳಲ್ಲಿ ಒಂದು ರಾಗದ ಹೆಸರು.

**ಆಂದೋಳಿ**—ನಾರದನ 'ಸಂಗೀತ ಮಕರಂದ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಚಂದ್ರಾಂಶರಾಗ. ಇದು 'ಭರತ ಸೇನಾಪತೀಯಂ' ಎಂಬ ಗ್ರಂಥದಲ್ಲಿಯೂ ಉಕ್ತವಾಗಿವೆ.

**ಆಂದೋಳಿಕಾ**— ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ̇
ಅ: ಸ̇ ನಿ ದ ಮ ರಿ ಸ

ಇದು ಎಲ್ಲಾ ವೇಳೆಯಲ್ಲೂ ಹಾಡಬಹುದಾದ ರಾಗ. ಇದಕ್ಕೆ ಮಯೂರಧ್ವನಿ ಎಂಬ ಇನ್ನೊಂದು ಹೆಸರಿದೆ. ಇದೊಂದು ಉಪಾಂಗ ರಾಗ. ಆರೋಹಣದಲ್ಲಿ ಗಾಂಧಾರ ಧೈವತಗಳೂ, ಅವರೋಹಣದಲ್ಲಿ ಗಾಂಧಾರ ಪಂಚಮಗಳು ವರ್ಜ್ಯ, ಮಧ್ಯಮ ನಿಷಾದಗಳು ಪರಸ್ಪರವಾದಿ ಸಂವಾದಿಗಳು. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ. ವಿಪ್ರಲಂಭ ಶೃಂಗಾರ ರಸಕ್ಕೆ ತಕ್ಕ ರಾಗ ಅವರೋಹಣದಲ್ಲಿ ನಿಷಾದ, ಮಧ್ಯಮ ಮತ್ತು ರಿಷಭಗಳಿಗೆ ಜಾರುಗಮಕ ಪ್ರಯೋಗ ಮಾಡಿದರೆ ಇದರ ಸೊಬಗು ಹೆಚ್ಚುವುದು. ತ್ಯಾಗರಾಜರ 'ರಾಗ ಸುಧಾರಸ' ಎಂಬ ಕೃತಿಯು ಈ ರಾಗದ ಪ್ರಸಿದ್ಧ ಕೃತಿ.

**ಆಂದೋಳಿಕ**—ಇದೇ ಹೆಸರಿನ ಮೂರು ರಾಗಗಳಿವೆ. ಇವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಜನ್ಯ.

(೧) ಆ: ಸ ರಿ ಮ ಪ ನಿ ಸ
ಅ: ಸ̇ ನಿ ದ ಮ ರಿ ಗ ಮ ರಿ ಸ

(೨) ಆ: ಸ ರಿ ಮ ಪ ನಿ ಸ̇
ಅ: ಸ̇ ನಿ ಪ ಮ ಪ ರಿ ಗ ಮ ರಿ ಸ

(೩) ಆ: ಸ ರಿ ಮ ಪ ನಿ ಸ
ಅ: ಸ̇ ನಿ ದ ಮ ಗ ರಿ ಸ

**ಆಂದೋಳಿತ**—ಪಂಚದಶಗಮಕಗಳಲ್ಲಿ ಇದು ಒಂದು ಬಗೆಯ ಗಮಕ. ಒಂದು ಸ್ವರವನ್ನು ಸ್ವಲ್ಪಕಾಲ ಹಿಡಿದು ನಂತರ ತಂತಿಯ ಜಾರುವಿಕೆಯನ್ನು ಮಾಡಿದರೆ ಮೇಲಿನ ಗಮಕ ಉಂಟಾಗುತ್ತದೆ. ಸ್ವರವನ್ನು ಆಡಿಸಿದಂತಾಗುತ್ತದೆ.

ಇ—ಮೂರನೆಯ ಸ್ವರ, ಉದಾತ್ತ, ಅನುದಾತ್ತ, ಸ್ವರಿತ ಭೇದವಿದೆ. ಪರಮಾನಂದ, ಸುಗಂಧಕುಸುಮ, ಪರಮೇಶ ಮುಂತಾದ ಅರ್ಥಗಳನ್ನು ಸೂಚಿಸುತ್ತದೆ.

**ಇಡಾ**— ಸ ಗ್ರಾಮಕ್ಕೆ ಸೇರಿದ ನಿ ದ ಮ ಗ ರಿ ಎಂಬ ಐದು ಸ್ವರಗಳುಳ್ಳ ಒಂದು ತಾನ ವಿಶೇಷ.

**ಇಡಕ್ಕ**—ಇದು ಮಲಬಾರಿನಲ್ಲಿ ಬಳಕೆಯಲ್ಲಿರುವ ಒಂದು ವಾದ್ಯ. ಇದರಲ್ಲಿ ಮರದ ಒಂದು ಅನುರಣನವಿದೆ. ಎರಡು ಮುಖಗಳಿಗೆ ಭದ್ರವಾಗಿ ತಗಲಿರುವಂತೆ ಚರ್ಮವನ್ನು ಅಳವಡಿಸಲಾಗಿದೆ. ಮೈಮೇಲಿನ ಬಳೆಗಳಿಗೆ ದಾರಗಳನ್ನು ಕಟ್ಟಿದೆ. ಈ ದಾರಗಳನ್ನು ಎಳೆದು ಈ ವಾದ್ಯವನ್ನು ನುಡಿಸುತ್ತಾರೆ. ಬೇರೆ ಬೇರೆ ಸ್ವರಗಳನ್ನು ಎಲ್ಲಾ ಸ್ಥಾಯಿಗಳಲ್ಲಿ ಅತ್ಯಂತ ಸಮರ್ಪಕವಾಗಿ ಹಿತಕರವಾಗಿ ನುಡಿಸಲು ಸಾಧ್ಯವಿದೆ. ದಾರಗಳನ್ನು ಎಳೆದು ಶ್ರುತಿಯ ವ್ಯತ್ಯಾಸವನ್ನು ಮಾಡಿ ವಾದ್ಯಗಾರನು ನುಡಿಸುತ್ತಾನೆ.

**ಇತರನಾಮ ಮುದ್ರೆ**—ವಾಗ್ಗೇಯಕಾರನು ತನ್ನ ರಚನೆಗಳಲ್ಲಿ ತನ್ನ ಹೆಸರಿನ ಅಂಕಿತವಿಡದೆ ಇತರ ಹೆಸರುಗಳನ್ನು ಅಂಕಿತವಾಗಿ ಬಳಸಿದರೆ ಅದು ಇತರನಾಮಮುದ್ರೆ ಎನಿಸಿಕೊಳ್ಳುತ್ತದೆ. ಮುತ್ತುಸ್ವಾಮಿ ದೀಕ್ಷಿತರು "ಗುರುಗುಹ" ಎಂದೂ, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರು 'ವೆಂಕಟೇಶ' ಎಂದೂ ಮೈಸೂರು ಮಹಾರಾಜ ಜಯಚಾಮರಾಜ ಒಡೆಯರು 'ಶ್ರೀವಿದ್ಯಾ' ಎಂಬ ಅಂಕಿತಗಳನ್ನು ಬಳಸಿರುವುದು ಇದಕ್ಕೆ ಉದಾಹರಣೆಗಳು.

**ಇತರನಾಮ ಮುದ್ರಕಾರ**—ತನ್ನ ಹೆಸರಿನ ಅಂಕಿತವನ್ನು ಬಳಸದೆ ಇತರ ಹೆಸರನ್ನು ತನ್ನ ರಚನೆಗಳಲ್ಲಿ ಅಂಕಿತವಾಗಿ ಬಳಸಿರುವ ವಾಗ್ಗೇಯಕಾರ.

**ಇನಕರಪ್ರಿಯ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಇನವರ್ಧಿನಿ**—ಈ ರಾಗವು ೩೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ಸ

**ಇನಿರತಿರಾಗ**—ತಮಿಳು ಸಂಗೀತಶಾಸ್ತ್ರವಾದ ಭರತನಾಟಿಯ ಶಾಸ್ತಿರಂ ಎಂಬುದರಲ್ಲಿ ಉಕ್ತವಾಗಿರುವ ಒಂದು ರಾಗ.

**ಇನುಕೊಂಡವಾರು**—ತಮಿಳು ಪದಗಳನ್ನು ರಚಿಸಿರುವ ಒಬ್ಬ ವಾಗ್ಗೇಯಕಾರ. 'ಇನುಕೊಂಡ ವಿಜಯರಾಮ' ಎಂಬ ಅಂಕಿತದಲ್ಲಿ ಪದಗಳನ್ನು ರಚಿಸಿದ್ದಾರೆ.

**ಇನುಪಸನಿಗಲು ವೆಂಕಟರಾಮಯ್ಯ**—ವೆಂಕಟರಾಮಯ್ಯನವರು ೧೮ನೆಯ ಶತಮಾನದಲ್ಲಿದ್ದ ವಾಗ್ಗೇಯಕಾರರು. ತೆಲುಗು ಮತ್ತು ಸಂಗೀತ ವಿದ್ವಾಂಸರಾಗಿದ್ದರು. ಗೋಪಾಲಕೃಷ್ಣ ಎಂಬ ಅಂಕಿತದಲ್ಲಿ ಹಲವು ತೆಲುಗು ಕೀರ್ತನೆಗಳನ್ನು ರಚಿಸಿರುವರು. ಇವರ ಕೀರ್ತನೆಗಳು ಪ್ರೌಢ ಮತ್ತು ಕಠಿಣವಾಗಿರುವುದರಿಂದ ಇವರಿಗೆ 'ಇನುಪಸನಿಗಲು ಅಥವಾ ಕಬ್ಬಿಣದ ಕಡಲೆ' ಎಂಬ ಹೆಸರು ಬಂದಿತು. ಭಜನಪದ್ಧತಿ ಮತ್ತು ಆ ಚಳುವಳಿಯ ಮೂಲ ಕರ್ತರಾದ ಬೋಧೇಂದ್ರ ಸದ್ಗುರು ಸ್ವಾಮಿಯ ಸ್ತುತಿರೂಪವಾದ 'ಸತಮುನಿ ಪ್ರಣುತಿಂಪುಚುನು' ಎಂಬ ತೋಡಿ ರಾಗದ ಕೃತಿಯನ್ನು ಭಜನೆಯ ಪ್ರಾರಂಭದ ಕೀರ್ತನೆಯಾಗಿ ಹಾಡುವ ಪದ್ಧತಿ ಇದೆ. ಕುಂಭಕೋಣದ ಬಳಿಯಿರುವ ಮರುದನಲ್ಲೂರು ಮಠದ ಪ್ರಥಮಸ್ವಾಮಿಯ ಸ್ತುತಿ ರೂಪವಾಗಿ ಒಂದು ಕೀರ್ತನೆಯನ್ನು ರಚಿಸಿದ್ದಾರೆ.

**ಇಯರ್ಪಗೈನಾಯನಾರ್ ಚರಿತ್ರಂ**—ಇದು ಗೋಪಾಲಕೃಷ್ಣ ಭಾರತಿಯವರು ರಚಿಸಿರುವ ಒಂದು ಗೇಯ ನಾಟಕ. ಇದರಲ್ಲಿ ೨೧ ಹಾಡುಗಳು ಮತ್ತು ಕೆಲವು ಪದ್ಯಗಳಿವೆ. ತ್ರಿಷಷ್ಠಿ ಪುರಾತನರಲ್ಲಿ ಒಬ್ಬರಾದ ಇಯರ್‌ಪಗೈನಾಯನಾರರ ಜೀವನಚರಿತ್ರೆಯು ಈ ನಾಟಕದ ವಿಷಯ.

**ಇರಯಿಮ್ಮನ್ ತಂಪಿ** (೧೭೮೩–೧೮೫೮)—ಇವರು ತಿರುವಾಂಕೂರಿನ ಸ್ವಾತಿ ತಿರುನಾಳ್ ಮಹಾರಾಜರ ಆಸ್ಥಾನ ವಿದ್ವಾಂಸರಾಗಿದ್ದರು ಹಾಗೂ ಕವಿ ಮತ್ತು ವಾಗ್ಗೇಯಕಾರರಾಗಿದ್ದರು. ತಾನವರ್ಣಗಳು, ಪದವರ್ಣಗಳು, ಕೀರ್ತನೆಗಳು, ಪದಗಳು ಮತ್ತು ತಿರುವಾದಿರಕ್ಕಳಿ ಹಾಡುಗಳನ್ನು ರಚಿಸಿದ್ದಾರೆ. ದಕ್ಷಯಜ್ಞಂ, ಕೀಚಕ ವಧಂ, ಉತ್ತರಾ ಸ್ವಯಂವರಂ ಎಂಬ ಕಥಕಳಿ ನಾಟಕಗಳನ್ನು ರಚಿಸಿದ್ದಾರೆ. ನವರಾತ್ರಿ ಪ್ರಬಂಧಂ ಎಂಬ ಕವಿತೆಯಲ್ಲಿ ತಿರುವಾಂಕೂರಿನ ನವರಾತ್ರಿ ಉತ್ಸವವನ್ನು ವರ್ಣಿಸಿದ್ದಾರೆ.

**ಇಲಕಂಠಿ**—ಈ ರಾಗವು ೫೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ : ಸ ಮ ಗ ಮ ಪ ದ ನಿ ಸ̇

ಅ : ಸ̇ ನಿ ದ ಪ ಗ ರಿ ಮ ಗ ಸ

**ಇಲತಾಳ**—ಕಥಕಳಿ ನೃತ್ಯದಲ್ಲಿ ಬಳಸುವ ತಾಳಗಳು. ಇವು ಜಾಲ್ರಾಗಿಂತ ಆಕಾರ ಮತ್ತು ಮಂದದಲ್ಲಿ ದೊಡ್ಡವು.

**ಇಳಿ**—ಪುರಾತನ ತಮಿಳು ಸಂಗೀತದಲ್ಲಿ ಪಂಚಮ ಸ್ವರದ ಹೆಸರು.

**ಇಳಿಕ್ರಮ**—ಷಡ್ಜ ಪಂಚಮ ಸಂವಾದಿತ್ವ.

**ಇಸೈಪ್ಪಾಣರ್**—ಪುರಾತನ ಕಾಲದಲ್ಲಿ ತಮಿಳು ದೇಶದಲ್ಲಿ ಸಂಗೀತಕ್ಕೆ ಪ್ರಸಿದ್ಧರಾಗಿದ್ದ ಪಾಣರ್ ಎಂಬ ವರ್ಗದವರು.

**ಇಸೈವೆಳ್ಳಾಳರ್** ತಮಿಳು ದೇಶದ ದೇವದಾಸಿಯರು ಸಂಗೀತ ಮತ್ತು ನಾಟ್ಯವು ಇವರಿಗೆ ಪರಂಪರಾನುಗತವಾಗಿತ್ತು.

**ಇಂದು**—೭೨ ಮೇಳಕರ್ತ ಪದ್ಧತಿಯಲ್ಲಿ ಮೊದಲನೆಯ ಚಕ್ರದ ಹೆಸರು. ಇದು ೧-೬ ಚಕ್ರಗಳನ್ನು ಒಳಗೊಂಡಿದೆ.

| | | | | | | |
|---|---|---|---|---|---|---|
| ಇಂದು | — | ಭೂ | — | ೧ನೆಯ ಚಕ್ರದ | ೪ನೆಯ ಮೇಳ |
| ಇಂದು | — | ಗೋ | — | ,, | ೨ನೆಯ ಮೇಳ |
| ಇಂದು | — | ಮಾ | — | ,, | ೫ನೆಯ ಮೇಳ |
| ಇಂದು | — | ಪಾ | — | ,, | ೧ನೆಯ ಮೇಳ |
| ಇಂದು | — | ಷಾ | — | ,, | ೬ನೆಯ ಮೇಳ |
| ಇಂದು | — | ಶ್ರೀ | — | ,, | ೨ನೆಯ ಮೇಳ |

**ಇಂದುಕಾಂತಿ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಇಂದು ಕೌಶಿಕ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ನಿ ಪ ದ ಮ ಗ ರಿ ಮ ಗ ಸ

**ಇಂದು ಗೀರ್ವಾಣಿ**—ಈ ರಾಗವು ೬೨ನೆಯ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ಪ ದ ನಿ ಪ ಮ ಗ ರಿ ಸ

**ಇಂದು ಗೌಳಿಕ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ನಿ ಪ ದ ಪ ಗ ರಿ ಮ ಗ ಸ

**ಇಂದು ಘಂಟಾರವ**—ಈ ರಾಗವು ೨ನೆಯ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ. ಉಪಾಂಗರಾಗ. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ ಆರೋಹಣದಲ್ಲಿ ರಿಷಭವಕ್ರ ಮತ್ತು ಧೈವತವು ವಕ್ರ. ಸಂಪೂರ್ಣ-ಅವರೋಹಣ ರಾಗ. ಬಹುರಂಜಕವಾದ ದೀನರಸ ಪ್ರಧಾನರಾಗ ಮತ್ತು ಸಾರ್ವಕಾಲಿಕರಾಗ.

ಆ: ಸ ರಿ ಸ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಇದೇ ಹೆಸರಿನ ಬೇರೆ ಬೇರೆ ಮೂರು ರಾಗಗಳು ೨೦ನೆಯ ಮೇಳಕರ್ತ ನಠಭೈರವಿಯ ಜನ್ಯರಾಗಗಳಿವೆ.

(೧) ಆ : ಸ ಗ ಮ ಪ ದ ಪ ನಿ
ಅ : ದಾ ಪ ಮ ಗ ರಿ ಸ ನಿ
(೨) ಆ : ಸ ರಿ ಮ ಪ ದ ನಿ ದ ಸ
ಅ : ಸ ನಿ ದ ನಿ ಪ ಮ ದ ಪ ಮ ಗ ರಿ ಗ ಸ
(೩) ಆ : ಸ ರಿ ಮ ಪ ದ ನಿ ದ ಸ
ಅ : ಸ ನಿ ದ ನಿ ಪ ದ ಮ ಗ ರಿ ಗ ಸ

**ಇಂದು ಭೋಗಿ**—ಈ ರಾಗವು ೪೬ನೆಯ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ

ಆ : ಸ ಗ ರಿ ಗ ಮ ಪ ದ ಸ
ಅ : ಸ ನಿ ದ ನಿ ಪ ಮ ಗ ರಿ ಸ

**ಇಂದು ಧನ್ಯಾಸಿ**—ಈ ರಾಗವು ೪೬ನೆಯ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ
ಅ : ಸ ನಿ ದ ಪ ದ ಮ ಗ ರಿ ಸ

**ಇಂದು ಧವಳಿ**—ಈ ರಾಗವು ೨೧ನೆಯ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

(೧) ಆ : ಸ ರಿ ಮ ಗ ಸ ಮ ಪ ದ ನಿ ಸ
ಅ : ಸ ನಿ ದ ಪ ಮ ಗ ಸ
(೨) ಆ : ಸ ರಿ ಮ ಪ ದ ನಿ ಸ
ಅ : ಸ ನಿ ದ ಪ ಮ ಗ ರಿ ಸ

**ಇಂದುಮತಿ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ
ಅ : ಸ ನಿ ದ ಪ ಮ ಗ ಸ

**ಇಂದುಸಾರಂಗನಾಟ**—ಈ ರಾಗವು ೮ನೆಯ ಮೇಳಕರ್ತ ಹನುಮ ತೋಡಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ಮ ದ ನಿ ಸ
ಅ : ಸ ದ ಪ ಮ ಗ ರಿ ಸ

**ಇಂದು ಶೀತಲ**—ಈ ರಾಗವು ೪ನೆಯ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ದ ನ ಪ ಮ ಗ ರಿ ಸ

**ಇಂದುಶೀತಲಿ**—ಇದೂ ಸಹ ಮೇಲಿನ ರಾಗದಂತೆಯೇ.

**ಇಂದುಶೇಖರ**—ಇದೊಂದು ಬಗೆಯ ದೇಶೀತಾಳದ ಹೆಸರು.

**ಇಂದ್ರ**—ಇದು ಭರತನಾಟ್ಯದ ಕೆಲವು ವಿಶೇಷ ಹಸ್ತಮುದ್ರೆಗಳಲ್ಲಿ ಒಂದು ಮುದ್ರೆ. ಎರಡು ತ್ರಿಪತಾಕ ಹಸ್ತಗಳ ಮಣಿಕಟ್ಟನ್ನು ಸೇರಿಸಿ ಹಿಡಿಯುವುದು ಈ ಹಸ್ತ ಮುದ್ರೆ.

**ಇಂದ್ರಕಾಳಿಯಂ** – ಯಾಮಳೇಂದ್ರನು ರಚಿಸಿದ ತಮಿಳಿನ ಒಂದು ಪುರಾತನ ಸಂಗೀತಶಾಸ್ತ್ರ ಗ್ರಂಥ.

**ಇಂದ್ರಕುಂಡಲಿ**—ದಾಮೋದರನು ಹೇಳಿರುವ ಒಂದು ದೇಶೀತಾಳದ ಹೆಸರು.

**ಇಂದ್ರ ಕೋದಂಡ**—ಭಾವಭಟ್ಟನು ಹೇಳಿರುವ ಒಂದು ದೇಶೀತಾಳದ ಹೆಸರು.

**ಇಂದ್ರಕ್ರಿ** —ರಾಣಾಕುಂಭನು ಹೇಳಿರುವ ಒಂದು ಕ್ರಿಯಾಂಗರಾಗದ ಹೆಸರು.

**ಇಂದ್ರ ಪ್ರಿಯ**—ಇದೇ ಹೆಸರಿನ ಮೂರು ಬೇರೆ ಬೇರೆ ರಾಗಗಳಿವೆ.

(೧) ಇದು ಒಂದನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

(೨) ಇದು ೨೮ನೆಯ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

(೩) ಈ ರಾಗವು ೫೪ನೆಯ ಮೇಳಕರ್ತ ವಿಶ್ವಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಇಂದ್ರಸಭಾ**—ಪುರಾಣಗಳಲ್ಲಿ ವರ್ಣಿಸಿರುವ ನಾಟ್ಯ ಮತ್ತು ಸಂಗೀತಗಳಿಗೆ ಪ್ರಸಿದ್ಧವಾದ ಇಂದ್ರನ ಆಸ್ಥಾನ.

**ಇಂದ್ರಶಿಖಂಡಿ**—ಇದೊಂದು ದೇಶೀತಾಳದ ಹೆಸರು.

**ಇಂದ್ರವಂಶ**—ಇದು ೨೯ನೆಯ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ಪ ದ ಮ ಗ ರಿ ಸ

**ಇಂದ್ರವರ್ಧನ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಮ ಗ ರಿ ಸ

**ಇಂದ್ರ ನೀಲ** — ಇದೊಂದು ಬಗೆಯ ವರ್ಣಾಲಂಕಾರ. ಈ ಧ್ರುವತಾಳದ ಚತುರಶ್ರಜಾತಿ ಅಲಂಕಾರವನ್ನು ಸಂಗೀತದ ವಿದ್ಯಾರ್ಥಿಗಳು ಕಲಿಯುತ್ತಾರೆ.

ಉದಾ : ಸ ರಿ ಗ ಮ ಗ ರಿ ಸ ರಿ ಗ ರಿ ಸ ರಿ ಗ ಮ

ರಿ ಗ ಮ ಪ ಮ ಗ ರಿ ಗ ಮ ಗ ರಿ ಗ ಮ ಪ ಇತ್ಯಾದಿ.

**ಇಂದಿನ** — ಇದು ಕಥಕಳಿ ಸಂಗೀತದಲ್ಲಿ ರೂಢಿಯಲ್ಲಿರುವ ಒಂದು ರಾಗ.

**ಇಂದ್ರಿಯಾರ್ಥ** — ಇದು ಭರತನಾಟ್ಯದ ಸಾತ್ವಿಕಾಭಿನಯದ ಮೂರು ವಿಧಗಳಲ್ಲಿ ಒಂದು ವಿಧ. ಇಂದ್ರಿಯಾರ್ಥದಲ್ಲಿ ಶಬ್ದ, ಸ್ಪರ್ಶ, ರೂಪ, ರಸಗಂಧವೆಂಬ ನಾಲ್ಕು ವಿಧ ದೃಷ್ಟಿಯನ್ನು ಅಡ್ಡವಾಗಿ ತಿರುಗಿಸಿ, ಶಿರಸ್ಸನ್ನು ಪಕ್ಕಕ್ಕೆ ಬಗ್ಗಿಸಿ, ತೋರು ಬೆರಳನ್ನು ಕಿವಿಯಲ್ಲಿ ಅಥವಾ ಕರ್ಣ ರಂಧ್ರದಲ್ಲಿಡುವುದು ಶಬ್ದಾಭಿನಯ.

ಕಣ್ಣುಗಳನ್ನು ಸ್ವಲ್ಪ ಮಡಿಚಿ, ಹುಬ್ಬನ್ನು ಎಗರಿಸುತ್ತಾ, ಕೆನ್ನೆಗಳ ಮೇಲೆ, ಮಣಿಕಟ್ಟನ್ನಾಗಲಿ ಅಥವಾ ಅಂಗೈಯನ್ನಾಗಲಿ ಇಡುವುದು ಸ್ಪರ್ಶಾಭಿನಯ.

ಶಿರಸ್ಸಿನ ಮೇಲೆ ಪತಾಕ ಹಸ್ತವನ್ನಿಟ್ಟು, ಸ್ವಲ್ಪ ಅತ್ತಿತ್ತ ಕದಲಿಸಲ್ಪಡುವ ಮುಖದಿಂದ, ಯಾವುದನ್ನೋ ನೋಡುವಂತೆ ಮಾಡುವುದು ರೂಪಾಭಿನಯ.

ಕಣ್ಣುಗಳನ್ನು ಮುಚ್ಚಿ, ಮೂಗಿನ ಸೊಳ್ಳೆಗಳನ್ನು ದೊಡ್ಡದನ್ನಾಗಿಸಿ, ವೇಗದ ಉಸಿರಾಟವನ್ನು ತೋರುವುದು ರಸಗಂಧಾಭಿನಯ.

ಇವೆಲ್ಲವೂ ಸಾತ್ವಿಕಾಭಿನಯದ ಇಂದ್ರಿಯಾರ್ಥ. ಅಭಿನಯ ವಿಭೇದಗಳು.

**ಈ** — ನಾಲ್ಕನೆಯ ವರ್ಣ. ಸ್ತ್ರೀಮೂರ್ತಿ, ಮಹಾಮಾಯಾ, ಲೋಲಾಕ್ಷೀ, ವಾಮಲೋಚನ, ಗೋವಿಂದ, ವಿಷ್ಣು, ಲಕ್ಷ್ಮೀ, ವೈಷ್ಣವೀ, ಶಿವಾ, ಪಾವಕ, ತ್ರಿಪುರ ಸುಂದರೀ ಮುಂತಾದ ಅರ್ಥಗಳಿವೆ

**ಈಶಗಿರಿ** — ಈ ರಾಗವು ೬೯ನೆಯ ಮೇಳಕರ್ತ ಧಾತುವರ್ಧಿನಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ದ ನಿ

ಅ : ದ ಪ ಮ ಗ ರಿ ಸ ನಿ ಸ

**ಈಶಮನೋಹರಿ** — ಇದು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಜನ್ಯರಾಗ.

ಆ : ಸ ರಿ ಗ ಮ ಪ ದ ನಿ ಸ

ಅ : ಸ ನಿ ದ ಪ ಮ ರಿ ಮ ಗ ರಿ ಸ

ಇದು ಭಾಷಾಂಗ ರಾಗ. ಕೆಲವು ಪ್ರಯೋಗಗಳಲ್ಲಿ ಕಾಕಲಿ ನಿಷಾದವು ಬರುತ್ತದೆ. ರಿಷಭ, ಮಧ್ಯಮ, ನಿಷಾದಗಳು ರಾಗ ಛಾಯಾಸ್ವರಗಳು, ದಾಟು ಮತ್ತು ವಕ್ರ ಸಂಚಾರಗಳು ಅಧಿಕ. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ. ರಿಷಭಕ್ಕೆ ಜಾರು ಗಮಕವು ದೀನತೆಯನ್ನು ಸೂಚಿಸುತ್ತದೆ. ದೀನ ಮತ್ತು ಭಕ್ತಿರಸ ಪ್ರಧಾನವಾದ ಎಲ್ಲಾ ವೇಳೆಯಲ್ಲೂ ಹಾಡಬಹುದಾದ ರಾಗ, ತ್ಯಾಗರಾಜರ ' ಮನಸಾ ಶ್ರೀರಾಮ

ಚಂದ್ರಿನಿ', ಮುತ್ತುಸ್ವಾಮಿ ದೀಕ್ಷಿತರ 'ಶ್ರೀ ಗಣನಾಥಂ ಭಜರೇ ಮತ್ತು ಜಗದೀಶ ಮನೋಹರಿ' ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

ಇದೇ ಹೆಸರಿನ ಮೂರು ರಾಗಗಳು ಹರಿಕಾಂಭೋಜಿಯ ಜನ್ಯವಾಗಿವೆ.

(೧) ಆ: ಸ ರಿ ಗ ಮ ಪ ಮ ಪ ದ ನಿ ಸ

ಅ: ಸ ನಿ ಪ ಮ ಗ ಮ ರಿ ಸ

(೨) ಆ: ಸ ರಿ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ರಿ ಮ ಗ ರಿ ಸ

(೩) ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಮ ಗ ಸ

**ಈಶಪ್ರಿಯ**—ಈ ರಾಗವು ೬೬ನೆಯ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಉ** - ಐದನೆಯ ವರ್ಣ. ಪರಮೇಶ, ಶಂಕರ, ವರ್ತುಲಾಕ್ಷೀ, ಕಲ್ಯಾಣ ವಾಚಕ, ಶಿವ, ವಿಷ್ಣು, ಮಹೇಶ್ವರ, ವಿಶ್ವಕರ್ಮ, ಶತ್ರುಘ್ನ, ರೋಷೋಕ್ತಿ, ಅನುಕಂಪ ಮುಂತಾದ ಅರ್ಥಗಳಿವೆ.

**ಉಕವಾಣಿ**—ಈ ರಾಗವು ೨೧ನೆಯ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಉಕಪ್ರಿಯ**—ಈ ರಾಗವು ೧೧ನೆಯ ಮೇಳಕರ್ತ ಕೋಕಿಲಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಉತ್ತರಿ**—ಈ ರಾಗವು ೬೪ನೆಯ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ದ ಮ ಗ ಸ

**ಉತ್ಸಂಗ ಹಸ್ತ**—ಭರತನಾಟ್ಯದ ಹಸ್ತಭೇದಗಳಲ್ಲಿ ಒಂದು ವಿಧ. ಎರಡು ಮೃಗಶೀರ್ಷ ಹಸ್ತಗಳನ್ನು ಪರಸ್ಪರ ಕಂಕುಳು ಬಳಿ ಹಿಡಿಯುವುದು ಉತ್ಸಂಗ ಹಸ್ತ. ಬೇರೆ ಗ್ರಂಥಗಳಲ್ಲಿ ಮೃಗಶೀರ್ಷದ ಬದಲು ಅರಾಳ ಹಸ್ತಗಳನ್ನು ಹೇಳಿದೆ.

**ಉತ್ಪ್ಲವನ ಭೇದ**—ಅಭಿನಯ ದರ್ಪಣದಲ್ಲಿ ಹೇಳಿರುವಂತೆ ಪಾದಭೇದ

ಗಳಲ್ಲಿ ಉತ್ಪ್ಲವನ ಭೇದಗಳನ್ನು ಹೇಳಿದೆ. ಇವು ಐದು ವಿಧವಾಗಿದೆ. ಅಲಗ, ಕರ್ತರೀ,, ಅಶ್ವೋತ್ಪ್ಲವನ, ಮೋಟಿತ, ಕೃಪಾಲಗ ಎಂದು ಅವುಗಳ ಹೆಸರು.

**ಉತ್ತಾನ ವಂಚಿತ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಕೂರ್ಪರ ಅಂಸಗಳು ಸ್ವಲ್ಪ ಅಲ್ಲಾಡುತ್ತಿರುವ ಹಸ್ತಗಳಲ್ಲಿ ತ್ರಿಪತಾಕ ಹಸ್ತಗಳು ಸ್ವಲ್ಪ ತಿರುಗಿಸುವುದು

**ಉತ್ತಾಪಕ**—ಭರತನಾಟ್ಯಶಾಸ್ತ್ರದಲ್ಲಿ ಹೇಳಿರುವಂತೆ ನ್ಯಾಯೋಚಿತವಾದ ಮನೋವ್ಯಾಪಾರಗಳಿಂದ ಕೂಡಿರುವ ಹರ್ಷಭಾವವು ಅಧಿಕವಾಗಿರುವ ಭಾವನೆಯು ಸಾತ್ವತೀವೃತ್ತಿ. ಇದರಲ್ಲಿ ನಾಲ್ಕು ಭೇದಗಳಿವೆ. ಅವುಗಳಲ್ಲಿ ಉತ್ತಾಪಕ ಎನ್ನುವುದೊಂದು ಬಗೆ. ಮಾನಸಿಕ ಸಂಘರ್ಷಣೆಯನ್ನು ತೋರುವಂತಹ ರೀತಿಯು ಉತ್ತಾಪಕವೆಂದು ನಾಟ್ಯ ಲಾಕ್ಷಣಿಕರು ಹೇಳಿದ್ದಾರೆ.

**ಉತ್ಕ್ಷಿಪ್ತ**—ಇದು ಭರತನಾಟ್ಯದ ಶಿರೋ ಭೇದಗಳಲ್ಲಿ ಒಂದು ಬಗೆ. ಒಂದೇ ಪಕ್ಕಕ್ಕೆ ಮೇಲೆತ್ತಿದ ತಲೆ. ತೆಗೆದುಕೊ, ಹೋಗು, ಆಕಾಶಗಮನ, ವೀಕ್ಷಣೆ, ಹಾರುತ್ತಿರುವ ಪಕ್ಷಿಗಳು, ವಿಮಾನ ಮುಂತಾದುವುಗಳನ್ನು ಸೂಚಿಸುವುದು.

**ಉತ್ತುಂಗಮಾನ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಪ ನಿ ಸ

ಅ: ಸ ದ ಪ ಮ ರಿ ಸ

**ಉದಯರವಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಸ

ಇದೇ ಹೆಸರಿನ ಇನ್ನೆರಡು ರಾಗಗಳಿವೆ.

(೧) ಇದು ೩೬ನೆಯ ಮೇಳಕರ್ತ ಚಲನಾಟದ ಒಂದು ಜನ್ಯರಾಗ.

ಆ: ಸ ರಿ ಮ ಪ ಸ ನಿ ಸ

ಅ: ಸ ನಿ ಪ ಮ ರಿ ಸ

**ಉದಯರವಿಚಂದ್ರಿಕಾ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

(೧) ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ರಿ ಸ

೨) ಆ: ಸ ಗ ಮ ಪ ನಿ ಸ

ಅ: ಸ ಪ ಮ ಗ ಸ

ಇದು ಔಡವ–ಔಡವ ರಾಗ. ಗಾಂಧಾರ·ನಿಷಾದಗಳು ಮತ್ತು ಮಧ್ಯಮ ನಿಷಾದಗಳು

ಪರಸ್ಪರವಾದಿ ಸಂವಾದಿ ಸ್ವರಗಳು. ಆರೋಹಣ ಮತ್ತು ಅವರೋಹಣದಲ್ಲಿ ರಿಷಭ, ಧೈವತಗಳು ವರ್ಜ್ಯ. ರಕ್ತಿರಾಗ ಮತ್ತು ಎಲ್ಲಾ ವೇಳೆಗಳಲ್ಲೂ ಹಾಡಬಹುದಾದ ರಾಗ. ನಿಷಾದ, ಗಾಂಧಾರಗಳು ಜೀವ ಮತ್ತು ನ್ಯಾಸ ಸ್ವರಗಳು. ಇವುಗಳಿಗೆ ಜಾರು ಗಮಕ ಪ್ರಯೋಗ ಮಾಡಿದರೆ ರಂಜಕತ್ವವು ಹೆಚ್ಚುತ್ತದೆ. ಈ ರಾಗದ ಕೆಲವು ಪ್ರಸಿದ್ಧ ಕೃತಿಗಳು ತ್ಯಾಗರಾಜರ ಎಂಚನೇರ್ಚಿನಾ ಮತ್ತು ಮುತ್ತುಸ್ವಾಮಿ ದೀಕ್ಷಿತರ ಶ್ರೀ ಗುರುಗುಹಮೂರ್ತೇ ಎಂಬುವು.

(೩) ಇದೇ ಹೆಸರಿನ ಮತ್ತೊಂದು ರಾಗವು ೩೬ನೆಯ ಮೇಳಕರ್ತ ಚಲನಾಟದ ಒಂದು ಜನ್ಯವಾಗಿದೆ.

ಆ : ಸ ರಿ ಸ ಮ ರಿ ಮ ಪ ಸ ನಿ ಸ

ಅ : ಸ ನಿ ಪ ಮ ರಿ ಸ

**ಉದಯರಾಗಗಳು** –ಮುಂಜಾನೆಯಲ್ಲಿ ಸಂಪ್ರದಾಯಸ್ಥ ಮತ್ತು ಆಚಾರ ಶೀಲ ಕುಟುಂಬಗಳಲ್ಲಿ ಸ್ತ್ರೀಯರು ಸ್ನಾನ ಮಾಡುವ ವೇಳೆಗಳಲ್ಲಿ, ರಂಗವಲ್ಲಿ ಹಾಕು ವಾಗ ಹಾಡುಗಳನ್ನು ಹೇಳಿಕೊಳ್ಳುತ್ತಾ ಕೆಲಸ ಮಾಡುವ ಪದ್ಧತಿಯಿದೆ. ಗಂಡಸರೂ ಸಹ ಕೆಲವು ಸುಪ್ರಭಾತಗಳನ್ನು ಹೇಳುತ್ತಾ ತುಳಸೀದಳವನ್ನು ಸಂಗ್ರಹಿಸುವಾಗ ಅಥವಾ ದೇವತಾರ್ಚನೆಗೆ ಸಿದ್ಧಮಾಡುತ್ತಾ ಹೇಳುತ್ತಾರೆ. ಉದಯರಾಗವೆಂದರೆ ಭೂಪಾಲಿ ಅಥವಾ ರೇಗುಪ್ತಿ ರಾಗ ಉದಯಗೀತಗಳನ್ನು ಬಿಲಹರಿ, ದೇಶಾಕ್ಷಿ ಮತ್ತು ಆನಂದಭೈರವಿ ರಾಗಗಳಲ್ಲಿ ಹಾಡುವುದುಂಟು. ರತ್ನಾಕರವರ್ಣಿ ಮುಂತಾದ ಕವಿಗಳು ವೇಳಾವಳಿ, ಗುಂಡಕ್ರಿಯ ಮುಂತಾದ ರಾಗಗಳನ್ನು ಉದಯಕಾಲದ ರಾಗ ಗಳೆಂದು ಹೇಳಿದ್ದಾರೆ. ಈ ರಾಗದ ಹಾಡುಗಳು ಷಟ್ಪದಿಯಲ್ಲಿದ್ದು ಪಲ್ಲವಿ, ಅನುಪಲ್ಲವಿ ಮತ್ತು ಹಲವು ನುಡಿಗಳನ್ನು ಒಳಗೊಂಡಿವೆ. ಪ್ರತಿನುಡಿಯ ಅನಂತರ ಪಲ್ಲವಿಯ ಅಂತ್ಯಾಕ್ಷರವು ದೀರ್ಘವಾಗುತ್ತದೆ. ಇವುಗಳಲ್ಲಿ ಸಾಹಿತ್ಯವು ಧಾತುವಿಗಿಂತ ಪ್ರಧಾನ ವಾಗಿದೆ. ಪುರಂದರದಾಸರ ರಂಗನೊಲಿದ ಎಂಬ ೨೯ ನುಡಿಗಳ ಹಾಡು, ಕನಕದಾಸರ ವಾಸುದೇವಾಯ ನಮೋ ಎಂಬ ಕೃತಿ, ಏಳುನಾರಾಯಣ ಏಳುಲಕ್ಷ್ಮೀರಮಣ, ಏಳಯ್ಯ ಶ್ರೀಹರಿ, ಉದಯಕಾಲದೊಳೆದ್ದು, ರಂಗನಾಯಕಸ್ವಾಮಿ, ಉಪ್ಪವಡಿಸಯ್ಯ ಹರಿಯೇ ಮುಂತಾದುವು ಉದಯರಾಗದ ಹಾಡುಗಳು.

**ಉದಯಶಂಕರ್**—ಇವರು ೧೯೦೨ರಲ್ಲಿ ಉದಯಪುರದಲ್ಲಿ ಜನಿಸಿದರು. ಇವರ ತಂದೆ ರಾಜಾಸ್ಥಾನದಲ್ಲಿ ಶಿಕ್ಷಣಾಧಿಕಾರಿಯಾಗಿದ್ದರು. ವಾರಾಣಸಿ ಮತ್ತು ಬೊಂಬಾಯಿನ ಆರ್ಟ್ಸ್ ಕಾಲೇಜುಗಳಲ್ಲಿ ಶಿಕ್ಷಣ ಪಡೆದರು. ಆ ಕಾಲದಲ್ಲಿ ನೃತ್ಯ ಕಲೆಗೆ ಕಳಂಕವಿತ್ತು. ಇವರ ದುಡಿಮೆ ಮತ್ತು ಪ್ರಯತ್ನಗಳಿಂದ ಇದು ಒಂದು ಶ್ರೇಷ್ಠ ಕಲೆ ಎನಿಸಿ ಪುನರುತ್ಥಾನಗೊಂಡಿತು. ಕಥಕ್ಕಳಿ ಮತ್ತು ಮಣಿಪುರಿ ನೃತ್ಯ ಸಂಪ್ರ ದಾಯಗಳನ್ನು ಅಭ್ಯಾಸ ಮಾಡಿ, ಅವುಗಳಿಂದ ಪಾದವಿನ್ಯಾಸ ಮತ್ತು ಮುದ್ರೆಗಳನ್ನು ಆಯ್ದು ಅಪೂರ್ವ ಕಲ್ಪನಾಶಕ್ತಿಯಿಂದ ತನ್ನದೇ ಆದ ಹಲವು ಹೃದಯಂಗಮ ನೃತ್ಯ

ಗಳನ್ನು ಕಲ್ಪಿಸಿದರು. ಹಾವಾಡಿಗನ ನೃತ್ಯ, ಸುಗ್ಗಿ ಕುಣಿತ, ಜಾನಪದ ನೃತ್ಯವೇ ಮುಂತಾದ ಹಲವಾರು ನೃತ್ಯಗಳನ್ನು ರಚಿಸಿ ಅವನ್ನು ಪ್ರದರ್ಶಿಸಿ ಭಾರತೀಯ ನೃತ್ಯ ಕಲೆಯನ್ನು ಕಳಂಕರಹಿತವಾಗಿಸಿ ಜನಪ್ರಿಯಗೊಳಿಸಿದರು. ಆಲ್ಮೋರಾದಲ್ಲಿ ಕಲಾ ಶಾಲೆಯನ್ನು ಸ್ಥಾಪಿಸಿದರು. ಕಲ್ಪನಾ ಎಂಬ ನೃತ್ಯಪ್ರಧಾನವಾದ ಚಿತ್ರವನ್ನು ತಯಾರಿಸಿದರು. ಬುದ್ಧನ ಚರಿತ್ರೆಯಿಂದ ಮಹಾತ್ಯಾಗ ಎಂಬ ಛಾಯಾನಾಟಕ ವನ್ನು ರಚಿಸಿ ದೇಶದ ಆದ್ಯಂತ ಪ್ರದರ್ಶಿಸಿ ಅಪಾರ ಕೀರ್ತಿಯನ್ನು ಗಳಿಸಿದರು. ೨೦ನೆಯ ಶತಮಾನದಲ್ಲಿ ನೃತ್ಯಕಲೆಯನ್ನು ಕಳಂಕರಹಿತವನ್ನಾಗಿ ಮಾಡಿ ಪುನರುಜ್ಜೀವನಗೊಳಿಸಿ ಅದರ ಅಂತಸ್ಥನ್ನು ಹೆಚ್ಚಿಸಿದರು.

**ಉದ್ಘಟಿತ**—ಭರತನಾಟ್ಯದ ಪಾದಭೇದಗಳಲ್ಲಿ ಇದೊಂದು ವಿಧ. ಇದರಲ್ಲಿ ಬೆರಳುಗಳ ಮೇಲೆ ನಿಂತು ಹಿಮ್ಮಡಿಯಿಂದ ನೆಲವನ್ನು ಅದುಮುವುದು ಉದ್ಘಟಿತ.

**ಉದ್ವರ್ತನ**—ಭರತನಾಟ್ಯಾಭಿನಯದ ತಟೀರೇಚಕಗಳಲ್ಲಿರುವ ಮೂರು ವಿಧಗಳಲ್ಲಿ ಒಂದು ಕ್ರಿಯೆ. ಇದು ಸೊಂಟವನ್ನು ಮೇಲಕ್ಕೆತ್ತುವ ಕ್ರಿಯೆ.

**ಉದ್ವೃತ್ತ**—ಭರತನಾಟ್ಯದ ಹಸ್ತಮುದ್ರೆಗಳಲ್ಲಿ ಇದೊಂದು ಬಗೆ. ಎರಡು ಹಂಸಪಕ್ಷ ಹಸ್ತಗಳನ್ನು ಎದೆಗೆ ಎದುರಾಗಿ ತಾಳವೃಂತಗಳಂತೆ, ಮೇಲೆ ಕೆಳಗೆ ಆಡಿಸಿ ಹಿಡಿದರೆ ಅದು ಉದ್ವೃತ್ತ ಹಸ್ತ ಅಥವಾ ತಾಳವೃಂತ.

**ಉದ್ವಾಹಿತ**—ಭರತನಾಟ್ಯದ ಎದೆ ಮುಂತಾದ ಭೇದಗಳಲ್ಲಿ ಒಂದು ಬಗೆ.

(೧) ಎದೆಯು ಊರ್ಧ್ವಮುಖವಾಗಿದ್ದೂ ಎತ್ತರವಾದುದನ್ನು ನೋಡುವುದು.

(೨) ಮೊಳಕಾಲಿನ ನಡೆಯ ಭೇದವು ಆವರ್ತಿತ. ಇವರಲ್ಲಿ ಮೊಳಕಾಲನ್ನು ಎತ್ತಿ ಎತ್ತಿ ನಡೆಯುವುದು ಉದ್ವಾಹಿತ.

(೩) ಸೊಂಟ ಅಥವಾ ಕಟೀ ಭೇದಗಳಲ್ಲಿ ಇರುವ ಐದು ವಿಧಗಳಲ್ಲಿ ನಿಧಾನ ವಾಗಿ ಸೊಂಟ, ತೊಡೆ ಮತ್ತು ಪಾರ್ಶ್ವಗಳನ್ನು ಮೇಲೆತ್ತಿ ಇಳಿಸುವುದು ಉದ್ವಾಹಿತ.

**ಉದ್ದೀಪನ ವಿಭಾವ**—ಸತ್ವಜಗಳಿಂದ ಕೂಡಿದ ನಾಯಕ ನಾಯಕಿಯರ ಚಿತ್ತವೃತ್ತಿಯನ್ನು ಪ್ರಕಟಗೊಳಿಸುವ ವಿಶೇಷಣವು ಉದ್ದೀಪನ ವಿಭಾವ. ಇದರಲ್ಲಿ ನಾಲ್ಕುವಿಧ ಅದು ಗುಣ, ಅಲಂಕಾರ, ಚೇಷ್ಟೆ, ತಟಸ್ಥ, ರಸಗಳೂ ಸ್ಥಾಯಿಭಾವ ಗಳೂ ಆಲಂಬನ ವಿಭಾವವನ್ನು ಆಶ್ರಯಿಸಿದರೆ ಉದ್ದೀಪನವು ಆ ಆಶ್ರಿತ ಭಾವನೆಯ ವಿಭಾವವನ್ನು ಉತ್ತೇಜಿಸುವಂತಹ ವಸ್ತುವಿಷಯವನ್ನು ಸೂಚಿಸುತ್ತದೆ.

**ಉದ್ವೇಷ್ಟಿತ**—ನಂದಿಕೇಶ್ವರನು ಹೇಳಿರುವ ಹನ್ನೆರಡು ಬಗೆಯ ಹಸ್ತಲಕ್ಷಣ ಭೇದಗಳಲ್ಲಿ ಇದೊಂದು ಬಗೆ. ನಾಟ್ಯಕಾರ್ಯದಲ್ಲಿ ಕೈಗಳನ್ನು ಮೇಲೆತ್ತುವುದು ಉದ್ವೇಷ್ಟಿತ.

**ಉನ್ನತ**—ಭರತ ಮುನಿಯು ಹೇಳಿರುವ ಕತ್ತಿನ ಚಲನೆ ಅಥವಾ ಗ್ರೀವಾ ಭೇದಗಳಲ್ಲಿ ಇದೊಂದು ಬಗೆ. ಮುಖವನ್ನು ಮೇಲೆತ್ತುವಾಗ ಉಂಟಾಗುವ ಕತ್ತು.

ಇದು ಎತ್ತರ, ಆಕಾಶ, ವಿಮಾನಯಾನ, ಊರ್ಧ್ವಮುಖ ಮುಂತಾದುವನ್ನು ಸೂಚಿಸುತ್ತವೆ.

**ಉನ್ಮೇಶ** — ಭರತನಾಟ್ಯದಲ್ಲಿ ರೆಪ್ಪೆಗಳ ವಿವಿಧ ಭೇದ ಲಕ್ಷಣಗಳಿಗೆ ಪುಟಕರ್ಮಗಳೆಂದು ಹೆಸರು. ಅವು ಒಂಭತ್ತು ವಿಧ. ಉನ್ಮೇಶವು ಅವುಗಳಲ್ಲಿ ಮೊದಲನೆಯ ಬಗೆ. ರೆಪ್ಪೆಗಳನ್ನು ಬಿಡಿಸಿರುವ ಕರ್ಮ. ಇದು ಕ್ರೋಧಾದಿಗಳನ್ನು ತೋರಿಸುವುದರಲ್ಲಿ ಉಪಯೋಗವಾಗುತ್ತದೆ.

**ಉಡುಕ್ಕೈ** — ಇದೊಂದು ಬಗೆಯ ಡಮರು ವಾದ್ಯ. ಗ್ರಾಮೀಣವಾದ್ಯ. ಈ ವಾದ್ಯದ ಹೊಳವು, ಅನೇಕ ವೇಳೆ ಜೇಡಿಮಣ್ಣಿನಿಂದ ತಯಾರಿಸುವುದುಂಟು. ಇದಕ್ಕೆ ಎರಡು ತೋಡಿದ ಮುಖಗಳಿದ್ದೂ, ಮಧ್ಯಭಾಗದಲ್ಲಿ ಮರಸಂಕುಚಿತವಾಗಿರುತ್ತದೆ. ಎರಡು ಮುಖಗಳಿಗೆ ತೆಳುವಾದ ಚರ್ಮದ ಮುಚ್ಚಳಿಕೆ ಇದೆ. ನೂಲಿನ ದಪ್ಪದಾರದಿಂದ ಬಿಗಿಯಲ್ಪಟ್ಟಿರುತ್ತದೆ. ಮಧ್ಯದ ಸಂಕುಚಿತ ಭಾಗದಲ್ಲಿ ಮುಚ್ಚಳಿಕೆಯನ್ನು ಬಿಗಿಹಿಡಿದಿರುವ ದಾರಗಳೆಲ್ಲಾ ಸೇರುವಂತೆ ಅವುಗಳ ಸುತ್ತಲೂ ಮತ್ತೊಂದು ದಪ್ಪದಾರವು ಸುತ್ತಿಬಂದು ಅವುಗಳನ್ನು ಬಿಗಿಹಿಡಿದಿರುತ್ತದೆ. ಇದನ್ನು ಎಳೆದರೆ ಶಬ್ದದ ತೀವ್ರತೆಯು ಹೆಚ್ಚುತ್ತದೆ. ಈ ಸೊಂಟಭಾಗದ ಪಟ್ಟಿಯಿಂದ ಹಿಡಿದು ಬಲ ಮುಖವನ್ನು ಬೆರಳುಗಳಿಂದ ನುಡಿಸಿ, ಪಟ್ಟಿಯನ್ನು ಅದುಮಿ, ಬಿಟ್ಟು, ನುಡಿಸಿದಾಗ ವಾದ್ಯದ ನಾದಲ್ಲಿ ಘೋಯ್ ಶಬ್ದ ಬರುತ್ತದೆ. ಇದನ್ನು ದಕ್ಷಿಣ ದೇಶದಲ್ಲಿ ಹಳ್ಳಿಯ ದೇವಸ್ಥಾನಗಳಲ್ಲಿ ಮತ್ತು ಮಾರಮ್ಮನ ಗುಡಿಯಲ್ಲಿ ನುಡಿಸುವ ರೂಢಿಯಿದೆ. ಈ ವಾದ್ಯಕ್ಕೆ ತಮಿಳಿನಲ್ಲಿ ಇಡ್ಡೆ ಸುರುಂಗುಪರ್ರೈ ಎಂದು ಹೆಸರು.

**ಉಪಪತಿ** — ಭರತ ಮುನಿಯು ಹೇಳಿರುವ ನಾಯಕರಲ್ಲಿರುವ ಭೇದಗಳು ನಾಲ್ಕು ಮತ್ತು ವಿಭೇದಗಳು ಹದಿನಾಲ್ಕು. ಈ ಎಲ್ಲಾ ನಾಯಕರಲ್ಲಿ ಮೂರು ಭೇದಗಳಿವೆ. ಅವುಗಳಲ್ಲಿ ಒಂದು ವಿಧ ಉಪಪತಿ. ಹೀಗೆಂದರೆ ಆಚಾರವನ್ನು ಮೀರುವವನು, ಕುವಿಚಾರಿ, ವ್ಯಾಮೋಹಿತ, ಮತ್ತು ಭೋಗಸದ್ವಶನಾದವನು.

**ಉಪವರ್ಣ** — ನಾಟ್ಯಾದಿ ಪ್ರಯೋಗಗಳಲ್ಲಿ ಬಣ್ಣ ಬಣ್ಣದ ಕೆಲಸ ಅಥವಾ ಅಂಗರಚನವು ಮುಖ್ಯವಾದುದು. ಇದು ಮೂರು ವಿಧ. ಉಪವರ್ಣವೆಂದರೆ ಮೂರುನಾಲ್ಕು ರೀತಿಯ ಬಣ್ಣಗಳಿಂದ ಅಥವಾ ಬಿಳಿ, ಕೆಂಪು, ಹಳದಿ–ಕೆಂಪು, ನೀಲ ಮೊದಲಾದುವುಗಳನ್ನು ವಿವಿಧಾಂಶಗಳಿಂದ ಅಂಗವರ್ತನವನ್ನಾಗಿಸುವುದು ಸಹಜವಾದ ರೂಪವನ್ನು ವ್ಯತ್ಯಸ್ತಗೊಳಿಸಿ ತಮಗೆ ಬೇಕಾದಂತೆ ವ್ಯಕ್ತಿಗತವಾದ ಆಕಾರವನ್ನು ಪರಿವರ್ತಿಸುವ ಕಲೆ.

**ಉಪೇಂದ್ರಮತಿ** - ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ದ ಮ ರಿ ಗ ರಿ ಸ

**ಉಪೇಂದ್ರ ವಜ್ರ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ಮ ಪ ಗ ರಿ ಸ

**ಉಮಯಾಳ್ಪುರಂ ಎಸ್. ರಾಜಗೋಪಾಲ ಅಯ್ಯರ್**—ಇವರು ಉಮಯಾಳ್ಪುರಂ ಕೃಷ್ಣ ಭಾಗವತರು ಮತ್ತು ಸುಂದರಭಾಗವತರು ಮಹಾವೈದ್ಯನಾಥ ಅಯ್ಯರ್‌ರವರ ಶಿಷ್ಯರಾಗಿದ್ದರು. ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದವರು. ಇವರು ೧೮೯೩ರಲ್ಲಿ ಜನಿಸಿದರು. ಇವರ ತಂದೆ ಉಮಯಾಳ್ಪುರಂ ಸ್ವಾಮಿನಾಥ ಅಯ್ಯರ್ ರವರು. ಇವರು ಪ್ರಸಿದ್ಧ ಪಿಟೀಲು ವಿದ್ವಾಂಸರಾಗಿದ್ದರು. ೨೦೦೦ ರಾಗಗಳಿಗೆ ಆರೋಹಣ ಮತ್ತು ಅವರೋಹಣಗಳನ್ನು ಗೊತ್ತುಮಾಡಿ ಒಂದು ಗ್ರಂಥವನ್ನು ರಚಿಸಿದರು.

**ಉಮಯಾಳ್ಪುರಂ ಕೋದಂಡರಾಮ ಅಯ್ಯರ್**—ಇವರು ತಮಿಳು ನಾಡಿನ ತಂಜಾವೂರು ಜಿಲ್ಲೆಯ ಉಮಯಾಳ್ಪುರದಲ್ಲಿ ೧೮೯೮ರಲ್ಲಿ ಜನಿಸಿದರು. ಇವರ ತಂದೆ ಘಟಂ ನಾರಾಯಣ ಅಯ್ಯರ್. ಕೋದಂಡರಾಮ ಅಯ್ಯರ್‌ರವರು ತಮ್ಮ ತಂದೆಯವರಲ್ಲಿ ೧೫ನೆಯ ವಯಸ್ಸಿನಲ್ಲಿ ಮೃದಂಗವಾದನವನ್ನೂ, ವೈದ್ಯನಾಥ ಅಯ್ಯರ್‌ರವರಲ್ಲಿ ಸಂಗೀತವನ್ನೂ ಕಲಿತು ವಿದ್ವಾಂಸರಾದರು. ಹಿಂದಿನ ಪೀಳಿಗೆಯ ಎಲ್ಲಾ ಪ್ರಸಿದ್ಧ ವಿದ್ವಾಂಸರಿಗೆ ಪಕ್ಕವಾದ್ಯವನ್ನು ನುಡಿಸಿ ಪ್ರಸಿದ್ಧರಾದವರು.

**ಉಮಾಭರಣ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ಮ ರಿ ಗ ಮ ರಿ ಸ

ಉಪಾಂಗರಾಗ. ಆರೋಹಣವು ಕ್ರಮ ಸಂಪೂರ್ಣ. ಅವರೋಹಣವು ವಕ್ರಷಾಡವ. ಧೈವತವು ವರ್ಜ್ಯ. ಗಾಂಧಾರವು ವಕ್ರ. ಮಧ್ಯಮ ನಿಷಾದಗಳು ಪರಸ್ಪರ ವಾದಿ ಸಂವಾದಿಗಳು. ಋಷಭ, ಮಧ್ಯಮ ಮತ್ತು ನಿಷಾದವು ಜೀವ ಮತ್ತು ನ್ಯಾಸ ಸ್ವರ ಗಳು. ಎಲ್ಲಾ ವೇಳೆಗಳಲ್ಲೂ ಹಾಡಬಹುದಾದ ರಾಗ. ಹಾಸ್ಯ, ರೋಷ, ಭಾವ ಗಳನ್ನು ವ್ಯಕ್ತಗೊಳಿಸಲು ಸೂಕ್ತವಾದ ರಾಗ. ತ್ಯಾಗರಾಜರ ನಿಜಮಾರ್ಗಮುಲನು ಎಂಬ ರಚನೆಯು ಈ ರಾಗದ ಒಂದು ಪ್ರಸಿದ್ಧ ಕೃತಿ.

**ಉಮಾದೇವಿ**—ಹೊಯ್ಸಳ ಚಕ್ರವರ್ತಿ ಇಮ್ಮಡಿ ವೀರಬಲ್ಲಾಳನ (೧೧೭೩–೧೨೨೦) ರಾಣಿ. ಇವಳು ಗೀತ, ವಾದ್ಯ, ನೃತ್ಯಚತುರೆಯಾಗಿದ್ದಳೆಂದು ಅರಸೀಕೆರೆ ಬಳಿ ಸಿಕ್ಕಿರುವ ಶಾಸನ ಒಂದು ತಿಳಿಸುತ್ತದೆ.

**ಉಮಯಾಳ್ಪುರಂ ಕೃಷ್ಣಭಾಗವತರು**—ಇವರು ತ್ಯಾಗರಾಜರ ಒಬ್ಬ ಪ್ರಮುಖ ಶಿಷ್ಯರು. ತಮ್ಮ ೧೦ನೆಯ ವಯಸ್ಸಿನಲ್ಲಿ ಸಹೋದರ ಸುಂದರ ಭಾಗವತ

ರೊಡನೆ ತ್ಯಾಗರಾಜರಲ್ಲಿಗೆ ಹೋಗಿ ಅವರ ಶಿಷ್ಯರಾಗಿ ಅನೇಕ ಕೃತಿಗಳನ್ನು ಅವರಿಂದ ನೇರವಾಗಿ ಕಲಿತರು. ಉಮಯಾಳ್ಪುರಂ ಪಾರಾಂತರವು ಇವರಿಂದ ಬಂದಿದೆ. ಕೃಷ್ಣಭಾಗವತರು ಸ್ವರಬತ್ ವಾದ್ಯವನ್ನು ನುಡಿಸುವುದರಲ್ಲಿ ಪ್ರವೀಣರಾಗಿದ್ದರು.

**ಉರಪಾರ್ಶ್ವ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಅಲ ಪಲ್ಲವ ಹಸ್ತವು ಎದೆಯಿಂದ ಪಾರ್ಶ್ವಕ್ಕೂ, ಅದೇ ಕಾಲದಲ್ಲಿ ಅರಾಳವು ಪಾರ್ಶ್ವದಿಂದ ಎದೆಯವರೆಗೂ ಬಂದಲ್ಲಿ ಅದು ಉರಪಾರ್ಶ್ವಮಂಡಲ.

**ಉರುಗವಾಣಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ಉಲ್ಬಣ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಹಸ್ತಗಳನ್ನು ಮೇಲಕ್ಕೆತ್ತಿ ಅಂಸಗಳ ಮೇಲೆ ಬೆರಳನ್ನಾಡಿಸುವ ಕ್ರಿಯೆ.

**ಊ**—ಮಧುಸೂದನ, ಕಾಮರಾಜ, ಮಹೇಶ, ಭೈರವ, ಸರಸ್ವತೀ, ವಿಲಾಸಿನೀ, ವಿಘ್ನಕರ್ತಾ, ಲಕ್ಷ್ಮಣ ಮುಂತಾದ ಅರ್ಥಗಳಿವೆ.

**ಊತ್ತುಕ್ಕಾಡ್ ವೆಂಕಟಸುಬ್ಬಯ್ಯರ್** ಸುಮಾರು ೩೦೦ ವರ್ಷಗಳ ಹಿಂದೆ ತಮಿಳುನಾಡಿನ ತಂಜಾವೂರು ಜಿಲ್ಲೆಯ ಪಾಪನಾಶಂ ತಾಲ್ಲೂಕಿನ ಊತ್ತುಕ್ಕಾಡ್ ಎಂಬ ಗ್ರಾಮದಲ್ಲಿ ವೆಂಕಟಸುಬ್ಬಯ್ಯರ್ ಜನಿಸಿದರು. ಇವರ ವಿಷಯವು ನಿರ್ದಿಷ್ಟವಾಗಿ ಗೊತ್ತಿಲ್ಲವಾದರೂ, ಇವರ ಜೀವನದಲ್ಲಿ ನಡೆದ ಕೆಲವು ಮುಖ್ಯ ಘಟನೆಗಳು ಮಾತ್ರ ನಮಗೆ ತಿಳಿದು ಬಂದಿವೆ.

ಊತ್ತುಕ್ಕಾಡ್ ಗ್ರಾಮದಲ್ಲಿ ರಾಮಚಂದ್ರವಾದೂಲರ್ ಎಂಬುವರ ಏಕಮಾತ್ರ ಪುತ್ರನ ಕಿರಿಯ ಪತ್ನಿ ಕಮಲಾಂಬಾಳ್ ಎಂಬುವರಲ್ಲಿ ಕೃಷ್ಣನ್ ಮತ್ತು ವೆಂಕಟ ಸುಬ್ಬಯ್ಯರ್ ಎಂಬ ಇಬ್ಬರು ಮಕ್ಕಳು ಜನಿಸಿದರು. ಇವರಿಬ್ಬರೂ ಚಿಕ್ಕಂದಿನಿಂದ ಆ ಊರಿನ ದೇವರಾದ ಕಾಳಿಂಗನರ್ತನ ಕೃಷ್ಣನ ಭಕ್ತರಾಗಿದ್ದರು. ಹಿರಿಯನಾದ ಕೃಷ್ಣನ್ ಚಿಕ್ಕಂದಿನಿಂದಲೂ ಪ್ರತಿಭಾವಂತರಾಗಿದ್ದರು. ತಮ್ಮ ಸಂಗೀತದ ಪ್ರಭಾವ ದಿಂದ ತಾತವಾದೂಲರ್ ಕಳೆದುಕೊಂಡಿದ್ದ ನವಗ್ರಾಮಗಳನ್ನು ಆಗಿನ ಮಹಾರಾಜ ನಿಂದ ವಾಪಸ್ಸು ಪಡೆದರು. ತಮ್ಮನಾದ ವೆಂಕಟಸುಬ್ಬಯ್ಯರಿಗೆ ಸಂಗೀತಾಭ್ಯಾಸ ಮಾಡಿಸಿದರು. ಉಪನಯನವಾದ ದಿನದಿಂದಲೇ ಇವರ ಕೃಷ್ಣಭಕ್ತಿ ಬೆಳೆಯುತ್ತಾ ಬಂದಿತು. ಇವರು ಮಾಡಿದ ಕೆಲಸಗಳೆಲ್ಲವೂ ಕೃಷ್ಣಮಯವಾಗಿ ಮಾರ್ಪಾಡಾಗುತ್ತಾ ಹೋದುವು. ಅಣ್ಣನ ವಿವಾಹವಾದ ನಂತರ ವೆಂಕಟಸುಬ್ಬಯ್ಯರ್ ಅವರ ಅನುಮತಿ ಯನ್ನು ಪಡೆದು ನೀಡಾಮಂಗಲಂನಲ್ಲೂ, ನಂತರ ಮನ್ನಾರ್ ಗುಡಿಯಲ್ಲಿ ನೆಲೆಸಿದರು. ಶ್ರೀಕೃಷ್ಣನಲ್ಲಿ ಮನಸ್ಸನ್ನು ನಿಲ್ಲಿಸಿ, ಇಹಜೀವನದ ಕಡೆಗೆ ಸ್ವಲ್ಪವೂ ಗಮನಕೊಡದೆ

ಜೀವನ ನಡೆಸುತ್ತಿದ್ದರು. ಹೀಗಿದ್ದಾಗ ಅಲ್ಲಿ ಒಂದು ಸಲ ಸಂಗೀತಕ್ಕೆ ಸಂಬಂಧಿಸಿದ ರುದ್ರಲಭ್ಧಂ ಎಂಬ ಮಾರ್ಗದ ಬಗ್ಗೆ ಒಂದು ಉಪನ್ಯಾಸವನ್ನು ಕೇಳಿ ಅದರಿಂದ ಪ್ರಭಾವಿತರಾದರು.

ಈ ಮಾರ್ಗದ ಬಗ್ಗೆ ಉಪದೇಶ ಪಡೆಯಲು ಮೊದಲು ಕೃಷ್ಣಯೋಗಿ ಎಂಬು ವರನ್ನು ಆಶ್ರಯಿಸಿದರು. ಆದರೆ ಯೋಗಿಯು ಉಪದೇಶ ಮಾಡಲು ನಿರಾಕರಿಸಿದರು. ಇದರಿಂದ ದುಃಖಿತರಾಗಿ, ಹಿರಿಯರ ಆದೇಶದಂತೆ ತಮ್ಮ ಕುಲದೈವವಾದ ಶ್ರೀಕೃಷ್ಣ ನನ್ನೇ ಆಶ್ರಯಿಸಲು ನಿರ್ಧರಿಸಿ ಕೃಷ್ಣನ ಸನ್ನಿಧಿಗೆ ಹೋಗಿ ಭಗವನ್ನಾಮ ಸಂಕೀರ್ತನೆ ಮಾಡುತ್ತಾ ಕುಳಿತರು. ಒಂದು ದಿನ ಸಂಕೀರ್ತನೆ ಮಾಡುತ್ತಾ ಕುಳಿತಿರುವಾಗ ಎಲ್ಲಿಂದಲೋ ಒಂದು ಚಿಕ್ಕಮಗುವು ಬಂದು ಇವರ ತೊಡೆಯ ಮೇಲೆ ಕುಳಿತು ತಂಬೂರಿಯ ತಂತಿಯನ್ನು ಹಿಡಿಯಿತು. ಇದರಿಂದ ಅಯ್ಯರ್‌ರವರಿಗೆ ಸಮಾಧಿ ಯಿಂದ ಎಚ್ಚರವಾಯಿತು. ಮಗುವನ್ನು ತೊಡೆಯಿಂದ ಇಳಿಸಿ ಪುನಃ ಧ್ಯಾನಸ್ಥರಾಗಿ ಕಣ್ಮುಚ್ಚಿ ಗಾನಸುಧೆಯಲ್ಲಿ ಮುಳುಗಿರುವಾಗ ಪುನಃ ಆ ಮಗುವು ತೊಡೆಯೇರಿ ಕುಳಿತು ತಂತಿ ಹಿಡಿಯಿತು. ಪುನಃ ಎಚ್ಚೆತ್ತು ಆ ಮಗುವನ್ನು ಕಳುಹಿಸಿದರು. ಆ ಮಗುವು ಸ್ವಲ್ಪದೂರ ಹೋಗಿ ನಕ್ಕಿತು. ನಗುವನ್ನು ಕೇಳಿದ ಅಯ್ಯರ್ ಹಿಂತಿರುಗಿ ನೋಡಿದಾಗ ಅವರಿಗೆ ಬಾಲಕೃಷ್ಣನ ದಿವ್ಯಮಂಗಳ ಮೂರ್ತಿ ಕಂಡಿತು. ಕೂಡಲೇ ಎದ್ದು ಓಡಿಹೋಗಿ ಆ ಮಗುವನ್ನು ಆನಂದದಿಂದ ಬಾಚಿ ತಬ್ಬಿದರು. ಆದರೆ ಆ ಮಗುವು ಅದೃಶ್ಯವಾಯಿತು ಇದು ಅಯ್ಯರ್‌ರವರ ಪ್ರಥಮ ದಿವ್ಯಾನುಭವ. ಇವರು ರಚಿಸಿರುವ ಇದ್ ಒರುದಿರು ಮಾನೋ ಮತ್ತು ಕಾಯಾಂಪೂ ಎಂಬ ಎರಡು ಕೃತಿ ಗಳು ಈ ಘಟನೆಯನ್ನು ಸೂಚಿಸುತ್ತವೆ.

ಇವರು ಶ್ರೀಕೃಷ್ಣಗಾನಂ, ರುದ್ರಶಬ್ದಂ, ನಂದನಗೀತಂ, ಕಾಳಿಂಗನರ್ತನ ಪ್ರಭಾವಂ, ರಾಜಗೋಪಾಲ ನಿತ್ಯೋತ್ಸವಂ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಶ್ರೀಕೃಷ್ಣಗಾನಂ ಎಂಬ ಗ್ರಂಥವು ಭಾಗವತದ ಭಾಷಾಂತರವೂ ಮತ್ತು ವ್ಯಾಖ್ಯಾನವೂ ಆಗಿದೆ. ಇದರ ಒಂದು ಭಾಗವು ಮಾತ್ರ ಕೀರ್ತನೆಗಳ ರೂಪದಲ್ಲಿದೆ. ರಾಸಸಪ್ತಂ ಎಂಬ ಇವರ ಕೃತಿಗಳು ಅನೇಕವಾಗಿವೆ. ತಾಯೇ ಯಶೋದಾ ಎಂಬ ತೋಡೀರಾಗದ ಕೃತಿಯನ್ನು ಆಗಿನ ಪ್ರಸಿದ್ಧ ನಾಗಸ್ವರ ವಿದ್ವಾಂಸರಾಗಿದ್ದ ಪೆರಿಯ ರುದ್ರಪತಿ ಪಿಳ್ಳೆ ಎಂಬುವರು ಅಯ್ಯರ್‌ರವರು ಹಾಡುತ್ತಿದ್ದಾಗ ಮರೆಯಲ್ಲಿ ನಿಂತು ಕೇಳಿ ಬರೆದು ಕೊಂಡು ಪ್ರಚಾರಕ್ಕೆ ತಂದರು. ಅಯ್ಯರ್‌ರವರ ಅಣ್ಣನ ಮಗ ಇವರು ಹಾಡುತ್ತಿದ್ದ ಕೃತಿಗಳನ್ನು ಬರೆದುಕೊಂಡರು. ಇವುಗಳನ್ನು ಆ ವಂಶದವರಾದ ಮದ್ರಾಸಿನ ಸಂಗೀತ ವಿದ್ವಾನ್ ಜಿ. ಕೃಷ್ಣಮೂರ್ತಿ ಭಾಗವತರ್ ಎಂಬುವರು ಈಚೆಗೆ ಸ್ವಲ್ಪಮಟ್ಟಿಗೆ ಪ್ರಚಾರಕ್ಕೆ ತಂದರು.

ವೆಂಕಟಸುಬ್ಬಯ್ಯರ್‌ರವರು ಶ್ರೀ ಕೃಷ್ಣನ ಸಾಕ್ಷಾತ್ಕಾರ ಪಡೆದರು. ಇವರ ಕೃತಿಗಳು ಭಕ್ತಿರಸ ಪ್ರಧಾನವಾಗಿವೆ. ಇವುಗಳ ಸಾಹಿತ್ಯ ಮತ್ತು ಪದಜೋಡಣೆ

ಬಹುರಮಣೀಯವಾಗಿದೆ. ಇವರು ಸಂಸ್ಕೃತ ಮತ್ತು ತಮಿಳಿನಲ್ಲಿ ವಿಪುಲವಾಗಿ ಕೃತಿಗಳನ್ನು ರಚಿಸಿರುವರು. ಇವರ ಸಂಸ್ಕೃತದ ಕೃತಿಗಳು ಜಯದೇವ ಮತ್ತು ನಾರಾಯಣ ತೀರ್ಥರ ಕೃತಿಗಳಂತಿವೆ. ಇವುಗಳಲ್ಲಿ ಸ್ವರಗುಚ್ಛಗಳು, ಸಾಹಿತ್ಯ ಮತ್ತು ಜತಿಗಳು ಒಂದಾದ ನಂತರ ಇನ್ನೊಂದು ಇವೆ. ಇವು ನೃತ್ಯ ಮತ್ತು ಭಜನೆಗೆ ಯೋಗ್ಯವಾದುವು. ಸಾಹಿತ್ಯವು ಲಲಿತ ಮತ್ತು ಮನೋಹರವಾಗಿದ್ದು ರಾಧಾಕೃಷ್ಣರ ಪ್ರೇಮದ ವಿಷಯವನ್ನೊಳಗೊಂಡಿದೆ. ಇವರ ಕೆಲವು ದೀರ್ಘವಾದ ಕೃತಿಗಳು ತ್ಯಾಗರಾಜರ ಪಂಚರತ್ನ ಕೃತಿಗಳಂತಿವೆ. ಇವರ ಕೃತಿಗಳ ಪ್ರಭಾವವನ್ನು ಸಂಗೀತದ ತ್ರಿರತ್ನರ ರಚನೆಗಳಲ್ಲಿ ಕಾಣಬಹುದು. ಭಾವ, ರಾಗ, ತಾಳ, ಸಾಹಿತ್ಯ, ಶಬ್ದ ಮತ್ತು ಸ್ವರಗಳ ಸುಮಧುರ ಸಮ್ಮಿಳನವು ಇವರ ರಚನೆಗಳಲ್ಲಿ ಕಂಡು ಬರುತ್ತದೆ. ಇವರು ಸಂಸ್ಕೃತ ಮತ್ತು ತಮಿಳಿನಲ್ಲಿ ಅನೇಕ ಪದಗಳನ್ನು ರಚಿಸಿದ್ದಾರೆ. ಇವರ ಕೃತಿಗಳು ಸುಮಾರು ಸಾವಿರ ಇವೆ. ಕಾಳಿಂಗನ ಹೆಡೆಯ ಮೇಲೆ ನಾಟ್ಯವಾಡುತ್ತಿರುವ ಶ್ರೀಕೃಷ್ಣನನ್ನು ಕುರಿತು ರಚಿಸಿರುವ ಕೃತಿಯೊಂದರಲ್ಲಿ ಐದು ವಿವಿಧ ತಾಳಗಳ ಪ್ರಯೋಗವಿದೆ ಮತ್ತು ಊತ್ತುಕ್ಕಾಡಿನ ಶ್ರೀಕೃಷ್ಣ ವಿಗ್ರಹದ ವಿಶಿಷ್ಟ ಲಕ್ಷಣದ ಸೂಚನೆಯಿದೆ. ರೀತಿಗೌಳ ರಾಗದ ಬೃಂದಾವನ ನಿಲಯೇ, ಚಾರುಕೇಶಿರಾಗದ 'ರಸಿಕ ಮಹಾತ್ಮಾ', ಭೈರವಿ ರಾಗದ 'ಲೋಲಗೋಪ ಬಾಲ', ಅಠಾಣ ರಾಗದ 'ಮಧುರ ಮಧುರ', ಗೌರೀ ಮನೋಹರಿ ರಾಗದ 'ವಿಶತಿ ವಿಶತಿ ಕೃಷ್ಣಃ', ನಾಟಕುರಂಜಿ ರಾಗದ ಪಲ್ವದಿಪುಂ ಮುಖಂ, ಶುದ್ಧಸಾವೇರಿ ರಾಗದ ನೀಮನಿಲೈಕಂಡು, ಝಂಝೂಟಿ ರಾಗದ ಮುದ್ದು ಕೃಷ್ಣಮೋ ಮುದಂ, ಪುನ್ನಾಗವರಾಳಿ ರಾಗದ 'ನಿಲೈವನಂ', ಜಯಂತಶ್ರೀ ರಾಗದ 'ನೀರದ ಶ್ಯಾಮ', ಹುಸೇನಿ ರಾಗದ 'ರಾಧಾಕೃಷ್ಣ ಚಿಂತಯೇ' ಎಂಬುವು ಇವರ ಪ್ರಸಿದ್ಧವಾದ ಕೃತಿಗಳು. ವೆಂಕಟಸುಬ್ಬಯ್ಯರ್‌ರವರ ಕೃತಿಗಳು ಪುರಂದರದಾಸರು ಹಾಗೂ ಕ್ಷೇತ್ರಜ್ಞರ ಕಾಲಕ್ಕೂ, ಸಂಗೀತದ ತ್ರಿರತ್ನರ ಕಾಲಕ್ಕೂ ಮಧ್ಯೆಯಿರುವ ಸೇತುವೆಯಂತಿವೆ ಎನ್ನಬಹುದು.

**ಊರ್ಧ್ವಮಂಡಲ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಹಸ್ತಗಳು ಮೇಲ್ಮುಖವಾಗುವಂತೆ ಎದುರಾಗಿ ತಿರುಗಿಸಿದರೆ ಅದು ಊರ್ಧ್ವಮಂಡಲ ಮುದ್ರೆ.

**ಊರ್ಮಿಕ**—ಈ ರಾಗವು ೫೭ನೆಯ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ನಿ ಸ

ಅ : ಸ ನಿ ಪ ಮ ಗ ರಿ ಸ

ಮುತ್ತಯ್ಯ ಭಾಗವತರು ರಚಿಸಿರುವ 'ಕಾಳರಾತ್ರಿ ಸ್ವರೂಪಿಣಿ' ಎಂಬುದು ಈ ರಾಗದ ಒಂದು ಪ್ರಸಿದ್ಧ ಕೃತಿ.

**ಋು**—ರುದ್ರ, ದೇವಮಾತಾ, ತ್ರಿವಿಕ್ರಮ, ರೋಹಿಣೀ ಗಣನಾಯಕ, ಭಾವ ಭೂತಿ ಮುಂತಾದ ಅರ್ಥಗಳಿವೆ.

**ಋುಷಭಪ್ರಿಯ**—ಈ ರಾಗವು ೧೧ನೆಯ ರುದ್ರಚಕ್ರದ ಎರಡನೆಯ ಮೇಳ ಕರ್ತ ರಾಗ. ೬೨ನೆಯ ಮೇಳಕರ್ತ ರಾಗ ವೆಂಕಟಮುಖಿಯ ಪ್ರಕಾರ ಈ ರಾಗಕ್ಕೆ ರತಿಪ್ರಿಯಾ ಎಂದು ಹೆಸರು.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಷಡ್ಜ, ಚತುಶ್ರುತಿ ರಿಷಭ, ಅಂತರಗಾಂಧಾರ, ಪ್ರತಿಮಧ್ಯಮ, ಪಂಚಮ, ಶುದ್ಧ ಧೈವತ ಮತ್ತು ಕೈಶಿಕಿ ನಿಷಾದಗಳು ಈ ರಾಗದ ಸ್ವರಸ್ಥಾನಗಳು ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ. ಗಾಂಧಾರ, ಮಧ್ಯಮ, ನಿಷಾದಗಳು ಈ ರಾಗದ ಜೀವ ಮತ್ತು ಛಾಯಾಸ್ವರಗಳು. ಕರುಣಾ ಮತ್ತು ಭಕ್ತಿರಸಕ್ಕೆ ಯೋಗ್ಯವಾದ ರಾಗ. ಎಲ್ಲಾ ವೇಳೆಗಳಲ್ಲೂ ಹಾಡಬಹುದಾದ ರಾಗ. ಸ ದ ಪ ಮ ಪ ದ ಸ, ಸ ರಿ ಗ ಸ, ದ ಪ ರಿ ಗ ಸ, ಪಾ ಮ ರಿ ಗ ಸ, ಗಳು ವಿಶೇಷ ಸಂಚಾರಗಳು ಕೆಲವು ಪ್ರಸಿದ್ಧ ಕೃತಿಗಳು·

| | | |
|---|---|---|
| ಮಹಿಮದಕ್ಕಿಂಚು | — | ತ್ಯಾಗರಾಜರು |
| ಮಾರರತಿಪ್ರಿಯಂ | — | ಮುತ್ತುಸ್ವಾಮಿ ದೀಕ್ಷಿತರು |
| ಮಹಾತ್ಮಲೇ | — | ವಾಸುದೇವಾಚಾರ್ಯ |

**ಋುಷಭವಾಹಿನಿ**—ಈ ರಾಗವು ೪೨ನೆಯ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ಪ ದ ಮ ಗ ರಿ ಸ

**ಋುಷಿಪ್ರಿಯ**—ಈ ರಾಗವು ೨೧ನೆಯ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಋುಷ್ಯಕೇತುಪ್ರಿಯ**—ಈ ರಾಗವು ೨೭ನೆಯ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಎ** ಶ್ರದ್ಧಾ, ಭಯ, ಜ್ಞಾನಧೀರ, ವಹ್ನಿ, ವಿಷ್ಣು, ಭಗವತೀ, ಮೋಹಿನೀ, ಪದ್ಮನಾಭ, ಅನುಕಂಪ ಮುಂತಾದ ಅರ್ಥಗಳಿವೆ.

**ಎಕ್ಕಾಲ**—ಇದು ನೆಟ್ಟಗಿರುವ ಕೊಂಬು. ಹಿತ್ತಾಳೆ ಅಥವಾ ತಾಮ್ರದ ನಾಲ್ಕು ಕೊಳವೆಗಳನ್ನು ಒಂದಕ್ಕೊಂದು ಅಳವಡಿಸಿದೆ. ಇದನ್ನು ಊದಿ

ದಾಗ ಜೋರಾದ ಶಬ್ದ ಉಂಟಾಗುತ್ತದೆ. ಇದನ್ನು ದೇವರ ಉತ್ಸವಗಳಲ್ಲಿ ಊದುತ್ತಾರೆ.

**ಎಕ್ಕಂ**—ಇದೊಂದು ಏಕತಂತೀವಾದ್ಯ.

**ಎಕ್ಕಮದ್ದಲೆ**—ಇದೊಂದು ಬಗೆಯ ಚರ್ಮವಾದ್ಯ.

**ಎಕ್ಕಂಡವಾದ್ಯ**—ದಂಡಿ ಮತ್ತು ಕೊಡ ಇವೆರಡನ್ನೂ ಒಂದೇ ಮರದ ತುಂಡಿನಿಂದ ಕೊರೆದು ಮಾಡಲ್ಪಟ್ಟ ವೀಣೆ. ಬೇರೆ ಬೇರೆ ಭಾಗಗಳನ್ನು ಸೇರಿಸಿ ಮಾಡಿರುವ ವೀಣೆಗಿಂತ ಇದು ಭಾರವಾಗಿರುತ್ತದೆ. ದಂಡಿಯು ಕ್ರಮವಾಗಿ ಕತ್ತಿನ ಭಾಗದ ಕಡೆಗೆ ಸ್ವಲ್ಪ ಸಣ್ಣದಾಗುತ್ತದೆ. ಇಂತಹ ವೀಣೆಗಳನ್ನು ಹೆಚ್ಚಾಗಿ ಮೈಸೂರಿನಲ್ಲಿ ತಯಾರಿಸುತ್ತಾರೆ.

**ಎಕ್ಕುಜಾರು** – ಆರೋಹಣಗತಿಯಲ್ಲಿರುವ ಒಂದು ಬಗೆಯ ಗಮಕ. ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಬೇಗ ಜಾರುವುದು ಅಥವಾ ಏರುವುದು. ಸಾರಂಗ ರಾಗದ 'ನೀವಾಡನೇಗಾನ' ಎಂಬ ಕೃತಿಯ 'ದೇವಾದಿದೇವ, ಭೂದೇವವರ' ಎಂಬ ಅನುಪಲ್ಲವಿ ಇಂತಹ ಗಮಕಕ್ಕೆ ಒಂದು ನಿದರ್ಶನ. ಇದು ಏರುಜಾರು ಗಮಕ.

**ಎಂಕಿಪಾಟಲು**—ತೆಲುಗು ಜಾನಪದ ಗೀತೆಗಳು.

**ಎಕ್ಕಾಲರಂಧ್ರ**—ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಶಂಬಗರಾಮನಲ್ಲೂರ್ ಎಂಬಲ್ಲಿ ಒಂದು ದೇವಾಲಯವಿದೆ ಅಲ್ಲಿಯ ಶಿಲಾಸ್ತಂಭ ಒಂದರಲ್ಲಿ ಕೊಂಬನ್ನು ಕೊರೆದಿದ್ದಾರೆ. ಇದರ ಊದುವ ರಂಧ್ರಕ್ಕೆ ಎಕ್ಕಾಲರಂಧ್ರವೆಂದು ಹೆಸರು. ಇದರ ಮೂಲಕ ಊದಿದಾಗ ಎಕ್ಕಾಲದಂತಹ ಶಬ್ದ ಉಂಟಾಗುತ್ತದೆ. ಈ ರಂಧ್ರವು ಸುಮಾರು ೩/೪ ಅಂಗುಲ ಅಗಲವಿದೆ. ಕೊಂಬಿನ ಕೆಳಭಾಗವು ೧ ಅಂಗುಲ ಅಗಲವಿದೆ. ಊದಿದಾಗ ಉಂಟಾಗುವ ಶಬ್ದವು ಶಂಖಧ್ವನಿಯಂತಿರುವ ಇದಕ್ಕೆ ಶಂಖರಂಧ್ರವೆಂದು ಹೆಸರು. ಕೊಂಬು ಒಂದು ಅಡಿ ಉದ್ದವಿದ್ದು ಪಶ್ಚಿಮದಿಂದ ಪೂರ್ವಕ್ಕೆ ಇದೆ ಕೊಂಬಿನ ಒಳಭಾಗಕ್ಕೆ ಹೊಳಪನ್ನು ಕೊಡಲಾಗಿದೆ. ಒಳಗಡೆ ಎರಡು ಬಳೆಗಳಂತಿರುವ ಭಾಗಗಳಿರುವುದರಿಂದ ಒಂದೊಂದು ಕಡೆ ಊದಿದಾಗ ಒಂದೊಂದು ಸ್ವರವು ಉಂಟಾಗುತ್ತದೆ. ಒಂದು ಕಾಕಲಿ ನಿಷಾದ ಮತ್ತೊಂದು ಅಂತರಗಾಂಧಾರ (ತಾರಸ್ಥಾಯಿ). ಇವುಗಳಿಗೆ ಷಡ್ಜ ಮಧ್ಯಮ ಸಂಬಂಧವಿದೆ ಸಂಗೀತ ಶಿಲ್ಪದಲ್ಲಿ ಇದೊಂದು ಉತ್ತಮ ಸಾಧನೆ.

**ಎನ್ನಪ್ಪಾಡಂ ವೆಂಕಟರಾಮಭಾಗವತರು**—ಇವರು ಕೇರಳದ ಕೊಚ್ಚಿಯಲ್ಲಿ ಪದ್ಮನಾಭ ಅಯ್ಯರ್ ಮತ್ತು ಸೀತಾಲಕ್ಷ್ಮಿ ಎಂಬ ದಂಪತಿಗಳ ಪುತ್ರನಾಗಿ ೧೮೮೦ರಲ್ಲಿ ಜನಿಸಿದರು. ಇವರ ಮನೆತನವು ಸಂಗೀತ ಮತ್ತು ಸಂಸ್ಕೃತ ವಿದ್ವಾಂಸರ ಮನೆತನವಾಗಿತ್ತು. ಪರಮೇಶ್ವರ ಭಾಗವತರ ಶಿಷ್ಯ ಸೂರಾನಿ ಅಯ್ಯಾ ಭಾಗವತರು ಮತ್ತು ತಮ್ಮ ಹಿರಿಯ ಸಹೋದರ ರತ್ನಗಿರೀಶ್ವರ ಭಾಗವತರಲ್ಲಿ ಸಂಗೀತವನ್ನು ಕಲಿತರು ಮತ್ತು ತಮ್ಮ ಅಣ್ಣನವರೊಂದಿಗೆ ಹಾಡುತ್ತಿದ್ದರು. ಇದಲ್ಲದೆ ಹರಿಕಥಾ

ಭಾಗವತರಾಗಿ ಪ್ರಸಿದ್ಧರಾಗಿದ್ದರು. ಕೊಲ್ಲಂಗೋಡ್, ಕೊಚ್ಚಿ, ತಿರುವಾಂಕೂರು ಮತ್ತು ಮೈಸೂರು ರಾಜಾಸ್ಥಾನಗಳು ಮತ್ತು ಸಂಗೀತ ಸಭೆಗಳಿಂದ ಸನ್ಮಾನಿತರಾಗಿ ಬಿರುದುಗಳನ್ನು ಪಡೆದಿದ್ದಾರೆ ಇವರು ಹಲವು ಕೃತಿಗಳನ್ನೂ, ೧೦೮ ರಾಗಗಳ ಒಂದು ರಾಗಮಾಲಿಕೆಯನ್ನೂ ರಚಿಸಿದ್ದಾರೆ.

**ಎಲಿಫೆಂಟಾಗುಹೆಗಳು**—ಇವು ಬೊಂಬಾಯಿನ ಸಮೀಪದಲ್ಲಿವೆ. ಇಲ್ಲಿ ಹಲವು ಸಂಗೀತ ಶಿಲ್ಪಗಳಿವೆ. ಶಂಖವನ್ನು ಹಿಡಿದಿರುವ ಒಬ್ಬ ಗಂಧರ್ವ, ವೀಣೆಯನ್ನು ನುಡಿಸುತ್ತಿರುವ ಒಬ್ಬ ಅಪ್ಸರೆ, ಒಂದು ಕೈಯಲ್ಲಿ ವೀಣೆ, ಮತ್ತೊಂದು ಕೈಯಲ್ಲಿ ಯಾಳ್‌ವಾದ್ಯವಿರುವ ಅಷ್ಟಭುಜ ನಟರಾಜ ಇಲ್ಲಿರುವ ಕೆಲವು ಮುಖ್ಯ ಸಂಗೀತಶಿಲ್ಪಗಳಾಗಿವೆ. ಇವು ಸುಮಾರು ಕ್ರಿ ಶ. ೭ನೆಯ ಶತಮಾನಕ್ಕೆ ಸೇರಿವೆ

**ಎಲಿಸ್, ಅಲೆಕ್ಸ್ ಜೆ.**—ಮ್ಯೂಸಿಕಲ್ ಸ್ಕೇಲ್ಸ್ ಆಫ್ ವೇರಿಯಸ್ ನೇಷನ್ಸ್ ಎಂಬ ಗ್ರಂಥದ ಲೇಖಕ.

**ಎಲ್ಲೋರ ಗುಹೆಗಳು**—ಈ ಗವಿಗಳು ಆಂಧ್ರದ ವಾಯುವ್ಯದ ಮೂಲೆಯಲ್ಲಿ ದೇವಗಿರಿಕೋಟೆಯಿಂದ ಆರು ಮೈಲಿ ದೂರದಲ್ಲಿವೆ. ಇವುಗಳನ್ನು ದೇವಗಿರಿಯ ಸುತ್ತಮುತ್ತಣ ಪ್ರಸ್ಥಭೂಮಿಗೂ ಪಶ್ಚಿಮದ ಕಡೆಯ ನಾಡಿಗೂ ಇರುವ ಘಟ್ಟಗಳಲ್ಲಿ ಕೊರೆದಿದೆ. ಇವುಗಳಲ್ಲಿ ಬೌದ್ಧಮತಕ್ಕೆ ಸೇರಿದುವು. ಹನ್ನೆರಡು ಗವಿಗಳು, ಹದಿನೇಳು ಪೌರಾಣಿಕ ಗವಿಗಳು ಮತ್ತು ಐದು ಜೈನಗವಿಗಳು. ಇವು ಸುಮಾರು ಕ್ರಿ. ಶ. ೪೦೦–೯೦೦ ವರೆಗಿನ ಕಾಲದಲ್ಲಿ ನಿರ್ಮಾಣವಾದುವು. ಈ ಕಾಲದಲ್ಲಿ ಮೊದಲು ಬಾದಾಮಿಯ ಚಾಳುಕ್ಯರೂ. ತರುವಾಯ ಮಾನ್ಯಖೇಡದ ರಾಷ್ಟ್ರಕೂಟರೂ ಆಳುತ್ತಿದ್ದರು. ಈ ಗವಿಗಳಿರುವ ತಾಲ್ಲೂಕಿಗೆ ಈಗಲೂ ಕನ್ನಡ ತಹಸೀಲ್ ಎಂದು ಹೆಸರು. ಇವುಗಳಲ್ಲಿ ದಖ್ಖಿನ ಧಾರ್ಮಿಕ ಚರಿತ್ರೆಯೂ ಕಲೆಯ ಚರಿತ್ರೆಯೂ ಉದಾಹೃತವಾಗಿವೆ. ಇಲ್ಲಿ ಅಷ್ಟಭುಜ ನಟರಾಜ, ಮೃದಂಗವನ್ನು ನುಡಿಸುತ್ತಿರುವ ನಂದಿ, ಜೈನಗವಿಯಲ್ಲಿ ತವಿಲ್ ಮತ್ತು ಬ್ರಹ್ಮತಾಳದ ಶಿಲ್ಪ, ಪಾರ್ಶ್ವನಾಥ ದೇವಾಲಯದಲ್ಲಿ ಎರಡು ತಂತಿಗಳ ವೀಣೆ ಅಥವಾ ನಕುಲ ವೀಣೆ, ಮಹಾವೀರ ದೇವಾಲಯದಲ್ಲಿ ಪ್ರವೇಶ ಭಾಗದಲ್ಲಿ ಎರಡು ಸಂಗೀತ ಸ್ತಂಭಗಳೂ ಇವೆ.

**ಎತ್ತುಗಡೆ ಪಲ್ಲವಿ**—ವರ್ಣದ ಚರಣದ ಹೆಸರು ಇದಕ್ಕೆ ಸೇರಿದಂತೆ ಕಲ್ಪನಾ ಸ್ವರಗಳನ್ನು ಹಾಡಬಹುದು. ಈ ಚರಣದಲ್ಲಿ ಕಲ್ಪಿತ ಸ್ವರಗಳನ್ನು ಸೇರಿಸಿ ರಚಿಸಿರುತ್ತಾರೆ.

**ಎಟ್ಟೆಯಾಪುರಂ**—ಈ ಸ್ಥಳವು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯಲ್ಲಿದೆ. ಇದು ಜಮೀನ್ದಾರರ ಅಧೀನದಲ್ಲಿತ್ತು. ೧೮೦೦ರ ತರುವಾಯ ಒಂದು ಪ್ರಮುಖ ಸಂಗೀತ ಕಲಾಕೇಂದ್ರವಾಗಿತ್ತು. ಮುತ್ತುಸ್ವಾಮಿ ದೀಕ್ಷಿತರು, ಬಾಲಸ್ವಾಮಿ ದೀಕ್ಷಿತರು ಮತ್ತು ಸುಬ್ಬರಾಮ ದೀಕ್ಷಿತರು ಇಲ್ಲಿಯ ಸಂಸ್ಥಾನ ವಿದ್ವಾಂಸರಾಗಿದ್ದರು. ಎಟ್ಟೆಯಾಪುರದ ರಾಜರು ಕಲಾಪ್ರೇಮಿಗಳೂ, ಪೋಷಕರೂ ಆಗಿದ್ದರು. ಕೆಲವರು

ವಾಗ್ಗೇಯಕಾರರಾಗಿದ್ದರು. ಸುಬ್ಬರಾಮ ದೀಕ್ಷಿತರು ಬರೆದ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಉದ್ಗ್ರಂಥವನ್ನು ೧೯೦೪ರಲ್ಲಿ ಎಟ್ಟಿಯಾಪುರಂ ಸಂಸ್ಥಾನವು ಪ್ರಕಟಿಸಿತು. ರಾಷ್ಟ್ರಕವಿ ಸುಬ್ರಹ್ಮಣ್ಯ ಭಾರತಿ ಇಲ್ಲಿ ಜನ್ಮತಾಳಿದರು.

**ಎಡಕ**—ಕೊಡಗು ಸೀಮೆಯ ಒಂದು ಚರ್ಮವಾದ್ಯ. ಇದು ಡಮರು ವಿನಂತಿದೆ. ಇದನ್ನು ಲೋಹದಿಂದ ಮಾಡಿದೆ.

**ಎಡುಪು**—ರಾಗಾಲಾಪನೆ ಅಥವಾ ರಾಗವರ್ಧನಿಯ ಮೊದಲ ಹಂತದ ಹೆಸರು.

**ಎಡುಪ್ಪು**—ತಾಳಾವರ್ತದಲ್ಲಿ ಸಂಗೀತವು ಆರಂಭವಾಗುವ ಜಾಗ ಅಥವಾ ಗ್ರಹ. ಇದರಲ್ಲಿ ಸಮ, ಅತೀತ, ಅನಾಗತ ಎಂಬ ಮೂರು ವಿಧಗಳಿವೆ. ಸಂಗೀತ ಮತ್ತು ತಾಳ ಇವೆರಡೂ ಒಂದೇ ಸಲ ಆರಂಭವಾದರೆ ಅದು ಸಮ. ತಾಳಕ್ಕೆ ಮೊದಲು ಸಂಗೀತವು ಆರಂಭವಾದರೆ ಅದು ಅತೀತ. ತಾಳವು ಪ್ರಾರಂಭವಾದ ನಂತರ ಸಂಗೀತವು ಆರಂಭವಾದರೆ ಅದು ಅನಾಗತ.

**ಎರುಕಾಲರ್ಝಂಪೆ**—ಯಕ್ಷಗಾನಗಳಲ್ಲಿ ಬರುವ ಒಂದು ತಾಳ.

**ಎರುಕಲಕಾಂಭೋಜಿ**—ಈಗ ಯದುಕುಲ ಕಾಂಭೋಜಿ ಎಂದು ಪ್ರಚಲಿತ ವಾಗಿರುವ ರಾಗದ ಹಿಂದಿನ ಹೆಸರು.

**ಎಸಾಂಧೋಳಿ**—ಈ ರಾಗವು ೪೬ನೆಯ ಮೇಳಕರ್ತಷಡ್ವಿಧ ಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಎಸಾರಿ**—ಈ ರಾಗವು ೧೩ನೆಯ ಮೇಳಕರ್ತಗಾಯಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಎಸ್ರಾಜ್**—ಕಮಾನಿನಿಂದ ನುಡಿಯುವ ತಂತೀವಾದ್ಯ. ಬಂಗಾಳದಲ್ಲಿ ಹೆಚ್ಚು ಬಳಕೆಯಲ್ಲಿದೆ. ಇದು ಸಾರಂಗಿಗಿಂತ ಸ್ವಲ್ಪ ಚಿಕ್ಕದು ಬೆರಳಿನಿಂದ ನುಡಿಸುವ ಭಾಗದಲ್ಲಿ ಚಲಿಸಲು ಅನುಕೂಲವಾದ ಮೆಟ್ಟಲುಗಳಿಗೆ ಲೋಹದ ತಂತಿಗಳನ್ನು ಕಟ್ಟಿರುತ್ತಾರೆ ಇವಲ್ಲದೆ ಅನುರಣನೆಯ ತಂತಿಗಳಿರುತ್ತವೆ. ಈ ವಾದ್ಯವನ್ನು ಎಸ್ರಾರ್ ಎನ್ನುವುದುಂಟು.

**ಏ**—ದುರ್ಗಾ, ವಾಣೀ, ಸರಸ್ವತೀ, ದಾಮೋದರ, ಮಹೇಶ್ವರ, ಸ್ಮರಣ, ಆಮಂತ್ರಣ, ಭಯ, ಜ್ಞಾನ, ವಹ್ನಿ, ವಿಷ್ಣು, ಭಗವತಿ, ಮೋಹಿನೀ, ಪದ್ಮನಾಭ, ಅಸೂಯೆ, ಅನುಕಂಪ ಮುಂತಾದ ಅರ್ಥಗಳಿವೆ.

**ಏಕಕಾಲ**—ಇದು ತಾಳಕ್ಕೆ ಸಂಬಂಧಿಸಿದ ಒಂದು ಗಣಿತಾಂಶ. ಇದರಲ್ಲಿ ಪ್ರತಿಯೊಂದು ತಾಳದ ಅಕ್ಷರಕ್ಕೆ ಒಂದು ಕಾಲವೆಂದು ಎಣಿಕೆ ಮಾಡಲಾಗುತ್ತದೆ.

**ಏಕತಾಳ**—ಸಪ್ತತಾಳಗಳಲ್ಲಿ ಕೊನೆಯ ತಾಳ. ಇದರಲ್ಲಿ ಒಂದು ಲಘು ಮಾತ್ರ ಇರುತ್ತದೆ ಅಹೋಬಲನು ಸಂಗೀತ ಪಾರಿಜಾತವೆಂಬ ಗ್ರಂಥದಲ್ಲಿ ಈ ತಾಳವನ್ನು ಲಘುತಾಳವೆಂದು ಹೆಸರಿಸಿದ್ದಾನೆ.

**ಏಕತಂತ್ರಿ**—ಇದು ಒಂದು ತಂತಿ ಇರುವ ವಾದ್ಯ. ತೆಂಗಿನ ಕರಟದಿಂದ ಇದರ ಕೊಡವನ್ನು ಮಾಡಲಾಗಿದೆ. ಇತರ ಭಾಗಗಳನ್ನು ಮರದಿಂದ ಮಾಡಲಾಗಿರುತ್ತದೆ. ಇದು ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಏಕ್‌ತಾರ್**—ಭಿಕ್ಷುಕರು, ಬೈರಾಗಿಗಳು, ತತ್ವಗಾನ ಮಾಡುವವರು, ಲಾವಣಿಯನ್ನು ಹಾಡುವವರು ಶ್ರುತಿಗಾಗಿ ಉಪಯೋಗಿಸುವ ವಾದ್ಯ. ಇದಕ್ಕೆ ಏಕನಾದವೆಂದು ಹೆಸರು. ತೀರ ದುಂಡಾಗಿಲ್ಲದ, ಸುಮಾರು ಚಪ್ಪಟೆಯಾಗಿರುವ, ಬಲಿತು ಒಣಗಿದ ಸೋರೆಕಾಯಿಯ ದುಂಡಾದ ಸುತ್ತುಭಾಗದಲ್ಲಿ ಎದುರೆದುರಾಗಿ ಎರಡು ರಂಧ್ರಗಳನ್ನು ಕೊರೆಯಲಾಗಿದೆ ಇವು ಒಂದಕ್ಕೊಂದು ನೇರವಾಗಿವೆ. ಇವುಗಳ ಮೂಲಕ ತೂರಿ ಬರುವ ಎರಡು ಅಂಗುಲ ವ್ಯಾಸ ಮತ್ತು ನಾಲ್ಕು ಅಡಿ ಉದ್ದವಿರುವ ಬಿದಿರು ಕೋಲನ್ನು ಸೇರಿಸಿರುವರು. ಕೆಳಗಿನ ಭಾಗದಲ್ಲಿ ಕೋಲು ಎರಡು ಅಂಗುಲ ಉಳಿದಿರುತ್ತದೆ. ಮಿಕ್ಕ ಭಾಗವು ಸೋರೆಕಾಯಿಯ ಅಡ್ಡಗಲವನ್ನು ದಾಟಿರುತ್ತದೆ. ಇದರ ಬಿಡಿ ಭಾಗದ ತುದಿಯಲ್ಲಿ ಸುಮಾರು ಮೂರು ಅಂಗುಲದಷ್ಟು ಕೋಲಿನ ಗಾತ್ರದಲ್ಲಿ ತೂರುವಂತೆ ಒಂದು ಬಿರಡೆ ಸೇರಿಸಲ್ಪಟ್ಟಿರುತ್ತದೆ. ಸೋರೆ ಬುರುಡೆಯ ಚಪ್ಪಟೆಯಾದ ಭಾಗದ ಕೇಂದ್ರದಲ್ಲಿ ಒಂದು ಮರದ ತೆಳ್ಳನೆಯ 'ಕುದುರೆ'ಯನ್ನು ಅಳವಡಿಸಲಾಗಿದೆ. ಬುರುಡೆಯ ಕೆಳಗೆ ಇರುವ ಬಿದಿರಿನ ಬಿಡಿ ಭಾಗಕ್ಕೆ ತಂತಿಯನ್ನು ಬಿಗಿಯಲಾಗಿದೆ. ಇದು ಕುದುರೆಯ ಮೇಲೆ ಹಾದು ಬಂದು ಮೇಲ್ಭಾಗದ ತುದಿಯಲ್ಲಿರುವ ಬಿರಡೆಗೆ ಕಟ್ಟಲ್ಪಟ್ಟಿದೆ. ಬಿರಡೆಯನ್ನು ತಿರುಗಿಸಿ ಬೇಕಾದ ಶ್ರುತಿಯನ್ನು ಮಾಡಿಕೊಳ್ಳಬಹುದು. ಕುದುರೆಯ ಮೇಲೆ ಹೋಗಿರುವ ತಂತಿಯ ಕೆಳಗೆ ಒಂದು ಚೂರು ಹತ್ತಿಯದಾರ, ಅಥವಾ ರೇಷ್ಮೆದಾರ ಅಥವಾ ಉಣ್ಣೆಯದಾರವನ್ನು ಸೇರಿಸಿ ಹಿಂದು ಮುಂದು ಜರುಗಿಸುತ್ತಾ ಬಂದರೆ ತಂತಿಯನಾದವು ಪುಷ್ಟವಾಗಿ ಕೇಳಿಬರುತ್ತದೆ. ಇದಕ್ಕೆ ಜೀವಾಳವೆಂದು ಹೆಸರು. ಸೋರೆ ಬುರುಡೆಯ ಕೆಳಭಾಗದಲ್ಲಿ ನಾದವರ್ಧನಕ್ಕಾಗಿ ದೊಡ್ಡ ರಂಧ್ರವನ್ನು ಮಾಡಲಾಗಿದೆ ಉತ್ತರ ಭಾರತದ ಏಕ್‌ತಾರ್‌ನಲ್ಲಿ ಸೋರೆ ಬುರುಡೆಯ ಚಪ್ಪಟೆಯಾದ ಕಡೆಗೆ ಚರ್ಮದ ಮುಚ್ಚಳಿಕೆ ಹಾಕಿ, ಇದರ ಮಧ್ಯದಲ್ಲಿ ಕುದುರೆಯನ್ನಿಟ್ಟು ತಂತಿಯನ್ನು ಕಟ್ಟುತ್ತಾರೆ. ಏಕನಾದವು ಭಾರತದ ಅತ್ಯಂತ ಪ್ರಾಚೀನ ವಾದ್ಯ. ಭಕ್ತರಾದ ತುಕಾರಾಮ್, ತುಳಸೀದಾಸ್, ಕನಕದಾಸರೇ ಮುಂತಾದವರು ಏಕನಾದವನ್ನು ಮಿಾಟಿ ಗೀತೆಗಳನ್ನು ಹಾಡುತ್ತಿದ್ದರು. ಈಗಲೂ ಬಹು ಮಂದಿ ಸಾಧುಗಳು,

ಲಾವಣಿಯವರು, ಮತ್ತು ಭಿಕ್ಷುಕರು ಏಕನಾದವನ್ನು ಉಪಯೋಗಿಸುತ್ತಾರೆ. ತಂತಿಯನ್ನು ಮಧ್ಯದ ಬೆರಳಿನಿಂದ ಮಿಾಟುತ್ತಾರೆ.

**ಏಕಧಾತು ದಿವ್ಯನಾಮ ಕೀರ್ತನ**—ಇವು ಪಲ್ಲವಿ ಮತ್ತು ಚರಣಗಳ ಧಾತುವು ಒಂದೇ ವಿಧವಾಗಿರುವ ದಿವ್ಯನಾಮ ಕೀರ್ತನೆಗಳು. ಇವುಗಳಲ್ಲಿ ಚರಣವನ್ನು ಹಾಡಿದ ನಂತರ ಪಲ್ಲವಿಯನ್ನು ಪುನಃ ಹಾಡುವುದಿಲ್ಲ. ತ್ಯಾಗರಾಜರ ಯದುಕುಲ ಕಾಂಭೋಜಿ ರಾಗದ ' ಶ್ರೀರಾಮ ಜಯರಾಮ ' ಎಂಬ ಕೀರ್ತನೆಯು ಏಕಧಾತು ಕೀರ್ತನೆಗೆ ಉದಾಹರಣೆ. ದ್ವಿಧಾತು ದಿವ್ಯನಾಮ ಕೀರ್ತನೆಗಳಲ್ಲಿ ಚರಣದ ಧಾತುವು ಪಲ್ಲವಿಯ ಧಾತುವಿಗಿಂತ ಬೇರೆಯಾಗಿರುತ್ತದೆ ಮತ್ತು ಚರಣದ ಕೊನೆಯಲ್ಲಿ ಪಲ್ಲವಿಯನ್ನು ಪುನಃ ಹಾಡಲಾಗುವುದು ತ್ಯಾಗರಾಜರ ಶಹಾನ ರಾಗದ ' ಶ್ರೀರಾಮ ಶ್ರೀರಾಮ ' ಎಂಬ ಕೀರ್ತನೆಯು ದ್ವಿಧಾತು ಕೀರ್ತನೆಗೆ ಉದಾಹರಣೆ.

**ಏಕನಾಥ** (ಕ್ರಿ.ಶ. ೧೫೪೮)—ಇವನು ಮಹಾರಾಷ್ಟ್ರದ ಒಬ್ಬ ಪ್ರಸಿದ್ಧ ಭಕ್ತ. ಇವನ ಹೆಸರು ಪಠಣಕರ. ಇವನ ಗುರು ಜನಾರ್ದನಸ್ವಾಮಿ. ಗುರುವಿನಲ್ಲಿ ಜ್ಞಾನೇಶ್ವರೀ, ಅಮೃತಾನುಭವ ಮೊದಲಾದ ಗ್ರಂಥಗಳ ಅಧ್ಯಯನ ಮಾಡಿ, ದೇವಘಡದ ಬೆಟ್ಟದಲ್ಲಿ ಆರು ವರ್ಷಗಳ ಕಾಲ ತಪಸ್ಸು ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದನು. ಇವನಿಗೆ ದೀನ ದಲಿತರಲ್ಲಿ ಅಪಾರ ಕರುಣೆಯಿತ್ತು. ಜನರ ಭಾಷೆಯಲ್ಲಿ ವೇದಾಂತ ರಹಸ್ಯವನ್ನೂ, ಜ್ಞಾನಸಾರವನ್ನೂ, ಭಾಗವತ ಧರ್ಮವನ್ನೂ ಪ್ರಚಾರ ಮಾಡಿದನು. ಓವಿ ಎಂಬ ಮರಾಠಿ ಜಾನಪದ ಗೀತೆಯಲ್ಲಿ ೨೦೦೦೦ ಓವಿಗಳನ್ನೊಳಗೊಂಡ ಭಾಗವತದ ೧೧ನೆಯ ಸ್ಕಂದದ ವಿಸ್ತೃತ ಪದ್ಯ ವಿವರಣೆಯನ್ನು ರಚಿಸಿದನು. ರುಕ್ಮಿಣೀ ಸ್ವಯಂವರವೆಂಬ ೧೮ ಅಧ್ಯಾಯಗಳ ಪೌರಾಣಿಕ ಕಾವ್ಯವು ಇವನ ಮತ್ತೊಂದು ರಚನೆ. ಓವಿ ಮತ್ತು ಅಭಂಗಗಳ ಮೇಲೆ ಇವನ ಪ್ರಭುತ್ವವು ಅದ್ವಿತೀಯ. ಇದಲ್ಲದೆ ಚಿಕ್ಕ ಪೌರಾಣಿಕ ಆಖ್ಯಾನಗಳನ್ನೂ ಇತರ ಹಲವು ರಚನೆಗಳನ್ನೂ ರಚಿಸಿದ್ದಾನೆ. ಮರಾಠೀ ಭಕ್ತಿಸಾಹಿತ್ಯಕ್ಕೆ ಇವನ ಕಾಣಿಕೆ ಅಮೋಘವಾದುದು.

**ಏಕೋಜಿ**—ತಂಜಾವೂರಿನ ಮರಾಠ ದೊರೆ. ಷಹಾಜಿ ಮಹಾರಾಜನ ತಂದೆ. ಪಲ್ಲಕ್ಕಿ ಸೇವಾ ಪ್ರಬಂಧಂ ಎಂಬ ತೆಲುಗು ಗೇಯ ನೃತ್ಯ ನಾಟಕವನ್ನು ರಚಿಸಿದನು.

**ಏಕೋತ್ತರ ಶತತಾಳಗಳು**—ಪಾರ್ಶ್ವದೇವನ ' ಸಂಗೀತ ಸಮಯಸಾರ ', ನಾರದನ ' ಸಂಗೀತ ಮಕರಂದ ' ಮುಂತಾದ ಹಿಂದಿನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಪುರಾತನವಾದ ೧೦೧ ತಾಳಗಳನ್ನು ಹೇಳಿದೆ. ಇವುಗಳಲ್ಲಿ ಅನೇಕ ತಾಳಗಳು ನಂತರದ ೧೦೮ ತಾಳಗಳಲ್ಲಿ ಸೇರಿಹೋಗಿವೆ. ಪಾಲ್ಕುರಿಕೆ ಸೋಮನಾಥನು ತನ್ನ ಗ್ರಂಥವಾದ ಪಂಡಿತಾರಾಧ್ಯಚರಿತಮು ಎಂಬುದರ ಪರ್ವತ ಪ್ರಕರಣದಲ್ಲಿ ಹೇಳಿರುವ ೧೦೮ ತಾಳಗಳಲ್ಲಿ ಹಲವು ಹೊಸ ತಾಳಗಳನ್ನು ಹೇಳಿದ್ದಾನೆ. ಅವುಗಳಲ್ಲಿ ಕೆಲವು ಯಾವುದೆಂದರೆ :

ಮೂಚಿತ, ಸತ್ರಚ್ಛದ, ಎಗ, ಎಡ, ಹಡ, ಬಂಧಕರಣ, ಬಾದಕರಣ, ಸರ ಕರಣ, ಆಸ್ಥಾನ ಮಂಡಪ, ಕುಟಿಲ ಘೂರ್ಣಿತ, ಗೋಷ್ಠಿ, ಜರ್ಣ, ಕಚ್ಛನ, ಆಣ, ಆದಿಮಾತೃಕ, ತರಷ್ಮಣ ಪುತ್ರಿ, ಮಣಿಮಿಶ್ರ ಕಂಕಾಳ, ಕಾವ್ಯಕಂಕಾಳ ಫಲ, ಚಕ್ರ ವಾಕ, ಆರ್ಯ, ಸರಳ, ವಿರಳ, ಉಮಾಮಂದಿರ, ಬಂಧಮಟ್ಟಿ, ಖಂಡಿತತರ, ಅವ ಖಂಡ, ಖಂಡಿತ ಚಂಪಕ, ಅವಿಘೂರ್ಣಿತ, ಉತ್ತಮಮೇರು, ತಂಬುಲಿಯಾನ, ಅರ್ಧ ಕಲಿಕ, ಪಂಚಬ್ರಹ್ಮ, ಪರಿತಲ, ಹರಿನ, ಮಾಯಾ ಖಣ, ಖಂಜರ, ಚತುರಶ್ರ ಖಂಜರ, ಕೃಷ್ಣ ಖಂಜರ, ಅಸಮಾನ ಖಂಜರ.

**ಏಕನಿಕ**— ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಏಕಪಾದ**—ಭರತನಾಟ್ಯದ ಪಾದವಿನ್ಯಾಸಗಳು ಆರು ವಿಧಗಳುಂಟು. ಇವು ಗಳಲ್ಲಿ ಏಕಪಾದವು ಒಂದು ಬಗೆ. ಒಂದು ಕಾಲಿನ ಮೇಲೆ ನಿಂತು ಇನ್ನೊಂದು ಕಾಲಿನ ಪಾದವನ್ನು ಆದರ ಮೊಣಕಾಲಿನ ಮೇಲಿಟ್ಟುಕೊಳ್ಳುವುದು ಏಕಪಾದ ವಿನ್ಯಾಸ. ಇದು ನಿಶ್ಚಲ, ತಪಸ್ಸು ಮಾಡುವುದನ್ನು ತೋರಲು ವಿನಿಯೋಗ ವಾಗುವುದು.

**ಏಕಮುದ್ರಕಾರ**—ಒಂದೇ ಒಂದು ಬಗೆಯ ಅಂಕಿತವನ್ನು ಬಳಸಿರುವ ವಾಗ್ಗೇಯಕಾರ. ತ್ಯಾಗರಾಜ, ಜಯದೇವ, ಮತ್ತು ಸ್ವಾಮಿನಾರಾಯಣ ತೀರ್ಥ ಮುಂತಾದವರು ಏಕಮುದ್ರಕಾರರು ತ್ಯಾಗರಾಜರ ಕೃತಿಗಳಲ್ಲಿ ತ್ಯಾಗರಾಜನುತ, ತ್ಯಾಗರಾಜಾರ್ಚಿತ, ತ್ಯಾಗರಾಜ ಸನ್ನುತ ಎಂಬ ಪ್ರತ್ಯಯಗಳಲ್ಲಿ ವ್ಯತ್ಯಾಸವಿರುವ ಮುದ್ರೆಗಳಿವೆ.

**ಏಕಮುದ್ರ ಪ್ರಬಂಧ**— ದ್ವಾದಶಮುದ್ರೆಗಳಲ್ಲಿ ಒಂದನ್ನು ಮಾತ್ರ ಅಂಕಿತ ವಾಗಿರುವ ಸಂಗೀತ ರಚನೆ. ತ್ಯಾಗರಾಜರ 'ಮೋಕ್ಷಮುಗಲದಾ' ಎಂಬ ಸಾರಮತಿ ರಾಗದ ಕೃತಿಯು ಇಂತಹ ರಚನೆಗೆ ಉದಾಹರಣೆ

**ಏಕಾಂತವಾದ್ಯ**— ವೀಣೆಯಂತಹ ವಾದ್ಯವನ್ನು ಕೇಳಿ ಆನಂದ ಪಡಬೇಕಾದರೆ ಅದನ್ನು ಏಕಾಂತದಲ್ಲಿ ಅಥವಾ ಒಂದು ಸಣ್ಣ ಕೊಠಡಿಯಲ್ಲಿ ಕೇಳಬೇಕು.

**ಏಕಡಾಪದ** —ಕಥಾಕಾಲಕ್ಷೇಪಗಳಲ್ಲಿ ಪ್ರಾರಂಭದಲ್ಲಿ ಪಂಚಪದಿ ಎಂಬ ಐದು ಹಾಡುಗಳನ್ನು ಹಾಡಿ ನಂತರ, 'ಗೋವಿಂದರಾಮಹರೇ' ಎಂಬ ಒಂದು ಚಿಕ್ಕ ಭಕ್ತಿ ಗೀತೆಯನ್ನು ಹಾಡುವ ಪದ್ಧತಿ ರೂಢಿಯಲ್ಲಿದೆ. ಇದು ಭೈರವೀರಾಗದಲ್ಲಿದೆ. ಈ ಗೀತೆಗೆ ಏಕಡಾಪದವೆಂದು ಹೆಸರು.

**ಏಕಮುಖವಾದ್ಯ**—ಇದೊಂದು ಬಗೆಯ ಡಮರು. ಒಂದು ಮುಖವಿರುವ ಚರ್ಮವಾದ್ಯ.

**ಏಕಸ್ವರ ವಕ್ರರಾಗ** - ಆರೋಹಣ ಮತ್ತು ಅವರೋಹಣದಲ್ಲಿ ಒಂದೊಂದು ವಕ್ರಸ್ವರವಿರುವ ರಾಗ.

**ಏಕಸ್ವರ ವರ್ಜರಾಗ**—ಒಂದು ಸ್ವರವು ವರ್ಜವಿರುವ ರಾಗ ಅಥವಾ ಷಾಡವ ರಾಗ.

**ಏಕವೀರ**—ಇದೊಂದು ಬಗೆಯ ಕೊಳಲು. ಮುಖರಂಧ್ರಕ್ಕೂ ಮೊದಲ ನೆಯ ಬೆರಳಿನಿಂದ ನುಡಿಸುವ ರಂಧ್ರಕ್ಕೂ ಒಂದು ಅಂಗುಲ ದೂರವಿರುತ್ತದೆ. ೧ ಮತ್ತು ೭ನೆಯ ರಂಧ್ರಗಳನ್ನು ಮುಚ್ಚಿ ಊದಿದಾಗ ತಾರಸ್ಥಾಯಿ ಷಡ್ಜವು ಕೇಳಿ ಬರುತ್ತದೆ.

**ಏಕಶ್ರುತಿಧೈವತ**—ಧೈವತ ಸ್ವರ. ಸಾವೇರಿರಾಗದಲ್ಲಿ ಬರುವಂತಹ ಧೈವತ. ಇದು ೨೨ ಶ್ರುತಿಗಳಲ್ಲಿ ಪಂಚಮಕ್ಕೆ ಮೊದಲು ಮತ್ತು ಶುದ್ಧ ಧೈವತದ ಅಥವಾ ಕೋಮಲ ಧೈವತದ ನಂತರ ಬರುತ್ತದೆ.

**ಏಕಶ್ರುತಿ ಅಂತರ**—ಇದು ಒಂದು ಶ್ರುತಿಯ ಅಂತರ. ಇದು ಶ್ರುತಿಯ ತೀವ್ರತೆಯನ್ನು ಅವಲಂಬಿಸಿದೆ. ಇದಕ್ಕೆ ಮೂರು ಮೌಲ್ಯಗಳಿವೆ. ಪಂಚಮ ಶ್ರುತಿ ೮೧/೮೦, ನ್ಯೂನ ಶ್ರುತಿ ೨೫/೨೪, ಪೂರ್ಣ ಶ್ರುತಿ ೨೫೬/೨೪೩. ಪೂರ್ಣ ಶ್ರುತಿ ಮತ್ತು ಪ್ರಮಾಣ ಶ್ರುತಿಗಳು ಏಕಶ್ರುತಿಯ ಅತ್ಯಂತ ಹೆಚ್ಚಿನ ಮತ್ತು ಕಡಿಮೆಯ ಶ್ರುತ್ಯಂತರಗಳಾಗಿವೆ ಎರಡು ಶ್ರುತಿಗಳಿಗೆ ಶ್ರುತ್ಯಂತರವಿದೆ ಎಂದರೆ ಈ ಮೂರು ಮೌಲ್ಯಗಳಲ್ಲಿ ಯಾವುದಾದರೂ ಆಗಬಹುದು. ಆ ಸ್ವರಗಳ ಸ್ಥಾನಗಳಿಂದ ಎಂತಹ ಏಕಶ್ರುತಿ ಅಂತರವಿದೆ ಎಂಬುದನ್ನು ತಿಳಿಯಬಹುದು.

**ಏಕಶ್ರುತಿಋಷಭ**— ಗೌಳರಾಗದ ರಿಷಭಸ್ವರ ಇದು ಷಡ್ಜಕ್ಕೆ ಮೊದಲು ಮತ್ತು ಕೋಮಲ ರಿಷಭ ಅಥವಾ ಶುದ್ಧರಿಷಭದ ನಂತರ ೨೨ ಶ್ರುತಿಗಳಲ್ಲಿ ಬರುತ್ತದೆ.

**ಏಕಶೃಂಗಿ**—ಈ ರಾಗವು ೩೯ನೆಯ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಗ ರಿ ಪ ನಿ ದ ನಿ ಪ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಏಕರಾಗ ಮೇಳವೀಣಾ**—ಮೆಟ್ಟಿಲುಗಳನ್ನು ಹಿಂದಕ್ಕೂ ಮುಂದಕ್ಕೂ ತಳ್ಳಬಹುದಾದ ವೀಣೆ. ಪ್ರತಿ ಮೇಳಕ್ಕೆ ಒಂದು ಅಥವಾ ಎರಡು ಮೆಟ್ಟಿಲುಗಳನ್ನು ಸರಿಯಾಗಿ ತಳ್ಳಿ ರಾಗವನ್ನು ನುಡಿಸಬಹುದು. ಒಂದು ಸಲಕ್ಕೆ ಒಂದು ಮೇಳಕ್ಕೆ ಸಂಬಂಧಿಸಿದ ಒಂದು ರಾಗವನ್ನು ಮಾತ್ರ ನುಡಿಸಬಹುದು. ಅಚಲವಾದ ಮೆಟ್ಟಿಲುಗಳಿರುವ ಸರ್ವರಾಗಮೇಳ ವೀಣೆಯಲ್ಲಿ ಎಲ್ಲಾ ರಾಗಗಳನ್ನು ನುಡಿಸಬಹುದು. ಏಕರಾಗ ಮೇಳವೀಣೆಯಲ್ಲಿ ಮೆಟ್ಟಿಲುಗಳು ಸರ್ವರಾಗ ಮೇಳ ವೀಣೆಗಿಂತ ಕಡಿಮೆಯಿರುತ್ತವೆ. ರಾಮಾಮಾತ್ಯನು ಸ್ವರಮೇಳ ಕಲಾನಿಧಿ ಎಂಬ ಗ್ರಂಥದಲ್ಲಿ ಇವೆರಡು ಬಗೆಯ ವೀಣೆಗಳನ್ನು ವರ್ಣಿಸಿದ್ದಾನೆ.

**ಏಕಗ್ರಣಿ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ಏಕಾಕ್ಷರಿ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ರಿ ಗ ಮ ಸ

**ಏಮನಿ ಶಂಕರಶಾಸ್ತ್ರಿ** (ಜ. ೧೯೨೨)—ಏಮನಿ ಶಂಕರಶಾಸ್ತ್ರಿಗಳು ನಮ್ಮ ನಾಡಿನ ಅತ್ಯಂತ ಪ್ರಮುಖ ವೈಣಿಕರು. ಇವರು ಆಂಧ್ರಪ್ರದೇಶದ ಗೋದಾವರಿ ಜಿಲ್ಲೆಯ ದ್ರಾಕ್ಷಾರಾಮ ಎಂಬ ಗ್ರಾಮದವರು. ವೈಣಿಕರ ಮನೆತನಕ್ಕೆ ಸೇರಿದವರು. ಇವರ ತಾತ ಏಮನಿ ಸುಬ್ಬರಾಯಶಾಸ್ತ್ರಿ ಪ್ರಸಿದ್ಧ ವೈಣಿಕರಾಗಿದ್ದರು. ಇವರ ತಂದೆ ವೈಣಿಕ ಭೂಷಣ, ವೀಣಾಚಾರ್ಯ ಅಚ್ಯುತರಾಮಶಾಸ್ತ್ರಿಗಳು. ಶಂಕರಶಾಸ್ತ್ರಿಗಳು ಅಚ್ಯುತರಾಮಶಾಸ್ತ್ರಿಗಳ ಏಕಮಾತ್ರ ಪುತ್ರ. ಮೂರನೆಯ ವಯಸ್ಸಿನಲ್ಲೇ ಇವರ ಲಯಜ್ಞಾನದ ಪ್ರತಿಭೆ ಬೆಳಕಿಗೆ ಬಂದಿತು. ಅಕ್ಕ ಸತ್ಯವತಿಯಮ್ಮನ ಪ್ರಯತ್ನದಿಂದ ಕಾಕಿನಾಡಕ್ಕೆ ಹೋಗಿ ಕಾಲೇಜಿಗೆ ಸೇರಿ ವಿದ್ಯಾಭ್ಯಾಸ ಮಾಡಿ ಬಿ. ಎ. ಪದವೀಧರರಾದರು. ಇಲ್ಲೇ ಇವರ ಹೆಸರು ಶಂಕರ ಸೂರ್ಯಮಾಣಿಕ್ಯಾಲಪಿರಾವ್ ಎಂದಿದ್ದದ್ದು ಏಮನಿ ಶಂಕರಶಾಸ್ತ್ರಿ ಎಂದು ಬದಲಾಯಿಸಲ್ಪಟ್ಟಿತು. ಚೆನ್ನಾಗಿ ಸಾಧಕ ಮಾಡಿ ವೈಣಿಕರಾಗಿ ಸುವರ್ಣಪದಕವನ್ನು ಪಡೆದರು. ತಮ್ಮ ೧೭ನೆಯ ವಯಸ್ಸಿನಲ್ಲಿ ೧೯೪೦ರಲ್ಲಿ ತಿರುಚಿಯ ಆಕಾಶವಾಣಿ ಕೇಂದ್ರದಿಂದ ಪ್ರಥಮ ವೀಣಾ ಕಚೇರಿಯನ್ನು ಮಾಡಿದರು. ಅಲ್ಲಿಂದ ಮುಂದೆ ಖ್ಯಾತರಾದರು. ಕಾಕಿನಾಡದ ಕೊಮ್ಮಿರೆಡ್ಡಿ ಸೂರ್ಯನಾರಾಯಣ ಮೂರ್ತಿನಾಯ್ಡು ಅವರ ಪರಿಚಯವಾಗಿ ಲಘು ಮತ್ತು ಶಾಸ್ತ್ರೀಯ ಹಿಂದೂಸ್ಥಾನೀ ಮತ್ತು ಪಾಶ್ಚಾತ್ಯ ಸಂಗೀತಗಳ ಪರಿಚಯ ಮಾಡಿಕೊಂಡರು. ಮದ್ರಾಸಿನ ವಿಧಾನಸಭೆಯ ಅಧ್ಯಕ್ಷರಾಗಿದ್ದ ಬುಲುಸು ಸಾಂಬಮೂರ್ತಿಯವರ ಸಲಹೆಯಂತೆ ಮದ್ರಾಸಿಗೆ ಹೋಗಿ ನೆಲೆಸಿದರು. ಅಲ್ಲಿ ಎಸ್. ಎಸ್. ವಾಸನ್‌ರವರ ಜೆಮಿನಿ ಸ್ಟುಡಿಯೋವಿನ ವಾದ್ಯಗೋಷ್ಠಿಯ ನಿರ್ದೇಶಕರಾದರು. ೧೯೬೧ರಲ್ಲಿ ಕೇಂದ್ರ ಆಕಾಶವಾಣಿ ನಿಲಯದ ರಾಷ್ಟ್ರೀಯ ವಾದ್ಯವೃಂದದ ರಚನಕಾರ ಮತ್ತು ಕಂಡಕ್ಟರ್ ಆಗಿ ತರುವಾಯ ಆಕಾಶವಾಣಿಯ ಚೀಫ್ ಪ್ರೊಡ್ಯೂಸರ್ ಆದರು. ಈ ಕಾಲದಲ್ಲಿ ಆರು ವೀಣೆಗಳಿಂದ ಕೂಡಿದ ಆದರ್ಶ ಶಿಖರಾರೋಹಣಂ ಎಂಬ ಸಂಗೀತರೂಪಕವನ್ನು ರಚಿಸಿದರು. ೧೯೫೪ರಲ್ಲಿ ರವಿಶಂಕರ್ ಜೊತೆಯಲ್ಲಿ ಜುಗಲ್‌ಬಂದಿ ಕಾರ್ಯಕ್ರಮವನ್ನೂ, ಬೊಂಬಾಯಿನಲ್ಲಿ ಹಲೀಂಜಾಫರ್‌ಖಾನರ ಜೊತೆಯಲ್ಲಿ ಒಂದು ಜುಗಲ್‌ಬಂದಿ ಕಾರ್ಯಕ್ರಮವನ್ನೂ ನಡೆಸಿಕೊಟ್ಟರು. ಗಾಂಧೀಜಿಯವರನ್ನು ಕುರಿತು

‘ ಸೌವ್ಯಪುರುಷ ’, ನೆಹರೂರವರನ್ನು ಕುರಿತು ‘ ಭಾರತ ಜ್ಯೋತಿ ’ ಎಂಬ ವಾದ್ಯ ಮೇಳವನ್ನು ನಡೆಸಿಕೊಟ್ಟರು. ಭ್ರಮರ ವಿನ್ಯಾಸ ಮತ್ತು ಇನ್ನೂ ಹಲವು ನೂತನ ಪ್ರಯೋಗಗಳನ್ನು ನಡೆಸಿಕೊಟ್ಟಿದ್ದಾರೆ. ಪಾಶ್ಚಾತ್ಯ ದೇಶಗಳು, ಅಮೆರಿಕಾ ಮುಂತಾದ ದೇಶಗಳಲ್ಲಿ ಹಲವಾರು ಕಚೇರಿಗಳನ್ನು ಮಾಡಿ ಬಹುಪ್ರಖ್ಯಾತರಾಗಿದ್ದಾರೆ

ಏಮ-ನಿಯವರು ಸಂಪ್ರದಾಯದ ಚೌಕಟ್ಟಿನಲ್ಲಿ ಆಧುನಿಕತೆ ಮತ್ತು ನವೀನತೆಯನ್ನು ಅಳವಡಿಸಿ ನುಡಿಸಬಲ್ಲ ಅದ್ಭುತ ಕಲಾವಿದರು ಇವರ ವಾದನದಲ್ಲಿ ಒಂದು ದಿವ್ಯವಾದ ಸಹಜ ಸೌಂದರ್ಯ, ಇಂಪು, ತಂಪು, ಸೊಗಸು, ಪಾಂಡಿತ್ಯ, ರಾಗ-ರಸ ಭಾವ, ಲಯಶುದ್ಧತೆ ಎಲ್ಲವೂ ಇವೆ. ವೀಣೆಯಲ್ಲಿ ಎಂತಹ ಸಂಗೀತವನ್ನಾದರೂ ನುಡಿಸಬಲ್ಲರು. ಇವರ ವಾದನವೆಂದರೆ ಅದೊಂದು ಮುತ್ತಿನ ಚಪ್ಪರ, ನಾದಸೌಧ. ಇವರು ಅಕ್ಷರಶಃ ವೈಣಿಕ ಶಿಖಾಮಣಿ. ಇವರಿಗೆ ಸಂದಿರುವ ಬಿರುದುಗಳಲ್ಲಿ ಚತುರ್ದಂಡಿ ಪಂಡಿತ, ಮಹಾಮಹೋಪಾಧ್ಯಾಯ, ವೈಣಿಕ ಶಿಖಾಮಣಿ ಎಂಬುವು ಮುಖ್ಯವಾದುವು. ಇವರ ಸಹೋದರಿ ವಿ. ಸರಸ್ವತಿ, ಮಗಳು ಏಮನಿಕಲ್ಯಾಣಿ ಮತ್ತು ಚಿಟ್ಟಿಬಾಬು ಇವರ ಪ್ರಮುಖ ಶಿಷ್ಯರು.

**ಓ–ಓ ;** ಓ—ಸದ್ಯೋಜಾತ, ವಾಸುದೇವ, ಗಾಯತ್ರೀ, ಲಕ್ಷ್ಮೀ, ವಾಣೀ, ಕೈಲಾಸ, ದಿಗಂಬರ, ಸ್ಮರಣೆ, ಅನುಕಂಪ ಎಂಬ ನಾನಾರ್ಥಗಳಿವೆ.

**ಒರಿಸ್ಸ ದೇಶದ ನೃತ್ಯಪದ್ಧತಿ**—ಒರಿಸ್ಸ ದೇಶದಲ್ಲಿ ನೃತ್ಯ ಪದ್ಧತಿಯು ಬಹಳ ಹಿಂದಿನ ಕಾಲದಿಂದ ಬೆಳೆದು ಬಂದಿದೆ ಆವಂತಿ, ದಾಕ್ಷಿಣಾತ್ಯ, ಪಾಂಚಾಲೀ, ಓಢ್ರಮಾಗಧೀ ಎಂಬ ನಾಲ್ಕು ನಾಟ್ಯ ರೀತಿಗಳನ್ನು ಭರತಮುನಿಯು ಹೇಳಿದ್ದಾನೆ. ಶೈವತಂತ್ರದ ಪ್ರಕಾರ ನೃತ್ಯಕಲೆಯು ರಾಜರ ವಿದ್ಯಾಭ್ಯಾಸದ ಅವಿಭಾಜ್ಯ ಅಂಗ. ಕೇಸರಿವಂಶ ಮತ್ತು ಚೋಡಗಂಗ ದೇವನ ವಂಶದ ದೊರೆಗಳು ದೇವಾಲಯಗಳಲ್ಲಿ ಹಲವಾರು ನಾಟ್ಯಮಂದಿರಗಳನ್ನು ಕಟ್ಟಿಸಿದರು. ಇವರು ನಾಟ್ಯಕಲಾ ಪ್ರೇಮಿಗಳೂ, ಪೋಷಕರೂ ಆಗಿದ್ದರು. ಪುರಿಯ ಜಗನ್ನಾಥ ದೇವಾಲಯದಲ್ಲಿ ಇಂದಿಗೂ ರಂಗಪೂಜೆಯ ಅಂಗವಾಗಿ ಶುದ್ಧವಾದ ನಾಟ್ಯಸಂಪ್ರದಾಯವು ಉಳಿದು ಬಂದಿದೆ ಒರಿಸ್ಸದ ಶಿಲ್ಪ ಕಲೆಯಲ್ಲಿ ನೃತ್ಯಕ್ಕೆ ಸಂಬಂಧಿಸಿದ ಹಲವು ಸುಂದರ ಶಿಲ್ಪಗಳಿವೆ. ೧೬ನೆಯ ಶತಮಾನದಲ್ಲಿ ಪ್ರತಾಪರುದ್ರದೇವನ ಮಂತ್ರಿಯಾಗಿದ್ದ ರಾಯ್ ರಮಾನಂದನು ಸ್ವತಃ ನರ್ತಕನಾಗಿದ್ದು ಹಲವು ದೇವದಾಸಿಯರಿಗೆ ನಾಟ್ಯಾಚಾರ್ಯನಾಗಿದ್ದನು. ಈತನು ಒರಿಸ್ಸ ದೇಶದ ನೃತ್ತಕ್ಕೆ ಅಭಿನಯವನ್ನು ಸೇರಿಸಿ ಅದನ್ನು ನೃತ್ಯವನ್ನಾಗಿ ಮಾರ್ಪಡಿಸಿದನೆಂದು ಪ್ರತೀತಿ. ೧೩ನೆಯ ಶತಮಾನದಲ್ಲಿ ಕೋನಾರ್ಕದ ದೇವಾಲಯವನ್ನು ಕಟ್ಟಿಸಿದ ನರಸಿಂಹದೇವನ ಮಗಳು ಚಂದ್ರಾದೇವಿ ಒಬ್ಬ ಪ್ರಸಿದ್ಧ ನರ್ತಕಿಯಾಗಿದ್ದಳು. ಗಜಪತಿ ಕಪಿಲೇಂದ್ರನು ಸಂಗೀತ ಮತ್ತು ನೃತ್ಯಕಲೆಗಳ ಉದಾರ ಪೋಷಕನಾಗಿದ್ದುದಲ್ಲದೆ, ಪರಶುರಾಮ ವಿಜಯವೆಂಬ ನೃತ್ಯ ನಾಟಕವನ್ನು ಬರೆದು, ಅದನ್ನು ಪುರಿಯ ಜಗನ್ನಾಥ ದೇವಾಲಯದಲ್ಲಿ ಅನೂಚಾನ

ವಾಗಿ ಅಭಿನಯಿಸಿಕೊಂಡು ಬರುವ ಏರ್ಪಾಡು ಮಾಡಿದನು. ೧೬ನೆಯ ಶತಮಾನ ದಲ್ಲಿ ವೈಷ್ಣವ ಸಂತರು ರಾಧಾಕೃಷ್ಣ ಪ್ರೇಮುವನ್ನು ಅಮರಗೊಳಿಸಿ ರಚಿಸಿದ ಹಾಡು ಗಳಿಗೆ ಲಾಸ್ಯ-ತಾಂಡವ ಸಂಪ್ರದಾಯಗಳನ್ನು ಅಳವಡಿಸಿ ನಟರು ಬೆಳೆಸಿದರು. ಈ ರಾಜ್ಯದ ನೃತ್ಯ ಕಲೆಯು ಶೈವ, ವೈಷ್ಣವ ಮತ್ತು ಬೌದ್ಧಮತಗಳ ಪ್ರಭಾವದಿಂದ ಬೆಳೆಯಿತು. ಚೈತನ್ಯ ಪಂಥದ ರಾಧಾಕೃಷ್ಣ ಪ್ರೇಮವಿಷಯವುಳ್ಳ ಅಭಿನಯಪೂರ್ಣ ವಾದ ಲಾಸ್ಯ ಪ್ರಕಾರಗಳು ನೃತ್ಯಕಲೆಯನ್ನು ಬೆಳೆಸಿದುವು. ಹಾಗೆಯೇ ಶೈವ ಮತ್ತು ಬೌದ್ಧ ಮತದಲ್ಲಿ ತಂತ್ರಶಾಸ್ತ್ರದ ಪ್ರಭಾವದಿಂದ ನೃತ್ತ ಸಂಪ್ರದಾಯವು ಬೆಳೆಯಿತು. ಇದಲ್ಲದೆ ಜಯದೇವನ ' ಗೀತ ಗೋವಿಂದ 'ದ ನೃತ್ಯ ಅಚ್ಚಳಿಯದ ಪ್ರಭಾವ ಬೀರಿತು ಇಲ್ಲಿಯ ನೃತ್ಯವು ತನ್ನದೇ ಆದ ಕೆಲವು ಹಸ್ತ ಮುದ್ರೆಗಳು, ಭಂಗಿಗಳು, ಸ್ಥಾನಕಗಳು, ಭ್ರಮರಿಗಳು ಮತ್ತು ಚಾಲನಿಕಗಳನ್ನು ರೂಪಿಸಿಕೊಂಡು ವಿಶಿಷ್ಟತೆಯನ್ನು ಪಡೆದಿದೆ.

ಒರಿಸ್ಸದ ಸಂಪ್ರದಾಯದಲ್ಲಿ ಮೊದಲು ಭೂಮಿ ಮತ್ತು ನಾಟ್ಯಾಚಾರ್ಯನನ್ನು ವಂದಿಸಿ, ನಂತರ ರಂಗಾಧಿಪತಿಗಳಿಗೆ, ಸಂಗೀತ ವಾದ್ಯಗಳಿಗೆ, ವಿಘ್ನನಿವಾರಣೆಗಾಗಿ ಗಣೇಶನ ವಂದನೆಯನ್ನು ಸಲ್ಲಿಸಿ, ತರುವಾಯ ಕಚೇರಿ ವಟುಕ ಭೈರವ ಪೂಜಾ ಸಂಕೇತವಾದ ವಟುನೃತ್ತದಿಂದ ನರ್ತಕಿಯು ಪ್ರಾರಂಭಿಸುತ್ತಾಳೆ. ಇದರಲ್ಲಿ ತಾಂಡವ ನೃತ್ಯ ವಿನ್ಯಾಸಗಳೂ ಕಷ್ಟತರವಾದ ಭಂಗಿಗಳೂ ಇವೆ. ನಂತರ ಪಲ್ಲವಿಯ ನೃತ್ತ ಲಾಸ್ಯಭಂಗಿಗಳು ಮುಖ್ಯರಸಕ್ಕೆ ಕರೆದೊಯ್ಯಲು ಪೋಷಕವಾದ ವಾತಾವರಣವನ್ನು ಸೃಷ್ಟಿಸುತ್ತವೆ. ಮದ್ದಲೆಯ ಪಾಟಾಕ್ಷರಗಳಿಗೆ ಕುಣಿಯುವುದು ವಾದ್ಯಪಲ್ಲವಿ. ಹಾಡಿಗೆ ಕುಣಿಯುವುದು ಸ್ವರಪಲ್ಲವಿ. ನಂತರ ರಸನೃತ್ಯದ ಆರಂಭ

ರಸನೃತ್ಯದಲ್ಲಿ ವನಮಾಲೀದಾಸ ಉಪೇಂದ್ರಭಂಜ್, ಬಲದೇವರಥ, ಜಯದೇವನ ಅಷ್ಟಪದಿಗಳನ್ನು ಆರಿಸಿಕೊಂಡು ಕಾವ್ಯರಸದೊಡನೆ ನೃತ್ತರಸ, ಗೀತರಸಗಳಿಂದ ಬೆಳೆಸಲಾಗುತ್ತದೆ. ಇದರಲ್ಲಿ ಪ್ರತಿನುಡಿಯ ನಂತರ ನರ್ತಕಿಯು ದ್ರುತಗತಿಯಲ್ಲಿ ನೃತ್ತವನ್ನು ಮಾಡುತ್ತಾಳೆ. ಭಾವನೃತ್ತದಿಂದ ಪ್ರದರ್ಶನವು ಅಂತ್ಯಗೊಳ್ಳುತ್ತದೆ. ಇದನ್ನು ಝಾಲ, ಪಹಪಟತಾಳಗಳ ದ್ರುತಗತಿಯಲ್ಲಿ ಪಾಟಪ್ರಧಾನವಾಗಿ ನೃತ್ತದಿಂದ ಮಾಡಲಾಗುವುದು. ಶಾಸ್ತ್ರೀಯ ನೃತ್ತದಲ್ಲಿ ಸ್ಥಾಯಿ, ನಟವರ, ಚೌಕ, ಚೀರ, ಲಕ್ಷ್ಮಿ, ಬೈತಿ, ಚೌರಸ್ ಮುಂತಾದ ಭಂಗಿಗಳನ್ನು ಬಳಸಲಾಗುವುದು. ಈ ಪರಂಪರೆಯಲ್ಲಿ ಇಪ್ಪತ್ತಾರು ಗಾಂಧಿಕ ಅಸಂಯುತ ಹಸ್ತಗಳೂ, ಗುರು ಪರಂಪರೆಯಿಂದ ಬಂದ ಎಂಟು ಅಸಂಯುತ ಹಸ್ತ ಸೇರಿ ಮೂವತ್ತನಾಲ್ಕು ಹಸ್ತಗಳು ಮತ್ತು ಹಲವು ನಾನಾರ್ಥ ಹಸ್ತಗಳೂ ಸೇರಿವೆ.

ಭರತನಾಟ್ಯದ ದೇವದಾಸಿ ಪದ್ಧತಿಯು ಮಹರಿಗಳಿಂದ ಒರಿಸ್ಸದಲ್ಲಿ ಮುಂದು ವರಿಯಿತು ಇವರಲ್ಲಿ ಬಾಹರ್‌ಗನೀ (ಗಣಿಕಾ) ಮತ್ತು ಭೀಕರ್‌ಗನೀ ಎಂಬ ಎರಡು

ಬಗೆ. ಮೊದಲನೆ ವರ್ಗದವರಿಗೆ ದೇವಾಲಯದಲ್ಲಿ ಪ್ರವೇಶವಿಲ್ಲ ರಾಜಗುರುವಿನ ಮಾರ್ಗದರ್ಶನದಲ್ಲಿ ಗಾಯಕಿಯರೊಡನೆ ಇವರು ದೇವಾಲಯದ ಗರುಡಸ್ತಂಭದ ಬಳಿಗೆ ಬಂದು ಅಲ್ಲಿ ಅವನ ನೇತೃತ್ವದಲ್ಲಿ ದೈವವಂದನೆ, ರಾಜಗುರುವಂದನೆಯಾದ ನಂತರ ನರ್ತಿಸುತ್ತಾರೆ. ಸಾಮಾನ್ಯವಾಗಿ ಚೌಕ, ಮಾನದಂಡಿ, ವರ್ತುಲ, ಫೇರ ಮತ್ತು ದ್ವಿಮುಖ ಎಂಬ ಐದಂಕದ ವಿನ್ಯಾಸಗಳಲ್ಲಿ ಗೋಯರ್ಧಿ, ಚಪುವನಿಕಡಾ, ಘೋಸರ, ಥಿಯಾಪುಚಿ ಮತ್ತು ಪುಹಾನಿಯ ಎಂಬ ಚಾರೀಕ್ರಮಗಳಲ್ಲಿ ಮಹರಿನೃತ್ಯ ವಾಗುತ್ತದೆ

ಇದರಲ್ಲಿ ಸುಂದರವಾದ ಸಂಬಾಲಪುರಕರಮಾ ಮತ್ತು ದಲಖಾಯ್ ಜಾನ ಪದದ ನೃತ್ತ ಪ್ರಕಾರಗಳಿವೆ. ಕೇಲಿಕಡ, ದಸರ, ಭಾಯಿಜಾಂತಿಯಾ, ಫಾಗುನ್‌ಪುನಿ ಮುಂತಾದ ಸಂದರ್ಭಗಳಲ್ಲಿ ಮಯೂರ್‌ಭಂಜ್, ಸುಂದರಘಡ, ಬೋಲಂಗೀರ್ ಮುಂತಾದ ಗುಡ್ಡಗಾಡುಗಳಲ್ಲಿ ಕರಮಾನೃತ್ತವನ್ನು ಖರಿಯಾ, ಕಿಸಾನ್, ಓರಾನ್ ಬುಡಕಟ್ಟಿನವರೂ, ಇತರರೂ ಮಾಡುತ್ತಾರೆ. ದಲಖಾಯಿ ನೃತ್ತವನ್ನು ಬಿಂಝಾರ್, ಸೌರ, ಕುಡನಿಧ= ಪ್ರದೇಶಗಳಲ್ಲಿ ಕುಣಿಯುವರು. ಒರಿಸ್ಸದ ರಾಸ್ ಮತ್ತು ಗರಬಾ ನೃತ್ತಗಳು ಪ್ರಸಿದ್ಧವಾದುವು ಮತ್ತು ಸುಂದರವಾದುವು.

**ಓಲೇಟಿ ವೆಂಕಟೇಶ್ವರುಲು** (ಜ. ೧೯೨೮)—ಕರ್ಣಾಟಕ ಸಂಗೀತ ಕ್ಷೇತ್ರ ದಲ್ಲಿ ಇಂದು ಪ್ರಸಿದ್ಧರಾಗಿರುವ ವೆಂಕಟೇಶ್ವರುಲು ಆಂಧ್ರದೇಶದ ಒಬ್ಬ ಜನಪ್ರಿಯ ಕಲಾವಿದರು. ಇವರು ರಾಜಮಹೇಂದ್ರಿಯಲ್ಲಿ ೧೯೨೮ರಲ್ಲಿ ಜನಿಸಿದರು ಇವರ ತಂದೆ ಸರ್ಕಾರಿ ಉದ್ಯೋಗದಲ್ಲಿದ್ದರು. ಸಂಗೀತ ಪ್ರಿಯರಾಗಿದ್ದರು. ಭಕ್ತಿಗೀತೆಗಳನ್ನು ಆತ್ಮಸಂತೋಷಕ್ಕಾಗಿ ಹಾಡಿಕೊಳ್ಳುವುದು ಇವರ ಒಂದು ಹವ್ಯಾಸ. ಓಲೇಟಿಯವರ ತಾಯಿಯವರಿಗೆ ಒಳ್ಳೆಯ ಶಾರೀರವಿತ್ತು. ಹಾಡುಗಳನ್ನು ಭಾವಪೂರಿತವಾಗಿ ಹಾಡು ತ್ತಿದ್ದರು. ಇಂತಹ ಒಂದು ಸಂಸ್ಕಾರ ಓಲೇಟಿಯವರಿಗೆ ದೊರಕಿತು. ಇವರ ತಂದೆ ಯವರಿಗೆ ಪುಷ್ಪವನಂರವರ ಗಾಯನವೆಂದರೆ ಒಂದು ಬಗೆಯ ವ್ಯಾಮೋಹ. ಮಗನಿಗೆ ಗ್ರಾಮಾಫೋನಿಗೆ ಬದಲು ಹಾರ್ಮೋನಿಯಂ ತೆಗೆದುಕೊಟ್ಟರು ಸಂಗೀತ ಶಿಕ್ಷಣ ಆರಂಭವಾಯಿತು. ತಂದೆಯವರು ಕಾಕಿನಾಡಕ್ಕೆ ವರ್ಗವಾಗಿ ಹೋದಾಗ ಅಲ್ಲಿ ಮುನುಗುಂಟಿ ವೆಂಕಟರಾವ್ ಪಂತುಲು ಎಂಬ ವಿದ್ವಾಂಸರಲ್ಲಿ ಐದು ವರ್ಷಗಳ ಕಾಲ ಶಿಕ್ಷಣ ಪಡೆದರು ವೆಂಕಟರಾಯರ ತಂದೆ ಮುನುಗುಂಟಿ ಶ್ರೀರಾಮುಲು ಮತ್ತು ಚಿಕ್ಕಪ್ಪ ಪನಕಾಲರಾವ್ ಇವರಿಬ್ಬರೂ ಹಿರಿಯ ವಿದ್ವಾಂಸರಾಗಿದ್ದು ಶ್ರೀರಾಮ ಸಮಾಜಂ ಎಂಬ ಉಚಿತ ಸಂಗೀತ ಪಾಠಶಾಲೆಯನ್ನು ಸ್ಥಾಪಿಸಿದರು. ಓಲೇಟಿ ಯವರು ವೆಂಕಟರಾಯರಲ್ಲಿ ರಾಗಾಲಾಪನೆ ಮತ್ತು ಸ್ವರ ವಿನ್ಯಾಸವನ್ನು ಕಲಿತರು ಕಾಕಿನಾಡದ ಪಿ. ಆರ್. ಕಾಲೇಜಿನಲ್ಲಿ ವ್ಯಾಸಂಗಮಾಡಿ ಬಿ. ಎ. ಡಿಗ್ರಿಯನ್ನು ೧೯೪೮ ರಲ್ಲಿ ಪಡೆದರು. ಅಂದಿನಿಂದ ಕಚೇರಿಗಳಲ್ಲಿ ಹಾಡಿ ಮದ್ರಾಸು ಮತ್ತು ಆಂಧ್ರ ಪ್ರದೇಶದಲ್ಲಿ ಪ್ರಸಿದ್ಧರಾದರು.

ಓಲೇಟಿಯವರು ವಿಜಯವಾಡದ ಆಕಾಶವಾಣಿ ಕೇಂದ್ರಕ್ಕೆ ಸೇರಿದಂದಿನಿಂದ ಅವರ ಜೀವನದ ಮತ್ತೊಂದು ಅಧ್ಯಾಯವು ಆರಂಭವಾಯಿತು ಅಲ್ಲಿ ಕರ್ಣಾಟಕ ಸಂಗೀತದ ಸಹಾಯಕ ಪ್ರೊಡ್ಯೂಸರ್ ಆಗಿ ಕೆಲಸ ಮಾಡುತ್ತಿದ್ದಾರೆ. ಭಾರತಾದ್ಯಂತ ಮೆಚ್ಚುಗೆ ಗಳಿಸಿರುವ ಭಕ್ತಿರಂಜನಿ ಕಾರ್ಯಕ್ರಮದ ಸೃಷ್ಟಿಕರ್ತರು ಇವರೇ. ಇವರ ಗಾಯನದಲ್ಲಿ ಭಕ್ತಿಭಾವ, ಗಾಂಭೀರ್ಯ, ರಾಗಾಲಾಪನೆಯ ಮೆರುಗು, ಅಚ್ಚುಕಟ್ಟಾದ ಸ್ವರಕಲ್ಪನಾ ವೈವಿಧ್ಯ, ಶ್ರೋತೃಗಳನ್ನು ಮೈಮರೆಸುವಂತಹ ಮನೋಧರ್ಮ ಇವೆಲ್ಲವೂ ವೈಶಿಷ್ಟ್ಯಗಳು. ಮೀರಾಭಜನ್‌ಗಳನ್ನು ಹೃದಯಂಗಮವಾಗಿ ಹಾಡುವುದರಲ್ಲಿ ಪರಿಣತರು.

**ಓಷಧಿ** —ಈ ರಾಗವು ೪ನೆಯ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಓಷಧೀಶಪ್ರಿಯ**—ಈ ರಾಗವು ೧ನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ಓಂಕಾರಪ್ರಿಯ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ. ಸ ರಿ ಗ ಮ ಮ ಪ ದ ನಿ ಸ

ಅ: ಸ ನಿ ಪ ಮ ಗ ಸ

**ಓಂಕಾರಘೋಷಿಣಿ** ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಓಂಕಾರಿ** —ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಓಂಕಾರ ಸ್ವರೂಪಿಣಿ**—ಈ ರಾಗವು ೬೧ನೆಯ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಔ**—ನಾದ, ತೇಜಸ್ಸು, ಸದಾಶಿವ, ಸಂಕರ್ಷಣ, ಸರಸ್ವತೀ, ಜ್ವಾಲಾಮಾಲಿನಿ, ವಿರೋಧ, ನಿರ್ಣಯ ಎಂಬ ಅರ್ಥಗಳಿವೆ.

**ಔಡವ**—ಐದು. ಐದು ಸ್ವರಗಳು.

**ಔಡವರಾಗ**—ಆರೋಹಣ ಮತ್ತು ಅವರೋಹಣಗಳಲ್ಲಿ ಐದು ಸ್ವರಗಳು ಮಾತ್ರ ಇರುವ ರಾಗ ಮೋಹನ ಮತ್ತು ಹಂಸಧ್ವನಿ ರಾಗಗಳು ಇದಕ್ಕೆ ಉದಾಹರಣೆ.

**ಔಡವಗೀತ**—ಐದು ಸ್ವರಗಳಿರುವ ಸಾಮವೇದದ ಗೀತ.

**ಔಡವ-ಸಂಪೂರ್ಣರಾಗ**—ಆರೋಹಣದಲ್ಲಿ ಐದು ಸ್ವರಗಳು ಮತ್ತು ಅವರೋಹಣದಲ್ಲಿ ಸಪ್ತ ಸ್ವರಗಳಿರುವ ರಾಗ. ಉದಾ : ಬಿಲಹರಿ, ಧನ್ಯಾಸಿ.

**ಔಡವ-ಷಾಡವರಾಗ**—ಆರೋಹಣದಲ್ಲಿ ಐದು ಸ್ವರಗಳು ಮತ್ತು ಅವರೋಹಣದಲ್ಲಿ ಆರು ಸ್ವರಗಳಿರುವ ರಾಗ. ಉದಾ, ಜಗನ್ಮೋಹಿನಿ, ಮಲಹರಿ.

**ಔಡವ-ಸ್ವರಾಂತರರಾಗ**—ಆರೋಹಣದಲ್ಲಿ ಐದು ಸ್ವರಗಳು ಮತ್ತು ಅವರೋಹಣದಲ್ಲಿ ನಾಲ್ಕು ಸ್ವರಗಳಿರುವ ರಾಗ.

**ಔದುಂಬರ**—ಔದುಂಬರ ಮರದಿಂದ ಮಾಡಲ್ಪಟ್ಟ ವೀಣೆ. ಯಜಮಾನನು ವೈದಿಕ ಕರ್ಮಗಳನ್ನು ಮಾಡುವಾಗ ಯಜಮಾನಿಯು ಈ ವೀಣೆಯನ್ನು ನುಡಿಸ ಬೇಕಾಗಿತ್ತು. ವೈದಿಕ ಸಾಹಿತ್ಯದಲ್ಲಿ ಈ ವೀಣೆಗೆ ಪಿಚೋಲ ಎಂದು ಹೆಸರು.

**ಔದಾರ್ಯ**—ಭರತನಾಟ್ಯಶಾಸ್ತ್ರದಲ್ಲಿ ಹೇಳಿರುವ ಎಂಟು ಬಗೆಯ ಪುರುಷ ಸತ್ವಜಗಳಲ್ಲಿ ಔದಾರ್ಯವು ಒಂದು ಬಗೆ ತಮ್ಮವರು, ಇತರರು ಎಂಬ ಭಾವನೆ ಇಲ್ಲದೆ ಒಳ್ಳೆಯ ಹಿತಕರವಾದ ರೀತಿಯಲ್ಲಿ ಮಾತನಾಡುವುದು, ದಾನಧರ್ಮ ಮಾಡುವುದು, ಅನ್ನಪಾನಾದಿಗಳಲ್ಲಿ ಉದಾರದಿಂದಿರುವುದು, ವೃತ್ತಿ ವ್ಯವಹಾರಗಳಲ್ಲಿ ಅಭಯ ಪ್ರದಾನವನ್ನೀಯುವಂತಹ ಪ್ರವೃತ್ತಿಯು ಔದಾರ್ಯ.

**ಔಮಾಪತಂ**—ಉಮಾಪತಿ ಎಂಬ ವಿದ್ವಾಂಸನು ರಚಿಸಿರುವ ಒಂದು ಸಂಸ್ಕೃತ ಸಂಗೀತ ಶಾಸ್ತ್ರಗ್ರಂಥ ಇದಕ್ಕೆ ಔಮಾಪತ್ಯಂ ಎಂಬ ಹೆಸರೂ ಇದೆ. ಇದರಲ್ಲಿ ೩೨ ಚಿಕ್ಕ ಅಧ್ಯಾಯಗಳಿದ್ದೂ, ಶಿವ-ಪಾರ್ವತಿಯರ ಸಂವಾದರೂಪದಲ್ಲಿ ವಿಷಯಗಳನ್ನು ನಿರೂಪಿಸಲಾಗಿದೆ. ಪಾರಿಭಾಷಿಕ ಶಬ್ದಗಳ ಪಟ್ಟಿಯನ್ನು ಕೊಡಲಾಗಿದೆ. ಶುದ್ಧ ರಾಗ, ಸುಳಾದಿ, ಗೀತ, ವೇಣು, ವೀಣಾ, ಅವನದ್ಧ ವಾದ್ಯಗಳು, ತಾಳ, ನೃತ್ಯ ಮುಂತಾದುವುಗಳ ಲಕ್ಷಣಗಳನ್ನು ವಿವರಿಸಲಾಗಿದೆ

**ಔರ್ವಶೇಯ ಪ್ರಿಯ**—ಈ ರಾಗವು ಒಂದನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ. ಇದಕ್ಕೆ ಔರ್ವಶೇಯ ಪ್ರಿಯ ಎಂಬ ಮತ್ತೊಂದು ಹೆಸರಿದೆ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಪ ರಿ ಸ

**ಅಂ**—ಬ್ರಹ್ಮ, ವಿಷ್ಣು, ರುದ್ರ, ಪ್ರದ್ಯುಮ್ನ, ಶ್ರೀಮುಖೀ ಪ್ರೀತಿ, ವಿಜಯ, ಕಲಾನಿಧಿ, ಶಿವ, ಪೂರ್ಣಿಮಾ, ರೇವತೀ, ಮಹೇಶ್ವರ ಎಂಬ ಅರ್ಥಗಳಿವೆ.

**ಅಂಕ**—ಒಂಭತ್ತನ್ನು ಸೂಚಿಸುವ ಸಂಜ್ಞಾಸೂಚಕ ಪದ. ಸ್ವರಾರ್ಣವ ಎಂಬ ಗ್ರಂಥದಲ್ಲಿ ೯ನೆಯ ಸ್ವರಸ್ಥಾನವಾದ ಶುದ್ಧಧೈವತವನ್ನು ಸೂಚಿಸಲು ಬಳಸಲಾಗಿದೆ.

**ಅಂಕಣ್ಣಾನ್**—೨೦ನೆಯ ಶತಮಾನದಲ್ಲಿದ್ದ ತಂಜಾವೂರಿನ ಒಬ್ಬ ಪ್ರಸಿದ್ಧ ಮೃದಂಗ ವಿದ್ವಾಂಸ.

**ಅಂಕಿಯಾ ಗೀತಗಳು**—ಅಸ್ಸಾಂ ರಾಜ್ಯದ ನಾಟಕಗಳಲ್ಲಿ ಬರುವ ಕಥೆಗಳನ್ನು ಒಳಗೊಂಡ ಹಾಡುಗಳು.

**ಅಂಕೀ**—ದೀರ್ಘಚತುರಸ್ರಾಕೃತಿಯುಳ್ಳ ಒಂದು ಚಿಕ್ಕ ಮದ್ದಲೆ.

**ಅಂಕ್ಯ**—ಒಂದು ಬಗೆಯ ಮದ್ದಲೆ.

**ಅಂಗ**—(೧) ಸಂಗೀತ ರಚನೆಯ ವಿಭಾಗಕ್ಕೆ ಅಂಗವೆಂದು ಹೆಸರು. ಕೃತಿಯಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣವೆಂಬ ಅಂಗಗಳಿವೆ.

(೨) ಸ ರಿ ಗ ಮ ಪ ದ ನಿ ಸ ಎಂಬ ಎಂಟು ಸ್ವರಗಳಲ್ಲಿ ಸರಿಗಮ ಎಂಬ ೪ ಸ್ವರಗಳ ಸಮೂಹಕ್ಕೆ ಪೂರ್ವಾಂಗ ಸ್ವರಗಳೆಂದೂ ಪದನಿಸ ಎಂಬ ೪ ಸ್ವರಗಳ ಸಮೂಹಕ್ಕೆ ಉತ್ತರಾಂಗವೆಂದು ಹೆಸರು.

(೩) ಒಂದು ತಾಳದ ಆವರ್ತಗಳಲ್ಲಿರುವ ಅವಯವಗಳಿಗೆ ಅಂಗವೆಂದು ಹೆಸರು. ಇದರಲ್ಲಿ ಆರು ವಿಧಗಳಿವೆ ಇವು ಯಾವುವೆಂದರೆ ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ.

**ಅಂಕುರ**—ಭರತನಾಟ್ಯದ ಆಂಗಿಕಾಭಿನಯದ ಆರು ವಿಧಗಳಲ್ಲಿ ಒಂದು ಬಗೆ. ವಾಕ್ಯದಲ್ಲಿ ಸೇರಿರುವ ವಸ್ತುವನ್ನು ಅಥವಾ ವಿಷಯವನ್ನು ವಚನಶೂನ್ಯವಾದ ಆಂಗಿಕಾಭಿನಯದಿಂದ ಚಮತ್ಕಾರವಾಗಿ ವ್ಯಕ್ತಪಡಿಸುವುದು.

**ಅಂಗತಾಳ**—೧೭ನೆ ಶತಮಾನದ ಬರತನಾಟ್ಟಿಯಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಅಂಗಲತಾ**—೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ನಿ ಸ̇

ಅ: ಸ̇ ದ ಮ ಗ ರಿ ಮ ಗ ಸ

**ಅಂಗಲಕ್ಷಣ**—ನಾಟ್ಯಕಲೆಯ ಸ್ವರೂಪವನ್ನು ಪ್ರಕಟಿಸುವುದರಲ್ಲಿ ಅಂಗಲಕ್ಷಣಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಅವು ಯಾವುವೆಂದರೆ ಮುಖ ಲಕ್ಷಣಗಳು, ಮುಖರಾಗಗಳು, ಭೂಪುಟ ತಾರಾಕರ್ಮಗಳು, ನಾಸಿಕ, ಗಂಡ, ದೃಷ್ಟಿ ಭೇದಗಳು, ಶಿರೋ ಭೇದಗಳು, ಗ್ರೀವಾ ಭೇದಗಳು ; ಎದೆ, ಪಾರ್ಶ್ವ, ಸೊಂಟ, ತೊಡೆ, ಮೊಳಕಾಲು ಪಾದ ಭೇದಗಳು ಮತ್ತು ಅಂಗ ಭಂಗಿಮ ಭೇದಗಳು.

**ಅಂಗಾರಾ**—ಈ ರಾಗವು ೭ನೆಯ ಮೇಳಕರ್ತ ಸೇನಾಪತಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

**ಅಂಚಿತ**—(೧) ಭರತನಾಟ್ಯದ ಗ್ರೀವಾ ಭೇದಗಳಲ್ಲಿ ಒಂದು ವಿಧ. ತಲೆಯೊಂದಿಗೆ ಹಿಂವಕ್ಕೆ ತಿರುಗಿದ ಕತ್ತು. ಮುಖ ತೋರದಿರುವುದು, ಅಹಿತ, ನಡೆ ಮುಂತಾದುವನ್ನು ತೋರಲು ವಿನಿಯೋಗವಾಗುತ್ತದೆ.

(೨) ಅಭಿನಯದರ್ಪಣವೆಂಬ ನಂದಿಕೇಶ್ವರನ ಗ್ರಂಥದಲ್ಲಿ ಹೇಳಿರುವ ೯ ಶಿರೋಭೇದಗಳಲ್ಲಿ ಒಂದು ವಿಧ. ಎರಡು ಪಕ್ಕಗಳಿಗೂ ಶಿರಸ್ಸನ್ನು ಸ್ವಲ್ಪವಾಗಿ ಬಗ್ಗಿಸುವುದು ಅಂಚಿತ ಶಿರಸ್ಸು. ದುಶ್ಚಿಂತೆ, ಮೋಹ, ಮೂರ್ಛೆಯೇ ಮೊದಲಾದ ಕಾರ್ಯಗಳಲ್ಲಿ ಈ ಶಿರವು ವಿನಿಯೋಗವಾಗುವುದು.

**ಅಂಜನಗೀತ**—ಕಥಾಕಾಲಕ್ಷೇಪಗಳಲ್ಲಿ ಹಾಡಲಾಗುವ ಒಂದು ಬಗೆಯ ಗೀತ.

**ಅಂಜನಾವತಿ**—ಈ ರಾಗವು ೬೩ನೆಯ ಮೇಳಕರ್ತ ಗವಾಂಬೋಧಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಅಂಜಲಿಹಸ್ತ**—ಭರತನಾಟ್ಯದ ಒಂದು ಹಸ್ತಭೇದ. ಎರಡು ಪತಾಕ ಹಸ್ತಗಳ ಅಂಗೈಗಳನ್ನು ಸೇರಿಸಿ ಹಿಡಿಯುವುದು ಅಂಜಲಿಹಸ್ತ. ದೇವತೆಗಳು, ಗುರು. ಬ್ರಾಹ್ಮಣರಿಗೆ ನಮಸ್ಕಾರ ಮಾಡಲು ಈ ಹಸ್ತ ವಿನಿಯೋಗವಾಗುವುದು.

**ಅಂಜಿ**—ಕುರವಂಜಿ ನಾಟಕಗಳಲ್ಲಿ ಬರುವ ನಾಟ್ಯದ ಪಾದ ವಿನ್ಯಾಸ.

**ಅಂಘ್ರಿ**—ಮತಂಗ ವಿರಚಿತ ಬೃಹದ್ದೇಶೀ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗದ ಹೆಸರು.

**ಅಂತರ**—ದೂರ, ವ್ಯತ್ಯಾಸ, ವಿರಾಮ.

**ಅಂತರಾ**—(೧) ಹಿಂದೂಸ್ಥಾನೀ ಸಂಗೀತದ ರಾಗದ ಎರಡನೆಯ ಭಾಗ.

(೨) ಭರತನು ಹೇಳಿರುವ ಗಾಂಧಾರದ ವಿಕೃತ ರೂಪ.

**ಅಂತರ ಮತ್ತು ಕಾಕಲಿ**—ಸಾಮಗಾನದ ಸ್ವರಸಪ್ತಕಗಳು ತಿಳಿದನಂತರ ಇವೆರಡು ಸ್ವರಗಳ ಪರಿಚಯು ಉಂಟಾಯಿತು. ಇವು ಷಡ್ಜ ಗ್ರಾಮರಾಗಗಳಲ್ಲಿ ಅಲ್ಪ ಪ್ರಯೋಗಗಳಾಗಿ ಬಳಸಲಾಗುತ್ತಿತ್ತು. ಇವುಗಳನ್ನು ಭರತನು ಹೇಳಿದ್ದಾನೆ. ಈ ಸ್ವರಗಳನ್ನು ಈಗಿನ ಆನಂದ ಭೈರವಿ ಮುಂತಾದ ರಾಗಗಳಲ್ಲಿ ಕಾಣಬಹುದು

**ಅಂತರಗಾಂಧಾರ**—ಇದು ಗಾಂಧಾರದ ತೀವ್ರ ಸ್ವರೂಪದ ಸ್ವರ.

**ಅಂತರಕ್ರೀಡ**—ಇದು ೧೦೮ ತಾಳಗಳಲ್ಲಿ ಒಂದು ಬಗೆಯ ತಾಳ. ಮೂರು ದ್ರುತಗಳು ಮತ್ತು ಒಂದು ಅನುದ್ರುತ ಇದರ ಅಂಗಗಳು. ಇದರ ಒಂದಾವರ್ತಕ್ಕೆ ೭ ಅಕ್ಷರಕಾಲ.

**ಅಂತರದುಂದುಭಿ**—ತಮಿಳಿನ ಪೆರಿಯಪುರಾಣಂ ಎಂಬ ಗ್ರಂಥದಲ್ಲಿ ಹೇಳಿರುವ ಒಂದು ದೇವಲೋಕದ ನಗಾರಿ.

**ಅಂತರಧ್ರುವ** - ನಾಟಕಗಳಲ್ಲಿ ಹಾಡಲ್ಪಡುವ ಒಂದು ವಿಧವಾದ ಹಾಡು.

**ಅಂತರಭಾಷಾ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಹೇಳಿರುವ ಒಂದು ಮಾರ್ಗೀರಾಗ.

**ಅಂತರಭಾಷಾ ಕಿರಣಾವಳಿ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಕಿರಣಾವಳಿ ರಾಗದ ಒಂದು ಬಗೆ.

**ಅಂತರ ಭಾಷಾವಲಿತ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಅಂತರಭಾಷಾ ಶಾಕಾವಲಿತ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಅಂತರಮಾರ್ಗ**—ರಾಗದ ತ್ರಯೋದಶ ಲಕ್ಷಣಗಳಲ್ಲಿ ಇದೊಂದು ಲಕ್ಷಣ. ಒಂದು ರಾಗದ ಮೂಲಸ್ವರಗಳೊಡನೆ ಆ ರಾಗದ್ದಲ್ಲದ ಬೇರೊಂದು ಸ್ವರವನ್ನು ಪ್ರಯೋಗಿಸುವುದು ಅಥವಾ ಆ ಸ್ವರದ ಛಾಯೆಯನ್ನು ರಾಗದ ಸ್ವರೂಪಕ್ಕೆ ಕುಂದುಂಟಾಗದ ರೀತಿಯಲ್ಲಿ ಪ್ರಯೋಗಿಸಿ ರಾಗದ ಸೊಬಗನ್ನು ಹೆಚ್ಚಿಸುವ ಕ್ರಿಯೆ

**ಅಂತರವಾಹಿನಿ**—೨೯ನೆಯ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಅಂತರಿ**—ಒಂದು ಗೀತದ ಎರಡು ಭಾಗಗಳನ್ನು ಸೇರಿಸುವ ಸ್ವರಸಮೂಹ. ರಾಗಾಂಗ ರಾಗಲಕ್ಷಣ ಗೀತದಲ್ಲಿ ಇದು ಸೂತ್ರಖಂಡ ಮತ್ತು ಉಪಾಂಗ ಖಂಡಗಳ ಮಧ್ಯೆಯೂ, ಉಪಾಂಗ ಖಂಡದ ಪ್ರಾರಂಭದಲ್ಲಿ ಮತ್ತು ಭಾಷಾಂಗ ಖಂಡದ ಪ್ರಾರಂಭಕ್ಕೆ ಮೊದಲು ಬರುತ್ತದೆ. ಮಾಯಾಮಾಳವಗೌಳರಾಗದ ರವಿಕೋಟಿ ತೇಜ ಎಂಬ ಲಕ್ಷಣಗೀತವು ಇದಕ್ಕೆ ಉದಾಹರಣೆ. ಕೆಲವು ಗೀತಗಳಲ್ಲಿ ಅಂತರಿಯ ಸಾಹಿತ್ಯವು ಒಂದೇ ಆಗಿದ್ದು ಸಂಗೀತವು ಹಲವು ಸಲ ಬರುತ್ತದೆ.

**ಅಂತ್ಯಪ್ರಾಸ**—ಸಂಗೀತ ರಚನೆಗಳ ಪಾದಗಳ ಸಾಹಿತ್ಯದ ಪಾದಗಳ ಕೊನೆಯಲ್ಲಿ ಬರುವ ಪ್ರಾಸ. ಜಯದೇವನ ಅಷ್ಟಪದಿಗಳಲ್ಲಿ ಸುಂದರವಾದ ಅಂತ್ಯ ಪ್ರಾಸಗಳಿವೆ. ತ್ಯಾಗರಾಜರ ಕೀರ್ತನೆ—"ಏಲ ನೀದಯರಾದು" ಎಂಬ ರಚನೆಯಲ್ಲಿ ಹಲವು ಅಂತ್ಯಪ್ರಾಸಗಳಿವೆ.

ರಾರಾ ದೇವಾದಿದೇವ !
ರಾರಾ ಮಹಾನುಭಾವ !

ರಾರಾ ರಾಜೀವ ನೇತ್ರಾ !
ರಘುವರಪುತ್ರಾ !

**ಅಂಬಾಹೇರಿ**—ಸಂಗೀತರತ್ನಾಕರದಲ್ಲಿ ಹೇಳಿರುವ ಪ್ರಮುಖ ರಾಗವಾದ ಟಕ್ಕರಾಗದ ಒಂದು ಭಾಷಾರಾಗ.

**ಅಂಬಾಹೇರಿಕಾ** —ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೨೧ ಟಕ್ಕ ಭಾಷಾಗಳಲ್ಲಿ ಒಂದು ಭಾಷಾರಾಗ.

**ಅಂಬಾಮನೋಹರಿ**—೨೩ನೆಯ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಅಂಬಾಯಿರಂ**—ಇವರು ೧೯ನೇ ಶತಮಾನದ ಆದಿಭಾಗದಲ್ಲಿದ್ದ ಒಬ್ಬ ಪ್ರಸಿದ್ಧ ಪಿಟೀಲು ವಿದ್ವಾಂಸರು. ಇವರ ಪ್ರಾವೀಣ್ಯತೆ ಮತ್ತು ಪ್ರತಿಭೆಯನ್ನು ಮೆಚ್ಚಿ ಪೈದಾಲ ಗುರುಮೂರ್ತಿ ಶಾಸ್ತ್ರಿಗಳು ಇವರಿಗೆ ಶಿಂಗಕ್ಕುಟ್ಟಿ ಎಂಬ ಬಿರುದನ್ನಿತ್ತರು. ಇವರ ಐದು ಪುತ್ರರೂ ಸಂಗೀತ ವಿದ್ವಾಂಸರಾಗಿದ್ದರು. ಹಿರಿಯ ಪುತ್ರ ಅಪ್ಪುಕ್ಕುಟ್ಟಿ ಉತ್ತಮ ಪಿಟೀಲು ವಿದ್ವಾಂಸರಾಗಿದ್ದರು.

**ಅಂಭಣ**—ವೇದಗಳ ಕಾಲದ ವೀಣೆಯ ಅನುರಣನದ ಬುರುಡೆಯ ಹೆಸರು.

**ಅಂಭೋಗಿನಿ**—೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

**ಅಂಭೋರುಹಂ**—೪೪ನೆಯ ಮೇಳಕರ್ತ ಭವಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ಪ ದ ಮ ಗ ರಿ ಸ

**ಅಂಬುಜನಾಭ**—ಸ್ವಾತಿ ತಿರುನಾಳ್ ಮಹಾರಾಜರ ಕೃತಿಗಳಲ್ಲಿ ಕಂಡು ಬರುವ ಒಂದು ಪರ್ಯಾಯ ಮುದ್ರೆ. ಇದು ಪದ್ಮನಾಭ ಎಂಬ ಪದಕ್ಕೆ ಸಮನಾದುದು.

**ಅಂಬರಿಕಲ್ಯಾಣಿ**—ಸಂಗೀತರತ್ನಾಕರವೆಂಬ ಕನ್ನಡ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಅಂಬರೀಷಚರಿತಂ**—ಅಶ್ವತಿ ತಿರುನಾಳ್ ರಚಿಸಿರುವ ಒಂದು ಕಥಕಳಿ ನಾಟಕ.

**ಕ**—ಮಹಾಕಾಳಿ, ಕಪಾಲೀ, ವಾಸುದೇವ, ಪ್ರಜಾಪತಿ, ಮಾಹೇಶ್ವರೀ, ಕಾಮರೂಪಿಣೀ, ಪರಮೇಶ್ವರೀ ಮುಂತಾದ ಅರ್ಥಗಳಿವೆ.

**ಕಕುಭೆ**—(೧) ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ, ಈಗ ಅಪ್ರಚಲಿತವಾಗಿರುವ ಒಂದು ರಾಗ.

(೨) ಸಂಗೀತರತ್ನಾಕರದಲ್ಲಿ ಹೇಳಿರುವ ವೀಣೆಯ ಒಂದು ಭಾಗ.

**ಕರ್ಕರಿ**—ಋಗ್ವೇದದಲ್ಲಿ ಉಕ್ತವಾಗಿರುವ ಒಂದು ತಂತ್ರೀವಾದ್ಯ.

**ಕಚರಾಗ**—ಈ ರಾಗವು ೨೭ನೆಯ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ದ ಪ ಮ ರಿ ಸ

**ಕಚ್ಛಪೀ**—ಸರಸ್ವತೀ ದೇವಿಯ ವೀಣೆಯ ಹೆಸರು.

**ಕಚ್ಚಿ ಶಾಸ್ತ್ರಿ**—ಇವರು ಕಾಂಚೀಪುರದವರು ಪ್ರಸಿದ್ಧ ಸಂಗೀತ ವಿದ್ವಾಂಸರೂ, ವಾಗ್ಗೇಯಕಾರರೂ ಆಗಿದ್ದ ಸುಬ್ಬರಾಯ ಶಾಸ್ತ್ರಿಯ ಅಳಿಯಂದಿರು ಇವರು ಉತ್ತಮಗಾಯಕರೂ, ಪಿಟೀಲು ವಾದಕರೂ ಆಗಿದ್ದುದಲ್ಲದೆ ತಾಳಜ್ಞಾನಕ್ಕೆ ಬಹಳ ಖ್ಯಾತರಾಗಿದ್ದರು.

**ಕಚ್ಚಿಕಲ್ಯಾಣರಂಗ ಉಡ್ಯೆಯರ್**—ತಮಿಳುನಾಡಿನ ಉಡ್ಯೆಯಾರ್ ಪಾಳ್ಯದ ಜಮೀನ್ದಾರರು ಇವರು ಘನಂ ಕೃಷ್ಣಯ್ಯರ್‌ರವರ ಪೋಷಕರಾಗಿದ್ದರು. ಕಲ್ಯಾಣರಾಗದ (ಆದಿತಾಳ) ಪಾರೆಂಗುಂ ಪಾರ್ತಾಲುಂ ಎಂಬ ಪದದಲ್ಲಿ ಉಡ್ಯೆಯರನ್ನು ಸ್ಮರಿಸಲಾಗಿದೆ.

**ಕಚ್ಚಿರಂಗ ಉಡ್ಯೆಯರ್**—ಇವರೂ ಸಹ ಉಡ್ಯೆಯರ್ ಪಾಳ್ಯದ ಜಮೀನ್ದಾರರಾಗಿದ್ದು ಘನಂಕೃಷ್ಣಯ್ಯರ್‌ರವರ ಪೋಷಕರಾಗಿದ್ದರು.

**ಕ್ವಚಿತ್ ಪ್ರಯೋಗ**—ಒಂದು ರಾಗದಲ್ಲಿ ಅಪರೂಪವಾಗಿ ಪ್ರಯೋಗಿಸಲ್ಪಡುವ ಒಂದು ಸ್ವರಗುಚ್ಛ ಅಥವಾ ಸ್ವರ.

**ಕಟಕ**—ಭರತನಾಟ್ಯದ ಅಸಂಯುತ ಹಸ್ತಗಳಲ್ಲಿ ಇದೊಂದು ಬಗೆಯ ಹಸ್ತ ಭೇದ. ಕಪಿತ್ಥ ಹಸ್ತದಲ್ಲಿನ ತರ್ಜನಿ ಅಂಗುಷ್ಠಗಳೊಂದಿಗೆ ಮಧ್ಯದ ಬೆರಳನ್ನು ಸೇರಿಸುವುದೇ ಕಟಕಾಮುಖಹಸ್ತ. ಹೂ ಬಿಡಿಸುವುದು, ಮುತ್ತಿನಹಾರ, ಹೂ ಹಾರಗಳನ್ನು ಧರಿಸಿಕೊಳ್ಳುವುದು, ಬಾಣಗಳ ಮಂದಾಕರ್ಷಣೆ, ವೀಳಯವನ್ನೀಯುವುದು, ಕಸ್ತೂರಿ ಮೊದಲಾದ ದ್ರವ್ಯಗಳನ್ನು ಅರೆಯುವುದು, ಸುಗಂಧ ದ್ರವ್ಯಗಳನ್ನು ಹಚ್ಚುವುದು, ಮಾತು, ದೃಷ್ಟಿಗಳನ್ನು ಪ್ರಕಟಿಸುವುದಕ್ಕೆ ಈ ಹಸ್ತ ವಿನಿಯೋಗವಾಗುವುದು.

**ಕಟಕಂ**—ಇದೊಂದು ರಾಗಕೋಶ. ಇದರಲ್ಲಿ ಬಹುಸಂಖ್ಯೆಯಲ್ಲಿ ರಾಗಗಳ ಪಟ್ಟಿಯಿದೆ ಪ್ರತಿಯೊಂದು ರಾಗದ ವಿಶೇಷ ಸಂಚಾರ ಮತ್ತು ಪ್ರಯೋಗಗಳನ್ನು ತಾನ ಮತ್ತು ಸರಳವಾದ ಸ್ವರಸಮೂಹಗಳ ರೂಪದಲ್ಲಿ ಕೊಡಲಾಗಿದೆ. ಇವಲ್ಲದೆ ಕ್ರಮ ಮತ್ತು ಅಪೂರ್ವ ಸಂಚಾರಗಳನ್ನೂ ಕೊಡಲಾಗಿದೆ. ಇಂತಹ ಪುಸ್ತಕಗಳಿಗೆ ತಾನ ಪುಸ್ತಕಗಳೆಂದು ಹೆಸರು. ಒಂದು ರಾಗದ ಸಂಚಾರ ಪ್ರಯೋಗಗಳ

ವಿಚಾರದಲ್ಲಿ ಸಂದೇಹ ಉಂಟಾದಾಗ ಕಟಕವು ಸಂದೇಹ ನಿವಾರಣೆಗೆ ಕಟಕವು ಆಧಾರಗ್ರಂಥ. ಗೌರೀಕಟಕಂ, ಹನುಮಾನ್ ಕಟಕಂ, ವ್ಯಾಸಕಟಕಂ ಮುಂತಾದುವು ಇಂತಹ ಆಧಾರ ಗ್ರಂಥಗಳು. ಗೋವಿಂದ ದೀಕ್ಷಿತರು, ತೋಡಿ ಸೀತಾರಾಮಯ್ಯ, ಸೊಂರಿ ವೆಂಕಟರಮಣಯ್ಯ ಮುಂತಾದವರ ತಾನ ಪುಸ್ತಕಗಳ ಹಸ್ತ ಪ್ರತಿಗಳಿವೆ. ಭೌಳಿ, ಗುಂಡಕ್ರಿಯೆ ಮುಂತಾದ ಚಿಕ್ಕ ರಾಗಗಳಿಗೂ ವಿವರವಾದ ಸಂಚಾರಗಳು ಈ ಪುಸ್ತಕಗಳಲ್ಲಿವೆ.

**ಕಟಕಾಮುಖ**—ಇದು ಭರತನಾಟ್ಯದ ಒಂದು ಸಂಯುತ ಹಸ್ತಮುದ್ರೆ. ಒಂದು ಕಟಕಾಮುಖ ಹಸ್ತವನ್ನು ಇನ್ನೊಂದು ಕಟಕಾಮುಖ ಹಸ್ತದ ಮೇಲಿಡುವುದು ಅಥವಾ ಸ್ವಸ್ತಿಕಾಕಾರವಾಗಿ ಸೇರಿಸುವುದರಿಂದ ಈ ಮುದ್ರೆಯಾಗುತ್ತದೆ. ಪಟ್ಟಾಭಿಷೇಕ, ಪೂಜೆ, ವಿವಾಹ, ಪ್ರಣಾಮ, ಅರ್ಪಣೆ, ಶೃಂಗಾರಾರ್ಥ, ಉತ್ಸವಾದಿಗಳು, ಛತ್ರಧಾರಣ ಇತ್ಯಾದಿಗಳನ್ನು ನಿರೂಪಿಸುವುದರಲ್ಲಿ ಈ ಹಸ್ತವಿನಿಯೋಗಿಸಲ್ಪಡುವುದು.

**ಕಟಪಯಾದಿ ಸೂತ್ರ**—೭೨ ಮೇಳಕರ್ತರಾಗಗಳ ಕ್ರಮಸಂಖ್ಯೆಯನ್ನು ತಿಳಿದುಕೊಳ್ಳಲು ಪೂರ್ವಿಕರು ಈ ಸೂತ್ರವನ್ನು ರೂಪಿಸಿದ್ದಾರೆ. ಇದನ್ನು ಜ್ಯೋತಿಷ್ಯ, ವಿಜ್ಞಾನ ಮತ್ತು ಕಲೆಗಳಲ್ಲಿ ಉಪಯೋಗಿಸುವುದು ನಮ್ಮ ದೇಶದಲ್ಲಿ ರೂಢಿಯಲ್ಲಿದೆ. ಮೇಳಕರ್ತರಾಗವು ಗೊತ್ತಾಗಿದ್ದರೆ ಅದರ ಮೇಳ ಸಂಖ್ಯೆಯನ್ನು ತಿಳಿಯುವ ಬಗೆ ಹೇಗೆ? ಈ ಸಂಖ್ಯಾಯಂತ್ರ ಸಂಸ್ಕೃತ ವರ್ಣಮಾಲೆಯಲ್ಲಿರುವ ವರ್ಗೀಯ ಮತ್ತು ಅವರ್ಗೀಯ ಅಕ್ಷರಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಅವುಗಳಿಂದ ಸಂಖ್ಯೆಯನ್ನು ಗೊತ್ತು ಮಾಡಿಕೊಳ್ಳುವ ಕಲ್ಪನೆಯು ಈ ಸೂತ್ರ. ಈ ಸೂತ್ರವು ನಾಲ್ಕು ಪದಗಳಿಂದ ಕೂಡಿದೆ.

(೧) ಕಾದಿನವ — ಅಂದರೆ ಕ ಇಂದ ಒಂಬತ್ತು ಅಕ್ಷರಗಳು
(೨) ಟಾದಿನವ — ಅಂದರೆ ಟ ಇಂದ ಒಂಬತ್ತು ಅಕ್ಷರಗಳು
(೩) ಪಾದಿಪಂಚ — ಅಂದರೆ ಪ ಇಂದ ಐದು ಅಕ್ಷರಗಳು
(೪) ಯಾದ್ಯಷ್ಟ — ಅಂದರೆ ಯ ಇಂದ ಎಂಟು ಅಕ್ಷರಗಳು

| ೧ | ೨ | ೩ | ೪ | ೫ | ೬ | ೭ | ೮ | ೯ | ೦ |
|---|---|---|---|---|---|---|---|---|---|
| ಕ | ಖ | ಗ | ಘ | ಙ | ಚ | ಛ | ಜ | ಝ | ಞ |
| ಟ | ಠ | ಡ | ಢ | ಣ | ತ | ಥ | ದ | ಧ | ನ |
| ಪ | ಫ | ಬ | ಭ | ಮ | .... | .... | .... | ... | .... |
| ಯ | ರ | ಲ | ವ | ಶ | ಷ | ಸ | ಹ | .... | .... |

ಪತ್ತೆ ಮಾಡಬೇಕಾಗಿರುವ ಮೇಳರಾಗದ ಹೆಸರಿನ ಮೊದಲ ಎರಡು ಅಕ್ಷರಗಳನ್ನು ತೆಗೆದುಕೊಂಡು, ಆ ಅಕ್ಷರಗಳಿಗೆ ತಕ್ಕ ಸಂಖ್ಯೆಯನ್ನು ಈ ಪತಕದಿಂದ ನಿರ್ಧರಿಸಬೇಕು. ನಂತರ ಅಂಕಾನಾಂ ವಾಮತೋಗತಿಃ ಎಂಬ ಸೂರ್ಯಸಿದ್ಧಾಂತದಲ್ಲಿ ಹೇಳಿರುವ ಮಾತಿನಂತೆ ಆ ಎರಡು ಸಂಖ್ಯೆಯನ್ನು ತಿರುಗು ಮುರುಗು ಮಾಡಿದರೆ ಮೇಳರಾಗದ ಸಂಖ್ಯೆಯು ಬರುತ್ತದೆ. ದೃಷ್ಟಾಂತಕ್ಕೆ ಚಾರುಕೇಶೀ ರಾಗದ ಮೇಳ ತಿಳಿಯಬೇಕಾದರೆ —'ಚ' ದ ಸಂಖ್ಯೆ ಪತಕದಲ್ಲಿ ೬, 'ರು' ದ ಸಂಖ್ಯೆ ೨ ಅಂದರೆ ೬೨ ಆಯಿತು. ಇದನ್ನು ಹಿಂದು ಮುಂದು ಮಾಡಿದರೆ ೨೬—ಇದೇ ಚಾರುಕೇಶಿಯ ಮೇಳ ಸಂಖ್ಯೆ. ಹಾಗೆಯೇ ರಸಿಕಪ್ರಿಯ—ರ=೨, ಸಿ=೭ = ೨೭ ಅಂದರೆ ೭೨ನೆ ಮೇಳ ; ಧಾತು ವರ್ಧನಿ— ಧ=೯, ತು=೬=೯೬ ಅಂದರೆ ೬೯ನೇ ಮೇಳ ; ನವನೀತ—ನ=೦, ವ=೪ = ೦೪ ಅಂದರೆ ೪೦ನೇ ಮೇಳ ಇತ್ಯಾದಿ. ರಾಗದ ಹೆಸರಿನ ಆದಿಯಲ್ಲಿ ಸಂಯುಕ್ತಾಕ್ಷರವಿದ್ದರೆ ಅದನ್ನು ಬಿಡಿಸಿ ಸಂಖ್ಯೆಯನ್ನು ನಿರ್ಧರಿಸಬೇಕು. ರತ್ನಾಂಗಿ ಎಂಬ ಮೇಳದ ಸಂಖ್ಯೆಯನ್ನು ತಿಳಿಯಲು ಅದನ್ನು ರತ್+ನಾಂಗಿ ಎಂದು ಬಿಡಿಸಬೇಕು. ಆಗ ರ=೨, ನ=೦, ಅಂದರೆ ೨೦=೨ ನೇ ಮೇಳ ಇತ್ಯಾದಿ. ಈ ಸೂತ್ರವು ಜನ್ಯರಾಗಗಳಿಗೆ ಅನ್ವಯಿಸುವುದಿಲ್ಲ

ಕಟಪಯಾದಿ ಸೂತ್ರ ಪದ್ಧತಿಯನ್ನು ಅನ್ವಯಿಸಬಹುದಾದ ೩೫ ಸುಳಾದಿ ತಾಳಗಳ ಹೆಸರುಗಳ ಪಟ್ಟಿಯಿದೆ. ಧ್ರುವತಾಳದ ತಿಶ್ರ, ಚತುರಶ್ರ, ಖಂಡ, ಮಿಶ್ರ ಮತ್ತು ತಾಳಗಳಿಗೆ ಪಿಕ, ವಟಿ, ಶಕ, ಲರ ಮತ್ತು ಧಾರ ಎಂಬ ಹೆಸರುಗಳಿವೆ. ಕಟಪಯಾದಿ ಸೂತ್ರದಂತೆ ಇವುಗಳ ಸಂಖ್ಯೆಯು ಕ್ರಮವಾಗಿ ೧೧, ೧೪, ೧೭, ೨೨ ಮತ್ತು ೨೯ ಆಗುತ್ತವೆ. ಇವು ಪ್ರತಿಯೊಂದು ತಾಳದ ಒಂದಾವರ್ತದ ಅಕ್ಷರ ಕಾಲವನ್ನು ಸೂಚಿಸುತ್ತವೆ.

**ಕಟಿಶ**—ಇದೊಂದು ಬಗೆಯ ಮದ್ದಳೆ.

**ಕಟ್ಟಬೊಮ್ಮನ್ ಹಾಡು**—೧೮ನೆ ಶತಮಾನದಲ್ಲಿದ್ದ ವೀರಪಾಂಡ್ಯ ಕಟ್ಟಬೊಮ್ಮನ್ ಬ್ರಿಟಿಷರೊಡನೆ ತಾಯ್ನಾಡಿಗಾಗಿ ಹೋರಾಡಿದ ವಿಷಯವುಳ್ಳ ಲಾವಣಿ ಹಾಡು. ಕಟ್ಟಬೊಮ್ಮನ್ ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಪಾಂಚಾಲಂ ಕುರುಚಿಯನ್ನು ಆಳುತ್ತಿದ್ದನು. ಉಮೈದೊರೆ ಇವನ ಸಹೋದರ. ಇವರಿಬ್ಬರೂ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಗೆ ಅಧೀನರಾಗಲು ನಿರಾಕರಿಸಿ ಹೋರಾಡಿ ಜೀವತೆತ್ತರು.

**ಕಟ್ಟಳೆ**—ಇದು ತಮಿಳಿನ ತೇವಾರಂ ಹಾಡುಗಳಿಗೆ ಸಂಬಂಧಿಸಿವೆ. ಪ್ರತಿಯೊಂದು ಪಣ್ ಅಥವಾ ರಾಗಕ್ಕೆ ಎಷ್ಟು ಕಟ್ಟಳೆಗಳಿವೆ ಎಂಬುದನ್ನು ಹೇಳಿದೆ. ನಟ್ಟಪಾಡೈಪಣ್‌ಗೆ ೮ ಕಟ್ಟಳೆಗಳನ್ನು ಹೇಳಿದೆ. ಕಟ್ಟಳೆಯನ್ನು ಕುರಿತು ಮೂರು ಅಭಿಪ್ರಾಯಗಳಿವೆ.

(೧) ಕಟ್ಟಳೆಯು ಒಂದು ನಿರ್ದಿಷ್ಟವಾದ ರಾಗವನ್ನು ಸೂಚಿಸುತ್ತದೆ. ನಟ್ಟಿಪಾಡ್ಡೈಪಣ್‌ನ ಆ ಕಟ್ಟಳೆಗಳು ಎಂಟು ಬಗೆಯ ರಾಗಗಳಿವೆಯೆಂದು ಸೂಚಿಸುತ್ತವೆ.

(೨) ಕಟ್ಟಳೆಯು ತೇವಾರಂಗೀತೆಗಳ ವಿವಿಧ ಛಂದಸ್ಸನ್ನು ಸೂಚಿಸುತ್ತವೆ.

(೩) ಕಟ್ಟಳೆಗಳು ತಾಳಗಳನ್ನು ಸೂಚಿಸುತ್ತವೆ.

ಈ ಅಭಿಪ್ರಾಯಗಳಲ್ಲಿ ಮೊದಲ ಅಭಿಪ್ರಾಯವು ಸಂಗೀತದ ಐತಿಹಾಸಿಕ ದೃಷ್ಟಿಯಿಂದ ಸಮರ್ಪಕವಾದುದೆಂದು ಪ್ರೊ. ಸಾಂಬಮೂರ್ತಿಯವರು ಹೇಳಿದ್ದಾರೆ.

**ಕಟ್ ಪುತ್ಲಿ**—ರಾಜಾಸ್ಥಾನದ ಬೊಂಬೆ ಕುಣಿತದ ಆಟ ಗಂಡನು ಸೂತ್ರಗಳನ್ನು ಆಡಿಸುವುದರ ಮೂಲಕ ಬೊಂಬೆಗಳನ್ನು ಹೆಂಡತಿಯು ಹಾಡುವ ಕಥೆಯ ಹಾಡಿನ ತಾಳಕ್ಕೆ ಕುಣಿಸುತ್ತಾನೆ. ಹೆಂಡತಿಯು ಹಾಡುವುದಲ್ಲದೆ ಡೋಲಕ್ ನುಡಿಸುತ್ತಾಳೆ.

**ಕಟಿಚಿನ್ನ**—ಆಶ್ಚರ್ಯ ಅಥವಾ ವಿಸ್ಮಯವನ್ನು ಸೂಚಿಸುವ ಭರತನಾಟ್ಯದ ಒಂದು ಭಂಗಿ.

**ಕಟಿಭ್ರಾಂತ**—ಉದ್ವೇಗವನ್ನು ಸೂಚಿಸುವ ಭರತನಾಟ್ಯದ ಒಂದು ಭಂಗಿ

**ಕಟಿಸಮ**—ಸಮರೇಖೆಯನ್ನು ಸೂಚಿಸುವ ಭರತನಾಟ್ಯದ ಒಂದು ಭಂಗಿ.

**ಕಟೀಭೇದ**—ಭರತನಾಟ್ಯದಲ್ಲಿ ಸೊಂಟ ಅಥವಾ ಐದು ವಿಧವಾದ ಕಟೀಭೇದಗಳಿವೆ. ಇವು ಚಿನ್ನ, ನಿವೃತ್ತ, ರೇಚಿತ, ಪ್ರಕಂಪಿತ ಮತ್ತು ಉದ್ವಾಹಿತ.

(೧) ಕಟೀಮಧ್ಯವು ವಲಿತವಾದಲ್ಲಿ ಅದು ಚಿನ್ನ.

(೨) ತಿರುಗಿಸಿದ ಸೊಂಟವನ್ನು ಸ್ವಸ್ಥಾನಕ್ಕೆ ತರುವುದು ನಿವೃತ್ತ.

(೩) ಸೊಂಟವನ್ನು ಚಕ್ರದಂತೆ ಗುಂಡುಗುಂಡಾಗಿ ತಿರುಗಿಸುವುದು ಅಥವಾ ವೃತ್ತಾಕಾರವಾಗಿ ತಿರುಗಿಸುವುದು ರೇಚಿತ.

(೪) ವೇಗವಾಗಿ, ಅಡ್ಡವಾಗಿ ಸೊಂಟವನ್ನೂ ಅತ್ತಿತ್ತ ಅಲ್ಲಾಡಿಸುವುದು ಪ್ರಕಂಪಿತ.

(೫) ನಿಧಾನವಾಗಿ ಸೊಂಟ, ತೊಡೆ ಮತ್ತು ಪಾರ್ಶ್ವಗಳನ್ನು ಮೇಲೆತ್ತಿ ಇಳಿಸುವುದು ಉದ್ವಾಹಿತ.

**ಕಟೀರೇಚಕ**—ಭರತನಾಟ್ಯದ ನಾಲ್ಕು ಬಗೆಯ ರೇಚಕಗಳಲ್ಲಿ ಒಂದು ವಿಧ. ಇದರಲ್ಲಿ ಉದ್ವರ್ತನ, ವಲಿತ, ಅಪಸ್ಸರಿತ ಎಂಬ ಮೂರು ವಿಧವಾದ ಕ್ರಿಯೆಗಳಿವೆ. ಸೊಂಟವನ್ನು ಮೇಲಕ್ಕೆತ್ತುವುದು ಉದ್ವರ್ತನ. ಸೊಂಟವನ್ನು ಗುಂಡಾಗಿ ತಿರುಗಿಸುವುದು ವಲಿತ. ಸೊಂಟವನ್ನು ಹಿಂದೆಳೆಯುವುದು ಅಪಸ್ಸರಿತ.

**ಕಟ್ಟುತಾನ**—ಇದೊಂದು ಬಗೆಯ ತಾನ ಅಥವಾ ರಾಗಾಲಾಪನೆಯ ಒಂದು ಭಾಗ. ತಾನಪುಸ್ತಕ, ಕಟಕ ಮತ್ತು ರಾಗ ಸಿಫೆಂಟು ಎಂಬ ಗ್ರಂಥಗಳಲ್ಲಿ ರಾಗಗಳಿಗೆ ವಿವರವಾದ ಕಟ್ಟುತಾನಗಳನ್ನು ಬರೆದಿದ್ದಾರೆ. ಹಲವು ಬಗೆಯ ತಾನಗಳಿವೆ. ಅವು (೧) **ಚಿಟ್ಟಿತಾನ**-ಇವು ಘನರಾಗ ಮತ್ತು ರಕ್ತಿರಾಗಗಳ ಅಭ್ಯಾಸಗಳು.

ವಿದ್ಯಾರ್ಥಿಗಳಿಗೆ ವೀಣೆಯನ್ನು ನುಡಿಸುವ ಕಲೆಯಲ್ಲಿ ಶಿಕ್ಷಣವೀಯಲು ಈ ಅಭ್ಯಾಸಗಳನ್ನು ರಚಿಸಲಾಗಿದೆ ಇವು ಮುಖ್ಯವಾಗಿ ಮಾಟುಜಾತಿ ತಾನಗಳು.

(೨) **ಘನತಾನ**—ವೀಣೆ ಸಾಂಬಯ್ಯನವರು ಘನತಾನವನ್ನು ನುಡಿಸುವುದರಲ್ಲಿ ಅದ್ವಿತೀಯರಾಗಿದ್ದರು. ಇದನ್ನು ವೀಣೆ ಶೇಷಣ್ಣನವರು ಸಾಂಬಯ್ಯನವರಿಂದ ಕಲಿತರು. ಇದು ಮುಖ್ಯವಾಗಿ ಎಡಗೈಯಿಂದ ನುಡಿಸುವ ಕೌಶಲ್ಯ. ಬಹಳ ವಿದ್ವತ್ಪೂರ್ಣವಾದುದು. ನಾವು ಕೇಳುವ ವೀಣಾ ಕಚೇರಿಗಳಲ್ಲಿ ಮಾಟುಗಳನ್ನು ಹೆಚ್ಚಾಗಿ ಕೇಳುತ್ತೇವೆ. ಇವು ಆಹ್ಲಾದಕರವಾಗಿವೆ ವಿಜಯನಗರದ ವೀಣೆ ವೆಂಕಟರಮಣದಾಸರು ಈ ಶೈಲಿಯ ವಾದನದಲ್ಲಿ ಮಹಾಪ್ರವೀಣರಾಗಿದ್ದರು.

**ಕಟ್ಟೆ**—(೧) ಹಾರ್ಮೋನಿಯಂ ಅಥವಾ ಪಿಯಾನೋ ವಾದ್ಯದ ಕೀ (key)

(೨) ಮೃದಂಗದಲ್ಲಿ ಬಾರುಗಳು ಮತ್ತು ವಾದ್ಯದ ಮೇಲ್ಭಾಗದ ಮಧ್ಯೆ ಸಿಕ್ಕಿಸಿರುವ ಮರದ ತುಂಡುಗಳು. ಇವುಗಳನ್ನು ಮೇಲಕ್ಕೆ ಅಥವಾ ಕೆಳಕ್ಕೆ ತಳ್ಳಿ ಬೇಕಾದ ಶ್ರುತಿ ಮಾಡಿಕೊಳ್ಳಬಹುದು.

**ಕಡಿಗೈ**—ಹಳ್ಳಿಯ ಸುತಿಪಾಠಕರು ಇವರು ತಮ್ಮ ಪೋಷಕರ ಪುರೋಭಿವೃದ್ಧಿಗಾಗಿ ವಿಶೇಷ ಸಂದರ್ಭಗಳಲ್ಲಿ ಹಾಡುಗಳನ್ನು ಹಾಡುತ್ತಾರೆ.

**ಕಡಿಗೈ ಮೂಕ್ಕುಪ್ಪುಲವರ್** (೧೯ನೆ ಶ)—ಇವರು ತಮಿಳುನಾಡಿನ ಎಟ್ಟೆಯ್ಯಾಪುರಂನಲ್ಲಿದ್ದ ತಮಿಳು ಸಂಗೀತ ವಿದ್ವಾಂಸ ಮತ್ತು ವಾಗ್ಗೇಯಕಾರರು. ಇವರು ರಚಿಸಿರುವ ಇಂದಪ್ಪೆರುವ್ವೈ ಎಂಬ ಮಾಳವಶ್ರೀ (ಮಿಶ್ರಜಾತಿ ಏಕತಾಳ) ರಾಗದ ತಮಿಳು ಪದವನ್ನು ಸಂಗೀತ ಸಂಪ್ರದಾಯ ಪ್ರದರ್ಶಿನಿ ಎಂಬ ಗ್ರಂಥದಲ್ಲಿ ಕೊಡಲಾಗಿದೆ. ಆದಿಯಾರಂಬ ಕಟ್ಟಿಯೇ ಎಂಬ ಮತ್ತೊಂದು ಪ್ರಸಿದ್ಧವಾದ ಸ್ವರಸ್ಥಾನ ಪದವು ಸ್ವರಾಕ್ಷರಗಳ ಸೌಂದರ್ಯಭರಿತವಾಗಿದೆ. ಇದು ಆದಿತಾಳದಲ್ಲಿ ತೋಡಿರಾಗದಲ್ಲಿದೆ. ಇದರ ಸಾಹಿತ್ಯಕ್ಕೆ ಬಾಲುಸ್ವಾಮಿ ದೀಕ್ಷಿತರು ಸಂಗೀತವನ್ನು ಅಳವಡಿಸಿದರು ಇದರಲ್ಲಿ ಅನುಲೋಮ–ವಿಲೋಮ ಶೈಲಿಯ ಸುಂದರವಾದ ಚಿಟ್ಟೆ ಸ್ವರಗಳಿವೆ. ಇದು ಎಟ್ಟಯ್ಯಾಪುರದ ವೆಂಕಟೇಶ್ವರ ಎಟ್ಟೇಂದ್ರನ ಸ್ತುತಿ ರೂಪದಲ್ಲಿದೆ.

**ಕಡಿಗೈ ನಮಶ್ಶಿ ವಾಯುಪ್ಪುಲವರ್**—ಇವರು ೧೯ನೆ ಶತಮಾನದ ಅಂತ್ಯ ಭಾಗದಲ್ಲಿದ್ದ ತಮಿಳುನಾಡಿನ ಒಬ್ಬ ಖ್ಯಾತ ವಾಗ್ಗೇಯಕಾರರು. ಇವರು ರಚಿಸಿರುವ ‘ ಮಾವೋಗಲಗಿರಿ ಮಾರುದೆ ’ ಎಂಬ ತಮಿಳು ಸ್ವರಜತಿಗೆ ಸುಬ್ಬರಾಮ ದೀಕ್ಷಿತರು ಸಂಗೀತವನ್ನು ಅಳವಡಿಸಿದರು. ಇದು ಕಮಾಚ್‌ರಾಗ-ರೂಪಕತಾಳದಲ್ಲಿದೆ.

**ಕಡುವಳಿಸಿದ್ಧರ್**—ನೀತಿಬೋಧಕವಾದ ವಿಷಯವುಳ್ಳ ಕೃತಿಗಳನ್ನು ರಚಿಸಿರುವ ತಮಿಳುನಾಡಿನ ೧೮ ಸಿದ್ಧರಲ್ಲಿ ಒಬ್ಬರು.

**ಕಡುಂತುಡಿ**—ಕೇರಳದಲ್ಲಿ ಕಥಾಕಾಲಕ್ಷೇಪಗಳಲ್ಲಿ ಬಳಸುವ ಒಂದು ತಾಳ ವಾದ್ಯ.

**ಕರ್ಣಾಟಕ ಬಾಣಿ**—ಕರ್ಣಾಟಕ ಸಂಗೀತದ ಶೈಲಿಯಲ್ಲಿ ಹಾಡುವುದು ಅಥವಾ ನುಡಿಸುವುದು ಕರ್ಣಾಟಕ ಬಾಣಿ ಅಥವಾ ಶೈಲಿ ಅಥವಾ ಸಂಪ್ರದಾಯ. ಕರ್ಣಾಟಕ ಸಂಗೀತದಲ್ಲಿ ಟೈಗರ್‌ಶೈಲಿ, ಅರಿಯಕುಡಿಶೈಲಿ, ಮುಸಿರಿಶೈಲಿ, ವಾಸುದೇವಾಚಾರ್‌ಶೈಲಿ, ಜಿ. ಎನ್. ಬಿ. ಶೈಲಿ, ಶೆಮ್ಮಂಗುಡಿಶೈಲಿ, ಮಣಿ ಅಯ್ಯರ್ ಶೈಲಿ, ಚೆಂಬೈಶೈಲಿ, ಚೌಡಯ್ಯಶೈಲಿ ಇತ್ಯಾದಿಗಳಿವೆ.

**ಕರ್ಣಾ** ದೇವಾಲಯಗಳ ಉತ್ಸವಗಳಲ್ಲಿ ಬಳಸುವ ಒಂದು ಸುಷಿರವಾದ್ಯ. ಇದನ್ನು ರಷ್ಯದ ಉಸ್ಬೇಕಿಸ್ಥಾನದಲ್ಲೂ ಬಳಸುತ್ತಾರೆ. ದಕ್ಷಿಣ ಭಾರತದ ದೇವಾಲಯಗಳಲ್ಲಿ ಸರ್ವವಾದ್ಯವನ್ನು ನುಡಿಸುವಾಗ ಇದನ್ನು ನುಡಿಸುತ್ತಾರೆ

**ಕರ್ಣಾಟಕ ಅಂಧಾಳಿ**—ಈ ರಾಗವು ೧೪ನೆಯ ಮೇಳಕರ್ತ ವಕುಳಾಭರಣದ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ದ ನಿ ಸ̇

ಅ: ಸ̇ ನಿ ಪ ಮ ಗ ರಿ ಸ

**ಕರ್ಣಾಟಕ ಕದಂಬ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕರ್ಣಾಟಕಕಾಪಿ**—ಈ ರಾಗವು ೨೨ನೆಯ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗಾ ಮ ರಿ ಪ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ಇದೊಂದು ಪುರಾತನ ರಾಗ. ಹಿಂದೂಸ್ಥಾನಿ ಕಾಪಿರಾಗದಿಂದ ಬೇರೆಯಾದ ರಾಗ. ಜನಪದ ಸಂಗೀತದ ರಾಗ. ರಕ್ತಿರಾಗ. ಕರುಣ ಮತ್ತು ಶೃಂಗಾರರಸಗಳಿಗೆ ಯುಕ್ತವಾದ ರಾಗ. ತ್ಯಾಗರಾಜರ 'ಜೂತಾಮುರಾರೆ', ಶ್ಯಾಮಾಶಾಸ್ತ್ರಿಗಳ 'ಅಖಿಲಾಂಡೇಶ್ವರಿ', ಎಂಬ ಕೃತಿಗಳೂ, ಕ್ಷೇತ್ರಜ್ಞನ 'ಅದರನ ಮೂವಿ' ಎಂಬ ಪದವೂ ಈ ರಾಗದ ಪ್ರಸಿದ್ಧ ರಚನೆಗಳು.

**ಕರ್ಣಾಟಕ ಖಮಾಚ್**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ಸ

ತ್ಯಾಗರಾಜರ 'ಸುಜನ ಜೀವನ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ. ತ್ಯಾಗರಾಜರ 'ಸೀತಾಪತೇ' ಎಂಬ ಕೃತಿಯಲ್ಲಿ ಈ ರಾಗದ ಮತ್ತೊಂದು ಸ್ವರೂಪವು ವ್ಯಕ್ತವಾಗುತ್ತದೆ. ಇದೂ ಮೇಲಿನ ಮೇಳದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ
ಅ: ಸ ನಿ ದ ಪ ಮ ಗ ರಿ ಸ

ಇವೆರಡು ರಾಗಗಳೂ ಸುಂದರವಾದ ಸಾರ್ವಕಾಲಿಕ ಉಪಾಂಗರಾಗಗಳು. ಸ ನಿ ಸ ಎಂಬ ಸ್ವರಸಮೂಹದಲ್ಲಿ ಕಾಕಲಿನಿಷಾದದ ಪ್ರಯೋಗವು ತ್ಯಾಗರಾಜರ ನಂತರ ರೂಢಿಗೆ ಬಂದಿತು.

**ಕರ್ಣಾಟಕಗೌಡ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಕರ್ಣಾಟಕಜೋಗಿ** – ಈ ರಾಗವು ೧೭ನೆಯ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ
ಅ: ಸ ನಿ ದ ಪ ಮ ರಿ ಸ

**ಕರ್ಣಾಟಕ ಬೇಹಾಗ್**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ. ಇದಕ್ಕೆ ಕರ್ಣಾಟಕ ಬ್ಯಾಗ್ ಎಂದೂ ಹೆಸರಿದೆ.

ಆ: ಸ ರಿ ಗ ಮ ಪ ದ ನಿ ಸ
ಅ: ಸ ನಿ ದ ನಿ ಪ ದ ಮ ಗ ರಿ ಗ ಸ

ತ್ಯಾಗರಾಜರ 'ನೇನೆಂದು ವೆತಕುದುರಾ' ಎಂಬ ರಚನೆಯು ಈ ರಾಗದ ಒಂದು ಬಹು ಸುಂದರವಾದ ಕೃತಿ.

**ಕರ್ಣಾಟಕ ಬಂಗಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಕರ್ಣಾಟಕ ಭೂಷಣಿ**—ಇದೇ ಹೆಸರಿನ ಎರಡು ರಾಗಗಳಿವೆ.

(೧) ಇದು ೧೬ನೆಯ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ
ಅ: ಸ ನಿ ದ ಪ ಮ ಗ ರಿ ಸ

(೨) ಇದು ೭೦ನೆಯ ಮೇಳಕರ್ತ ನಾಸಿಕಾಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ
ಅ: ಸ ನಿ ದ ಮ ಗ ರಿ ಸ

**ಕರ್ಣಾಟಕ ಮಂಜರಿ** –ಈ ರಾಗವು ೫೪ನೆಯ ಮೇಳಕರ್ತ ವಿಶ್ವಂಭರಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ
ಅ: ಸ ನಿ ದ ಪ ಮ ಪ ಗ ರಿ ಸ

**ಕರ್ಣಾಟಕ ಮಿಶ್ರನಾಟಿ**—ನಾರದನ ' ಸಂಗೀತ ಮಕರಂದ 'ವೆಂಬ ಗ್ರಂಥ ದಲ್ಲಿ ಉಕ್ತವಾಗಿರುವ ಒಂದು ರಾಗ. ದಕ್ಷಿಣ ಭಾರತದಲ್ಲಿ ಈ ಬಗೆಯ ಮಿಶ್ರನಾಟಿ ರಾಗವು ಪ್ರಚಲಿತವಾಗಿತ್ತು.

**ಕರ್ಣಾಟಕ ತರಂಗಿಣಿ**—ಈ ರಾಗವು ೬೧ನೆಯ ಮೇಳಕರ್ತ ಕಾಂತಾ ಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ಪ ಮ ಗ ರಿ ಸ

**ಕರ್ಣಾಟಕ ದೇವಗಾಂಧಾರಿ**—ಇದೇ ಹೆಸರಿನ ಎರಡು ರಾಗಗಳಿವೆ.

(೧) ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ನಿ ಸ ಗ ಮ ಪ

ಅ: ದಾ ಪ ಮ ಗ ರಿ ಸ ನಿ

(೨) ಈ ರಾಗವು ೨೨ ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಸ ಗ ಮ ಪ ದ ಪ ನಿ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಸುಬ್ಬರಾಮ ದೀಕ್ಷಿತರು ' ಸಂಗೀತ ಸಂಪ್ರದಾಯ ಪ್ರದರ್ಶಿನಿ ' ಎಂಬ ಗ್ರಂಥದಲ್ಲಿ ಪ್ರಸಿದ್ಧವಾದ ದೇವಗಾಂಧಾರಿ ರಾಗವನ್ನು (೨೯ನೆ ಮೇಳಕರ್ತ ಜನ್ಯ) ದೇಶೀಯ ದೇವಗಾಂಧಾರಿ ಎಂದು ಹೆಸರಿಸಿದ್ದಾರೆ.

ಕೀರವಾಣಿಯ ಜನ್ಯವಾದ ಧೈವತಾಂತ್ಯವುಳ್ಳ ಒಂದು ರಾಗವೂ, ಖರಹರಪ್ರಿಯ ಜನ್ಯವಾದ ವಕ್ರಸಂಪೂರ್ಣ ಉಪಾಂಗ ರಾಗವೂ ಒಟ್ಟು ಎರಡು ಕರ್ಣಾಟಕ ದೇವ ಗಾಂಧಾರಿ ರಾಗಗಳಿವೆ. ಆದರೆ ರೂಢಿಯಲ್ಲಿ ಕರ್ಣಾಟಕ ದೇವಗಾಂಧಾರಿ ರಾಗಕ್ಕೂ ಆಭೇರಿ ರಾಗಕ್ಕೂ ಯಾವ ವ್ಯತ್ಯಾಸವೂ ಇಲ್ಲ. ' ಪಂಚ ಷಟ್ಪೀಠ ರೂಪಿಣಿ ' ಎಂಬ ಮುತ್ತುಸ್ವಾಮಿ ದೀಕ್ಷಿತರ ರಚನೆಯು ಈ ರಾಗದ ಒಂದು ಪ್ರಸಿದ್ಧ ಕೃತಿ

**ಕರ್ಣಾಟಕ ಸಂಗೀತ**—ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ಸಂಗೀತ ಪದ್ಧತಿಯು ಕರ್ಣಾಟಕ ಸಂಗೀತವೆಂದು ಪ್ರಸಿದ್ಧವಾಗಿದೆ. ೯ನೆ ಶತಮಾನದ ಆದಿ ಭಾಗದಲ್ಲಿದ್ದ ನೃಪತುಂಗನು ' ಕವಿರಾಜಮಾರ್ಗ 'ವೆಂಬ ಗ್ರಂಥದಲ್ಲಿ ಕಾವೇರಿಯಿಂದ ಗೋದಾವರಿಯುವರೆಗೆ ಇರುವ ನಾಡು ಕನ್ನಡನಾಡು ಎಂದು ಹೇಳಿದ್ದಾನೆ. ಕರ್ನಾಡು ಎಂದರೆ ಮೇಲ್ನಾಡು ಎಂದು ಪುರಾತನ ತಮಿಳು ಗ್ರಂಥಗಳಲ್ಲಿ ಹೇಳಿದೆ. ಕಾವೇರಿ ಮತ್ತು ಕೃಷ್ಣಾನದಿಗಳ ಮಧ್ಯೆ ಇರುವ ಪ್ರದೇಶವನ್ನು ಕರ್ಣಾಟಕ ದೇಶವೆಂದು ಕಲ್ಲಿನಾಥನು ತನ್ನ ಸಂಗೀತರತ್ನಾಕರವೆಂಬ ಗ್ರಂಥದ ವ್ಯಾಖ್ಯಾನದಲ್ಲಿ ಹೇಳಿದ್ದಾನೆ.

**ಕರ್ಣಾಟಕ ಸಂಗೀತ ಇತಿಹಾಸ**—ಸಂಗೀತ ಕಲೆಯು ಒಂದು ಅತ್ಯಂತ ಪ್ರಾಚೀನವಾದ ಮತ್ತು ಪ್ರಭಾವಶಾಲಿಯಾದ ಕಲೆ. ಇದು ನಮ್ಮ ದೇಶದಲ್ಲಿ ಒಂದು ಅಲೌಕಿಕ ವಿದ್ಯೆಯಾಗಿ ದೈವಿಕ ಹಿನ್ನೆಲೆಯಲ್ಲಿ ಬೆಳೆದುಬಂದಿದೆ ನಾದಬ್ರಹ್ಮೋ

ಪಾಸನೆಯು ಈ ಕಲೆಯ ಮುಖ್ಯಗುರಿ. ಗಾಯನ, ವಾದ್ಯ ಸಂಗೀತ ಮತ್ತು ನೃತ್ಯ ಈ ಮೂರು ಸಂಗೀತದಲ್ಲಿ ಅಡಕವಾಗಿದ್ದು ಕ್ರಮೇಣ ನೃತ್ಯವು ಪ್ರತ್ಯೇಕವಾಯಿತು.

ಭಾರತೀಯ ಸಂಗೀತ ಪದ್ಧತಿಯು ವೈದಿಕ ಮತ್ತು ಜಾನಪದ ಸಂಪ್ರದಾಯ ಮೇಳನೆಯನ್ನು ತೋರಿಸುತ್ತದೆ. ವೇದಾಧ್ಯಯನದ ಪದ, ಕ್ರಮ, ಘನ, ಜಟಾ ಪಾಠಗಳೂ, ಉದಾತ್ತ ಅನುದಾತ್ತ ಪ್ರಚಯಸ್ವರಿತಗಳೂ ಸಂಗೀತಕ್ಕೆ ಮೂಲ. ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಸಾಮವೇದವೇ ಸಂಗೀತಕ್ಕೆ ಮೂಲವೆಂದು ಹೇಳಿದೆ. ಅನಾದಿ ಸಿದ್ಧವಾದ ಸಂಪ್ರದಾಯದ ಬಲದಿಂದ ಸಾಮಗಾನದ ಹಿರಿಮೆ ರೂಢವಾಗಿ ನಿಂತಿತು. ಸಂಗೀತ ಗಂಧರ್ವವೇದವೆಂಬ ಉಪವೇದವಾಗಿ ಪರಿಗ್ರಹೀತವಾಯಿತು. ಸಾಮಗಾನದ ಕ್ರುಷ್ಟ, ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಮಂದ್ರ ಮತ್ತು ಅತಿಸ್ವಾರಗಳೆಂಬುವು ಲೌಕಿಕ ಸಂಗೀತದ ಪಂಚಮ ಮಧ್ಯಮ, ಗಾಂಧಾರ, ಋಷಭ, ಷಡ್ಜ, ಧೈವತ, ನಿಷಾದ ಸ್ವರಗಳಾದುವು. ಸಂಗೀತಕ್ಕೆ ಸಂಬಂಧಿಸಿದ ಬಹು ಹಿಂದಿನ ಗ್ರಂಥವೆಂದರೆ ಭರತಮುನಿಯ ನಾಟ್ಯಶಾಸ್ತ್ರ. ಇದರಲ್ಲಿ ಮನುಷ್ಯಸಾಧ್ಯವಾದ ಗಾನದ ಪ್ರಸ್ತಾಪಬಂದಿದೆ. ಇದಕ್ಕಿಂತ ಹೆಚ್ಚು ಸ್ಪಷ್ಟವಾಗಿರುವ ಪ್ರಮಾಣಗ್ರಂಥ ಮತಂಗನ ಬೃಹದ್ದೇಶೀ. ಇದರ ಕಾಲ ಸು ೪-೫ ಶ. ಭರತನು ಹೇಳುವ ಜಾತಿಗಳ ಬದಲು ರಾಗಗಳ ಪ್ರಸ್ತಾಪ ಈ ಗ್ರಂಥದಲ್ಲಿ ಮೊಟ್ಟಮೊದಲಿಗೆ ಬರುತ್ತದೆ. ಇವನು ರಾಗಗಳನ್ನು ಶುದ್ಧ ಛಾಯಾಂಗ, ಸಂಕೀರ್ಣವೆಂದು ವಿಭಾಗಮಾಡಿ ಶ್ರುತಿ, ಸ್ವರ, ವರ್ಣ, ಅಲಂಕಾರ ಮುಂತಾದ ಹಲವು ವಿವರಗಳನ್ನು ಹೇಳಿದ್ದಾನೆ. ಸಂಗೀತಶಾಸ್ತ್ರವು ಬೆಳೆದು ಅದರ ವಿಧಿನಿಷೇಧಗಳನ್ನು ಸ್ಪಷ್ಟಪಡಿಸುವ ಗ್ರಂಥಗಳು ಕಾಲಕ್ರಮದಲ್ಲಿ ರಚಿಸಲ್ಪಟ್ಟವು. ನಾರದನ ಸಂಗೀತ ಮಕರಂದ, ತಮಿಳುನಾಡಿನ ಕುಡುಮಿಯಾ ಮಲೈ ಸಂಗೀತ ಶಾಸನ ಚಾಳುಕ್ಯ ಸೋಮೇಶ್ವರನ ಮಾನಸೋಲ್ಲಾಸ, ಮುಂತಾದ ಗ್ರಂಥಗಳನ್ನು ಹೆಸರಿಸಬಹುದು. ಗ್ರಂಥಗಳ ರಚನೆಯಾಗಿ ಪ್ರಚಾರವಾದಂತೆ ಅವುಗಳ ನಿರೂಪಣೆಗಾಗಿ ಕೃತಿಗಳು ರಚಿಸಲ್ಪಟ್ಟು ಲಕ್ಷ್ಯ-ಲಕ್ಷಣ ವಿಭಾಗ ರೂಪುಗೊಂಡಿತು. ಲಕ್ಷಣ ಗೀತೆಗಳು ರಚನೆಯಾದುವು.

ಮತ್ತೊಂದು ಪ್ರಮುಖ ಪ್ರಾಚೀನ ಪ್ರಮಾಣ ಗ್ರಂಥವಾದ ಸಂಗೀತರತ್ನಾಕರವನ್ನು ದೇವಗಿರಿಯ ದೊರೆ ಸಿಂಘಣನ (೧೨೧೦-೪೭) ಆಸ್ಥಾನದಲ್ಲಿದ್ದ ಶಾರ್ಙ್ಗದೇವನು ರಚಿಸಿದನು. ಈ ಗ್ರಂಥವು ಸಂಗೀತಶಾಸ್ತ್ರಕ್ಕೆ ಭದ್ರವಾದ ಬುನಾದಿ ಹಾಕಿತೆನ್ನಬಹುದು ಇದಕ್ಕೆ ಸಿಂಹಭೂಪಾಲನು (ಸು ೧೩೩೦) ಸುಧಾಕರವೆಂಬ ಟೀಕೆಯನ್ನೂ, ೧೫ ನೆ ಶತಮಾನದಲ್ಲಿದ್ದ ಕಲ್ಲಿನಾಥನು ಕಲಾನಿಧಿ ಎಂಬ ಟೀಕೆಯನ್ನು ಬರೆದನು. ಇವನಿಗೆ ಮುಂಚೆ ದಕ್ಷಿಣದ ಗೋಪಾಲನಾಯಕನು ದೆಹಲಿಯ ಅಲ್ಲಾವುದ್ದೀನ್ ಖಿಲ್ಜಿಯ (೧೨೯೫-೧೩೧೫) ಆಸ್ಥಾನದಲ್ಲಿ ಪ್ರಖ್ಯಾತ ಗಾಯಕನಾಗಿದ್ದು ತಾಳಾರ್ಣವ, ರಾಗಕದಂಬ, ಗ್ರಹಸ್ವರ ಪ್ರಬಂಧ ಮುಂತಾದ ಗ್ರಂಥವನ್ನು ಬರೆದನು. ೧೬ನೆ ಶ.ದಲ್ಲಿ ಈ ಪರಂಪರೆಯನ್ನು ಅಳವಡಿಸಿಕೊಂಡು ಬೆಂಗಳೂರಿನ ಬಳಿಯಿರುವ ಸಾವನದುರ್ಗದ

ನಿವಾಸಿಯಾದ ಪುಂಡರೀಕವಿಠಲನು ಮೊಗಲ್ ಚಕ್ರವರ್ತಿ ಅಕ್ಬರನಿಂದ ಆಹ್ವಾನಿತನಾಗಿ ಹರಿದಾಸಸ್ವಾಮಿಗಳೊಡನೆ ತಾನ್‌ಸೇನನಿಗೆ ಗುರುವಾಗಿದ್ದನು. ಈತನು ರಾಗಮಾಲಾ, ರಾಗಮಂಜರಿ, ಸದ್ರಾಗಚಂದ್ರೋದಯ ಮುಂತಾದ ಗ್ರಂಥಗಳನ್ನು ಬರೆದನು.

ಸುಮಾರು ೧೩–೧೪ನೆ ಶತಮಾನಗಳ ವೇಳೆಗೆ ನಮ್ಮ ಭಾರತೀಯ ಸಂಗೀತವು ಎರಡು ಪದ್ಧತಿಗಳಾಗಿ ಸೀಳಿತೆನ್ನಬಹುದು. ಅಲ್ಲಾವುದ್ದೀನನ ಕಾಲದಲ್ಲಿ ಪರ್ಷಿಯನ್ ಕವಿ ಮತ್ತು ಸಂಗೀತ ವಿದ್ವಾಂಸನಾಗಿದ್ದ ಅಮೀರ್‌ಖುಸ್ರು ತನ್ನ ದೇಶದ ರಾಗಗಳನ್ನೂ ನಮ್ಮ ದೇಶದ ರಾಗಗಳನ್ನೂ ಸಮನ್ವಯಮಾಡಿ ಹಲವಾರು ಹೊಸರಾಗಗಳನ್ನು ಸೂಚಿಸಿದನು. ಹೀಗೆ ಪರಕೀಯ ಪ್ರಭಾವದಿಂದ ಪ್ರಾರಂಭವಾದ ಪದ್ಧತಿ ಮೊಗಲರ ಆಳ್ವಿಕೆಯಲ್ಲಿ ಚೆನ್ನಾಗಿ ಬೇರೂರಿತು. ನಮ್ಮ ಸಂಗೀತ ಉತ್ತರಾದಿ, ದಕ್ಷಿಣಾದಿಗಳೆಂಬ ಪದ್ಧತಿಗಳಾಗಿ ಕವಲೊಡೆಯಿತು. ಇವೆರಡು ಪದ್ಧತಿಗಳು ಬೇರೆಬೇರೆಯಾದರೂ ಶಾಸ್ತ್ರ ಪ್ರಕ್ರಿಯೆ ಎರಡಕ್ಕೂ ಸಾಮಾನ್ಯವೇ ಆಗಿವೆ. ಇವೆರಡಕ್ಕೂ ಕನ್ನಡಿಗರು ಆಚಾರ್ಯಪುರುಷರಾಗಿದ್ದರೆಂಬುದು ಗಮನಾರ್ಹ. ಉತ್ತರಾದಿ ಪದ್ಧತಿಗೆ ಗೋಪಾಲನಾಯಕ ಮತ್ತು ಪುಂಡರೀಕವಿಠಲ. ದಕ್ಷಿಣದ ಪದ್ಧತಿಗೆ ವಿದ್ಯಾರಣ್ಯ, ಕಲ್ಲಿನಾಥ, ಗೋವಿಂದ ದೀಕ್ಷಿತರೇ ಮುಂತಾದವರ ಹೆಸರುಗಳು ಒಗ್ಗಿಕೊಂಡು ನಿಂತಿವೆ.

ವಿಜಯನಗರ ಸಾಮ್ರಾಜ್ಯದಲ್ಲಿ ಕಲಾ ಸಾಹಿತ್ಯಗಳಿಗೆ ವಿಶೇಷ ಪ್ರೋತ್ಸಾಹವಿದ್ದಿತು. ವಿದ್ಯಾರಣ್ಯ ಸ್ವಾಮಿಗಳು ಶೃಂಗೇರಿ ಮಠದವರು. ವಿಜಯನಗರ ಸಂಸ್ಥಾನವನ್ನು ಸ್ಥಾಪಿಸಿದವರೆಂದು ಪ್ರಸಿದ್ಧರಾದವರು. ಅವರು ಈ ಕಾಲದಲ್ಲಿ ಸಂಗೀತಸಾರವೆಂಬ ಲಕ್ಷಣ ಗ್ರಂಥವನ್ನು ರಚಿಸಿದರು. ಅವರು ಸ್ಫುಟಪಡಿಸಿದ ಸಂಗೀತ ಪದ್ಧತಿಗೆ ಕರ್ಣಾಟಕ ಸಂಗೀತವೆಂಬ ಹೆಸರು ಬಂದಿತು. ವಿದ್ಯಾರಣ್ಯರು ವಿವೇಚಿಸಿ ದೊಡ್ಡದೊಂದು ಸಂಪ್ರದಾಯವನ್ನು ಹಾಕಿಕೊಟ್ಟರು. ಅವರ ಸಂಗೀತಸಾರವೆಂಬ ಗ್ರಂಥದಲ್ಲಿ ೧೫ ಮೇಳರಾಗಗಳನ್ನು ಹೇಳಿ ೫೦ ಪ್ರಚುರ ಪ್ರಯೋಗಗಳುಳ್ಳ ರಾಗಗಳನ್ನು ಅಳವಡಿಸಿದ್ದಾರೆಂದು ಗೋವಿಂದ ದೀಕ್ಷಿತರ ಸಂಗೀತ ಸುಧಾ (೧೬೧೪) ಎಂಬ ಗ್ರಂಥದಿಂದ ತಿಳಿದುಬರುತ್ತದೆ. ಇದಲ್ಲದೆ ರಾಗಾಲಾಪನೆಯ ವಿಧಿಗಳನ್ನೂ ನಿರೂಪಿಸಿದರು.

ಗೋವಿಂದ ದೀಕ್ಷಿತರು ಕರ್ಣಾಟಕದವರು. ಅವರು ತಂಜಾವೂರಿನ ದೊರೆ ರಘುನಾಥನಾಯಕನ (೧೬೧೪–೧೬೩೪) ಮಂತ್ರಿಯಾಗಿದ್ದರು. ಸಂಗೀತಸುಧಾ ಎಂಬ ಲಕ್ಷಣಗ್ರಂಥವನ್ನು ರಚಿಸಿದರು. ಈಗ ಪ್ರಚುರವಾಗಿರುವ ವೀಣೆಯ ಸ್ವರೂಪವನ್ನು ಸಿದ್ಧಮಾಡಿಕೊಟ್ಟರು. ಹಲವು ಲಕ್ಷಣಗೀತಗಳನ್ನೂ ರಚಿಸಿದ್ದಾರೆ.

೧೫ನೆ ಶತಮಾನದ ಅಂತ್ಯಭಾಗದಲ್ಲಿ ವಿಜಯನಗರದ ೨ನೆ ದೇವರಾಯನ ಆಸ್ಥಾನದಲ್ಲಿದ್ದ ಕಲ್ಲಪ್ಪದೇಶಿಕನು ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥಕ್ಕೆ ಸಂಗೀತ ಕಲಾನಿಧಿ ಎಂಬ ಸ್ವತಂತ್ರ ವ್ಯಾಖ್ಯಾನವನ್ನು ರಚಿಸಿದನು. ಇದು ಅಂದಿನ ಸಂಗೀತದ ವಿಕಾಸದಲ್ಲಿ ಮಾರ್ಗದರ್ಶನ ಮಾಡುವ ಶಕ್ತಿಯಾಗಿ ಪರಿಣಮಿಸಿ, ನಂತರ

ಬಂದ ಲಕ್ಷಣಕಾರರ ಮೇಲೆ ಪ್ರಭಾವ ಬೀರಿತು. ಕಲ್ಲಿನಾಥನ ಪೌತ್ರನಾಗಿದ್ದ ರಾಮಾಮಾತ್ಯ ಅಥವಾ ಬಯಕಾರ ರಾಮಪ್ಪಯ್ಯನು ಸ್ವರಮೇಳಕಲಾನಿಧಿ ಎಂಬ ಗ್ರಂಥವನ್ನು ರಚಿಸಿ ಕರ್ಣಾಟಕ ಸಂಗೀತದಲ್ಲಿ ಕ್ರಾಂತಿ ಉಂಟುಮಾಡಿದನು ಇವನ ಕಾಲದಲ್ಲಿ ಶ್ರುತಿಗಳ, ಸ್ವರಗಳ, ರಾಗಗಳ, ಮೇಳಗಳ ವಿಚಾರವಾಗಿ ಕೋಲಾಹಲವೇ ಇದ್ದಿತು. ಈ ಕೋಲಾಹಲವನ್ನು ಸರಿಪಡಿಸಿ ಲಕ್ಷ್ಯ ಮತ್ತು ಲಕ್ಷಣಗಳ ಸಮನ್ವಯ ಗೊಳಿಸಲು ಪ್ರಯತ್ನಿಸಿದನು ಇವನು ಆಧುನಿಕ ಜನಕರಾಗಗಳ ಜನಕ

ರಾಮಾಮಾತ್ಯನ ಸೂಚನೆಯನ್ನು ಗ್ರಹಿಸಿ ಮುಂದೆ ವೆಂಕಟಮಖಿಯು ತನ್ನ ಚತುರ್ದಂಡೀ ಪ್ರಕಾಶಿಕಾ ಎಂಬ ಗ್ರಂಥದಲ್ಲಿ ೭೨ ಮೇಳಕರ್ತಗಳ ವ್ಯವಸ್ಥೆಯನ್ನು ನಿರೂಪಿಸಿದನು ಆವನ ಕಾಲದಲ್ಲಿ ೧೯ ಮೇಳಗಳು ಮಾತ್ರ ಬಳಕೆಯಲ್ಲಿದ್ದವು. ಮಿಕ್ಕ ೫೩ ಮೇಳಗಳನ್ನು ಶಾಸ್ತ್ರದ ಲಕ್ಷಣದ ಸಾಮರ್ಥ್ಯದಿಂದಲೇ ನಿರೂಪಿಸಿದ್ದನು. ಆವನ ಎಲ್ಲ ರಾಗಗಳೂ ಪ್ರಚುರವಾಗಲಿಲ್ಲ. ಆದರೆ ಲಕ್ಷಣದ ವಿಧಿನಿಷೇಧಗಳನ್ನು ಗಣನೆಗೆ ತಂದುಕೊಳ್ಳದೆ, ಪ್ರಯೋಗಸಿದ್ಧವಾದ, ವ್ಯವಹಾರ ಶುದ್ಧವಾದ ಲಕ್ಷ್ಯ ಸಂಗೀತವನ್ನು ಪ್ರಚುರಪಡಿಸಿವವರು ಪುರಂದರದಾಸರು. ಜನರ ಹಿತ, ಅಗತ್ಯಗಳನ್ನು ಅರ್ಥಮಾಡಿಕೊಂಡು ಅವುಗಳಿಗನುಗುಣವಾಗಿ ಸಂಗೀತದ ಕಟ್ಟಡವನ್ನು ಚೊಕ್ಕ ಗೊಳಿಸಿದರು. ಇವರು ನೂರಾರು ಲಕ್ಷ್ಯಗೀತಗಳನ್ನು ರಚಿಸಿದರು. ಮಾಳವಗೌಳ ರಾಗದ ಹಿರಿಮೆಯನ್ನು ಸಾರಿದ್ದರು. ಸಮಾನಾಂತರ ಶ್ರುತಿಯ ಈ ರಾಗದ ಹಿರಿಮೆ ಯನ್ನು ಅರ್ಥಮಾಡಿಕೊಂಡು ಇದರ ಜನ್ಯವಾದ ಮಲಹರಿಯಲ್ಲಿ ಅಭ್ಯಾಸಿಗಳ ಅನುಕೂಲಕ್ಕೆಂದು ಗೀತಗಳನ್ನು ರಚಿಸಿದರು ಕಾಲಕ್ರಮದಲ್ಲಿ ಸಂಗೀತಾಚಾರ್ಯರ ಪಂಕ್ತಿಯಲ್ಲಿ ಅಗ್ರಸ್ಥಾನವನ್ನಾಕ್ರಮಿಸಿ ಸಂಪ್ರದಾಯದ ಗೌರವವನ್ನು ಪಡೆದು ಉಳಿದಿದ್ದಾರೆ

ವೆಂಕಟಮಖಿಯ ಸಂಪ್ರದಾಯವನ್ನನುಸರಿಸಿ ಮುತ್ತುಸ್ವಾಮಿ ದೀಕ್ಷಿತರು ಮೇಳರಾಗಗಳಲ್ಲಿ ಅವುಗಳ ಹಲವಾರು ಜನ್ಯರಾಗಗಳಲ್ಲೂ ಕೃತಿಗಳನ್ನು ರಚಿಸಿದರು. ಆದರೆ ಕರ್ಣಾಟಕ ಸಂಗೀತದಲ್ಲಿ ಅತಿಪ್ರಸಿದ್ಧ ವಾಗ್ಗೇಯಕಾರರೆನಿಸಿರುವ ತ್ಯಾಗ ರಾಜರೂ ಶ್ಯಾಮಾಶಾಸ್ತ್ರಿಗಳೂ ಈ ಪದ್ಧತಿಯನ್ನು ಅನುಸರಿಸಲಿಲ್ಲ ತ್ಯಾಗರಾಜರು ವೆಂಕಟಮಖಿಯ ನಂತರ ಇದ್ದ ಸಂಗೀತಸಾರಸಂಗ್ರಹ ಎಂಬ ತೆಲುಗು ಗ್ರಂಥವನ್ನು ರಚಿಸಿದ ಆಕಳಂಕನ ಪದ್ಧತಿಯನ್ನು ಅನುಸರಿಸಿದರು.

**ಸ್ವರೂಪ** – ಭಾವದ ಭಾಷೆಯಾದ ಸಂಗೀತದಲ್ಲಿ ನಾದವು ಸರ್ವಸ್ವ. ನಾದವು ಮನುಷ್ಯನಲ್ಲಿ ಐದು ಬಗೆಯಾಗಿ ಐದು ಸ್ಥಳಗಳಿಂದ ಏಳುತ್ತದೆ. ಆದರೆ ವ್ಯವಹಾರ ದಲ್ಲಿ ಹೃದಯದಿಂದೆದ್ದ ಮಂದ್ರ, ಕಂಠದಿಂದೆದ್ದ ಮಧ್ಯ, ಶಿರಸ್ಸಿನಿಂದೆದ್ದ ತಾರ ಇವು ಗಳನ್ನು ಮಾತ್ರ ಪರಿಗಣಿಸುತ್ತಾರೆ. ಅವಕ್ಕೆ ಸ್ಥಾಯಿ ಎಂದು ಹೆಸರು. ಪ್ರತಿ ಸ್ಥಾಯಿಯಲ್ಲೂ ಶ್ರುತಿಗಳಿರುತ್ತವೆ. ಇವುಗಳ ಸಂಖ್ಯೆ ಇಪ್ಪತ್ತೆರಡು. ಇವುಗಳ ನಡುವೆ ಅನುರಣನದಿಂದ ಯುಕ್ತವಾದ ಏಳು ಸ್ವರಗಳಿವೆ. ಇವು ಷಡ್ಜ, ಋಷಭ,

ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಇವುಗಳಲ್ಲಿ ಸ ಮತ್ತು ಪ ಗಳಲ್ಲಿ ವಿಕಾರವೇ ಇಲ್ಲ. ಇವು ನಿತ್ಯಶುದ್ಧ. ಮಿಕ್ಕವು ಶ್ರುತಿಯ ಹೆಚ್ಚಳ ಅಥವಾ ತಗ್ಗು ಇವುಗಳಿಂದ ವಿಕೃತ ಸ್ವರಗಳಾಗಿವೆ. ರಿ ಯಲ್ಲಿ ಮೂರು, ಗ ದಲ್ಲಿ ಮೂರು, ಮ ದಲ್ಲಿ ಎರಡು, ಧ ದಲ್ಲಿ ಮೂರು, ನಿ ಯಲ್ಲಿ ಮೂರು ವಿಕಾರಗಳಿವೆ. ಸ್ವರಗಳನ್ನು ಹಾಡುವುದಕ್ಕೆ ವರ್ಣ ಎಂದು ಹೆಸರು. ಒಂದೇ ಸ್ವರವನ್ನು ಮೂರಾವರ್ತಿ ವಿಳಂಬ ಕಾಲದಲ್ಲಿ ಉಚ್ಚರಿಸಿದರೆ ಅದಕ್ಕೆ ಸ್ಥಾಯೀ ಎಂದು ಹೆಸರು. ಕ್ರಮ ಹಿಡಿದು ಒಂದು ಸ್ವರದಿಂದ ಮೇಲಿನ ಸ್ವರಗಳನ್ನು ಹತ್ತಿದರೆ ಅದು ಆರೋಹಿ, ಹಾಗೆಯೇ ಕ್ರಮಹಿಡಿದು ಇಳಿದರೆ ಅವರೋಹಿಯಾಗುತ್ತದೆ. (ರಿ ಗ ಮ ಪ-ನಿ ಧ ಪ ಮ) ಈ ಆರೋಹಿ ಅವರೋಹಿಗಳನ್ನು ಕಲೆಸಿದಂತೆ ಸ್ವರಗಳನ್ನು ಹಾಡಿದರೆ ಅದು ಸಂಚಾರಿ ಎನಿಸಿಕೊಳ್ಳುತ್ತದೆ. ಇಂಥ ವರ್ಣಗಳನ್ನು ಕ್ರಮವರಿತು ಸೇರಿಸಿದರೆ ಅಲಂಕಾರವಾಗುತ್ತದೆ.

ಕೇಳುವವರಿಗೆ ಹಿತವೆನಿಸುವಂತೆ ಸ್ವರವನ್ನು ಕಂಪಿಸುವುದು ಗಮಕ. ಸಾಮಾನ್ಯವಾಗಿ ಬಳಕೆಯಲ್ಲಿ ಹತ್ತು ಬಗೆಯ ಗಮಕಗಳಿವೆ. ಸ್ವರಗಳಲ್ಲಿ ವಾದಿ, ಸಂವಾದಿ, ಅನುವಾದಿ, ವಿವಾದಿ ಎಂಬ ನಾಲ್ಕು ವಿಧಗಳಿವೆ.

ನಮ್ಮ ಸಂಗೀತದ ವೈಶಿಷ್ಟ್ಯವೆಂದರೆ ರಾಗಪದ್ಧತಿ. ರಾಗವೆಂದರೆ ಸಂತೋಷಪಡಿಸುವುದು ಎಂದರ್ಥ. ಸಪ್ತಸ್ವರಭೇದಗಳಲ್ಲಿ ಐದಕ್ಕೆ ಕಮ್ಮಿಯಿಲ್ಲದೆ ಸ್ವರಗಳನ್ನು ಆಯ್ದು ಅವನ್ನು ಆಧಾರಷಡ್ಜಕ್ಕೆ ಸಂಬಂಧಿಸಿದಂತೆ ಒಂದು ಕ್ರಮದಲ್ಲಿ ಸೇರಿಸಿ ಹಾಡಿದರೆ ರಾಗವಾಗುತ್ತದೆ. ಏಳು ಸ್ವರಗಳಿದ್ದರೆ ಸಂಪೂರ್ಣರಾಗವಾಗುತ್ತದೆ ಆರೋಹಣ—ಅವರೋಹಣದಲ್ಲಿ ಎರಡರಲ್ಲೂ ಸಂಪೂರ್ಣವಾಗಿದ್ದರೆ ಅಂಥ ರಾಗಕ್ಕೆ ಮೇಳಕರ್ತ ಅಥವಾ ಜನಕರಾಗ ಎಂದು ಹೆಸರು. ಇಂಥ ಮೇಳಕರ್ತಗಳನ್ನು ವೆಂಕಟಮುಖಿ ತನ್ನ ಚತುರ್ದಂಡಿ ಪ್ರಕಾಶಿಕೆಯಲ್ಲಿ ಎಪ್ಪತ್ತೆರಡಾಗಿ ವಿಭಾಗ ಮಾಡಿದ್ದಾನೆ. ಉಳಿದ ರಾಗಗಳಲ್ಲಿ ಹೀಗೆ ಸಪ್ತಸ್ವರಗಳು ಇರುವುದಿಲ್ಲ. ಸ್ವರಗಳ ಆರೋಹಣಾವರೋಹಣ ಕ್ರಮಯುಕ್ತವೂ ಇರುವುದಿಲ್ಲ. ಇವು ವರ್ಜ್ಯರಾಗಗಳಾಗುತ್ತವೆ ಹಾಗೂ ಜನ್ಯರಾಗಗಳೆನಿಸಿಕೊಂಡಿವೆ. ಇಂಥ ರಾಗಗಳ ಸಂಖ್ಯೆ ಅನಂತವಾದರೂ ಸುಮಾರು ೮೦೦ ಬಳಕೆಯಲ್ಲಿವೆ. ತಂತಮ್ಮ ಮೇಳಕರ್ತೃಗಳಲ್ಲಿ ಬಂದಂಥವೇ ಜಾತಿಯ ಸ್ವರಗಳನ್ನು ಮಾತ್ರ ಜನ್ಯರಾಗಗಳೂ ಹೊಂದಿದ್ದರೆ ಅಂಥವಕ್ಕೆ ಉಪಾಂಗರಾಗಗಳೆನ್ನುತ್ತಾರೆ. ತಂತಮ್ಮ ಮೇಳಗಳ ಸ್ವರಗಳ ಜೊತೆಗೆ ವಿಜಾತೀಯ ಸ್ವರಗಳೂ ಜನ್ಯರಾಗದಲ್ಲಿದ್ದರೆ ಅದು ಭಾಷಾಂಗರಾಗ. ಜನ್ಯರಾಗಗಳಲ್ಲಿ ವಿವಿಧ ಜಾತಿಗಳಿವೆ. ಮೇಳಕರ್ತೃರಾಗ ಗೊತ್ತಾಗಿದ್ದರೆ ಅದರ ಮೇಳ ಸಂಖ್ಯೆ ಇದೇ ಎಂದು ಹೇಳಲು ಕಟಪಯಾದಿ ಸಂಖ್ಯಾಯಂತ್ರವನ್ನು ಉಪಯೋಗಿಸುತ್ತಾರೆ.

ರಾಗಗಳನ್ನು ಶುದ್ಧರಾಗಗಳು, ಛಾಯಾಲಗ, ಸಂಕೀರ್ಣ ಅಥವಾ ಮಿಶ್ರ ಎಂದೂ ವಿಂಗಡಿಸುತ್ತಾರೆ ಭಾವಸ್ಫುರಣದ ದೃಷ್ಟಿಯಿಂದ ರಾಗವನ್ನು ಘನ, ನಯ,

ರಕ್ತಿ, ದೇಶ್ಯರಾಗಗಳೆಂದೂ, ಕೆಲವು ರಾಗಗಳನ್ನು ನಿರ್ದಿಷ್ಟಕಾಲದಲ್ಲಿ ಹಾಡಿದರೆ ಅದರ ಇಂಪು ಸೊಗಸು ಇರುವುದೆಂದು, ರಾಗಗಳನ್ನು ಬೆಳಗಿನ ರಾಗಗಳು, ಮಧ್ಯಾಹ್ನದ ರಾಗಗಳು, ರಾತ್ರಿಯ ರಾಗಗಳು, ಸಾರ್ವಕಾಲಿಕ ರಾಗಗಳೆಂದೂ, ಕೆಲವು ಗ್ರಂಥಗಳಲ್ಲಿ ರಾಗಗಳನ್ನು ಪುರುಷ ಮತ್ತು ಸ್ತ್ರೀ ರಾಗಗಳೆಂದೂ ಹೇಳಿದ್ದಾರೆ. ಇವಲ್ಲದೆ ಲಕ್ಷಣ ಗ್ರಂಥಗಳಲ್ಲಿ ರಾಗಕ್ಕೆ ೧೩ ಲಕ್ಷಣಗಳನ್ನು ಹೇಳಿದ್ದಾರೆ.

ನಮ್ಮ ಸಂಗೀತದಲ್ಲಿ ರಾಗ ಎಷ್ಟು ಮುಖ್ಯವೋ ತಾಳ ಅಷ್ಟೇ ಮುಖ್ಯ. ತಾಳ ಎಂದರೆ ಕಾಲನಿಯತಿ. ಅದಕ್ಕೆ ನಮ್ಮ ಸಂಗೀತದಲ್ಲಿ ಪ್ರಮುಖಸ್ಥಾನ. ಸಾಮಾನ್ಯವಾಗಿ ವ್ಯವಹಾರದಲ್ಲಿ ಸುಳಾದಿ ಸಪ್ತತಾಳಗಳು ರೂಢಿಯಲ್ಲಿವೆ. ಲಘುವಿನ ಜಾತಿ ಭೇದದಿಂದ ೩೫ ತಾಳಗಳಾಗುತ್ತವೆ. ಈ ಏಳು ಸುಳಾದಿ ತಾಳಗಳಲ್ಲಿ ಪುರಂದರದಾಸರು ಅಲಂಕಾರಗಳನ್ನು ಹೆಣೆದಿದ್ದಾರೆ. ಇವಕ್ಕೆ ತಾಳಾಲಂಕಾರಗಳೆಂದು ಹೆಸರು.

ಕರ್ಣಾಟಕ ಸಂಗೀತ ಕಲಿಯಲಾರಂಭಿಸುವವರು ಮೊದಲು ಸ್ವರಾವಳಿ, ಅಲಂಕಾರಗಳು, ನಂತರ ಗೀತಗಳನ್ನು ಕಲಿತು, ತರುವಾಯ ಸ್ವರಜತಿ, ವರ್ಣ ಕಲಿಯುತ್ತಾರೆ ವರ್ಣಗಳಾದ ಮೇಲೆ ಕೃತಿಯನ್ನು ಕಲಿಯುತ್ತಾರೆ. ಕೃತಿಯೇ ಸಂಗೀತಸಾಹಿತ್ಯ ರಚನೆಯ ಪರಾಕಾಷ್ಠತೆ. ಇದರ ನಡುವೆ ಮಧ್ಯಮಕಾಲ ಸಾಹಿತ್ಯ ವಿರಬಹುದು. ಸಾಹಿತ್ಯದ ಕೆಲವು ಕಡೆ ಸಂಗತಿಗಳಿರಬಹುದು. ಇವೆಲ್ಲ ಮಾಧುರ್ಯ ವರ್ಧಕ ಸಾಧನಗಳು. ಕೃತಿಯಲ್ಲಿ ಧಾತು ಅಂದರೆ ಸ್ವರ ಮತ್ತು ಮಾತು ಅಂದರೆ ಸಾಹಿತ್ಯ ಇವೆರಡೂ ಇರುತ್ತವೆ. ಕೃತಿಯ ಮೊದಲು ಹಾಡುವುದು ಆಲಾಪನೆ, ತಾನ ಇವುಗಳೂ, ಕೃತಿಯಲ್ಲಿ ಪಲವಿಗೆ ಸಂಗತಿಗಳನ್ನು ಹಾಕಿ ಹಾಡುವುದೂ ಸಂಗೀತ ಸಾಧನೆಯ ಕಲಶ. ಇದಕ್ಕೆ ಮನೋಧರ್ಮಸಂಗೀತವೆನ್ನುತ್ತಾರೆ. ರಾಗಾಲಾಪನೆಯಲ್ಲಿ ನಾಲ್ಕು ಹಂತಗಳಿವೆ. ಮುನ್ನುಡಿಯಂತೆ ಸ್ವಲ್ಪದರಲ್ಲಿ ರಾಗದ ಲಕ್ಷಣ ಪೂರ್ತಿ ಸಂಗ್ರಹಿಸುವುದು ಆಕ್ಷಿಪ್ತಿಕಾ ನಂತರ ಮಂದ್ರ, ಮಧ್ಯ, ತಾರಸ್ಥಾಯಿಗಳಲ್ಲಿ ವಿಳಂಬ ಕಾಲದಲ್ಲಿ ಸಂಚಾರ, ನಂತರ ದ್ರುತಕಾಲದ ಸಂಚಾರ ಅಥವಾ ಮೂರ್ಛನಾಪ್ರಸ್ತಾರ. ಇವು ರಾಗವರ್ಧಿನೀ ಕಡೆಯದಾಗಿ ಮಕರಿಣೀ ಅಥವಾ ತಾನ ಆಲಾಪನೆ ಮುಗಿದ ಮೇಲೆ ಪಲ್ಲವಿ ಹಾಡುವುದು ಅಂದರೆ ಸಾರಿಸಾರಿಗೂ ಪಲ್ಲವಿಯ ಸ್ವರಸಾಹಿತ್ಯ ಹಿಗ್ಗಿಸುವುದೆಂದರ್ಥ. ಇದಾದ ಮೇಲೆ ಹಾಡುವ ಕಲ್ಪನಾಸ್ವರವೂ ಮನೋಧರ್ಮ ಸಂಗೀತ.

ವಾಗ್ಗೇಯಕಾರರಲ್ಲಿ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ವೀಣಾ ಕುಪ್ಪಯ್ಯರ್, ತಿರುವೋಟ್ಟಿಯೂರು ತ್ಯಾಗಯ್ಯರ್, ಸ್ವಾತಿ ತಿರುನಾಳ್, ಮೈಸೂರು ಸದಾಶಿವರಾವ್, ಪಲ್ಲವಿ ಗೋಪಾಲ ಅಯ್ಯರ್, ವೀಣೆ ಶೇಷಣ್ಣ, ಮೈಸೂರು ವಾಸುದೇವಾಚಾರ್ಯರೇ ಮುಂತಾದವರು ಪ್ರಸಿದ್ಧರು. ಕರ್ಣಾಟಕ ಸಂಗೀತ ಕಚೇರಿಯಲ್ಲಿ ವರ್ಣ, ನಂತರ ಪ್ರಸಿದ್ಧ ವಾಗ್ಗೇಯಕಾರರ ಕೃತಿಗಳು, ದೇವರನಾಮಗಳು, ಶ್ಲೋಕ, ರಾಗಮಾಲಿಕೆ, ತಿಲ್ಲಾನ, ಭಜನ್‌ಗಳನ್ನು ಹಾಡಿ ಮುಗಿಸುತ್ತಾರೆ.

**ಕರ್ಣಾಟಕ ಸಾರಂಗ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಮ ಪ ಮ ಗ ರಿ ಸ

ಶಾರಂಗಪಾಣಿಯು ರಚಿಸಿರುವ 'ಚೆಪ್ಪಿನಂತ ಮಾಟ' ಎಂಬ ತ್ರಿಪುಟತಾಳದ ಪದವು ಈ ರಾಗದಲ್ಲಿದೆ.

**ಕರ್ಣಾಟಕ ಸುರಟಿ**—ಈ ರಾಗವು ೪ನೆಯ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ರಿ ಸ

**ಕರ್ಣಾಟಕ ಸಂಗೀತ ಪಿತಾಮಹ**—ಹರಿದಾಸ ಶ್ರೇಷ್ಠರಾದ ಪುರಂದರ ದಾಸರಿಗೆ (೧೪೮೪–೧೫೬೫) ಸಂದಿರುವ ಬಿರುದು. ಅವರು ಕರ್ಣಾಟಕ ಸಂಗೀತಕ್ಕೆ ವೈಜ್ಞಾನಿಕ ತಳಹದಿ ಹಾಕಿ ಅದು ವಿಪುಲವಾಗಿ ಬೆಳೆಯಲು ಕಾರಣರಾದರು.

**ಕರ್ಣಾಟಕ ಲಘು**—ಇದು ೧೬ ಅಕ್ಷರಕಾಲವಿರುವ ಒಂದು ಲಘು. ಒಂದು ಘಾತ ಮತ್ತು ೧೫ ಬೆರಳೆಣಿಕೆಯಿಂದ ಇದನ್ನು ಲೆಕ್ಕಮಾಡಲಾಗುತ್ತದೆ. ಇದಕ್ಕೆ ದೇಶ್ಯ ಶುದ್ಧ ಸಂಕೀರ್ಣಲಘುವೆಂದು ಹೆಸರು.

**ಕತ್ತರಿಮೀಟು**—ತಂತೀವಾದ್ಯವನ್ನು ನುಡಿಸುವ ವಿಧಾನಕ್ಕೆ ಮೀಟು ಎಂದು ಹೆಸರು. ತಂತಿಗಳನ್ನು ಮೀಟುವ ವಿಧಾನವು ೨೩ ಬಗೆಯಾಗಿದೆ. ಇದು ವೀಣೆಗೆ ಸಂಬಂಧಿಸಿದ ಮೀಟು ತರ್ಜನಿ ಬೆರಳು ಮತ್ತು ಮಧ್ಯದ ಬೆರಳಿನಿಂದ ಒಂದರನಂತರ ಇನ್ನೊಂದರಿಂದ ಮೀಟಿ ಕಂಪನ ಉಂಟುಮಾಡುವ ವಿಧಾನಕ್ಕೆ ಕತ್ತರಿಮೀಟು ಎಂದು ಹೆಸರು.

**ಕತ್ತಿರಿ** – ಇದೊಂದು ಬಗೆಯ ಮದ್ದಳೆ.

**ಕರ್ತರೀ**—ಭರತನಾಟ್ಯದ ಉತ್ಪ್ಲವನ ಭೇದಗಳಲ್ಲಿ ಒಂದುವಿಧ. ಮುಂಗಾಲಿನ ಬೆರಳುಗಳ ಮೇಲೆ ಕುಪ್ಪಳಿಸುತ್ತಾ ಎಡಗಾಲಿನ ಹಿಂದುಗಡೆ ಕರ್ತರೀ ಮುಖ ಹಸ್ತವನ್ನೂ, ಸೊಂಟದ ಮೇಲೆ ಕೆಳಮುಖವಾಗಿ ಶಿಖರಹಸ್ತವನ್ನೂ ಪ್ರದರ್ಶಿಸುವುದು ಕರ್ತರೀ ಉತ್ಪ್ಲವನವೆನಿಸುವುದು.

**ಕರ್ತರೀಮುಖಹಸ್ತ**—ಭರತನಾಟ್ಯದ ಅಸಂಯುತ ಹಸ್ತಭೇದಗಳಲ್ಲಿ ಒಂದು ವಿಧ. ಅರ್ಧಪತಾಕಹಸ್ತದಲ್ಲಿನ ಕಿರುಬೆರಳನ್ನು ಚಾಚಿ ತರ್ಜನೀ ಮಧ್ಯಮಗಳನ್ನು ಕತ್ತರಿಯ ಬಾಯಂತೆ ಅಗಲಿಸುವುದಕ್ಕೆ ಕರ್ತರೀ ಮುಖವೆಂದು ಹೆಸರು. ಸ್ತ್ರೀ ಪುರುಷರ ಅಗಲಿಕೆ, ವಿಪರ್ಯಾಸ, ಲೂಟಿ, ಕಡೆಗಣ್ಣನೋಟ, ಸಾವು. ಭೇದಭಾವ, ಮಿಂಚು, ಏಕಶಯ್ಯೆ, ವಿರಹ, ಪತನ, ಬಳ್ಳಿ ಇವುಗಳನ್ನು ಸೂಚಿಸುವುದೇ ಈ ಹಸ್ತ ಲಕ್ಷಣ.

**ಕರ್ತರೀಸ್ವಸ್ತಿಕ**—ಭರತನಾಟ್ಯದ ಸಂಯುತ ಹಸ್ತಗಳಲ್ಲಿ ಇದೊಂದು ಭೇದ. ಕರ್ತರೀಮುಖ ಹಸ್ತಗಳನ್ನು ಸ್ವಸ್ತಿಕಾಕಾರವಾಗಿ ಹಿಡಿಯುವುದೇ ಕರ್ತರೀ ಸ್ವಸ್ತಿಕ ಹಸ್ತ. ಮರದ ಕೊಂಬೆಗಳು, ಬೆಟ್ಟದ ಶಿಖರಗಳು, ವೃಕ್ಷಗಳು ಇವುಗಳನ್ನು ಪ್ರದರ್ಶಿಸಲು ಈ ಹಸ್ತ ವಿನಿಯೋಗವಾಗುವುದು.

**ಕತ್ತಳೆ**—ಈ ರಾಗವು ೬೩ನೆಯ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ಕಥಕ್**—ಭಾರತದಲ್ಲಿ ನಾಲ್ಕು ಬಗೆಯ ನಾಟ್ಯಸಂಪ್ರದಾಯಗಳಿವೆ ಇವುಗಳಲ್ಲಿ ಕಥಕ್ ಎಂಬುದು ಉತ್ತರಭಾರತದಲ್ಲಿರುವ ಸಂಪ್ರದಾಯ ಇದರಲ್ಲಿ ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಗಳ ಮಿಶ್ರಣವನ್ನು ಕಾಣಬಹುದು. ಶ್ರೀಮಂತರನ್ನೂ ಅರಸರನ್ನೂ ಆನಂದಪಡಿಸಲು ಈ ನೃತ್ಯವನ್ನು ಅಳವಡಿಸಿದರು. ಆದರೂ ಈ ಪದ್ಧತಿಯಲ್ಲಿ ಲಾಲಿತ್ಯ ಮತ್ತು ತಾಳ ವೈಚಿತ್ರ್ಯವು ಬೆಳೆದುಬಂದಿವೆ. ಈ ನೃತ್ಯದಲ್ಲಿ ಭರತನಾಟ್ಯ ಮತ್ತು ಕಥಕಳಿ ಪದ್ಧತಿಗಳಿಗಿರುವಂತೆ ಆಧ್ಯಾತ್ಮಿಕ ಹಿನ್ನೆಲೆ ಇಲ್ಲ. ಹೀಗಿದ್ದರೂ ಕಥಕ್ ಒಂದು ಶಾಸ್ತ್ರೀಯ ಪದ್ಧತಿಯಾಗಿತ್ತು. ಕಾಲಕ್ರಮೇಣ ಸಂಪ್ರದಾಯವು ತಪ್ಪಿ ಈಗಿನ ರೂಪನ್ನು ಹೊಂದಿದೆ.

ಲಕ್ನೋ ಮತ್ತು ಜಯಪುರವು ಈ ಸಂಪ್ರದಾಯದ ಕೇಂದ್ರಗಳಾಗಿವೆ. ಲಕ್ನೋವಿನಲ್ಲಿದ್ದ ಕಲ್ಕಾ ಮತ್ತು ಬಿಂದಾ ಎಂಬುವರು, ಅವರ ವಂಶಜರಾದ ಅಚ್ಚನ್, ಲಚ್ಚನ್ ಮತ್ತು ಶಂಭು ಮಹಾರಾಜ್, ಕಲ್ಕತ್ತದ ಸುಖದೇವ್ ಮಹಾರಾಜ್, ಜಯಪುರದ ಜಯಲಾಲ್ ಮತ್ತು ರತಿಲಾಲ್ ಎಂಬುವರು ಕಥಕ್ ನೃತ್ಯದ ಪ್ರತಿಭಾವಂತ ಆಚಾರ್ಯರು. ಈ ನೃತ್ಯಕಲೆಯು ಉತ್ತರಭಾರತದ ದೇವಾಲಯಗಳಲ್ಲಿ ಮೊದಲಾಯಿತು. ಇದು ನೃತ್ತ, ನೃತ್ಯ ಮತ್ತು ಅಭಿನಯಗಳೆಂಬ ಮೂರು ಭಾಗಗಳನ್ನು ಒಳಗೊಂಡಿದೆ. ಅತ್ಯಂತ ಪುರಾತನ ಕಾಲದಿಂದ ಸಂಗೀತ, ನೃತ್ಯ ಮತ್ತು ಕಥೆ ಹೇಳುವ ಕಲೆಯಲ್ಲಿ ಪ್ರವೀಣರಾಗಿದ್ದ ಕಥಕರೆಂಬ ಕಲಾವಿದರಿದ್ದರು. ಕಥನಕಲೆಯು ಕಾಲಾನುಕ್ರಮದಲ್ಲಿ ವಂಶಪಾರಂಪರ್ಯವಾಗಿ ಬಂದ ಕಲೆಯಾಯಿತು. ಈ ಕಲಾವಿದರ ಸಂಪರ್ಕದಿಂದ ಇದಕ್ಕೆ ಕಥಕ್ ಎಂಬ ಹೆಸರು ಬಂದಿತು. ರಾಸಮಂಡಲಿಯ ಕಲಾವಿದರು ಕೀರ್ತಮಂಡಲಿಯ ಕಲಾವಿದರು ಕೀರ್ತನೆಗಳನ್ನು ಹಾಡಿದರೆ, ಅವುಗಳಗೆ ಅಭಿನಯದ ಮೂಲಕ ನೃತ್ಯವಾಡುತ್ತಿದ್ದರು

ಕಥಕ್ ಪದ್ಧತಿಯಲ್ಲಿ ತಾಳವೈಚಿತ್ರ್ಯದ ಚಲನೆಗಳಿಗೂ, ಚಲನ ವೇಗಕ್ಕೂ, ತೀವ್ರ ತಿರುಗುವಿಕೆಗೂ ಹೆಚ್ಚಾದ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಹಿಂದೂಸ್ಥಾನೀ ಸಂಗೀತದ ಯಾವುದಾದರೂ ಒಂದು ತಾಳಕ್ಕೆ ತಬಲ ಅಥವಾ ಪಕ್‌ವಾಜ್ ನುಡಿಸುವ ವಿವಿಧ ತಾಳವೈಚಿತ್ರ್ಯಗಳಿಗೆ ಅನುಸಾರವಾಗಿ ನೃತ್ಯಗಾರನು ಪಾದ ಮತ್ತು ಹಸ್ತ ಚಲನೆಗಳನ್ನು ಮಾಡಬೇಕಾಗುತ್ತದೆ. ಈ ನೃತ್ಯದ ಶಾಸ್ತ್ರೀಯ ನಾಟ್ಯಾಚಾರ್ಯರು

ಇದಕ್ಕೆ ಗಂಭೀರವಾದ, ಮನಮೋಹಕವಾದ, ಲಾಲಿತ್ಯಮಯವಾದ ರೂಪವನ್ನು ಕೊಟ್ಟಿದ್ದಾರೆ. ಭರತನಾಟ್ಯವು ಶಿಲ್ಪಶಾಸ್ತ್ರದಿಂದ ಹೇಗೆ ಭಂಗಿಗಳನ್ನು ಅನುಸರಿಸಿದೆಯೋ ಹಾಗೆಯೇ ಕಥಕ್ ಪದ್ಧತಿಯು ರಾಜಪುತ್ರರ ಚಿತ್ರಕಲೆಯಿಂದ ಮತ್ತು ಮೊಗಲರ ಕಲಾ ಸಂಪತ್ತಿನಿಂದ ಸ್ಫೂರ್ತಿ ಪಡೆದಿದೆ. ಇದರಲ್ಲಿ ಅನೇಕ ಮುದ್ರೆಗಳು ರೂಢಿಯಲ್ಲಿವೆ. ನೃತ್ಯಗಾರನು ತನ್ನ ಮನೋಭಾವಕ್ಕೆ ಸರಿಯಾಗಿ ವಿಷಯವನ್ನು ವ್ಯಕ್ತಗೊಳಿಸಲು ಮನಬಂದಂತೆ ಮುದ್ರೆಗಳನ್ನು ಉಪಯೋಗಿಸುವ ಸ್ವಾತಂತ್ರ್ಯವುಳ್ಳವನಾಗಿದ್ದಾನೆ. ಇದು ಕಲಾವಿದನ ಸಹಜವಾದ ಕೌಶಲ್ಯವನ್ನು ತಿಳಿಯಲು ಸಹಾಯಕವಾಗಿದೆ. ಸಂಪ್ರದಾಯಬದ್ಧವಾದ ಕಥಕ್ ಪ್ರದರ್ಶನವು ಈ ರೀತಿ ಇರುತ್ತದೆ.

ಉದ್ದಕ್ಕೆ ನೆರಿಗೆಗಳಿರುವ ಒಂದು ಕುರ್ತಾ, ಸುರವಾಲ್, ಜರಿಯಟೋಪಿ ಮುಂತಾದ ವೇಷಭೂಷಣಗಳಿಂದ ಅಲಂಕೃತನಾದ ಕಲಾವಿದನು ರಂಗಸ್ಥಳದಲ್ಲಿ ನಿಲ್ಲುತ್ತಾನೆ. ಸಾರಂಗಿ, ತಬಲ ಅಥವಾ ಪಕ್‌ವಾಜ್‌ವಾದಕರು ಪಕ್ಕವಾದ್ಯ ನುಡಿಸಲು ಕುಳಿತಿರುತ್ತಾರೆ. ತಬಲವಾದಕನು ಒಂದು ತಾಳವನ್ನು ಪ್ರಧಾನವಾಗಿಟ್ಟುಕೊಂಡು ಅದರ ವೈವಿಧ್ಯತೆಯನ್ನು ತೋರಿಸುತ್ತಾನೆ. ಆ ಪ್ರತಿಯೊಂದು ವಿಧಾನವನ್ನೂ ಕಲಾವಿದನು ಬಾಯಿಂದ ಉಚ್ಚರಿಸಿ ಅನಂತರ ಕೈ ಚಲನ ಮತ್ತು ಪಾದಚಲನೆಗಳಿಂದ ಆ ತಾಳವನ್ನು ಪ್ರದರ್ಶಿಸುತ್ತಾನೆ. ಕಾಲುಗಳಿಗೆ ಗೆಜ್ಜೆಕಟ್ಟಿಕೊಂಡು ನಾಟ್ಯವಾಡುವುದು ಭರತನಾಟ್ಯದ ನೃತ್ತಕ್ಕೆ ಸಮಾನವಾದುದು. ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ಪ್ರದರ್ಶಿಸುವ ಈ ನೃತ್ಯವನ್ನು ಇಂದು ವೃಂದಗಳು ಮಾಡುತ್ತವೆ. ಮೊದಲು ವಂದನದಂತಿರುವ ಸಲಾಮಿ ಅಥವಾ ಶುರುಕೆ ಅಹಮದ್ ಎಂಬುದನ್ನು ಮಾಡಿ ಕೈಗಳನ್ನು ಎದೆಯ ಹತ್ತಿರ ಅಚಲವಾಗಿ ಹಿಡಿದಿರುತ್ತಾನೆ. ಸಾರಂಗಿವಾದಕನು ಒಂದು ಲೆಹರಾ ಅಥವಾ ಧೂನ್ (ಭರತನಾಟ್ಯದ ಜತಿಸ್ವರದಂತೆ) ನುಡಿಸುವ ವೇಳೆಗೆ ನಾಟ್ಯಕಲಾವಿದನು ಚಲಿಸಲು ತೊಡಗುತ್ತಾನೆ. ಅಲ್ಲಿಯವರೆಗೆ ಇವನು ಪ್ರೇಕ್ಷಕವೃಂದವನ್ನು ಆಕರ್ಷಿಸುವಂತೆ ದಿಟ್ಟಿಸಿ ನೋಡಿ ನೃತ್ಯಕ್ಕೆ ತಕ್ಕ ವಾತಾವರಣವನ್ನು ಕಲ್ಪಿಸಿಕೊಳ್ಳುತ್ತಾನೆ. ಇದಕ್ಕೆ ಥಾಟ್ ಎಂದು ಹೆಸರು. ಇದು ಭರತನಾಟ್ಯದ ಸಭಾವಂದನಕ್ಕೆ ಸಮಾನವಾದುದು. ನಂತರ ತತ್ಕಾರ್ ಎಂಬ ತಾಳ. ಹೆಜ್ಜೆಗಳನ್ನು ಹಾಕುತ್ತಾನೆ. ಇದಾದ ನಂತರ ಒಂದರ ಹಿಂದೊಂದು ತಿರುಗುವಿಕೆಗಳನ್ನು ಪ್ರದರ್ಶಿಸುತ್ತಾನೆ. ಇದಕ್ಕೆ ಚಕ್ಕರ್ ಎಂದು ಹೆಸರು. ತಾಳವೈವಿಧ್ಯದಿಂದ ಕೂಡಿದ ಬೋಲ್‌ಗಳನ್ನು ಮಾಡಿ ತೊಡಕಾಗಿರುವ ಪಾದವಿನ್ಯಾಸಗಳನ್ನು ಮಾಡಿ ಸಭಿಕರನ್ನು ಬೆರಗುಗೊಳಿಸುತ್ತಾನೆ ಬೋಲ್‌ಗಳಲ್ಲಿ ಮೂರು ವಿಧಗಳಿವೆ.

(೧) ತುಕ್ರಾ—ಇದು ಚಿಕ್ಕ ತಾಳ ವೈಚಿತ್ರ್ಯ ಪ್ರದರ್ಶನ

(೨) ಪರನ್—ಒಂದು ದೊಡ್ಡ ತುಕ್ರಾವನ್ನು ಪೂರ್ಣವಾಗಿ ಪ್ರದರ್ಶಿಸುವ ಒಂದು ಜಟಿಲವಾದ ವಿಧಾನ.

(೩) ನಟವರಿ—ಸ್ತೋತ್ರ, ಗೀತ, ಪದ್ಯಗಳಿಗೆ ಮಾಡುವ ತಾಳಲಯಬದ್ಧವಾದ

ಪಾದವಿನ್ಯಾಸ. ಇದರಲ್ಲಿ ಹೆಚ್ಚಾಗಿ ರಾಧಾಕೃಷ್ಣರ ವರ್ಣನೆಗಳಿವೆ. ತಾಂಡವತೋಡ ಎಂಬುದು ತಾಳಲಯಬದ್ಧವಾದ ಪಾದವಿನ್ಯಾಸಗಳ ವಿವಿಧ ಗುಚ್ಛಗಳು. ಇವು ತುಕ್ರಾ ಜಾತಿಗೆ ಸೇರಿವೆ. ಇವು ಶಿವನ ಲೀಲೆಗಳನ್ನು ವರ್ಣಿಸುತ್ತವೆ.

ಬೋಲ್‌ಗಳಾದ ಮೇಲೆ ಭರತನಾಟ್ಯವನ್ನು ಹೋಲುವಂತಹ ಪಾದವಿನ್ಯಾಸ ಮತ್ತು ಅಭಿನಯಮಿಶ್ರಿತವಾದ ಗತ್‌ಗಳು ಬರುತ್ತವೆ. ಕಥೆಯ ಮೂಲವಸ್ತು ರಾಧಾ ಕೃಷ್ಣರು. ಒಬ್ಬನೇ ಎಲ್ಲರ ಪಾತ್ರಗಳನ್ನು ಅಭಿನಯಿಸುತ್ತಾನೆ. ಗಂಡು ಮತ್ತು ಹೆಣ್ಣು ನಮ್ಮ ಕಣ್ಣೆದುರಿಗೆ ಬೇರೆಯಾಗಿದ್ದಂತೆ ಪ್ರದರ್ಶಿಸುವ ನಾಟ್ಯಕಲಾವಿದನ ಅಭಿನಯವು ಅಸಮಾನವಾದುದು. ಈ ನೃತ್ಯಪದ್ಧತಿಯಲ್ಲಿ ಹೆಣ್ಣು ಮತ್ತು ಗಂಡು ಒಂದೇ ತರಹದ ಉಡಿಗೆತೊಡಿಗೆಗಳನ್ನು ಹಾಕಿಕೊಳ್ಳುವುದು ಒಂದು ವೈಶಿಷ್ಟ್ಯ.

ಕೊನೆಯಲ್ಲಿ ನಾಟ್ಯಕಲಾವಿದನು ಕುಳಿತುಕೊಂಡು ಪಕ್ಕವಾದ್ಯಗಳ ಸಹಿತ ತುಮ್ರಿ, ಥಪ್ಪ, ದಾದ್ರ, ಗಜಲ್ ಮುಂತಾದ ಪ್ರೇಮಗೀತೆಗಳನ್ನು ಹಾಡಿ, ಅವಕ್ಕೆ ಅನುಗುಣವಾಗಿ ಪ್ರದರ್ಶನ ನೀಡುತ್ತಾನೆ. ಇದಕ್ಕೆ ಅದಾ ಎಂದು ಹೆಸರು. ಇವು ಭರತನಾಟ್ಯದ ಜಾವಳಿಗಳನ್ನೂ, ಪದಗಳನ್ನೂ ಹೋಲುತ್ತವೆ. ಕೆಲವು ಸಲ ರಾಮಾಯಣ ಮತ್ತು ಮಹಾಭಾರತಗಳ ಕಥೆಗಳನ್ನು ನಿರೂಪಿಸುವುದುಂಟು. ಆದರೆ ಸಾಮಾನ್ಯವಾಗಿ ಶೃಂಗಾರರಸವೇ ಕಥಕ್ ನೃತ್ಯದಲ್ಲಿ ಪ್ರಧಾನವಾದುದು. ಇದರ ಅಭಿನಯವು ಕಲ್ಪನಾಭಿನಯಕ್ಕೆ ಬೇಕಾದಷ್ಟು ಅವಕಾಶವೀಯುತ್ತದೆ.

ಕಥಕ್ ನೃತ್ಯದಲ್ಲಿ ಎಲ್ಲ ವಿಷಯಗಳನ್ನೂ ಪಾದ ಮತ್ತು ಹಸ್ತ ಚಲನೆಗಳಿಂದ ಪ್ರದರ್ಶಿಸುವುದರಿಂದ ಇವು ಸೂಚನಾತ್ಮಕವಾಗಿವೆ. ತಾಲ ಎಂಬ ಪದದಲ್ಲಿ ತಾ ಎಂದರೆ ತಾಂಡವಕ್ಕೂ ಲ ಎಂದರೆ ಲಾಸ್ಯಕ್ಕೂ ಸಂಬಂಧಿಸಿದೆ. ತಬಲದಲ್ಲಿ ಹೊರಪಡಿಸುವ ತಾಳದ ಉಚ್ಚಾರಗಳಿಗೂ ಸಂಕೇತಾರ್ಥಗಳಿವೆ. ಧ ಎಂದರೆ ಹಿಡಿತ ಅಥವಾ ಆತ್ಮಶಕ್ತಿಯನ್ನು ಹಿಡಿತದಲ್ಲಿಡುವುದು, ಧಾಧಿನ್, ಧಿನ್ ಧಾ ಎಂದರೆ ನಾಡಿಯ ಚಲನೆಗೂ, ಸಂಯೋಗಕ್ಕೂ ಅನುಸಾರವಾಗಿದೆ.

ಕಥಕ್ ನೃತ್ಯದಲ್ಲಿ ಕಣ್ಣಿನ ಅಭಿನಯವು ಮೂರುಬಗೆಯಲ್ಲಿದೆ.

(೧) ಉನ್ಮೀಲಿತ—ಪೂರ್ತಿ ತೆರೆದಿರುವ ಕಣ್ಣು. ನೇರವಾಗಿ ನೋಡುವ ದೃಷ್ಟಿ. ಇದನ್ನು ರಾಜಸಿಕವನ್ನು ಸೂಚಿಸಲು ಉಪಯೋಗಿಸುತ್ತಾರೆ.

(೨) ನಿಮೀಲಿತ—ಅರ್ಧ ತೆರೆದಿರುವ ಕಣ್ಣು. ತಾಮಸಿಕವನ್ನು ಸೂಚಿಸಲು, ಶಿವನು ನಿಗ್ರಹಿಸುವ ಕಾರ್ಯವನ್ನು ಸೂಚಿಸಲು ಇದನ್ನು ವಿನಿಯೋಗಿಸುತ್ತಾರೆ.

(೩) ಮುದ್ರಿತ—ಪೂರ್ಣ ಮುಚ್ಚಿರುವ ಕಣ್ಣನ್ನು ಸಾತ್ವಿಕ ಭಾವ ಮತ್ತು ಧ್ಯಾನವನ್ನು ಸೂಚಿಸಲು ವಿನಿಯೋಗಿಸುತ್ತಾರೆ.

ಭರತನಾಟ್ಯದಲ್ಲಿರುವಂತೆ ಈ ಪದ್ಧತಿಯಲ್ಲಿ ಸಮಭಂಗ, ಅಭಂಗ, ತ್ರಿಭಂಗ ಮತ್ತು ಅತಿಭಂಗ ಎಂಬ ನಾಲ್ಕು ಬಗೆಯ ಭಂಗಿಗಳಿವೆ. ಈ ನೃತ್ಯ ಪದ್ಧತಿಯಲ್ಲಿ ವೈಷ್ಣವೀಯವಾದ ರಾಧಾ-ಕೃಷ್ಣ ಲೀಲೆಗಳು ಹೆಚ್ಚಾಗಿವೆ.

**ಕಥಕ**—ಹರಿಕಥಾ ಕಾಲಕ್ಷೇಪ ಮಾಡುವ ಭಾಗವತರು ಅಥವಾ ಕೀರ್ತನ ಕಾರರು.

**ಕಥಕಳಿ**—ಕಥಕಳಿ ನೃತ್ಯಪದ್ಧತಿಯ ತೌರೂರು ಕೇರಳ. ಇದು ಭಾರತದಲ್ಲಿ ಬಹಳ ಹಿಂದಿನಿಂದಲೂ ಪ್ರಚಲಿತವಿರುವ ೪ ವಿವಿಧ ನಾಟ್ಯಪದ್ಧತಿಗಳಲ್ಲಿ ಒಂದಾಗಿದೆ ಮತ್ತು ಕೇರಳಕ್ಕೆ ಭೂಷಣಪ್ರಾಯವಾದ ಕಲೆಯಾಗಿದೆ. ಇದನ್ನು ನೈಸರ್ಗಿಕ ವಾತಾವರಣದಲ್ಲಿ ನೋಡಬೇಕು. ಕಂಬದ ದೀಪಗಳ ಮಸುಕಾದ ಬೆಳಕಿನಲ್ಲಿ ನರ್ತಿಸುವವರು ಅಮಾನುಷ ವೇಷಭೂಷಣಗಳಿಂದ ಮತ್ತು ಬಣ್ಣಗಳ ವೈವಿಧ್ಯದಿಂದ ತಮ್ಮ ವ್ಯಕ್ತಿತ್ವವನ್ನು ಅಡಗಿಸಿಕೊಂಡು ಕುಣಿಯುವ ವೈಚಿತ್ರ್ಯ, ಭಾಗವತರು ಹಾಡುಗಳ ಮೂಲಕ ಪುರಾಣಕಥೆಗಳನ್ನು ತಿಳಿಸುವ ವಿಧಾನ, ಚಂಡೆಮದ್ದಲೆಗಳ ಕರ್ಣಕಠೋರ ಮತ್ತು ಮೃದುಮಧುರವಾದ ಧ್ವನಿಗಳು—ಇವೆಲ್ಲವೂ ಕಥಕಳಿಯ ಪ್ರೇಕ್ಷಕನು ಎಂದೂ ಮರೆಯಲಾಗದ ಅಮೂಲ್ಯವಾದ ರಸಾನುಭವ ಇಂತಹ ಅನುಭವಗಳು ನಗರದ ಕೃತಕ ರಂಗಮಂಟಪಗಳಲ್ಲಾಗುವ ಕಥಕಳಿ ಪ್ರದರ್ಶನಗಳಿಂದ ದೊರಕುವುದಿಲ್ಲ.

ಈಗ ಕಥಕಳಿಯು ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿದೆ. ಭರತ ನಾಟ್ಯವು ಲಾಸ್ಯಕ್ಕೆ ಹೆಚ್ಚು ಗಮನವಿತ್ತರೆ ಕಥಕಳಿಯು ತಾಂಡವಕ್ಕೆ ಪ್ರಾಶಸ್ತ್ಯ ನೀಡುತ್ತದೆ. ಇದರ ಮೂಲವನ್ನು ಕುರಿತು ಎರಡು ಕಥೆಗಳಿವೆ. ೧೭ನೆ. ಶ ದಲ್ಲಿ ಕಲ್ಲಿಕೋಟೆಯ ಝಾಮೊರಿನ್ನನು ಕೃಷ್ಣಾಟ್ಟ ಆಡುವವರ ಸಂಘವನ್ನು ಏರ್ಪಡಿಸಿದನು. ಈ ಆಟವನ್ನು ಆಡಿಸಬೇಕೆಂದು ನೆರೆರಾಜ್ಯದ ದೊರೆಯೊಬ್ಬನು ಆಸೆಪಟ್ಟನು ಆದರೆ ಝಾಮೊರಿನ್ನನು ಈ ಆಹ್ವಾನವನ್ನು ನಿರಾಕರಿಸಿದನು. ಇದರಿಂದ ಕೋಪಗೊಂಡ ಆ ದೊರೆಯು ಸೇಡಿನ ದೃಷ್ಟಿಯಿಂದ ರಾಮನಾಟ್ಟಂ ಎಂಬ ಪ್ರದರ್ಶನವನ್ನು ನೀಡಬಲ್ಲ ಆಟಗಾರರನ್ನೆಲ್ಲಾ ನೇರಿಸಿ ನೃತ್ಯನಾಟಕವನ್ನು ಏರ್ಪಡಿಸಿದನು ಇದು ಕ್ರಮೇಣ ಆಟ್ಟಕಥಾ ಎಂದು ಕರೆಯಲ್ಪಟ್ಟು ಈಗಿನ ಕಥಕಳಿಯಾಗಿದೆ.

ಮತ್ತೊಂದು ಕಥೆ ಹೀಗಿದೆ. ಕಲ್ಲೀಕೋಟೆಯ ಝಾಮೊರಿನ್ ಮತ್ತು ಕೊಟ್ಟರಕ್ಕರದ ರಾಜನೂ ಸ್ನೇಹಿತರಾಗಿದ್ದರು. ಕೊಟ್ಟರಕ್ಕರದ ರಾಜನು ನಾಟಕ ಕಾರನೂ, ಕಲಾವಿದನೂ ಆಗಿದ್ದನು. ಒಂದು ಸಲ ಇವನು ಝಾಮೊರಿನ್ನನ್ನು ಭೇಟಿ ಮಾಡಲು ಹೋಗಿದ್ದ ಸಮಯದಲ್ಲಿ ಕಥಕಳಿ ನೃತ್ಯನಾಟಕ ಒಂದರಲ್ಲಿ ಪಾತ್ರವಹಿಸಿ ಸಭಿಕರನ್ನು ಮುಗ್ಧಗೊಳಿಸಿದನು. ಈ ಚತುರ ಕಲಾವಿದನಾರೆಂಬುದು ತಿಳಿಯದೆ ಅವನಿಗೆ ಮುತ್ತಿನ ಹಾರಗಳನು ನೀಡಲು ಝಾಮೊರಿನ್ನನು ಇಚ್ಛಿಸಿದನು. ಕೊನೆಗೆ ಆತನು ತನ್ನ ಮಿತ್ರನಾದ ದೊರೆಯೆಂದು ಪರಮ ಸಂತೋಷಪಟ್ಟನು. ಕಥಕಳಿಯನ್ನು ಕೇರಳದ ಅತ್ಯುತ್ತಮ ನೃತ್ಯ ಮತ್ತು ನಾಟಕಗಳ ಆಧಾರದ ಮೇಲೆ ಬೆಳೆಸಿದಾರೆ. ಉತ್ತಮ ಕಥಕಳಿ ನೃತ್ಯನಾಟಕಗಳನ್ನು ಕೊಟ್ಟರಕ್ಕರದ ದೊರೆ, ಕೊಟ್ಟಾಯಂನದೊರೆ, ಉನ್ನಾಯಿವಾರಿಯರ್ (೧೭೩೫-೧೭೮೫) ಅಶ್ವತಿ

ತಿರುನಾಳ್ (೧೭೫೬–೧೭೮೮) ಮತ್ತು ಇರೈಯಮ್ಮನ್‌ತಂಪಿ (೧೭೮೩–೧೮೫೮) ರಚಿಸಿದ್ದಾರೆ. ಈ ನೃತ್ಯವು ಮೊದಲು ಭರತನಾಟ್ಯ ಶಾಸ್ತ್ರಕ್ಕೆ ಹೊಂದಿಕೊಂಡಿದ್ದು ಕ್ರಮೇಣ ಜಯದೇವನ ಗೀತಗೋವಿಂದ ಮುಂತಾದುವನ್ನು ಪ್ರದರ್ಶಿಸಲು ಅನುಕೂಲವಾಯಿತು. ಇದರ ಮುದ್ರೆಗಳು ಅಸಂಖ್ಯಾತವಾಗಿದ್ದು ಅದರ ಶಬ್ದಕೋಶವು ವಿಶಾಲವಾಗಿದೆ. ಒಬ್ಬ ಪಾತ್ರಧಾರಿಯು ಒಂದು ವಿಷಯವನ್ನು ಅನೇಕ ವಿಧಗಳಲ್ಲಿ ಈ ಮುದ್ರೆಗಳ ಸಹಾಯದಿಂದ ತೋರಿಸಬಲ್ಲನು. ಈ ಕಲೆಯು ತಿರುವಾಂಕೂರು ಅರಸರ ಮತ್ತು ಇತರ ಜಮೀನ್ದಾರರ ಪ್ರೋತ್ಸಾಹವನ್ನು ಪಡೆದು ಇಂದು ಜಗತ್ತಿನಲ್ಲಿ ಪ್ರಖ್ಯಾತವಾಗಿದೆ. ಈ ಖ್ಯಾತಿಗೆ ಕವಿ ವಲತ್ತೋಳ್ ನಾರಾಯಣ ಮೆನನ್, ಗುರು ಕುಂಜು ಕುರುಪ್ ಮತ್ತು ಇತರರು ಬಹುಮಟ್ಟಿಗೆ ಕಾರಣರು. ಈ ಕಲೆಯ ಮುಖ್ಯ ಶಾಸ್ತ್ರೀಯ ಗ್ರಂಥವು ಹಸ್ತಲಕ್ಷಣ ದೀಪಿಕಾ. ಈ ಶಾಸ್ತ್ರದಲ್ಲಿ ನೃತ್ತ, ನೃತ್ಯ ಮತ್ತು ನಾಟ್ಯವನ್ನು ಸೇರಿಸಲು ಅನುಕೂಲವಿದೆ. ಅಭಿನಯದ ವೈಖರಿಗಳಾದ ಆಂಗಿಕ, ವಾಚಿಕ ಮತ್ತು ಆಹಾರ್ಯಾಭಿನಯಗಳು ಕಥಕಳಿಯಲ್ಲಿ ರೂಢಿಯಲ್ಲಿವೆ. ಇದರ ವೇಷಭೂಷಣಗಳೇ ಪಾತ್ರಗಳ ಪರಿಚಯವನ್ನು ಮಾಡಿಕೊಡುತ್ತವೆ. ಶ್ರೀಲಂಕೆಯ ಕಾಂಡ್ಯದ ನೃತ್ಯಗಳು ಮತ್ತು ಇಂಡೊನೇಷ್ಯಾದ ನೃತ್ಯಗಳು ಕಥಕಳಿ ನೃತ್ಯವನ್ನು ಹೋಲುತ್ತವೆ.

ಕಥಕಳಿಯನ್ನು ಕಲಿಯುವ ವಿದ್ಯಾರ್ಥಿಗಳು ವ್ಯವಸ್ಥಿತವಾದ ಕಟ್ಟುನಿಟ್ಟಾದ ಶಿಕ್ಷಣವನ್ನು ೧೨ ವರ್ಷಗಳ ಪರ್ಯಂತ ಪಡೆಯುತ್ತಾರೆ. ಶಿಕ್ಷಣವು ೧೧–೧೪ ವರ್ಷ ವಯಸ್ಸಿನಿಂದಲೇ ಪ್ರಾರಂಭವಾಗುತ್ತದೆ. ಶರೀರ, ಪಾದ, ಅಭಿನಯ ಮತ್ತು ಮುಖಾಭಿನಯ ಎಂಬ ನಾಲ್ಕು ಬಗೆಯ ಶಿಕ್ಷಣ ನೀಡುತ್ತಾರೆ. ಇದರಲ್ಲಿ ೨೪ ಮುದ್ರೆಗಳಿವೆ ಮತ್ತು ನವರಸಗಳಿಗೆ ಬಹು ಪ್ರಾಶಸ್ತ್ಯವುಂಟು. ಕಥಕಳಿಯ ಮುಖ್ಯ ಲಕ್ಷಣಗಳಾವುವೆಂದರೆ :—

೧. ಇದು ಸಂಪ್ರದಾಯಬದ್ಧವಾಗಿದ್ದು ಎಲ್ಲ ವಿಶಿಷ್ಟ ವಿಷಯಗಳನ್ನು ಹಲವು ಮುದ್ರೆಗಳಿಂದ ತಿಳಿಸಲು ಸಾಧ್ಯವಿದೆ.

೨. ನೃತ್ಯಕಲಾವಿದರಿಗೆ ಮುದ್ರೆಗಳ ಜ್ಞಾನವು ಅಪಾರವಾಗಿರುತ್ತದೆ. ಅವರು ಯಾವ ಕಥಾವಸ್ತುವನ್ನಾದರೂ ಚೆನ್ನಾಗಿ ತಿಳಿಸಬಲ್ಲರು

೩. ಕಲಾವಿದನು ಬಳುಕುವ ಮೈಯುಳ್ಳವನಾಗಿದ್ದು ಲಲಿತವಾದ ಚಲನೆಗಳನ್ನು ಮಾಡುವುದರಲ್ಲಿ ಪರಿಣತನಾಗಿರುತ್ತಾನೆ. ಹಸ್ತಮುದ್ರೆಗಳನ್ನು ಸುಲಭರೀತಿಯಿಂದ ಮಾಡುತ್ತಿರುವಾಗ ಮುಖಭಾವವು ಸನ್ನಿವೇಶಕ್ಕೆ ತಕ್ಕಂತೆ ಬದಲಾಗುತ್ತದೆ.

೪. ಸೊಂಟದ ಶಕ್ತಿ ಮತ್ತು ಬಳುಕುವಿಕೆಗೆ ಹೆಚ್ಚಾದ ಪ್ರಾಶಸ್ತ್ಯವಿದೆ.

೫. ಈ ಕಲೆಯು ರಸವತ್ತಾದ ಕವಿತೆಗಳಿಂದ ಕೂಡಿ, ಯೋಗ್ಯವಾದ ಸಂಗೀತದ ಹಿನ್ನೆಲೆ, ವೈವಿಧ್ಯಮಯವಾದ ವೇಷಭೂಷಣಗಳಿಂದ ಕೂಡಿದ್ದು ಮನಸ್ಸನ್ನು ಸೂರೆಗೊಳ್ಳುತ್ತದೆ.

೬. ಪಾದ ಮತ್ತು ಅಂಗಚಲನೆಗಳು ತಾಳಕ್ಕೆ ಸರಿಯಾಗಿ ಜೋಡಿಸಲ್ಪಟ್ಟಿವೆ.

೭. ಇದೊಂದು ಬಗೆಯ ಮೂಕ ನಾಟಕ. ಮುದ್ರೆಗಳ ಸಹಾಯವಿರುವುದರಿಂದ ಭಾಷಾಲೋಪದ ಕೊರತೆಯು ಅಳಿದು ಹೋಗಿ, ಯಾವ ವಿಷಯವೇ ಆಗಲಿ, ಸ್ಥಳವಾಗಲಿ, ವಸ್ತುವಾಗಲೀ ಅದನ್ನು ಕುರಿತು ಸೂಕ್ಷ್ಮವಾಗಿ ವರ್ಣಿಸಲು ಸಾಧ್ಯವಿದೆ.

೮ ಈ ಕಲೆಯ ಮುದ್ರೆಗಳ ಶಬ್ದಕೋಶವು ಬೃಹತ್ತಾದುದು. ಆದ್ದರಿಂದ ಒಂದು ಚಿಕ್ಕವಿಷಯವನ್ನೇ ಆದರೂ ಮುದ್ರೆಗಳ ಆಧಾರದಿಂದ ವಿಸ್ತರಿಸಿ ಒಂದು ಸಾಹಿತ್ಯ ಖಂಡವನ್ನೋ ಒಂದು ಕವಿತೆಯನ್ನೋ ಹೆಣೆಯಬಹುದು.

೯ ಈ ಕಲೆಯಲ್ಲಿ ಕಣ್ಣಿನ ಚಲನೆಯು ಅತಿಮುಖ್ಯವಾದುದು. ವಿಶೇಷವಾದ ಅಭ್ಯಾಸದಿಂದ ಕಣ್ಣಿನ ವಿವಿಧ ಚಲನೆಗಳನ್ನು ಕಲಾವಿದನು ಅಭ್ಯಾಸ ಮಾಡಿರುತ್ತಾನೆ. ಅವನ ಕಣ್ಣುಗಳಲ್ಲಿ ಒಂದು ವಿಶೇಷವಾದ ಗಾಂಭೀರ್ಯ, ಸೌಮ್ಯತೆ, ಲಾಲಿತ್ಯ ಮತ್ತು ಶಕ್ತಿ ತುಂಬಿರುತ್ತದೆ. ಬರಿಯ ಕಣ್ಣುಗಳನ್ನು ನೋಡಿಯೇ ಕಥಕಳಿ ಕಲಾವಿದನನ್ನು ಗುರುತಿಸಲು ಸಾಧ್ಯವಿದೆ.

೧೦. ಕಥಕಳಿಯು ಸಾಮೂಹಿಕ ನೃತ್ಯ. ಹಲವರ ಸಹಾಯ, ಸಹಕಾರಗಳು ಆಗತ್ಯ. ನೃತ್ಯ ನಾಟಕಗಳಿಗೆ ಕಥಕಳಿಯನ್ನು ಬಿಟ್ಟರೆ ಬೇರೊಂದಿಲ್ಲ.

ಕಥಕಳಿಯನ್ನು ಕಲಿಯುವುದು ಒಂದು ಬಗೆಯ ಯೋಗಸಾಧನ. ವಿದ್ಯಾರ್ಥಿಯಾದವನು ತನ್ನ ೮ ಅಥವಾ ೧೧-೧೨ನೆ ವಯಸ್ಸಿನ ಒಳಗೆ ಕಥಕಳಿಯ ಅಭ್ಯಾಸವನ್ನು ಆರಂಭಿಸುತ್ತಾನೆ. ಕಲರಿ ಎಂಬ ಗುರುಕುಲಕ್ಕೆ ಸೇರಿ ಗುರುವಿನ ಅನುಗ್ರಹ ಪಡೆಯುತ್ತಾನೆ. ಗುರು ಶಿಷ್ಯ ಸಂಬಂಧವು ಪ್ರಾಚೀನಕಾಲದ ಗುರುಕುಲ ವಾಸದ ಚಿತ್ರವನ್ನು ನಮ್ಮ ಮುಂದಿಡುತ್ತದೆ.

ಮೈಯನ್ನು ಮೆದುವಾಗಿಡುವುದಕ್ಕೋಸ್ಕರ ಅಂಗಸಾಧನೆ ಮತ್ತು ಮೊದಲಿನ ಐದು ನಮಸ್ಕಾರಗಳನ್ನು ಹೇಳಿಕೊಡುತ್ತಾರೆ. ತರುವಾಯ ವಿಶೇಷವಾದ ಅಂಗ ಮರ್ದನದಿಂದ ಅವನ ಸೊಂಟಕ್ಕೆ ಬಲವನ್ನು ತುಂಬುತ್ತಾರೆ. ಇದು ಬಹಳ ನೋವನ್ನುಂಟು ಮಾಡುವುದಾದರೂ ಇದಿಲ್ಲದೆ ಕಥಕಳಿಗೆ ಬೇಕಾಗಿರುವ ಬಳುಕು ಬಾಗುಗಳು ಬರುವುದು ಸಾಧ್ಯವಿಲ್ಲ. ಇದಾದ ಮೇಲೆ ಹಲವು ವಿಧವಾದ ಪಾದ ಚಲನೆಗಳನ್ನು ಕಲಿಸುತ್ತಾರೆ. ತರುವಾಯ ಕಲಾಶಂ ಎಂಬ ಕಷ್ಟಕರವಾದ ಪಾದಚಲನೆಗಳನ್ನು ಕಲಿಯಬೇಕು. ಇವು ಭರತನಾಟ್ಯದ ಜತಿಗಳನ್ನು ಹೋಲುತ್ತವೆ. ತರುವಾಯ ಭರತನಾಟ್ಯದ ಅಲರಿಪುವಿನಂತೆ ರಂಗಪೂಜೆಗೆ ಸಮಾನವಾದ ತೋದಯಂ, ಪುರುಪ್ಪಾದ್ ಎಂಬ ನೃತ್ಯಗಳನ್ನು ಕಲಿಯುತ್ತಾನೆ ಈ ಮಟ್ಟಕ್ಕೆ ಬರಲು ೩ ವರ್ಷಗಳ ಕಾಲ ಹಗಲು ರಾತ್ರಿ ದುಡಿಯಬೇಕು. ಆಮೇಲೆ ಕಣ್ಣು, ಕೆನ್ನೆ, ತುಟಿ, ಕಣ್ಣುರೆಪ್ಪೆ ಮುಂತಾದುವುಗಳ ಚಲನೆಗಳನ್ನು ಅಭ್ಯಾಸ ಮಾಡುತ್ತಾನೆ. ಇವು ನಾಟ್ಯಶಾಸ್ತ್ರದಂತಿವೆ. ಈ ಸಾಧನೆಗಳಿಂದ ಕಥಕಳಿ ಕಲಾವಿದನ ಮುಖವು ಭರತನಾಟ್ಯ ಕಲಾವಿದನ ಮುಖಕ್ಕಿಂತ ಚಂಚಲವಾಗಿಯೂ, ಭಾವ ಪ್ರದರ್ಶಕವಾಗಿಯೂ ಇರುತ್ತದೆ.

ಕಣ್ಣಿನ ಸಾಧನೆ ಬಹಳ ಮುಖ್ಯವಾದುದು. ಇದು ಬೆಳಗಿನ ಜಾವ ೪ ಗಂಟೆಗೆ ಆರಂಭವಾಗುತ್ತದೆ ೪ ರಿಂದ ೬ ಅಥವಾ ೬-೩೦ ರವರೆಗೆ ಗುರುವು ಶಿಷ್ಯನ ಎದುರು ಪದ್ಮಾಸನದಲ್ಲಿ ಕುಳಿತು ಕೋಲಿನ ಆಧಾರದಿಂದ ಕಣ್ಣುಗಳ ಚಲನಗಳನ್ನು ಹೇಳಿ ಕೊಡುತ್ತಾನೆ. ತೆರೆದ ಕಣ್ಣುಗಳಿಂದ ಶಿಷ್ಯನು ಕೋಲಿನ ತುದಿಯನ್ನೇ ದಿಟ್ಟಿಸಿ ನೋಡಬೇಕು. ಗುರುಶಿಷ್ಯರ ಮಧ್ಯೆ ಒಂದು ಎಣ್ಣೆ ದೀಪ ಮಾತ್ರವಿರುತ್ತದೆ. ಮಿಕ್ಕ ಕಡೆ ಕಗ್ಗತ್ತಲೆ. ಇದರಿಂದಾಗಿ ಶಿಷ್ಯನು ದಿಗಂತದವರೆಗೂ ದೃಷ್ಟಿಯನ್ನು ಬೀರಬಲ್ಲನು. ಕಣ್ಣುಗಳಿಗೆ ಉರಿಬಾರದಂತೆ ಹಸುವಿನ ತುಪ್ಪವನ್ನು ಹಚ್ಚಿಕೊಂಡು ಕೈಬೆರಳುಗಳಿಂದ ಎರಡು ರೆಪ್ಪೆಗಳನ್ನು ಬಿಡಿಸಿ, ನೆಟ್ಟದೃಷ್ಟಿಯಿಂದ ನೋಡಬೇಕಾಗುತ್ತದೆ. ಇದು ಅತಿ ಪ್ರಯಾಸಕರವಾದ 'ಸಾಧನೆ.

ಇದಾದ ನಂತರ ಮುದ್ರೆಗಳ ಅಭ್ಯಾಸ. ಇದರಲ್ಲಿ ೨೪ ಹಸ್ತಮುದ್ರೆಗಳಿವೆ. ಒಂದು ಮತ್ತು ಎರಡು ಹಸ್ತಗಳಿಂದ ಹಿಡಿಯುವ ಮುದ್ರೆಗಳಿವೆ. ಇವುಗಳಿಂದ ಒಂದು ಸಾಹಿತ್ಯ ಭಂಡಾರವನ್ನೇ ಅಭಿನಯಿಸಬಲ್ಲರು. ಮುದ್ರಾಭಿನಯವು ಬಹುವಿಸ್ತಾರ ಮತ್ತು ಸೂಕ್ಷ್ಮವಾಗಿರುತ್ತದೆ. ಸಾಹಿತ್ಯಕ್ಕೆ ವ್ಯಾಕರಣವಿದ್ದಂತೆ ಕಥಕಳಿಯ ಅಭಿನಯದಲ್ಲಿ ವ್ಯಾಕರಣ ರೂಪದ ಮುದ್ರೆಗಳೂ ಇವೆ. ಮುದ್ರೆಗಳಲ್ಲಿ ಮೂರು ಬಗೆ ಗಳಿವೆ.

೧. ಪ್ರಾಕೃತಿಕ ಅಥವಾ ಸಹಜ ಮುದ್ರೆಗಳನ್ನು ಕಲಾವಿದನು ಸನ್ನಿವೇಶ ಮತ್ತು ಸ್ಫೂರ್ತಿಗೆ ತಕ್ಕಂತೆ ಮನೋಭಾವಕ್ಕೆ ಸರಿಯಾಗಿ ತೋರಿಸಬಹುದು.

೨. ಪ್ರತಿರೂಪಿಯು ಒಂದು ವಸ್ತುವಿನ ರೂಪವು ಕಣ್ಣಿನ ಎದುರಿನಲ್ಲಿ ಬರು ವಂತೆ ಮಾಡುವ ಮುದ್ರಾಭಿನಯ.

೩. ಆರಾಧನೆ, ಅರ್ಪಣೆ, ವರದಾಭಯ, ಪೂಜಾವಿಧಾನ ಮುಂತಾದುವನ್ನು ತೋರಿಸಲು ಮಾಡುವ ಹಲವಾರು ಮುದ್ರೆಗಳನ್ನು ಪ್ರದರ್ಶಿಸುವುದು ಪ್ರಸಾರಿತ.

ಈ ಮುದ್ರೆಗಳನ್ನು ಅಭ್ಯಾಸ ಮಾಡಿದ ನಂತರ ನವರಸಗಳನ್ನು ಚೆನ್ನಾಗಿ ಅಭ್ಯಾಸ ಮಾಡುತ್ತಾನೆ. ಇದಾದ ನಂತರ ಅವನು ಒಂದು ಯೋಗ್ಯ ಕಥಕಳಿ ನೃತ್ಯ ಕಲಾವಿದನಾಗುತ್ತಾನೆ.

ಕಲಾವಿದರು ವಿಶೇಷವಾದ ವೇಷಭೂಷಣ ಮತ್ತು ಬಣ್ಣಗಳನ್ನು ಬಳಸುತ್ತಾರೆ. ಇದರಿಂದ ಅವರ ವ್ಯಕ್ತಿತ್ವವು ಮಾಯವಾಗಿ ಕಥೆಯ ಪಾತ್ರವೇ ನಮ್ಮ ಮುಂದೆ ನಿಂತಿರುವಂತೆ ಭಾಸವಾಗುತ್ತದೆ. ಕಥಕಳಿಯಲ್ಲಿ ಮೂರು ಬಗೆಯ ಪಾತ್ರಗಳಿರುತ್ತವೆ.

೧. ಸಾತ್ವಿಕ—ದೇವಾಧಿದೇವತೆಗಳು, ಅಪ್ಸರೆಯರು ಇತ್ಯಾದಿ

೨. ರಾಜಸಿಕ—ಭೂತಪ್ರೇತಗಳು, ದುಷ್ಟರು, ರಾಕ್ಷಸರು ಇತ್ಯಾದಿ.

೩. ತಾಮಸಿಕ—ರುದ್ರ ಇತ್ಯಾದಿ ಭೀಕರ, ಕ್ರೂರ, ಪ್ರಚಂಡಪಾತ್ರಗಳು.

ಈ ಮೂರು ಬಗೆಯ ಪಾತ್ರಗಳಿಗೆ ಬೇರೆ ಬೇರೆ ವಿವಿಧ ಬಣ್ಣಲೇಪನವಿರುತ್ತದೆ. ರಂಗಸ್ಥಳದಲ್ಲಿ ಪಾತ್ರವನ್ನು ನೋಡಿದೊಡನೆ ಅದು ಸಾತ್ವಿಕವೋ, ರಾಜಸಿಕವೋ, ತಾಮ

ಸಿಕವೋ ಎಂದು ಗೊತ್ತಾಗುತ್ತದೆ. ಸಾತ್ವಿಕಕ್ಕೆ ಹಸಿರು, ರಾಜಸಿಕಕ್ಕೆ ಕೆಂಪು, ತಾಮಸಿಕಕ್ಕೆ ಕಪ್ಪು ಬಣ್ಣಗಳಿರುತ್ತವೆ. ಸಾತ್ವಿಕ ಮತ್ತು ರಾಜಸಿಕ ಗುಣಗಳೆರಡೂ ಇದ್ದವರಿಗೆ ಹಳದಿ ಬಣ್ಣವಿರುತ್ತದೆ. ಬಣ್ಣಲೇಪನದಲ್ಲಿ ಭೇದವಿರುವುದಲ್ಲದೆ, ವೇಷ ಧಾರಿಗಳು ಕಟ್ಟುವ ಕಿರೀಟಗಳಲ್ಲಿಯೂ ಭೇದವಿದ್ದೂ ಅವು ಪಾತ್ರಗಳನ್ನು ಸೂಚಿಸು ತ್ತವೆ. ದೊಡ್ಡ ಕಿರೀಟಗಳನ್ನು, ವಿವಿಧ ಬಣ್ಣಗಳ ವೇಷಭೂಷಣಗಳನ್ನು ಧರಿಸಿದ ಈ ಪಾತ್ರಧಾರಿಗಳು ಪುರಾಣಗಳ ಕಾಲದಿಂದ ರಂಗಸ್ಥಳಕ್ಕೆ ಇಳಿದುಬಂದ ಮಹಾವ್ಯಕ್ತಿ ಗಳಂತೆ ಕಾಣುವರು.

ಪಾತ್ರಧಾರಿಗಳು ಉಪಯೋಗಿಸುವ ಬಣ್ಣಗಳು ಐದು—ಕೆಂಪು, ಹಸಿರು, ಹಳದಿ, ಕಪ್ಪು ಮತ್ತು ಬಿಳಿ. ಈ ಬಣ್ಣಗಳು ಶೋಭೆಯನ್ನೂ, ಕಾಂತಿಯನ್ನೂ, ದೀಪ್ತಿ ಯನ್ನೂ, ಮಾಧುರ್ಯವನ್ನೂ ಉಂಟುಮಾಡುತ್ತವೆ. ಬಣ್ಣಲೇಪನಗಳಿಗೆ ಸರಿಯಾದ ದೊಡ್ಡ ಅಗಲವಾದ ಲಂಗಗಳು, ಅವುಗಳ ಜೊತೆಗೆ ಹಲವಾರು ಬಟ್ಟೆಗಳು ಮತ್ತು ಮಣಿಹಾರಗಳನ್ನು ಸುತ್ತಿ ಅಮಾನುಷ ರೂಪಗಳನ್ನು ಪಡೆಯುತ್ತಾರೆ. ಇದಕ್ಕಿಂತಲೂ ವಿಶಿಷ್ಟವಾದ ವೇಷಭೂಷಣ, ಬಣ್ಣಗಳ ವೈಚಿತ್ರ್ಯವನ್ನು ಮಲೆನಾಡಿನ ಯಕ್ಷಗಾನದ ಬಯಲಾಟದ ಪಾತ್ರಗಳಲ್ಲಿ ಕಾಣಬಹುದು.

ಕಥಕಳಿಯಲ್ಲಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಮಿಲನವಿದೆ. ಚಾಕಿಯಾರ್ ಕೂತ್ತು ಮತ್ತು ಕುಡಿಯಾಟ್ಟಂ ಎಂಬ ವಿಶಿಷ್ಟ ನೃತ್ಯಗಳೂ, ನಾಟಕಗಳೂ ಮತ್ತು ಭಗವತಿಯ ಉಪಾಸನೆಗೆ ಸಂಬಂಧಿಸಿದ ಧಾರ್ಮಿಕ ನೃತ್ಯಗಳಾದ ಮುಟಿಯುಟ್ಟು, ತೀಯರ್ಾಟ್ಟಂ, ತೀಯಾಟ್ಟಂ ಮತ್ತು ಸಾಮಾಜಿಕವಾದ ಶಸ್ತ್ರಕಳಿ, ಎಝುಮುಟ್ಟುಕಳಿ ಮುಂತಾದ ವೀರ ನೃತ್ಯಗಳಲ್ಲದೆ, ಒರಟು ಜಾನಪದ ನಾಟಕ ಗಳಾದ ಕಂಸನಾಟಕಂ, ಮೀನಾಕ್ಷಿನಾಟಕಂ, ಇತ್ತೀಚಿನ ಕೃಷ್ಣಾಟ್ಟಂ, ರಾಮನಾಟ್ಟಂ ಎಂಬ ನೃತ್ಯ ನಾಟಕಗಳು ಕಥಕಳಿಯ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ.

ಚಾಕಿಯಾರ್ ಕೂತ್ತು ಎಂಬುದು ಚಾಕಿಯಾರ್ ಕುಲದವರು ಮಾತ್ರ ಪ್ರದರ್ಶಿಸಬೇಕಾದ ನೃತ್ಯ. ಇದು ಬಹಳ ಧಾರ್ಮಿಕವೂ ಶಾಸ್ತ್ರ ಸಮ್ಮತವೂ ಆದ ಮನರಂಜನೆ. ದೇವಾಲಯಗಳಲ್ಲಿ ನೃತ್ಯಕ್ಕಾಗಿಯೇ ಮೀಸಲಾಗಿದ್ದ ಕೂತಂಬಳಂ ಎಂಬ ಚಿಕ್ಕ ರಂಗಸ್ಥಳದಲ್ಲಿ ಮಾತ್ರ ಈ ಪ್ರದರ್ಶನವು ನಡೆಯುತ್ತಿತ್ತು. ಪ್ರದರ್ಶನ ಕಾರನಾದ ಚಾಕಿಯಾರ್ ಒಬ್ಬ ದೊಡ್ಡ ಕತೆಗಾರ, ಚತುರ, ವಿವೇಕಿ, ರಸಿಕ ಮತ್ತು ಹಾಸ್ಯರಸದಿಂದ ಪ್ರೇಕ್ಷಕರನ್ನು ರಂಜಿಸಬಲ್ಲವನು. ಆಖ್ಯಾನವು ಮುಂದುವರಿದಂತೆ ಕಥೆಯಲ್ಲಿ ಬರುವ ಬೇರೆ ಬೇರೆ ಪಾತ್ರಗಳನ್ನು ಅನನ್ಯಭಾವದಿಂದ ವಿಕಟವಾಗಿ ವಿನೋದವಾಗಿ ನಟಿಸುತ್ತಾನೆ. ನಂಬಿಯಾರ್ ಕುಲಕ್ಕೆ ಸೇರಿದವನೊಬ್ಬ ಪ್ರದರ್ಶನದ ಮಧ್ಯೆ ಮಧ್ಯೆ, ಬೇಕಾದ ಸಮಯದಲ್ಲಿ ಮಿಝುವು ಎಂಬ ಒಂದು ದೊಡ್ಡ ತಾಮ್ರದ ನಗಾರಿಯನ್ನೂ ತಾಳಗಳನ್ನೂ ನುಡಿಸುತ್ತಾನೆ.

ಕೂಡಿಯಾಟ್ಟಂ ಎಂಬುದು ಅದರ ಹೆಸರೇ ತಿಳಿಸುವಂತೆ ಅನೇಕರು ಸೇರಿ

ಪ್ರದರ್ಶಿಸುವ ನಾಟಕ. ಇದರಲ್ಲಿ ಸ್ತ್ರೀಯರೂ ಭಾಗವಹಿಸುತ್ತಾರೆ. ಅಭಿನಯವು ಇದರಲ್ಲಿ ಉನ್ನತ ಮಟ್ಟದಲ್ಲಿರುತ್ತದೆ.

ಮುಟಿಯಟ್ಟ್ಯ, ತೀಯರ್ಾಟ್ಟಂ, ತೀಯಾಟ್ಟ್ ಎಂಬ ಕೆಲವು ನೃತ್ಯಗಳು ಭಗವತಿಯ ಉಪಾಸನೆಗಾಗಿ ಮಾಡುವ ಮುಖ್ಯ ಧಾರ್ಮಿಕ ನೃತ್ಯಗಳು. ಇವುಗಳಲ್ಲಿ ಭಗವತಿಯ ದಿವ್ಯ ಗುಣಗಳ ವರ್ಣನೆಯಿದೆ. ಈ ಪ್ರದರ್ಶನಗಳಲ್ಲಿ ದೇವತೆಗಳ ಮತ್ತು ರಾಕ್ಷಸ ರಾಕ್ಷಸಿಯರ ಪಾತ್ರಧಾರಿಗಳು ಪಾತ್ರಕ್ಕೆ ತಕ್ಕ ದೇದೀಪ್ಯಮಾನವಾದ ಸಕಲಾಭರಣ ಭೂಷಿತವಾದ ವೇಷಭೂಷಣಗಳನ್ನೋ ಅಥವಾ ಭಯಂಕರವಾದ ಹಾಗೂ ಅಸಹ್ಯವಾದ ವೇಷಭೂಷಣಗಳನ್ನೋ ಧರಿಸುತ್ತಾರೆ. ಸಾಮಾಜಿಕ ಮತ್ತು ಧಾರ್ಮಿಕ ನೃತ್ಯಗಳಾದ ಯಾತ್ರಕಳಿ, ಶಸ್ತ್ರಕಳಿ, ಸಂಘಕಳಿ ಮತ್ತು ಎರ್ಝು ಮತ್ತು ಕಳಿ ಇವೆಲ್ಲವೂ ಪರಸ್ಪರ ಸಂಬಂಧವಿರುವ ನೃತ್ಯಗಳು. ಕುಳ್ಳಲ್ ಎಂಬುದು ಏಕವ್ಯಕ್ತಿಯ ನೃತ್ಯವಾಗಿದ್ದು ದೇವಾಲಯಗಳಲ್ಲಿ, ಮದುವೆ ಅಥವಾ ಇತರ ಖಾಸಗೀ ಸಂದರ್ಭಗಳಲ್ಲಿ ಪ್ರದರ್ಶಿತವಾಗುತ್ತದೆ. ನೃತ್ಯಗಾರನು ಅಪೂರ್ವ ಕಲ್ಪನಾ ಶಕ್ತಿಯುಳ್ಳವನೂ, ಮನಸ್ಸನ್ನು ಸೂರೆಗೊಳ್ಳುವವನೂ ಆಗಿರುತ್ತಾನೆ. ವೇಷಭೂಷಣಗಳು, ಮುಖ ಬಣ್ಣಗಳು ಕಥಕಳಿಯಿಂದ ಬೇರೆಯಾಗಿರುತ್ತವೆ. ಪ್ರದರ್ಶನದ ಮಧ್ಯೆ ನೃತ್ಯಗಾರನು ಕೆಲವು ತೀವ್ರಗತಿಯ ಪಾದಚಲನೆಯನ್ನೂ ನೃತ್ಯವಿಧಾನಗಳನ್ನೂ ಮಾಡಿ ವಿರಮಿಸುತ್ತಾನೆ. ಪಕ್ಕವಾದ್ಯವಾದಕರು ಸತತವಾಗಿ ಸಂಗೀತ ಒದಗಿಸುತ್ತಾರೆ.

**ಕಥಾಪಾತ್ರ**—ನೃತ್ಯನಾಟಕ ಅಥವಾ ಗೇಯನಾಟಕಗಳಲ್ಲಿ ಬರುವ ಪಾತ್ರ.

**ಕದಂಬ**—ತಿಶ್ರಜಾತಿ ಝಂಪತಾಳದ ಹೆಸರು. ಇದರ ಒಂದಾವರ್ತಕ್ಕೆ ೬ ಅಕ್ಷರ ಕಾಲವಾಗುತ್ತದೆ.

**ಕದಳೀರಸ**—ಬಾಳೆಹಣ್ಣಿನ ರುಚಿ ಎಂದರ್ಥ. ಸಂಗೀತ ರಚನೆಗಳನ್ನು ಅವುಗಳ ರಸಭಾವಕ್ಕನುಗುಣವಾಗಿ ದ್ರಾಕ್ಷಾರಸ, ನಾಳಿಕೇರರಸ ಮತ್ತು ಕದಳೀರಸವೆಂದು ವರ್ಗೀಕರಣ ಮಾಡಿರುತ್ತಾರೆ. ಸರಳ, ಸುಂದರ ಮತ್ತು ಲಲಿತವಾಗಿದ್ದು ತಿಳಿದು ಅನುಭವಿಸಲು ಸ್ವಲ್ಪವೂ ಕಷ್ಟವಾಗದಿರುವ ರಚನೆಗಳನ್ನು ದ್ರಾಕ್ಷಾರಸಕ್ಕೆ ಹೋಲಿಸಿದ್ದಾರೆ. ಏಕೆಂದರೆ ದ್ರಾಕ್ಷಿಯನ್ನು ಬಾಯಿಗೆ ಹಾಕಿಕೊಂಡ ಕೂಡಲೇ ಅದರ ಸವಿ ಹತ್ತುತ್ತದೆ. ತ್ಯಾಗರಾಜರ ಕೃತಿಗಳು ದ್ರಾಕ್ಷಾರಸದ ಕೃತಿಗಳಿಗೆ ನಿದರ್ಶನ. ಹಲವು ಸಲ ಕೇಳಿ ಅರ್ಥ ಮಾಡಿಕೊಂಡ ನಂತರ ಅನುಭವಿಸಲು ಸಾಧ್ಯವಿರುವ ಕೃತಿಗಳು ನಾಳೀಕೇರರಸದಂತೆ. ಎಳನೀರನ್ನು ಕುಡಿಯುವ ಮೊದಲು ಅದರ ಮಟ್ಟೆಯನ್ನು ತೆಗೆದು ಕರಟವನ್ನು ಒಂದು ಕುಡುಗೋಲಿನಿಂದ ಒಡೆಯಬೇಕು. ಹೀಗೆ ಸ್ವಲ್ಪ ಶ್ರಮ ಪಟ್ಟನಂತರ ರುಚಿಯನ್ನು ಅನುಭವಿಸಲು ಸಾಧ್ಯ ಮುತ್ತುಸ್ವಾಮಿ ದೀಕ್ಷಿತರ ಕೃತಿಗಳು ಈ ವರ್ಗಕ್ಕೆ ಸೇರಿವೆ. ಬಾಳೆಯ ಹಣ್ಣನ್ನು ತಿನ್ನುವ ಮೊದಲು ಸಿಪ್ಪೆಯನ್ನು ಸುಲಿಯಬೇಕು. ಶ್ಯಾಮಾಶಾಸ್ತ್ರಿಗಳ ಕೃತಿಗಳು ಬಾಳೆಯ

ಹಣ್ಣಿನಂತೆ ಇವರ ಕೆಲವು ಕೃತಿಗಳು ಬೇರೆರಸವನ್ನು ಸೂಚಿಸುತ್ತದೆ. ಸರೋಜದಳನೇತ್ರಿ ಎಂಬ ಶಂಕರಾಭರಣ ರಾಗದ ಕೃತಿಯು ದ್ರಾಕ್ಷಾರಸ ಸೂಚಕ ವಾಗಿದೆ ಈ ರಸದ ಕೃತಿಗಳು ಭಾವಪ್ರಧಾನವಾದುವು. ನಾಳಿಕೇರ ಕೃತಿಗಳು ರಾಗಪ್ರಧಾನವಾದುವು. ಕದಳೀರಸದ ಕೃತಿಗಳು ತಾಳಪ್ರಧಾನವಾದುವು.

**ಕದನ ಕುತೂಹಲ**—ಈ ರಾಗವು ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಗ ಪ ಸ

ಅ: ಸ ನಿ ದ ಪ ಮ ಗ ರಿ ಸ

ಉಪಾಂಗ, ವಕ್ರ ಸಂಪೂರ್ಣರಾಗ. ಇದನ್ನು ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್ ಸೃಷ್ಟಿಸಿದರು. ಈ ರಾಗದಲ್ಲಿ ಗಮಕಗಳ ವ್ಯಾಪ್ತಿ ಕಡಿಮೆಯಿದ್ದರೂ ದ್ರುತ ನಡೆ ಯುಳ್ಳ ಸಾರ್ವಕಾಲಿಕ ಹಾಗೂ ಉತ್ಸಾಹದಾಯಕ ರಾಗವಾಗಿದೆ. ಜಾರು ಮತ್ತು ಜಂಟಿ ಪ್ರಯೋಗಗಳು ಅಧಿಕವಾಗಿವೆ. ವಾದ್ಯಗಳಲ್ಲಿ ಮತ್ತು ವಾದ್ಯವೃಂದದಲ್ಲಿ ನುಡಿಸಲು ಬಹು ಸೊಗಸಾದ ಕೃತಿ ಪಟ್ಟಣಂರವರ ರಚನೆಯಾದ ರಘುವಂಶ ಸುಧಾಂಬುಧಿ ಚಂದ್ರಶ್ರೀ ಎಂಬುದು ಇದಕ್ಕೆ ಸುಂದರವಾದ ಚಿಟ್ಟೆಸ್ವರಗಳನ್ನು ಪಟ್ಟಣಂರವರ ಸಮಕಾಲೀನರಾಗಿದ್ದ ತಿರುವೈಯ್ಯಾರ್ ಸುಬ್ರಹ್ಮಣ್ಯ ಅಯ್ಯರ್‌ರವರು ಸೇರಿಸಿದರು.

**ಕದನ**—ಈ ರಾಗವು ೨೭ನೆಯ ಮೇಳಕರ್ತ ಸರಸಾಂಗಿಯ ಒಂದು ಜನ್ಯ ರಾಗ.

(೧) ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

(೨) ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ಕನಕಗಿರಿ**—ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ಸ ನಿ ಸ

ಅ: ಸ ನಿ ದ ನಿ ಪ ಮ ಗ ಸ

**ಕನಕಗೀರ್ವಾಣಿ**—ಈ ರಾಗವು ೬೭ನೆಯ ಮೇಳಕರ್ತ ಸುಚರಿತ್ರದ ಒಂದು ಜನ್ಯರಾಗ.

ಆ: ಸ ರಿ ಮ ಪ ಮ ದ ನಿ ಸ

ಅ: ಸ ದ ಪ ಮ ರಿ ಸ

**ಕನಕಘಂಟಾ**—ಈ ರಾಗವು ೬೫ನೆಯ ಮೇಳಕರ್ತ ಮೇಛ ಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ಸ̇

ಅ: ಸ̇ ನಿ ಪ ಮ ರಿ ಗ ಮ ರಿ ಸ

**ಕನಕಚೌರಿ**—ಈ ರಾಗವು ೫೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ನಿ ಸ̇

ಆ: ಸ̇ ನಿ ಪ ಮ ಗ ರಿ ಸ

**ಕನಕಚಂದ್ರಿಕಾ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕನಕಜ್ಯೋತಿಷ್ಮತಿ**—ಈ ರಾಗವು ೭೨ನೆ ಮೇಳಕರ್ತ ರಸಿಕಪ್ರಿಯದ ಒಂದು ಜನ್ಯರಾಗ

ಆ: ಸ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಸ

**ಕನಕದಾಸರು** (೧೫೦೯–೧೬೦೭)—ಕನಕದಾಸರು ಪುರಂದರದಾಸರ ಸಮಕಾಲೀನರು ಮತ್ತು ವ್ಯಾಸರಾಯರ ಶಿಷ್ಯರು. ಪುರಂದರದಾಸರಂತೆಯೇ ಕೋಟೀಶ್ವರರಾಗಿದ್ದೂ ವೈರಾಗ್ಯತಾಳಿ ಹರಿದಾಸರಾದರು.

ಇವರು ಹುಟ್ಟಿನಿಂದ ಅಂಡೆ ಕುರುಬರ ಜಾತಿಗೆ ಸೇರಿದವರು ಧಾರವಾಡ ಜಿಲ್ಲೆಯ ಬಾಡ ಎಂಬ ಗ್ರಾಮವು ಇವರ ಜನ್ಮಸ್ಥಳ. ಮೊದಲು ವಿಜಯನಗರದ ಅರಸರ ಅಧೀನವಲ್ಲಿ ಡಣಾಯಕರಾಗಿದ್ದರಂತೆ. ಇವರ ಆಗಿನ ಹೆಸರು ತಿಮ್ಮಣ್ಣ ಅಥವಾ ತಿಮ್ಮನಾಯಕ. ತಂದೆಯ ಹೆಸರು ಬೀರಪ್ಪ. ತಾಯಿಯ ಹೆಸರು ಬಚ್ಚಮ್ಮ. ತಿಮ್ಮ ಮೊದಲು ಬಹಳ ಧಾರಾಳಚಿತ್ತದವನಾಗಿ ತನ್ನಲ್ಲಿಗೆ ಬಂದ ಬಡವರಿಗೂ ಅನಾಥರಿಗೂ ಉದಾರವಾಗಿ ಧನಕನಕಗಳನ್ನು ನೀಡುತ್ತಿದ್ದುದರಿಂದ ಕನಕನಾಯಕ ಎಂದು ಹೆಸರಾಯಿತು.

ಕನಕನಾಯಕನು ರಣಶೂರನಾಗಿದ್ದು ವಿಜಯನಗರದ ರಾಜರ ಪರವಾಗಿ ಅನೇಕ ಕಾಳಗಗಳಲ್ಲಿ ಪಾಲುಗೊಂಡನು. ಆದರೆ ಪದೇ ಪದೇ ದೇವರು ಇವನಿಗೆ ಕನಸಿನಲ್ಲಿ ಕಾಣಿಸಿಕೊಂಡು ' ದಾಸನಾಗೋ ಕನಕ, ದಾಸನಾಗು ' ಎಂದು ಹೇಳಿದ ನಂತೆ. ಕಾಲಕ್ರಮದಲ್ಲಿ ಕನಕನಿಗೆ ಜ್ಞಾನೋದಯವಾಗಿ, ರಣಕೀರ್ತಿ, ರಾಜಸೇವೆ, ಅಧಿಕಾರ ವೈಭವ, ಎಲ್ಲವೂ ನಿಸ್ಸಾರವಾಗಿ ತೋರಿತು. ಕ್ಷಣಿಕವಾದ ಈ ವಿಷಯಗಳಿಗೆ ಆಸೆಪಟ್ಟು ದಾರಿತಪ್ಪಿದೆನೆಂದು ಮನಗಂಡು, ' ಸಾಕುಸಾಕು ಮನುಜಸೇವೆಯು' ಎಂಬ ನಿರ್ಧಾರಮಾಡಿ, ಕನಕನಾಯಕ ಎಂಬ ತನ್ನ ಪದವಿಯನ್ನು ತ್ಯಜಿಸಿ, ಐಶ್ವರ್ಯವನ್ನೆಲ್ಲ ದಾನಮಾಡಿ ಹರಿದಾಸನಾದನು. ಕನಕದಾಸರು ಕಾಗಿನೆಲೆ ಎಂಬ ಇನ್ನೊಂದು

ಗ್ರಾಮದಲ್ಲಿ ನೆಲೆಸಿದರು. ಕನ್ನಡನಾಡಿನ ಎಲ್ಲಾ ಭಾಗಗಳಲ್ಲಿ ಸಂಚರಿಸಿ ಕೊನೆಗೆ ಕಾಗಿನೆಲೆಯಲ್ಲಿ ಪರಂಧಾಮವನ್ನು ಸೇರಿದರು.

ಕನಕದಾಸರು ಹರಿದಾಸರಾದ ನಂತರ ವಿಷ್ಣುವೇ ಪರದೈವವೆಂದು ನಂಬಿ ಉಳಿದ ದೇವರುಗಳ ಪೂಜೆ ವ್ಯರ್ಥವೆಂದು ಸಾರಿ ಹೇಳಿದರು. ಅದುವರೆಗೆ ಆ ಜನರು ಆರಾಧಿಸುತ್ತಿದ್ದ ದೈವಗಳನ್ನೆಲ್ಲ ಪೊಳ್ಳುದೈವ, ಜಡದೈವ, ಠಕ್ಕುದೈವ ಎಂದು ಟೀಕಿಸಿದರು. ಹೀನಕುಲದವನೆಂದು ಇತರರು ದಾಸರನ್ನು ಅಲ್ಲಗಳೆದರೆ ಹೊಸದೇವರ ಮಹಿಮೆಗೆ ಮನಸೋತು ತನ್ನ ಕುಲದೈವವನ್ನು ಹೀನೈಸಿದನೆಂದು ಕುರುಬರು ಸಿಟ್ಟಾಗಿ ಅವರನ್ನು ಹಿಂಸೆಗೆ ಗುರಿಪಡಿಸಿದರು.

" ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ
ಅಟ್ಟಿ ಬಡಿವುತಲಿಹರೋ ಕೃಷ್ಣಾ " ಎಂದು ದಾಸರು ಮೊರೆಯಿಟ್ಟರು.
ಜಲಜಾಕ್ಷ ಕಾಗಿನೆಲೆಯಾದಿಕೇಶನ ಮಹ
ಮೊಲಿಸಿ ಭಜಿಸದವನು ಹುಚ್ಚು ಕುರುಬ

ಎಂಬ ಸಿದ್ಧಾಂತಕ್ಕೆ ಬಂದು, ಯಾವ ಹಿಂಸೆಗೂ ಸೋಲದೆ, ಸ್ವಲ್ಪವೂ ಅಳುಕದೆ ಏಕಚಿತ್ತದಿಂದ ಹರಿಧ್ಯಾನಪರಾಯಣರಾಗಿ, ಲೋಕಕ್ಕೆ ಹರಿಭಕ್ತಿಯ ಮಹಿಮಾತಿಶಯವನ್ನು ಉಪದೇಶಿಸಿದರು.

ಇವರ ಹರಿಭಕ್ತಿಯ ಆಳ, ಧ್ಯಾನ, ತ್ಯಾಗಗಳು ಇತರರಿಗೆ ಅರ್ಥವಾಗಲಿಲ್ಲ. ಅಜ್ಞಾನಿಗಳ ಮತ್ತು ಅಹಂಕಾರಿಗಳ ದುರ್ವರ್ತನೆಯಿಂದ ದಾಸರು ಬಹಳ ನೊಂದರು. ವಿಜಯನಗರಕ್ಕೆ ಹೋಗಿ ಶ್ರೀ ವ್ಯಾಸತೀರ್ಥರ ದಿವ್ಯಸಂದರ್ಶನ ಪಡೆದು ಪರಮಾನುಗ್ರಹಕ್ಕೆ ಪಾತ್ರರಾದರು. ಸ್ವಾಮಿಗಳಿಗೆ ದಾಸರ ಮಹಿಮೆಯು ಮೊದಲ ನೋಟದಲ್ಲೇ ಅರ್ಥವಾಯಿತು. ಮಠದ ಜನಕ್ಕೆ ಇದು ಅರ್ಥವಾಗಲಿಲ್ಲ.

ಕನಕದಾಸರಮೇಲೆ ದಯಮಾಡಲು ವ್ಯಾಸ
ಮುನಿ ಮಠದವರೆಲ್ಲ ದೂರಿಕೊಂಬುವರೋ

ಎಂದು ಪುರಂದರದಾಸರು ಬೇಸರಪಟ್ಟುಕೊಂಡರು ಗುರುವಿನ ಪರಮಾನುಗ್ರಹಕ್ಕೆ ಪಾತ್ರರಾದ ಕನಕದಾಸರು ಈ ಕುಹಕಿಗಳ ಕೀಟಲೆಗೆ ಕಂಗೆಡಲಿಲ್ಲ.

ಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದನೆಲೆಯನೇನಾದರು ಬಲ್ಲಿರಾ ?

ಎಂದು ಕುಲಮದ ದೂಷಿತರಿಗೆ ವಿವೇಕ ಹೇಳಿದರು. ಮುಂದೆ ದಾಸರು ಉಡುಪಿಗೆ ಹೋದಾಗ ದೇವಾಲಯಕ್ಕೆ ಪ್ರವೇಶ ದೊರೆಯಲಿಲ್ಲ. ಆದರೆ ದಾಸರು ದೇವಾಲಯದ ಹಿಂದೆ ಹೋಗಿ ದೇವರನ್ನು ಪ್ರಾರ್ಥಿಸಲು ಶ್ರೀಕೃಷ್ಣನು ಅವರಿಗೆ ಆಲಯದ ಗೋಡೆಯ ಒಂದು ಕಿಂಡಿಯಿಂದಲೇ ದರ್ಶನವಿತ್ತನು. ಇದೇ ಪ್ರಸಿದ್ಧವಾಗಿರುವ ಕನಕನಕಿಂಡಿ. ಕನಕದಾಸರ ಕುಲ ಹರಿಭಕ್ತರ ಕುಲ. ಇದನ್ನು ಅರ್ಥಮಾಡಿಕೊಳ್ಳಲು ಇವರ ಸಮಕಾಲೀನರಿಗೆ ಕೊಂಚಕಾಲ ಹಿಡಿಯಿತು.

ಕನಕದಾಸರಿಗೆ ದೇವರ ದರ್ಶನ ಒದಗಲು ಸ್ವಲ್ಪಕಾಲ ಹಿಡಿಯಿತು. ಎಲ್ಲವನ್ನೂ ತ್ಯಜಿಸಿ ಹರಿದಾಸರಾದರೂ ಭಕ್ತಿ ಸ್ಥಿರವಾಗದೆ ಕೊಂಚಕಾಲ ತೊಳಲಾಡಿದರು. ಸ್ಥಿರಭಕ್ತಿ ಲಭಿಸುವಂತೆ ಅನುಗ್ರಹಿಸಬೇಕೆಂದು ದಾಸರು ಭಗವಂತನನ್ನು ಬೇಡಿದ್ದಾರೆ.

ಕಾಡುವದುರಿತಗಳ ಬಿಡಿಸೆಂದು
ಬೇಡಿಕೊಂಬೆ ನಾನಿನ್ನ
ಕಾಯೊ ಕರುಣಾಕರನೆ ಕಡುಪಾಪಿ ನಾನು
ನ್ಯಾಯವೆಂಬುದು ಎನ್ನೊಳೆಳ್ಳಿನಷ್ಟಿಲ್ಲ

ಎಂದು ನಾನಾ ವಿಧವಾಗಿ ದೇವರಲ್ಲಿ ಬೇಡಿದರು. ತನ್ನ ಜನ್ಮಾಂತರ ಕರ್ಮಫಲವನ್ನು ತೆಗಳಿಕೊಂಡಿದ್ದಾರೆ.

'ಪ್ರಾಚೀನ ಕರ್ಮವು ಬಿಡಲರಿಯದೋ
ಯೋಚನೆಯನುಡಿ ಬಳಲುವುದೇಕೆ ಮನುಜ'

ಎಂದು ಭಾವಿಸಿಕೊಂಡರು. ಏಕಚಿತ್ತದಿಂದ ಹರಿಧ್ಯಾನಮಗ್ನರಾದರು. ಆಗ ಇವರಿಗೆ ಶ್ರೀಹರಿಯ ದರ್ಶನಾನುಗ್ರಹವಾಯಿತು.

'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು'

ಎಂದು ಸಂತೋಷದಿಂದ ಹಿಗ್ಗಿದರು. ಅಂದಿನಿಂದ ನಾಡಿನಲ್ಲಿ ಭಕ್ತಿ ಪ್ರಚಾರ ಮಾಡಲಾರಂಭಿಸಿದರು.

'ಎಲ್ಲಿರುವನೊ ರಂಗ ಎಂಬ ಸಂಶಯ ಬೇಡ
ಎಲ್ಲಿ ಭಕ್ತರು ಕರೆಯೆ ಅಲ್ಲಿ ಬಂದೊದಗುವನು'

ಎಂದು ನಿಸ್ಸಂಶಯವಾಗಿ ತಿಳಿಯಹೇಳಿ ಹರಿನಾಮ ಕೀರ್ತನದ ಅಗತ್ಯವನ್ನು ಒತ್ತಿ ಹೇಳಿದರು.

'ಕೇಶವ ಎನ್ನಿರೋ ಕ್ಲೇಶನಾಶನನ ಕೇಶವ ಎನ್ನಿರೋ'
'ಭಜಿಸಿಬದುಕೆಲೊ ಮನುಜ ಮನಮುಟ್ಟಿ ಹರಿಯ'

ಎಂದು ಉಪದೇಶಿಸಿದರು. ಒಂದೇ ಮನಸ್ಸಿನಿಂದ ಶ್ರೀಹರಿಯ ಕರುಣೆಯಲ್ಲಿ ನಂಬಿಕೆಯಿಟ್ಟು ಅವಿಚಲ ಭಕ್ತಿಯನ್ನು ದೀರ್ಘಕಾಲ ಸಾಧನೆ ಮಾಡಬೇಕು. ಸಾಧಕನು ಸಜ್ಜನರ ಸಹವಾಸ ಮಾಡಬೇಕು. 'ದಾಸನಾಗೋಭವಪಾಶನೀಗೋ' ಎಂದು ಸಂಸಾರ ಬಂಧನವನ್ನು ಕಳೆದುಕೊಳ್ಳಬೇಕೆಂದು ಹೇಳಿದ್ದಾರೆ.

ಕಪಟವೇಷ, ಬೂಟಕದ ಭಕ್ತಿ, ಅನಾಚಾರಗಳು ಇವರಿಗೆ ಸಹನೆಯಾಗಲಿಲ್ಲ. ಬಾಹ್ಯವೇಷದಿಂದ ಯಾರೂ ಶ್ರೇಷ್ಠರಾಗರು. ಅಂತರಂಗ ಶುದ್ಧಿಯಿಲ್ಲದೆ ಬರಿಯ ನಟನೆಯ ಭಕ್ತಿ ತರವಲ್ಲವೆಂದು ಸಾರಿ, ವೇಷಧಾರಿ ಜನರ ದುರ್ನಡತೆಯನ್ನು ಖಂಡಿಸಿದ್ದಾರೆ. ದಾಸರಿಗೆ ಅನಾಚಾರ ಎಲ್ಲಿ ಕಂಡರೂ ಸಹಿಸದು. ಭಕ್ತನಿಗೆ ಮನೋನೈರ್ಮಲ್ಯ ಮತ್ತು ಸುಶೀಲವಂತಿಕೆ ಅಗತ್ಯ. ಶೀಲಭ್ರಷ್ಟನಿಗೆ ಭಗವಂತನು ಒಲಿಯನು ಎಂದರು

' ಜಪವ ಮಾಡಿದರೇನು ತಪವ ಮಾಡಿದರೇನು, ಕಪಟಗುಣ ವಿಪರೀತ ಕಲುಷ ವಿದ್ದವರು ? '.

ಕನಕದಾಸರು ಲೋಕದ ಹಿತದೃಷ್ಟಿಯಿಂದ ನಾಡಿನ ನಾನಾ ಕಡೆಗಳಲ್ಲಿ ಸಂಚರಿಸಿ ಭಕ್ತಿ ತತ್ವದ ಹಿರಿಮೆಯನ್ನು ಪ್ರಚಾರ ಮಾಡಿದರು. ' ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಹರಿಯ' ಎಂದು ಸಾರಿ ಸಾರಿ ಹೇಳಿದರು. ದಾಸರು ದೇಶದ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶನ ಮಾಡಿದರು. ತೀರ್ಥಯಾತ್ರೆಯು ಸದ್ಗತಿಯನ್ನು ಹೊಂದುವುದಕ್ಕೆ ಸುಲಭ ಮಾರ್ಗವೆಂದು ತಿಳಿಸಿದ್ದಾರೆ. ತಿರುಪತಿ ವೆಂಕಟೇಶ್ವರನನ್ನು ಒಬ್ಬ ಶೆಟ್ಟಿಗೆ ಹೋಲಿಸಿ ಹಾಸ್ಯ ಮಾಡಿದ್ದಾರೆ ಶ್ರೀರಂಗಪಟ್ಟಣಕ್ಕೆ ಹೋದ ದಾಸರು ಅಲ್ಲಿ ಮಲಗಿರುವ ರಂಗನಾಥಸ್ವಾಮಿಯನ್ನು ನೋಡಿ ' ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ ಜಗದೇಕ ವಿಖ್ಯಾತ ಪಶ್ಚಿಮರಂಗನಾಥ ' ಎಂದು ಪ್ರಶ್ನಿಸಿದ್ದಾರೆ. ಅಲ್ಲಿಂದ ಮೇಲುಕೋಟೆ, ಬೇಲೂರು, ಬಂಕಾಪುರ, ಬಿಳಿಗಿರಿ, ತಿರುಕೋನಲ್ಲೂರು ಮುಂತಾದ ಹಲವು ಕ್ಷೇತ್ರಗಳನ್ನು ಸಂದರ್ಶಿಸಿದರು.

ಕನಕದಾಸರು ಮಧ್ವಾಚಾರ್ಯರ ತತ್ವಗಳನ್ನು ಪ್ರಧಾನವಾಗಿ ಹೇಳಿದ್ದರೂ ರಾಮಾನುಜಾಚಾರ್ಯರ ಸಿದ್ಧಾಂತವನ್ನು ಕೊಂಡಾಡಿದ್ದಾರೆ "ರಾಮಾನುಜ ಮತೋದ್ಧಾರಕ ! ತಾಮಸಗುಣ ಪಾಶವಜ್ರದಂಡ" ಎಂಬ ಕೀರ್ತನೆ ಪ್ರಸಿದ್ಧವಾಗಿದೆ. ತಮ್ಮ ಕೀರ್ತನೆಗಳಲ್ಲಿ ಶ್ರೀಹರಿಯ ನಾನಾ ಅವತಾರಗಳನ್ನು ಕುರಿತು ಹಾಡಿದ್ದಾರೆ. ಭಾಗವತದ ಹಲವು ಪ್ರಕರಣಗಳನ್ನು ಪ್ರಸ್ತಾಪಿಸಿರುವುದಲ್ಲದೆ ಶ್ರೀಕೃಷ್ಣನ ಲೀಲೆಗಳನ್ನು ವರ್ಣಿಸಿದ್ದಾರೆ. ಇವರ ಕೀರ್ತನೆಗಳು ಭಕ್ತಿ, ವ್ಯಂಗ್ಯ, ಹಾಸ್ಯ, ಶೃಂಗಾರ, ಪುರಾಣ ಕಥೆ ಮೊದಲಾದ ವಿವಿಧ ಅಂಶಗಳನ್ನು ಒಳಗೊಂಡಿವೆ. ಭಕ್ತಿಪ್ರಚಾರ, ನೀತಿ ನಿರೂಪಣೆಗಳೆರಡೂ ಇವರ ಉಪದೇಶ ಸಾರ.

ದಾಸರು ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮತ್ತು ಹರಿಭಕ್ತಿಸಾರ ಎಂಬ ನಾಲ್ಕು ಕಾವ್ಯಗಳನ್ನು ರಚಿಸಿದ್ದಾರೆ. ಮೋಹನತರಂಗಿಣಿಯು ಕೃಷ್ಣ ರುಕ್ಮಿಣಿಯರ ವಿಹಾರ ವರ್ಣನೆಯಿಂದ ತೊಡಗಿ ಉಷಾ ಅನಿರುದ್ಧರ ವಿವಾಹ ಕಥೆಯವರೆಗೆ ವಿಸ್ತಾರವಾಗಿದೆ ನಳಚರಿತ್ರೆಯು ದಾಸರ ಕೃತಿಗಳಲ್ಲಿ ಬಹಳ ಲೋಕಪ್ರಿಯವಾದುದು ರಾಮಧಾನ್ಯ ಚರಿತ್ರೆಯು ರಾಗಿ ಮತ್ತು ಅಕ್ಕಿಗೆ ನಡೆದ ಕಲಹದ ಕಥೆಯಾದ ಸ್ವಾರಸ್ಯಕರವಾದ ಕಾವ್ಯ. ಹರಿಭಕ್ತಿಸಾರವು ಒಂದು ಉತ್ತಮ ಶತಕ ಗ್ರಂಥ. ಇದರ ಪ್ರತಿಯೊಂದು ಪದ್ಯವೂ ' ರಕ್ಷಿಸು ನಮ್ಮನನವರತ ' ಎಂಬ ಬೇಡಿಕೆಯೊಂದಿಗೆ ಮುಗಿಯುತ್ತದೆ. ಕನಕದಾಸರು ಶ್ರೇಷ್ಠ ಹರಿಭಕ್ತರು. ಉತ್ತಮ ಕೀರ್ತನಕಾರರು ಒಳ್ಳೆಯ ಕೃತಿಗಳನ್ನು ರಚಿಸಿದ ಕವಿ, ಮಾನವತಾವಾದಿ. ಇಂತಹ ಭಾಗವತೋತ್ತಮರಿಗೆ ಈಡಾಗಬಲ್ಲವರು ಲೋಕದಲ್ಲಿ ವಿರಳವೆಂದು ಪುರಂದರದಾಸರು ಹೇಳಿರುವುದು ಆಶ್ಚರ್ಯವಲ್ಲ. ದಾಸರು ಪುರಂದರದಾಸರ ತಂಬೂರಿಯನ್ನು

ತಿರುಪತಿಯ ಭಂಡಾರದಲ್ಲಿಟ್ಟರು. ತಮ್ಮ ಏಕತಾರ್‌ನ್ನೂ ದಂಡವನ್ನೂ ಗರ್ಭಗೃಹದ ಮೇಲ್ಭಾಗದಲ್ಲಿ ಬಂಧಿಸಿದರು. ಒಳಗೆ ಪ್ರವೇಶಮಾಡಿ ದೇವರಲ್ಲಿ ಐಕ್ಯರಾದರು. ಕೊನೆಯ ದಿನದಲ್ಲಿ ಕಾಗಿನೆಲೆಯಲ್ಲಿದ್ದರೆಂದು ಕೆಲವರು ಹೇಳುತ್ತಾರೆ. ಕನಕದಾಸರ ಕೀರ್ತನೆಗಳು 'ಕಾಗಿನೆಲೆ ಆದಿಕೇಶವ' ಎಂಬ ಅಂಕಿತದಲ್ಲಿವೆ. ಬೇಲೂರಲ್ಲಿ ರಚಿಸಿದ ಕೀರ್ತನೆಗಳು 'ವೇಲಪುರಿಕೇಶವ' ಎಂಬ ಅಂಕಿತದಲ್ಲಿವೆ.

**ಕನಕದೀಪರ**—ಈ ರಾಗವು ೪೫ನೆಯ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಪ ನಿ

ಅ: ದ ಪ ಮ ಗ ರಿ ಸ ನಿ ಸ

**ಕನಕನವರ್ಣದ**—ಈ ರಾಗವು ೬೭ನೆಯ ಮೇಳಕರ್ತ ಸುಚರಿತ್ರದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕನಕನಾಮಾಮಣಿ**—ಈ ರಾಗವು ೬೨ನೆಯ ಮೇಳಕರ್ತ ರಿಷಭಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕನಕರಸಾಳಿ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ದ ಪ ಮ ಗ ರಿ ಸ

**ಕನಕವರಾಳಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ̇

ಅ: ಸ̇ ನಿ ದ ನಿ ಪ ಮ ಗ ರಿ ಸ

**ಕನಕವಸಂತ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ದ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕನಕಸಿಂಹಾರವ**—ಈ ರಾಗವು ೬೧ನೆಯ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ರಿ ಸ

**ಕನಕಶ್ರೀಕಂಠಿ**—ಈ ರಾಗವು ೭೦ನೆಯ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ದ ನಿ ಪ ಮ ರಿ ಸ

**ಕನಕಭವಾನಿ**—ಈ ರಾಗವು ೭೬ನೆಯ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ

ಅ: ಸ ನಿ ಪ ಮ ರಿ ಸ

**ಕನಕಭೂಷಾವಳಿ**—ಈ ರಾಗವು ೫೮ನೆಯ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ

ಆ: ಸ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಕನಕಾದ್ರಿ**—ಈ ರಾಗವು ೯ನೆಯ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಕನಕಾಂಗಿ**—ಇದು ಒಂದನೆಯ ಮೇಳಕರ್ತರಾಗ. ಕರ್ಣಾಟಕ ಸಂಗೀತದ ಶುದ್ಧಮೇಳ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಪಂಚಮ ಮತ್ತು ಷಡ್ಜಗಳಲ್ಲದೆ ಶುದ್ಧರಿಷಭ, ಶುದ್ಧಗಾಂಧಾರ, ಶುದ್ಧಮಧ್ಯಮ, ಧೈವತ ಮತ್ತು ನಿಷಾದಗಳು ಇದರ ಮುಖ್ಯ ಸ್ವರಗಳು. ರಿಷಭ ಧೈವತಗಳು ಮತ್ತು ಗಾಂಧಾರ ನಿಷಾದಗಳು ಪರಸ್ಪರ ಸಂವಾದಿಗಳು. ಷಡ್ಜವು ಗ್ರಹ, ನ್ಯಾಸ ಮತ್ತು ಅಂಶಸ್ವರ. ಸಾರ್ವಕಾಲಿಕರಾಗ. ತ್ಯಾಗರಾಜರ ಶ್ರೀಗಣನಾಥಂ ಭಜಾಮ್ಯಹಂ ಎಂಬ ಕೃತಿಯು ಈ ರಾಗದಲ್ಲಿದೆ.

**ಕನ್ನಡ**—ಈ ರಾಗವು ೨೯ನೆಯ ಮೇಳಕರ್ತ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ಪ ದಾ ನಿ ಸ

ಅ: ಸ ನಿ ಸ ದಾ ಪ ಮ ಗಾ ಮ ರಿ ಸ

ಉಭಯವಕ್ರ ಷಾಡವ ಸಂಪೂರ್ಣ ಭಾಷಾಂಗರಾಗ. ದ ನಿ ದ ಪ ಎಂಬ ಪ್ರಯೋಗ ದಲ್ಲಿ ಕೈಶಿಕಿನಿಷಾದವೂ, ದ ನಿ ಸಾ, ನಿ ಸ ದಾ, ರಿ ನಿ ಸಾ ಎಂಬ ಪ್ರಯೋಗಗಳಲ್ಲಿ ಕಾಕಲಿ ನಿಷಾದವು ಪ್ರಯೋಗಿಸಲ್ಪಟ್ಟಿದೆ. ಸ ರಿ ಗ ಮ, ಸ ಮ ಗ ಮ ಎಂಬ ಪ್ರಯೋಗಗಳು ಬಳಕೆಯಲ್ಲಿವೆ. ಗಾಂಧಾರ, ಧೈವತಗಳು ಜೀವಸ್ವರಗಳು. ಆರೋಹಣ

ದಲ್ಲಿ ದೀರ್ಘ ಧೈವತವು ಮತ್ತು ಅವರೋಹಣದಲ್ಲಿ ದೀರ್ಘ ಗಾಂಧಾರವು ಬಹು ರಂಜಕತ್ವವನ್ನುಂಟುಮಾಡುತ್ತವೆ. ಕೆಲವು ಲಾಕ್ಷಣಿಕರ ಮತದಂತೆ ಇದು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ ಸಾರ್ವಕಾಲಿಕರಾಗ

ಈ ರಾಗದ ಕೆಲವು ಪ್ರಸಿದ್ಧ ಕೃತಿಗಳು.

| | | | | |
|---|---|---|---|---|
| ಸಾಕೇತನಿಕೇತನ | — | ರೂಪಕ | — | ತ್ಯಾಗರಾಜರು |
| ಇದೇಭಾಗ್ಯಮು | — | ಛಾಪು | — | ತ್ಯಾಗರಾಜರು |
| ಭಜರೇಭಜಮಾನಸ | — | ಛಾಪು | — | ತ್ಯಾಗರಾಜರು |
| ಶ್ರೀಮಾತೃಭೂತಂ | — | ಛಾಪು | — | ಮುತ್ತುಸ್ವಾಮಿದೀಕ್ಷಿತರು |
| ಪರಿಪಾಹಿಮಾಂ ಶ್ರೀರಘುಪತೇ | — | ಆದಿ | — | ಮೈಸೂರು ವಾಸುದೇವಾಚಾರ್ಯ |
| ಅಪರಾಜಿತೇ | — | ಆದಿ | — | ಮುತ್ತಯ್ಯಭಾಗವತರು |
| ಇಟುವಂಟಿನಾವಲವು (ಪದ) | — | ತ್ರಿಪುಟ | — | ಕ್ಷೇತ್ರಜ್ಞ |

(೨) ಇದೇ ಮೇಳಕರ್ತ ಜನ್ಯವಾದ ಮತ್ತೊಂದು ಕನ್ನಡ ರಾಗವಿದೆ.

ಆ: ಗ ರಿ ಗ ರಿ ಗ ಮ ಪ ಮ ದ ನಿ ಸ

ಅ: ಸ ದ ಪ ಮ ಪ ಗ ಮ ರಿ ಸ

**ಕನ್ನಡಗೌಳ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ. ಇದಕ್ಕೆ ಕನ್ನಡಗೌಳಿ ಎಂಬ ಹೆಸರೂ ಇದೆ.

(೧) ಆ: ಸ ರಿ ಗ ಮ ಪ ನಿ ಸ
ಅ: ಸ ನಿ ದ ಪ ಮ ಗ ಸ

(೨) ಆ: ಸ ರಿ ಗ ಮ ಪ ದ ನಿ ಸ
ಅ: ಸ ನಿ ಪ ಮ ಮ ಗ ಸ

ತ್ಯಾಗರಾಜರು ಮೊದಲಿನ ಪಕ್ಷದಂತೆಯೇ ಪ್ರಯೋಗಿಸಿದ್ದಾರೆ. ಇದು ಈಗ ರೂಢಿಯಲ್ಲಿದೆ. ಆರೋಹಣದಲ್ಲಿ ಕೈಶಿಕಿ ನಿಷಾದವೂ, ಅವರೋಹಣದಲ್ಲಿ ಸಾಧಾರಣ ಗಾಂಧಾರವೂ ರಾಗಛಾಯಾ ಸ್ವರಗಳು. ದೀನ ಮತ್ತು ಕರುಣ ರಸಪ್ರಧಾನವಾದ ಸಾರ್ವಕಾಲಿಕರಾಗ. ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರು ಮೈಸೂರು ಆಸ್ಥಾನದಲ್ಲಿ ಈ ರಾಗವನ್ನು ಬಹು ವಿಸ್ತಾರವಾಗಿ ಹಾಡಿ ಒಂದು ಸೊಗಸಾದ ಪಲ್ಲವಿಯನ್ನು ಹಾಡಿದರೆಂದು ಪ್ರತೀತಿಯಿದೆ. ತ್ಯಾಗರಾಜರ ಸೊಗಸು ಜೂಡತರಮಾ ಮತ್ತು ಓರಜೂಪುಜೂ ಚೇದಿ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಕನ್ನಡಕಾಂಭೋದಿ**—ಪುರಂದರದಾಸರ ಕೃತಿಗಳಲ್ಲಿ ಕಂಡುಬರುವ ಒಂದು ರಾಗ.

**ಕನ್ನಡಕುರಂಜಿ** – ಈ ರಾಗವು ೪೯ನೆಯ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ರಿ ಸ

**ಕನ್ನಡದರ್ಬಾರ್**—ಈ ರಾಗವು ೩೩ನೆಯ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ̇

ಅ: ಸ̇ ನಿ ದ ಪ ಮ ರಿ ಸ

**ಕನ್ನಡದೀಪರ**—ಈ ರಾಗವು ೪೪ನೆಯ ಮೇಳಕರ್ತ ಭವಪ್ರಿಯುದ ಒಂದು ಜನ್ಯರಾಗ

(೧) ಆ: ಸ ರಿ ಗ ಮ ದ ನಿ ಸ̇

ಅ: ಸ ನಿ ದ ಪ ದ ಮ ಗ ರಿ ಸ

(೨) ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ಕನ್ನಡಪಂಚಮ**—ಈ ರಾಗವು ೨೬ನೆಯ ಮೇಳಕರ್ತ ಚಾರುಕೇಶಿಯ ಒಂದು ಜನ್ಯರಾಗ.

(೧) ಆ: ಸ ರಿ ಗ ಮ ಪ ನಿ ಸ̇

ಅ: ಸ̇ ನಿ ದ ನಿ ದ ಪ ಮ ಗ ರಿ ಸ

(೨) ಆ: ಸ ರಿ ಗ ಮ ಪ ನಿ ಸ

ಅ: ಸ̇ ನಿ ದ ನಿ ಪ ಮ ಗ ಸ

**ಕನ್ನಡಮಲ್ಹಾರ್**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ̇

ಅ: ಸ̇ ನಿ ದ ಮ ಗ ಸ

**ಕನ್ನಡಮಾರುವ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ

ಆ: ಸ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ಸ

**ಕನ್ನಡಮನೋಹರಿ**—ಈ ರಾಗವು ೨೮ನೆಯ ಮೇಳದ ಜನ್ಯವಾದ ಒಂದು ಭಾಷಾಂಗ ರಾಗವೆಂದು ವೆಂಕಟಮುಖಿಯ ಚತುರ್ದಂಡಿ ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಕನ್ನಯ್ಯಭಾಗವತರು**—ಇವರು ತ್ಯಾಗರಾಜರ ಒಬ್ಬ ಪ್ರಸಿದ್ಧ ಶಿಷ್ಯರು. ತಿರುವನಂತಪುರಕ್ಕೆ ಹೋಗಿ ಸ್ವಾತಿತಿರುನಾಳ್ ಮಹಾರಾಜರ ಆಸ್ಥಾನದಲ್ಲಿ ತ್ಯಾಗರಾಜರ ಕೃತಿಗಳನ್ನು ಹಾಡಿದವರಲ್ಲಿ ಮೊದಲಿಗರು. ಅದೇ ಆಸ್ಥಾನ ವಿದ್ವಾಂಸರಾಗಿ ನೇಮಕಗೊಂಡು ಗೌರವಿಸಲ್ಪಟ್ಟರು.

**ಕನ್ನಡಸಾಳವಿ**—ಈ ರಾಗವು ೮ನೆಯ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ನಿ ದ ಮ ಗ ಸ

**ಕನ್ನಡಸೌರಾಷ್ಟ್ರ**—ಈ ರಾಗವು ೧೦ನೆಯ ಮೇಳಕರ್ತ ನಾಟಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ದ ಪ ದ ನಿ ಸ

ಅ: ಸ ನಿ ದ ಪ ಮ ಗ ಸ

**ಕನ್ನಡವರಾಳಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ನಿ ಪ ಗ ರಿ ಸ

**ಕನ್ನಡವೇಳಾವಳಿ**—ಈ ರಾಗವು ೪೮ನೆಯ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಪ ನಿ ಸ ರಿ ಗ ಮ ಪ

ಅ: ಪ ಮ ಗ ರಿ ಸ ನಿ ದ ನಿ ಪ

**ಕನ್ಯಾವಿತಾನ**—ಈ ರಾಗವು ೩೧ನೆಯ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಗ ರಿ ಸ

**ಕನಿಷ್ಠ**—ನಾಯಕನ ಪ್ರೀತಿಗೆ ಅಷ್ಟಾಗಿ ಪಾತ್ರಳಾಗದಿರುವ ನಾಯಕಿ.

**ಕನಿಷ್ಠಕ**—ಅತ್ಯಂತ ಚಿಕ್ಕದಾದುದು ಎಂದರ್ಥ. ವಾದ್ಯವೃಂದಗಳನ್ನು ವಾದ್ಯಗಳ ಸಂಖ್ಯೆಯನ್ನನುಸರಿಸಿ ಉತ್ತಮ, ಮಧ್ಯಮ ಮತ್ತು ಕನಿಷ್ಠಕವೆಂದು ವರ್ಗೀಕರಿಸಲಾಗಿದೆ. ಉತ್ತಮ ವೃಂದದಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ವಾದ್ಯಗಳು, ಮಧ್ಯಮ ವೃಂದದಲ್ಲಿ ಅದಕ್ಕಿಂತ ಕಡಿಮೆ ಸಂಖ್ಯೆಯಲ್ಲೂ, ಮತ್ತು ಕನಿಷ್ಠಕ ವೃಂದದಲ್ಲಿ ಇರಬೇಕಾದ ಕಡಿಮೆ ಸಂಖ್ಯೆಯ ವಾದ್ಯಗಳಿರುತ್ತವೆ. ಈ ವರ್ಗೀಕರಣವನ್ನು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಹೇಳಿದೆ.

**ಕನಿಷ್ಠಿಕಮಿಾಟು** ವೀಣೆ ಅಥವಾ ಗೋಟ್ಟುವಾದ್ಯದ ತಾಳದ ತಂತಿಗಳನ್ನು ಬಲಗೈಯ ಕಿರುಬೆರಳಿನಿಂದ ಮೇಲಕ್ಕೆ ಮಿಾಟುವುದು.

**ಕನ್ನುಸ್ವಾಮಿ ನಟುವನಾರ್**—ಇವರು ಈ ಶತಮಾನದಲ್ಲಿದ್ದರು. ತಂಜಾವೂರು ಸೋದರ ಚತುಷ್ಟಯದ ಮನೆತನಕ್ಕೆ ಸೇರಿದವರು. ಇವರು ಬರೋಡಕ್ಕೆ ಹೋಗಿ ನೆಲೆಸಿದವರಲ್ಲಿ ಮೊದಲಿಗರು. ಅಲ್ಲಿ ಭರತನಾಟ್ಯದ ಒಂದು ವಿದ್ಯಾಶಾಲೆಯನ್ನು ಸ್ಥಾಪಿಸಿದರು. ಅಲ್ಲಿಯ ರಾಜರ ಆಸ್ಥಾನದ ಪ್ರಸಿದ್ಧ ನಾಟ್ಯಕಲಾವಿದೆಯರಾಗಿದ್ದ ಗೌರಿ ಮತ್ತು ಕಾಂತಿಮತಿ ಎಂಬುವರು ಇವರ ಪ್ರಸಿದ್ಧ ಶಿಷ್ಯರು.

**ಕಪಿಲಾ**—ಈ ರಾಗವು ೧೨ನೆಯ ಮೇಳಕರ್ತ ರೂಪವತಿಯ ಒಂದು ಜನ್ಯರಾಗ

ಆ: ಸ ರಿ ಗ ಪ ಧ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಕಪಿಸ್ಥಳಂ ಮೂಪ್ಪನಾರ್**—ಕಪಿಸ್ಥಳಂ ಎಂಬುದು ತಮಿಳುನಾಡಿನ ತಂಜಾವೂರು ಜಿಲ್ಲೆಯ ಒಂದು ಊರು. ಇಲ್ಲಿಯ ಮೂಪ್ಪನಾರ್ ಎಂಬುವರು ಸಂಗೀತಪ್ರಿಯರೂ ಪೋಷಕರೂ ಆಗಿದ್ದರು. ತ್ಯಾಗರಾಜರ ಶಿಷ್ಯರಾದ ಉಮಯಾಳ್ಪುರಂ ಕೃಷ್ಣಭಾಗವತರು ಮತ್ತು ಸುಂದರಭಾಗವತರಲ್ಲಿ ಸಂಗೀತ ಕಲಿಯಲು ಬಂದ ವಿದ್ಯಾರ್ಥಿಗಳ ಪೋಷಣೆಗೆ ಏರ್ಪಾಡು ಮಾಡುತ್ತಿದ್ದರು. ಉಚಿತ ವಸತಿ ಮತ್ತು ಊಟ ಹಾಗೂ ಪ್ರತಿವಾರವೂ ಅಭ್ಯಂಜನ ಸ್ನಾನಕ್ಕೆ ವ್ಯವಸ್ಥೆ ಗೊಳಿಸುತ್ತಿದ್ದರು. ಕೃಷ್ಣಭಾಗವತರಿಂದ ವಿದ್ಯಾರ್ಥಿಗಳ ಪ್ರಗತಿಯ ವರದಿ ಬರುತ್ತಿರುವವರೆಗೂ ಕಪಿಸ್ಥಳದ ಛತ್ರದಲ್ಲಿ ಅವರಿಗೆ ಈ ಅನುಕೂಲಗಳು ದೊರಕುತ್ತಿದ್ದುವು. ಮೂಪ್ಪನಾರರ ಕುಟುಂಬ ವರ್ಗದವರು ತಿರುವೈಯ್ಯಾರಿನ ತ್ಯಾಗರಾಜೋತ್ಸವದಲ್ಲಿ ಅಪಾರ ಶ್ರದ್ಧೆಯಿಂದ ಆಸಕ್ತಿವಹಿಸಿ ಉದಾರವಾಗಿ ಖರ್ಚು ಮಾಡುತ್ತಿದ್ದರು.

**ಕಪಿತ್ಥಹಸ್ತ**—ಇದು ಭರತನಾಟ್ಯದ ಒಂದು ಅಸಂಯುತ ಹಸ್ತಮುದ್ರೆ. ಶಿಖರ ಹಸ್ತದ ಅಂಗುಷ್ಠದ ಮೇಲೆ ತೋರುಬೆರಳನು ಮಡಿಸಿದರೆ ಕಪಿತ್ಥಹಸ್ತವಾಗುವುದು. ಲಕ್ಷ್ಮಿ, ಸರಸ್ವತಿಯರನ್ನು ಸೂಚಿಸುವುದು, ಸುತ್ತುವುದು, ತಾಳವನ್ನು ಹಿಡಿದುಕೊಳ್ಳುವಿಕೆ, ಹಾಲು ಹಿಂಡುವಿಕೆ, ಕಾಡಿಗೆ ಇಟ್ಟುಕೊಳ್ಳುವುದು, ಆನಂದಕ್ಕಾಗಿ ಪುಷ್ಪ ಹಿಡಿದುಕೊಳ್ಳುವುದು, ಮುಸುಕು ಹಾಕಿಕೊಳ್ಳುವುದು, ಧೂಪ ದೀಪಾರ್ಚನೆಗಳನ್ನು ತೋರಿಸಲು ಈ ಹಸ್ತ ಉಪಯೋಗಿಸಲ್ಪಡುವುದು.

**ಕಪಡಿಯ**—ಒಂದು ಕಡ್ಡಿಯಿಂದ ನುಡಿಸಲಾಗುವ ಒಂದು ಸಣ್ಣ ಮದ್ದಲೆ.

**ಕಪ್ಪಲ್**—ಇದು ತಮಿಳಿನ ಓಡಂ ಅಥವಾ ಪುನ್ನಾಗವರಾಳಿರಾಗ. ಪ್ರಾರಂಭ ಮತ್ತು ಮುಕ್ತಾಯದ ಭಾಗವನ್ನು ವಿಳಂಬದಲ್ಲಿ ಹಾಡುವರು ಮಿಕ್ಕ ಭಾಗವನ್ನು ದ್ರುತಗತಿಯಲ್ಲಿ ಹಾಡುವರು. ವಿಳಂಬದ ಭಾಗವು ಚತುರಶ್ರಗತಿ ಆದಿತಾಳದಲ್ಲಿ, ಮಿಕ್ಕಭಾಗವು ಖಂಡಗತಿ ಆದಿತಾಳದಲ್ಲೂ ಇರುತ್ತದೆ. ದೀರ್ಘವಾದ ಕಥಾನಕಗಳನ್ನು

ಈ ಶೈಲಿಯಲ್ಲಿ ನಿರೂಪಿಸುತ್ತಾರೆ. ರಾಮಾಯಣದ ಕಥೆಯನ್ನು ಈ ರೀತಿಯಲ್ಲಿ ನಿರೂಪಿಸಿರುವುದು ರಾಮಾಯಣಕಪ್ಪಲ್.

**ಕರ್ಪೂರ**—ಈ ರಾಗವು ೩೦ನೆಯ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ಕಪೋತ**—ಭರತನಾಟ್ಯದ ಅಂಜಲಿ ಹಸ್ತದಲ್ಲಿನ ಮೊದಲು ತುದಿ, ಪಾರ್ಶ್ವ ಭಾಗಗಳನ್ನು ಸೇರಿಸುವುದು ಕಪೋತ ಹಸ್ತ. ಪ್ರಮಾಣ, ಗುರುಗಳಲ್ಲಿ ಸಂಭಾಷಣೆ, ವಿನಯ, ಒಪ್ಪಿಗೆತೋರುವಿಕೆಗಳಲ್ಲಿ ಈ ಹಸ್ತ ವಿನಿಯೋಗಿಸಲಾಗುವುದು.

**ಕಫೈ**—ಇದು ಈಗ ಪ್ರಚಲಿತವಿಲ್ಲದ ಮೊದಲು ಮತ್ತು ಕೊನೆಯಲ್ಲಿ ಜತಿಗಳಿರುವ ಒಂದು ಬಗೆಯ ದೇಶೀಪ್ರಬಂಧ. ಇಂತಹ ಒಂದು ಪ್ರಬಂಧವನ್ನು ಸಂಗೀತ ಸಂಪ್ರದಾಯ ಪ್ರದರ್ಶಿನಿ ಎಂಬ ಗ್ರಂಥದಲ್ಲಿ (ಸಂಪುಟ ೨. ಪು. ೧೯೧) ಕೊಟ್ಟಿದೆ. ಇದು ಯಮುನಾಕಲ್ಯಾಣಿ ರಾಗದಲ್ಲಿರುವ ಆದಿತಾಳದ ಪ್ರಬಂಧ.

**ಕಬೀರದಾಸರು**—ಭಾರತದ ಇತಿಹಾಸದಲ್ಲಿ ಭಕ್ತಿ ಚಳುವಳಿಯ ಕಾಲವು ಹಿಂದೀ ಸಾಹಿತ್ಯ ಚರಿತ್ರೆಯಲ್ಲಿ ಸುವರ್ಣಯುಗವಾಗಿದೆ. ಈ ಯುಗದ ಸಾಹಿತ್ಯ ಸೃಷ್ಟಿಗೆ ಭಕ್ತಿಯೇ ಮೂಲಚೇತನ. ಒಂದೊಂದು ಭಕ್ತಿಸಾಧನೆಯ ಪಂಥಕ್ಕೆ ಒಬ್ಬೊಬ್ಬರು ಮೂಲ ಪ್ರವರ್ತಕರಾಗಿದ್ದರು. ಜ್ಞಾನಭಕ್ತಿಗೆ ಕಬೀರದಾಸರೂ, ರಾಮಭಕ್ತಿಗೆ ತುಳಸೀದಾಸರೂ, ಕೃಷ್ಣಭಕ್ತಿಗೆ ಸೂರದಾಸರೂ ಮೂಲಪ್ರವರ್ತಕರಾಗಿದ್ದರು.

ಕಬೀರದಾಸರ ಜೀವನವು ರಹಸ್ಯ ಭ್ರಮೆಗಳಿಂದಾವರಿಸಿದೆ. ಅವರ ಜನ್ಮ, ಕಾಲ, ಮರಣಗಳ ಬಗ್ಗೆ ನಮಗೆ ಯಾವ ಸ್ಪಷ್ಟ ನಿದರ್ಶನಗಳೂ ಸಿಕ್ಕುತ್ತಿಲ್ಲ. ಜನ ಜನಿತವಾದ ಒಂದು ಕತೆ ಹೀಗಿದೆ. ಕಾಶಿಯಲ್ಲಿ ರಾಮಾನಂದ ಸ್ವಾಮಿಗಳೆಂಬುವರಿದ್ದರು. ಅವರ ಭಕ್ತನಾದ ಓರ್ವ ಬ್ರಾಹ್ಮಣನಿಗೆ ಓರ್ವ ವಿಧವಾಪುತ್ರಿ ಇದ್ದಳು. ಅವಳು ಒಂದು ಸಲ ತಂದೆಯ ಸಂಗಡ ಸ್ವಾಮಿಗಳನ್ನು ಸಂದರ್ಶಿಸಿ ನಮಸ್ಕರಿಸಿದಾಗ 'ಪುತ್ರವತೀಭವ' ಎಂದು ಅವರು ಆಶೀರ್ವದಿಸಿದರು. ಮಹಾತ್ಮರ ನುಡಿಯು ಹುಸಿಯಾಗುವುದುಂಟೆ? ಅದರಂತೆ ಅವಳಿಗೆ ಒಂದು ಗಂಡು ಮಗು ಜನಿಸಿತು. ಜನಾಪವಾದ ಹಾಗೂ ಮರ್ಯಾದೆಯ ರಕ್ಷಣೆಗಾಗಿ ಆಕೆ ಆ ಮಗುವನ್ನು ಲಹರತಾರಾ ಎಂಬ ಕೆರೆಯ ದಂಡೆಯ ಮೇಲೆ ಬಿಟ್ಟು ಬಂದಳಂತೆ. ಅದನ್ನು ನೋಡಿದ ಆಲೀ ಅಥವಾ ನೀರೂ ಎಂಬ ನೇಕಾರನು ಅದನ್ನು ತನ್ನ ಮನೆಗೆ ಎತ್ತಿಕೊಂಡು ಹೋಗಿ ಜೋಪಾನವಾಗಿ ಬೆಳೆಸಿದನು. ಸಂತಾನಹೀನರಾದ ನೀರೂ ಮತ್ತು ನೀಮಾ ದಂಪತಿಗಳಿಗೆ ಅನುಕೂಲವಾಯಿತು. ಈ ಮಗುವೇ ಬೆಳೆದು ಮುಂದೆ ಕಬೀರ ದಾಸನಾದನು.

ಕಬೀರದಾಸರ ಕಾಲದ ಬಗ್ಗೆ ಜನಜನಿತವಾದ ಮಾತೇ ಆಧಾರ ಇವರು ೧೪೫೬ರಲ್ಲಿ ಜನಿಸಿ ೧೫೭೫ರಲ್ಲಿ ಕಾಲವಾದರು. ಗುರುಗಳ ಉಪದೇಶವಿಲ್ಲದೆ ಉಪದೇಶವನ್ನು ಯಾರೂ ಮಾನ್ಯ ಮಾಡರೆಂದು ತಿಳಿದು ಗುರುವಿನ ಅನ್ವೇಷಣೆಯಲ್ಲಿ ತೊಡಗಿದರು ಆಗ ಕಾಶಿಯಲ್ಲಿ ಪ್ರಸಿದ್ಧರಾಗಿದ್ದ ಸ್ವಾಮಿ ರಾಮಾನಂದರು ಪ್ರತಿದಿನ ಪ್ರಾತಃಕಾಲ ಬ್ರಾಹ್ಮೀಮುಹೂರ್ತದಲ್ಲಿ ಪಂಚಗಂಗಾ ಘಾಟ್‌ನಲ್ಲಿ ಸ್ನಾನಮಾಡಲು ಹೋಗುತ್ತಿದ್ದರು. ಕಬೀರರು ಈ ಘಟ್ಟದ ಮೆಟ್ಟಲಿನ ಮೇಲೆ ಮಲಗಿದರು. ಸ್ವಾಮಿಗಳು ಸ್ನಾನಾನಂತರ ಹಿಂತಿರುಗುವಾಗ ಕತ್ತಲೆಯಲ್ಲಿ ಕಾಣದೆ ತಮ್ಮ ಪಾದವನ್ನು ಕಬೀರರ ತಲೆಯ ಮೇಲೆ ಇಟ್ಟರು. ಆಗ ಸ್ವಾಮಿಯವರ ಬಾಯಿಂದ ರಾಮ ರಾಮ ಎಂಬ ಶಬ್ದ ಹೊರಟಿತು. ಕಬೀರರು ತಕ್ಷಣವೇ ಎದ್ದು ಸ್ವಾಮಿಗಳ ಪಾದವನ್ನು ಹಿಡಿದು 'ನೀವಿಂದು ರಾಮನಾಮದ ಮಂತ್ರವನ್ನು ಆಶೀರ್ವದಿಸಿ ನನ್ನ ಗುರುಗಳಾದಿರಿ' ಎಂದರು. ರಾಮಾನಂದರು ಪ್ರತ್ಯುತ್ತರಿಸದೆ ಹೊರಟುಹೋದರು. ಅಂದಿನಿಂದ ಕಬೀರರು ರಾಮಾನಂದರ ಶಿಷ್ಯರಾದರು. ಕಬೀರರು ಮುಸಲ್ಮಾನ ತಂದೆ ತಾಯಿಗಳ ಮಗನಿರಲಿ, ಇಲ್ಲದಿರಲಿ, ಮುಸಲ್ಮಾನ ಮನೆತನದಲ್ಲಿ ಲಾಲನೆ ಪಾಲನೆಗಳನ್ನು ಪಡೆದಿದ್ದರೂ ಅವರ ಹಿಂದೂ ವಿಚಾರಧಾರೆಯು ಬಾಲ್ಯದಿಂದ ಹರಿಯುತ್ತ ಬಂದಿದೆ. ಮುಸಲ್ಮಾನ ಕಬೀರ ಪಂಥದವರು ಕಬೀರರು ಸೂಫಿ ಮುಸಲ್ಮಾನ ಫಕೀರ ಶೇಖ ತಕಿಯವರಿಂದ ದೀಕ್ಷೆಯನ್ನು ಪಡೆದರೆಂದು ಹೇಳುತ್ತಾರೆ. ಆದರೆ ಕಬೀರರು ತಮ್ಮ ಗುರುಗಳ ನಿವಾಸವು ಬನಾರಸ್ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಕಬೀರರು ಎರಡು ಸಲ ಮದುವೆಯಾದರೆಂದು ಹೇಳುತ್ತಾರೆ. ಮೊದಲನೆಯ ಹೆಂಡತಿ ಲೋಯಿ. ದ್ವಿತೀಯ ಪತ್ನಿ ಧನಿಯಾ ಎಂಬುವಳು. ಕಬೀರರು ಯಾವ ಶಾಲೆಯಲ್ಲೂ ಶಿಕ್ಷಣ ಪಡೆಯಲಿಲ್ಲ. 'ಮಸಿಕಾಗದ ಛುವೋನಹಿ, ಕಲಮಗಹ್ಯೋ ನಹಿಂಹಾಥೆ'.

ಇವರ ಅಂತ್ಯ ಸಂಸ್ಕಾರದ ಬಗ್ಗೆ ಒಂದು ಕಥೆಯಿದೆ. ಹಿಂದುಗಳು ಇವರ ಶರೀರ ವನ್ನು ಅಂತ್ಯಸಂಸ್ಕಾರ ಮಾಡಬೇಕೆಂದೂ, ಮುಸಲ್ಮಾನರು ಗೋರಿಯಲ್ಲಿಡಬೇಕೆಂದೂ ಬಯಸಿದರು. ಆಗ ಆಕಾಶವಾಣಿಯಲ್ಲಿ 'ಜಗಳವಾಡಬೇಡಿ, ನನ್ನ ಶವವನ್ನು ಎತ್ತಿನೋಡಿ' ಎಂದಾಗ, ದೇಹವು ಮಾಯವಾಗಿ ಹೂವಿನ ರಾಶಿಯಾಯಿತು. ಹಿಂದುಗಳು ತಮ್ಮ ಪಾಲಿನ ಹೂವನ್ನು ದಹನ ಮಾಡಿದರು. ಮುಸಲ್ಮಾನರು ಹೂಳಿದರು

ಈವರೆಗೆ ಕಬೀರರ ೬೧ ಗ್ರಂಥಗಳು ದೊರಕಿವೆ. ಅವರು ಒಟ್ಟು ಸುಮಾರು ೨೦೦೦೦ ಪದಗಳನ್ನು ರಚಿಸಿದ್ದಾರೆ. ಇವರ ರಚನೆಗಳ ವಿಷಯ ಜ್ಞಾನೋಪದೇಶ, ಯೋಗಾಭ್ಯಾಸ, ಸತ್ಯವಚನ, ವಿನಯ, ಪ್ರಾರ್ಥನೆ, ನಾಮಮಹಿಮೆ, ಸ್ವರಜ್ಞಾನ ಮೊದಲಾದುವು. ವರ್ಣನಾಶೈಲಿ ಸರಳ. ಕಬೀರರು ಸಹೃದಯಿ, ಸ್ಪಷ್ಟವಾದಿ ಭಕ್ತ, ತಾರ್ಕಿಕ, ಪ್ರಚಾರಕ, ಲೋಕಚತುರ ಇವರ ರಚನೆಗಳಲ್ಲಿ ಸಂದೇಶದ ಸೌಂದರ್ಯವಿದೆ. ಭಾವಗಳ ತೀವ್ರತೆ, ಶ್ರೀರಾಮಾನುಜರ ಶ್ರೀವೈಷ್ಣವ ಸಂಪ್ರದಾಯ,

ಉತ್ತರ ಪೂರ್ವದ ಸಿದ್ಧ ಹಾಗೂ ನಾಥಪಂಥ, ಪಶ್ಚಿಮದ ಸೂಫಿವಾದ, ಮಧ್ವಾ ಚಾರ್ಯರು, ವಲ್ಲಭಚಾರ್ಯರು ಮತ್ತು ಇತರ ಸಂಪ್ರದಾಯಗಳ ಪ್ರಭಾವವಿದೆ. ಕಾವ್ಯದ ಮಾಧ್ಯಮದಲ್ಲಿ ಬ್ರಹ್ಮವಿಚಾರ ಮತ್ತು ಆತ್ಮ ಸಾಧನೆಗಳನ್ನು ವ್ಯಕ್ತಗೊಳಿಸಿರುವರು. ಇವರ ರಚನೆಗಳನ್ನು ಸಂಗೀತ ಕಚೇರಿಗಳಲ್ಲಿ ಹಾಡುವುದು ರೂಢಿಯಲ್ಲಿದೆ.

**ಕಮಲ**—ಈ ರಾಗವು ೨೩ನೆಯ ಮೇಳಕರ್ತ ಗೌರೀ ಮನೋಹರಿಯ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ̇

ಅ : ಸ̇ ನಿ ದ ಮ ಗ ಸ

**ಕಮಲು**—ಇದು ೬೦ನೆಯ ಮೇಳಕರ್ತ ನೀತಿಮತಿಯ ಒಂದು ಜನ್ಯ ರಾಗ.

ಆ : ಸ ಗ ಪ ದ ನಿ ಸ̇

ಅ : ಸ̇ ನಿ ದ ಮ ಗ ಸ

**ಕಮಲಂ**—ಇವರು ೧೯ನೆ ಶತಮಾನದ ಒಬ್ಬ ಪ್ರಸಿದ್ಧ ನಾಟ್ಯಕಲಾವಿದೆ. ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುವಾಂಕೂರಿನಲ್ಲಿ ವಾಸಿಸುತ್ತಿದ್ದರು. ಸಂಗೀತದಲ್ಲಿ ಮುತ್ತುಸ್ವಾಮಿ ದೀಕ್ಷಿತರ ಶಿಷ್ಯೆ ಭರತನಾಟ್ಯವನ್ನು ಮೂವ್ವಲೂರು ಸಭಾಪತಿ ಅಯ್ಯರ್‌ರವರಲ್ಲಿ ಕಲಿತರು. ಸಭಾಪತಿ ಅಯ್ಯರ್‌ರವರು ಪ್ರಸಿದ್ಧ ನಾಟ್ಯಾ ಚಾರ್ಯರಾಗಿದ್ದು ತೆಲುಗಿನಲ್ಲಿ ಅನೇಕ ಪದಗಳನ್ನು 'ರಾಜಗೋಪಾಲ' ಎಂಬ ಅಂಕಿತ ದಲ್ಲಿ ರಚಿಸಿದರು. ಇವು ಕ್ಷೇತ್ರಜ್ಞನ ಪದಗಳಷ್ಟೇ ಉತ್ತಮವಾದುವು.

ಕಮಲಂಗೆ ಭರತನಾಟ್ಯದ ಶಿಕ್ಷಣವು ಪೂರೈಸಿದ ನಂತರ ತ್ಯಾಗರಾಜರ ಆಶೀರ್ವಾದವನ್ನು ಪಡೆಯಬೇಕೆಂಬ ಹಂಬಲ ಉಂಟಾಯಿತು. ಒಂದು ಸಂಜೆ ತ್ಯಾಗರಾಜರು ತಮ್ಮ ಮನೆಯ ಜಗಲಿಯ ಮೇಲೆ ಕುಳಿತು ಸಂದರ್ಶಕರು ಮತ್ತು ಶಿಷ್ಯರೊಡನೆ ಸಂಭಾಷಿಸುತ್ತಿದ್ದರು. ಆಗ ಕಮಲಂ ಸಂಪೂರ್ಣಾಲಂಕೃತಳಾಗಿ ತ್ಯಾಗರಾಜರ ಮುಂದೆ ಬಂದು ನಮಸ್ಕರಿಸಿ, ತಾನು ಸಭಾಪತಿ ಅಯ್ಯರ್‌ರವರಲ್ಲಿ ನಾಟ್ಯಾಭ್ಯಾಸ ಮಾಡಿರುವುದಾಗಿಯೂ, ತ್ಯಾಗರಾಜರ ಸಮ್ಮುಖದಲ್ಲಿ ಅಭಿನಯ ಮಾಡಿ ಆಶೀರ್ವಾದ ಪಡೆಯಲು ಬಂದಿರುವುದಾಗಿಯೂ ವಿನಂತಿಸಿಕೊಂಡಳು. ಸಭಾಪತಿ ಅಯ್ಯರ್‌ರವರಲ್ಲಿ ತ್ಯಾಗರಾಜರಿಗೆ ಅಪಾರ ಗೌರವವಿತ್ತು. ಅವರು ಸಂತೋಷ ದಿಂದ ಯಾವುದಾದರೂ ಕೃತಿಗೆ ಅಭಿನಯ ಮಾಡಬೇಕೆಂದು ಹೇಳಿದರು. ಕಮಲಂ ತಕ್ಷಣವೇ ಛಾಪುತಾಳದಲ್ಲಿರುವ ತೋಡಿರಾಗದ 'ಎಂದುದಾಗಿನಾಡೋ' ಎಂಬ ಕೃತಿಗೆ ಅಭಿನಯ ಮಾಡಿದಳು. ಕರುಣರಸ ಪ್ರಧಾನವಾದ ಈ ಕೃತಿಯ ಸಾಹಿತ್ಯದಲ್ಲಿ ಅಡಕವಾಗಿರುವ ಭಾವನೆಗಳನ್ನು ಮನಮುಟ್ಟುವಂತೆ ಅಭಿನಯಿಸಿದಳು. ತ್ಯಾಗರಾಜರಿಗೆ ಅವಳ ಭರತನಾಟ್ಯವು ಬಹಳ ಮೆಚ್ಚುಗೆಯಾಯಿತು ಕ್ಷೇತ್ರಜ್ಞನ

ಪದ ಒಂದನ್ನು ಅಭಿನಯಿಸಲು ಹೇಳಿದರು. ನಂತರ ಸಂತೋಷದಿಂದ ಆಶೀರ್ವದಿಸಿದರು. ಅಲ್ಲಿಂದ ಮುಂದೆ ಕಮಲಳ ಕೀರ್ತಿಯು ಬಹುವಾಗಿ ಹರಡಿತು.

**ಕಮಲನೃತ್ತ**—ದೇವಾಲಯಗಳ ನವಸಂಧಿ ಉತ್ಸವಗಳಲ್ಲಿ ನಡೆಯುವ ಒಂದು ಬಗೆಯ ಬ್ರಹ್ಮಸಂಧಿ ನಾಟ್ಯ.

**ಕಮಲನಾರಾಯಣಿ**—ಈ ರಾಗವು ೫೫ನೆಯ ಮೇಳಕರ್ತ ಶ್ಯಾಮಲಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ಮ ರಿ ಸ

**ಕಮಲಪಂಚಮ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ

ಆ: ಸ ಪ ಮ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ಗ ರಿ ಸ

**ಕಮಲಪಾಣಿ**—ಈ ರಾಗವು ೭೦ನೆಯ ಮೇಳಕರ್ತ ನಾಸಿಕಾಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಸ

**ಕಮಲಾಪತಿ**—ಈ ರಾಗವು ೬ನೆಯ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ಸ

**ಕಮಲಾಪ್ತಪ್ರಿಯ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಸ

**ಕಮಲಾತರಂಗಿಣಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ರಿ ಸ

**ಕಮಲಾಭರಣ**—ಈ ರಾಗವು ೪೫ನೆಯ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ̇

ಅ: ಸ̇ ನಿ ದ ಪ ನಿ ದ ಮ ಗ ರಿ ಸ

**ಕಮಲಮೋಹನ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ಸ

ಅ: ಸ ದ ಪ ಮ ಗ ರಿ ಸ

**ಕಮಲಾ ಲಕ್ಷ್ಮಣ್** (೧೯೩೪)—ಇವರು ಈಗಿನ ಒಬ್ಬ ಪ್ರಸಿದ್ಧ ನಾಟ್ಯ ಕಲಾವಿದೆ. ತಮಿಳು ನಾಡಿನ ತಂಜಾವೂರಿನ ಮಾಯಾವರಂನಲ್ಲಿ ಜನಿಸಿದರು. ಸಿ. ಎನ್. ಮುತ್ತುಕುಮಾರಪಿಳ್ಳೆ ಮತ್ತು ವಯುವೂರು ರಾಮಯ್ಯಪಿಳ್ಳೆಯವರಲ್ಲಿ ಭರತನಾಟ್ಯ ಶಿಕ್ಷಣವನ್ನು ಪಡೆದರು. ಕಥಕ್‌ಶೈಲಿಯ ನೃತ್ಯವನ್ನೂ ಕಲಿತಿದ್ದಾರೆ. ಭಾರತದ ಪ್ರಮುಖ ನಗರಗಳಲ್ಲಿ ಮತ್ತು ವಿದೇಶಗಳಲ್ಲಿ ಭರತನಾಟ್ಯ ಪ್ರದರ್ಶನವಿತ್ತಿದ್ದಾರೆ. ಶಾಸ್ತ್ರೀಯ ನಾಟ್ಯವಲ್ಲದೆ ಜನಪದ ನೃತ್ಯದಲ್ಲೂ ಪ್ರವೀಣರು ಆಕರ್ಷಣೀಯ ವ್ಯಕ್ತಿತ್ವ, ಲಾಲಿತ್ಯಮಯವಾದ ನಾಟ್ಯವು ಇವರ ಕಲಾಕೌಶಲ್ಯದ ವಿಶೇಷಗಳು.

**ಕಮಲಾತರಂಗಿಣಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ಕಮಲವಸಂತ**—ಈ ರಾಗವು ೩೭ನೆಯ ಮೇಳಕರ್ತ ಸಾಲಗನಾಟದ ಒಂದು ಜನ್ಯರಾಗ.

ಆ: ಸ ರಿ ಗ ರಿ ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕಮಲವಿಲಸಿತ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದಾ ನಿ ಪ ಮ ಗ ಮ ರಿ ಸ

**ಕಮಲಾಸನಪ್ರಿಯ**—ಈ ರಾಗವು ೨೪ನೆಯ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಕಮಲಸೂನ**—ಈ ರಾಗವು ೩೮ನೆಯ ಮೇಳಕರ್ತ ಜಲಾರ್ಣವದ ಒಂದು ಜನ್ಯರಾಗ

ಆ: ಸ ರಿ ಗ ಮ ಪ ನಿ ದ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಕಪಾಲಿನಿ**—ಈ ರಾಗವು ೧ನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

ಇದೇ ಹೆಸರಿನ ಮತ್ತೊಂದು ರಾಗವು ೩೦ನೆಯ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯವಾಗಿದೆ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಮಾಚ್**—ಈ ರಾಗವು ೨೮ನೆಯ ಹರಿಕಾಂಭೋಜಿ ಮೇಳದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಈ ರಾಗವು ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಸುಮಾರು ಎರಡು ಶತಮಾನಗಳಿಂದ ಹರಿಕಾಂಭೋಜಿಮೇಳದ ಭಾಷಾಂಗರಾಗವಾಗಿ ಅಂಗೀಕೃತವಾಗಿ ರೂಢಿಯಲ್ಲಿದೆ. ಷಾಡವ ಸಂಪೂರ್ಣರಾಗ. ಮಧ್ಯಮ ನಿಷಾದಗಳು ವಾದಿಸಂವಾದಿಗಳು. ಮಧ್ಯಮ, ಧೈವತ ಮತ್ತು ನಿಷಾದಗಳು ರಂಜಕವಾದ ಜೀವಸ್ವರಗಳು. ಆರೋಹಣದಲ್ಲಿ ಕಾಕಲಿ ನಿಷಾದವೂ, ಅವರೋಹಣದಲ್ಲಿ ಕೈಶಿಕಿನಿಷಾದವೂ ಬರುತ್ತವೆ. ತ್ಯಾಗರಾಜರು ರಚಿಸಿರುವ ಈ ರಾಗದ ಕೃತಿಗಳಲ್ಲಿ ಉಪಾಂಗ ಸ್ವರೂಪವಿದೆ. ಕೆಲವು ಪ್ರಸಿದ್ಧ ರಚನೆಗಳು :

ಕೃತಿ — ಸೀತಾಪತೀ ನಾಮನಸುನ — ದೇಶಾದಿ — ತ್ಯಾಗರಾಜ

ಬ್ರೋಚೇವಾರೆವರುರ — ಆದಿ — ವಾಸುದೇವಾಚಾರ್ಯ

**ಕಮಟಧ್ವಜ**—ಈ ರಾಗವು ೫೫ನೆಯ ಮೇಳಕರ್ತ ಶ್ಯಾಮಲಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಗ ಸ

**ಕಮ್ಮಾಜಿ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಮ ಸ

**ಕರ್ಕಡಿಕ್ಕೈ**—ಭರತ ಸಿದ್ಧಾಂತವೆಂಬ ಗ್ರಂಥದಲ್ಲಿ (ಪು. ೫೩) ತಾಳಾಧ್ಯಾಯ ದಲ್ಲಿ ಹೇಳಿರುವ ಎಂಟು ಬಗೆಯ ಮದ್ದಳೆಗಳಲ್ಲಿ ಒಂದು ಬಗೆಯ ಮದ್ದಳೆ.

**ಕರ್ಕಟಿಕ**—ಇದು ಭರತನಾಟ್ಯದ ಒಂದು ಸಂಯುತ ಹಸ್ತ. ಕಪೋತ ಹಸ್ತ ದಲ್ಲಿನ ಬೆರಳುಗಳನ್ನು ಬೆರಳು ಸಂದಿಗಳಲ್ಲಿ ಪರಸ್ಪರವಾಗಿ ಒಳಗೆ ಅಥವಾ ಹೊರಗೆ

ಚಾಚಿ ಹಿಡಿಯುವುದು ಕರ್ಕಟ ಅಥವಾ ಕರ್ಕಟಿಕ ಹಸ್ತ. ಗುಂಪನ್ನು ತೋರಿಸು ವಿಕೆ, ದಪ್ಪಕ್ಕಿರುವ ಪದಾರ್ಥ ತೋರಿಸುವಿಕೆ, ಶಂಖವನ್ನೂದುವಿಕೆ, ಮೈಮುರಿಯು ವಿಕೆ, ಮರದ ಕೊಂಬೆಯನ್ನು ಬಗ್ಗಿಸುವಿಕೆಯಗಳಲ್ಲಿ ಈ ಹಸ್ತ ವಿನಿಯೋಗವಾಗುವುದು.

**ಕರ್ತಾರಾಗ**—ಮೇಳಕರ್ತರಾಗವನ್ನು ಕರ್ತಾರಾಗವೆನ್ನುವುದುಂಟು ಜನಕ ರಾಗ. ಇಂತಹ ರಾಗದಿಂದ ಅನೇಕ ಜನ್ಯರಾಗಗಳುಂಟಾಗುತ್ತವೆ.

**ಕರ್ನಾ**—ತಿರುವಾರೂರು ದೇವಾಲಯದಲ್ಲಿರುವ ದೂರದರ್ಶಕ ಯಂತ್ರ ದಂತಿರುವ ತುತ್ತೂರಿ. ಇದರಲ್ಲಿ ೬ ಅಡಿ ಉದ್ದವಿರುವ ಎರಡು ಕೊಳವೆಗಳಿವೆ. ಒಂದನ್ನು ಇನ್ನೊಂದಕ್ಕೆ ಅಳವಡಿಸಿದೆ. ಊದುವ ಭಾಗವು ಗಂಟೆಯ ಆಕಾರದಲ್ಲಿದೆ. ಇದು ಒಂದಂಗುಲ ಅಗಲವಿದ್ದು ಇನ್ನೊಂದು ಕೊನೆಯು ೩ ಅಂಗುಲ ಅಗಲವಿದೆ. ಊದುವ ಕೊನೆಯಲ್ಲಿ ಒಂದು ಸಣ್ಣ ಪೀಪಿ ಇದೆ. ಇದನ್ನು ತಲೆಕೆಳಗಾಗಿ ಹಿಡಿದು ಊದುತ್ತಾರೆ.

**ಕರ**—ಸಂಕೀರ್ಣಜಾತಿ ಝಂಪತಾಳದ ಹೆಸರು. ಇದರ ಒಂದಾವರ್ತಕ್ಕೆ ೧೨ ಅಕ್ಷರ ಕಾಲವಾಗುತ್ತದೆ

**ಕರಕ** - ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ಕರ್ಕರಿ**—ಋಗ್ವೇದದಲ್ಲಿ ಉಕ್ತವಾಗಿರುವ ಒಂದು ತಂತೀವಾದ್ಯ.

**ಕರಗನೃತ್ಯ**—ಇದು ತಲೆಯಮೇಲೆ ಅಕ್ಕಿ ತುಂಬಿದ ಮಡಕೆಗಳನ್ನು ಒಂದರ ಮೇಲೊಂದು ಇಟ್ಟುಕೊಂಡು ಕುಣಿಯುವ ಒಂದು ಜಾನಪದ ನೃತ್ಯ. ಬೆಂಗಳೂರಿನ ಧರ್ಮರಾಯನ ಉತ್ಸವದ ಕರಗನೃತ್ಯವು ಬಹು ಪ್ರಸಿದ್ಧವಾದುದು. ಪುರಾತನ ತಮಿಳು ಸಾಹಿತ್ಯದಲ್ಲಿ ಇದಕ್ಕೆ ಕೊಡಕೂತ್ತು ಅಥವಾ ಕೊಡದಕುಣಿತ ಎಂದು ಹೆಸರು. ಮಡಕೆಗಳನ್ನು ಅಲಂಕರಿಸಿರುತ್ತಾರೆ. ಮೇಲೊಂದು ಮರದ ಗಿಣಿಯನ್ನು ಇಟ್ಟಿರುವರು. ಇವನ್ನು ತಲೆಯಮೇಲಿಟ್ಟುಕೊಂಡು ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತಾ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಬಾಗುತ್ತಾ ಕುಣಿಯುತ್ತಾರೆ. ಎಷ್ಟೇ ಬಾಗಿದರೂ, ಕುಣಿದರೂ ತಲೆಯ ಮೇಲಿರುವ ಮಡಕೆಗಳು ಬೀಳದಂತೆ ಕುಣಿಯುತ್ತಾರೆ. ವಾದ್ಯವೃಂದದಲ್ಲಿ ಇಬ್ಬರು ನಾಗಸ್ವರವನ್ನೂ, ಇಬ್ಬರು ಡೋಲನ್ನೂ, ಇಬ್ಬರು ಮದ್ದಲೆಯನ್ನೂ, ಒಬ್ಬನು ತಾಳವನ್ನೂ ನುಡಿಸುತ್ತಾರೆ. ಇದಕ್ಕೆ ತಮಿಳಿನಲ್ಲಿ ನೈಯಾಂಡಿಮೇಳವೆಂದು ಹೆಸರು. ಈ ಜಾನಪದ ವಾದ್ಯವೃಂದ ಜೋರಾಗಿರುತ್ತದೆ. ಮೊದಲು ಇದರ ಸಂಗೀತವು ವಿಳಂಬದಲ್ಲಿದ್ದು ಕ್ರಮವಾಗಿ ದ್ರುತಕ್ಕೆ ಹೋಗುತ್ತದೆ. ಮಧ್ಯೆ ಸ್ವಲ್ಪ ವಿರಾಮದ ನಂತರ ಮತ್ತೊಂದು ಬಗೆಯ ಕುಣಿತ ಆರಂಭವಾಗುತ್ತದೆ. ಮೊದಲು ಮಣ್ಣಿನ ಮಡಕೆಗಳನ್ನು ಉಪಯೋಗಿಸು

ತ್ತಿದ್ದರು. ಈಗ ಹಿತ್ತಾಳೆಯ ಕೊಡಗಳನ್ನು ಬಳಸುತ್ತಾರೆ. ಸಾಮಾನ್ಯವಾಗಿ ಗಂಡಸರೇ ಕರಗದ ನೃತ್ಯವಾಡುತ್ತಾರೆ ಒಮ್ಮೊಮ್ಮೆ ಸ್ತ್ರೀಯರೂ ಕರಗವನ್ನು ಹೊತ್ತು ಕುಣಿಯುವುದುಂಟು. ಹಳ್ಳಿಗಳ ಮಾರೀಹಬ್ಬಗಳಲ್ಲಿ ಕರಗದ ನೃತ್ಯವನ್ನು ನೋಡಬಹುದು.

**ಕರತಾಳೆ**—ಇದಕ್ಕೆ ಚಿಟಕಿ ಎಂದು ಹೆಸರು. ಎರಡು ಗುಂಡಾಗಿರುವ ಮರದ ತುಂಡುಗಳ ಹಿಂದೆ ಒಂದೊಂದು ಹಿತ್ತಾಳೆ ಉಂಗುರವಿರುತ್ತದೆ. ಇವುಗಳನ್ನು ಕೈ ಬೆರಳುಗಳಿಗೆ ಸಿಕ್ಕಿಸಿಕೊಂಡು ತಾಳ ಹಾಕುತ್ತಾರೆ. ಇದನ್ನು ಸಾಮಾನ್ಯವಾಗಿ ಹರಿಕಥೆಯಲ್ಲಿ ಮತ್ತು ಭಜನೆಗಳಲ್ಲಿ ಬಳಸುತ್ತಾರೆ.

**ಕರತೋಯ**—ಇದೇ ಹೆಸರಿನ ಎರಡು ರಾಗಗಳಿವೆ.

(೧) ಈ ರಾಗವು ೭ನೆಯ ಮೇಳಕರ್ತ ಸೇನಾಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

(೨) ಈ ರಾಗವು ೫೬ನೆಯ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯ ರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ಕರಡಿ ಕೈ**—ಇದೊಂದು ಬಗೆಯ ಚರ್ಮವಾದ್ಯ. ಇದರ ಶಬ್ದವು ಕರಡಿಯು ಗುರುಗುಟ್ಟುವ ಶಬ್ದವನ್ನು ಹೋಲುವುದರಿಂದ ಇದಕ್ಕೆ ಕರಡಿ ಕೈ ಎಂಬ ಹೆಸರು ಬಂದಿದೆ.

**ಕರಡೀಶಮೇಳ**—ವೀರಶೈವರ ದೇವಾಲಯಗಳಲ್ಲಿ ಬಾರಿಸುವ ಎತ್ತರವಾದ ನಗಾರಿ.

**ಕರಡೀವಾದ್ಯ**—ಇದು ಡಮರುಗದಂತಿರುವ ಒಂದು ದೊಡ್ಡ ವಾದ್ಯ. ತುದಿಗೆ ಬಟ್ಟೆ ಅಥವಾ ಮೆದುವಾದ ಇನ್ನಾವುದಾದರೂ ವಸ್ತುವನ್ನು ಕಟ್ಟಿರುವ ಒಂದು ಕಡ್ಡಿಯಿಂದ ಬಾರಿಸಿ ನುಡಿಸುತ್ತಾರೆ.

**ಕರಣ** - (೧) ರಾಗಾಲಾಪನೆಯ ಮುಖ್ಯ ಭಾಗವಾದ ರಾಗವರ್ಧಿನಿಯ ಹೆಸರು. ಆಕ್ಷಿಪ್ತಿಕವಾದ ನಂತರ ಕರಣವು ಆರಂಭವಾಗುತ್ತದೆ. ತರುವಾಯ ಸ್ಥಾಯಿ ಅಥವಾ ಮಕರಿಣಿ ಭಾಗಗಳು ಬರುತ್ತವೆ.

(೨) ಇದೊಂದು ಭರತನಾಟ್ಯದ ಭಂಗಿ. ತಮಿಳುನಾಡಿನ ಚಿದಂಬರಂ ನಟರಾಜಸ್ವಾಮಿ ದೇವಾಲಯದ ಪೂರ್ವದಿಕ್ಕಿನ ಗೋಪುರದಲ್ಲಿ ೧೦೮ ಕರಣಗಳ ಶಿಲ್ಪಗಳಿವೆ.

**ಕರಣೆ**—ಮೃದಂಗದ ಬಲಮುಖದ ಮಧ್ಯೆ ಅಂಟಿಸಿರುವ ಕಪ್ಪು ಬಣ್ಣದ ಗುಂಡಾಗಿರುವ ಭಾಗ.

**ಕರಣಯತಿ**—ಇದು ೧೦೮ ತಾಳಗಳಲ್ಲಿ ೯೧ನೆ ತಾಳದ ಹೆಸರು. ಇದು ನಾಲ್ಕು ದ್ರುತಗಳನ್ನು ಒಳಗೊಂಡಿದೆ. ಒಂದಾವರ್ತಕ್ಕೆ ೨ ಮಾತ್ರಾಕಾಲ ಅಥವಾ ೮ ಅಕ್ಷರ ಕಾಲವಾಗುತ್ತದೆ.

**ಕರಣಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ಕರಪಾನಿ**—ಈ ರಾಗವು ೨೩ನೆ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಕರುಣಾಕರಿ**—ಈ ರಾಗವು ೬೩ನೆಯ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ

ಆ: ಸ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಸ

**ಕರುಣಪ್ರಿಯ**—ಈ ರಾಗವು ३೬ನೆ ಮೇಳಕರ್ತ ಸಾಲಗನಾಟದ ಒಂದು ಜನ್ಯರಾಗ.

ಆ· ಸ ರಿ ಗ ಮ ನಿ ದ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕರುಣತಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಒಂದು ತಾಳ.

**ಕರುಣಠಾಯ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಠಾಯ.

**ಕರುಣರಸ**— ಕರುಣಂ ಶೋಕದಿನಕ್ಕುಂ ।
ಮರಣಂ ಗತನಾದ ಬಂಧುವಾಲಂ ಬನವಿ ॥
ನ್ನರು ಬಂಧ್ವಾಕ್ರಂದನದ ಮುಖ ।
ಭರದುದ್ದೀಪನ ವಿಭಾವಮಾ ರಸಕಕ್ಕುಂ ॥

(ಸಾಳ್ವ : ರಸರತ್ನಾಕರ ಪು ३೭)

ತನ್ನಂತೆ ಪರರೆಂಬ ಭಾವನೆಯಿಂದ ಕಷ್ಟಪಡುವವರನ್ನು ಕಂಡು ಮರುಗುವುದರಿಂದ, ಕೆಲವೊಮ್ಮೆ ದುಃಖದಿಂದ, ಯಾತನೆಯಿಂದ, ಇಷ್ಟಜನ ವಿಯೋಗದಿಂದ, ಸಂಪತ್ತು ಹಾಳಾಗುವುದು, ವಧೆ, ಬಂಧನ ಇವುಗಳನ್ನು ನೋಡುವುದು ಅಥವಾ ಕೇಳುವುದರಿಂದ, ಅನಿಷ್ಟ ಸಂಯೋಗಾದಿ ಆಲಂಬನಗಳಿಂದ, ನಿಶ್ವಾಸ, ತನುತ್ವ, ಮೂರ್ಛಾದಿ ಅನುಭಾವಗಳಿಂದ, ಸ್ವರಭೇದಾದಿ ಸಾತ್ವಿಕ ಭಾವವು ಉಂಟಾಗುತ್ತದೆ. ಇವುಗಳಿಂದ

ದೈನ್ಯ, ಆಲಸ್ಯ, ಆವೇಗ, ವಿಷಾದ, ಜಡತೆ, ಉನ್ಮಾದ, ಚಿಂತೆ ಇತ್ಯಾದಿ ವ್ಯಭಿಚಾರಿ ಭಾವಗಳುಂಟಾಗಿ ಶೋಕವೆಂಬ ಸ್ಥಾಯಿಭಾವ ಉಂಟಾಗಿ ಚರ್ವಿತವಾಗಿ ಕರುಣರಸ ಉಂಟಾಗುತ್ತದೆ. ತ್ಯಾಗ, ಆರ್ತತೆ, ದೀನತೆ ಮುಂತಾದುವು ಕರುಣರಸಕಾರಕಗಳು. ನಿರ್ವೇದ, ಗ್ಲಾನಿ, ಚಿಂತೆ, ಮೋಹ, ಅಶ್ರು, ವೈವರ್ಣ್ಯ ಮೊದಲಾದುವು ಕರುಣರಸ ಪೂರಕಗಳು. ಇದರ ವಿಭಾವವು ವಿರಹತಾಪ, ಬಡತನ, ಮರಣ, ಸೆರೆ. ಅನುಭಾವವು ಕಣ್ಣೀರಿಡುವುದು, ಶೋಕ, ಬಾಯಾರಿಕೆ, ಬಣ್ಣ ಬದಲಾಗುವುದು, ನಿಟ್ಟುಸಿರು ಬಿಡುವುದು. ಒಟ್ಟಿನಲ್ಲಿ ಇದನ್ನು ಇಷ್ಟವಿಯೋಗ, ಅನಿಷ್ಟ ಸಂಯೋಗ ಎನ್ನಬಹುದು ಇದು ಅತಿ ಸುಕುಮಾರವಾದ ರಸ ಇದರ ಅನುಭವಕಾಲದಲ್ಲಿ ಹೃದಯವು ಅಧಿಕವಾಗಿ ಕರಗುತ್ತದೆ. ಹೃದಯ ಸಂವಾದ ಬಲದಿಂದ ಶೋಕವನ್ನೇ ಕೇವಲ ರೂಪದಲ್ಲಿ ನಾವು ಅನುಭವಿಸುತ್ತೇವೆ.

ಪುನ್ನಾಗವರಾಳಿ, ನಾದನಾಮಕ್ರಿಯ, ಮುಖಾರಿ, ಅಹಿರಿ, ಗೌಳೀಪಂತು, ಶಹಾನ, ದೇವಗಾಂಧಾರಿ ಮುಂತಾದ ರಾಗಗಳು ಕರುಣರಸವನ್ನು ಕೆರಳಿಸುತ್ತವೆ. ನೃತ್ಯರೂಪಕ ಮತ್ತು ಗೇಯನಾಟಕಗಳಲ್ಲಿ ಕರುಣರಸ ಉಂಟುಮಾಡುವ ರಾಗಗಳನ್ನು ಹೆಚ್ಚಾಗಿ ಬಳಸಿದ್ದಾರೆ.

**ಕರೆಪಾಲನೋಳೆ**—ಇದು ಕರ್ಣಾಟಕದ ಒಂದು ಜನಪದ ಮೇಳ. ಮುಖ್ಯ ಕಥೆಗಾರನೊಬ್ಬನು ಇಬ್ಬರು ಸಹನೃತ್ಯಗಾರರೊಡನೆ ಜನಪ್ರಿಯವಾದ ಕಥೆಯೊಂದನ್ನು ನಾಟಕೀಯವಾಗಿ ಅಭಿನಯಿಸಿ, ನಿರೂಪಿಸಿ ಮನೋರಂಜನೆ ನೀಡುವನು. ಸರಳವಾದ ವೇಷಭೂಷಣಗಳೊಂದಿಗೆ ಈ ನೃತ್ಯ ಸಂಗೀತವು ಆಕರ್ಷಕವಾಗಿರುತ್ತದೆ.

**ಕರ್ಪೂರ**—ಈ ರಾಗವು ೪೪ನೆ ಮೇಳಕರ್ತ ಭವಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕರಮುರಳಿ**—ಎರಡು ಕೈಗಳನ್ನು ಸೇರಿಸಿ ಮೇಲ್ಭಾಗದಲ್ಲಿ ಊದಿ ಕೊಳಲಿನಂತೆ ನುಡಿಸುವುದು. ಮೈಸೂರಿನ ಸಂಗೀತ ವಿದ್ವಾಂಸ ಎಸ್. ಕೆ. ರಾಮಾಚಾರ್ ಎಂಬುವರು ಪ್ರಸಿದ್ಧ ಕರಮುರಳಿ ವಿದ್ವಾಂಸರಾಗಿದ್ದರು.

**ಕರೂರು**—ಈ ಸ್ಥಳವು ತಮಿಳುನಾಡಿನ ತಿರುಚಿ ಜಿಲ್ಲೆಯಲ್ಲಿದೆ. , ಇದಕ್ಕೆ ಗರ್ಭಪುರಿ ಎಂದು ಹೆಸರು. ಈ ಸ್ಥಳವು ಒಂದು ಪ್ರಮುಖ ಸಂಗೀತ ಕಲಾಕೇಂದ್ರವಾಗಿತ್ತು. ಇಲ್ಲಿ ಪ್ರಸಿದ್ಧ ವಾಗ್ಗೇಯಕಾರರಾಗಿದ್ದ ಕರೂರು ದೇವುಡಯ್ಯ ಮತ್ತು ಕರೂರು ದಕ್ಷಿಣಾಮೂರ್ತಿಶಾಸ್ತ್ರಿ ವಾಸವಾಗಿದ್ದರು. ಇವರು ವರ್ಣಗಳು ಮತ್ತು ಕೃತಿಗಳನ್ನು ರಚಿಸಿದ್ದಾರೆ. ಇವು ಭಾವಪುಷ್ಟಿಯಿಂದ ಕೂಡಿದ ಸುಂದರ ಹಾಗೂ ಸರಳ ರಚನೆಗಳಾಗಿವೆ. ಕೆಲವು ರಚನೆಗಳು ಇಲ್ಲಿಯ ದೇವಾಲಯದ ಪಶುಪತೀಶ್ವರ ಮತ್ತು ಸೌಂದರ್ಯ ನಾಯಕಿ ಅಮ್ಮನವರ ಸ್ತುತಿರೂಪವಾಗಿವೆ. ಈ ಊರಿನಲ್ಲಿ ನಾರದ

ಗಾನಸಭಾ ಎಂಬ ಸಂಗೀತ ಸಭೆಯಿದೆ. ೧೮ನೆ ಶತಮಾನದಲ್ಲಿದ್ದ ಸಂಸ್ಕೃತ ವಾಗ್ಗೇಯ ಕಾರರಾದ ಸದಾಶಿವಬ್ರಹ್ಮೇಂದ್ರರು ಈ ಊರಿನಲ್ಲಿ ಸಿದ್ಧಿ ಪಡೆದರು. ಇವರು ಪಕ್ಕದ ನೆರೂರಿನಲ್ಲಿ ವಾಸವಾಗಿದ್ದರು.

**ಕರೂರು ಚಿನ್ನಸ್ವಾಮಿ ಅಯ್ಯರ್**— ಇವರು ಈ ಶತಮಾನದ ಒಬ್ಬ ಖ್ಯಾತ ಪಿಟೀಲು ವಿದ್ವಾಂಸರು. ಇವರ ತಂದೆ ಫಿಡಲ್ ನರಸಯ್ಯ ಎಂಬುವರು ಇವರ ಹಿರಿಯ ಸಹೋದರ ಪೆದ್ದದೇವುಡು (೧೮೬೦-೧೮೮೬) ಮತ್ತು ಚಿನ್ನದೇವುಡು (೧೮೬೨-೧೯೦೦) ಎಂಬುವರು ಖ್ಯಾತ ಪಿಟೀಲು ವಿದ್ವಾಂಸರಾಗಿದ್ದರು ಚಿನ್ನಸ್ವಾಮಿ ಅಯ್ಯರ್ ತಮ್ಮ ಸಹೋದರ ಚಿನ್ನದೇವುಡುರವರಲ್ಲಿ ಸಂಗೀತ ಶಿಕ್ಷಣವನ್ನು ಪಡೆದರು. ಈ ದೇವುಡು ಸಹೋದರರು ತ್ಯಾಗರಾಜರ ಶಿಷ್ಯ ನೇಮಂ ಸುಬ್ರಹ್ಮಣ್ಯ ಅಯ್ಯರ್‌ರವರು ಶಿಷ್ಯರು. ಚಿನ್ನಸ್ವಾಮಿಯವರು ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದ ಒಬ್ಬ ಖ್ಯಾತ ವಿದ್ವಾಂಸರು.

**ಕರಲಾಧರಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕರುಣಾಮೃತಸಾಗರಂ**—ತಂಜಾವೂರಿನ ಏಬ್ರಹಾಂ ಪಂಡಿತರು ಬರೆದಿರುವ ಒಂದು ಬೃಹದ್ಗ್ರಂಥ (೧೯೧೭). ಇದರಲ್ಲಿ ಶ್ರುತಿಗಳ ಬಗ್ಗೆ ವಿಶ್ಲೇಷಣೆ, ಪುರಾತನ ತಮಿಳು ಸಂಗೀತದ ಬಗ್ಗೆ ಬಹುವಾಗಿ ವಿಷಯ ಸಂಗ್ರಹ, ವಾಗ್ಗೇಯಕಾರರು ಮತ್ತು ಸಂಗೀತ ವಿದ್ವಾಂಸರನ್ನು ಕುರಿತು ವಿವರಗಳು, ರಾಗಗಳ ಬಗ್ಗೆ ವಿವರಣೆ ಮುಂತಾದುವು ಇರುವ ಎರಡು ಸಂಪುಟಗಳ ಗ್ರಂಥ.

**ಕಲ್ಪಿತಸಂಗೀತ**—ಈಗಾಗಲೇ ಕಲ್ಪಿಸಲ್ಪಟ್ಟಿರುವ ಸಂಗೀತ. ಸಂಗೀತ ರಚನೆಗಳು ಕಲ್ಪಿತ ಸಂಗೀತಕ್ಕೆ ಸೇರಿವೆ. ಮನೋಧರ್ಮ ಸಂಗೀತವು ಕಚೇರಿಯಲ್ಲಿ ಕಲ್ಪಿಸಿ ಹಾಡುವ ಸಂಗೀತ.

**ಕಲ್ಲುನಾಗಸ್ವರ**—ಬಳಪದ ಕಲ್ಲಿನಲ್ಲಿ ಮಾಡಿರುವ ನಾಗಸ್ವರ. ಇಂತಹ ವಾದ್ಯವನ್ನು ತಮಿಳುನಾಡಿನ ಆಳ್ವಾರ್ ತಿರುನಗರಿಯ ದೇವಾಲಯದಲ್ಲಿ ನೋಡಬಹುದು

**ಕಲ್ಲೋಲ**—ಈ ರಾಗವು ೧೮ನೆ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯ ರಾಗ. ಇದು ಸ್ವರಾಂತರ ಷಾಡವ ಉಪಾಂಗ ರಾಗ. ಅವರೋಹಣದಲ್ಲಿ ಅಂತರ ಗಾಂಧಾರವು ಜೀವಸ್ವರ. ಈ ರಾಗದಲ್ಲಿ ಒಂದು ಲಕ್ಷಣ ಗೀತವಿದೆ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ಸ

**ಕಲ್ಲೋಲಬಂಗಾಳ**—ಈ ರಾಗವು ೩೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ಸ

ಅ: ಸ ನಿ ಪ ದ ಮ ಗ ರಿ ಸ

**ಕಲ್ಲೋಲಧ್ವನಿ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ನಿ ದ ಮ ಗ ಸ ರಿ ಸ

**ಕಲ್ಲೋಲಸಾವೇರಿ**—ಈ ರಾಗವು ೨೫ನೆಯ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ವ ದ ಸ

ಅ: ಸ ನಿ ದ ಪ ಮ ಗ ರಿ ಸ

**ಕಲ್ಲೋಲಿನಿ**—ಬೃಹದ್ಧರ್ಮ ಪುರಾಣೋಕ್ತವಾಗಿರುವ ವಿಭಾಷಾರಾಗದ ಒಂದು ದಾಸಿರಾಗ.

**ಕಲೋಪಲತ**—ರಿಷಭವು ಆಧಾರಸ್ವರವಾಗಿರುವ ಮಧ್ಯಮ ಗ್ರಾಮ ಮೂರ್ಛನೆ. ಇದು ಈಗಿನ ತೋಡಿಮೇಳದಂತಿದೆ.

**ಕಲ್ಪಲತ**—ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ನಾಟ್ಯಶಾಸ್ತ್ರ ಗ್ರಂಥ.

**ಕಲ್ಪತರು**—ಅಹೋಬಲನ ಸಂಗೀತಪಾರಿಜಾತದಲ್ಲಿ ಉಕ್ತವಾಗಿರುವ ಒಂದು ರಾಗ.

**ಕಲ್ಪವಲ್ಲಿ**—ಶಾರ್ಙ್ಗದೇವನ ಸಂಗೀತರತ್ನಾಕರದಲ್ಲಿ ಉಕ್ತವಾಗಿರುವ ಒಂದು ನಾಟ್ಯಶಾಸ್ತ್ರ ಗ್ರಂಥ.

**ಕಲ್ಪಿತ ಮೇಳಕರ್ತಗಳು**—ವೆಂಕಟಮುಖಿಯ ೭೨ ಮೇಳಗಳಲ್ಲಿ ಆ ಕಾಲದಲ್ಲೇ ಪ್ರಸಿದ್ಧವಾಗಿದ್ದ ೧೯ ಮೇಳಗಳು. ಮಿಕ್ಕ ೫೩ ಮೇಳಗಳನ್ನು ಕಲ್ಪ್ಯಮಾನ ಮೇಳಗಳು ಅಂದರೆ ಆಗತಾನೆ ಜನಪ್ರಿಯವಾಗುತ್ತಿದ್ದ ಮೇಳಗಳು ಮತ್ತು ಕಲ್ಪಯಿಷ್ಯಮಾನ ಮೇಳಗಳು ಅಥವಾ ಮುಂದೆ ಪ್ರಸಿದ್ಧವಾಗುವಂಥ ಮೇಳಗಳು ಎಂದು ವರ್ಗೀಕರಿಸಲಾಗಿತ್ತು.

**ಕಲ್ಯಾಣ ಕೇಸರಿ**—ಈ ರಾಗವು ೩೧ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ದ ಸ

ಅ: ಸ ದ ಪ ಮ ಗ ರಿ ಸ

**ಕಲ್ಯಾಣ ಕೈಶಿಕಿ**—ವಿಜಯನಗರದ ದೊರೆ ಕೃಷ್ಣದೇವರಾಯ ವಿರಚಿತ ಅಮುಕ್ತಮಾಲ್ಯದಾ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಕಲ್ಯಾಣಕೃಷ್ಣಭಾಗವತರು**—ಇವರು ೧೯ನೆ ಶತಮಾನದಲ್ಲಿದ್ದ ತಿರುವಾಂಕೂರಿನ ದೊರೆ ಆಯಿಲಂ ತಿರುನಾಳರ ಆಸ್ಥಾನದ ಪ್ರಸಿದ್ಧ ವೈಣಿಕರು. ಅವರು ವೀಣೆಯನ್ನು ನುಡಿಸುತ್ತಿದ್ದ ರೀತಿ ಬಹಳ ಮೇಲ್ಮಟ್ಟದ್ದಾಗಿತ್ತು. ಅತಿದ್ರುತ ಕಾಲದಲ್ಲಿ ನುಡಿಸುವುದರಲ್ಲಿ ಪ್ರವೀಣರಾಗಿದ್ದರು.

**ಕಲ್ಯಾಣಗೌರಿ**—ಈ ರಾಗವು ೩೯ನೆ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ

ಅ: ಸ ದ ಪ ಗ ರಿ ಸ

**ಕಲ್ಯಾಲತರಂಗಿಣಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ನಿ ದ ನಿ ಸ

ಅ: ಸ ನಿ ದ ನಿ ಪ ದ ಪ ಮ ಗ ಮ ರಿ ಗ ಸ

**ಕಲ್ಯಾಣದಾಯಿನಿ**—ಈ ರಾಗವು ೬೫ನೆಯ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಲ್ಯಾಣನಾಟಿ**—ಅಹೋಬಲನ ಸಂಗೀತಪಾರಿಜಾತವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಕಲ್ಯಾಣಭಾರತಿ**—೧೯ನೆ ಶತಮಾನದಲ್ಲಿದ್ದ ಪುದುಕೋಟೆ ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿದ್ದ ಒಬ್ಬ ಪ್ರಸಿದ್ಧ ಗಾಯಕ.

**ಕಲ್ಯಾಣಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿ ರಾಗ. ಇದು ಪ್ರತಿ ಮಧ್ಯಮ ರಾಗಗಳಲ್ಲಿ ಅತ್ಯಂತ ಜನಪ್ರಿಯವಾದುದು.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಇದು ಸರ್ವಸ್ವರಗಮಕವರಿಕರಕ್ತಿರಾಗ. ಇದಕ್ಕೆ ಸುಮಾರು ೮೦ ಜನ್ಯರಾಗಗಳಿವೆ. ಆರೋಹಣ ಮತ್ತು ಅವರೋಹಣದಲ್ಲಿರುವ ಎಲ್ಲಾ ಸ್ವರಗಳು ಛಾಯಾಸ್ವರಗಳು. ರಿಷಭ, ಗಾಂಧಾರ, ಧೈವತ, ನಿಷಾದಗಳು ಛಾಯಾ ಸ್ವರಗಳು. ಮಧ್ಯಮ ವರ್ಜ್ಯ ಪ್ರಯೋಗಗಳು ರಾಗದ ಸೌಂದರ್ಯವನ್ನು ಹೆಚ್ಚಿಸುತ್ತವೆ. ಸಾಯಂಕಾಲದ ವೇಳೆಯಲ್ಲಿ ಹಾಡಲು ಬಹು ಪ್ರಶಸ್ತವಾದ ರಾಗ. ಈ ರಾಗದ ಕೃತಿಗಳು ಸ, ರಿ, ಗ, ಪ, ನಿ, ಸ್ವರಗಳಿಂದ ಆರಂಭವಾಗುತ್ತವೆ. ಇದು ಪುರಾತನ ಷಡ್ಜಗ್ರಾಮದ ಗಾಂಧಾರ ಮೂರ್ಛನ ಮತ್ತು ಮೊಥಲನೆ ಪ್ರತಿ ಮಧ್ಯಮ ರಾಗ. ಎಲ್ಲಾ ವಾಗ್ಗೇಯಕಾರರು

ಈ ರಾಗದಲ್ಲಿ ಹಲವು ಬಗೆಯ ಕೃತಿಗಳನ್ನು ರಚಿಸಿದ್ದಾರೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು :

ಗೀತ — ಕಮಲಜದಳ — ತ್ರಿಪುಟ —
ಸ್ವರಜತಿ — ಸಾನೀದಾಪಮಪ — ಆದಿ —
ವರ್ಣ — ವನಜಾಕ್ಷಿರೋ — ಆದಿ —
ವರ್ಣ — ವನಜಾಕ್ಷಿ — ಅಟ್ಟ — ಪಲ್ಲವಿಗೋಪಾಲಅಯ್ಯರ್
ಕೃತಿ — ನಂಬಿಕೆಟ್ಟವರಿಲ್ಲವೋ — ಮಿಶ್ರಛಾಪು — ಪುರಂದರದಾಸರು
ತರಮಾನೀಮಹಿಮ — ರೂಪಕ — ತ್ಯಾಗರಾಜರು
ಏವರಮಡಗುದುರಾ — ರೂಪಕ — ತ್ಯಾಗರಾಜರು
ನಮ್ಮಿವಚ್ಚಿನ — ರೂಪಕ — ತ್ಯಾಗರಾಜರು
ಭಜನಸೇಯುವೇ — ರೂಪಕ — ತ್ಯಾಗರಾಜರು
ಸಂದೇಹಮು — ಆದಿ — ತ್ಯಾಗರಾಜರು
ಶಿವೇಪಾಹಿಮಾಂ — ಆದಿ — ತ್ಯಾಗರಾಜರು
ಸುಂದರಿ ನೀ ದಿವ್ಯ — ಆದಿ — ತ್ಯಾಗರಾಜರು
ವಾಸುದೇವಯನಿ — ಆದಿ — ತ್ಯಾಗರಾಜರು
ಏತಾವುನ್ನರಾ — ಮಿಶ್ರಛಾಪು — ತ್ಯಾಗರಾಜರು
ನಿಧಿಚಾಲ — ಮಿಶ್ರಛಾಪು — ತ್ಯಾಗರಾಜರು
ಅಮ್ಮರಾವಮ್ಮ — ಝಂಪ — ತ್ಯಾಗರಾಜರು
ತಲ್ಲಿನಿನ್ನುನೆರ — ಮಿಶ್ರಲಘು — ಶ್ಯಾಮಾಶಾಸ್ತ್ರಿ
ಹಿಮಾದ್ರಿಸುತೇ — ರೂಪಕ — ಶ್ಯಾಮಾಶಾಸ್ತ್ರಿ
ಬಿರಾನವರಲಿಚ್ಚಿ — ರೂಪಕ — ಶ್ಯಾಮಾಶಾಸ್ತ್ರಿ
ಕಮಲಾಂಬಾಂ — ಆದಿ — ಮುತ್ತುಸ್ವಾಮಿದೀಕ್ಷಿತರು
ಶಿವಕಾಮೇಶ್ವರೀಂ — ಆದಿ — ಮುತ್ತುಸ್ವಾಮಿದೀಕ್ಷಿತರು
ಭಜರೇಚಿತ್ತ — ಛಾಪು — ಮುತ್ತುಸ್ವಾಮಿದೀಕ್ಷಿತರು
ಪಾಹಿಮಾಂ ಶ್ರೀವಾಗೀಶ್ವರಿ — ಆದಿ — ಸ್ವಾತಿತಿರುನಾಳ್‌ಮಹಾರಾಜರು
ಬಿರಾನಬ್ರೋವ — ತಿಶ್ರಏಕ — ತಳಗಂಬಾಡಿ ಪಂಚನದ ಅಯ್ಯರ್
ನಿಜದಾಸವರದ — ಆದಿ — ಪಟ್ಣಂಸುಬ್ರಹ್ಮಣ್ಯಅಯ್ಯರ್
ನೀದು ಚರಣ — ಆದಿ — ಪಲ್ಲವಿ ಗೋಪಾಲಅಯ್ಯರ್
ನಿನ್ನುವಿನಾಗತಿ — ಆದಿ — ಸುಬ್ಬರಾಯಶಾಸ್ತ್ರಿ
ಶ್ರೀಮದಾದಿತ್ಯಾಗರಾಜ — ರೂಪಕ — ಮೈಸೂರುವಾಸುದೇವಾಚಾರ್ಯ

ಸರಸ್ವತೀನೆನ್ನೆ ವುಡು — ರೂಪಕ — ತಿರುವೊಟ್ಟಿಯೂರು ತ್ಯಾಗಯ್ಯರ್
ಅವಿರವುಗು — ತ್ರಿಪುಟ — ಚೆಂಗಲ್ವರಾಯಶಾಸ್ತ್ರಿ
ದೇವೀಮೀನಾಕ್ಷಿಮುದಂ — ರೂಪಕ — ಶಿಂಗರಾಚಾರ್ಯಲು
ಪದ—ರಾರಾ ನಾಸಾಮಿ ರಾರಾ — ತ್ರಿಪುಟ — ಕ್ಷೇತ್ರಜ್ಞ
ಎಂದುದಾಚುಕೊಂದು — ತ್ರಿಪುಟ — ಕ್ಷೇತ್ರಜ್ಞ
ನಿಲುವುನ ನಿಲುವೇಡು ಧನಮು — ತ್ರಿಪುಟ — ಕ್ಷೇತ್ರಜ್ಞ
ಇದ್ದರಿ ಸಂದುನ — ತ್ರಿಪುಟ — ಕ್ಷೇತ್ರಜ್ಞ
ಕಂಚಿವರದುನಿಪೊಂದು — ತ್ರಿಪುಟ — ಕ್ಷೇತ್ರಜ್ಞ
ಪಾರೆಂಗುಂ — ರೂಪಕ — ಘನಂಕೃಷ್ಣ ಅಯ್ಯರ್
ತೆಯಲೇರನೆ — ರೂಪಕ — ಸುಬ್ಬರಾಮ ಅಯ್ಯರ್
ಎತ್ತೈಕ್ಕಂಡು — ರೂಪಕ — ಸುಬ್ಬರಾಮ ಅಯ್ಯರ್
ಜಾವಳಿ — ಎಂತಟಿಕುಲುಕೇ — ರೂಪಕ — ಪಟ್ಟಾಭಿರಾಮಯ್ಯ
ಅಷ್ಟಪದಿ — ವಿರಚಿತಚಾಟುವಚನ — ಆದಿ — ಜಯದೇವ

**ಕಲ್ಯಾಣಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ವಸಂತರಾಗದ ಒಂದು ರಾಗಿಣಿಯ ಹೆಸರು.

**ಕಲ್ಯಾಣವಸಂತ**—(೧) ಈ ರಾಗವು ೨೧ನೆಯ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ : ಸ ಗ ಮ ದ ನಿ ಸ̇
ಅ : ಸ̇ ನಿ ದ ಪ ಮ ಗ ರಿ ಸ

ಔಡವ ಸಂಪೂರ್ಣ ಉಪಾಂಗರಾಗ. ಷಡ್ಜವುಗ್ರಹ, ಅಂಶ ಮತ್ತು ನ್ಯಾಸಸ್ವರ. ಶೃಂಗಾರರಸ ಪ್ರಧಾನವಾದ ಸಾರ್ವಕಾಲಿಕ ರಾಗ. ಗಾಂಧಾರ ಮತ್ತು ಧೈವತಗಳು ವಾದಿಸಂವಾದಿ ಮತ್ತು ರಾಗಛಾಯಾಸ್ವರಗಳು. ತ್ಯಾಗರಾಜರು 'ನಾದಲೋಲುಡೈ' ಮತ್ತು 'ಕನುಲುತಾಕನಿ' ಎಂಬ ಕೃತಿಗಳು ಈ ರಾಗದ ಪ್ರಸಿದ್ಧ ರಚನೆಗಳು. ತ್ಯಾಗರಾಜರು ಈ ರಾಗವು ಪ್ರಸಿದ್ಧಿಗೆ ಬರಲು ಕಾರಣ.

(೨) ಇದೇ ಹೆಸರಿನ ಮತ್ತೊಂದು ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ : ಸ ಗ ಮ ಪ ದ ನಿ ಸ̇
ಅ : ಸ̇ ದ ಸ̇ ನಿ ಪ ಮ ಗ ರಿ ಸ

**ಕಲ್ಯಾಣವರಾಳಿ**—ಕೀಟು ಹಿಂದು ಮ್ಯೂಸಿಕ್ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗದ ಹೆಸರು.

**ಕಲ್ಯಾಣ ಸೌಗಂಧಿಕಂ**—ತಿರುವಾಂಕೂರಿನ ಮಹಾರಾಜ ಕಾರ್ತಿಕ ತಿರುನಾಳ್ ರಾಮವರ್ಮ ವಿರಚಿತವಾದ ಒಂದು ಕಥಕಳಿ ರೂಪಕ.

**ಕಣ್ಣಿ**—ಉಡುಕ್ಕೈ ವಾದ್ಯದ ಬಲಮುಖದ ಮೇಲೆ ಕಟ್ಟಿರುವ ಕುದುರೆ ಕೂದಲಿನ ದಾರ. ಇದು ಅನುರಣನದ ಚರ್ಮದ ಭಾಗದ ಜೊತೆಗೆ ಹಿತಕರವಾದ ಶಬ್ದವನ್ನು ಕೊಡುತ್ತದೆ ಕೆಲವು ವಾದ್ಯಗಳಲ್ಲಿ ಎರಡು ದಾರಗಳಿರುತ್ತವೆ.

**ಕಣ್ಣುಸ್ವಾಮಿನಟುವನಾರ್**—ಇವರು ೧೯ನೆ ಶತಮಾನದಲ್ಲಿದ್ದ ತಂಜಾವೂರು ಸಹೋದರ ಚತುಷ್ಟಯರ ಮನೆತನದವರು. ಇವರು ಬರೋಡಾಕ್ಕೆ ಹೋಗಿ ಭರತನಾಟ್ಯಶಾಲೆಯನ್ನು ಸ್ಥಾಪಿಸಿದವರಲ್ಲಿ ಮೊದಲಿಗರು. ಅಲ್ಲಿದ್ದ ಪ್ರಸಿದ್ಧ ಭರತನಾಟ್ಯ ಕಲಾವಿದೆಯರಾಗಿದ್ದ ಗೌರಿ ಮತ್ತು ಕಾಂತಿಮತಿ ಎಂಬುವರು ಇವರ ಶಿಷ್ಯರಾಗಿದ್ದರು.

**ಕಣ್ಣುಸ್ವಾಮಿರಾವ್ ಎಂ. ಬಿ.** (೧೮೫೫–೧೯೩೬)—ಇವರು ಪುದುಕೋಟೆ ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿದ್ದರು. ಸ್ವರಬತ್ ವಾದ್ಯವನ್ನು ನುಡಿಸುತ್ತಿದ್ದರು. ಇವರ ಕಿರಿಯ ಸಹೋದರ ಚಿಟ್ಟುಸ್ವಾಮಿರಾವ್ ಸ್ವರಬತ್ ನುಡಿಸುತ್ತಿದ್ದರು.

**ಕಯಲ್**—ಕಾಲ್ಗೆಜ್ಜೆ. ನರ್ತನ ಮಾಡುವವರು ಕಾಲುಗಳಿಗೆ ಈ ಗೆಜ್ಜೆಗಳನ್ನು ಕಟ್ಟಿಕೊಳ್ಳುತ್ತಾರೆ

**ಕಯುಗುಮಲೆ**—ಈ ಸ್ಥಳವು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಕೋವಿಲ್‌ಪಟ್ಟಿ ಎಂಬ ಸ್ಥಳದಿಂದ ೧೨ ಮೈಲಿ ದೂರದಲ್ಲಿದೆ. ಸಂಗೀತ ಶಿಲ್ಪ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಇದೊಂದು ಮುಖ್ಯವಾದ ಸ್ಥಳ. ಇಲ್ಲಿಯ ಸ್ಥಳ ಪುರಾಣದಂತೆ ಜಟಾಯುವಿನ ಅಣ್ಣನಾದ ಸಂಪಾತಿಯು ಇಲ್ಲಿಯ ದೇವಾಲಯದಲ್ಲಿ ಪೂಜೆ ಮಾಡಿದನು. ಇಲ್ಲಿಯ ದೇವರಾದ ಸುಬ್ರಹ್ಮಣ್ಯನಿಗೆ ಇತರ ಸ್ಥಳಗಳಲ್ಲಿರುವಂತೆ ಆರುಮುಖಗಳಿಲ್ಲ. ಅದಕ್ಕೆ ಬದಲು ಒಂದು ಮುಖ ಮತ್ತು ಆರು ಕೈಗಳಿವೆ. ಇದೊಂದು ವಿಶೇಷ ಸುಬ್ರಹ್ಮಣ್ಯೇನ ರಕ್ಷಿತೋಽಹಂ ಎಂಬ ಶುದ್ಧ ಧನ್ಯಾಸಿ ರಾಗದ ಕೃತಿಯಲ್ಲಿ ಮುತ್ತುಸ್ವಾಮಿ ದೀಕ್ಷಿತರು ಕಯುಗುಮಲೆಯನ್ನು ಕುರಿತು ಹೇಳಿದ್ದಾರೆ. ಈ ಕೃತಿಯ ಕನಕಶೈಲ ವಿಹಾರೇಣ ಎಂಬುದು ಸ್ಥಳ ಮುದ್ರೆ. ಅರುಣಗಿರಿನಾಥರು ಇಲ್ಲಿಯ ಸುಬ್ರಹ್ಮಣ್ಯನನ್ನು ಕುರಿತು ಕೆಲವು ತಿರುಪ್ಪುಗಳ್‌ಗಳನ್ನು ರಚಿಸಿದ್ದಾರೆ. ಇತ್ತೀಚೆಗೆ ಕಾವಡಿಚಿಂದ್ ಹಾಡುಗಳಿಗೆ ಪ್ರಸಿದ್ಧರಾದ ಅಣ್ಣಾಮಲೈ ರೆಡ್ಡಿಯಾರ್ ಕಯುಗಾಚಲ ಮುರುಗನನ್ನು ಸ್ತುತಿಸಿ ಕೆಲವು ಸುಂದರವಾದ ಹಾಡುಗಳನ್ನು ರಚಿಸಿದ್ದಾರೆ. ಮುರುಗನ್ ತಿರುಮಲ್ ಮುರುಗನ್ ಪೆರುಮೈ ಎಂಬ ಅಠಾಣರಾಗದ ಕೃತಿಯು ಇವುಗಳಲ್ಲಿ ಬಹಳ ಪ್ರಸಿದ್ಧ. ಈ ದೇವಾಲಯದ ಒಂದು ಫರ್ಲಾಂಗ್ ದೂರದಲ್ಲಿ ಮಹಾಬಲಿಪುರದ ಪಗೋಡದಂತಿರುವ ವಾಸ್ತುಶಿಲ್ಪವಿದೆ. ಇದರಲ್ಲಿ ಸುಂದರವಾದ ವಿಗ್ರಹಗಳನ್ನು ಕೆತ್ತಿದೆ. ಇವು ಹಲವು ನಾಟ್ಯಭಂಗಿಗಳಲ್ಲಿವೆ. ತಾಳ, ಶಂಖ, ಮದ್ದಳೆ, ಕಮಾನಿನಿಂದ ನುಡಿಸುವ ತಂತೀವಾದ್ಯ. ಕೊಳಲು, ಮಡಕೆವಾದ್ಯ, ರುದ್ರ

ವೀಣೆ ನುಡಿಸುವ ವಕ್ಕವಾದ್ಯಗಾರರ ಶಿಲ್ಪವಿದೆ. ಇಲ್ಲಿಂದ ಸ್ವಲ್ಪ ದೂರದಲ್ಲಿ ಜೈನ ತೀರ್ಥಂಕರರ ವಿಗ್ರಹಗಳನ್ನು ಕೆತ್ತಿರುವ ಬಂಡೆ ಇದೆ. ಇದಕ್ಕೆ ಸಂಬಂಧಿಸಿದಂತೆ ಒಂದು ಜನಜನಿತವಾದ ಕತೆಯಿದೆ ತಂದೆ ಶಿಲ್ಪಿಯು ಜೈನ ವಿಗ್ರಹಗಳನ್ನು ಕೆತ್ತು ತ್ತಿದ್ದಾಗ ಅವನಿಗೆ ತಿಳಿಯದಂತೆ ಅವನ ಪ್ರತಿಭಾವಂತ ಮಗನು ಪಕ್ಕದಲ್ಲಿದ್ದ ರಥದಲ್ಲಿ ಅಮರವಾದ ಶಿಲ್ಪವನ್ನು ನಿರ್ಮಿಸಲು ಆಶಿಸಿದನು. ಗುಟ್ಟಾಗಿ ಮಗನು ಮಾಡು ತ್ತಿರುವ ಕೆಲಸ ತಿಳಿಯಿತು. ಇದರಿಂದ ವಿಪರೀತ ಕೋಪ ಬಂದು ಅವನು ತನ್ನ ಮಗ ನನ್ನು ಕೊಂದುಬಿಟ್ಟನು. ಮಗನು ತೊಡಗಿದ್ದ ಶಿಲ್ಪವು ಅಸಂಪೂರ್ಣವಾಗಿ ಉಳಿಯಿತು. ಈ ರಥಕ್ಕೆ ವೆಟ್ಟುವನ್ ಕೋವಿಲ್ ಎಂಬ ಹೆಸರು ಬಂದಿತು.

ಕಯುಗುಮಲೈ ದೇವಾಲಯವು ೧೦೦೦ ವರ್ಷಕ್ಕಿಂತ ಪುರಾತನವಾದುದು. ಗರ್ಭಗುಡಿಯಲ್ಲಿರುವ ಮೂಲವಿಗ್ರಹವನ್ನು ಕಲ್ಲಿನಿಂದ ಕೆತ್ತಲಾಗಿದೆ. ಲೋಹದ ವೇಲಾಯುಧವು ಬಹು ಸುಂದರವಾಗಿದೆ. ವಲ್ಲಿ ಮತ್ತು ದೇವಯಾನೆ ವಿಗ್ರಹಗಳು ಈಚಿನವು. ದೇವಾಲಯದ ಪಕ್ಕದಲ್ಲಿರುವ ಮಂಟಪದಲ್ಲಿ ಎತ್ತರವಾದ ಒಬ್ಬ ಸ್ತ್ರೀ ವಿಗ್ರಹ ವಿದೆ. ಇದರ ಕೈಯಲ್ಲಿ ನಕುಲವೆಂಬ ಎರಡು ತಂತಿಗಳ ವೀಣೆಯಿದೆ. ಈ ವೀಣೆ ಯಲ್ಲಿ ಮೆಟ್ಟುಗಳಿಲ್ಲ. ತಂತಿಗಳು ಒಂದರ ಪಕ್ಕದಲ್ಲಿ ಇನ್ನೊಂದಿವೆ. ದೋತಾರ್ ವಾದ್ಯದಲ್ಲಿರುವ ಎರಡು ತಂತಿಗಳು ಒಂದರ ಕೆಳಗಡೆ ಇನ್ನೊಂದಿದೆ. ಇದು ಕೇವಲ ಶ್ರುತಿವಾದ್ಯ ಈ ಬೆಟ್ಟದಲ್ಲಿ ನಡೆದು ಹೋಗುವಾಗ ಕೆಲವು ಕಲ್ಲುಗಳ ಮೇಲೆ ಕಾಲಿಟ್ಟರೆ ಅನುರಣನದಿಂದ ಸಂಗೀತ ಶಬ್ದ ಉಂಟಾಗುತ್ತದೆ. ಸುಬ್ಬರಾಮ ದೀಕ್ಷಿತರು ಕಯುಗುಮಲೈ ಸುಬ್ರಹ್ಮಣ್ಯ ಸ್ವಾಮಿಯನ್ನು ಕುರಿತು 'ವಲ್ಲೀ ಭರತಂ' ಎಂಬ ಗೇಯ ನಾಟಕವನ್ನು ರಚಿಸಿದ್ದಾರೆ.

**ಕಯಿತ್ತಾರ್**—ಇದು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯಲ್ಲಿರುವ ಒಂದು ಗ್ರಾಮ. ಗೀತಗಳನ್ನು ರಚಿಸಿರುವ ಪ್ರಸಿದ್ಧ ವಾಗ್ಗೇಯಕಾರ ಪೈದಾಲ ಗುರುಮೂರ್ತಿ ಶಾಸ್ತ್ರಿಗಳ ಜನ್ಮಸ್ಥಳ.

**ಕಲಕಂಠಿ**—ಈ ರಾಗವು ೧೩ನೆ ಮೇಳಕರ್ತ ರಾಗ ಗಾಯಕಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಮ ಪ ದ ನಿ ಸ<br>
ಅ : ಸ ನಿ ದ ಪ ಮ ರಿ ಮ ಗ ಸ

ತ್ಯಾಗರಾಜರ ಶ್ರೀ ಜನಕತನಯೇ ಎಂಬ ಕೃತಿಯು ಈ ರಾಗದ ಪ್ರಸಿದ್ಧ ರಚನೆ.

**ಕಲಗಡ**—ಈ ರಾಗವು ೧೩ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಗ ಪ ದ ನಿ ಸ<br>
ಅ : ಸ ನಿ ದ ಪ ಗ ರಿ ಸ

ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ. ಕರುಣ ಮತ್ತು ಶೋಕರಸ ಪ್ರಧಾನವಾದ ಸಾರ್ವಕಾಲಿಕ ರಾಗ. ಧೈವತ ನಿಷಾದಗಳು ರಾಗ ಛಾಯಾ ಸ್ವರಗಳು. ಈ ರಾಗಕ್ಕೆ ಕಲ್ಗಡ ಎಂಬ ಹೆಸರೂ ಇದೆ. ತ್ಯಾಗರಾಜ ವಿರಚಿತ ಸಮಯಮುಏಮರಕೇ, ಶ್ಯಾಮಾಶಾಸ್ತ್ರಿ ವಿರಚಿತ ಪಾರ್ವತಿ ನಿನ್ನುನೇ ಮತ್ತು ತಳಗಂಬಾಡಿ ಪಂಚನದ ಅಯ್ಯರ್ ವಿರಚಿತ ಸರಸಿಜನೇತ್ರ ಸಮಯಮಿದೇರ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಕಲ್ಗಡಂ**—ಇದು ಕ್ರಿ. ಶ ೧೧ನೆ ಶತಮಾನದ ಒಂದು ತಮಿಳು ಗ್ರಂಥ. ಇದರಲ್ಲಿ ಸಂಗೀತದ ಕೆಲವು ಪ್ರಸ್ತಾಪಗಳಿವೆ.

**ಕಲಂಯಾಳ್**—ದಕ್ಷಿಣ ಭಾರತದ ಪುರಾತನ ಯಾಳ್ ವಾದ್ಯ. ಪೆರುಂಗಲಂ ಎಂಬುದು ದೊಡ್ಡ ಯಾಳ್. ಇದರಲ್ಲಿ ನೂರು ತಂತಿಗಳಿದ್ದುವು.

**ಕಲಹಂಸ**—ಈ ರಾಗವು ೩೦ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯ ರಾಗ.

ಆ : ಸ ರಿ ಮ ಪ ದ ನಿ ದ ಸ̇

ಅ : ಸ̇ ನಿ ದ ಪ ಮ ರಿ ಸ

ಋಷಭ ಮತ್ತು ನಿಷಾದವು ದೀರ್ಘ ಮತ್ತು ಜೀವಸ್ವರಗಳು. ಕರುಣಾರಸ ಪ್ರಧಾನ ವಾದ ಸಾರ್ವಕಾಲಿಕ ರಾಗ.

**ಕಲಹಾಂತರಿತ (ಕಲಹಂತರಿ)**—ಭರತನಾಟ್ಯಶಾಸ್ತ್ರದಂತೆ ನಾಯಕಿಯರ ಮೂಲಭೇದಗಳು ಎಂಟು ವಿಧ. ಅವುಗಳಲ್ಲಿ ಇದೊಂದು ಬಗೆಯ ನಾಯಕಿ. ಇವಳು ವಿವೇಚನಾ ಶಕ್ತಿಯನ್ನು ಕಳೆದುಕೊಂಡು ಮಾತೆತ್ತಿದರೆ ಜಗಳಕಾದು, ಪತಿಯನ್ನು ಅವಮಾನಿಸಿ ನಂತರ ಚಿಂತಿಸುವವಳು ಕಲಹಾಂತರಿತ.

**ಕಳಂಹಾಡು**—ಇವು ಮಲಬಾರಿನಲ್ಲಿ ಕಾಳೀಪೂಜೆಯಲ್ಲಿ ಹಾಡುವ ಹಾಡು ಗಳು. ಇವುಗಳನ್ನು ಹಾಡುವಾಗ ಕೈಮಣಿ ಮತ್ತು ನಂದುನಿ ಎಂಬ ವಾದ್ಯಗಳನ್ನು ಪಕ್ಕವಾದ್ಯಗಳನ್ನಾಗಿ ನುಡಿಸುವರು.

**ಕಲಾಧರ್ಮ**—ಸಂಗೀತ ಕಚೇರಿಗೆ ಸಂಬಂಧಿಸಿದ ನಿಯಮಗಳನ್ನು ಅನುಸರಿಸು ವುದು ಕಲಾಧರ್ಮ. ಒಂದು ಕೃತಿಯನ್ನು ಹಾಡಬೇಕಾದರೆ ಅದನ್ನು ವಾಗ್ಗೇಯ ಕಾರನು ಹೇಗೆ ರಚಿಸಿರುವನೋ ಅದೇ ರೀತಿಯಲ್ಲಿ ಹಾಡಬೇಕು. ಕೀರ್ತನೆಗಳನ್ನು ತಮ್ಮ ಪ್ರತಿಭೆಯಿಂದ ಸ್ವಶೈಲಿಯಲ್ಲಿ ಹಾಡಲು ಸಂಗೀತ ವಿದ್ವಾಂಸರು ಸ್ವತಂತ್ರರು. ತ್ಯಾಗರಾಜ ವಿರಚಿತ ಸೀತಾಪತೇ ಮತ್ತು ಸುಜಿನ ಜೀವನ ಎಂಬ ಕೃತಿಗಳಲ್ಲಿ ಕಾಕಲಿ ನಿಷಾದವಿಲ್ಲ. ಖಮಾಚ್ ರಾಗವು ಅವರ ಕಾಲದಲ್ಲಿ ಉಪಾಂಗರಾಗವಾಗಿತ್ತು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಕಾಕಲಿ ನಿಷಾದ ಪ್ರಯೋಗಮಾಡಿ ಹಾಡಲು ಆರಂಭವಾಯಿತು. ಇವೆರಡು ಕೃತಿಗಳನ್ನು ಕಾಕಲಿ ನಿಷಾದವಿಲ್ಲದೆ ಹಾಡುವುದು ಕಲಾಧರ್ಮ. ಈ ಕೃತಿಗಳನ್ನು ಹಾಡುವ ಮೊದಲು ಆಲಾಪನೆ ಮಾಡುವಾಗ

ಅವನ್ನು ಉಪಾಂಗವೆಂದು ಹಾಡಬೇಕು. ಕಲ್ಪನಾ ಸ್ವರಗಳನ್ನು ಹಾಡುವಾಗಲೂ ಈ ನಿಯಮವನ್ನು ಅನುಸರಿಸಬೇಕು. ಮೈಸೂರು ವಾಸುದೇವಾಚಾರ್ಯರ ಬ್ರೋಚೇವಾರೆವರುರಾ ಎಂಬ ಕೃತಿಯನ್ನು ಹಾಡುವ ಮೊದಲು ಖಮಾಚ್ ರಾಗದ ಭಾಷಾಂಗ ಮಾದರಿಯ ಆಲಾಪನೆ ಮಾಡಬೇಕು. ಕಲ್ಪನಾಸ್ವರಗಳನ್ನು ಹಾಡುವಾಗಲೂ ಇದೇ ನಿಯಮವನ್ನು ಅನುಸರಿಸುವುದು ಕಲಾಧರ್ಮ.

**ಕಲಾನಿಧಿ**—(೧) ಈ ರಾಗವು ೨೨ನೆಯ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಮ ಸ ಪ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಇದೊಂದು ಉಪಾಂಗರಾಗ. ಗಾಂಧಾರ ಮತ್ತು ನಿಷಾದವು ಕಂಪಿತ ಸ್ವರಗಳು. ತ್ಯಾಗರಾಜರ ' ಚಿನ್ನನಾಡೇನ ' ಎಂಬ ರಚನೆಯು ಈ ರಾಗದ ಒಂದು ಸೊಗಸಾದ ಕೃತಿ.

(೨) ಶಾರ್ಙ್ಗದೇವನ ಸಂಗೀತ ರತ್ನಾಕರವೆಂಬ ಗ್ರಂಥಕ್ಕೆ ಕಲ್ಲಿನಾಥನು ಬರೆದಿರುವ ವ್ಯಾಖ್ಯಾನದ ಹೆಸರು.

(೩) ಇದು ತಾರರಂಧ್ರ ಮತ್ತು ಮುಖರಂಧ್ರಗಳಿಗೆ ೧೬ ಅಂಗುಲ ಅಂತರವಿರುವ ಕೊಳಲಿನ ಹೆಸರು.

ಇದು ಶಾರ್ಙ್ಗದೇವನ ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿದೆ. ೧ ಮತ್ತು ೭ನೆಯ ರಂಧ್ರಗಳನ್ನು ಮುಚ್ಚಿ ಊದಿದಾಗ ಮಂದ್ರಸ್ಥಾಯಿ ರಿಷಭವು ಉಂಟಾಗುತ್ತದೆ.

**ಕಲಾಭರಣ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಗ ರಿ ಸ

**ಕಲಾಭರಣಿ**—ಈ ರಾಗವು ೫೨ನೆಯ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ನಿ

ಅ: ದ ಪ ಮ ಗ ರಿ ಸ ನಿ ಸ

**ಕಲಾಭೋಗಿ**—ಈ ರಾಗವು ೬೯ನೆಯ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ

ಅ: ಸ ದ ಮ ಪ ಮ ಗ ರಿ ಸ

**ಕಲಾಸಾವೇರಿ**—ಈ ರಾಗವು ೮ನೆಯ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಕಲಾಶ**—ಕಥಕಳಿ ನೃತ್ಯದ ಮುಕ್ತಾಯ ಭಾಗಕ್ಕೆ ಕಲಾಶವೆಂದು ಹೆಸರು. ಅಷ್ಟಕಲಾಶಗಳೆಂಬ ಎಂಟು ಬಗೆಯ ಮುಕ್ತಾಯಗಳಿವೆ.

**ಕಲಾಹಕ** ಕಹಳೆಯಂತಿರುವ ಒಂದು ಸುಷಿರವಾದ್ಯ.

**ಕಲಾವತಿ** – (೧) ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ಗ ಸ ರಿ ಸ

ಔಡವ ಷಾಡವ ಉಪಾಂಗರಾಗ. ರಿಷಭ, ಗಾಂಧಾರ ಮತ್ತು ಮಧ್ಯಮಗಳು ಈ ರಾಗದ ಛಾಯಾಸ್ವರಗಳು. ಸಾರ್ವಕಾಲಿಕ ರಾಗಗಳು. ಈ ರಾಗದ ಕೃತಿಗಳು ರಿ ಮತ್ತು ಪ ಗಳಿಂದ ಆರಂಭವಾಗುತ್ತವೆ. ತ್ಯಾಗರಾಜರ ಎನ್ನಡು ಜೂತುನೋ ಮತ್ತು ಒಕಪಾರಿ ಜೂಡಗರಾದಾ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

(೨) ಅಸಂಪೂರ್ಣ ಮೇಳಪದ್ಧತಿಯಂತೆ ಇದು ೩೧ನೆ ಮೇಳರಾಗದ ಹೆಸರು.

ಆ: ಸ ರಿ ಗ ಮ ಪ ದ ನಿ ದ ಪ ದ ಸ

ಅ: ಸ ನಿ ದ ಪ ಮ ರಿ ಗ ಮ ರಿ ಸ

ಉಭಯವಕ್ರ ಸಾರ್ವಕಾಲಿಕರಾಗ. ಪ ದ ನಿ ದ ಸ ಎಂಬ ಸ್ವರ ಸಮೂಹವು ಹೆಚ್ಚಾಗಿ ಬರುತ್ತದೆ. ಮುತ್ತುಸ್ವಾಮಿ ದೀಕ್ಷಿತರ ಕಲಾವತಿ ಕಮಲಾಸನ ಯುವತಿ ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

(೩) ಇದು ತುಂಬುರುವಿನ ತಂತೀವಾದ್ಯದ ಹೆಸರು ಇದು ಶ್ರುತಿವಾದ್ಯವಾಗಿದ್ದು ತಂಬೂರಿ ಎಂಬ ಹೆಸರು ಬಂದಿತು.

**ಕಲಾಕ್ಷೇತ್ರ**—ತಮಿಳು ನಾಡಿನ ರಾಜಧಾನಿ ಮದ್ರಾಸಿನ ಅಡ್ಯಾರ್‌ನಲ್ಲಿರುವ ಲಲಿತ ಕಲೆಗಳ ಸಂಸ್ಥೆಗಳ ಸಂಸ್ಥೆ. ಭರತನಾಟ್ಯದ ಒಬ್ಬ ಶ್ರೇಷ್ಠ ಹಾಗೂ ಪ್ರಸಿದ್ಧ ಕಲಾವಿದೆ ರುಕ್ಮಿಣೀದೇವಿ ಈ ಸಂಸ್ಥೆಯನ್ನು ೧೯೩೬ರಲ್ಲಿ ಸ್ಥಾಪಿಸಿದರು. ಇಲ್ಲಿ ವಿದ್ಯಾರ್ಥಿಗಳಿಗೆ ಭರತನಾಟ್ಯ, ಸಂಗೀತ, ಚಿತ್ರಕಲೆ ಮತ್ತು ನಾಟಕ ಕಲೆಯಲ್ಲಿ ಶಿಕ್ಷಣವನ್ನು ಕೊಡಲಾಗುತ್ತದೆ. ಇಲ್ಲಿ ಭಾರತದ ನಾನಾ ಪ್ರಾಂತ್ಯಗಳ ವಿದ್ಯಾರ್ಥಿಗಳೂ, ವಿದೇಶೀ ವಿದ್ಯಾರ್ಥಿಗಳೂ ಶಿಕ್ಷಣ ಪಡೆಯುತ್ತಿದ್ದಾರೆ. ಈ ಸಂಸ್ಥೆಯು ಹಲವು ನೃತ್ಯ ನಾಟಕಗಳನ್ನು ದೇಶವಿದೇಶಗಳಲ್ಲಿ ಪ್ರದರ್ಶಿಸಿದೆ. ಇಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಟೈಗರ್ ವರದಾಚಾರ್ಯರು, ಮೈಸೂರು ವಾಸುದೇವಾಚಾರ್ಯರೇ ಮುಂತಾದವರು ಅಧ್ಯಾಪಕರಾಗಿದ್ದರು.

**ಕಲ್ಯಾಣಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಮ ಪ ದ ಪ ಸ

ಅ: ಸ ದ ಪ ಮ ರಿ ಸ

**ಕಲಿಕಿ**—ಈ ರಾಗವು ೧೩ನೆಯ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ಕಲಿಕವಸಂತ**—ಈ ರಾಗವು ೪೩ನೆಯ ಮೇಳಕರ್ತ ಗವಾಂಭೋದಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ಪ ಮ ರಿ ಸ

**ಕಲ್ಲಿನಾಥ**—ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥಕ್ಕೆ ಕಲಾನಿಧಿ ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಇವನು ವಿಜಯನಗರದ ದೊರೆ ಇಮ್ಮಡಿ ದೇವರಾಯನ (೧೪೪೬–೧೪೬೫) ಕಾಲದಲ್ಲಿದ್ದ ಲಾಕ್ಷಣಿಕ. ಸಂಗೀತವಲ್ಲದೆ ಶ್ರುತಿ, ಸ್ಮೃತಿ, ಉಪನಿಷತ್ತು, ವ್ಯಾಕರಣ, ತರ್ಕ, ಅಲಂಕಾರ, ಛಂದಸ್ಸು, ಆಯುರ್ವೇದ, ಕೌಲತಂತ್ರ ಇತ್ಯಾದಿ ಅನೇಕ ಶಾಸ್ತ್ರಗಳಲ್ಲಿ ಅನುಪಮ ಪರಿಣತಿಯನ್ನು ಪಡೆದಿದ್ದನು. ಸಂಗೀತದ ವಿಶ್ವಕೋಶದಂತಿರುವ ಸಂಗೀತರತ್ನಾಕರಕ್ಕೆ ಇವನು ಬರೆದಿರುವ ವ್ಯಾಖ್ಯಾನವೂ ಸುಸ್ಪಷ್ಟವೂ, ನೇರವೂ, ಹೃದಯಸ್ಪರ್ಶಿಯೂ, ವಿದ್ವತ್ ಪೂರ್ಣವೂ ಆದ ಶ್ರೇಷ್ಠಗ್ರಂಥ ಇವನಿಗೆ ಅಭಿನವಭರತಾಚಾರ್ಯ, ರಾಯಬಯಕಾರ ಅಥವಾ ರಾಜವಾಗ್ಗೇಯಕಾರ ಎಂಬ ಬಿರುದುಗಳಿದ್ದುವು.

**ಕಲ್ಲಿನಾಥಮತ**—ಕಲ್ಲಿನಾಥನು ಪ್ರತಿಪಾದಿಸಿರುವ ಸಂಗೀತ ಪದ್ಧತಿ.

**ಕಳಿನೃತ್ಯ, ಆಟ ಅಥವಾ ನಾಟಕ**—ಈ ಆಟವು ಕೇರಳ ರಾಜ್ಯದಲ್ಲಿ ಪ್ರಚಲಿತವಾಗಿದೆ ಇದರಲ್ಲಿ ಹಲವು ಬಗೆಗಳಿವೆ.

(೧) **ಕೆಂಬಡಿಕಳಿ**—ಇದು ಗಂಡಸರ ಕೋಲಾಟ. ಉದ್ದವಾದ ಕೋಲುಗಳನ್ನು ಹಿಡಿದು ಆಡುತ್ತಾರೆ

(೨) **ಪರುತ್ತಿವೆಟ್ಟುಕಳಿ**—ಹತ್ತಿಯನ್ನು ಬೆಳೆದು ಪಡೆಯುವ ವಿಧಾನಗಳನ್ನು ಸೂಕ್ತವಾದ ನಟನೆ, ಚಲನೆಗಳಿಂದ ಚಿತ್ರಿಸಲಾಗುವುದು.

(೩) **ಕೋಳಿಪ್ಪೋರುಕಳಿ**—ಹುಂಜನ ಕಾಳಗದ ವಿವಿಧ ಹಂತಗಳನ್ನು ಚಿತ್ರಿಸುವ ಆಟ.

(೪) **ನಾಗಚ್ಚುಟ್ರುಕಳಿ**—ಸರ್ಪಗತಿಯನ್ನು ಗಂಡಸರು ತಮ್ಮ ಚಲನೆಗಳಿಂದ ತೋರಿಸುತ್ತಾರೆ.

(೫) **ಕೈಯಡಿಚ್ಚುಕಳಿ**—ಗಂಡಸರು ಆಡುವ ಕುಮ್ಮಿ ಆಟ.

(೬) **ತಿರುವರಿಚ್ಚಲ್‌ಕಳಿ**—ಸಮುದ್ರದ ಅಲೆಗಳಂತಿರುವ ಕುಣಿತ.

(೭) **ಪಡಯುನಿಕಳಿ**—ಇದು ಯುದ್ಧಭೂಮಿಗೆ ಸೈನ್ಯವು ಹೋಗುವ ಸಿದ್ಧತೆಯನ್ನು ಚಿತ್ರಿಸುತ್ತದೆ.

**ಕಳ್ಳಿಯ್ಕೈತ್ತನಾಗಸ್ವರ**—ಇದು ನವರತ್ನ ಖಚಿತವಾದ ನಾಗಸ್ವರ. ಪೀಪಿಯ ಕೆಳಭಾಗವಲ್ಲಿ ನವರತ್ನಗಳನ್ನು ಅಳವಡಿಸಿದ್ದಾರೆ ಇಂತಹ ನಾಗಸ್ವರವನ್ನು ಸಂಗೀತ ಸ್ಪರ್ಧೆಗಳಲ್ಲಿ ಬಹುಮಾನವಾಗಿ ಕೊಡುತ್ತಾರೆ. ಹಿಂದೆ ತಮಿಳು ನಾಡಿನಲ್ಲಿ ಇಂತಹ ಸ್ಪರ್ಧೆಗಳು ಹೆಚ್ಚಾಗಿ ನಡೆಯುತ್ತಿದ್ದುವು ಈ ಶತಮಾನದ ಆದಿಭಾಗವಲ್ಲಿ ಕೃಷ್ಣ ಮತ್ತು ಕುಪ್ಪನ್ ಎಂಬ ಇಬ್ಬರು ನಾಗಸ್ವರ ವಿದ್ವಾಂಸರಲ್ಲಿ ತಿರುವ್ರೋತ್ತಿಯೂರು ತ್ಯಾಗಯ್ಯರ್‌ರವರ ಅಧ್ಯಕ್ಷತೆಯಲ್ಲಿ ಮದ್ರಾಸಿನ ಕೃಷ್ಣದೇವಾಲಯದಲ್ಲಿ ಸ್ಪರ್ಧೆನಡೆದು ಕುಪ್ಪನಿಗೆ ಈ ಬಹುಮಾನವನ್ನು ಕೊಡಲಾಯಿತು.

**ಕವಿಕುಂಜರ**—ಶಿವಗಂಗೆಯ ರಾಜ ಗೌರೀವಲ್ಲಭನು ಕವಿ ಮತ್ತು ವಾಗ್ಗೇಯಕಾರರಾಗಿದ್ದ ಕೋಟೀಶ್ವರ ಅಯ್ಯರ್‌ರವರಿಗೆ ಕೊಟ್ಟ ಬಿರುದು. ಅಂದಿನಿಂದ ಅಯ್ಯರ್‌ರವರು ಕವಿಕುಂಜರಭಾರತಿ ಎಂದು ಪ್ರಸಿದ್ಧರಾದರು.

**ಕವಿಕುಂಜರಭಾರತಿ** (೧೮೧೦-೧೮೯೬)—ಇವರು ತಮಿಳುನಾಡಿನ ಪ್ರಸಿದ್ಧ ವಾಗ್ಗೇಯಕಾರರು. ಸ್ಕಾಂದಪುರಾಣ ಕೀರ್ತನೆಗಳು, ಪೆರಿಂಬಕೀರ್ತನೆಗಳು, ಅಳಗರ್ ಕುರವಂಜಿ ಎಂಬ ರಚನೆಗಳು ಇವರ ಪ್ರಮುಖ ಕೃತಿಗಳು. ಇವರು ತಮಿಳುನಾಡಿನ ರಾಮನಾಡ್ ಜಿಲ್ಲೆಯ ಪೆರುಂಗರೈ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಸುಬ್ರಹ್ಮಣ್ಯಭಾರತಿ ಮತ್ತು ತಾತ ಕೋಟೀಶ್ವರ ಭಾರತಿ ಮುಂತಾದವರೆಲ್ಲರೂ ಸಂಸ್ಕೃತ ಮತ್ತು ತಮಿಳು ಪಾಂಡಿತ್ಯಕ್ಕೆ ಹೆಸರಾಗಿದ್ದರು. ಕವಿಕುಂಜರಭಾರತಿಯು ಚಿಕ್ಕಂದಿನಲ್ಲೇ ತಮಿಳು, ಸಂಸ್ಕೃತ ಮತ್ತು ಸಂಗೀತದಲ್ಲಿ ಪಾಂಡಿತ್ಯವನ್ನು ಪಡೆದರು. ಮೊದಮೊದಲು ರಚಿಸಿದ ಪದ್ಯಗಳು, ಕೀರ್ತನೆಗಳು ಮತ್ತು ಪದಗಳು ಹಲವರ ಮೆಚ್ಚುಗೆ ಪಡೆದುವು. ಇವರಿಗೆ ತಮಿಳು ಪದಗಳ ವಾಗ್ಗೇಯಕಾರರಾಗಿದ್ದ ಮಧುರಕವಿ ಭಾರತಿಯ ಸ್ನೇಹ ಲಭಿಸಿತು. ಕವಿಕುಂಜರರ ಕೃತಿಗಳಲ್ಲಿ ಭಕ್ತಿರಸ, ಸಂಗೀತ, ಪದಲಾಲಿತ್ಯ, ಉತ್ತಮ ಭಾವನೆಗಳು ತುಂಬಿವೆ. ಇವುಗಳನ್ನು ತನ್ನ ಸಂಸ್ಥಾನ ವಿದ್ವಾಂಸರಿಂದ ಕೇಳಿ ಆಕರ್ಷಿತನಾದ ಶಿವಗಂಗೆಯ ದೊರೆ ಗೌರೀವಲ್ಲಭರಾಜನು ಕವಿಕುಂಜರರನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿ ಅವರ ಕೃತಿಗಳನ್ನು ಹಾಡಿಸಿ ಕೇಳಿ ಸಂತೋಷಪಟ್ಟು ಅವರಿಗೆ ಕವಿಕುಂಜರ ಎಂಬ ಬಿರುದನ್ನಿತ್ತು ಗೌರವಿಸಿದನು ಮತ್ತು ತನ್ನ ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿದನು. ಅಂದಿನಿಂದ ಇವರು ಕವಿಕುಂಜರಭಾರತಿಯೆಂದು ಪ್ರಸಿದ್ಧರಾದರು.

ರಾಜನ ಹಿರಿಯ ಅಣ್ಣ ಪೊನ್ನುಸ್ವಾಮಿತೇವರ್ ಕೋರಿಕೆಯಂತೆ ಸ್ಕಾಂದ ಪುರಾಣದ ಕೀರ್ತನೆಗಳನ್ನು ರಚಿಸಲು ೧೮೬೫ರಿಂದ ತೊಡಗಿ ಐದು ವರ್ಷಗಳಲ್ಲಿ ಸಂಪೂರ್ಣಗೊಳಿಸಿದರು. ಈ ರಚನೆಗಳನ್ನು ಭಾರತಿಯ ಸೋದರಳಿಯ ಆಳುಡೈಯಾರ್ ಕೋವಿಲ್ ಆತ್ಮನಾಥ ಭಾಗವತರು ಪ್ರಚಾರಕ್ಕೆ ತಂದರು.

ಕವಿಕುಂಜರರು ಸದಾಕಾಲ ಭಗವನ್ನಾಮಸ್ಮರಣೆ, ಭಜನೆ, ಧ್ಯಾನ ಇತ್ಯಾದಿಗಳಲ್ಲಿ ನಿರತರಾಗಿದ್ದರು. ಇವರು ತಮ್ಮ ಸಮಕಾಲೀನರ ಗೌರವಕ್ಕೆ ಪಾತ್ರರಾಗಿದ್ದರು. ಇವರ ಮೊಮ್ಮಗ ಕೋಟೀಶ್ವರ ಅಯ್ಯರ್ ತಮಿಳಿನಲ್ಲಿ ೭೨ ಮೇಳರಾಗ ಕೃತಿಗಳನ್ನು ರಚಿಸಿ ಪ್ರಸಿದ್ಧರಾದರು.

**ಕವಿತೆ**—ಇದು ಪವಿತ್ರ ಸಂಗೀತಕ್ಕೆ ಸೇರಿದ ಭಾಗ. ಗಣಪತಿ, ನಟರಾಜ ಮುಂತಾದ ದೇವರ ನಾಟ್ಯಕ್ಕೆ ಸಂಬಂಧಿಸಿದ ಸ್ತುತಿರೂಪವಾದ ರಚನೆಗಳನ್ನು ದೇವಾಲಯಗಳ ಉತ್ಸವಾದಿ ಸಂದರ್ಭಗಳಲ್ಲಿ ಹಾಡುತ್ತಾರೆ. ಇವುಗಳಲ್ಲಿ ಸಾಹಿತ್ಯ ಮತ್ತು ಜತಿಗಳಿರುತ್ತವೆ. ಅನೇಕ ದೇವತೆಗಳನ್ನು ಕುರಿತು ಕವಿತೆಗಳಿವೆ. ಇವಕ್ಕೆ ತಮಿಳಿನಲ್ಲಿ ಕವುತ್ತುವಂ ಎಂದು ಹೆಸರು. ಮರಾಠಿ ಭಾಷೆಯಲ್ಲೂ ಇಂತಹ ರಚನೆಗಳಿವೆ. ಇವಕ್ಕೆ ನಟವರಿಬೋಲ್‌ಗಳನ್ನು ಸೇರಿಸಿರುತ್ತಾರೆ. ಕವಿತೆಯ ಅರ್ಥವನ್ನು ಹಲವಾರು ಹಸ್ತಮುದ್ರೆಗಳಿಂದ ಪ್ರದರ್ಶಿಸಿ ತಾಳಬದ್ಧವಾದ ಪಾದಚಲನೆಗಳಿಂದ ಪ್ರಕಟಿಸುತ್ತಾರೆ. ಇದು ನೃತ್ತಕ್ಕೂ ನೃತ್ಯಕ್ಕೂ ಇರುವ ಸಂಕಲನ. ಕಥಕ್ ನೃತ್ಯದ ಒಂದು ಸಂಗೀತ ಭಾಗ. ಇವಲ್ಲದೆ ನವಸಂಧಿ ಕವಿತೆಗಳೂ ಇವೆ. ಕಲ್ಯಾಣಿ, ಪಂತುವರಾಳಿ, ನೀಲಾಂಬರಿ, ಕೇದಾರಗೌಳ, ತೋಡಿ, ಸಾವೇರಿ, ಶುದ್ಧಸಾವೇರಿ, ಯದುಕುಲ ಕಾಂಭೋಜಿ ಮುಂತಾದ ಪ್ರಸಿದ್ಧ ರಾಗಗಳಲ್ಲಿ ಹಲವು ಕವಿತೆಗಳಿವೆ

**ಕರಣವುದ್ದಳಿ**—ತಮಿಳು ನಾಡಿನ ತಂಜಾವೂರು ಜಿಲ್ಲೆಯ ತ್ಯಾಗರಾಜ ಸ್ವಾಮಿಯ ವಿಟಂಕ ಕ್ಷೇತ್ರಗಳಲ್ಲಿ ನಡೆಯುವ ಪಲ್ಲಕ್ಕಿ ನೃತ್ಯಗಳಲ್ಲಿ ಬಾರಿಸಲಾಗುವ ಮದ್ದಲೆ

**ಕವಿಮಾತೃಭೂತಯ್ಯ**—ಇವರು ೧೮ನೆ ಶತಮಾನದಲ್ಲಿ ತಮಿಳುನಾಡಿನ ತಿರುಚಿರಪ್ಪಳ್ಳಿಯಲ್ಲಿ ವಾಸಿಸುತ್ತಿದ್ದರು. ತ್ರೈಲಿಂಗ್ಯ ಬ್ರಾಹ್ಮಣ ಕುಟುಂಬಕ್ಕೆ ಸೇರಿದ ಇವರು ತೆಲುಗು, ತಮಿಳು, ಸಂಸ್ಕೃತ ಭಾಷೆಗಳಲ್ಲಿ ಮತ್ತು ಲಕ್ಷ್ಯಲಕ್ಷಣ ಸಂಗೀತದಲ್ಲಿ ಮಹಾವಿದ್ವಾಂಸರಾಗಿದ್ದು ದೇವಿ ಶ್ರೀ ಸುಗಂಧಿ ಕುಂತಳಾಂಬೆಯನ್ನು ಅನನ್ಯಭಕ್ತಿಯಿಂದ ಆರಾಧಿಸುತ್ತ ಜೀವನ ಮಾಡುತ್ತಿದ್ದರು. ಹಲವು ಶೃಂಗಾರ, ನೀತಿ ಮತ್ತು ಭಕ್ತಿರಸ ಭರಿತವಾದ ಕೀರ್ತನೆಗಳನ್ನೂ, ಪಾರಿಜಾತಾಪಹರಣವೆಂಬ ಗೇಯಪ್ರಬಂಧವನ್ನೂ ತ್ರಿಶಿರಗಿರಿ ಎಂಬ ಅಂಕಿತವಲ್ಲಿ ರಚಿಸಿದ್ದಾರೆ. ನೀಮದಿಚಲ್ಲಗ ಎಂಬ ಇವರ ಆನಂದ ಭೈರವಿ ರಾಗದ ಕೃತಿಯು ಬಹಳ ಪ್ರಸಿದ್ಧವಾಗಿದೆ. ಉತ್ತಮ ಮಕುಟವಿರುವ ಚಿಟ್ಟೆ ಸ್ವರವು ಈ ಕೃತಿಗೆ ಒಂದು ವಿಶೇಷ ಸೊಬಗು ಕೊಟ್ಟಿದೆ ತಂಜಾವೂರಿನ ಪ್ರತಾಪಸಿಂಹ ಮಹಾರಾಜನು ಇವರಿಗೆ ೧೦೦೦೦ ವರಹಗಳನ್ನಿತ್ತು ಸನ್ಮಾನಿಸಿದನು

**ಕವಿರಾಜರಾಜ**—ಇದು ಗೀತಗೋವಿಂದವೆಂಬ ಕಾವ್ಯವನ್ನು ರಚಿಸಿದ ಕವಿ ಜಯದೇವನ ಬಿರುದು. ಶ್ರೀ ಗೋಪಾಲವಿಲಾಸಿನಿ ಎಂಬ ಧ್ಯಾನ ಶ್ಲೋಕದಲ್ಲಿ ಜಯದೇವನ ಈ ಬಿರುದು ಉಕ್ತವಾಗಿದೆ.

**ಕಹಳೆ**—ಇದು ಪಂಚಮಹಾಶಬ್ದಗಳಲ್ಲಿ ಒಂದು ವಾದ್ಯ.

**ಕಹಂಡಿಕ**—ಪಂಚಮಹಾಶಬ್ದಗಳಲ್ಲಿ ಒಂದು ವಾದ್ಯ.

**ಕಾಕಳಿ** (೧) ಕಾಕಲಿ ನಿಷಾದ ಸ್ವರ. ಅಂತರಗಾಂಧಾರ ಮತ್ತು ಕಾಕಲಿ ನಿಷಾದ ಸ್ವರಗಳು ಷಡ್ಜಗ್ರಾಮದ ಶುದ್ಧ ಸ್ವರಗಳ ನಂತರ ಮಾನವನಿಗೆ ತಿಳಿದುಬಂದ ಅತ್ಯಂತ ಪುರಾತನ ಸ್ವರಗಳು.

(೨) ಈ ರಾಗವು ೫೫ನೆ ಮೇಳಕರ್ತ ಶ್ಯಾಮಲಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಕಾಕಲಿ ನಿಷಾದ**—ತೀವ್ರ ನಿಷಾದ ಸ್ವರ.

**ಕಾಕಪಾದ ಅಥವಾ ಕಾಕಪಾದಂ**—ಇದು ತಾಳದ ಆರು ಅಂಗಗಳಲ್ಲಿ ಒಂದು ಅಂಗ ಒಂದು ಘಾತ, ಪತಾಕ, ಕೃಷ್ಯ ಮತ್ತು ಸರ್ಪಿಣಿ ಇದರ ಕ್ರಿಯೆಗಳು. ಒಂದು ಕ್ರಿಯೆಯ ಕಾಲವು ಒಂದು ಮಾತ್ರೆ ಅಥವಾ ೪ ಅಕ್ಷರಕಾಲ. ಇದರ ಚಿಹ್ನೆ +. ೧೦೮ ತಾಳಗಳಲ್ಲಿ ಅತ್ಯಂತ ದೀರ್ಘತಾಳವಾದ ಸಿಂಹನಂದನ ತಾಳದಲ್ಲಿ ಕಾಕ ಪಾದವು ಬರುತ್ತದೆ

**ಕಾಕಪಾದಮೇರು**—ಇದು ೧೪ ಬಗೆಯ ತಾಳಪ್ರಸ್ತಾರಗಳಲ್ಲಿ ಒಂದು ವಿಧ.

**ಕಾಕಿ**—ಇದು ಗಾಯನದ ಒಂದು ದೋಷ ಕಾಗೆಯ ಧ್ವನಿಯಂತೆ ಮಾಡಿ ಹಾಡುವವನು ಕಾಕಿ.

**ಕಾಕು**—ಇದು ಗಾಯನದ ಲಕ್ಷಣದ ಒಂದು ಅಂಶ. ರಾಗದ ಸೌಂದರ್ಯ ಮತ್ತು ಸ್ವರೂಪವನ್ನು ಹೆಚ್ಚಿಸಿ ಅದರ ವೈಶಿಷ್ಟ್ಯತೆಯನ್ನು ತೋರಿಸುವಂತೆ ಸ್ವರಗಳನ್ನು ಬಳಸಿ ಹಾಡುವುದು ಕಾಕು. ಪಾರ್ಶ್ವದೇವನು ಸಂಗೀತ ಸಮಯಸಾರವೆಂಬ ಗ್ರಂಥ ವಲ್ಲಿ ಹಲವು ಬಗೆಯ ಕಾಕುಗಳನ್ನು ಹೇಳಿದ್ದಾನೆ.

(೧) **ರಾಗಕಾಕು**—ರಾಗದ ಭಾವವನ್ನೂ ಸೌಂದರ್ಯವನ್ನೂ ಪ್ರಕಟ ಗೊಳಿಸಲು ಬಳಸುವ ಸ್ವರಗುಚ್ಛಗಳು. ಉದಾ: ಹುಸೇನಿರಾಗದಲ್ಲಿ ಸಸಾಪಪಾನಿದಾಮ ಎಂಬ ವಿಶೇಷ ಪ್ರಯೋಗ.

(೨) **ಸ್ವರಕಾಕು**—ಒಂದು ರಾಗದ ಗೊತ್ತಾದ ಒಂದು ಸ್ವರವನ್ನು ಗಮಕ ಯುಕ್ತವಾಗಿ ಅಥವಾ ಅದರ ಮೇಲಿನ ಅಥವಾ ಕೆಳಗಿನ ಸ್ಥಾನದಿಂದ ಹಾಡಿದಾಗ ಅದು ಆ ರಾಗದ ವೈಶಿಷ್ಟ್ಯತೆಯನ್ನು ಪ್ರಕಟಗೊಳಿಸುತ್ತದೆ. ಗಾರಿಸಾ ಎಂಬ ಅಸಾವೇರಿ ರಾಗದ ಸ್ವರಗುಚ್ಛದಲ್ಲಿ ಕಂಪಿತ ಗಾಂಧಾರವು ಇದಕ್ಕೆ ನಿದರ್ಶನ. ಹೀಗೆ ಹಾಡುವುದಕ್ಕೆ ಸ್ವರಕಾಕು ಎಂದು ಹೆಸರು.

(೩) **ದೇಶಕಾಕು**—ಕರ್ಣಾಟಕ ರಾಗಗಳಲ್ಲಿ ಹಿಂದೂಸ್ಥಾನೀ ರಾಗಗಳ ಸ್ವರಗುಚ್ಛಗಳನ್ನು ಪ್ರಯೋಗಿಸಿ ಹಾಡುವುದು ಅಥವಾ ಹಿಂದೂಸ್ಥಾನೀ ರಾಗಗಳಲ್ಲಿ ಕರ್ಣಾಟಕ ಸಂಗೀತದ ರಾಗಗಳ ಸ್ವರಗುಚ್ಛಗಳನ್ನು ಹಾಡುವುದು ದೇಶಕಾಕು. ಹೀಗೆ ಹಾಡಿದಾಗ ರಾಗಗಳಿಗೆ ಹೆಚ್ಚು ಲಾಲಿತ್ಯ ಮತ್ತು ಪ್ರಕಾಶ ಉಂಟಾಗುತ್ತದೆ.

ತ್ಯಾಗರಾಜರ ಆಭೇರಿರಾಗದ ನಗುಮೋಮುಗನಲೇನಿ ಎಂಬ ಕೃತಿಯಲ್ಲಿ ಹಿಂದೂಸ್ಥಾನೀ ಸಂಗೀತದ ಭಿಂಪಲಾಸಿ ರಾಗದ ಛಾಯೆಯನ್ನು ತರುವುದು ಅಥವಾ ಕಾನಡಾರಾಗದಲ್ಲಿ ದರ್ಬಾರಿ ಕಾನಡರಾಗವ ಸ್ವರಗಳನ್ನು ಪ್ರಯೋಗಿಸಿ ಹಾಡುವುದು ಇದಕ್ಕೆ ನಿದರ್ಶನ. ಇದಕ್ಕೆ ದೇಶ್ಯವೆಂದು ಹೆಸರು.

(೪) **ಕ್ಷೇತ್ರಕಾಕು**—ಒಂದು ರಾಗದ ಗ್ರಹ, ನ್ಯಾಸ ಮತ್ತು ಅಂಶ ಸ್ವರಗಳನ್ನು ಹೆಚ್ಚಾಗಿ ಒತ್ತಿ ಪ್ರಯೋಗಿಸಿದರೆ ರಾಗದ ವಿಶಿಷ್ಟ ಸ್ವರೂಪವು ವ್ಯಕ್ತವಾಗುತ್ತದೆ. ಇದಕ್ಕೆ ಕ್ಷೇತ್ರಕಾಕು ಎಂದು ಹೆಸರು.

(೫) **ಅನ್ಯರಾಗಕಾಕು** - ಒಂದು ರಾಗದಲ್ಲಿ ಇತರ ರಾಗದ ಛಾಯೆಯಿರುವುದು ಅನ್ಯರಾಗಕಾಕು. ಮಾಂಜಿರಾಗದ ಉತ್ತರಾಂಗದಲ್ಲಿ ಭೈರವಿ ಛಾಯೆಯಿರುವುದು ಇದಕ್ಕೆ ಉದಾಹರಣೆ. ಇದಕ್ಕೆ ಉಪರಾಗಕಾಕು ಅಥವಾ ಠಾಯ ಎಂದು ಹೆಸರು. ಠಾಯವೆಂದರೆ ರಂಜಕ ಪ್ರಯೋಗವನ್ನು ಹೆಚ್ಚಾಗಿ ಬಳಸಿರುವ ರಚನಾ ವಿಶೇಷಕ್ಕೆ ಠಾಯ ಎಂಬ ಹೆಸರು ಬಂದಿತು.

(೬) **ವಾದ್ಯಕಾಕು ಅಥವಾ ಯಂತ್ರಕಾಕು**—ವಾದ್ಯದಲ್ಲಿ ವಿಶಿಷ್ಟ ಶೈಲಿಯಲ್ಲಿ ನುಡಿಸಿ ರಾಗದ ಸ್ವರೂಪವನ್ನು ಪ್ರಕಟಗೊಳಿಸುವುದು ವಾದ್ಯಕಾಕು. ಶಂಖ, ವೀಣಾ, ಮುರಜ ಮುಂತಾದ ವಾದ್ಯಗಳಿಗೆ ಸೂಕ್ತವಾದ ಸಾಹಿತ್ಯ ಮತ್ತು ಸ್ವರಗಳು ವಾದ್ಯಕಾಕು. ಕ್ಷೈವಾರ ಪ್ರಬಂಧಗಳಲ್ಲಿ ವಾದ್ಯಕಾಕುವಿನ ನಿದರ್ಶನಗಳಿವೆ. ಕೆಲವು ಪ್ರತಿಭಾವಂತ ಗಾಯಕರು ರಾಗಗಳ ಆಲಾಪನೆ ಮಾಡುವಾಗ ವೀಣೆಯ ಧ್ವನಿ ಯಂತೆ ಹಾಡುತ್ತಿದ್ದರು. ಇದೂ ಸಹ ವಾದ್ಯಕಾಕುವಿಗೆ ಉದಾಹರಣೆ. ಉದಾ : ವಿದ್ವಾನ್ ವಿಲಾತ್ತಿಕುಳಂಸ್ವಾಮಿ.

(೭) **ನಮನಕಾಕು ಅಥವಾ ನವಣಿ**—ರಾಗವನ್ನು ಬಹಳ ಇಂಪಾಗಿ ಸಂಚು ಮಾಡಿ ಹಾಡುವುದು.

(೮) **ಭಾಷಾಕಾಕು**—ಬೇರೆ ಬೇರೆ ಭಾಷೆಗಳ ಪದಗಳನ್ನು ಪ್ರಯೋಗಿಸಿ ಭಾವಕ್ಕೆ ತಕ್ಕಂತೆ ಸ್ವರಪಡಿಸಿ ಹಾಡುವುದು. ಆನಲೇಕರ ಎಂಬ ಶುದ್ಧಸಾವೇರಿ ರಾಗದ ಗೀತವು ಭಾಷಾಕಾಕುವಿಗೆ ಉದಾಹರಣೆ.

**ಕಾತ್ತವರಾಯನ ಹಾಡು**—ಗ್ರಾಮದೇವತೆಯಾದ ಕಾತ್ತವರಾಯನನ್ನು ಕುರಿತ ಹಾಡು

**ಕಾತ್ಯಾಯನ ವೀಣೆ**—ಕಾತ್ಯಾಯನ ಋಷಿಯ ಹೆಸರಿನ ವೀಣೆ ಇದಕ್ಕೆ ನೂರುತಂತಿಗಳಿದ್ದುದರಿಂದ ಶತತಂತ್ರಿ ವೀಣೆ ಎಂಬ ಹೆಸರಿತ್ತು. ಇದು ಪರ್ಷಿಯಾ ದೇಶದ ಸಂತಿರ್‌ವಾದ್ಯ ಮತ್ತು ಬೈಬಲ್‌ನಲ್ಲಿ ಹೇಳಿರುವ ಸಾಲ್ಟರಿವಾದ್ಯವಾಯಿತು ಮುಂದೆ ಇದು ಕ್ಲಾವಿಕಾರ್ಡ್ ಮತ್ತು ಪಿಯಾನೋವಾದ್ಯದ ವಿಕಾಸಕ್ಕೆ ದಾರಿ ಯಾಯಿತು.

**ಕಾತ್ಯಾಯನಿ**—ಈ ರಾಗವು ೬೨ನೆ ಮೇಳಕರ್ತ ಋಷಭಪ್ರಿಯದ ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಕಾದಿನವ**—ಕಟಪಯಾದಿ ಸೂತ್ರದ ಮೊದಲನೆ ಭಾಗ. ಇದರಲ್ಲಿ ಕ ಖ ಗ ಘ ಙ ಚ ಛ ಜ ಝ ಞ ಎಂಬ ಒಂಭತ್ತು ಅಕ್ಷರಗಳಿವೆ.

**ಕಾದಂಬಿನಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

(೧) ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ರಿ ಗ ಮ ಗ ಸ

(೨) ೧೯ನೆ ಮೇಳಕರ್ತ ಝಂಕಾರಧ್ವನಿಯ ಇದೇ ಹೆಸರಿನ ಒಂದು ಜನ್ಯ ರಾಗವಿದೆ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಕಾನಡ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದಾ ನಿ ಸ

ಅ: ಸ ನಿ ಸ ದಾ ಪ ಮ ಪ ಗಾ ಮ ರಿ ಸ

ಇದು ಉತ್ತರದೇಶದ ರಾಗ ಸುಮಾರು ೨ ಶತಮಾನಗಳಿಂದೀಚೆಗೆ ದಕ್ಷಿಣದಲ್ಲಿ ಪ್ರಖ್ಯಾತವಾಗಿದೆ. ಅವರೋಹಣದಲ್ಲಿ ಕಂಪಿತಗಾಂಧಾರವಿದೆ. ಗಾಂಧಾರ, ಧೈವತ ಮತ್ತು ನಿಷಾದವು ಸ್ವರಗಳು ರಾಗ ಛಾಯಾಸ್ವರಗಳು. ಆರೋಹಣ ಅವರೋಹಣದ ದೀರ್ಘಗಾಂಧಾರವು ಈ ರಾಗದ ಸೌಂದರ್ಯವನ್ನು ವ್ಯಕ್ತಪಡಿಸುತ್ತದೆ. ತ್ರಿಸ್ಥಾಯಿ ರಾಗ. ಸಾರ್ವಕಾಲಿಕ ರಾಗ. ದೇಶ್ಯ ರಾಗ. ಶೃಂಗಾರ ಮತ್ತು ಕರುಣರಸ ಪ್ರಧಾನ ವಾದ ರಾಗ. ಸಾಯಂಕಾಲ ಅಥವಾ ರಾತ್ರಿವೇಳೆಯಲ್ಲಿ ಹಾಡಲು ಬಹಳ ಯೋಗ್ಯ ವಾಗಿದ್ದು ಕೇಳಲು ಬಹು ರಮ್ಯವಾಗಿರುತ್ತದೆ. ಕೆಲವು ಪ್ರಸಿದ್ಧ ರಚನೆಗಳು :

ವರ್ಣ—ನಿನ್ನು ಕೋರಿ — ಆದಿ — ತಿರುವೊತ್ತಿಯೂರ್ ತ್ಯಾಗಯ್ಯರ್

ನೆರೆನಮ್ಮಿತಿ — ಅಟ — ರಾಮನಾಡ್ ಶ್ರೀನಿವಾಸ ಅಯ್ಯಂಗಾರ್

ಕೃತಿ—ಶ್ರೀಕಾಂತ — ಮಿಶ್ರಛಾಪು — ಪುರಂದರದಾಸರು

ಶ್ರೀನಾರದ — ರೂಪಕ — ತ್ಯಾಗರಾಜ

ಸುಖಿಎವ್ವರೋ — ದೇಶಾದಿ — ತ್ಯಾಗರಾಜ

ಜಗದಭಿರಾಮ — ಆದಿ — ವೀಣಾ ಕುಪ್ಪಯ್ಯರ್

ಕಮಲಾಂಬಾ — ಆದಿ — ಕರೂರು ದಕ್ಷಿಣಾಮೂರ್ತಿ ಶಾಸ್ತ್ರಿ

ಪ್ರಣಮತಶ್ರೀಮಹಾಗಣಪತಿಂ— ಚ. ತ್ರಿಪುಟ — ಮೈಸೂರು ವಾಸುದೇವಾಚಾರ್ಯ

ತಿಲ್ಲಾನ—ಗೌರಿನಾಯಕ — ಸಿಂಹನಂದನ — ಮಹಾವೈದ್ಯನಾಥ ಅಯ್ಯರ್

ತೊಂತದಾರತಾನಿತದಿರೆನಾ — ರೂಪಕ — ರಾಮನಾಡ್ ಶ್ರೀನಿವಾಸ ಅಯ್ಯಂಗಾರ್

**ಕಾನಡಿ**—ಅಹೋಬಲನ ಸಂಗೀತ ಪಾರಿಜಾತದಲ್ಲಿ ಉಕ್ತವಾಗಿರುವ ಒಂದು ರಾಗ.

**ಕಾಟೊಮುಖವಾದಿತ್ರ**—ಯುದ್ಧದ ಜಯಭೇರಿ. ಸಮುದ್ರಘೋಷ ಎಂಬುದೂ ಇದೇ ಬಗೆಯ ಭೇರಿ.

**ಕಾಣ**—ತಾಳದ ಒಂದು ಅಂಗವಾದ ಗುರುವಿನ ಹೆಸರು.

**ಕಾಣಕ್ಕುರಂಜಿ**—ಕೇರಳದ ಕಥಕಳಿ ನೃತ್ಯನಾಟಕಗಳಲ್ಲಿ ಬರುವ ಒಂದು ರಾಗದ ಹೆಸರು.

**ಕಾಪಾಲಿ**—ಇದೊಂದು ಬಗೆಯ ಶಿವನ ನಾಟ್ಯ.

**ಕಾಪಿ**—ಕರ್ಣಾಟಕ ಕಾಪಿರಾಗದ ಹೆಸರು.

**ಕಾಪಿಕನ್ನಡ**—ತಮಿಳು ಗ್ರಂಥವಾದ ‘ ಭರತನಾಟ್ಟಿಯ ಶಾಸ್ತಿರಂ ’ ಎಂಬುದರಲ್ಲಿ ಉಕ್ತವಾಗಿರುವ ಒಂದು ರಾಗ.

**ಕಾಪಿಜಂಗ್ಲ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ನಿ ಸ ರಿ ಗ ಮಾ

ಅ: ಮ ಗ ರಿ ಸ ನಿ ಧ ನಿ ಸ

ಈ ರಾಗದಲ್ಲಿ ವೀಣಾ ಕುಪ್ಪಯ್ಯರ್ ಮೂಪತಿ ನಾಮಮು ಮರುವಕೇ ಎಂದು ಆರಂಭವಾಗುವ ದಿವ್ಯನಾಮಕೀರ್ತನೆಯೊಂದನ್ನು ರಚಿಸಿರುತ್ತಾರೆ.

**ಕಾಪಿನಾರಾಯಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ಷಾಡವ ವಕ್ರಸಂಪೂರ್ಣರಾಗ. ರಿಷಭ, ಧೈವತ, ಮಧ್ಯಮ, ನಿಷಾದಗಳು ವಾದಿಸಂವಾದಿ ಸ್ವರಗಳು. ದೀನರಸ ಮತ್ತು ವಿಪ್ರಲಂಭ ಶೃಂಗಾರರಸಕ್ಕೆ ಉಪಯುಕ್ತವಾದ ಸಾರ್ವಕಾಲಿಕರಾಗ. ತ್ಯಾಗರಾಜರು ಈ ರಾಗವನ್ನು ಬೆಳಕಿಗೆ

ತಂದರು. ಸರಸ ಸಾಮುದಾನ ಎಂಬ ಈ ರಾಗದ ತ್ಯಾಗರಾಜರ ಕೃತಿಯು ಬಹು ಪ್ರಸಿದ್ಧವಾಗಿದೆ.

**ಕಾಪ್ಯನಾಗ**—ಈ ರಾಗವು ೧೨ನೆ ಮೇಳಕರ್ತ ರೂಪವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ<br>
ಅ: ಸ ನಿ ದ ಪ ಮ ಗ ರಿ ಸ

**ಕಾಫಿ**—ಹಿಂದೂಸ್ಥಾನೀ ಸಂಗೀತದ ಥಾಟ್ ಅಥವಾ ಮೇಳದ ಹೆಸರು. ಇದು ಕರ್ಣಾಟಕ ಸಂಗೀತದ ಖರಹರಪ್ರಿಯ ಮೇಳವನ್ನು ಹೋಲುತ್ತದೆ. ಕಾಫಿ ರಾಗವು ಸಂಪೂರ್ಣ–ಸಂಪೂರ್ಣರಾಗ. ಅಂತರ ಗಾಂಧಾರ, ಶುದ್ಧಧೈವತ ಮತ್ತು ಕಾಕಲಿ ನಿಷಾದಗಳನ್ನು ಅನ್ಯಸ್ವರಗಳನ್ನಾಗಿ ಬಳಸಿಕೊಂಡು ಹಾಡುವ ಪದ್ಧತಿಯಿದೆ.

**ಕಾಮೋದ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಆರು ಮುಖ್ಯರಾಗಗಳಲ್ಲಿ ಒಂದು ರಾಗದ ಹೆಸರು.

**ಕಾಮದೇವಿಯ**—ವಿಜಯನಗರದ ದೊರೆ ರಾಮರಾಯನ ಕಾಲದಲ್ಲಿ ಬರೆಯಲ್ಪಟ್ಟ ಸಂಗೀತ ಮತ್ತು ನಾಟ್ಯಶಾಸ್ತ್ರ ಗ್ರಂಥ.

**ಕಾಮಕೇಳಿ**—ಇದು ವಸಂತದ ರಾಗಿಣಿಯ ಒಂದು ದಾಸಿರಾಗವೆಂದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿದೆ.

**ಕಾಮಕೋಟಿಶಾಸ್ತ್ರಿ**—ಇವರು ತ್ಯಾಗರಾಜರ ನಂತರ ಇದ್ದ ಒಬ್ಬ ವಾಗ್ಗೇಯಕಾರರು. ಇವರು ಸಂಸ್ಕೃತ ಮತ್ತು ತೆಲುಗಿನಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ. ಇವರು ಸ್ವನಾಮ ಮುದ್ರಕಾರರು. ಇವರು ರಚಿಸಿರುವ ಕೆಲವು ಪ್ರಸಿದ್ಧ ಕೃತಿಗಳು:

| | | |
|---|---|---|
| ನಿರುಪಮಾನ | — ರೂಪಕ — | ಮಧ್ಯಮಾವತಿ |
| ಅಂಬಾಶಿವೇ | — ಆದಿ — | ಮಧ್ಯಮಾವತಿ |
| ರಮಾಪತೇ | — ರೂಪಕ — | ಭೈರವಿ |
| ದಯಯಂತಯು | — ಆದಿ — | ಬೇಗಡೆ |
| ದೇವಾದಿದೇವ | — ರೂಪಕ — | ತೋಡಿ |
| ನೆರದಾತಯು | — ರೂಪಕ — | ಬೇಗಡೆ |
| ನೆರನಮ್ಮಿ | — ಛಾಪು — | ಬೇಗಡೆ |
| ಚಿಂತಾಕ್ರಾಂತುಲಕು | — ರೂಪಕ — | ಬಿಲಹರಿ |
| ವಿನುಮಾ ಓ ಮನಸಾ | — ಆದಿ — | ಕಾಂಭೋಜಿ |

**ಕಾಮಿಕಾಗಮ**—ದೇವಾಲಯಗಳ ಉತ್ಸವಗಳನ್ನು ಕುರಿತು ಬರೆದಿರುವ ಒಂದು ದೊಡ್ಡ ಗ್ರಂಥ. ಇದರಲ್ಲಿ ರಾಗಗಳು, ತಾಳಗಳು, ವಾದ್ಯಗಳು, ಆಡಬೇಕಾದ ನಾಟ್ಯಗಳು, ಹಾಡಬೇಕಾದ ಹಾಡುಗಳು, ಯಾವ ಉತ್ಸವಗಳಲ್ಲಿ ಯಾವ ಹಾಡನ್ನು ಹಾಡಬೇಕು, ಯಾವ ನಾಟ್ಯವಾಡಬೇಕು ಇತ್ಯಾದಿ ವಿವರಣೆಗಳಿವೆ.

**ಕಾಮ್ಯ**—ಈ ರಾಗವು ೫ನೆ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಗ ಸ

**ಕಾಮೋದರಿ**—ಕೇರಳದ ಕಥಕಳಿ ನೃತ್ಯಗಳಲ್ಲಿ ಕಾಂಭೋಜಿ ರಾಗಕ್ಕೆ ಕಾಮೋದರಿ ಎಂದು ಹೆಸರು.

**ಕಾರ್ಮಾರವಿ**—ಪುರಾತನ ಕಾಲದ ಸಂಗೀತದ ಒಂದು ಬಗೆಯ ಜತಿ.

**ಕಾರ್ಮಾಖರತಿ**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಾಮರೂಪಿ**—ಈ ರಾಗವು ೫೦ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ಮ ದ ನಿ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಕಾಮರಂಜನಿ** - ಈ ರಾಗವು ೪೫ನೆಯ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ

ಅ: ಸ ನಿ ದ ಮ ಗ ರಿ ಗ ಸ

**ಕಾಮವರ್ಧಿನಿ**—ಈ ರಾಗವು ೫೧ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಈ ರಾಗವು ಹಿಂದಿನ ಪಂತುವರಾಳಿ ಅಥವಾ ರಾಮಕ್ರಿಯ ರಾಗ. ತೇವಾರದ ಸಾದಾರಿಪಣ್‌ಗೆ ಸಮನಾದುದು. ಶುದ್ಧರಿಷಭ, ಅಂತರಗಾಂಧಾರ, ಪ್ರತಿ ಮಧ್ಯಮ, ಶುದ್ಧಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ರಿಷಭ ಧೈವತ ಗಳೂ, ಮಧ್ಯಮನಿಷಾದಗಳು ಪರಸ್ಪರ ವಾದಿಸಂವಾದಿ ಸ್ವರಗಳು. ಗಾಂಧಾರ, ಧೈವತ, ಪಂಚಮ ಮತ್ತು ಮಧ್ಯಮವು ಛಾಯಾ ಸ್ವರಗಳು. ತ್ರಿಸ್ಥಾಯಿ ಮತ್ತು ಸರ್ವಸ್ವರ ಗಮಕಯುಕ್ತವಾದ ಸಾರ್ವಕಾಲಿಕರಾಗ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು :

| | | | |
|---|---|---|---|
| ಗೀತ — ಅಪ್ರತಿಮಲೋ | — | ಆದಿ | — |
| ವರ್ಣ — ಸಾಮಿನಿನ್ನೇ | — | ಆದಿ | — ವೀಣಾಕುಪ್ಪಯ್ಯರ್ |
| ಚೆಲಿಯ | — | ಅಟ | — ವೀಣಾಕುಪ್ಪಯ್ಯರ್ |
| ಕೃತಿ — ಅಪ್ಪರಾಮ ಭಕ್ತಿ | — | ರೂಪಕ | — ತ್ಯಾಗರಾಜ |
| ನಿನ್ನು ನೇರನಮ್ಮಿ | — | ರೂಪಕ | — ತ್ಯಾಗರಾಜ |

| | | | | |
|---|---|---|---|---|
| ಸುಂದರತರದೇಹಂ | — | ಆದಿ | — | ತ್ಯಾಗರಾಜ |
| ರಾಮನಾಥಂ | — | ರೂಪಕ | — | ಮುತ್ತುಸ್ವಾಮಿ ದೀಕ್ಷಿತರು |
| ಉಚ್ಛಿಷ್ಟ ಗಣಪತಿ | — | | — | ಮುತ್ತುಸ್ವಾಮಿ ದೀಕ್ಷಿತರು |
| ಶ್ರೀ ಸುಂದರರಾಜಂ | — | ಆದಿ | — | ಮುತ್ತುಸ್ವಾಮಿ ದೀಕ್ಷಿತರು |
| ಸಾರಸಾಕ್ಷ | — | ಆದಿ | — | ಸ್ವಾತಿತಿರುನಾಳ್ ಮಹಾರಾಜ |
| ಸೃಷ್ಟಿ ಸ್ಥಿತ್ಯಂತಂ | — | ರೂಪಕ | — | ಮುತ್ತಯ್ಯ ಭಾಗವತರು |
| ಶಂಕರಿ ನಿನ್ನೇ | — | ಛಾಪು | — | ಮೈಸೂರುವಾಸುದೇವಾಚಾರ್ಯ |
| ಪಾಹಿಪಾಹಿ ಶ್ರೀಗಜಾನನ | — | ಆದಿ | — | ಮೈಸೂರು ಸದಾಶಿವರಾವ್ |
| ಅಷ್ಟಪದಿ — ಚಂದನಚರ್ಚಿತ | — | ಆದಿ | — | ಜಯದೇವ |

**ಕಾರೈಕ್ಕುಡಿ ಸಾಂಬಶಿವಅಯ್ಯರ್**(೧೮೮೮–೧೯೫೮)—ಸಂಗೀತಕ್ಕಾಗಿಯೇ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಅದ್ಭುತ ಸಾಧನೆ ಮಾಡಿ ಯಶೋವಂತರಾಗಿ ಬಾಳಿದವರಲ್ಲಿ ವೀಣಾ ಮಹಾವಿದ್ವಾನ್ ಕಾರೈಕ್ಕುಡಿ ಸಾಂಬಶಿವಅಯ್ಯರ್ ಪ್ರಸಿದ್ಧರು. ಇವರು ಪುದುಕೋಟೆಯಲ್ಲಿ ಸುಮಾರು ಎಂಟು ತಲೆಮಾರುಗಳಿಂದ ವೈಣಿಕರಾಗಿದ್ದ ಮನೆತನದಲ್ಲಿ ೧೮೮೮ರಲ್ಲಿ ಜನಿಸಿದರು. ಇವರ ತಂದೆ ಮಹಾವಿದ್ವಾನ್ ಸುಬ್ಬಯ್ಯರ್ ಪುದುಕೋಟೆಯ ಆಸ್ಥಾನ ವಿದ್ವಾಂಸರಾಗಿದ್ದರು. ಸಾಂಬಶಿವಅಯ್ಯರ್ ಮತ್ತು ಅವರ ಸಹೋದರ ಸುಬ್ಬರಾಮಅಯ್ಯರ್ ಇಬ್ಬರೂ ತಮ್ಮ ತಂದೆಯವರಲ್ಲಿ ವೀಣೆಯನ್ನು ಕಲಿತರು. ಸಾಂಬಶಿವಅಯ್ಯರ್ ೧೨ ವರ್ಷದವರಿದ್ದಾಗಲೇ ಸಹೋದರನೊಡನೆ ಕಚೇರಿಗಳಲ್ಲಿ ನುಡಿಸಲು ಆರಂಭಿಸಿದರು. ನಂತರ ೩೩ ವರ್ಷಗಳ ಕಾಲ ಇಬ್ಬರೂ ಕೂಡಿ ಕಚೇರಿ ಮಾಡುತ್ತಿದ್ದುದರಿಂದ ಇವರು ಕಾರೈಕ್ಕುಡಿ ಸಹೋದರರೆಂದು ಪ್ರಖ್ಯಾತರಾದರು. ಆ ಕಾಲದ ಅತಿಶ್ರೇಷ್ಠ ಮೃದಂಗ ವಿದ್ವಾಂಸರಾಗಿದ್ದ ಅಳಗನಂಬಿ ಮತ್ತು ದಕ್ಷಿಣಾಮೂರ್ತಿ ಪಿಳ್ಳೆಯವರು ಇವರಿಗೆ ಪಕ್ಕವಾದ್ಯ ನುಡಿಸುತ್ತಿದ್ದರು. ಪಲ್ಲವಿ ನುಡಿಸುವುದರಲ್ಲಿ ಸುಬ್ಬರಾಮಅಯ್ಯರ್ ಅದ್ವಿತೀಯರಾಗಿದ್ದರು. ಸಾಂಬಶಿವಅಯ್ಯರ್‌ರವರ ವೀಣಾವಾದನದ ದಿವ್ಯಮಾಧುರ್ಯ ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿತ್ತು. ಸುಬ್ಬರಾಮಅಯ್ಯರ್ ಕಾಲವಾದ ಮೇಲೆ ಈ ಸಹೋದರರ ವೀಣಾವಾದನ ಕೊನೆಗೊಂಡಿತು. ಸಹೋದರನ ಮರಣದಿಂದ ದುಃಖಿತರಾದ ಸಾಂಬಶಿವಅಯ್ಯರ್ ಸುಮಾರು ಆರು ವರ್ಷಗಳ ಕಾಲ ಕಚೇರಿಗಳಿಂದ ನಿವೃತ್ತರಾಗಿದ್ದರು. ನಂತರ ಇತರರ ಬಲವಂತಕ್ಕೆ ಆಗಾಗ್ಗೆ ಕಚೇರಿಗಳಲ್ಲಿ ನುಡಿಸುತ್ತಿದ್ದರು. ಇವರು ಸಂಗೀತ ನಾಟಕ ಅಕ್ಯಾಡೆಮಿಯ ಸದಸ್ಯರಾಗಿದ್ದರು. ೧೯೫೧–೫೨ರಲ್ಲಿ ರಾಷ್ಟ್ರಾಧ್ಯಕ್ಷರ ಪಾರಿತೋಷಕವನ್ನು ಪಡೆದವರಲ್ಲಿ ಮೊದಲನೆಯವರು. ಆರು ವರ್ಷಗಳ ಕಾಲ ಅಡ್ಯಾರಿನ ಕಲಾಕ್ಷೇತ್ರದಲ್ಲಿ ಪ್ರಧಾನ ಆಚಾರ್ಯರಾಗಿದ್ದರು.

**ಕಾರ್ಯವತಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ದ ಮ ಗ ರಿ ಸ

**ಕಾರಿಕ**—ಪುರಾತನ ೧೦೮ ತಾಳಗಳಲ್ಲಿ ೯೮ನೆ ತಾಳದ ಹೆಸರು. ಇದರ ಒಂದಾವರ್ತಕ್ಕೆ 2¼ ಮಾತ್ರೆಗಳು ಅಥವಾ ೯ ಅಕ್ಷರಕಾಲ.

**ಕಾರೈಕ್ಕಲ್ ಅಮ್ಮೈಯಾರ್‌ಚರಿತಂ**—ತಮಿಳುನಾಡಿನ ೬೩ ಶೈವ ನಾಯನಾರರಲ್ಲಿ ಒಬ್ಬರಾದ ಕಾರೈಕ್ಕಲ್ ಅಮ್ಮೈಯಾರ್‌ರ ಜೀವನಚರಿತ್ರೆಯನ್ನು ಕುರಿತು ಗೋಪಾಲಕೃಷ್ಣ ಭಾರತಿ ರಚಿಸಿರುವ ತಮಿಳಿನ ಗೇಯನಾಟಕ.

**ಕಾಲ**— (೧) ತಾಲದಶಪ್ರಾಣಗಳಲ್ಲಿ ಇದೊಂದು ಪ್ರಾಣ. ಇದು ಒಂದು ಅಕ್ಷರವನ್ನು ಉಚ್ಚರಿಸುವ ಕಾಲ.

(೨) ಸಂಗೀತ ರಚನೆಗಳು ಪ್ರಥಮ, ದ್ವಿತೀಯ ಮತ್ತು ತೃತೀಯ ಕಾಲದಲ್ಲಿ ಇರುತ್ತವೆ.

**ಕಾಳಹಸ್ತಿ**—ಇದು ಆಂಧ್ರದಲ್ಲಿರುವ ಒಂದು ಪ್ರಸಿದ್ಧ ಕ್ಷೇತ್ರ. ಇಲ್ಲಿ ಪ್ರಸಿದ್ಧವಾದ ಕಾಳಹಸ್ತೀಶ್ವರ ದೇವಾಲಯವಿದೆ. ಇಲ್ಲಿ ಶಿವನು ಶೈವನಾರ್ ಕಣ್ಣಪ್ಪನಿಗೆ ದರ್ಶನವಿತ್ತನು. ಈ ದೇವಾಲಯದಲ್ಲಿ ನಿತ್ಯವೂ ಪೂಜಾಕಾಲದಲ್ಲಿ ದಿನವೂ ಸೂರ್ಯಪಿರೈ ಮತ್ತು ಚಂದ್ರಪಿರೈ ಎಂಬ ಸಂಗೀತವಾದ್ಯಗಳನ್ನು ನುಡಿಸುತ್ತಾರೆ. ಕಾಳಹಸ್ತಿಯು ಪಂಚಲಿಂಗ ಕ್ಷೇತ್ರಗಳಲ್ಲಿ ಒಂದಾಗಿದೆ. ಇಲ್ಲಿರುವುದು ವಾಯುಲಿಂಗ. ಇತರ ಲಿಂಗಗಳಾದ ಪೃಥ್ವೀಲಿಂಗವು ಕಾಂಚೀಪುರದಲ್ಲಿಯೂ, ತೇಜೋಲಿಂಗವೂ ತಿರುವಣ್ಣಾಮಲೈಯಲ್ಲಿಯೂ, ಅಪ್ಪುಲಿಂಗವು ತಿರುವಾನೈಕ್ಕಾವಲಿನಲ್ಲಿಯೂ, ಆಕಾಶಲಿಂಗವು ಚಿದಂಬರದಲ್ಲಿಯೂ ಇವೆ. ಕಾಳಹಸ್ತೀಶ್ವರನ ಲಿಂಗದ ಸಮೀಪದಲ್ಲಿ ಸದಾಕಾಲ ಮೆಲ್ಲನೆ ಗಾಳಿ ಬೀಸುತ್ತದೆ. ಆದ್ದರಿಂದ ಇದಕ್ಕೆ ವಾಯುಲಿಂಗವೆಂದು ಹೆಸರು. ಮುತ್ತುಸ್ವಾಮಿ ದೀಕ್ಷಿತರು ಪಂಚಲಿಂಗ ಸ್ಥಳ ಕೀರ್ತನೆಗಳಲ್ಲಿ ಝಂಪತಾಳದಲ್ಲಿರುವ ಶ್ರೀ ಕಾಳಹಸ್ತೀಶ ಎಂಬ ಹುಸೇನಿರಾಗದ ಕೀರ್ತನೆಯನ್ನು ಕಾಳಹಸ್ತಿಯ ದೇವಾಲಯವನ್ನು ಕುರಿತು ರಚಿಸಿದ್ದಾರೆ

**ಕಾಳಹಸ್ತೀಶ**—ಕಾಳಹಸ್ತಿಯ ವೀಣೆ ವೆಂಕಟಸ್ವಾಮಿರಾಜ ರಚಿಸಿರುವ ಕೃತಿಗಳಲ್ಲಿ ಬಳಸಿರುವ ಮುದ್ರೆ. ಇವರು ರಚಿಸಿರುವ ಪುಷ್ಪಲತಿಕಾ ರಾಗದ ವಲಚಿಯುನ್ನ ಎಂಬ ಆದಿತಾಳದ ತಾನವರ್ಣದಲ್ಲಿ ಇದನ್ನು ಕಾಣಬಹುದು.

**ಕಾಳಹಸ್ತೀಶ ಪಂಚರತ್ನ**—ತ್ಯಾಗರಾಜರ ಶಿಷ್ಯರಾದ ವೀಣಾಕುಪ್ಪಯ್ಯರ್ ಕಾಳಹಸ್ತೀಶ್ವರನನ್ನು ಕುರಿತು ತೆಲುಗಿನಲ್ಲಿ ಆದಿತಾಳದಲ್ಲಿ ಐದು ಕೃತಿಗಳನ್ನು ರಚಿಸಿದ್ದಾರೆ. ಇವಕ್ಕೆ ಕಾಳಹಸ್ತೀಶ ಪಂಚರತ್ನವೆಂದು ಹೆಸರು. ಇವು ಯಾವುವೆಂದರೆ—

೧. ಕೊನಿಯಾಡಿನನಾಪೈ — ಕಾಂಭೋಜಿ

೨. ನನು ಬ್ರೋವರಾದಾ — ಸಾಮ

೩. ಬಿರಾನನನ್ನು ಬ್ರೋವ — ಹಂಸಧ್ವನಿ
೪. ಸಾಮಗಾನಲೋಲ — ಸಾಲಗ ಭೈರವಿ
೫. ಸೇವಿತಾ ಮುರಾರಮ್ಮ — ಶಹಾನ

ಈ ಕೃತಿಗಳಲ್ಲಿ ಕ್ಷೇತ್ರಮುದ್ರೆ ಇದೆ.

**ಕಾಲಿಕ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ
ಅ: ಸ ನಿ ದ ಪ ಗ ರಿ ಸ

**ಕಾಳಿ**—ಕಾಳಿಕಾದೇವಿಯು ನಟರಾಜನೊಡನೆ ನಾಟ್ಯವಾಡಿದಳು. ಶಿವನು ಊರ್ಧ್ವತಾಂಡವವನ್ನು ಮಾಡಲು ತೊಡಗಿದಾಗ ದೇವಿಯು ಆಶ್ಚರ್ಯಚಕಿತಳಾಗಿ ಸುಮ್ಮನಾದಳು. ಇದರಿಂದ ವಿಷ್ಣು, ಬ್ರಹ್ಮ ಮುಂತಾದವರಿಗೆ ಆಶ್ಚರ್ಯವಾಯಿತು. ಈ ನೃತ್ಯವು ವಾದ್ಯನುಡಿಸುವವರಿಗೆ ನೂತನವಾಗಿದ್ದುದರಿಂದ ಅವರೂ ಸುಮ್ಮನಾದರು. ಆಗ ನಟರಾಜನು ಉಡುಕ್ಕೈ ವಾದ್ಯವನ್ನು ನುಡಿಸುತ್ತಾ ಊರ್ಧ್ವತಾಂಡವ ನೃತ್ಯವನ್ನಾಡಿದನು. ಕೊಯಮತ್ತೂರು ಜಿಲ್ಲೆಯ ಪೇರೂರು ಮುಂತಾದ ದೇವಾಲಯಗಳಲ್ಲಿ ನಟರಾಜನ ಊರ್ಧ್ವತಾಂಡವದ ಶಿಲ್ಪಗಳಿವೆ.

**ಕಾಳಿದಾಸ ನೀಲಕಂಠಅಯ್ಯರ್** – ಇವರು ಮಾನಂಬುಚಾವಡಿ ವೆಂಕಟಸುಬ್ಬಯ್ಯನವರ ಶಿಷ್ಯಪರಂಪರೆಗೆ ಸೇರಿದ ಒಬ್ಬ ಪ್ರಸಿದ್ಧ ಗಾಯಕ ಮತ್ತು ವಾಗ್ಗೇಯಕಾರರು. ಇವರು ಕಾಳಿದಾಸ ನಾರಾಯಣಸಾಮಯ್ಯನವರ ಪುತ್ರರು. ಇವರು ಅಡ್ಯಾರಿನ ಕಲಾಕ್ಷೇತ್ರದಲ್ಲಿ ಅಧ್ಯಾಪಕರಾಗಿದ್ದು ನಂತರ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಸಂಗೀತ ಉಪಾಧ್ಯಾಯರ ಕಾಲೇಜಿನ ಪ್ರಧಾನಾಚಾರ್ಯರಾಗಿದ್ದು ತರುವಾಯ ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಸಂಗೀತದ ಅಧ್ಯಾಪಕರಾಗಿದ್ದರು. ಇವರು ರಾಮಸ್ವಾಮಿ ಶಿವನ್‌ರವರ ಕೆಲವು ಕೃತಿಗಳನ್ನು ಸ್ವರಪಡಿಸಿದ್ದಾರೆ. ಚಿನ್ನಿಕೃಷ್ಣದಾಸ ವಿರಚಿತ ಅಂಬನಿನ್ನುನೆರನಮ್ಮಿತಿ ಎಂಬ ಕೃತಿಗೆ ಚಿಟ್ಟೆಸ್ವರಗಳನ್ನು ಸೇರಿಸಿದ್ದಾರೆ.

**ಕಾಳಿಂದಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ
ಅ: ಸ ನಿ ಪ ಮ ಗ ಗ ರಿ ಸ

ಈ ರಾಗವು ಸಂಗೀತರತ್ನಾಕರ ಮತ್ತು ಸಂಗೀತಸಮಯಸಾರ ಎಂಬ ಗ್ರಂಥಗಳಲ್ಲಿ ಉಕ್ತವಾಗಿದೆ. ಈ ರಾಗವು ಪುಷ್ಪಲತಿಕ ಎಂಬ ಹೆಸರಿನಿಂದ ಪ್ರಚಲಿತವಾಗಿದೆ. ಇಕನ್ನೈನನಾ ಮೊರವಿನರಾದ ಎಂಬ ಕೃತಿಯು ಈ ರಾಗದ ಪ್ರಸಿದ್ಧ ಕೃತಿ.

**ಕಾಲಕ್ಷೇಪ**—ಸಂಗೀತ ಉಪನ್ಯಾಸಕ್ಕೆ ಕಾಲಕ್ಷೇಪವೆಂದು ಹೆಸರು. ಪುರಾಣಗಳ ಕಥೆಗಳು, ರಾಮಾಯಣ, ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಬರುವ ಹಲವು ಪ್ರಸಂಗಗಳು, ಮಹಾಪುರುಷರ ಜೀವನಚರಿತ್ರೆ ಇತ್ಯಾದಿಗಳನ್ನು ಕುರಿತು

ಹೃದಯಂಗಮವಾಗಿ, ಬೋಧಪ್ರದವಾಗಿ ಉಪನ್ಯಾಸ ಮಾಡುವುದು ಕಾಲಕ್ಷೇಪ. ಶ್ರೋತೃಗಳ ಮನಸ್ಸಿನ ಮೇಲೆ ಉಪನ್ಯಾಸಕರು ಪರಿಣಾಮಕಾರಿಯಾದ ಪ್ರಭಾವವನ್ನು ಬೀರುತ್ತಾರೆ ಕಥಾಕಾಲಕ್ಷೇಪದ ಮೂಲಕ ನೀತಿಮಯವಾದ ಉತ್ತಮ ಜೀವನ, ಸತ್ಯಪ್ರಿಯತೆ, ತ್ಯಾಗಮನೋಭಾವನೆ, ಅಂತರಂಗಶುದ್ಧಿ, ಸರಳಜೀವನ, ಉದಾತ್ತ ಮನೋಭಾವನೆ, ಮಾನವನ ಉದ್ಧಾರಕ್ಕಾಗಿ ಸೇವೆ ಇತ್ಯಾದಿ ವಿಷಯಗಳ ಬಗ್ಗೆ ಶ್ರೋತೃಗಳ ಮನಸ್ಸಿನಲ್ಲಿ ಒಳ್ಳೆಯ ಭಾವನೆಗಳನ್ನು ಬಿತ್ತಿ ಅವುಗಳನ್ನು ಕೆರಳಿಸುತ್ತಾರೆ. ಕಥಾಕಾಲಕ್ಷೇಪದಿಂದ ಶ್ರೋತೃಗಳಿಗೆ ಮನೋರಂಜನೆ ಹಾಗೂ ರಸಾನುಭವ ಉಂಟಾಗುತ್ತದೆ. ಹೃದಯ ಶುದ್ಧಿಗಾಗಿ ಎಲ್ಲಾ ಪಾಪಗಳನ್ನು ತೊಳೆದುಕೊಳ್ಳಬೇಕೆಂಬ ಭಾವನೆಯುಂಟಾಗುತ್ತದೆ.

ಕಾಲಕ್ಷೇಪವು ಪಾಮರ ಮತ್ತು ಪಂಡಿತ ರಂಜಕವಾದ ಮನೋರಂಜನಾ ವಿಶೇಷ. ಇದರಲ್ಲಿ ಒಳ್ಳೆಯ ಗಾಯನ ಮತ್ತು ವಾದ್ಯಸಂಗೀತವಿರುತ್ತದೆ. ರಾಮಾಯಣ, ಭಾರತ, ಗೀತೆ, ಉಪನಿಷತ್ತು, ಪುರಾಣಗಳು ಇತ್ಯಾದಿಗಳಿಂದ ಸಂದರ್ಭೋಚಿತವಾಗಿ ಉದ್ಧರಿಸಿ ಹೇಳುವ ಭಾಗಗಳು, ಅವುಗಳನ್ನು ಓದಿಲ್ಲದೆ ಇರುವ ಸಾಮಾನ್ಯರಿಗೆ ತಿಳಿಯುತ್ತವೆ ಹಾಗೂ ತ್ಯಾಗರಾಜರ, ಪುರಂದರದಾಸರ ಕೀರ್ತನೆಗಳು, ಇತರರ ರಚನೆಗಳು, ತಿಲ್ಲಾಣಗಳು, ಜನಪದಗೀತೆಗಳು, ಕಾವ್ಯಗಳ ಭಾಗಗಳ ಹಾಡುಗಾರಿಕೆಯು ಸಂಗೀತಪ್ರಿಯರಿಗೆ ತೃಪ್ತಿಪಡಿಸುತ್ತದೆ ಕಥಾಶ್ರವಣದಲ್ಲಿ ಸಕಲ ರಸಾನುಭವ ಉಂಟಾಗುತ್ತದೆ. ಭಾಗವತರ ವಾಗ್ವೈಖರಿ, ಚತುರೋಕ್ತಿಗಳು ಶ್ರೋತೃಗಳ ಮನಸ್ಸನ್ನು ಸೆಳೆದಿಡುತ್ತವೆ. ಕಥೆಯ ಘಟನೆಗಳು ತಮ್ಮ ಕಣ್ಮುಂದೆ ನಡೆಯುತ್ತಿರುವಂತೆ ಅನುಭವ ಪಡೆಯುತ್ತಾರೆ. ದಕ್ಷಿಣ ಭಾರತದಲ್ಲಿ ಇದಕ್ಕೆ ಹರಿಕಥಾಕಾಲಕ್ಷೇಪ ಅಥವಾ ಸತ್ಕಥಾಕಾಲಕ್ಷೇಪವೆಂದೂ, ಉತ್ತರಭಾರತದಲ್ಲಿ ಕೀರ್ತನವೆಂದೂ, ಕಥಾಕಾಲಕ್ಷೇಪದವರನ್ನು ದಕ್ಷಿಣದಲ್ಲಿ ಭಾಗವತರೆಂದೂ, ಉತ್ತರದಲ್ಲಿ ಕೀರ್ತನಕಾರರೆಂದೂ ಕರೆಯುತ್ತಾರೆ.

ಕಾಲಕ್ಷೇಪದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮೌಲ್ಯವನ್ನು ಹಲವು ಹಿರಿಯ ಸಂಗೀತ ವಿದ್ವಾಂಸರು ಮನಗಂಡರು. ಕೆಲವರು ಅದನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರು. ಅದ್ವಿತೀಯ ಗಾಯಕರಾಗಿದ್ದ ಮಹಾವೈದ್ಯನಾಥ ಅಯ್ಯರ್‌ರವರು ೬೩ ಶೈವನಾಯನಾರರ ಜೀವನ ಚರಿತ್ರೆಯನ್ನು ಕುರಿತು ಕಾಲಕ್ಷೇಪ ಅಥವಾ ಸಂಗೀತ ಉಪನ್ಯಾಸ ಮಾಡುತ್ತಿದ್ದರು. ಮತ್ತೊಬ್ಬ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಅನಂತರಾಮಭಾಗವತರು ಈ ಶತಮಾನದ ಪ್ರಾರಂಭ ಕಾಲದಲ್ಲಿ ಹರಿಕಥಾ ಭಾಗವತರಾಗಿದ್ದರು. ೧೯ನೆ ಶತಮಾನದ ಉತ್ತರಾರ್ಧದಲ್ಲಿ ಆಧುನಿಕ ರೀತಿಯ ಹರಿಕಥಾ ವಿಧಾನವನ್ನು ತಂಜಾವೂರು ಕೃಷ್ಣಭಾಗವತರು ವ್ಯವಸ್ಥೆಗೊಳಿಸಿ (೧೮೪೭–೧೯೦೩) ರೂಪಿಸಿದರು. ಇವರು ಆಧುನಿಕ ಕಾಲಕ್ಷೇಪದ ಜನಕನೆಂದು ಪ್ರಸಿದ್ಧರಾಗಿರುವುದು ಸೂಕ್ತವಾಗಿದೆ. ಪುರಾಣ ಪಠಣ ಮತ್ತು ಕಾವ್ಯವಾಚನವು ಹಿಂದಿನಿಂದಲೂ

ರೂಢಿಯಲ್ಲಿತ್ತು. ವಾಲ್ಮೀಕಿರಾಮಾಯಣ, ಭಾಗವತ, ದೇವೀಪುರಾಣ ಇತ್ಯಾದಿಗಳನ್ನು ಪಠಣಮಾಡಿ ವ್ಯಾಖ್ಯಾನ ಮಾಡುವುದು ದಕ್ಷಿಣಭಾರತದಲ್ಲೆಲ್ಲಾ ರೂಢಿಯಲ್ಲಿತ್ತು. ತಮಿಳುನಾಡಿನಲ್ಲಿ ಪರಿತ್ತಿಯೂರು ಕೃಷ್ಣಶಾಸ್ತ್ರಿಗಳು ವಾಲ್ಮೀಕಿ ರಾಮಾಯಣವನ್ನು ಕುರಿತು ಉಪನ್ಯಾಸ ಮಾಡುತ್ತಾ ಶ್ಲೋಕಗಳನ್ನು ಆಲಾಪನೆ ಸಹಿತ ವಾಚನ ಮಾಡುತ್ತಿದ್ದರು ಗ್ವಾಲಿಯರ್‌ನ ಕೀರ್ತನಕಾರರಾದ ಮೋರ್ಕರ್ ಬಾವಾ ಮತ್ತು ರಾಮಚಂದ್ರಬಾವಾ ಸುಮಾರು ೧೮೬೦ರಲ್ಲಿ ತಂಜಾವೂರಿಗೆ ಬಂದು ಮರಾಠೀ ಕೀರ್ತನವನ್ನು ಜನಪ್ರಿಯವಾಗುವಂತೆ ಮಾಡಿದರು. ಕೃಷ್ಣಭಾಗವತರು ಮರಾಠ ಶೈಲಿಯ ಲಾಲಿತ್ಯವನ್ನೂ, ತಮಿಳು ಶೈಲಿಯ ಉತ್ತಮಾಂಶಗಳನ್ನೂ ಸಮ್ಮಿಳನಗೊಳಿಸಿ ಆಧುನಿಕ ಕಾಲಕ್ಷೇಪ ಪದ್ಧತಿಯನ್ನು ರೂಪಿಸಿದರು. ನಿರೂಪಣೆಗಳಿಗೆ ತ್ಯಾಗರಾಜರ ಕೃತಿಗಳನ್ನೂ ಬಳಸಿಕೊಂಡರು. ಇದಲ್ಲದೆ ತಮಗೆ ಬೇಕಾದ ನಿರೂಪಣೆಗಳನ್ನು ಸ್ವತಃ ರಚಿಸಿಕೊಂಡರು. ಮೂವ್ವಲೂರು ಸಭಾಪತಿಅಯ್ಯರ್ ತೆಲುಗಿನಲ್ಲಿ ಹಲವು ಸುಂದರವಾದ ನಿರೂಪಣೆಗಳನ್ನು ರಚಿಸಿದರು. ಭಾಗವತರಿಗೆ ಅಸಾಧಾರಣ ಶ್ರುತಿ ಜ್ಞಾನವಿತ್ತು. ನಾಟ್ಯಕಲೆಯಲ್ಲಿ ಪರಿಣತಿಯಿತ್ತು. ಇವೆಲ್ಲವನ್ನೂ ಚೆನ್ನಾಗಿ ಬಳಸಿಕೊಂಡು ಹರಿಕಥೆಯನ್ನು ಒಂದು ಉತ್ತಮವಾದ ಉನ್ನತ ಮಟ್ಟದ ನೀತಿಬೋಧಕವಾದ ಮನೋರಂಜನೆಯನ್ನಾಗಿ ಬೆಳೆಸಿದರು. ಇವರು ಗೋಪಾಲಕೃಷ್ಣ ಭಾರತಿಯವರ ನಂದನಾರ್ ಚರಿತವನ್ನು ಬಳಸಿಕೊಂಡ ರೀತಿಯಿಂದ ಭಾರತಿಯವರ ಮೆಚ್ಚುಗೆಯನ್ನು ಪಡೆದರು. ದಕ್ಷಿಣ ಭಾರತದ ಕಥಾಕಾಲಕ್ಷೇಪದ ಮಾರ್ಗದರ್ಶಿ ಎಂದು ಪ್ರಸಿದ್ಧರಾದರು. ಕಾಲಕ್ಷೇಪದಲ್ಲಿ ಭಕ್ತಿರಸವಲ್ಲದೆ ಇತರ ರಸಗಳೂ ಉಂಟಾಗುವಂತೆ ಮಾಡುತ್ತಿದ್ದರು.

ಮೈಸೂರು ದೇಶದಲ್ಲಿ ಕಥಾಕಾಲಕ್ಷೇಪವು ನಡೆದುಬಂದ ದಾರಿ ಹೆಚ್ಚು ಕಡಿಮೆ ಹೀಗೆಯೇ ಇದೆ. ಮೈಸೂರಿನಲ್ಲಿ ಹಲವು ವರ್ಷಗಳ ಕಾಲವಿದ್ದ ಪ್ರಸಿದ್ಧ ಗಾಯಕರಾದ ಮುತ್ತಯ್ಯ ಭಾಗವತರು ಸೊಗಸಾದ ರೀತಿಯಲ್ಲಿ ಹರಿಕಥೆ ಮಾಡುತ್ತಿದ್ದರು. ಇತರ ಕನ್ನಡಿಗರಾದ ಭಾಗವತರು ಸಂಸ್ಕೃತ ಕಾವ್ಯಗಳು, ರಾಮಾಯಣ, ಮಹಾಭಾರತ, ಪುರಾಣಾದಿಗಳಲ್ಲದೆ ಕುಮಾರವ್ಯಾಸ, ಲಕ್ಷ್ಮೀಶ, ಪಂಪ ಮುಂತಾದವರ ಕಾವ್ಯಗಳನ್ನೂ, ತ್ಯಾಗರಾಜರು ಮತ್ತು ಪುರಂದರದಾಸಾದಿಗಳ ಹರಿದಾಸರ ಕೀರ್ತನೆಗಳನ್ನೂ ಸಂದರ್ಭೋಚಿತವಾಗಿ ಬಳಸಿ ನಿರೂಪಣೆಮಾಡಿ ಹರಿಕಥೆ ಮಾಡುವ ಪದ್ಧತಿಯನ್ನು ರೂಢಿಗೆ ತಂದರು. ಇವಲ್ಲದೆ ಹಿಂದೀ ಭಜನ್‌ಗಳು ಮತ್ತು ಮರಾಠೀ ಅಭಂಗಗಳನ್ನು ಬಳಸಿಕೊಳ್ಳುವ ಪದ್ಧತಿಯಿದೆ.

ಈಗಿನ ಕಥಾಕಾಲಕ್ಷೇಪವು ಸಾಮಾನ್ಯವಾಗಿ ೩-೪ ಗಂಟೆಗಳ ಕಾಲ ನಡೆಯುತ್ತದೆ. ಇದರಲ್ಲಿ ಕನ್ನಡ, ಸಂಸ್ಕೃತ, ತಮಿಳು, ಮರಾಠೀ, ಹಿಂದೀ ಹಾಡುಗಳುಂಟು. ಉಪಕಥೆಗಳು ಮತ್ತು ಲಘುಗೀತೆಗಳು ಬೇಸರವನ್ನು ಹೋಗಿಸಿ ಹಾಸ್ಯರಸದಲ್ಲಿ ಶ್ರೋತೃಗಳನ್ನು ಮುಳುಗಿಸುತ್ತವೆ. ಕಥಾಕಾಲಕ್ಷೇಪದಲ್ಲಿ ಸಂಸ್ಕೃತ ಮತ್ತು

ಇತರ ಭಾಷೆಗಳ ಕೀರ್ತನೆಗಳಲ್ಲದೆ ನಿರೂಪಣೆ ಎಂಬ ವಿಶಿಷ್ಟ ರಚನೆಯನ್ನು ಕೇಳಬಹುದು. ಇದು ಕಥಾ ಪ್ರಸಂಗಕ್ಕೆ ಸಂಬಂಧಿಸಿದ ಸರಳ ಸಾಹಿತ್ಯವಿರುವ, ಆಕರ್ಷಕವಾದ, ಅರ್ಥಗರ್ಭಿತವಾದ ಹಾಡು. ತೆಲುಗು ಮತ್ತು ಕನ್ನಡದಲ್ಲಿ ಉತ್ತಮ ನಿರೂಪಣೆಗಳಿವೆ. ಮೆರಟ್ಟೂರು ವೆಂಕಟರಾಮಶಾಸ್ತ್ರಿ ಮತ್ತು ಮೂವ್ವಲೂರು ಸಭಾಪತಿ ಅಯ್ಯರ್ ಅನೇಕ ಕಥೆಗಳಿಗೆ ಉತ್ತಮವಾದ ನಿರೂಪಣೆಗಳನ್ನು ರಚಿಸಿದ್ದಾರೆ. ಸಭಾಪತಿ ಅಯ್ಯರನ್ನು ಚಿನ್ನತ್ಯಾಗರಾಜ ಎನ್ನುತ್ತಿದ್ದರು ನಿರೂಪಣೆಯು ಸರಳವಾದ ರಚನೆ. ರಾಗವು ರಂಜಕವಾಗಿರುತ್ತದೆ. ಇದರಲ್ಲಿ ಸಂಗತಿಗಳಿಲ್ಲದಿದ್ದರೂ ಪಲ್ಲವಿ, ಅನುಪಲ್ಲವಿಗಳಿರುತ್ತವೆ. ಕೆಲವಲ್ಲಿ ಚರಣಗಳಿರುವುದುಂಟು. ಕಾಲಕ್ಷೇಪದ ಉಪಗಾಯಕರಿಗೆ ಅನೇಕ ನಿರೂಪಣೆ ಗೊತ್ತಿರುತ್ತವೆ. ತಮಿಳು, ತೆಲುಗು ಮತ್ತು ಕನ್ನಡದಲ್ಲಿ ನಿರೂಪಣೆಗಳಿರುವಂತೆ ಸಂಸ್ಕೃತದಲ್ಲಿಲ್ಲ. ಪ್ರಸಿದ್ಧ ವೇಣುವಾದಕರಾಗಿದ್ದ ಶರಭಶಾಸ್ತ್ರಿಗಳು ಟಿ.ಜಿ. ನಾಯನಾರರ ಕಥೆಗಳಿಗೆ ನಿರೂಪಣೆಗಳನ್ನು ರಚಿಸಿದರು. ಇವನ್ನು ಸೂಲಮಂಗಲಂ ವೈದ್ಯನಾಥಭಾಗವತರು ಬಳಸಿಕೊಂಡು ಪ್ರಚಾರ ಮಾಡಿದರು

ಕಾಲಕ್ಷೇಪದ ಪ್ರಾರಂಭದಲ್ಲಿ ಹಾಡುವ ಐದು ಭಕ್ತಿಗೀತೆಗಳಿಗೆ ಪಂಚಪದಗಳೆಂದು ಹೆಸರು. ಆರ್ಯಗಳು, ಶ್ಲೋಕಗಳು, ಪದ್ಯಗಳು, ವಿರುತ್ತಗಳು, ಕಂದಪದ್ಯಗಳು, ಅಭಂಗಗಳು, ದೋಹರಗಳು, ಭಜನೆಗಳು, ಅಷ್ಟಪದಿ, ತರಂಗ, ಚೂರ್ಣಿಕೆ, ದಂಡಕ, ಅಷ್ಟಕ, ಪದ, ಅಂಜಲಿಗೀತ, ನಾಮಾವಳಿ, ಸಾವಯಿ, ಖಡ್ಗಾ, ಲಾವಣಿ, ಸಾಕಿ, ದಿಂಡಿ, ದೇವರನಾಮ, ತೇವಾರ, ತಿರುವಾಚಕ, ತಿರುಪ್ಪುಗಳ್, ವಚನ, ತಿಲ್ಲಾನಗಳನ್ನು ಹಾಡುತ್ತಾರೆ. ಪ್ರಥಮಪದವು ಕಥಾಕಾಲಕ್ಷೇಪದ ವಿಷಯವನ್ನು ಸಂಗ್ರಹವಾಗಿ ಪರಿಚಯ ಮಾಡಿಕೊಡುತ್ತದೆ.

**ಭಾಗವತರ ಲಕ್ಷಣಗಳು**—ಭಾಗವತರಿಗೆ ಆಕರ್ಷಕವಾದ ತೇಜಸ್ಸಿನಿಂದ ಕೂಡಿದ ವ್ಯಕ್ತಿತ್ವ, ಸಚ್ಚಾರಿತ್ರ, ಸಂಸ್ಕೃತ, ತೆಲುಗು, ತಮಿಳು, ಕನ್ನಡ, ಮರಾಠಿ ಭಾಷೆಗಳಲ್ಲಿ ಉತ್ತಮಜ್ಞಾನ, ಪ್ರತಿಭೆಯಿಂದ ಕೂಡಿದ ಪ್ರವಚನಶಕ್ತಿ, ಧಾರ್ಮಿಕ ಗ್ರಂಥಗಳ ಪಾಂಡಿತ್ಯ, ಸಮಯೋಚಿತವಾಗಿ ಉಪಕಥೆಗಳನ್ನು ಹೇಳುವ ಸಾಮರ್ಥ್ಯ, ಹಾಸ್ಯಪ್ರಿಯತೆ, ಹಾಸ್ಯಮಾಡುವುದರಲ್ಲಿ ಗಾಂಭೀರ್ಯ, ಕಾಲಮಿತಿಗೆ ತಕ್ಕಂತೆ ಕಾಲಕ್ಷೇಪ ಮಾಡುವ ಚಾಕಚಕ್ಯತೆ, ಶಾಸ್ತ್ರ, ಪುರಾಣೇತಿಹಾಸಗಳಿಂದ ಸೂಕ್ತವಾದ ಭಾಗಗಳನ್ನು ಉದ್ಧರಿಸಿ ಹೇಳುವ ಶಕ್ತಿ, ಕಥನಕೌಶಲ್ಯ, ವಿದ್ಯಾದಾಹ, ಸಂಗೀತ ಮತ್ತು ಭರತಶಾಸ್ತ್ರದ ಪಾಂಡಿತ್ಯ, ಹಿತಕರವಾದ ಶಾರೀರ, ಹಲವು ವಾಗ್ಗೇಯಕಾರರ ಕೃತಿಗಳು ಮತ್ತು ನಿರೂಪಣೆಗಳು ಮತ್ತು ಅವುಗಳ ಭಾಗಗಳನ್ನು ಸಂದರ್ಭೋಚಿತವಾಗಿ ಹಾಡುವ ಯೋಗ್ಯತೆ, ರಾಗ ರಸಗಳ ವಿವೇಕ, ಮೊದಲಿನಿಂದ ಕೊನೆಯವರೆಗೂ ಬೋಧಪ್ರದವಾಗಿ ಬೇಸರತರದಂತೆ ಕುತೂಹಲ ಕೆರಳುವಂತೆ ಕಾಲಕ್ಷೇಪ ಮಾಡುವುದು ಮುಂತಾದುವು ಭಾಗವತರ ಲಕ್ಷಣಗಳು.

ತಮಿಳುನಾಡಿನ ಕೆಲವು ಪ್ರಸಿದ್ಧ ಭಾಗವತರು—ಗೋಪಾಲಕೃಷ್ಣ ಭಾರತಿ, ತಂಜಾವೂರು ಕೃಷ್ಣಭಾಗವತರು (೧೮೪೭-೧೯೦೩), ವರಹೂರು ಗೋಪಾಲ ಭಾಗವತರು, ಅಂಡಮಾನ್ ಶಿವರಾಮಭಾಗವತರು, ನರಸಿಂಹಭಾಗವತರು, ಪಂಡಿತ ಲಕ್ಷ್ಮಣಾಚಾರ್ಯ (೧೮೫೭-೧೯೨೧), ತಿರುಪ್ಪಯಣಂ ಪಂಚಾಪಕೇಶಶಾಸ್ತ್ರಿ (೧೮೬೮-೧೯೨೪), ತಂಜಾವೂರು ಪಂಚಾಪಕೇಶ ಭಾಗವತರು, ಅನಂತರಾಮಭಾಗವತರು, ಸೂಲಮಂಗಲಂ ವೈದ್ಯನಾಥಭಾಗವತರು, ಹರಿಕೇಶನಲ್ಲೂರು ಮುತ್ತಯ್ಯ ಭಾಗವತರು, ಅಣ್ಣಾಸ್ವಾಮಿಭಾಗವತರು, ಶ್ರೀಮತಿ ಸರಸ್ವತಿಬಾಯಿ, ಶ್ರೀರಂಗಂ ಶಠಗೋಪಾಚಾರ್ಯ ಮತ್ತು ಎಂಬಾರ್ ವಿಜಯರಾಘವಾಚಾರ್ಯ.

ಕನ್ನಡನಾಡಿನ ಕೆಲವು ಪ್ರಸಿದ್ಧ ಭಾಗವತರು—ಕೀರ್ತನೆ ಅಥವಾ ಕಥಾಕಾಲಕ್ಷೇಪದಲ್ಲಿ ಬಹುಮಟ್ಟಿಗೆ ಕನ್ನಡನಾಡಿನ ಭಾಗವತರು ೩೦ ಅಂಶಗಳನ್ನು ಬಳಸುತ್ತಿದ್ದರು. ಷಟ್ಪದಿಗಳು, ವೃತ್ತಗಳು, ಕಂದಪದ್ಯಗಳು, ಆರ್ಯಗಳು, ಸೀಸಪದ್ಯಗಳು, ಚೂರ್ಣಿಕೆಗಳು, ದಂಡಕಗಳು, ಸಂಸ್ಕೃತ ಶ್ಲೋಕಗಳು, ನಾಟಕದ ಮಟ್ಟುಗಳು, ಯಕ್ಷಗಾನಗಳು, ಸ್ತೋತ್ರಗಳು, ತ್ಯಾಗರಾಜರೇ ಮೊದಲಾದವರ ಕೃತಿಗಳು, ದಾಸರ ಪದಗಳು, ಸುಳಾದಿಗಳು, ಉಗಾಭೋಗಗಳು, ಸ್ವಂತ ನಿರೂಪಣೆಗಳು, ಮರಾಠೀ ರಚನೆಗಳು, ವಚನಗಳು, ತ್ರಿಪದಿಗಳು, ಸಾಂಗತ್ಯಗಳು, ಸರ್ವಜ್ಞನ ವಚನಗಳು, ನೀತಿಪದ್ಯಗಳು, ವೇಮನನ ಪದ್ಯಗಳು, ಮಂತ್ರಗಳು, ಗೀತಗಳು, ತೊರಾಚರಣಗಳು, ಗಾದೆಗಳು, ಚಾಟುಶ್ಲೋಕಗಳು ಮುಂತಾದುವು ಈ ಅಂಶಗಳು. ಕರ್ಣಾಟಕದಲ್ಲಿ ಕಥೆಗಳನ್ನು ಮಾಡುತ್ತಿದ್ದ ಭಾಗವತರು ದಾಸಪಂಥ, ಮಹಾರಾಷ್ಟ್ರದ ಕೀರ್ತನ ಪದ್ಧತಿ ಹಾಗೂ ಯಕ್ಷಗಾನ ಪದ್ಧತಿಯ ಪ್ರಭಾವದಿಂದ ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಬೆಳೆಸಿದರು ೧೯ನೆ ಶತಮಾನದ ಉತ್ತರಾರ್ಧ ಮತ್ತು ೨೦ನೆ ಶತಮಾನದಲ್ಲಿ ಬೇಲೂರು ವೆಂಕಟಸುಬ್ಬದಾಸರು, ಹರಿಕಥಾ ಗುಂಡಾಚಾರ್ಯರು, ಬೇಲೂರು ಕೇಶವದಾಸರು ಮತ್ತು ರಂಗದಾಸರು, ಸೋಸಲೆರಾಮದಾಸರು, ವೀಣಾವಿದ್ವಾನ್ ಹೆಚ್. ಪಿ. ಕೃಷ್ಣರಾವ್, ಮಿರ್ಲೆ ಸುಬ್ಬರಾಯರು, ಗಮಕಿ ರಾಮಕೃಷ್ಣಶಾಸ್ತ್ರಿ, ಬಿಡಾರಂ ಸುಬ್ಬಯ್ಯ, ಕುರ್ತುಕೋಟಿ ನಾರಾಯಣಶಾಸ್ತ್ರಿ, ಎಸ್. ಕೃಷ್ಣಯ್ಯಂಗಾರ್, ಮುಂತಾದವರು ಖ್ಯಾತ ಭಾಗವತರು. ಬೇಲೂರು ಕೇಶವದಾಸರು ಕರ್ಣಾಟಕ ಭಕ್ತವಿಜಯ ಮತ್ತು ಕನ್ಯಕಾಪರಮೇಶ್ವರಿ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಸೋಸಲೆ ರಾಮದಾಸರು ತಮಿಳುನಾಡಿಗೆ ಹೋಗಿ ಖಂಜರಿವಾದ್ಯವಿದ್ವಾಂಸರಾಗಿ ಖ್ಯಾತರಾಗಿದ್ದುದಲ್ಲದೆ ಮೈಸೂರು ಆಸ್ಥಾನ ವಿದ್ವಾಂಸರಾಗಿದ್ದರು ಟಿ. ಕೆ. ವೇಣುಗೋಪಾಲದಾಸರು, ಹರಿಸರ್ವೋತ್ತಮದಾಸರು, ಕೊಣನೂರು ಸೀತಾರಾಮಶಾಸ್ತ್ರಿ, ಭದ್ರಗಿರಿ ಅಚ್ಯುತದಾಸರು ಮತ್ತು ಭದ್ರಗಿರಿ ಕೇಶವದಾಸರು, ಎನ್. ಕೆ. ಅನಂತಪದ್ಮನಾಭ ಭಾಗವತರೇ ಮುಂತಾದವರು ಖ್ಯಾತ ಭಾಗವತರಾಗಿದ್ದಾರೆ. ಭದ್ರಗಿರಿ ಕೇಶವದಾಸರು ಬೆಂಗಳೂರಿನಲ್ಲಿ ದಾಸಾಶ್ರಮವೆಂಬ ಸಂಸ್ಥೆಯನ್ನು ಸ್ಥಾಪಿಸಿ ದೇಶವಿದೇಶಗಳಲ್ಲಿ ಖ್ಯಾತ ಭಾಗವತರಾಗಿರುವುದಲ್ಲದೆ

ಪುರಂದರೋಪನಿಷತ್ ಮುಂತಾದ ಗ್ರಂಥಗಳನ್ನೂ, ಹಲವಾರು ದೇವರನಾಮಗಳನ್ನು ರಚಿಸಿದ್ದಾರೆ. ಅನಂತಪದ್ಮನಾಭ ಭಾಗವತರು ಯಕ್ಷಗಾನ ಪ್ರವೀಣರೂ ಆಗಿದ್ದಾರೆ.

ಹರಿಕಥಾ ವಿದ್ವಾಂಸರಿಗೆ ಕೀರ್ತನ ಕೇಸರಿ, ಕೀರ್ತನ ರತ್ನಾಕರ, ಕೀರ್ತನ ಭೂಷಣ, ಕೀರ್ತನಾಚಾರ್ಯ, ಮಹಾಕಥಕಂಠೀರವ ಇತ್ಯಾದಿ ಬಿರುದುಗಳನ್ನಿತ್ತು ಸನ್ಮಾನಿಸುವುದು ರೂಢಿಯಲ್ಲಿದೆ.

ಹರಿಕಥೆಯ ಪ್ರಾರಂಭದಲ್ಲಿ ಗಣೇಶ, ಶಾರದಾದೇವಿ ಮತ್ತು ಗುರುಸ್ತುತಿಗಳನ್ನು ಭಾಗವತರು ಹಾಡುತ್ತಾರೆ. ನಂತರ ಅವರಿಗೆ ಹಾರ ಹಾಕಿದ ನಂತರ ಮಂಗಳಾರತಿ ಯಾಗುತ್ತದೆ. ಅವರ ಪೀಠವು ವ್ಯಾಸ ಶುಕ ಪೀಠ ಎಂಬ ನಂಬಿಕೆಯುಂಟು. ತರು ವಾಯ ಅವರು ಪೀಠಿಕೆ ಪ್ರಾರಂಭಿಸಿ ಕಥಾನಿರೂಪಣೆ ಮಾಡುತ್ತಾರೆ. ಸೂಕ್ತವಾದೆಡೆ ವೇದಾಂತ ಪ್ರತಿಪಾದಕವಾದ ಉಪಕಥೆಗಳನ್ನು ಹೇಳುತ್ತಾರೆ. ಉಪಸಂಹಾರವು ಪೀಠಿಕೆಗೆ ಸಂಬಂಧಿಸಿರುತ್ತದೆ. ನಂತರ ಮಂಗಳ ಮತ್ತು ಮಂಗಳಾರತಿಯೊಂದಿಗೆ ಕಥೆಯು ಮುಕ್ತಾಯಗೊಳ್ಳುತ್ತದೆ.

**ಕಾಳಿತಾಂಡವ**—ಇದು ನಟರಾಜನ ಊರ್ಧ್ವತಾಂಡವದ ಮತ್ತೊಂದು ಹೆಸರು. ಈ ನಾಟ್ಯಕ್ಕೆ ಕಾಳಿಯು ಮುಖ್ಯಕಾರಣವಾದ್ದರಿಂದ ಈ ಹೆಸರು ಬಂದಿದೆ.

**ಕಾಳಿಂಗರಾವ್ ಪಿ.** (೧೯೧೪)—ಕರ್ಣಾಟಕದ ಅತ್ಯಂತ ಜನಪ್ರಿಯ ಲಲಿತ ಸಂಗೀತಗಾಯಕರಾದ ಕಾಳಿಂಗರಾಯರು ಕುಂದಾಪುರದ ತಾಲ್ಲೂಕಿನ ಆಲೂರಿನಲ್ಲಿ ಜನಿಸಿದರು. ಇವರ ತಂದೆ ಪಾಂಡೇಶ್ವರದ ಪುಟ್ಟಯ್ಯನವರು ಯಕ್ಷಗಾನದಲ್ಲಿ ಪಳಗಿದವರು. ಚಿಕ್ಕಂದಿನಲ್ಲಿ ಹಾಡು ಮತ್ತು ಮದ್ದಲೆಯ ಧ್ವನಿಮಯವಾದ ವಾತಾವರಣದಲ್ಲಿ ಬೆಳೆದ ರಾಯರಿಗೆ ಒಳ್ಳೆಯ ಕಂಠ ಮತ್ತು ಹಾಡುವ ಉತ್ಸಾಹವಿದ್ದು ದನ್ನು ಗಮನಿಸಿದ ನಟ ಮುಂಡಾಜೆ ರಂಗನಾಥ ಭಟ್ಟರು ತಮ್ಮ ಅಂಬಾಪ್ರಸಾದಿತ ನಾಟಕ ಮಂಡಲಿಯಲ್ಲಿ ಬಾಲಕನ ಪಾತ್ರಗಳನ್ನು ವಹಿಸುವ ಅವಕಾಶಕೊಟ್ಟರು. ರಾಯರು ಬಾಲಕರ ಮತ್ತು ಸ್ತ್ರೀಯರ ಪಾತ್ರಗಳನ್ನು ವಹಿಸಿ ಜನಪ್ರಿಯರಾದರು. ಸವಾಯಿಗಂಧರ್ವರ ಶಿಷ್ಯರಾಗಿದ್ದ ರಾಮದುರ್ಗದ ವೆಂಕಟರಾಯರಲ್ಲೂ ನಂತರ ರಾಮ ಚಂದ್ರ ಮರೋಲ್‌ಕರ್‌ರವರಲ್ಲೂ ಹಲವಾರು ವರ್ಷಗಳ ಕಾಲ ಹಿಂದೂಸ್ಥಾನಿ ಸಂಗೀತ ವನ್ನು ಕಲಿತು ಕಚೇರಿಗಳಲ್ಲಿ ಹಾಡಲು ತೊಡಗಿದರು. ಇವರು ಮದ್ರಾಸಿನಲ್ಲಿದ್ದಾಗ ನಾಟಕ ಮತ್ತು ಚಲನಚಿತ್ರ ಕ್ಷೇತ್ರಗಳ ಸಂಪರ್ಕ ಹೆಚ್ಚಿತು. ಅಲ್ಲಿಯ ಹಿಂದೀ ಪ್ರಚಾರ ಸಭೆಯ ಸಂಗೀತದ ಪ್ರಾಧ್ಯಾಪಕರಾಗಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ರವೀಂದ್ರನಾಥ ಠಾಕೂರರ ಕಾವ್ಯ ಧರ್ಮಿ ಗೀತ ಶೈಲಿಯಿಂದ ಪ್ರಭಾವಿತ ರಾಗಿ ಸಂಗೀತದ ಕ್ಷೇತ್ರಗಳಲ್ಲಿ ನೂತನ ವಿಧಾನಗಳನ್ನು ಪ್ರಯೋಗಿಸಲು ತೊಡಗಿ ನಾಟಕ ಮತ್ತು ಚಿತ್ರಗಳಿಗೆ ಹಿನ್ನೆಲೆ ಸಂಗೀತ ಮತ್ತು ಗೀತಗಳನ್ನು ಒದಗಿಸಿದರು. ಮಹಾಶಿಲ್ಪಿ, ನಟಶೇಖರ, ಸುಭದ್ರಾ ಕಲ್ಯಾಣ ಮುಂತಾದ ಹಲವು ಚಲನಚಿತ್ರಗಳಿಗೆ ಸಂಗೀತ ಸಂಯೋಜನೆ ಮಾಡಿದರು.

ಇವರ ಮತ್ತೊಂದು ಕ್ಷೇತ್ರ ಜನಪದ ಗೀತೆಗಳು ಮತ್ತು ಆಧುನಿಕ ಭಾವಗೀತೆಗಳಿಗೆ ಸಂಗೀತವನ್ನು ಅಳವಡಿಸಿ ಹಾಡುವುದು. ಇವರ ವಾದನದಲ್ಲಿ ಸರಳವಾದ ಲಯವಿರುತ್ತದೆ ಇವರು ಹಾಡುವಾಗ ಜೊತೆಗೆ ಅನುರಣನದ ರಂಗು ಕೊಡಲು ಹೆಚ್ಚಿನ ಸ್ಥಾಯಿಯ ಧ್ವನಿಯಲ್ಲಿ ಮೋಹನ್‌ಕುಮಾರಿ ಮತ್ತು ಸೋಹನ್‌ಕುಮಾರಿ ಹಾಡುತ್ತಾರೆ. ಇವರ ಶೈಲಿಯಲ್ಲಿ ಪಾಶ್ಚಾತ್ಯ ಸಂಗೀತದ ಕ್ರೂನರ್ ಶೈಲಿಯ ಪ್ರಭಾವವಿದೆ. ಇಂದಿನ ಕವನಗಳಿಗೆ ಹೊಸ ಶೈಲಿಯ ಸಂಗೀತವನ್ನು ನೀಡಿದ್ದಾರೆ. ಉದಯವಾಗಲಿ, ಏರಿಸಿ ಹಾರಿಸಿ ಕನ್ನಡದ ಬಾವುಟ, ಇಳಿದು ಬಾ ತಾಯೆ, ಬಾರಯ್ಯ ಬೆಳದಿಂಗಳೇ ಇವೇ ಮುಂತಾದುವುಗಳ ಪರಿಚಯ ಎಲ್ಲರಿಗೂ ಇದೆ. ಕಾಳಿಂಗರಾಯರು ಕರ್ಣಾಟಕದ ಸಮಕಾಲೀನ ಲಲಿತ ಸಂಗೀತದ ನಿರ್ಮಾಣ ಮತ್ತು ಪ್ರಚಾರವಲ್ಲದೆ ಆಧುನಿಕ ಕವಿಗಳ ರಚನೆಗಳಿಗೆ ಭಾವ ಮತ್ತು ಆಶಯಕ್ಕೆ ಚೆನ್ನಾಗಿ ಹೊಂದಿಕೊಳ್ಳುವ ಸಂಗೀತ ಸಂಯೋಜನೆ ಮಾಡಿ ಒಂದು ನವ್ಯ ಸಂಗೀತಕ್ಕೆ ನಾಂದಿ ಮಾಡಿರುವ ಸಿರಿಕಂಠದ ಜನಪದ ಗಾಯಕ ಮತ್ತು ಲಲಿತಗಾಯನದ ವಿಶಿಷ್ಟ ಶೈಲಿಯ ಗಾಯಕರಾಗಿದ್ದಾರೆ.

**ಕಾವಡಿ ಚಿಂದು**—ಇದು ತಮಿಳುನಾಡಿನ ಒಂದು ಬಗೆಯ ಜನಪದ ಗೀತೆ. ಈ ಶತಮಾನದ ಆದಿಭಾಗದಲ್ಲಿದ್ದ ಅಣ್ಣಾಮಲೆ ರೆಡ್ಡಿಯಾರ್ ಎಂಬುವರು ಈ ಹಾಡುಗಳನ್ನು ರಚಿಸಿ ಪ್ರಚಾರಕ್ಕೆ ತಂದರು. ಇವರು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಚೆನ್ನಿಕುಲಂ ಎಂಬ ಊರಿನವರು. ಈ ಹಾಡುಗಳಲ್ಲಿ ಪಲ್ಲವಿ, ಅನುಪಲ್ಲವಿ ಎಂಬ ಭಾಗಗಳಿಲ್ಲ. ಇವು ಝಂಝೂಟಿ, ಆನಂದಭೈರವಿ ಮುಂತಾದ ರಾಗಗಳಲ್ಲಿವೆ. ಈ ಹಾಡುಗಳು ಸುಬ್ರಹ್ಮಣ್ಯಸ್ವಾಮಿಯ ಸ್ತುತಿಗಳು. ಸಾಹಿತ್ಯವು ಸುಂದರವಾದ ಅಂತ್ಯಪ್ರಾಸಗಳಿಂದ ಕೂಡಿದೆ. ಕಾವಡಿ ಚಿಂದುಗಳನ್ನು ಕಾವಡಿ ಹರಕೆ ಹೊತ್ತಿರುವ ಯಾತ್ರಿಕರು ಹಾಡಲು ರಚಿಸಲಾಗಿದೆ. ಇವುಗಳನ್ನು ಸಂಗೀತ ಕಚೇರಿಯ ಮುಕ್ತಾಯ ಭಾಗದಲ್ಲಿ ಹಾಡುವುದು ರೂಢಿಯಾಗಿದೆ. ರೆಡ್ಡಿಯಾರ್ ಸ್ವನಾಮ ಮುದ್ರಕಾರರಾಗಿದ್ದರು.

**ಕಾರ್ವೇಟಿನಗರ**—ಇದು ಆಂಧ್ರದ ಚಿತ್ತೂರು ಜಿಲ್ಲೆಯಲ್ಲಿರುವ ಒಂದು ಸಂಗೀತ ಕಲಾಕೇಂದ್ರ. ಪ್ರಸಿದ್ಧ ವಿದ್ವಾಂಸರಾಗಿದ್ದ ಸಾರಂಗಪಾಣಿ, ಗೋವಿಂದ ಸಾಮಯ್ಯ ಮತ್ತು ಕೂವನಸಾಮಯ್ಯ ಈ ಊರಿನವರು. ಇಲ್ಲಿಯ ಮುಖ್ಯ ದೇವರಾದ ವೇಣುಗೋಪಾಲಸ್ವಾಮಿಯ ಸ್ತುತಿರೂಪವಾದ ಅನೇಕ ಪದಗಳನ್ನು ಸಾರಂಗಪಾಣಿ ರಚಿಸಿದ್ದಾರೆ.

**ಕಾರ್ವೇಟಿರಂಗ**–ಪ್ರಸಿದ್ಧ ವಾಗ್ಗೇಯಕಾರರಾಗಿದ್ದ ಕಾರ್ವೇಟಿನಗರಂ ಗೋವಿಂದ ಸಾಮಯ್ಯನವರು ರಚಿಸಿರುವ ಪದಗಳು ಮತ್ತು ಇತರ ರಚನೆಗಳಲ್ಲಿ ಬಳಸಿರುವ ಅಂಕಿತ.

**ಕಾಶೀನಾಥ**—ಇವರು ೧೮ನೆ ಶತಮಾನದಲ್ಲಿದ್ದ ಒಬ್ಬ ಪ್ರಸಿದ್ಧ ವಾಗ್ಗೇಯ

ಕಾರರು. ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ಮೆರಟ್ಟೂರಿನಲ್ಲಿ ವಾಸವಾಗಿದ್ದು, ನಾಟ್ಯಕ್ಕೆ ಬೇಕಾದ ಸಂಗೀತವಾದ ಶಬ್ದ ಮತ್ತು ಪದಗಳನ್ನು ರಚಿಸಿ ಪ್ರಸಿದ್ಧರಾಗಿದ್ದರು. ಗಜೇಂದ್ರಮೋಕ್ಷ ಶಬ್ದ, ಸೀತಾಕಲ್ಯಾಣ ಶಬ್ದ, ರಾಮಪಟ್ಟಾಭಿಷೇಕ ಶಬ್ದ, ಹಲವು ದೇವತೆಗಳ ಮತ್ತು ಪುರಾಣಗಳ ಕಥೆಗಳನ್ನು ಕುರಿತು ಶಬ್ದಗಳನ್ನು ರಚಿಸಿದ್ದಾರೆ. ಗಜೇಂದ್ರಮೋಕ್ಷ ಶಬ್ದಕ್ಕೆ ಮಂಡೂಕ ಶಬ್ದವೆಂಬ ಮತ್ತೊಂದು ಹೆಸರಿದೆ. ಇದರಲ್ಲಿರುವ ದೀರ್ಘವಾದ ಜತಿಗಳು ಗಜೇಂದ್ರನನ್ನು ಮೊಸಳೆಯು ಹಿಡಿದುಕೊಂಡ ತಾವರೆಕೊಳದಲ್ಲಿರುವ ಕಪ್ಪೆಗಳು ವಟಗುಟ್ಟುವ ಶಬ್ದವನ್ನು ಹೋಲುತ್ತವೆ. ಕಾಶೀನಾಥನು ಸ್ವನಾಮ ಮುದ್ರಕಾರ.

**ಕಾಶೀರಾಮಕ್ರಿಯ**—ಇದು ಅಸಂಪೂರ್ಣ ಮೇಳಪದ್ಧತಿಯಲ್ಲಿ ೫೧ನೆ ಮೇಳದ ಹೆಸರು.

**ಕಾಶ್ಮೀರ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಕಾಶ್ಯಪ**—ಪುರಾತನಕಾಲದ ಒಬ್ಬ ಸಂಗೀತ ವಿದ್ವಾಂಸನ ಹೆಸರು.

**ಕಾಶ್ಯಪಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಕಾಹಕ**—ಇದೊಂದು ಪುರಾತನ ಸಂಗೀತವಾದ್ಯ

**ಕಾಹಳೆ**—ಚಿನ್ನ, ತಾಮ್ರ ಅಥವಾ ಬೆಳ್ಳಿಯ ಕಹಳೆ.

**ಕಾಷ್ಠ**—ಇದು ತಾಳದಶ ಪ್ರಾಣಗಳಲ್ಲಿ ಕಾಲದ ಒಂದು ಘಟಕ ಅಥವಾ ಪ್ರಾಣ. ಇದು ಅನುದ್ರುತದ ೧/೫೪ ಭಾಗಕ್ಕೆ ಸಮನಾದುದು

**ಕಾಷ್ಠತರಂಗ**—ಇದು ಜಲತರಂಗ ವಾದ್ಯದ ಬಟ್ಟಲುಗಳಂತೆ ಮರದಿಂದ ಮಾಡಿರುವ ಬಟ್ಟಲುಗಳ ವಾದ್ಯ. ಈ ಬಟ್ಟಲುಗಳು ಮಂದ ಮತ್ತು ಆಕಾರದಲ್ಲಿ ವಿವಿಧವಾಗಿವೆ. ಒಂದು ಕಡ್ಡಿಯಿಂದ ಈ ಬಟ್ಟಲುಗಳನ್ನು ಬಾರಿಸಿ ವಾದ್ಯವನ್ನು ನುಡಿಸುತ್ತಾರೆ. ನೀರನ್ನು ತುಂಬಿಕೊಂಡು ಬಾರಿಸುವುದಿಲ್ಲ. ಆದ್ದರಿಂದ ಇವುಗಳ ಶ್ರುತಿಗಳು ಅಚಲವಾಗಿರುತ್ತವೆ ಪ್ರತಿಯೊಂದು ಬಟ್ಟಲಿನ ಶ್ರುತಿಯು ಅವನ್ನು ಮಾಡುವಾಗಲೇ ಗೊತ್ತುಮಾಡಲಾಗಿರುತ್ತದೆ.

**ಕಾಕ್ಷರ**—ದ್ವಾವಿಂಶತಿ ಶ್ರುತಿಗಳಲ್ಲಿ ಇದು ಋಷಭದ ನಿಯತ ಶ್ರುತಿಯ ಹೆಸರು. (೧೦/೯). ಈ ಹೆಸರು ಭಾವಭಟ್ಟನ ಅನೂಪ ಸಂಗೀತವಿಲಾಸವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಕಾಂಗೂಲ**—ಇದು ಭರತನಾಟ್ಯದ ಅಸಂಯುತ ಹಸ್ತಗಳಲ್ಲಿ ಒಂದು ಹಸ್ತ ಮುದ್ರೆ. ಪದ್ಮಕೋಶ ಹಸ್ತದಲ್ಲಿನ ಅನಾಮಿಕವನ್ನು ಮಡಿಸಿದರೆ ಕಾಂಗುಲ ಹಸ್ತವಾಗುವುದು. ಗಜನಿಂಬೆಹಣ್ಣು, ವಧೂಕುಚಗಳು, ಕಲ್ಹಾರಪುಷ್ಪ, ಚಕೋರ, ಅಡಿಕೆಯಮರ, ಕಿರುಗೆಜ್ಜೆಗಳು, ಗುಳಿಗೆ, ಚಾತಕಪಕ್ಷಿ ಇವುಗಳನ್ನು ಸೂಚಿಸಲು ಈ ಹಸ್ತ ವಿನಿಯೋಗಿಸಲ್ಪಡುವುದು.

**ಕಾಂಚನ ವೆಂಕಟಸುಬ್ರಹ್ಮಣ್ಯಂ** (೧೯೨೧)—ಇವರು ಕೇರಳದ ಪಾಲ್ಘಾಟಿನ ಕಲ್ಪಾತಿ ಎಂಬ ಊರಿನಲ್ಲಿ ಜನಿಸಿದರು ಇವರ ತಂದೆ ಶೃಂಗೇರಿಯ ಧರ್ಮಾಧಿಕಾರಿಯಾಗಿದ್ದ ವೆಂಕಟರಮಣಅಯ್ಯರ್. ತಾಯಿ ಆನಂದಲಕ್ಷ್ಮಿಅಮ್ಮಾಳ್. ದಕ್ಷಿಣಕನ್ನಡ ಜಿಲ್ಲೆಯ ಕಾಂಚನ ಗ್ರಾಮವನ್ನು ವೆಂಕಟರಮಣ ಅಯ್ಯರಿಗೆ ದತ್ತಿಯಾಗಿ ಕೊಡಲಾಗಿತ್ತು. ಸುಬ್ರಹ್ಮಣ್ಯಂರವರಿಗೆ ಸಂಗೀತದ ಪ್ರಾರಂಭ ಶಿಕ್ಷಣವು ವೀಣಾ ವಿದುಷಿಯಾಗಿದ್ದ ಅವರ ತಾಯಿಯಿಂದ ದೊರಕಿತು. ನಂತರ ಚಕ್ರಕೋಡಿ ನಾರಾಯಣಶಾಸ್ತ್ರಿಯವರಲ್ಲೂ, ಚೆಂಬೈ ವೈದ್ಯನಾಥ ಭಾಗವತರು ಮತ್ತು ಜಿ.ಎನ್. ಬಾಲಸುಬ್ರಹ್ಮಣ್ಯಂರವರಲ್ಲೂ ಶಿಕ್ಷಣವನ್ನು ಪಡೆದು ವಿದ್ವಾಂಸರಾದರು. ಇವರ ಮೊದಲ ಕಚೇರಿ ಚೆಂಬೈರವರ ನೇತೃತ್ವದಲ್ಲಿ ಕೊಲ್ಲೂರಿನ ಮೂಕಾಂಬಿಕಾ ಸನ್ನಿಧಿಯಲ್ಲಿ ನಡೆಯಿತು. ಅಂದಿನಿಂದ ದಕ್ಷಿಣದಲ್ಲೆಲ್ಲಾ ಕಚೇರಿ ಗಾಯನ ಮಾಡುತ್ತ ಬಂದಿದ್ದಾರೆ. ದಕ್ಷಿಣ ಭಾರತದ ಖ್ಯಾತ ಪಿಟೀಲು ವಿದ್ವಾಂಸರು ಮತ್ತು ಮೃದಂಗ ವಿದ್ವಾಂಸರ ಪಕ್ಕವಾದ್ಯಗಳೊಡನೆ ಹಾಡಿದ್ದಾರೆ. ೧೯೫೩ ರಿಂದ ಕಾಂಚನ ಗ್ರಾಮದಲ್ಲಿ ನೆಲೆಸಿ ಅಲ್ಲಿ ಶ್ರೀ ಲಕ್ಷ್ಮೀನಾರಾಯಣ ಸಂಗೀತ ಶಾಲೆಯನ್ನು ಕಟ್ಟಿಸಿ ಗುರುಕುಲ ಪದ್ಧತಿಯಲ್ಲಿ ವಿದ್ಯಾರ್ಥಿಗಳಿಗೆ ವಸತಿ, ವಸನ, ಅನ್ನವಿಟ್ಟು ವಿದ್ಯಾದಾನ ಮಾಡುತ್ತ ಬಂದಿದ್ದಾರೆ. ಹಿತವಾದ ಸತ್ವ ಉಳ್ಳ ಶಾರೀರ, ಉತ್ತಮ ಮನೋಧರ್ಮದ ರಾಗ ವಿಸ್ತರಣೆ, ಅಚ್ಚುಕಟ್ಟಿನ ಕೃತಿಗಳ ನಿರೂಪಣೆ, ಲಯಪ್ರಧಾನವಾದ ಸ್ವರಕಲ್ಪನೆ ಮುಂತಾದುವು ಇವರ ಗಾನಶೈಲಿಯ ಪ್ರಮುಖಾಂಶಗಳು. ಇವರ ಮಗ ಸುಬ್ಬರತ್ನಂ ಉತ್ತಮ ಭವಿಷ್ಯವುಳ್ಳ ಪಿಟೀಲು ವಿದ್ವಾಂಸರು. ಕಾಂಚನದ ಸಂಸಾರವು ಸಂಗೀತದ ಸಂಸಾರವಾಗಿದೆ

**ಕಾಂತಮಂಜರಿ**—ಈ ರಾಗವು ೩೭ನೆಯ ಮೇಳಕರ್ತ ಸಾಳಗದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ಸ ದ ಪ ನಿ ದ ಮ ಧಿ ಗ ರಿ ಮ ಗ ರಿ ಸ

**ಕಾಂತಾಮಣಿ**—ಈ ರಾಗವು ೬೧ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಇದು ೧೧ನೆ ರುದ್ರಚಕ್ರದ ಮೊದಲಮೇಳ. ರಾಗಾಂಗರಾಗ. ಷಡ್ಜಸ್ವರವು ಗ್ರಹ,

ಅಂಶ ಮತ್ತು ನ್ಯಾಸಸ್ವರ. ಗಾಂಧಾರ, ಮಧ್ಯಮ ಮತ್ತು ಧೈವತಗಳು ರಾಗಛಾಯಾ ಸ್ವರಗಳು ವಿಪ್ರಲಂಭ ಶೃಂಗಾರರಸಪ್ರಧಾನವಾದ ರಾಗ. ದೀನ ಮತ್ತು ಕರುಣ ರಸವೂ ಸೂಚಿತವಾಗುತ್ತದೆ ಸಾರ್ವಕಾಲಿಕರಾಗ. ತ್ಯಾಗರಾಜರ 'ಪಾಲಿಂತುವೊ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ಕಾಂತಾರಕ ಮಂಜರಿ**—ಈ ರಾಗವು ೧ನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸಂ

ಅ: ಸಂ ನಿ ಪ ಮ ಗ ಸ

**ಕಾಂತರಾಕ್ಷಸ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸಂ

ಅ: ಸಂ ದ ಪ ಮ ಗ ರಿ ಸ

**ಕಾಂತಾ**—ನಾರದನ ' ಸಂಗೀತ ಮಕರಂದ 'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೨೨ ಶ್ರುತಿಗಳಲ್ಲಿ ಷಡ್ಜದ ಮೂರನೆ ಶ್ರುತಿಯ ಹೆಸರು.

**ಕಾಂತಧನ್ಯಾಸಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ

ಆ: ಸ ಗ ಮ ಪ ನಿ ಸಂ

ಅ: ಸ ನಿ ದ ಪ ನಿ ಪ ಮ ಗ ರಿ ಸ

**ಕಾಂತಾದ್ರುಮ**—ಈ ರಾಗವು ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ದ ಮ ನಿ ಸ

ಅ: ಸ ನಿ ಮ ಗ ರಿ ಸ

**ಕಾಂತಾರತ್ನ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಕಾಂತಿ**—ಈ ರಾಗವು ೩೮ನೆ ಮೇಳಕರ್ತ ಜಲಾರ್ಣವದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸಂ ನಿ ಪ ಮ ಗ ರಿ ಸ

**ಕಾಂತಿಮತಿ**—ಇದೇ ಹೆಸರಿನ ಎರಡು ರಾಗಗಳಿವೆ.

(೧) ಇದು ೩೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ಪ ಮ ಗ ರಿ ಸ

(೩) ಇದು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

ಮುತ್ತುಸ್ವಾಮಿ ದೀಕ್ಷಿತರ ಶ್ರೀಕಾಂತಿಮತಿಂ ಎಂಬ ರಚನೆಯು ಈ ರಾಗದ ಪ್ರಸಿದ್ಧಕೃತಿ.

**ಕಾಂತಿಸ್ವರೂಪಿಣಿ**—ಈ ರಾಗವು ೬೮ನೆಯ ಮೇಳಕರ್ತ ಜ್ಯೋತಿಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಾಂಭಾರಿ**—ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಸ್ತ್ರೀ ರಾಗ.

**ಕಾಂಭೋಜ ರಾಜಕಥಾ**—ಇದು ತೆಲುಗು ದೇಶದಲ್ಲಿ ಪ್ರಚಲಿತವಾಗಿರುವ ಜನಪದ ಗೀತೆ.

**ಕಾಂಭೋಜಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ಚತುಶ್ರುತಿ ರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಚತುಶ್ರುತಿ ಧೈವತ ಮತ್ತು ಕೈಶಿಕಿ ನಿಷಾದವು ಈ ರಾಗದ ಸ್ವರಸ್ಥಾನಗಳು. ಕಾಕಲಿ ನಿಷಾದವು ಅನ್ಯಸ್ವರ. ಏಕಾನ್ಯಸ್ವರ ಭಾಷಾಂಗರಾಗ. ದ ಗ ರಿ ಸಾ, ರಿ ಪ ಮ ಗ ಸ ಎಂಬ ದಾಟು ಪ್ರಯೋಗಗಳು ಪ್ರಸಿದ್ಧ. ಮಧ್ಯಮ, ಧೈವತ, ನಿಷಾದಗಳು ರಾಗಛಾಯಾ ಸ್ವರಗಳು, ಗ, ಮ, ಪ, ದ ನ್ಯಾಸಸ್ವರಗಳು ಸರ್ವಸ್ವರ ಗಮಕವರಿಕರಕ್ತಿರಾಗ. ಬಹಳ ವ್ಯಾಪ್ತಿಯುಳ್ಳ ಪ್ರಾಚೀನ ಪ್ರಸಿದ್ಧವಾದ ಸಾರ್ವಕಾಲಿಕರಾಗ. ಶ್ಲೋಕ, ಪದ, ವೃತ್ತ, ಗೇಯನಾಟಕಗಳಿಗೆ ಈ ರಾಗವು ಬಹಳ ಉತ್ತಮವಾದುದು. ಭಕ್ತಿ ಮತ್ತು ಶಾಂತಿ ರಸ ಪ್ರಧಾನರಾಗ ತಮಿಳು ಸಂಗೀತದಲ್ಲಿ ಈ ರಾಗಕ್ಕೆ ಪಣ್‌ಕಕ್ಕೇಶಿ ಎಂದು ಹೆಸರು. ಕಾಂಭೋಜ ಪ್ರಾಂತ್ಯದ ಮೂಲವಿರುವ ರಾಗವಾದ್ದರಿಂದ ಇದಕ್ಕೆ ಕಾಂಭೋಜಿ ಎಂಬ ಹೆಸರು ಬಂದಿದೆ.

ಮಲಯಾಳ ದೇಶದಲ್ಲಿ ಇದನ್ನು ಕಾಮೋದರಿ ಎಂದು ಹೇಳುತ್ತಾರೆ. ಇದು ಮಂಗಳಕರವಾದ ರಾಗ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು.

ಗೀತ — ಮಂದಾರಧಾರಿ — ಏಕ —
ಭುವನ — ಧ್ರುವ — ಪೈದಾಲ ಗುರುಮೂರ್ತಿಶಾಸ್ತ್ರಿ
ವರ್ಣ — ತರುಣಿ — ಆದಿ — ಫಿಡಲ್‌ಪೊನ್ನುಸ್ವಾಮಿ
ಪಂಕಜಾಕ್ಷ — ಆದಿ — ಮಹಾವೈದ್ಯನಾಥ ಅಯ್ಯರ್
ಕಮಲಾಕ್ಷಿ — ಝಂಪ — ತಿರುವೊಟ್ಟಿಯೂರುತ್ಯಾಗಯ್ಯರ್
ಸರಸಿಜ — ಅಟ — ವಡಿವೇಲು
ಕೃತಿ — ಮಾಜಾನಕಿ — ಆದಿ — ತ್ಯಾಗರಾಜರು
ಓ ರಂಗಶಾಯಿ — ಆದಿ — ತ್ಯಾಗರಾಜರು
ಎವರಿಮಾಟ — ಆದಿ — ತ್ಯಾಗರಾಜರು
ಶ್ರೀರಘುವರಾಪ್ರಮೇಯಂ— ಆದಿ — ತ್ಯಾಗರಾಜರು
ಶ್ರೀಸುಬ್ರಹ್ಮಣ್ಯಾಯನಮಸ್ತೆ— ರೂಪಕ — ಮುತ್ತುಸ್ವಾಮಿದೀಕ್ಷಿತರು
ಕೈಲಾಸನಾಥೇನ — ಛಾಪು — ಮುತ್ತುಸ್ವಾಮಿದೀಕ್ಷಿತರು
ಕೊನಿಯಾಡಿನ — ಆದಿ — ವೀಣಾಕುಪ್ಪಯ್ಯರ್
ಭಜಿಸಿಬದುಕೆಲೊಮಾನವ— ಝಂಪ — ಕನಕದಾಸರು
ರತ್ನಕಂಚುಕಧಾರಿಣಿ — ಛಾಪು — ಮುತ್ತಯ್ಯಭಾಗವತರು
ಅಷ್ಟಪದಿ — ನಿಭೃತನಿಕುಂಜಗೃಹಂ—ತ್ರಿಪುಟ— ಜಯದೇವ
ತರಂಗ — ಆಲೋಕಯೇ — ಆದಿ — ನಾರಾಯಣತೀರ್ಥ
ಜಾವಳಿ — ಏಮಿಮಾಯಮ್ಮ — ರೂಪಕ — ಪ್ರಭಾಕರರಾಮಯ್ಯ
ಪದ — ಎಂದುಕು ಈ ಮಾಟಲೇಲ—ತ್ರಿಪುಟ— ಕ್ಷೇತ್ರಜ್ಞ
ಪದರಕಪಾವೇವಾಡು — ತ್ರಿಪುಟ — ಕ್ಷೇತ್ರಜ್ಞ
ಮೋಸಮಾಯೆ ನಾ ಬುದ್ಧಿಕಿ—ತ್ರಿಪುಟ— ಕ್ಷೇತ್ರಜ್ಞ
ಸಾಮಾನ್ಯಮುಗಾದೆ ವಾನಿಪೊಂದು – ತ್ರಿಪುಟ— ಕ್ಷೇತ್ರಜ್ಞ

**ಕಾಂಸ್ಯತಾಳ**—ಇದೊಂದು ಘನವಾದ್ಯವೆಂದು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಹೇಳಿದೆ. ಕಾಂಸ್ಯತಾಳಗಳು ಲೋಹದ ತಾಳಗಳು. ಜಾಲ್ರ ಮತ್ತು ಬ್ರಹ್ಮತಾಳಗಳು ಇದಕ್ಕೆ ನಿದರ್ಶನ.

**ಕಾಂಡದ್ರಾವ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ಗ ಮ ದ ಮ ನಿ ಸ̇

ಆ : ಸ̇ ನಿ ಮ ಗ ರಿ ಸ

**ಕಾಂಡಜ್ವಲನ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕಾಂಡವೀಣ**—ಈ ವೀಣೆಯನ್ನು ಪುರಾತನ ಕಾಲದಲ್ಲಿ ಮಹಾವ್ರತದಲ್ಲಿ ಉಪಯೋಗಿಸುತ್ತಿದ್ದರು.

**ಕಿಡಿಕಿಟ್ಟು**—ನಾಗಸ್ವರ ಕಚೇರಿಗಳಲ್ಲಿ ನುಡಿಸಲ್ಪಡುವ ಒಂದು ಜೊತೆ ಚಿಕ್ಕ ಕೋನಾಕಾರದ ಮದ್ದಲೆಗಳು ಇವಕ್ಕೆ ಕಿರಿಕಿಟ್ಟಿ ಎಂಪೂ ತಮಿಳಿನಲ್ಲಿ ಹೇಳುತ್ತಾರೆ. ಇವು ಒಂದು ಅಡಿ ಎತ್ತರ ಮತ್ತು ೯ ಅಂಗುಲ ವ್ಯಾಸವಿರುವ ವಾದ್ಯಗಳು. ಇವನ್ನು ಮೇಲ್ಮುಖವಾಗಿ ನಡುವಿಗೆ ಕಟ್ಟಿಕೊಂಡು ಬಾಗಿರುವ ಕಡ್ಡಿಗಳಿಂದ ಬಾರಿಸಿ ನುಡಿಸುತ್ತಾರೆ.

**ಕಿಣ್ಣಾರಂ**—ಇದೊಂದು ಬಗೆಯ ಕೊಳಲು.

**ಕಿನ್ನರರು** —ಮನುಷ್ಯರಂತೆ ದೇಹವನ್ನೂ, ಕುದುರೆಯಂತೆ ಮುಖವನ್ನೂ ಹೊಂದಿರುವ ಒಂದು ಬಗೆಯ ದೇವಯೋನಿ ವಿಶೇಷದವರು. ಇವರೆಲ್ಲರೂ ಕುಬೇರನ ಪ್ರಜೆಗಳು. ಇವರು ಕಶ್ಯಪಮುನಿಯಿಂದ ಸುರಸೆಯಲ್ಲಿ ಜನಿಸಿದವರು. ಇವರು ಸಂಗೀತ ಕಲಾವಿದರು. ಇವರ ಶಿಲ್ಪವನ್ನು ಅಮರಾವತಿ, ಸಾಂಚಿ, ಮತ್ತು ಬಾರ್ಹುತ್‌ಗಳಲ್ಲಿ ನೋಡಬಹುದು. ನಡುವಿನ ಕೆಳಭಾಗವು ಪಕ್ಷಿಯಂತೆಯೂ, ಮೇಲ್ಭಾಗವು ಮನುಷ್ಯರಂತೆಯೂ ಇರುವಂತೆ ಕೆತ್ತಿದ್ದಾರೆ. ಕಿನ್ನರರು ಹಿಮಾಲಯದ ಪ್ರದೇಶದಲ್ಲಿ ವಾಸಿಸುವರು. ಕೊಳಲುವಾದನ, ನಾಟ್ಯ ಮತ್ತು ಸಂಗೀತದಲ್ಲಿ ನಿಪುಣರು.

**ಕಿನ್ನರರಾಗ** —ಪುರಾತನ ತಮಿಳು ಸಂಗೀತದ ೧೬ ಮುಖ್ಯ ರಾಗಗಳಲ್ಲಿ ಒಂದು ರಾಗ.

**ಕಿನ್ನರಾವಳಿ**—ಈ ರಾಗವು ೩೫ನೆ ಮೇಳಕರ್ತ ಶೂಲಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಿನ್ನರಿ**—ಕಿನ್ನರರಿಂದ ನಿರ್ಮಿತವಾದುದೆಂದು ಹೇಳಲಾದ ಒಂದು ಪುರಾತನ ತಂತೀವಾದ್ಯ. ಸಂಸ್ಕೃತ ಸಾಹಿತ್ಯ ಗ್ರಂಥಗಳಲ್ಲೆಲ್ಲಾ ಇದರ ಪ್ರಸ್ತಾಪವಿದೆ. ಭಾರತೀಯ ಶಿಲ್ಪ ಮತ್ತು ಚಿತ್ರಕಲೆಗಳಲ್ಲಿ ಇದನ್ನು ಚಿತ್ರಿಸಲಾಗಿದೆ ಬೈಬಲ್ ಗ್ರಂಥದಲ್ಲೂ ಕಿನ್ನೋರ್ ಎಂಬ ವಾದ್ಯವು ಉಕ್ತವಾಗಿದೆ. ಈ ವಾದ್ಯದ ದಂಡಿಯು ಗುಂಡಾಗಿರುವ ಕಪ್ಪುಮರ ಅಥವಾ ಬೊಂಬಿನದು ಇದರ ಮೇಲೆ ೧೨ ಮೂಳೆ ಅಥವಾ ಲೋಹದ ಮೆಟ್ಟಿಲುಗಳನ್ನು ಅಂಟಿಸಲಾಗಿದೆ. ಇದರ ತಳಭಾಗದಲ್ಲಿ ಅನುರಣನದ ಮೂರು ಸೋರೆಬುರುಡೆಗಳನ್ನು ಅಳವಡಿಸಲಾಗಿದೆ. ಮಧ್ಯದಲ್ಲಿರುವ ಬುರುಡೆಯು ಇನ್ನೆರಡು ಬುರುಡೆಗಳಿಗಿಂತ ದೊಡ್ಡದಾಗಿರುತ್ತದೆ. ಈ ವಾದ್ಯದ ಕೊನೆಯ ಭಾಗವು ಗಾಳಿಪಟದ ಆಕಾರದಲ್ಲಿರುತ್ತದೆ. ಈ ವಾದ್ಯಕ್ಕೆ ೨-೩ ತಂತಿಗಳಿರು

ತ್ತವೆ. ಒಂದು ತಂತಿಯು ಮೆಟ್ಟುಗಳ ಮೇಲೆ ಹಾದುಹೋಗಿರುತ್ತದೆ. ಮಿಕ್ಕ ತಂತಿಗಳು ಶ್ರುತಿಯ ತಂತಿಗಳು ಈ ವಾದ್ಯದ ನಾದವು ಬಹಳ ಮೃದುವಾಗಿದೆ. ಆಂಧ್ರ, ಕರ್ಣಾಟಕ ಮುಂತಾದ ರಾಜ್ಯಗಳಲ್ಲಿ ರೈತರು ಮತ್ತಿತರ ಹಳ್ಳಿಗಾಡಿನ ಜನರು ಇದನ್ನು ಸಾಮಾನ್ಯವಾಗಿ ಬಳಸುತ್ತಾರೆ. ಬೆಂಗಳೂರಿನ ಬಸವನಗುಡಿಯ ಮುಂದಿರುವ ಎತ್ತರವಾದ ಕಲ್ಲಿನ ಸ್ತಂಭದ ಮೇಲೆ ಕಿನ್ನರಿಯನ್ನು ನುಡಿಸುತ್ತಿರುವ ಒಬ್ಬ ವ್ಯಕ್ತಿಯ ಶಿಲ್ಪವಿದೆ.

**ಕಿರಣಭಾಸ್ಕರ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ

ಅ: ಸ ನಿ ದ ಪ ಮ ದ ಮ ಗ ರಿ ಸ

**ಕಿರಣಾವಳಿ**—ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ಪ ಮ ಗ ರಿ ಸ

ತ್ಯಾಗರಾಜರ ಪರಾಕು ನೀಕೇಲರಾ ಎಂಬ ರಚನೆಯು ಈ ರಾಗದ ಒಂದು ಪ್ರಸಿದ್ಧ ಕೃತಿ.

**ಕಿರಣಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕಿಳಿಕ್ಕಣಿ**—ಇದು ತಮಿಳಿನ ಒಂದು ಸಂಗೀತ ರಚನೆ. ಗಿಣಿಯನ್ನು ಸಂಬೋಧಿಸಿರುವ ಹಲವು ಕವನಗಳಿರುವ ಈ ರಚನೆಯನ್ನು ಮಾಂಡ್‌ರಾಗದಲ್ಲಿ ಹಾಡುತ್ತಾರೆ.

**ಕಿಳಿಕ್ಕೊಂಜು ತಂಬೂರಿ**—ಇದೊಂದು ಚಿಕ್ಕತಂಬೂರಿ. ಇದರ ತಂತಿಗಳಿಂದ ಸ್ಥಾಯಿಸ್ವರಗಳು ಮಾತ್ರ ಕೇಳಿಬರುತ್ತದೆ. ಈ ಸ್ವರಗಳು ಗಿಣಿಯ ಕೂಗಿನ ಸ್ವರಗಳನ್ನು ಹೋಲುವುದರಿಂದ ಈ ತಂಬೂರಿಗೆ ಗಿಣಿ ಕೂಗಿನ ತಂಬೂರಿ ಎಂಬ ಹೆಸರು ಉಂಟಾಗಿದೆ

**ಕಿಳೈ**—ಪುರಾತನ ತಮಿಳು ಸಂಗೀತದ ಸಂವಾದಿ ಸ್ವರದ ಹೆಸರು.

**ಕಿಳ್ಳೈಯಾಳ್**—ತಮಿಳುನಾಡಿನ ತಿರುಚಿಯ ಬಳಿಯಿರುವ ಉರೈಯೂರಿನ ವೀಣೆ ರಂಗಾಚಾರ್ಯರು ರಚಿಸಿರುವ ಒಂದು ಬಗೆಯ ವೀಣೆ. ಇದರ ತಲೆಭಾಗವು ಗಿಣಿಯ ಆಕಾರವನ್ನು ಹೋಲುತ್ತದೆ. ಎಡಗಡೆ ಇರಬೇಕಾದ ಅನುರಣನದ ಬುರುಡೆಯು ಈ ವೀಣೆಯಲ್ಲಿರುವುದಿಲ್ಲ. ಮುಖ್ಯ ಅನುರಣನ ಭಾಗವು ಅರ್ಧಗೋಳಾಕಾರದಲ್ಲಿರುವ ಬದಲು ಒಂದು ಚಪ್ಪಟೆಯಾದ ಸಿಲಿಂಡರಿನ ಮಾದರಿ

ಯಲ್ಲಿದೆ. ಮೆಟ್ಟುಗಳು ಮಾಮೂಲಿನ ವೀಣೆಯಂತಿವೆ. ಈ ವಾದ್ಯದ ನಾದವು ಚೆನ್ನಾಗಿದೆ.

**ಕೀಚಕವಧಂ**—ಇರೈಯಮ್ಮನ್ ಥಂಪಿ ಬರೆದಿರುವ ಒಂದು ಕಥಕಳಿ ನಾಟಕ.

**ಕೀರ್ತನ**—ಇದು ಬಂಗಾಳದ ಸಾಮೂಹಿಕ ಜನಪದ ನೃತ್ಯ. ಖೋಲ್ ಎಂಬ ಮದ್ದಳೆಯ ತಾಳಕ್ಕೆ ಸರಿಯಾಗಿ ವರ್ತುಳಾಕಾರದಲ್ಲಿ ನೃತ್ಯವಾಡುತ್ತಾ ಕೈಗಳನ್ನು ಮೇಲಕ್ಕೂ ಕೆಳಕ್ಕೂ ಎತ್ತಿ ಚಪ್ಪಾಳೆ ಹಾಕುತ್ತಾರೆ. ಈ ಕೀರ್ತನ ವೃಂದವು ಬೀದಿಗಳಲ್ಲಿ ಹಾಡುತ್ತಾ ನೃತ್ಯವಾಡುತ್ತಾ ಹೋದರೆ ಅದನ್ನು ನಗರಕೀರ್ತನವೆನ್ನುವರು. ಯಾವ ಭೇದಭಾವನೆಯಿಲ್ಲದೆ ಎಲ್ಲರೂ ಈ ಕೀರ್ತನದಲ್ಲಿ ಭಾಗವಹಿಸುತ್ತಾರೆ.

**ಕೀರ್ತನನಾಟಕ**—ಕೀರ್ತನೆಗಳು ಮಾತ್ರ ಇರುವ ನಾಟಕ. ವಿಲಾಸಂ ಮತ್ತು ನಾಟಕಾಲಂಕಾರಂ ಎಂಬ ನಾಟಕಗಳಲ್ಲಿ ಕೀರ್ತನೆಗಳು ಮತ್ತು ಸಂಭಾಷಣೆ ಗಳಿವೆ.

**ಕೀರ್ತನಸಾಗರಂ**—ಇವು ತಮಿಳಿನ ಸಂಗೀತ ಪುಸ್ತಕಗಳು. ನಾಲ್ಕು ಭಾಗ ಗಳಾಗಿ ಪ್ರಕಟವಾಗಿವೆ. ಇವುಗಳಲ್ಲಿ ಪ್ರಸಿದ್ಧ ವಾಗ್ಗೇಯಕಾರರ ಕೃತಿಗಳನ್ನು ಸ್ವರ ಲಿಪಿಸಹಿತ ಕೊಡಲಾಗಿದೆ. ಸಾಹಿತ್ಯದ ಸರಿಯಾದ ಉಚ್ಚಾರಣೆಗಾಗಿ ಪ್ರತಿಯೊಂದು ಕೃತಿಯನ್ನು ತೆಲುಗು ಲಿಪಿಯಲ್ಲಿ ಮುದ್ರಿಸಲಾಗಿದೆ. ಪ್ರತಿ ಪುಸ್ತಕದಲ್ಲಿ ೫೦ ರಚನೆ ಗಳಿವೆ.

**ಕೀರ್ತನಶತಕ**—ಇವು ಒಂದು ಗೊತ್ತಾದ ವಿಷಯಕ್ಕೆ ಸಂಬಂಧಿಸಿದ ತ್ಯಾಗರಾಜರ ೧೦೦ ಕೃತಿಗಳ ಗುಚ್ಛ. ಇದನ್ನು ಅಪರಾಧ ಮುಲನೋರ್ವ ಎಂಬ ಪನಾವಲಿ ರಾಗದ ಕೃತಿಯಲ್ಲಿ ಸೂಚಿಸಿದ್ದಾರೆ

**ಕೀರ್ತನೆ ಶಾಸನಪತ್ರಗಳು**—ಇವು ತಿರುಪತಿಯ ತಾಳ್ಳಪಾಕಂ ವಾಗ್ಗೇಯ ಕಾರರು ರಚಿಸಿರುವ ಕೀರ್ತನೆಗಳುಳ್ಳ ತಾಮ್ರಶಾಸನಗಳು. ಕೀರ್ತನೆಗಳನ್ನು ತಾಮ್ರದ ತಗಡಿನ ಎರಡು ಕಡೆಗಳಲ್ಲಿ ಮುದ್ದಾದ ಅಕ್ಷರಗಳಲ್ಲಿ ಕೆತ್ತಲಾಗಿದೆ. ೩,೦೦೦ ತಾಮ್ರ ಶಾಸನಗಳಿದ್ದೂ ೨೦೦೦೦ ಕೀರ್ತನೆಗಳಿವೆ. ತಾಳ್ಳಪಾಕಂ ಅಣ್ಣಮಾಚಾರ್ಯ (೧೪೨೪–೧೫೦೩), ಅವರ ಪುತ್ರ ಪೆದ್ದತಿರುಮಲಅಯ್ಯಂಗಾರ್ ಮತ್ತು ಮೊಮ್ಮಗ ಚಿನ್ನಯ್ಯ ಈ ಮೂವರೂ ತಾಳ್ಳಪಾಕಂ ವಾಗ್ಗೇಯಕಾರರು ಈ ಶಾಸನಗಳನ್ನು ತಿರುಮಲೆ ದೇವಾಲಯದ ಪಶ್ಚಿಮಪ್ರಾಕಾರದ ಒಂದು ನೆಲಮಾಳಿಗೆಯಲ್ಲಿಡಲಾಗಿದ್ದು ಇತ್ತೀಚಿಗೆ ಅವು ಬೆಳಕಿಗೆ ಬಂದುವು. ಈ ಶಾಸನಗಳಲ್ಲಿ ಕೀರ್ತನೆಗಳ ಸಾಹಿತ್ಯ ಮತ್ತು ಅವುಗಳ ರಾಗದ ಹೆಸರನ್ನು ಮಾತ್ರ ಕೊಡಲಾಗಿದೆ. ತಾಳವನ್ನು ಸೂಚಿಸಿಲ್ಲ. ಆಗ ಪ್ರಚಲಿತವಾಗಿದ್ದ ರಾಗಗಳಲ್ಲಿ ಈ ಕೀರ್ತನೆಗಳನ್ನು ರಚಿಸಲಾಗಿತ್ತು. ಇಲ್ಲಿ ಹೆಸರಿಸಿರುವ ಆಬಾಲಿ, ನಾರನಿ, ಕೊಂಡಮಲಹರಿ, ಮುಖಾರಿ ಪಂತು ಮುಂತಾದ ಕೆಲವು ರಾಗಗಳು ಈಗ ಕೇವಲ ಹೆಸರಿನಲ್ಲಿ ಮಾತ್ರ ಉಳಿದಿವೆ. ಶಂಕರಾಭರಣ, ಕೇದಾರಗೌಳ, ಶ್ರೀರಾಗ, ವರಾಳಿ, ಸೌರಾಷ್ಟ್ರ ಮತ್ತು ಲಲಿತ ಮುಂತಾದ ಪ್ರಸಿದ್ಧ ರಾಗಗಳಲ್ಲಿ ಹಲವು

ಕೀರ್ತನೆಗಳಿವೆ. ಮೋಹನ ರಾಗದ ಹೆಸರು ಕಂಡುಬರುವುದಿಲ್ಲ. ರೇಗುಪ್ತಿರಾಗದ ಹೆಸರು ಅನೇಕ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಮೋಹನರಾಗದ ಹಿಂದಿನ ಹೆಸರು ರೇಗುಪ್ತಿ ಎಂದು ಈಗ ಗೊತ್ತಾಗಿದೆ. ಕೃತಿಯನ್ನು ಪಲ್ಲವಿ, ಅನುಪಲ್ಲವಿ, ಚರಣ ಎಂಬ ಮೂರು ಅಂಗಗಳಿರುವಂತೆ ರಚಿಸಿರುವುದು ಕರ್ಣಾಟಕ ಸಂಗೀತದ ಇತಿಹಾಸದಲ್ಲಿ ಇದೇ ಮೊದಲು. ಅನೇಕ ಕೃತಿಗಳ ಮೂಲರಾಗಗಳು ತಿಳಿದು ಬರುವುದಿಲ್ಲ. ಮೈಸೂರಿನ ಬಿಡಾರಂ ಕೃಷ್ಣಪ್ಪನವರ ಶಿಷ್ಯರೂ, ಮಹಾರಾಜ ಕಾಲೇಜಿನ ನಿವೃತ್ತ ತೆಲುಗು ಪಂಡಿತರೂ ಆಗಿದ್ದ ರಾಳ್ಳಪಳ್ಳಿ ಅನಂತಕೃಷ್ಣಶರ್ಮ ಮತ್ತು ನೇದನೂರಿಕೃಷ್ಣಮೂರ್ತಿ ಹಲವಾರು ಕೃತಿಗಳನ್ನು ಸ್ವರಪಡಿಸಿ ಪ್ರಕಟವಾಗುವಂತೆ ಮಾಡಿದರು.

**ಕೀವಲೂರು ಮೀನಾಕ್ಷಿ ಸುಂದರಂಪಿಳ್ಳೈ**—ಇವರು ತಮಿಳುನಾಡಿನ ಕೀವಲೂರಿನವರು. ತಮಿಳು ಮತ್ತು ಸಂಗೀತದಲ್ಲಿ ಉತ್ತಮ ವಿದ್ವಾಂಸರಾಗಿದ್ದರು. ತ್ಯಾಗರಾಜರ ಭಕ್ತರಾಗಿ ಅವರನ್ನು ಕುರಿತು ಹಲವಾರು ಲೇಖನಗಳನ್ನು ಬರೆದರು. ತ್ಯಾಗರಾಜರ ಕೃತಿಗಳನ್ನು ಅರ್ಥಸಹಿತವಾಗಿ ಎರಡು ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥಗಳಿಗೆ ತ್ಯಾಗರಾಜ ಕೀರ್ತನೈ, ಪೊರುಳ್‌ವಿಳಕ್ಕಂ ಎಂದು ಹೆಸರು. ಇವರು ೧೯೭೦ರಲ್ಲಿ ಕಾಲವಾದರು.

**ಕುಕ್ಕುಟತಾನ**—ಇದೊಂದು ಶೈಲಿಯ ತಾನ. ಇದರಲ್ಲಿ ತಾನದ ಸ್ವರ ಸಮೂಹಗಳ ಗತಿಯ ಶೈಲಿಯು ಹುಂಜದ ನಡಗೆಯಂತೆ ಇರುತ್ತದೆ.

**ಕುಕ್ಕಿಲ ಕೃಷ್ಣಭಟ್ಟ** (೧೯೧೧)—ಕೃಷ್ಣಭಟ್ಟರು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ವಿಠಲ ಪಡ್ನೂರು ಗ್ರಾಮದಲ್ಲಿ ಜನಿಸಿದರು. ಪ್ರಾಚೀನ ಗುರು ಕುಲ ಸಂಪ್ರದಾಯದಲ್ಲಿ ಸತತ ವ್ಯಾಸಂಗಮಾಡಿ ವಿದ್ವಾಂಸರಾದರು. ವಿದ್ವಾನ್ ಕಡವದ ಶಂಭುಶರ್ಮರಲ್ಲಿ ಭರತನಾಟ್ಯಶಾಸ್ತ್ರವನ್ನು ವ್ಯಾಖ್ಯಾನ ಸಹಿತ ಹಲವು ವರ್ಷಗಳಕಾಲ ದೀರ್ಘ ವ್ಯಾಸಂಗ ಮಾಡಿದರು. ಮಂಗಳೂರಿನ ವಿದ್ವಾನ್ ಹೆಚ್. ಕೃಷ್ಣ ಉಡುಪರಲ್ಲಿ ಸಂಗೀತಾಭ್ಯಾಸಮಾಡಿ ಯಕ್ಷಗಾನ ಭಾಗವತರೂ ಗಮಕಿಗಳೂ ಆಗಿದ್ದಾರೆ. ಸಂಗೀತಶಾಸ್ತ್ರ ಛಂದಸ್ಸು, ಯಕ್ಷಗಾನ, ದ್ರಾವಿಡ ಛಂದಸ್ಸು, ನಿರುಕ್ತ ಮುಂತಾದ ಹಲವು ಶಾಸ್ತ್ರಗಳನ್ನು ಮೂಲ ಆಕರ ಗ್ರಂಥಗಳಿಂದ ಆಳವಾಗಿ ಅಧ್ಯಯನ ಮಾಡಿದ್ದಾರೆ. ಭರತನಾಟ್ಯಶಾಸ್ತ್ರವನ್ನು ವ್ಯಾಖ್ಯಾನಸಹಿತ ಕನ್ನಡದಲ್ಲಿ ಬರೆಯುವ ಕೆಲಸದಲ್ಲಿ ನಿರತರಾಗಿದ್ದಾರೆ. ಭಾರತೀಯ ಸಂಗೀತಶಾಸ್ತ್ರದಲ್ಲಿ ಶ್ರುತಿ ಸಿದ್ಧಾಂತವನ್ನು ಕುರಿತು ಗ್ರಂಥ ಬರೆದಿದ್ದಾರೆ. ಇವರು ಈಗ ಮೈಸೂರು ನಗರದ ನಿವಾಸಿಗಳಾಗಿದ್ದಾರೆ.

**ಕುಕುಡ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ದ ಸ

ಅ: ಸ ನಿ ದ ಪ ಮ ರಿ ಸ

**ಕುಜಮೋಹನ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ನ಼ಿ ಸ ಗ ರಿ ಗ ಮ ಪ ದ ಸ಼

ಅ: ಸ಼ ನಿ ದ ಪ ಗ ರಿ ಸ

**ಕುಂಕುಮಾಂಬರಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ಼

ಅ: ಸ಼ ದ ಪ ಮ ಗ ರಿ ಸ

**ಕುಪ್ಪುಸ್ವಾಮಿ**—ಇವರು ತಮಿಳುನಾಡಿನ ಒಬ್ಬ ವಾಗ್ಗೇಯಕಾರರು. ತಾನವರ್ಣಗಳನ್ನು ರಚಿಸಿದ್ದಾರೆ. ಇವರು ರಚಿಸಿರುವ ನಾಟಕುರಂಜಿ ರಾಗದ ಆದಿ ತಾಳದಲ್ಲಿರುವ ಚಲಮೇಲಜೇಸೇವು ಎಂಬ ವರ್ಣ ಬಹಳ ಪ್ರಸಿದ್ಧವಾಗಿದೆ.

**ಕುಪ್ಪುಸ್ವಾಮಿಅಯ್ಯರ್**—ಇವರು ತಮಿಳುನಾಡಿನ ಒಬ್ಬ ಪ್ರಸಿದ್ಧ ವಾಗ್ಗೇಯಕಾರರು ೧೮ನೆ ಶತಮಾನದ ದ್ವಿತೀಯಾರ್ಧದಲ್ಲಿದ್ದರು. ವೆಂಕಟೇಶ ಎಂಬ ಅಂಕಿತದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಇವರು ರಚಿಸಿರುವ ಧನ್ಯಾಸಿರಾಗದ (ರೂಪಕ) ಅನುದಿನಮುನು ನೀ ಕಥಲನು ಎಂಬ ಕೃತಿ ಬಹಳ ಪ್ರಸಿದ್ಧವಾಗಿದೆ.

**ಕುಪ್ಪುಸ್ವಾಮಿಶಾಸ್ತ್ರಿ**—ಇವರು ಸಂಗೀತದ ತ್ರಿರತ್ನರಲ್ಲಿ ಒಬ್ಬರಾದ ಶ್ಯಾಮಾ ಶಾಸ್ತ್ರಿಗಳ ಮರಿಮಗ. ‘ಇವರು ಉತ್ತಮ ಗಾಯಕರೂ ವಾಗ್ಗೇಯಕಾರರೂ ಆಗಿದ್ದರು.

**ಕುಮಾರಗಂಧರ್ವ** (೧೯೨೪)—ಇವರು ಕರ್ಣಾಟಕದ ಬೆಳಗಾಂ ಜಿಲ್ಲೆಯ ಷಹಾಪುರ್ ಬಳಿಯಿರುವ ಸೂಳೆಭಾವಿ ಎಂಬ ಗ್ರಾಮದಲ್ಲಿ ಸಿದ್ಧರಾಮಯ್ಯ ಮತ್ತು ಗುರುಸಿದ್ದಪ್ಪ ಎಂಬ ದಂಪತಿಗಳ ಪುತ್ರನಾಗಿ ಜನಿಸಿದರು. ಇವರ ಹೆಸರು ಶಿವಪುತ್ರ ಕೊಂಕಾಳಿಮಠ್. ಚಿಕ್ಕಂದಿನಲ್ಲೇ ಫಯಾಜ್‌ಖಾನ್, ಅಲ್ಲಾದಿಯಾಖಾನ್ ಮುಂತಾದವರ ಗ್ರಾಮಾಫೋನ್ ರೆಕಾರ್ಡುಗಳನ್ನು ಕೇಳಿ ಅನುಕರಣೆ ಮಾಡುತ್ತಿದ್ದರು. ೧೯೩೬ರಲ್ಲಿ ಬೊಂಬಾಯಿನ ಗಂಧರ್ವ ಮಹಾವಿದ್ಯಾಲಯಕ್ಕೆ ಸೇರಿ ೧೨ ವರ್ಷಗಳ ಶಿಕ್ಷಣ ಪಡೆದು ಹಿಂದೂಸ್ಥಾನಿ ಸಂಗೀತದ ಖ್ಯಾತ ಗಾಯಕರಾದರು. ಇವರು ಗ್ವಾಲಿಯರ್ ಘರಾನಾಕ್ಕೆ ಸೇರಿದವರು. ೧೯೫೮ರಿಂದ ಗೀತವರ್ಷ, ಗೀತಹೇಮಂತ, ಗೀತವಸಂತ, ಮಾಳ್ವದ ಜನಪದ ಗೀತೆಗಳು ಎಂಬ ರಚನೆಗಳನ್ನು ಪ್ರದರ್ಶಿಸಿದ್ದಾರೆ. ಗಾಂಧೀಮಲ್ಹಾರ್ ಎಂಬ ಹೊಸ ಮಲ್ಹಾರ್ ಭೇದವನ್ನು ಬೆಳಕಿಗೆ ತಂದರು. ಉತ್ತರ ಭಾರತದಲ್ಲೆಲ್ಲಾ ಹಲವಾರು ಕಡೆ ಬೈಠಕ್ ಮಾಡಿದ್ದಾರೆ. ದೇವಾಸ್‌ನಲ್ಲಿ (ಮ.ಪ್ರ.) ಕುಮಾರ್ ಸಂಗೀತ ಅಕಾಡೆಮಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಇವರ ಗಾಯನದಲ್ಲಿ ಉತ್ತಮವಾದ ಶಾರೀರದ ಜೊತೆಗೆ ಉತ್ತಮ ಮನೋಧರ್ಮ, ಗಾಂಭೀರ್ಯ ಮತ್ತು ಪಾಂಡಿತ್ಯ, ಇಂಪು ಮತ್ತು ಸೊಗಸುಗಳಿವೆ.

**ಕುಮಾರ**—ಇದು ವಾಗ್ಗೇಯಕಾರರಾದ ಸುಬ್ಬರಾಯಶಾಸ್ತ್ರಿಗಳು (೧೮೦೩–೧೮೬೨) ತಮ್ಮ ಸಂಗೀತ ರಚನೆಗಳಲ್ಲಿ ಬಳಸಿರುವ ಅಂಕಿತ.

**ಕುಮಾರ ದ್ಯುತಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ರಿ ಗ ಮ ನಿ ದ ನಿ ಸ̇

ಅ: ಸ̇ ನಿ ದ ಪ ರಿ ಸ

**ಕುಮಾರ ಪ್ರಿಯ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ̇

ಅ: ಸ̇ ನಿ ದ ಗ ರಿ ಸ

**ಕುಮಾರ್ ಮುಖರ್ಜಿ**—ಕುಮಾರ್ ಮುಖರ್ಜಿಯವರು ಲಕ್ನೋವಿನ ಕೀರ್ತಿಶೇಷ ಪ್ರೊಫೆಸರ್ ಧೂರ್ಜಟಿಪ್ರಸಾದ್ ಮುಖರ್ಜಿಯವರ ಪುತ್ರ. ಧೂರ್ಜಟಿ ಪ್ರಸಾದರು ಸಂಗೀತ ಮತ್ತು ಅರ್ಥಶಾಸ್ತ್ರಗಳ ಪ್ರಸಿದ್ಧ ವಿದ್ವಾಂಸರೂ ಸಾಹಿತಿಗಳೂ ಆಗಿದ್ದರು. ಕುಮಾರ್ ಮುಖರ್ಜಿಯವರು ಪ್ರಥಮಶಾಸ್ತ್ರೀಯ ಶಿಕ್ಷಣವನ್ನು ಈಗ ಪ್ರಸಿದ್ಧ ಸಂಗೀತಗಾರರಾಗಿರುವ ಮಾಳವಿಕಾಕಾನನ್‌ರ ತಂದೆ ಮತ್ತು ದೆಹಲಿ ವಿಶ್ವವಿದ್ಯಾನಿಲಯದ ಸಂಗೀತದ ಇಲಾಖೆಯ ಮುಖ್ಯಸ್ಥರಾಗಿದ್ದ ಕೀರ್ತಿಶೇಷ ರಬೀಂದ್ರ ಲಾಲ್ ರಾಯ್‌ರವರಲ್ಲಿ ಪಡೆದರು. ಕಾಲೇಜಿನಲ್ಲಿದ್ದಾಗಲೇ ರಾಮಪುರದ ಉಸ್ತಾದ್ ಮುಸ್ತಾಕ್‌ಹುಸೇನ್‌ಖಾನರ ಸಂಪರ್ಕ ಉಂಟಾಗಿ ಅವರ ಶಿಷ್ಯರಾದರು. ಮುಖರ್ಜಿ ಯವರ ಮೇಲೆ ಅತ್ಯಂತ ಹೆಚ್ಚಿನ ಪ್ರಭಾವ ಉಂಟಾದುದು ಬರೋಡದ ಉಸ್ತಾದ್ ಫಯಾಜ್‌ಖಾನರ ಶೈಲಿ. ಮುಖರ್ಜಿಯವರ ಶೈಲಿಯು ಹೆಚ್ಚಾಗಿ ಪ್ರೇಂಪಿಯ ಸಂಪ್ರದಾಯದ ಆಲಾಪ್, ಲಯಕಾರಿ ಮತ್ತು ತಾನ್‌ಗಳನ್ನುಳ್ಳ ಗಾಯನ. ಇದು ಆಗ್ರಾ ಗಾಯಕಿ ಅಥವಾ ಅತ್ರೌಲಿಗಿಂತ ಸ್ವಲ್ಪ ಬೇರೆಯಾದ ಸಂಪ್ರದಾಯ. ಇವರು ದಿನಕರ್‌ಕೈಕಿಣಿಯ ಸಂಗಡ ಅಥವಾ ಪಂಡಿತ್ ವಿ ಜಿ. ಜೋಗ್‌ರ ಪಿಟೀಲು ಪಕ್ಕ ವಾದ್ಯದೊಡನೆ ಹಾಡುವಾಗ ಎರಡು ಶೈಲಿಗಳ ಸೊಗಸಾದ ಸಮ್ಮಿಳನವು ಕಾಣುತ್ತದೆ. ಮುಖರ್ಜಿಯವರು ಪ್ರಸಿದ್ಧ ವಿಮರ್ಶಕರು ಮತ್ತು ಸಂಗೀತಕಲಾ ಪೋಷಕರು.

**ಕುಮಾರರಂಜನಿ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ಕುಮಾರಲೀಲ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ

ಆ: ಸ ಮ ಪ ದ ನಿ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕುಮಾರಲಿಂಗಕುರವಂಜಿ**—ಇದು ತಮಿಳಿನ ಕುರವಂಜಿ ಮಾದರಿಯ ಒಂದು ನೃತ್ಯರೂಪಕ.

**ಕುಮಾರಗಿರಿ ವಸಂತರಾಜ**—ಕಾಕತೀಯ ಸಾಮ್ರಾಜ್ಯ ಪತನದ ನಂತರ ಉತ್ತರಾಂಧ್ರದಲ್ಲಿ ರೆಡ್ಡಿನಾಯಕರು ರಾಜ್ಯಗಳನ್ನು ಸ್ಥಾಪಿಸಿದರು. ಕೊಂಡವೀಡನ್ನು ರಾಜಧಾನಿಯಾಗಿ ಪಾಲಿಸಿದ ರೆಡ್ಡಿರಾಜರಲ್ಲಿ ಮೊಟ್ಟಮೊದಲಿಗೆ ಪ್ರಸಿದ್ಧನಾದವನು ಕುಮಾರಗಿರಿರೆಡ್ಡಿ. ಈತನಿಗೆ ವಸಂತರಾಯನೆಂದೂ, ಸರ್ವಜ್ಞ ಚಕ್ರವರ್ತಿ ಎಂದೂ ಬಿರುದುಗಳು. ಇವನು ವಸಂತರಾಜೀಯವೆಂಬ ನಾಟ್ಯಶಾಸ್ತ್ರವನ್ನು ರಚಿಸಿದ್ದಾನೆ. ಇದಕ್ಕೆ ಇವನ ಭಾವಮೈದ ಕಾಟಯವೇಮನು ವ್ಯಾಖ್ಯಾನವನ್ನು ಬರೆದಿದ್ದಾನೆ. ಈ ನಾಟ್ಯಶಾಸ್ತ್ರದಲ್ಲಿ ಸಂಗೀತಶಾಸ್ತ್ರ ವಿಷಯಗಳು ವಿಪುಲವಾಗಿ ಇವೆ.

**ಕುಮಾರವಿಲಸಿತ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಮ ಗ ಮ ದ ನಿ ಪ ದ ನಿ ಸ

ಅ: ಸ ನಿ ದ ಪ ಮ ದ ಮ ಗ ರಿ ಸ

**ಕುಮುದಕ್ರಿಯ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ನಿ ದ ಮ ಗ ರಿ ಸ

**ಕುಮುದತಾಳ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಇದೊಂದು ಬಗೆಯ ತಾಳ.

**ಕುಮುದ್ವತಿ**—ಇದು ೨೨ ಶ್ರುತಿಗಳಲ್ಲಿ ಷಡ್ಜದ ಎರಡನೆಯ ಶ್ರುತಿಯ ಹೆಸರು. ಇದು ಕಾಕಲಿನಿಷಾದಕ್ಕೆ ಸಮನಾಗುತ್ತದೆ.

**ಕುಮುದಪ್ರಿಯ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ದ ನಿ ಪ ಮ ಗ ಸ

**ಕುಮುದಾಭರಣ**—ಈ ರಾಗವು ೩೮ನೆ ಮೇಳಕರ್ತ ಜಲಾರ್ಣವದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ

ಅ: ಸ ದ ನಿ ಪ ಮ ಗ ರಿ ಸ

**ಕುಮುದಮಾಲಿಕಾ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕುಜ**—ನವಗ್ರಹಗಳಲ್ಲಿ ಮೂರನೆ ಗ್ರಹವಾದ ಅಂಗಾರಕ. ಇದಕ್ಕೆ ಮಂಗಳ ಗ್ರಹವೆಂದೂ ಹೆಸರು. ಮುತ್ತುಸ್ವಾಮಿ ದೀಕ್ಷಿತರು ಸುರಟಿ ರಾಗದಲ್ಲಿ ಅಂಗಾರಕ ಮಾಶ್ರಯಾಮ್ಯಹಂ ಎಂಬ ಕೃತಿಯನ್ನು ರಚಿಸಿದ್ದಾರೆ. ಇದು ಅವರ ನವಗ್ರಹ ಕೃತಿಗಳಲ್ಲಿ ಒಂದು ಪ್ರಸಿದ್ಧವಾದ ರಚನೆ.

**ಕುಜಹಸ್ತ**—ಭರತನಾಟ್ಯದ ನವಗ್ರಹ ಹಸ್ತಗಳಲ್ಲಿ ಇದೊಂದು ಹಸ್ತಮುದ್ರೆ. ಎಡಗೈಯಲ್ಲಿ ಸೂಚೀಹಸ್ತವನ್ನೂ, ಬಲಗೈಯಲ್ಲಿ ಮುಷ್ಟಿಹಸ್ತವನ್ನೂ ಪ್ರದರ್ಶಿಸುವುದು ಅಂಗಾರಕ ಹಸ್ತವಾಗುತ್ತದೆ.

**ಕುಮ್ಮಿ**—ಇದು ಚಪ್ಪಾಳೆ ಹೊಡೆಯುತ್ತಾ ಆಡುವ ಒಂದು ಬಗೆಯ ಸಾಮೂಹಿಕ ಜಾನಪದ ನೃತ್ಯ. ಇದನ್ನು ಹೆಣ್ಣುಮಕ್ಕಳು ಸಾಮಾನ್ಯವಾಗಿ ಮದುವೆ ಸಂದರ್ಭಗಳಲ್ಲಿ ಆಡುತ್ತಾರೆ. ಭಜನೆಗಳಲ್ಲಿ ಕೆಲವು ಸಲ ಗಂಡಸರೂ ಆಡುವುದುಂಟು. ಇದರಲ್ಲಿ ೮ ಮಂದಿ ಇರಬೇಕು. ಇದರ ಸಂಗೀತವು ಸಾಮಾನ್ಯವಾಗಿ ರೂಪಕ ತಾಳದಲ್ಲಿರುತ್ತದೆ. ಮುಖ್ಯ ವ್ಯಕ್ತಿ ಹಾಡಿದ್ದರು ಮಿಕ್ಕವರು ಒಟ್ಟಿಗೆ ಹಾಡುತ್ತಾರೆ. ಅನೇಕ ವಿದ್ವಾಂಸರು ಕುಮ್ಮಿ ಹಾಡುಗಳನ್ನು ರಚಿಸಿದ್ದಾರೆ. ಪ್ರಸಿದ್ಧ ದೇವಾಲಯಗಳು ಮತ್ತು ಪುರಾಣದ ಕಥೆಗಳನ್ನು ಕುರಿತು ಕುಮ್ಮಿ ಹಾಡುಗಳಿವೆ. ಚಿದಂಬರಂಕುಮ್ಮಿ, ರಾಮಾಯಣಕುಮ್ಮಿ, ಗಜೇಂದ್ರಮೋಕ್ಷ ಕುಮ್ಮಿ ಮುಂತಾದುವು ಇದಕ್ಕೆ ನಿದರ್ಶನ.

**ಕುಂಚಿತ**—ದಕ್ಷಿಣ ಭಾರತದ ದೇವಾಲಯಗಳ ನವಸಂಧಿ ಉತ್ಸವಗಳಲ್ಲಿ ವರುಣ ಸಂಧಿಯಲ್ಲಿ ಆಡುವ ಒಂದು ಬಗೆಯ ನೃತ್ಯ.

**ಕುಂಚಿತ ಭ್ರಮರೀ**—ಭರತನಾಟ್ಯದ ಏಳು ಬಗೆಯ ಭ್ರಮರೀಗಳಲ್ಲಿ ಇದೊಂದು ವಿಧ. ಮೊಣಕಾಲುಗಳನ್ನು ಮಡಿಸಿಕೊಂಡು ಸುತ್ತುತಿರುಗುವುದಕ್ಕೆ ಕುಂಚಿತ ಭ್ರಮರಿ ಎಂದು ಹೆಸರು.

**ಕುಂಜ್‌ರಾಸ್**—ಇದು ದಸರಾ ಉತ್ಸವದಲ್ಲಿ ಆಡುವ ಮಣಿಪುರಿ ನೃತ್ಯ. ಇದರಲ್ಲಿ ರಾಧಾ ಮತ್ತು ಕೃಷ್ಣ ಲೀಲೆಗಳನ್ನು ಅಭಿನಯಿಸುತ್ತಾರೆ.

**ಕುಂಭಕರ್ಣ**—ಜಯದೇವ ಕವಿಯ ಗೀತಗೋವಿಂದವೆಂಬ ಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವ ರಾಜಾಸ್ಥಾನದ ಮೇವಾರ ಸಂಸ್ಥಾನದ ದೊರೆ ರಾಣಾ ಕುಂಭಕರ್ಣ (೧೪೩೩–೧೪೬೮). ಇವನ ವ್ಯಾಖ್ಯಾನಕ್ಕೆ ರಸಿಕಪ್ರಿಯುವೆಂದು ಹೆಸರು. ಇದಲ್ಲದೆ ಸಂಗೀತಶಾಸ್ತ್ರವನ್ನು ಕುರಿತು ಸಂಗೀತರಾಜ ಅಥವಾ ಸಂಗೀತ ಮೀಮಾಂಸ ಎಂಬ ಬೃಹದ್ಗ್ರಂಥವನ್ನು ಬರೆದಿದ್ದಾನೆ. ಇವನನ್ನು ರಾಣಾಕುಂಭ ಎನ್ನುವುದುಂಟು. ಇವನು ಶ್ರೀಕೃಷ್ಣನ ಪರಮಭಕ್ತ ಮೀರಾಬಾಯಿ ಇವನ ಪತ್ನಿ.

**ಕುಂಭಕೋಣಂ**—ಇದು ತಮಿಳುನಾಡಿನ ತಂಜಾವೂರು ಜಿಲ್ಲೆಯಲ್ಲಿರುವ ಒಂದು ಪ್ರಸಿದ್ಧ ಸ್ಥಳ. ಇಲ್ಲಿ ಹಲವು ಪ್ರಸಿದ್ಧ ಸಂಗೀತ ವಿದ್ವಾಂಸರಿದ್ದರು. ಇಲ್ಲಿ ಸಂಗೀತಶಿಲ್ಪವಿರುವ ಅನೇಕ ದೇವಾಲಯಗಳಿವೆ. ಇಲ್ಲಿಯ ಕುಂಭೇಶ್ವರಸ್ವಾಮಿ ದೇವಾಲಯದಲ್ಲಿ ಕಲ್ಲಿನ ನಾಗಸ್ವರ ಒಂದು ಇದೆ.

**ಕುಂಭತಾಳ**—ತಾಳಸಮುತ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಕುಂಭಿನಿ**—(೧) ಈ ರಾಗವು ೨ನೇ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ

ಆ: ಸ ನಿ ಗ ದ ನಿ ಸ

ಅ: ಸ ನಿ ದ ಗ ರಿ ಸ

(೨) ಅಸಂಪೂರ್ಣಮೇಳ ಪದ್ಧತಿಯಲ್ಲಿ ೪೧ನೆ ಮೇಳದ ಹೆಸರು.

ಆ: ಸ ಗ ರಿ ಗ ಮ ಪ ನಿ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಕುಂಭ-ಕುಂಭಮುಖ**—ರಾಮಾಯಣದಲ್ಲಿ ಉಕ್ತವಾಗಿರುವ ಮಡಕೆಯಂತಿರುವ ವಾದ್ಯ. ಇದನ್ನು ಭೇರಿ, ಪಣವ, ಆನಕ, ಗೋಮುಖ ಮತ್ತು ಶಂಖದೊಡನೆ ನುಡಿಸುತ್ತಿದ್ದರು.

**ಕುಂಭವಾದ್ಯ**—ಇದು ದಕ್ಷಿಣ ಭಾರತದ ದೇವಾಲಯಗಳ ನವಸಂಧಿ ಉತ್ಸವಗಳಲ್ಲಿ ಈಶಾನ್ಯ ಸಂಧಿಯಲ್ಲಿ ನುಡಿಸುವ ವಾದ್ಯ.

**ಕುಟಪ**—ಪುರಾತನ ಕಾಲದಲ್ಲಿ ನಾಟಕಗಳಲ್ಲಿ ಹಿನ್ನೆಲೆ ಪಕ್ಕವಾದ್ಯ ಸಂಗೀತವನ್ನು ಒದಗಿಸುತ್ತಿದ್ದ ವಾದ್ಯವೃಂದ. ಇದನ್ನು ಕುರಿತು ಭರತನ ನಾಟ್ಯಶಾಸ್ತ್ರದಲ್ಲಿ ಹೇಳಲಾಗಿದೆ. ವಾದ್ಯಗಳ ಸಂಖ್ಯೆ ಮತ್ತು ಒಟ್ಟು ನಾದವನ್ನನುಸರಿಸಿ ವಾದ್ಯವೃಂದಗಳನ್ನು ಉತ್ತಮ, ಮಧ್ಯಮ ಮತ್ತು ಕನಿಷ್ಠ ಎಂಬ ಮೂರು ಬಗೆಗಳಾಗಿ ವರ್ಗೀಕರಿಸಲಾಗಿತ್ತು. ಅಭಿನವಗುಪ್ತನು ತನ್ನ ನಾಟ್ಯಶಾಸ್ತ್ರದ ವ್ಯಾಖ್ಯಾನದಲ್ಲಿ ಕುಟಪವನ್ನು ಕುರಿತು ಹೇಳಿದ್ದಾನೆ.

**ಕುಟುಪವಿನ್ಯಾಸ**—ವಾದ್ಯವೃಂದದವರನ್ನು ವೇದಿಕೆಯ ಮೇಲೆ ಕೂರಿಸುವ ಕ್ರಮ.

**ಕುಟುಂಬಿನಿ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ಗ ಮ ದ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಕುಟ್ರಾಲಕುರವಂಜಿ**—ಇದು ೧೮ನೆ ಶತಮಾನದ ಆದಿಭಾಗದಲ್ಲಿದ್ದ ತಿರಿಕೂಟರಾಜಪ್ಪಕವಿರಾಯರ್ ಎಂಬುವರು ರಚಿಸಿದ ತಮಿಳಿನ ಅತ್ಯಂತ ಪುರಾತನ ನೃತ್ಯ

ನಾಟಕ. ಇದರ ಮೂಲ ಸಂಗೀತವು ಹೇಗಿತ್ತು ಎಂಬುದು ತಿಳಿಯದಾಗಿದೆ. ಸಾಹಿತ್ಯದ ದೃಷ್ಟಿಯಿಂದಲೂ ಇದು ಉತ್ತಮವಾಗಿದೆ. ರಾಜಪ್ಪಕವಿರಾಯರ್ ಎಂಬ ಹೆಸರನ್ನು ಈ ಕವಿಯ ಮನೆತನದ ಪ್ರತಿಯೊಬ್ಬ ಮೊಮ್ಮಗನಿಗೆ ಇಡುವ ಪದ್ಧತಿಯಿದೆ.

ಈ ಕುರವಂಜಿಯ ಕಥೆಯನ್ನು ಮೊದಲು ಒಬ್ಬ ಸೂತ್ರಧಾರನು ಒಂದು ಹಾಡನ್ನು ಹಾಡಿ ತಿರಿಕೂಟನಾಥರ್ ಅಥವಾ ಶಿವನ ಮೆರವಣಿಗೆಯನ್ನು ಚಿತ್ರಿಸುತ್ತಾನೆ. ಮುಂದಿನ ದೃಶ್ಯಗಳಲ್ಲಿ ಬರುವ ಸಖಿಯರು ಶಿವನ ಹಿರಿಮೆ, ಮಹಿಮೆಗಳನ್ನು ವಿವರಿಸುತ್ತಾರೆ. ಮುಂದಿನ ದೃಶ್ಯದಲ್ಲಿ ನಾಯಕಿಯಾದ ವಸಂತವಲ್ಲಿಯು ಚೆಂಡಾಡುತ್ತಾ ಪ್ರವೇಶಿಸುವಳು. ಸಖಿಯರು ಅವಳೊಂದಿಗೆ ಆಟದಲ್ಲಿ ಸೇರಿಕೊಳ್ಳುತ್ತಾರೆ. ನಾಯಕಿಯು ದೂರದಿಂದ ಶಿವನ ಮೆರವಣಿಗೆಯನ್ನು ನೋಡಿ ಅವನನ್ನು ಮೋಹಿಸುತ್ತಾಳೆ. ಒಂದು ಒಳ್ಳೆಯ ಹಾಡಿನಲ್ಲಿ ಶಿವನ ಸೌಂದರ್ಯವನ್ನು ವರ್ಣಿಸುತ್ತಾಳೆ. ಪ್ರೇಮಾತಿರೇಕದಿಂದ ಕುಸಿದು ಬೀಳುತ್ತಾಳೆ. ಸಖಿಯರು ಸಮಾಧಾನ ಪಡಿಸುತ್ತಾರೆ. ಅವಳ ಕೋರಿಕೆಯಂತೆ ಒಬ್ಬಳು ಶಿವನ ಬಳಿಗೆ ಹೋಗಿ ಅಭಯದ ಸಂದೇಶವನ್ನು ತರುತ್ತಾಳೆ. ಸ್ವಲ್ಪ ಸಮಯದ ನಂತರ ಅಲ್ಲಿಗೆ ಕೊರವಂಜಿಯೊಬ್ಬಳು ಬರುತ್ತಾಳೆ. ತನ್ನ ಪ್ರಾಂತ್ಯದ ಪ್ರಕೃತಿ ಸೌಂದರ್ಯ, ಕುಟ್ರಾಲದ ಬೆಟ್ಟಗುಡ್ಡಗಳು, ಜಲಪಾತ ಇತ್ಯಾದಿಗಳ ಸೊಬಗನ್ನು ವರ್ಣಿಸುತ್ತಾಳೆ ನಾಯಕಿಯ ಹಸ್ತವನ್ನು ನೋಡಿ ಅವಳ ಭವಿಷ್ಯವನ್ನು ಕುರಿತು ವಸಂತವಲ್ಲಿಯ ಆಶೋತ್ತರಗಳು ಶೀಘ್ರವಾಗಿ ಈಡೇರುವವೆಂದು ಹೇಳುತ್ತಾಳೆ. ಇದನ್ನು ಕೇಳಿ ಹರ್ಷಿತಳಾದ ನಾಯಕಿಯು ಅವಳಿಗೆ ಬೆಲೆಬಾಳುವ ವಸ್ತುಗಳನ್ನು ಕೊಟ್ಟು ಪುರಸ್ಕರಿಸುತ್ತಾಳೆ.

**ಕುಡುಕ್ಕತಾಳ** —ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಒಂದು ಬಗೆಯ ತಾಳ. ಎರಡು ದ್ರುತ ಮತ್ತು ಎರಡು ಲಘುಗಳು ಇದರ ಅಂಗಗಳು. ಇದರ ಒಂದಾವರ್ತಕ್ಕೆ ೩ ಮಾತ್ರೆಗಳು ಅಥವಾ ೧೨ ಅಕ್ಷರಕಾಲ.

**ಕುಡುಮಿನಾಥಭರತಂ** —ಇದು ಕುಡುಮಿಯಾ ಮಲೈ ಶಾಸನವನ್ನು ಕುರಿತು ಬರೆದ ಒಂದು ಹಸ್ತಪ್ರತಿ.

**ಕುಡ ಪಂಚಮುಖಿ** —ಪಂಚಮುಖವಾದ್ಯದ ಹೆಸರು.

**ಕುಡುಮಿಯಾ ಮಲೈ ಶಾಸನ** —ತಮಿಳುನಾಡಿನ ಪುದುಕೋಟೆಯ ಒಂದು ಸಣ್ಣಗುಡ್ಡದ ಬಂಡೆಯೊಂದರ ಮೇಲೆ ಸಂಗೀತ ಸಂಬಂಧವಾದ ಶಾಸನ ಒಂದಿದೆ. ಇದನ್ನು ೭ನೆ ಶತಮಾನದಲ್ಲಿ ರುದ್ರಾಚಾರ್ಯನ ಶಿಷ್ಯನಾಗಿದ್ದ ೧ನೆ ಮಹೇಂದ್ರವರ್ಮ ಪಲ್ಲವರಾಜನು ಕೆತ್ತಿಸಿದನು ಪುದುಕೋಟೆಯ ತಿರುಮಾಯಂನಲ್ಲಿರುವ ಮತ್ತೊಂದು ಅಸಂಪೂರ್ಣ ಸಂಗೀತ ಶಾಸನ ಒಂದಿದೆ. ಇದನ್ನು ಬಿಟ್ಟರೆ ಕುಡುಮಿಯಾ ಮಲೈ ಶಾಸನವು ಇಡೀ ಭಾರತದಲ್ಲಿರುವ ಏಕೈಕ ಸಂಗೀತ ಶಾಸನ. ಇದರಲ್ಲಿ ಮತಂಗನ ಬೃಹದ್ದೇಶಿಯನ್ನನುಸರಿಸಿ ಸಪ್ತಗ್ರಾಮಗಳಿಗೆ ಉದಾಹರಣೆಗಳನ್ನು ಕೊಟ್ಟಿರುವನು. ಮಧ್ಯಮ ಗ್ರಾಮ, ಷಡ್ಜಗ್ರಾಮ, ಷಾಡವ, ಸಾಧಾರಿತ, ಪಂಚಮ, ಕೈಶಿಕಮಧ್ಯಮ

ಮತ್ತು ಕೈಶಿಕಿ ಎಂಬ ರಾಗಗಳಿಗೆ ಸಂಕ್ಷಿಪ್ತವಾದ ಸಂಚಾರಗಳನ್ನು ಕೊಟ್ಟಿರುವನು. ಇವು ತಾನಗಳ ರೂಪದಲ್ಲಿವೆ. ತಾನದ ಪ್ರತಿ ಸ್ವರಗುಚ್ಛದಲ್ಲಿ ನಾಲ್ಕು ಸ್ವರಗಳಿವೆ. (ಚತುಷ್ಪ್ರಹಾರ ಸ್ವರಗ್ರಾಮಾಃ) (E. I. pp. 226–237). ಈ ಶಾಸನವನ್ನು ಬರೆಸಿದ ಕಾಲದಲ್ಲಿ ಸಂಗೀತವು ಉತ್ತರ ಮತ್ತು ದಕ್ಷಿಣಾದಿ ಎಂದು ವಿಭಾಗವಾಗಿರಲಿಲ್ಲ ವಾದ್ದರಿಂದ ಇದು ಎರಡು ಪದ್ಧತಿಗಳಿಗೂ ಅನ್ವಯವಾಗುವಂತಹುದು.

ಮಹೇಂದ್ರವರ್ಮನಿಗೆ ಸಂಕೀರ್ಣಜಾತಿ ಎಂಬ ಬಿರುದಿತ್ತು. ಇದನ್ನು ಅವನು ಮಿಶ್ರಜಾತಿಯವನೆಂದು ಅಪಾರ್ಥ ಮಾಡಿದ್ದಾರೆ. ದಕ್ಷಿಣಾದಿ ಸಂಗೀತ ಪದ್ಧತಿಯಲ್ಲಿ ಲಘುಜಾತಿ ಭೇದದ ವಿಚಾರವು ಇತ್ತೀಚಿನದು. ಧ್ರುವ, ಮಠ್ಯ, ರೂಪಕ, ಝಂಪ, ತ್ರಿಪುಟ, ಅಟ ಮತ್ತು ಏಕತಾಳವೆಂಬ ಸಪ್ತತಾಳಗಳನ್ನು ಲಘುಜಾತಿಭೇದದ ಪ್ರಯೋಗದಿಂದ ೩೫ ತಾಳಗಳಾಗಿ ಆಧುನಿಕ ಸಂಗೀತದಲ್ಲಿ ವಿಸ್ತರಿಸಲಾಗಿದೆ. ೧೦೮ ತಾಳಗಳ ಪದ್ಧತಿಯು ಇದಕ್ಕಿಂತ ಹಿಂದಿನದು ಮತ್ತು ೩೫ ತಾಳಗಳ ಪದ್ಧತಿಯು ಐದು ಶತಮಾನಗಳಿಗಿಂತ ಹಿಂದಿನದಲ್ಲ. ೧೦೮ ತಾಳಗಳ ಪದ್ಧತಿಯಲ್ಲಿ ಲಘುವಿಗೆ ಒಂದೇ ಸಮನಾದ ಮೌಲ್ಯ ಅಂದರೆ ಚತುರಶ್ರವಿದೆ ಆಗಾಗ್ಗೆ ಖಂಡಲಘು ಮತ್ತು ತಿಶ್ರ ಲಘುವನ್ನು ಬಳಸುವುದುಂಟು. ಸಂಕೀರ್ಣ ಲಘುವಿನ ಬಳಕೆಯಂತೂ ಇಲ್ಲ. ಸಂಕೀರ್ಣಜಾತಿ ಲಘುವನ್ನು (೯ ಅಕ್ಷರ ಕಾಲದ ಲಘು) ೭ನೆ ಶತಮಾನದ ಸಂಗೀತದ ಚರಿತ್ರೆಗೆ ಸೇರಿಸುವುದು ಚರಿತ್ರೆಯ ದುರುಪಯೋಗ ಮಾಡಿದಂತೆ. ಪುರಾತನ ಕಾಲ ದಲ್ಲಿ ರಾಗಕ್ಕೆ ಜಾತಿ ಎನ್ನುತ್ತಿದ್ದರು. ಭರತನು ಜಾತಿಗಳಿಗೆ ದಶಲಕ್ಷಣಗಳನ್ನು ಹೇಳಿದ್ದಾನೆ. ಅವನು ರಾಗ ಎಂಬ ಪದವನ್ನು ಬಳಸಿಲ್ಲ. ರಾಮಾಯಣದಲ್ಲೂ ರಾಗ ಎನ್ನುವ ಬದಲು ಜಾತಿ ಎಂದು ಹೇಳಿದೆ. ಕಾಳಿದಾಸನ ಕಾಲದಲ್ಲಿ ರಾಗ ಎಂಬ ಪದವು ರೂಢಿಗೆ ಬಂದಿತು. ಮತಂಗನು ರಾಗವನ್ನು ವಿವರಿಸಿರುವವರಲ್ಲಿ ಮೊದಲಿಗನು; ಇವನು ರಾಗಗಳನ್ನು ಶುದ್ಧ, ಛಾಯಾಲಗ ಮತ್ತು ಸಂಕೀರ್ಣ ಎಂದು ವರ್ಗೀಕರಣ ಮಾಡಿದ್ದಾನೆ. ಆದ್ದರಿಂದ ಸಂಕೀರ್ಣಜಾತಿ ಎಂಬ ಅವನ ಬಿರುದು ಅವನು ಸಂಕೀರ್ಣ ರಾಗಗಳಲ್ಲಿ ಅತ್ಯಂತ ಪ್ರವೀಣನಾಗಿದ್ದನು ಎಂದು ಸೂಚಿಸುತ್ತದೆ. ಬೇರೆ ರಾಗದ ಛಾಯೆಯಿಲ್ಲದಿರುವುದು ಶುದ್ಧರಾಗ. ಇದರಂತೆ ಮೋಹನರಾಗವು ಶುದ್ಧರಾಗಕ್ಕೆ ಉದಾಹರಣೆ. ಇನ್ನೊಂದು ರಾಗದ ಛಾಯೆ ಇರುವುದು ಛಾಯಾಲಗರಾಗ. ಉದಾಹರಣೆ : ಸೌರಾಷ್ಟ್ರರಾಗ. ಸಂಕೀರ್ಣರಾಗವು ಒಂದು ಮಿಶ್ರರಾಗ. ಇದರಲ್ಲಿ ೨–೩ ರಾಗಗಳ ಛಾಯೆ ಕಂಡುಬರುತ್ತದೆ. ಉದಾಹರಣೆ : ದ್ವಿಜಾವಂತಿ, ಘಂಟಾ.

ಈ ಶಾಸನದಲ್ಲಿ ಹೇಳಿರುವ ಮೊಟ್ಟಮೊದಲನೆಯ ರಾಗ ಮಧ್ಯಮಗ್ರಾಮ ರಾಗ. ಇದರ ಪ್ರಥಮ ಮೂರ್ಛನವು ಸೌವೀರ ಎಂಬ ಮಧ್ಯಮ ಮೂರ್ಛನವಾಗಿದೆ. ಮಹೇಂದ್ರವರ್ಮನು ಮಧ್ಯಮಗ್ರಾಮ ರಾಗವನ್ನು ಪ್ರಥಮರಾಗವಾಗಿ ಆರಿಸಿಕೊಂಡಿರು ವುದಕ್ಕೆ ಕಾರಣ ಅದು ಪುರಾತನ ತಮಿಳು ಸಂಗೀತದ ಶುದ್ಧಸಪ್ತಕವಾಗಿದೆ. ಈ ಸ್ವರ ಗಳ ಸಹಾಯದಿಂದ ಭಾರತೀಯ ಸಂಗೀತದ ದ್ವಾವಿಂಶತಿ ಶ್ರುತಿಗಳನ್ನು ಗೊತ್ತು

ಮಾಡಬಹುದು. ಸಂಗೀತವನ್ನು ಬರೆಯಲು ಸೂಕ್ತವಾದ ಸಂಜ್ಞಾಲಿಪಿಯು ಪಾಶ್ಚಾತ್ಯ ಪದ್ಧತಿಗಿಂತ ಮೂರು ಶತಮಾನಗಳ ಹಿಂದೆಯೇ ರೂಢಿಯಲ್ಲಿತ್ತೆಂದು ಹೇಳಬಹುದು. ಈ ಶಾಸನದಲ್ಲಿ ಸ್ವರದ ಒಂದು ಶುದ್ಧ ಮತ್ತು ಮೂರು ವಿಕೃತ ಸ್ವರೂಪಗಳನ್ನು ಭರತನ ಧ್ರುವವೀಣೆ ಮತ್ತು ಚಲವೀಣೆಗೆ ಸಂಬಂಧಿಸಿದ ಪ್ರಯೋಗದ ಆಧಾರದ ಮೇಲೆ ಕೊಡಲಾಗಿದೆ. ಷಡ್ಜದ ನಾಲ್ಕು ಬಗೆಯನ್ನು ಸ, ಸಿ, ಸು, ಸೆ ಎಂದೂ, ರಿಷಭದ ನಾಲ್ಕು ಬಗೆಯನ್ನು ರ, ರಿ, ರು, ರೆ ಎಂದು ಸೂಚಿಸಲಾಗಿದೆ

ಮಹೇಂದ್ರವರ್ಮನಿಗೆ ಶ್ರುತಿಗಳು ೨೨ ಎಂದು ತಿಳಿದಿತ್ತು. ೨೮ ಶ್ರುತಿಗಳಲ್ಲಿ ೬ ಶ್ರುತಿಗಳು ಇತರ ಶ್ರುತಿಗಳ ಪುನರುಕ್ತಿಗಳಾಗುತ್ತವೆ. ಷಡ್ಜ ಗ್ರಾಮದ ಸ್ವರಗಳು ನಿಯತ ಶ್ರುತಿಗಳಾಗಿರುವುದರಿಂದ ಶುದ್ಧ ಸ್ವರಸಪ್ತಕಗಳ ಅಂತರಗಳನ್ನು ಅನುಸರಿಸಿ ಶುದ್ಧ ಸ್ವರ ಸಂಕೇತಗಳನ್ನು ಗೊತ್ತುಮಾಡಿ ಇತರ ಶ್ರುತಿಗಳನ್ನು ತಾರ್ಕಿಕವಾಗಿ ಹಂಚಿದ್ದಾನೆ. ಪ್ರತಿ ಮಧ್ಯಮವು ಶಾಸನದ ಏಳು ರಾಗಗಳಲ್ಲಿ ಶುದ್ಧ ಮಧ್ಯಮದ ಜೊತೆಗೆ ಬರುತ್ತದೆ. ಇಲ್ಲಿ ಸೂಚಿಸಲಾಗಿರುವ ಸಂಗೀತವನ್ನು ಒಂದಾವರ್ತಕ್ಕೆ ೮ ಮಾತ್ರೆ ಅಥವಾ ೭ ಮಾತ್ರೆಗಳಿರುವ ತಾಳದಲ್ಲಿ ಹಾಡಬಹುದು. ಇದಕ್ಕೆ ಸಮನಾದ ಒಂದು ಸಪ್ತತಾಳಗೀತೆ ನಾಟರಾಗದ 'ಗಾನವಿದ್ಯಾದುರಂಧರ' ಎಂಬುದು. ಇದು ಧ್ರುವ ತಾಳದಲ್ಲಿದ್ದರೂ ಮಠ್ಯ, ರೂಪಕ, ಝಂಪ, ತ್ರಿಪುಟ, ಅಟ ಮತ್ತು ಏಕತಾಳದಲ್ಲಿ ಹಾಡಬಹುದು. ಶ್ಯಾಮಾಶಾಸ್ತ್ರಿಗಳ ಸಾವೇರಿರಾಗದ 'ಶಂಕರಿಶಂಕುರು' ಎಂಬ ಕೃತಿಯನ್ನು ರೂಪಕ ತಾಳ ಮತ್ತು ತಿಶ್ರಗತಿ ಆದಿತಾಳದಲ್ಲಿ ಹಾಡಬಹುದು. ದ್ವಿತಾಳ ಪಲ್ಲವಿಗಳು ಇದಕ್ಕೆ ನಿದರ್ಶನ.

ಈ ಶಾಸನದ ಸಂಗೀತವು ಅಭ್ಯಾಸಗಾನಕ್ಕೆ ಸೇರಿದೆ. ವೀಣೆಯನ್ನು ನುಡಿಸುವ ಕೌಶಲ್ಯವನ್ನು ಉತ್ತಮಗೊಳಿಸುವುದು ಇದರ ಉದ್ದೇಶ. ಇವು ಪುರಾತನ ಅಲಂಕಾರದ ಮಾದರಿಗಳಾಗಿವೆ ಇಲ್ಲಿ ಉಪಯೋಗಿಸಿರುವ ಸ, ಸಿ, ಸು, ಸೆ ಸಂಕೇತಗಳು ಷಡ್ಜ ಅ—ಏಕ, ಇ—ದ್ವಿ, ಉ—ತ್ರಿ, ಎ—ಚತುಶ್ರುತಿ ಹೀಗೆ ಸಪ್ತಸ್ವರಗಳಲ್ಲಿಯೂ ೨೮ ಭೇದಗಳನ್ನು ಸೂಚಿಸುತ್ತವೆ. ಇವು ಪರಿವಾದಿನೀ ಎಂಬ ವೀಣೆಯನ್ನು ಅನುಸರಿಸಿವೆ ಎಂದು ಹೇಳಿದ್ದಾನೆ. ಇಂತಹ ವೀಣೆಯ ಶಿಲ್ಪವು ಹಳೇಬೀಡು ಮತ್ತು ಬೇಲೂರಿನಲ್ಲಿವೆ. ಈ ಶಾಸನದ ಮುಖ್ಯಾಂಶಗಳು ಹೀಗಿವೆ :—

| | | | |
|---|---|---|---|
| ೧. | ಮಧ್ಯಮಗ್ರಾಮ | — | ೫ ಸಾಲುಗಳು |
| ೨. | ಷಡ್ಜಗ್ರಾಮ | — | ೭ ಸಾಲುಗಳು |
| ೩. | ಷಾಡವ | — | ೪ ಸಾಲುಗಳು |
| ೪. | ಸಾಧಾರಿತ | — | ೫ ಸಾಲುಗಳು |
| ೫. | ಪಂಚಮ | — | ೬ ಸಾಲುಗಳು |
| ೬. | ಕೈಶಿಕಿಮಧ್ಯಮ | — | ೪ ಸಾಲುಗಳು |
| ೭. | ಕೈಶಿಕಿ | — | ೭ ಸಾಲುಗಳು |

ಒಟ್ಟು ೩೮ ಸಾಲುಗಳೂ, ನಾಲ್ಕು ಸ್ವರಗಳ ೧೬ ಸಾಲುಗಳೂ ಪ್ರತಿಸಾಲಿನಲ್ಲಿ ೭೪ ಸ್ವರಗಳಿವೆ.

ಈ ಶಾಸನದಲ್ಲಿರುವ ಸಂಗೀತವನ್ನು ರುದ್ರಾಚಾರ್ಯನ ಶಿಷ್ಯನಾದ ದೊರೆಯು ಸಂಗೀತಾಭ್ಯಾಸಿಗಳಿಗಾಗಿ ರಚಿಸಿದನು. ಪರಿವಾದಿನೀ ವೀಣೆಯನ್ನು ನುಡಿಸುವುದನ್ನು ಕಲಿಯುವುದು ಇದರ ಗುರಿ. ಇಲ್ಲಿರುವ ಸ್ವರಗುಚ್ಛಗಳಲ್ಲಿ ಹಲವು ದಾಟು ಪ್ರಯೋಗ ಗಳಿವೆ. ಇತರ ರಾಗಗಳ ಸ್ವರಗುಚ್ಛಗಳನ್ನು ಕಲಾತ್ಮಕವಾಗಿ ಸೇರಿಸಲಾಗಿದೆ. ವಿಶ್ರ ಜಾತಿಗಳು ೧೩ನೆ ಶತಮಾನದ ಗ್ರಂಥವಾದ ಸಂಗೀತರತ್ನಾಕರದಲ್ಲಿ ಉಕ್ತವಾಗಿದೆ. ಈ ಶಾಸನದಲ್ಲಿರುವ ಎಲ್ಲಾ ಸ್ವರಗಳೂ ಹ್ರಸ್ವಸ್ವರಗಳಾಗಿದ್ದು ಅವುಗಳ ವ್ಯಾಪ್ತಿಯು ಎರಡು ಸ್ಥಾಯಿಗಳಿಗೆ ಮೀಸಲಾಗಿದೆ. ಇಲ್ಲಿರುವ ಸ್ವರಗುಚ್ಛಗಳು ಪುರಾತನ ಸಂಗೀತದ ಸ್ಥಾಯಿ, ಆರೋಹಿ, ಅವರೋಹಿ ಮತ್ತು ಸಂಚಾರಿ ವರ್ಣಗಳಿಗೆ ಮಾದರಿ ಗಳಾಗಿವೆ.

**ಕುಂಡಲಿಮಣಿದರ್ಪಣಂ**—ಇದೊಂದು ಸಂಸ್ಕೃತ ಗ್ರಂಥ. ಇದರಲ್ಲಿ ಸಂಗೀತಕ್ಕೆ ಸಂಬಂಧಿಸಿದ ಕೆಲವು ಅಧ್ಯಾಯಗಳಿವೆ.

**ಕುಂತಳ**—(೧) ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ನಿ ಪ ಮ ಗ ಮ ರಿ ಸ

(೨) ಕೀಲುಕುದುರೆ ಕುಣಿತದಲ್ಲಿ ಬಾರಿಸುವ ಮದ್ದಳೆ.

**ಕುಂತಳಗೀರ್ವಾಣಿ**—ಈ ರಾಗವು ೬೮ನೆಯ ಮೇಳಕರ್ತ ಜ್ಯೋತಿ ಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ಮ ಗ ರಿ ಸ

**ಕುಂತಳ ಘಂಟಾಣ**—ಈ ರಾಗವು ೭೦ನೆ ಮೇಳಕರ್ತ ನಾಸಿಕಾಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಪ ಸ

ಅ: ಸ̇ ನಿ ಪ ಮ ರಿ ಸ

**ಕುಂತಳ ದೀಪರಂ**—ಈ ರಾಗವು ೪೮ನೆ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ̇

ಅ: ಸ̇ ನಿ ದ ನಿ ಪ ಮ ಗ ಸ

**ಕುಂತಳಧನ್ಯಾಸಿ**—ಈ ರಾಗವು ೪೭ನೆ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಕುಂತಳಕಾಂಭೋಜಿ**—ಈ ರಾಗವು ೧೩ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ಸ

**ಕುಂತಳಕುಸುಮಾವಳಿ**—ಈ ರಾಗವು ೬೫ನೆ ಮೇಳಕರ್ತ ಮೇಚ ಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಪ ಸ

ಅ: ಸ ನಿ ದ ನಿ ಪ ಮ ಗ ಸ

**ಕುಂತಳಭವಾನಿ**—ಈ ರಾಗವು ೬೭ನೆ ಮೇಳಕರ್ತ ಸುಚರಿತ್ರದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಪ ಸ

ಅ: ಸ ನಿ ದ ನಿ ಪ ಮ ರಿ ಸ

**ಕುಂತಳಭೋಗಿ**—ಈ ರಾಗವು ೪೧ನೆ ಮೇಳಕರ್ತ ಪಾವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ನಿ ಸ

ಅ: ಸ ನಿ ದ ನಿ ಮ ರಿ ಗ ಸ

**ಕುಂತಳರಾಮ** - ಈ ರಾಗವು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಕುಂತಳರಂಜನಿ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕುಂತಳಸಾರಂಗ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ ಇದೊಂದು ನಿಷಾದಾಂತ್ಯರಾಗ.

ಆ: ನಿ ಸ ರಿ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ

**ಕುಂತಳಸಿಂಹಾರವ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ಮ ದ ನಿ ಸ

ಅ : ಸ ದ ಪ ಮ ರಿ ಸ

**ಕುಂತಳಸ್ವರಾವಳಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ.

ಆ : ಸ ಗ ಮ ಪ ದ ನಿ ಸ

ಅ : ಸ ನಿ ದ ನಿ ಪ ಮ ಗ ರಿ ಸ

**ಕುಂತಳಶ್ರೀಕಂಠಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ

ಆ : ಸ ಗ ಮ ಪ ದ ನಿ ಸ

ಅ : ಸ ನಿ ಪ ಮ ಗ ರಿ ಸ

**ಕುಂತಳವರಾಳಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ಮ ಪ ದ ನಿ ದ ಸ

ಅ : ಸ ನಿ ದ ಪ ಮ ಸ

ಆರೋಹಣಾವರೋಹಣಗಳಲ್ಲಿ ರಿಷಭಗಾಂಧಾರಗಳು ವರ್ಜ್ಯವಾಗಿರುವ ಅಪರೂಪವಾದ ಒಂದು ಉಪಾಂಗರಾಗ. ಮಧ್ಯಮವು ಮುಖ್ಯ ಜೀವಸ್ವರ ಮತ್ತು ನ್ಯಾಸಸ್ವರ. ನಿಷಾದವು ಜೀವಸ್ವರ ಮತ್ತು ಧೈವತವು ಮತ್ತೊಂದು ನ್ಯಾಸಸ್ವರ. ಸುಂದರವಾದ ಸಾರ್ವಕಾಲಿಕರಾಗ ತ್ಯಾಗರಾಜರು ಈ ರಾಗವನ್ನು ಪ್ರಚಾರಕ್ಕೆ ತಂದರು. ಕೆಲವು ಪ್ರಸಿದ್ಧ ರಚನೆಗಳು.

| | | | | |
|---|---|---|---|---|
| ಶರ ಶರ ಸಮರೈ | — | ಆದಿ | — | ತ್ಯಾಗರಾಜ |
| ಕಲಿನರೊಲಕು | — | ದೇಶಾದಿ | — | ತ್ಯಾಗರಾಜ |
| ಚಿಂತನೇಸದಾ | — | ದೇಶಾದಿ | — | ತ್ಯಾಗರಾಜ |
| ಭೋಗೀಂದ್ರಶಾಯಿನಂ | — | ಆದಿ | — | ಸ್ವಾತಿತಿರುನಾಳ್ ಮಹಾರಾಜ |
| ತುಂಗತರಂಗೇಗಂಗೇ | — | ಆದಿ | — | ಸದಾಶಿವಬ್ರಹ್ಮೇಂದ್ರ |
| ಮಾಲೇವಣಿವಣ್ಣಾ | — | ಆದಿ | — | ತಿರುಪ್ಪಾವೈ-ಆಂಡಾಳ್ |

**ಕುಂಜರಿರಾಜ**—ಇವನು ತಿರುವಾಂಕೂರಿನ ಆಯಿಲಂ ತಿರುನಾಳ್ ಮಹಾರಾಜನ ಆಸ್ಥಾನದಲ್ಲಿದ್ದ ಸ್ವರಬತ್ ವಿದ್ವಾಂಸ

**ಕುಂದರ**—ಇದು ರಾಗತಾಳಚಿಂತಾಮಣಿ ಎಂಬ ಗ್ರಂಥದಲ್ಲಿ ಹೇಳಿರುವ ಒಂದುತಾಳ.

**ಕುರುಚರ್ಝಂಪೆ**—ಇದು ತೆಲುಗು ಯಕ್ಷಗಾನಗಳಲ್ಲಿ ಬರುವ ಒಂದು ಬಗೆಯ ತಾಳ.

**ಕುರುಝ್ಝಂಪೆ**—ಇದೊಂದು ಜಾನಪದ ತಾಳ. ಇದರಲ್ಲಿ ಒಂದು ದ್ರುತ, ಖಂಡಲಘು, ತಿಶ್ರಲಘುವಿದೆ. ಇದರ ಒಂದಾವರ್ತಕ್ಕೆ ೧೦ ಅಕ್ಷರಕಾಲ ಈ ತಾಳದಲ್ಲಿ ಜಕ್ಕಿನಿದರುಗಳಿವೆ.

**ಕುರಟ್ಟಿಆಟ್ಟಂ**—ಕೇರಳದ ಒಂದು ಬಗೆಯ ನೃತ್ಯ. ಇದರಲ್ಲಿ ಕೊರವಂಜಿಯ ಪಾತ್ರಗಳಿವೆ.

**ಕುರವೈಕೂತ್ತು**—ಇದು ತಮಿಳುನಾಡಿನ ಒಂದು ಜಾನಪದ ನೃತ್ಯ. ೭–೯ ಮಂದಿ ಹೆಣ್ಣು ಮಕ್ಕಳು ಅಥವಾ ಸ್ತ್ರೀಯರು ಪರಸ್ಪರ ಕೈ ಹಿಡಿದುಕೊಂಡು ಇದನ್ನಾಡುತ್ತಾರೆ. ಸಂಭವಿಸಬಹುದಾದ ಅಪಾಯ ಅಥವಾ ಅಶುಭದ ನಿವಾರಣೆಗಾಗಿ ಈ ಕುಣಿತವನ್ನು ಕುಣಿಯುವರು.

**ಕುರುದೇಶ್ಯ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕುರುಳ**—ಇದು ಪಂಚದಶ ಗಮಕಗಳಲ್ಲಿ ಒಂದು ವಿಧವಾದ ಗಮಕ. ಒಂದು ಸ್ವರಸ್ಥಾನದಿಂದ ಅದರ ಮೇಲಿನ ಸ್ವರಸ್ಥಾನದ ಸ್ವರವನ್ನುಂಟುಮಾಡುವುದು.

**ಕುರಂ**—ಇದೊಂದು ಜನಪದ ಸಂಗೀತದರಾಗ. ಇದನ್ನು ಗುಡ್ಡಗಾಡಿನ ಪ್ರದೇಶದ ಜನರು ಹಾಡುತ್ತಾರೆ. ಇದು ಹೆಚ್ಚುಕಡಿಮೆ ಕುರಂಜಿರಾಗದಂತಿದೆ. ಕುರಂ ನ ಸಾಹಿತ್ಯವು ಪದ್ಯರೂಪದಲ್ಲಿದೆ. ಇವುಗಳಲ್ಲಿ ಕಥೆಗಳಿವೆ.
ಉದಾ—ಮೀನಾಕ್ಷಿ ಕುರಂ, ದ್ರೌಪದಿ ಕುರಂ

**ಕುರಂಜಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ನಿ ಸ ರಿ ಗ ಮ ಪ ದ

ಅ: ದ ಪ ಮ ಗ ರಿ ಸ ನಿ ಸ

ಉಪಾಂಗ ಮತ್ತು ಧೈವತಾಂತ್ಯರಾಗ. ಸರ್ವಸ್ವರಗಮಕವರಿಕರಕ್ತಿರಾಗ. ಮತ್ತೊಂದು ಮತದಂತೆ ಇದರ ಆರೋಹಣಾವರೋಹಣಗಳು ಈ ರೀತಿ ಇವೆ.

ಆ: ಸಾ ರಿ ಗ ಮ ಗ ಮ ಪ ನಿ ನೀ ಸ

ಅ: ಸ ನಿ ಪ ನಿ ದ ದ ಪ ಮ ಗ ರಿ ಸಾ

ಇದು ಪುರಾತನ ರಾಗ. ಜಾನಪದ ಸಂಗೀತದ ಕುರಂ ರಾಗದಿಂದ ಬಂದಿದೆ. ಸಂಗೀತ ರತ್ನಾಕರ ಮತ್ತು ಸಂಗೀತಮಕರಂದವೆಂಬ ಗ್ರಂಥಗಳಲ್ಲಿ ಉಕ್ತವಾಗಿದೆ. ಲಾಲಿಹಾಡು, ಮದುವೆಹಾಡು, ನಾಮಾವಳಿಗಳು ಈ ರಾಗದಲ್ಲಿ ವಿಶೇಷವಾಗಿವೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು.

ಶ್ರೀವೇಣುಗೋಪಾಲ — ವಿ. ಭಾಪು — ಮುತ್ತುಸ್ವಾಮಿದೀಕ್ಷಿತರು
ಶಿವದೀಕ್ಷಾಪರಂ — — ಘನಂ ಶೀನಯ್ಯ
ಪರಮಾತ್ಮಾಹರೇ —
ದರು : ಇದಿಗೋಕೊಲುವೈಯುನ್ನದಿ — ಪಲ್ಲಕ್ಕಿಸೇವಾಪ್ರಬಂಧಂ.

**ಕುರಿಂಜಿಯಾಳ್**—ಪುರಾತನ ತಮಿಳು ಸಂಗೀತದ ಒಂದು ರಾಗ

**ಕುರುಂದಪಂಚಮ**—ಪುರಾತನ ತಮಿಳು ಸಂಗೀತದ ಮರುದಯಾಳಿನ ಒಂದು ಜನ್ಯ.

**ಕುರವಂಜಿ**—ಇದು ತಮಿಳಿನ ನೃತ್ಯನಾಟಕ. ಇವು ಹಾಸ್ಯಭರಿತ ಮತ್ತು ಮನೋರಂಜಕವಾದುವು. ಸಂಗೀತದ ದೃಷ್ಟಿಯಿಂದ ಭಾಗವತ ಮೇಳನಾಟಕ ಮತ್ತು ಹಳ್ಳಿಯ ನೃತ್ಯನಾಟಕ ಇವೆರಡರ ಮಧ್ಯದ ಸ್ಥಾನವನ್ನು ಪಡೆದಿವೆ. ಕೆಲವು ಕುರವಂಜಿಗಳ ಸಾಹಿತ್ಯ ಉತ್ತಮವಾದಾಗಿದೆ. ಇವುಗಳಲ್ಲಿ ಉತ್ತಮ, ಮಧ್ಯಮ ಮತ್ತು ಲಘು ಸಂಗೀತವಿದೆ. ಇವುಗಳ ಮುಖ್ಯವಿಷಯ ಒಬ್ಬ ಸ್ತ್ರೀ ಅಲ್ಲಿಯ ದೊರೆ. ಮಂತ್ರಿ ಅಥವಾ ದೇವಾಲಯದ ಮುಖ್ಯ ದೇವರನ್ನು ಪ್ರೇಮಿಸಿ ಕೊನೆಗೆ ತನ್ನ ಇಷ್ಟಾರ್ಥವನ್ನು ಪಡೆಯುತ್ತಾಳೆ ಈ ಪ್ರಸಂಗಗಳನ್ನು ಬಳಸಿಕೊಂಡು ಕವಿಯು ಪ್ರೇಮಿಯ ವಿರಹವನ್ನು ಚಿತ್ರಿಸುತ್ತಾನೆ ಮನ್ಮಥ ಮತ್ತು ಅವನ ಸೇವಕಿಯರನ್ನು ಉದ್ದೇಶಿಸಿ ನಾಯಕನನ್ನು ಒಲಿಸಿಕೊಡಬೇಕೆಂದು ಪ್ರಾರ್ಥಿಸುವ ಪದ್ಯಗಳಿವೆ. ಕೊನೆಯಲ್ಲಿ ಕುರವಂಜಿಯು ಒಂದು ನಾಯಕಿಯ ಹಸ್ತರೇಖೆಗಳನ್ನು ನೋಡಿ ಅವಳ ಇಷ್ಟಾರ್ಥವು ಕೈಗೂಡುವುದೆಂದು ಭವಿಷ್ಯ ನುಡಿಯುತ್ತಾಳೆ. ಕುರವಂಜಿಯು ವಾಸವಿರುವ ಬೆಟ್ಟಗುಡ್ಡ ಪ್ರದೇಶ, ಅವಳ ಕುಲಕಸಬು, ಭವಿಷ್ಯ ನುಡಿಯುವುದರಲ್ಲಿ ತನ್ನ ಜನರ ಪ್ರಾವೀಣ್ಯ, ಅಸಾಧ್ಯವಾದ ಕೆಲಸವನ್ನು ಸಾಧಿಸುವ ಶಕ್ತಿ ಇತ್ಯಾದಿಗಳನ್ನು ಬಹುವಾಗಿ ಪ್ರಶಂಸೆ ಮಾಡಿಕೊಳ್ಳುತ್ತಾಳೆ. ವಿರಾಲಿಮಲೈ ಕುರವಂಜಿ ಎಂಬುದರಲ್ಲಿ ತನಗೆ ಸಾಸಿವೆಕಾಳನ್ನು ಪೋಣಿಸುವುದು, ಕರಿಕಾಗೆಯನ್ನು ಬಿಳಿಕಾಗೆಯಾಗಿ ಮಾಡುವುದು ಬರುತ್ತದೆಂದು ಹೇಳಿಕೊಳ್ಳುತ್ತಾಳೆ. ಕುರವಂಜಿಯು ಮನೆಯಲ್ಲಿಲ್ಲದಿರುವುದನ್ನು ನೋಡಿ ಅನುಮಾನಿಸಿ ಅವಳ ಯಜಮಾನನು ಕೇಳಿದ ನಾನಾ ಬಗೆಯ ಪ್ರಶ್ನೆಗಳಿಗೆ ಅವಳ ಬುದ್ಧಿವಂತಿಕೆಯ ಉತ್ತರಗಳು ಬಹಳ ಮನೋರಂಜಕವಾಗಿವೆ. ಅವಳು ಪಡೆದಿರುವ ಬೆಲೆಬಾಳುವ ಬಹುಮಾನಗಳನ್ನು ನೋಡಿ ಅವನಿಗೆ ಬಹಳ ಸಂತೋಷವಾಗಿ ಅವರಿಬ್ಬರೂ ಹಿಂತಿರುಗುತ್ತಾರೆ. ಈ ಭಾಗಗಳು ಜಾನಪದ ಸಂಗೀತದಿಂದ ಕೂಡಿವೆ. ತಮಿಳಿನಲ್ಲಿ ಅನೇಕ ಕುರವಂಜಿ ನಾಟಕಗಳಿವೆ.

ಅವು :—ತಿರುಕ್ಕುಟಾಲ ಕುರವಂಜಿ, ಕುಂಬೇಶರ್ ಕುರವಂಜಿ, ಅಯಗರ್ ಕುರವಂಜಿ, ಶರಭೇಂದ್ರ ಭೂಪಾಲ ಕುರವಂಜಿ, ಅರ್ಧನಾರೀಶ್ವರರ್ ಕುರವಂಜಿ, ಬೆತ್ಲೆಹೆಂ ಕುರವಂಜಿ, ಕಾಂಗೇಯನ್ ಕುರವಂಜಿ, ಕೊಡುಮುಡಿ ಕುರವಂಜಿ, ಕುಮಾರಲಿಂಗ ಕುರವಂಜಿ, ಪಂಬನಗೌಂಡನ್ ಕುರವಂಜಿ, ಸ್ವಾಮಿಮಲೈ ಕುರವಂಜಿ,

ತಿರುಮಲೈಯಾಂಡವರ್ ಕುರವಂಜಿ, ತಿರುಮ್ಮಣ್ಣಿಪ್ಪಾಡಿಕ್ಕರೈ ಕುರವಂಜಿ, ತಿರುವಾರುರು ಕುರವಂಜಿ, ತಿರುವಿಡೈಕ್ಕಯಿ ಕುರವಂಜಿ, ಪಿಳ್ಳೈಪ್ಪಿಳ್ಳೈಯಾರ್ ಕುರವಂಜಿ, ವಿರಾಲಿಮಲೈ ಕುರವಂಜಿ, ಜಾನಕ ಕುರವಂಜಿ ಮತ್ತು ಕಪಾಲೇಶ್ವರ ಕುರವಂಜಿ.

ಆಯಗರ್ ಕುರವಂಜಿಯನ್ನು ೧೮೪೦ರಲ್ಲಿ ಕವಿಕುಂಜರಭಾರತಿ ಮಧುರೈ ಜಿಲ್ಲೆಯ ತಿರುಮಾಲಿರುಂ ಜೋಲೈಯ ಮುಖ್ಯದೇವರನ್ನು ಕುರಿತು ರಚಿಸಿದರು ಕೆ.ಎನ್. ದಂಡಾಯುಧಪಾಣಿ ಪಿಳ್ಳೆ ಈಚಿನ ದಿನಗಳಲ್ಲಿ ಚಿಟ್ರಂಬಲ ಕುರವಂಜಿಯನ್ನು ರಚಿಸಿದ್ದಾರೆ. ಬಹಳ ಹಿಂದಿನಿಂದ ದೇವಾಲಯಗಳ ವಾರ್ಷಿಕೋತ್ಸವಗಳಲ್ಲಿ ಕುರವಂಜಿಗಳನ್ನು ಹಾಡುತ್ತಿದ್ದರು.

**ಕೆಲವು ಕುರವಂಜಿಗಳು**—

೧. ದೇವೇಂದ್ರ ಕುರವಂಜಿ—ಇದು ಮರಾಠಿ ಭಾಷೆಯಲ್ಲಿ ತಂಜಾವೂರಿನ ಸರ್ಫೋಜಿ ಮಹಾರಾಜನಿಂದ ರಚಿಸಲ್ಪಟ್ಟಿದೆ. ಪ್ರಪಂಚದ ಭೂಗೋಳಶಾಸ್ತ್ರವು ಇದರ ವಿಷಯ. ಕೊರವಂಜಿಯು ತನ್ನದೇ ಆದ ಶೈಲಿಯಲ್ಲಿ ಪ್ರಪಂಚದ ದೇಶಗಳ ಭೌಗೋಳಿಕ ಲಕ್ಷಣಗಳನ್ನು ಹೇಳುತ್ತಾಳೆ.

೨ ರಾಜರಾಜ ಕುರವಂಜಿ—ಇದು ತಂಜಾವೂರಿನ ಬೃಹದೀಶ್ವರ ದೇವಾಲಯದ ಶಾಸನಗಳಲ್ಲಿ ಉಕ್ತವಾಗಿದೆ. ರಾಜರಾಜಚೋಳನ ಕಾಲದಲ್ಲಿ (೧೧ನೆ. ಶ) ಇದನ್ನು ಆಡಲಾಗಿತ್ತೆಂದು ತಿಳಿದುಬರುತ್ತದೆ.

೩. ನವನೀತೇಶ್ವರಸ್ವಾಮಿ ಕುರವಂಜಿ—ಇದು ತಂಜಾವೂರು ಜಿಲ್ಲೆಯ ಸಿಕ್ಕಿಲ್‌ನ ದೇವಾಲಯಕ್ಕೆ ಸಂಬಂಧಿಸಿದ ಕೊರವಂಜಿ. ಇವಲ್ಲದೆ ನೀಲಕಂಠರ್ ಕುರವಂಜಿ, ತ್ಯಾಗೇಶರ್ ಕುರವಂಜಿ, ರಘುನಾಥರಾಯ ಕುರವಂಜಿ, ತತ್ವಕುರವಂಜಿ, ಕಣ್ಣಪ್ಪ ಕುರವಂಜಿ ಮುಂತಾದ ಕುರವಂಜಿ ನಾಟಕಗಳಿವೆ.

**ಕುರವನ್ ಹಾಡು**—ಕೊರವನು ಹಾಡುವ ಹಾಡು.

**ಕುಲ**—ಮಿಶ್ರಜಾತಿ ರೂಪಕತಾಳದ ಹೆಸರು. ಇದರ ಒಂದಾವರ್ತಕ್ಕೆ ೯ ಅಕ್ಷರಕಾಲ.

**ಕುಲಕರ್ಣಿ ಎ. ವಿ. (೧೯೧೨)**—ಕರ್ಣಾಟಕದ ಬೆಳಗಾವಿ ಜಿಲ್ಲೆಯ ಹಳ್ಳಿಯೊಂದರಲ್ಲಿ ಜನಿಸಿದ ಕುಲಕರ್ಣಿಯವರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ನಂತರ ಕಾಲೇಜು ವ್ಯಾಸಂಗಕ್ಕಾಗಿ ಪುಣೆಗೆ ಹೋಗಿ ಬಿ.ಎ. ಮತ್ತು ಎಲ್.ಎಲ್.ಬಿ. ಡಿಗ್ರಿಪಡೆದು ೧೯೪೦ರಿಂದ ಬೆಳಗಾವಿಯಲ್ಲಿ ವಕೀಲರಾದರು. ಅಬ್ದುಲ್ ಕರೀಂಖಾನ್‌ರ ಶಿಷ್ಯ ಬೆಹರೆ ಬುವಾರವರಲ್ಲಿ ಸಂಗೀತ ಕಲಿಯುತ್ತಿದ್ದ ಬಂಧು ಒಬ್ಬರ ಹಾಡುಗಾರಿಕೆಯನ್ನು ಕೇಳಿ ೧೯೩೬ರ ವೇಳೆಗೆ ತಾವೂ ಕಲಿಯಲು ನಿರ್ಧರಿಸಿ ನಾರಾಯಣರಾವ್‌ವ್ಯಾಸ್, ವಝೆಬುವ, ಸವಾಯಿ ಗಂಧರ್ವ, ಮಾಸ್ಟರ್ ದೀನನಾಥ, ಬಾಬೂರಾವ್ ಪೆಂಡಾರ್ಕರ್ ಮುಂತಾದವರ ಗ್ರಾಮಾಫೋನ್ ರೆಕಾರ್ಡ್‌ಗಳನ್ನು ಕೇಳಿ

ಹಾಡುತ್ತಿದ್ದರು. ಪುಣೆಯ ಕೋಕೇಕರ್‌ರವರಲ್ಲಿ ಸಂಗೀತ ಕಲಿತು ಕಾಲೇಜಿನ ಸಂಗೀತ ಸ್ಪರ್ಧೆಯಲ್ಲಿ ಕೊಳಲುವಾದನದಲ್ಲಿ ಪ್ರಥಮ ಬಹುಮಾನ ಪಡೆದರು. ೧೯೩೩ರಲ್ಲಿ ಪಂಡಿತ್ ಪೂಜಾರಿ ಬುವಾರವರಲ್ಲಿ ಶಿಕ್ಷಣ ಮುಂದುವರಿಸಿದ್ದಲ್ಲದೆ ಅಲ್ಲಾದಿಯಾಖಾನ್, ಮಾಸ್ಟರ್‌ಕೃಷ್ಣ, ಸವಾಯಿ ಗಂಧರ್ವ, ಗಜಾನನರಾವ್ ಜೋಷಿ ಮುಂತಾದವರ ಕಚೇರಿಗಳಿಂದ ಬಹಳ ಉಪಯೋಗ ಪಡೆದು ಬೆಳಗಾವಿಗೆ ೧೯೪೯ರಲ್ಲಿ ಹಿಂತಿರುಗಿ ಪಂಡಿತ್ ತಮಹನ್‌ಕರ್‌ಬುವಾರವರಲ್ಲಿ ಎಂಟು ವರ್ಷಗಳ ಕಾಲ ಕಲಿತು ಗಾಂಧರ್ವ ಮಹಾವಿದ್ಯಾಲಯದ ವಿಶಾರದ, ಅಲಂಕಾರ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ೧೯೬೩ರಲ್ಲಿ ಸಂಗೀತದಲ್ಲಿ ಡಾಕ್ಟರೇಟ್ ಡಿಗ್ರಿ ಪಡೆದರು. ಕುಲಕರ್ಣಿಯವರ ಹಾಡುಗಾರಿಕೆಯು ಸಂಪ್ರದಾಯಬದ್ಧವಾದ ಉತ್ತಮ ಹಾಡುಗಾರಿಕೆಯಾಗಿದೆ.

**ಕುಲಕರ್ಣಿ ಶ್ರೀನಿವಾಸ**— ಇವರು ಕರ್ಣಾಟಕ ಜಿಲ್ಲೆಯ ಧಾರವಾಡ ಜಿಲ್ಲೆಯ ಹಂಸಭಾವಿಯಲ್ಲಿ ೧೯೧೧ರಲ್ಲಿ ಜನಿಸಿದರು. ರಾಮುಣ್ಣಿಮೆನನ್ನರು ಮತ್ತು ಕುಂಜು ಕುರುಪ್‌ರಲ್ಲಿ ಕಥಕಳಿ ನೃತ್ಯವನ್ನು ಕಲಿತರು. ೧೯೩೮ರ ನಂತರ ಇವರ ನೃತ್ಯ ತಂಡವು ಕರ್ಣಾಟಕ ಮತ್ತು ನೆರೆಹೊರೆ ರಾಜ್ಯಗಳಲ್ಲಿ ಪ್ರದರ್ಶನಗಳನ್ನು ನೀಡಿ ಖ್ಯಾತಿ ಪಡೆಯಿತು. ನಂತರ ಕೀರ್ತಿ ಹೊರದೇಶಗಳಲ್ಲಿ ಹರಡಿತು. ಸಿಂಹಳ, ಬರ್ಮ, ದಕ್ಷಿಣ ಆಫ್ರಿಕಾ ದೇಶಗಳಿಂದ ಆಹ್ವಾನಿತರಾಗಿ ಅಲ್ಲೆಲ್ಲಾ ಹಲವು ನೃತ್ಯ ಪ್ರದರ್ಶನಗಳನ್ನು ನೀಡಿದರು. ೧೯೪೮ರಲ್ಲಿ ಧಾರವಾಡದಲ್ಲಿ ನೃತ್ಯಕಲಾ ಕೇಂದ್ರವನ್ನು ಸ್ಥಾಪಿಸಿ ಕಾಲಕ್ರಮದಲ್ಲಿ ಅದನ್ನು ಹಂಸಭಾವಿಗೆ ವರ್ಗಾಯಿಸಿ ಗುರುಕುಲ ಪದ್ಧತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ನಾಟ್ಯಾಚಾರ್ಯ ಕುಲಕರ್ಣಿಯವರಿಗೆ ರಾಜ್ಯದ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯು ದೊರಕಿದೆ.

**ಕುಲಟೆ** – ಅಭಿನಯ ಶಾಸ್ತ್ರದಲ್ಲಿ ಹೇಳಿರುವ ಒಂದು ಬಗೆಯ ಪರಕೀಯ ಸ್ತ್ರೀ.

**ಕುಲದಹಾಡು** — ಇದು ಒಂದು ಗೊತ್ತಾದ ಕುಲದ ಜಾನಪದ ಗೀತೆ. ಇದರಲ್ಲಿ ಆ ಕಾಲದ ಮೂಲ, ಚರಿತ್ರೆ, ಕಸಬು, ಕೆಲವು ಪ್ರಮುಖರ ಹೆಸರು ಎಲ್ಲವೂ ವಿಷಯವಾಗಿದೆ.

**ಕುಲವಳಂ**—ಇದು ತಮಿಳು ನಾಡಿನ ಒಂದು ಬಗೆಯ ಜಾನಪದ ನೃತ್ಯ. ಇದನ್ನು ಕುಲದ ಹಾಡಿನ ಹಿನ್ನೆಲೆಗೆ ಕುಣಿಯುತ್ತಾರೆ.

**ಕುಳುವನಾಟಕ**—ಇದು ತಮಿಳು ನಾಡಿನ ಒಂದು ಬಗೆಯ ನಾಟಕ. ಕುರವಂಜಿ ನಾಟಕದ ಅನುಬಂಧದಂತಿದೆ ಸಿಂಗನ ಸಹಾಯಕ ಕುಳುವನಿಗೆ ಸಂಬಧಿಸಿದೆ. ಬೇಟೆ, ಪಕ್ಷಿಗಳನ್ನು ಹಿಡಿಯುವುದು ಇತ್ಯಾದಿ ಈ ನಾಟಕದ ವಿಷಯ. ಇದರ ಕೊನೆಯಲ್ಲಿ ಸಿಂಗನು ತನ್ನ ಹೆಂಡತಿ ಸಿಂಗಿಯನ್ನು ಹುಡುಕಿಕೊಂಡು ಹೋಗುತ್ತಾ ಸ್ವಲ್ಪ ಕಾಲಾನಂತರ ಅವಳನ್ನು ಸಂಧಿಸಿ, ನಾಯಕಿಯಿಂದ ಅವಳು ಪಡೆದಿರುವ ಬೆಲೆಬಾಳುವ ಬಳುವಳಿಗಳನ್ನು ನೋಡಿ ಸಂತೋಷ ಪಡುತ್ತಾನೆ.

**ಕುಲಶೇಖರ ಆಳ್ವಾರ್**—ಇವರು ಚೇರದೇಶದ ದೊರೆಯಾಗಿದ್ದರು. ೧೨ ಶ್ರೀ ವೈಷ್ಣವ ಆಳ್ವಾರರಲ್ಲಿ ಒಬ್ಬರು ಪೆರುಮಾಳ್ ತಿರುವಾಯಿವೊಳ್ಯಿಯನ್ನು ಹಾಡಿದ್ದಾರೆ. ಮುಕುಂದಮಾಲ್ ಸ್ತೋತ್ರವನ್ನು ರಚಿಸಿದ್ದಾರೆ. ಇದರ ಶ್ಲೋಕಗಳನ್ನು ಸಂಗೀತ ಕಚೇರಿಗಳಲ್ಲಿ ರಾಗಮಾಲಿಕೆಯಲ್ಲಿ ಹಾಡುವುದು ಪದ್ಧತಿಯಾಗಿದೆ.

**ಕುಲಶೇಖರ ಮಹಾರಾಜ**—ತಿರುವಾಂಕೂರಿನ ಸ್ವಾತಿತಿರುನಾಳ್ ಮಹಾರಾಜರು. ಇವರು ಪ್ರಸಿದ್ಧವಾಗ್ಗೇಯಕಾರರು.

**ಕುವಲಯಾನಂದಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ನಿ ಪ ನಿ ಸ

ಅ: ಸ ನಿ ದ ಮ ಗ ಸ

**ಕುವಲಯಾಭರಣ**—ಈ ರಾಗವು ೧೪ನೆ ಮೇಳಕರ್ತ ವಕುಳಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಕುವಿಂದತಾಳ**—ಸಂಗೀತರತ್ನಾಕರವೆಂಬ ಗ್ರಂಥವಲ್ಲಿ ಹೇಳಿರುವ ೧೨೦ ದೇಶೀತಾಳಗಳಲ್ಲಿ ೧೧೨ನೆ ತಾಳದ ಹೆಸರು.

**ಕುಸುಮಕಲ್ಲೋಲ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ಪ ಮ ರಿ ಗ ಮ ಪ ಸ

ಅ: ಸ ದ ಪ ಮ ಗ ಮ ರಿ ಸ

**ಕುಸುಮಚಂದ್ರಿಕ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ದ ನಿ ಸ

ಅ: ಸ ದ ಪ ಮ ರಿ ಸ

**ಕುಸುಮಜ್ಯೋತಿಷ್ಮತಿ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ದ ನಿ ಸ

ಅ: ಸ ದ ನಿ ದ ಪ ಮ ರಿ ಸ

**ಕುಸಮಾಜಾ**—ಈ ರಾಗವು ೧೯ನೆ ಮೇಳಕರ್ತ ಝಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ದ ಪ ಮ ರಿ ಸ

**ಕುಸುಮಧಾರಿಣಿ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಕುಸುಮಭವಾನಿ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ̇

ಅ: ಸ̇ ನಿ ದ ಮ ಪ ಮ ರಿ ಸ

**ಕುಸುಮಭೋಗಿ**—ಈ ರಾಗವು ೫೦ನೆ ಮೇಳಕರ್ತ ನಾಮ ನಾರಾಯಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ದ ನಿ ದ ಮ ಗ ರಿ ಗ ಸ

**ಕುಸುಮಭ್ರಮರಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರೀಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ̇

ಅ: ಸ̇ ನಿ ದ ಪ ಮ ರಿ ಸ

**ಕುಸುಮಪ್ರಿಯ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ಮ ಗಾ ರಿ ಸ

**ಕುಸುಮಮಾರುತ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಗ ಮ ಸ

**ಕುಸುಮಾಂಗಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಸ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಕುಸುಮಾಕರ**—ಇದು ಅಸಂಪೂರ್ಣ ಮೇಳಪದ್ಧತಿಯ ೭೧ನೆ ಮೇಳದ ಹೆಸರು.

**ಕುಸುಮಾವಳಿ**—(೧) ಈ ರಾಗವು ೩೮ನೆ ಮೇಳಕರ್ತ ಜಲಾರ್ಣವದ ಒಂಪು ಜನ್ಯರಾಗ. ಇದು ನಿಷಾದಾಂತ್ಯರಾಗ.

ಆ: ನಿ ಸ ರಿ ಗ ಪ ದ ನಿ

ಅ: ದ ಪ ಮ ಗ ರಿ ಸ ನಿ

(೨) ಇದೇ ಹೆಸರಿನ ಮತ್ತೊಂದು ರಾಗವು ೭೧ನೆಯ ಮೇಳಕರ್ತ ಕೋಸಲದ ಜನ್ಯರಾಗವಾಗಿದೆ.

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಕುಸುಮರಂಜನಿ**—ಈ ರಾಗವು ೩೭ನೆ ಮೇಳಕರ್ತ ಸಾಳಗದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಕುಸುಮವಿಚಿತ್ರ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ಪ ದ ನಿ ಸ

ಅ: ಸ ದ ನಿ ದ ಮ ಗ ಪ ಮ ರಿ ಸ

**ಕುಸುಮಸಾರಂಗ**—ಈ ರಾಗವು ೩೭ನೆ ಮೇಳಕರ್ತ ಸಾಳಗದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಕುಸುಂಭಿನಿ**—ಇದು ಪಟಹವಾದ್ಯಗಳ ವರ್ಗಕ್ಕೆ ಸೇರಿದ ಒಂದು ಬಗೆಯ ಮದ್ದಲೆ.

**ಕುಶ ಮತ್ತು ಲವ**—ಶ್ರೀರಾಮನಿಂದ ಸೀತೆಯಲ್ಲಿ ಜನಿಸಿದ ಅವಳಿ ಮಕ್ಕಳಲ್ಲಿ ಹಿರಿಯವನು ಕುಶ. ವಾಲ್ಮೀಕಿಮುನಿಯ ಆಶ್ರಮದಲ್ಲಿ ಜನಿಸಿದರು. ವಾಲ್ಮೀಕಿಯು ಹರ್ಷಭರದಿಂದ ಒಬ್ಬನಿಗೆ ಕುಶಮುಷ್ಟಿಯಿಂದಲೂ ಮತ್ತೊಬ್ಬನಿಗೆ ಲವಮುಷ್ಟಿಯಿಂದಲೂ ರಕ್ಷೆಯನ್ನು ಮಾಡಿ, ಅವರಿಬ್ಬರಿಗೂ ಕುಶ, ಲವ ಎಂಬುದಾಗಿ ನಾಮಕರಣ ಮಾಡಿದರು. ಈ ಮಕ್ಕಳನ್ನು ಬೆಳೆಸಿ ತಾನು ರಚಿಸಿದ ಆದಿಕಾವ್ಯ ವೆನಿಸಿದ ರಾಮಾಯಣವನ್ನು ಇವರಿಬ್ಬರಿಗೂ ವಾದ್ಯಸಹಿತವಾಗಿ ಹಾಡುವುದಕ್ಕೆ ಕಲಿಸಿದರು. ಇವರಿಬ್ಬರಿಗೂ ದಿವ್ಯವಾದ ಶಾರೀರವಿತ್ತು. ಇಬ್ಬರೂ ಕಾವ್ಯವನ್ನು ಗಾಯನಮಾಡಿ ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದರು. ಶ್ರೀರಾಮನ ಸಮ್ಮುಖದಲ್ಲಿ ಬಹು ಸುಂದರವಾಗಿ ಹಾಡಿ ಎಲ್ಲರನ್ನೂ ಮುಗ್ಧಗೊಳಿಸಿದರು.

**ಕುಶಾರೀರ**—ಹಾಡಲು ಯೋಗ್ಯವಲ್ಲದ ಕೆಟ್ಟ ಶಾರೀರ. ಶ್ರುತಿ ಸೇರದಿರುವ, ಮಾಧುರ್ಯವಿಲ್ಲದ, ಸ್ವರಗಳು ಸರಿಯಾಗಿ ನುಡಿಯದ, ಹೇಳದಂತೆ ಕೇಳದಿರುವ ಶಾರೀರ.

**ಕುಶವಾಹಿನಿ**—ಈ ರಾಗವು ೬೫ನೇ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ : ಸ ರಿ ಗ ರಿ ಮ ಪ ಮ ದ ನಿ ಸ

ಅ : ಸ ನಿ ದ ಪ ಮ ಗ ರಿ ಸ

**ಕೂಚಿಪುಡಿ**—ಇದು ಆಂಧ್ರ ಪ್ರದೇಶದ ಕೃಷ್ಣಾ ಜಿಲ್ಲೆಯ ಒಂದು ಗ್ರಾಮ. ಇದು ಕೂಚಿಪೂಡಿ ನೃತ್ಯದ ತೌರುಮನೆ. ಇದು ಸ್ವಲ್ಪ ಬದಲಾವಣೆ ಹೊಂದಿರುವ ಭರತನಾಟ್ಯ. ಈ ಗ್ರಾಮದಲ್ಲಿ ೩೦೦ ವರ್ಷಗಳಿಗಿಂತ ಹೆಚ್ಚುಕಾಲದಿಂದ ನೃತ್ಯ ನಾಟಕಗಳನ್ನು ಆಡುತ್ತ ಬಂದಿದ್ದಾರೆ. ಈ ನಾಟಕಗಳು ತಂಜಾವೂರಿನ ಭಾಗವತ ಮೇಳ ನಾಟಕಗಳನ್ನು ಹೋಲುತ್ತವೆ.

**ಕೂಚಿಪೂಡಿಭಾಗವತರು**— ಇವರು ಆಂಧ್ರಪ್ರದೇಶದ ಕೂಚಿಪೂಡಿ ಗ್ರಾಮದವರು. ಸಂಗೀತ ಮತ್ತು ನಾಟ್ಯದಲ್ಲಿ ಪರಿಣತಿ ಪಡೆದು ಭಾಗವತ ಮೇಳ-ನಾಟಕದಲ್ಲಿ ಭಾಗವಹಿಸುವ ಬ್ರಾಹ್ಮಣರು. ಅಲಂಕಾರ, ಒಡವೆಗಳು ಮತ್ತು ವೇಷ ಭೂಷಣಗಳು ಮತ್ತು ಜತಿಗಳನ್ನು ಹಾಡುವುದರಲ್ಲಿ ಇವರದೇ ಆದ ಸಂಪ್ರದಾಯಕ್ಕೆ ಕೂಚಿಪೂಡಿ ಸಂಪ್ರದಾಯವೆಂದು ಹೆಸರು. ತಂಜಾವೂರು ಜಿಲ್ಲೆಯಲ್ಲಿರುವಂತೆ, ಸ್ತ್ರೀಯರ ಪಾತ್ರವನ್ನೂ ಗಂಡಸರೇ ವಹಿಸುತ್ತಾರೆ.

**ಕೂಜಿತ**—ಇವು ಒಂದು ಬಗೆಯ ಸಂಚಾರಿ ಅಲಂಕಾರಗಳು. ಇವು ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿವೆ. ಉದಾ : ಸರಿ ಸಗ ಸ, ರಿಗ ರಿಮ ರಿ, ಗಮ ಗಪ ಗ, ಮಪ ಮದ ಮ, ಪದ ಪನಿ ಪ ಇತ್ಯಾದಿ.

**ಕೂಟತಾನ**—ಸ್ವರಗಳು ವಕ್ರಗತಿಯಲ್ಲಿ ಬರುವ ಸ್ವರಗುಚ್ಛಗಳುಳ್ಳ ತಾನ. ಇದು ಶುದ್ಧತಾನಕ್ಕೆ ವಿರುದ್ಧವಾದುದು.

**ಕೂತ್ತನೂಲ್**—ನಾಟ್ಯಶಾಸ್ತ್ರವನ್ನು ಕುರಿತ ತಮಿಳಿನ ಒಂದು ಪುರಾತನ ಗ್ರಂಥ.

**ಕೂತ್ತು**—ನಾಟ್ಯ, ನೃತ್ಯನಾಟಕವೆಂದರ್ಥವಿರುವ ತಮಿಳು ಪದ. ಶಿಲಪ್ಪದಿಕಾರಂ ಎಂಬ ಪುರಾತನ ತಮಿಳು ಗ್ರಂಥದಲ್ಲಿ ಹಲವು ಬಗೆಯ ನಾಟ್ಯಗಳನ್ನು ಹೆಸರಿಸಲಾಗಿದೆ.

ಅವು –ಅಗಕ್ಕೂತ್ತು, ಅಭಿನಯಕ್ಕೂತ್ತು, ಮಾರ್ಗಿಕ್ಕೂತ್ತು, ಪುರಕ್ಕೂತ್ತು, ನಾಟಕಕ್ಕೂತ್ತು, ದೇಶಿಕ್ಕೂತ್ತು.

ಅಡಿಯಾರ್ಕ್ಕುನಲ್ಲಾರ್ ಎಂಬುವರು ಈ ಕೆಲವು ಕೂತ್ತುಗಳನ್ನು ಹೇಳಿದ್ದಾರೆ : ವಶೈಕ್ಕೂತ್ತು, ವೆಟ್ಟಿಯಲ್, ವರಿಕ್ಕೂತ್ತು, ಸಾನಿಕ್ಕೂತ್ತು, ಇಯಲ್ಬುಕೂತ್ತು, ಪುಗಯಕ್ಕೂತ್ತು, ಪೊದುವಿಯಲ್, ವಸಿಸಂದಿಕ್ಕೂತ್ತು, ವಿನೋದಕ್ಕೂತ್ತು, ಮೇಯ್ಕ್ಕೂತ್ತು.

**ಕೂರೇಶಂ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ರಿ ಸ

**ಕೂರ್ಮವೀಣಾ**—ಪಾಲ್ಕುರಿಕೆ ಸೋಮನಾಥನು ಪಂಡಿತಾರಾಧ್ಯಚರಿತ್ರೆ ಎಂಬ ಗ್ರಂಥದಲ್ಲಿ ಹೇಳಿರುವ ಒಂದು ಬಗೆಯ ತಂತೀವಾದ್ಯ. ಇದನ್ನು ಕೂರ್ಮ ದೇಹದಾಕಾರದಲ್ಲಿ ಮಾಡಲಾಗಿತ್ತು. ಇದು ಕಮಾನಿನಿಂದ ನುಡಿಸುವ ವಾದ್ಯ. ಇದರ ಶಿಲ್ಪವನ್ನು ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ತಾಲ್ಲೂಕಿನ ತಿರುಮಕೂಡಲು ದೇವಾಲಯದಲ್ಲಿದೆ

**ಕೂವನಸಾಮಯ್ಯ**—ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ಕಾವೇರಿ ಪೂಂಪಟ್ಟಣದವರು ಪದವರ್ಣಗಳ ಖ್ಯಾತ ವಾಗ್ಗೇಯಕಾರ ಗೋವಿಂದ ಸಾಮಯ್ಯನವರ ಸಹೋದರ. ನಾಟಕುರಂಜಿ ರಾಗದ ಪದವರ್ಣವನ್ನು ರಚಿಸಿದ್ದಾರೆ. ಇಂದೊಂದು ಪಂಚರತ್ನವರ್ಣ. ಗೋವಿಂದ ಸಾಮಯ್ಯನವರು ಕಾರ್ವೇಟಿನಗರಕ್ಕೆ ಅಲ್ಲಿ ಪ್ರಸಿದ್ಧರಾಗುವ ಮೊದಲೇ ಮೋಹನರಾಗದ ವರ್ಣವನ್ನು (ಸ ರಿ ಗಾ ದಾ ನಿ) ರಚಿಸಲಾಗಿತ್ತು. ಸಂದರ್ಭೋಚಿತವಾಗಿ ಇದರಲ್ಲಿ ಕಾರ್ವೇಟಿನಗರದ ದೊರೆಯ ಹೆಸರು ಮತ್ತು ಅವನ ಹಿರಿಯ ಗುಣಗಳನ್ನು ಸಾಹಿತ್ಯದಲ್ಲಿ ನಂತರ ಸೇರಿಸಲಾಯಿತು. ಹೀಗೆ ಬದಲಾವಣೆ ಹೊಂದಿದ ವರ್ಣವು ನಮಗೆ ಬಂದಿದೆ.

**ಕೇತಕಪ್ರಿಯ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ

ಆ: ಸ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಕೇತಕಾಂಕುಳೆ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿ ಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ಮ ದ ನಿ ಸ

ಅ: ಸ ದ ಮ ಗ ರಿ ಸ

**ಕೇತನಾವಳಿ**—ಈ ರಾಗವು ೬೭ನೆ ಮೇಳಕರ್ತ ಸುಚರಿತ್ರದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಪ ದ ಸ

ಅ: ಸ ನಿ ದ ಮ ಪ ಮ ಗ ಸ

**ಕೇತಾರಮಂಜರಿ**—ಈ ರಾಗವು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಕೇದಾರ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ಮ ಗ ಮ ಪ ನಿ ಸ̇

ಅ : ಸ̇ ನಿ ಪ ಮ ಗ ರಿ ಸ

ಉಪಾಂಗರಾಗ. ದ್ವಿತೀಯ ಘನರಾಗ ಪಂಚಕಗಳಲ್ಲಿ ಒಂದು ರಾಗ. ಮಧ್ಯಮ ಮತ್ತು ನಿಷಾದವು ರಾಗಛಾಯಾ ಸ್ವರಗಳು. ಪಂಚಮವು ಅಂಶಸ್ವರ. ರಿಷಭ, ಗಾಂಧಾರ, ಮಧ್ಯಮವು ನ್ಯಾಸ ಸ್ವರಗಳಲ್ಲಿ, ಪ್ರಾತಃಕಾಲದ ರಾಗ. ಪ್ರಾರ್ಥನೆ ಮತ್ತು ಶ್ಲೋಕ, ಪದ್ಯಗಳನ್ನು ಹಾಡಲು ಈ ರಾಗವನ್ನು ಹೆಚ್ಚಾಗಿ ಬಳಸುತ್ತಾರೆ. ಹಾಸ್ಯ, ಶೃಂಗಾರ ಹಾಗೂ ವೀರರಸಗಳಿಗೆ ಸೂಕ್ತವಾದ ರಾಗ. ಈ ರಾಗದ ರಚನೆಗಳು ಷಡ್ಜ, ಗಾಂಧಾರ, ಪಂಚಮ ಮತ್ತು ನಿಷಾದ ಸ್ವರಗಳಿಂದ ಆರಂಭವಾಗುತ್ತವೆ. ತ್ರಿಸ್ಥಾಯಿ ರಾಗ. ಕೆಲವು ಪ್ರಸಿದ್ಧ ಕೃತಿಗಳು—

| | | | | |
|---|---|---|---|---|
| ರಾಮಾ ನೀ ಪೈ | — | ಆದಿ | — | ತ್ಯಾಗರಾಜ |
| ಮರಚೇವಾಡನೆ | — | ಆದಿ | — | ತ್ಯಾಗರಾಜ |
| ಆನಂದ ನಟನಪ್ರಕಾಶಂ | — | ಮಿಶ್ರಏಕ | — | ಮುತ್ತುಸ್ವಾಮಿದೀಕ್ಷಿತರು |
| ಭಜನ ಸೇಯವೇ | — | ರೂಪಕ | — | ಆನಯ್ಯ |
| ನೀವೇನಾಜೀವಮನಿ | — | ರೂಪಕ | — | ಪಲ್ಲವಿ ಶೇಷಯ್ಯರ್ |
| ದುರುಸುಗಾ | — | ರೂಪಕ | — | ಗರ್ಭಪುರಿ |
| ಸಮಯಮಿದೇ | — | ರೂಪಕ | — | ಪಟ್ಣಂ ಸುಬ್ರಹ್ಮಣ್ಯ-ಅಯ್ಯರ್ |
| ನನ್ನು ಬ್ರೋವ | — | | — | ಪಟ್ಣಂ ಸುಬ್ರಹ್ಮಣ್ಯ-ಅಯ್ಯರ್ |

**ಕೇದಾರ್**—ಇದು ಹಿಂದುಸ್ಥಾನಿ ಸಂಗೀತದ ಒಂದು ರಾಗ. ಯಮನ್ ಥಾಟ್ ಅಂದರೆ ಕರ್ಣಾಟಕ ಸಂಗೀತದ ೬೫ನೆ ಮೇಳಕರ್ತರಾಗ.

**ಕೇದಾರಗೌಳ** —ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ನಿ ಸ̇

ಅ : ಸ̇ ನಿ ದ ಪ ಮ ಗ ರಿ ಸ

ಉಪಾಂಗರಾಗ. ರಿಷಭ ಮತ್ತು ನಿಷಾದಗಳು ರಾಗ ಛಾಯಾ ಸ್ವರಗಳು. ರಿಷಭ ಮತ್ತು ಪಂಚಮವು ನ್ಯಾಸ ಸ್ವರಗಳು. ಪಂಚಮವು ಅಂಶಸ್ವರ. ಸ, ರಿ, ಮ, ಪ ಸ್ವರಗಳಿಂದ ಈ ರಾಗದ ರಚನೆಗಳು ಆರಂಭವಾಗುತ್ತವೆ. ತ್ರಿಸ್ಥಾಯಿರಾಗ. ರಾತ್ರಿವೇಳೆಯಲ್ಲಿ ಹಾಡಬಹುದಾದ ಮಂಗಳಕರವಾದ ರಾಗ. ತೇವಾರಂನ ಪಣ್‌ಗಾಂಧಾರ ಪಂಚಮವು ಈ ರಾಗವೆಂದು ಹೇಳುತ್ತಾರೆ. ವಿಪ್ರಲಂಭ, ಶೃಂಗಾರ, ಕರುಣರಸ, ದೈನ್ಯ, ಶ್ರಮ, ಗ್ಲಾನಿ, ನಿರ್ವೇದ ಇತ್ಯಾದಿ ವ್ಯಭಿಚಾರಿ ಭಾವಗಳು, ಗರ್ವ, ಅಮರ್ಷ ಇತ್ಯಾದಿ ಭಾವಗಳನ್ನು ವ್ಯಕ್ತಗೊಳಿಸಲು ಸೂಕ್ತವಾದ ರಾಗ.

ಪುರಾಣಪಠಣ, ಭಾರತವಾಚನ, ನೃತ್ಯ ಮತ್ತು ಗೇಯನಾಟಕಗಳಲ್ಲಿ ಈ ರಾಗವನ್ನು ಹೆಚ್ಚಾಗಿ ಬಳಸುತ್ತಾರೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | |
|---|---|---|---|
| ವರ್ಣ : | ಸಾಮಿದಯ | ಆದಿ | ತಿರುವೊಟ್ಟಿಯೂರ್-ತ್ಯಾಗಯ್ಯರ್ |
| | ವಿರಿಬೋಣಿ | ಝಂಪ | ರುದ್ರಪಟ್ಟಣಂ-ವೆಂಕಟರಾಮಯ್ಯ |
| ಕೃತಿ : | ತುಳಸೀಬಿಲ್ವ | ಆದಿ | ತ್ಯಾಗರಾಜ |
| | ವೇಣುಗಾನ | ರೂಪಕ | ತ್ಯಾಗರಾಜ |
| | ವಾರಿಜನಯನ | ರೂಪಕ | ತ್ಯಾಗರಾಜ |
| | ನೀಲಕಂಠಂ | ರೂಪಕ | ಮುತ್ತುಸ್ವಾಮಿ-ದೀಕ್ಷಿತರು |
| | ಕರುಣಿಸೋ | ಆದಿ | ಪುರಂದರದಾಸರು |
| | ಜಲಜನಾಭ | ಛಾಪು | ಸ್ವಾತಿತಿರುನಾಳ್ |
| | ಎಂತ ಪಿಲಿಚಿನ | ಆದಿ | ಪಲ್ಲವಿ ಶೇಷಯ್ಯರ್ |
| | ಪಾಲಯಮಾಂ ಪರಮೇಶ್ವರ | — | ವಾಸುದೇವಾಚಾರ್ಯ |
| | ಸರಗುಣಪಾಲಿಂಪ | ಆದಿ | ರಾಮನಾಡ್-ಶ್ರೀನಿವಾಸ ಅಯ್ಯಂಗಾರ್ |
| | ಇನ್ನಮುಂಸಂದೇಹ | ಆದಿ | ಗೋಪಾಲ ಕೃಷ್ಣ-ಭಾರತಿ |
| ಪದ : | ಏಮಂದು ನಮ್ಮಾ | ತ್ರಿಪುಟ | ಕ್ಷೇತ್ರಜ್ಞ |
| | ರಮ್ಮನವೇ ಸಮುಖಾನ | ತ್ರಿಪುಟ | ಕ್ಷೇತ್ರಜ್ಞ |
| | ಇಂದುಕುವಗಜೇಸಿನಾ | ಆದಿ | ಕ್ಷೇತ್ರಜ್ಞ |
| | ಪಾಯುರಮ್ಮಾನವೇಮುದ್ದುಗೊಮ್ಮ | ತಿಶ್ರಏಕ | ಕ್ಷೇತ್ರಜ್ಞ |
| | ತೇಮತಾ ಯೂರಕೇ ಪವ್ವಳಿಂಚಿ | ಆದಿ | ಕ್ಷೇತ್ರಜ್ಞ |
| ಜಾವಳಿ : | ಊರಿವಾರೆಮಿ | ಆದಿ | ಧರ್ಮಪುರಿ ಸುಬ್ಬರಾಯರು |
| | ಏರಾತಿತಗುನಟರಾ | ಆದಿ | ಧರ್ಮಪುರಿ ಸುಬ್ಬರಾಯರು |
| ಅಷ್ಟಪದಿ : | ರತಿಸುಖಧಾರೆ | — | ಜಯದೇವ |

ಈ ರಾಗಕ್ಕೆ ಮಧ್ಯಯುಗದ ಗ್ರಂಥಗಳಲ್ಲಿ ಕೇದಾರಿ ಗೌಳರಾಗವೆಂದು ಉಕ್ತವಾಗಿದೆ.

**ಕೇದಾರಛಾಯಾ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗಾ ರಿ ಸ

**ಕೇದಾರನಾಟಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಪ ಸ

ಅ: ಸ ನಿ ಪ ಪ ಗ ರಿ ಸ

**ಕೇದಾರಪಂತು**—ಪುರಾತನ ಸಂಸ್ಕೃತಗಳಲ್ಲಿ ಉಕ್ತವಾಗಿರುವ, ಈಗ ಪ್ರಚಲಿತವಿಲ್ಲದಿರುವ ಒಂದು ರಾಗ.

**ಕೇದಾರಿ**—ಇದು ಹನುಮನ್ಮತ ಮತ್ತು ಸೋಮೇಶ್ವರ ಮತದಂತೆ ಒಂದು ಸ್ತ್ರೀರಾಗದ ಹೆಸರು.

**ಕೇಯಾಚಾರಧಾರಣಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಕೇರಳ ಕಲಾಮಂಡಲಂ**—ಇದು ಕವಿವಲತ್ತೋಳ್ ನಾರಾಯಣ ಮೆನನ್ ಸ್ಥಾಪಿಸಿದ ಕಥಕಳಿ ನೃತ್ಯದ ವ್ಯವಸ್ಥಿತವಾದ ಶಿಕ್ಷಣ ನೀಡುವ ಸಂಸ್ಥೆ.

**ಕೇರಳವರ್ಮ ವಳಿಯಕೋಯಿಲ್ ತಂಪುರಾನ್**—ಇವನು ಧ್ರುವ ಚರಿತಂ ಎಂಬ ಕಥಕಳಿ ನೃತ್ಯರೂಪಕವನ್ನು ರಚಿಸಿದ್ದಾನೆ.

**ಕೇಳಿಕಲಾ**—ಇದು ಸರಸ್ವತಿಯ ವೀಣೆಯ ಹೆಸರು.

**ಕೇಳಿ**—ಇದು ರಾಸಕ್ರೀಡೆ ಮತ್ತು ಜಲಕ್ರೀಡೆ. ಸ್ತ್ರೀಯರ ಕೇಳಿ.

**ಕೇಳಿಕೊಟ್ಟು**—ಕಥಕಳಿ ನೃತ್ಯವು ಆರಂಭವಾಗುವ ಮುನ್ನ ಪ್ರೇಕ್ಷಕರನ್ನು ಆಹ್ವಾನಿಸಲು ಬಾರಿಸುವ ಮದ್ದಲೆ. ಚಂಡೆ ಇದ್ದ ಹಾಗೆ.

**ಕೇಳ್ಮೆಯಜ್ಞಾನ**—ಘನವಿದ್ವಾಂಸರ ಕಚೇರಿಗಳನ್ನು ಕೇಳಿ ಪಡೆಯುವ ಸಂಗೀತಜ್ಞಾನ. ಕೆಲವು ವ್ಯಕ್ತಿಗಳು ಕ್ರಮಬದ್ಧವಾಗಿ ಶಿಕ್ಷಣ ಪಡೆಯದೆ ಕೇವಲ ತಮ್ಮ ಕೇಳ್ಮೆಜ್ಞಾನದಿಂದಲೇ ಆಲಾಪನೆ ಮಾಡಿ ಕೃತಿಗಳನ್ನು ಹಾಡುತ್ತಾರೆ.

**ಕೇಳಿಗೋಪಾಲ**—ಇದು ಅಸ್ಸಾಂ ರಾಜ್ಯದ ಶಾಸ್ತ್ರೀಯ ನೃತ್ಯ. ಶ್ರೀಕೃಷ್ಣನ ಜೀವನದ ಘಟನೆಗಳನ್ನು ಅಭಿನಯಿಸುತ್ತಾರೆ.

**ಕೇಸರಿ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಕೇಸರಿಕ್ರಿಯ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಮ ಪ ನಿ ಸ

ಅ: ಸ ನಿ ಪ ಮ ರಿ ಮ ಗ ಸ

**ಕೇಸರನಾಟಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಕೇಸರಾವಳಿ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ದ ಪ ಗ ರಿ ಸ

**ಕೇಸರಾವಲೋಕ**—ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ

ಆ: ಸ ರಿ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ಇದು ಪ್ರತಿ ಮಧ್ಯಮವಿರುವ ಸಾಳಗ ಭೈರವ ರಾಗ.

**ಕೇಶವಪಲ್ಲಿ ಸೇತುರಾಮಯ್ಯ**—ಇವರು ಆಂಧ್ರದ ವಾಗ್ಗೇಯಕಾರರು. ಕಾಮಧೇನು ಎಂಬ ಅಂಕಿತದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ. ಇವು ಕಾಮ ಧೇನುಗಾನಾಮೃತಂ ಎಂಬ ಎರಡು ಸಂಪುಟಗಳಲ್ಲಿ ಪ್ರಕಟವಾಗಿವೆ.

**ಕೇಶವಮೂರ್ತಿ, ಆರ್. ಆರ್.** (೧೯೧೩)—ಕರ್ಣಾಟಕದ ಹಾಸನ ಜಿಲ್ಲೆಯ ರುದ್ರಪಟ್ಟಣ ಎಂಬ ಊರು ಸಂಗೀತಗಾರರ ಬೀಡು. ಕೇಶವಮೂರ್ತಿಯವರ ತಂದೆ ಈ ಊರಿನ ರಾಮಸ್ವಾಮಯ್ಯನವರು. ತಾತ ವೆಂಕಟರಾಮಯ್ಯ ಖ್ಯಾತ ವಾಗ್ಗೇಯಕಾರರಾಗಿದ್ದರು. ಕೇಶವಮೂರ್ತಿಯವರು ಬಾಲ್ಯದಲ್ಲಿ ಪಿಟೀಲುವಾದನ ವನ್ನು ಕಲಿತು ಹೆಚ್ಚಿನ ಶಿಕ್ಷಣವನ್ನು ಮೈಸೂರಿನ ಖ್ಯಾತ ವಿದ್ವಾಂಸರಾಗಿದ್ದ ಬಿಡಾರಂ ಕೃಷ್ಣಪ್ಪನವರಲ್ಲಿ ಕಲಿತು ೧೯೩೦ರ ವೇಳೆಗೆ ಬಿ. ಎಸ್. ರಾಜಯ್ಯಂಗಾರ್ಯರ ಸಂಗಡ ಸಂಗೀತ ಕಚೇರಿಗಳಲ್ಲಿ ನುಡಿಸಲು ದಕ್ಷಿಣಭಾರತದ ಪ್ರವಾಸ ಮಾಡಿ ನಂತರ ಬೆಂಗಳೂರಿನಲ್ಲಿ ನೆಲೆಸಿದರು. ತಮ್ಮ ಗುರುವಿನ ಹೆಸರಿನಲ್ಲಿ ಶ್ರೀರಾಮಪುರದ ತಮ್ಮ ಮನೆಯಲ್ಲಿ ಒಂದು ಸಂಗೀತಶಾಲೆಯನ್ನು, ಮಲ್ಲೇಶ್ವರದಲ್ಲಿ ಅದರ ಶಾಖೆಯನ್ನೂ ಸ್ಥಾಪಿಸಿ ನಡೆಸುತ್ತ ಬಂದಿದ್ದಾರೆ. ಇವರು ಏಳು ತಂತಿಗಳ ಪಿಟೀಲುವಾದಕರು. ಕರ್ಣಾಟಕ ಸಂಗೀತದ ಪ್ರಸಿದ್ಧ ಗಾಯಕರಿಗೆಲ್ಲಾ ಪಕ್ಕವಾದ್ಯ ನುಡಿಸಿದ್ದಾರೆ. ಅನೇಕ ತನಿ ಕಚೇರಿಗಳನ್ನು ಮಾಡಿದ್ದಾರೆ. ಇವರ ವಾದನವು ತುಂಬಿದ ನಾದದಿಂದ ಕೂಡಿದ ಪರಿಪಕ್ವವಾದ ಆಹ್ಲಾದಕರವಾದ ಗಂಡುಶೈಲಿ. ಇದಲ್ಲದೆ ಸಂಗೀತದ ವಿಚಾರವಾಗಿ ಕನ್ನಡದಲ್ಲಿ ೧೮ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಇವರು ಉತ್ತಮ ಭಾಷಣ

ಕಾರರೂ ಆಗಿದ್ದಾರೆ. ಇವರಿಗೆ ಶಿಷ್ಯರು ಅನೇಕ. ಇವರಿಗೆ ಸಂದಿರುವ ಹಲವು ಬಿರುದುಗಳಲ್ಲಿ ಸಂಗೀತ ವಿದ್ಯಾಸಾಗರ ಎಂಬುದು ಮುಖ್ಯವಾದುದು.

**ಕೇಶವಮೂರ್ತಿ, ಆರ್. ಎಸ್.**—ಇವರು ಹಾಸನ ಜಿಲ್ಲೆಯ ರುದ್ರ ಪಟ್ಟಣದ ವೈಣಿಕರ ಮನೆತನಕ್ಕೆ ಸೇರಿದವರು. ಇವರ ತಂದೆ, ತಾತ, ಚಿಕ್ಕಪ್ಪ ವೈಣಿಕರಾಗಿದ್ದರು ಪ್ರಥಮ ಶಿಕ್ಷಣವನ್ನು ಚಿಕ್ಕಪ್ಪ ವೆಂಕಟರಮಣಯ್ಯನವರಲ್ಲಿ ಪಡೆದು ತಮ್ಮ ೧೯ನೆ ವಯಸ್ಸಿನಲ್ಲಿ ಮೈಸೂರಿಗೆ ಬಂದು ವೀಣೆ ಭಕ್ಷಿಸುಬ್ಬಣ್ಣನವರಲ್ಲಿ ಆರು ವರ್ಷಗಳ ಕಾಲ ಉನ್ನತ ಶಿಕ್ಷಣ ಪಡೆದರು. ನಂತರ ಉತ್ತರ ಭಾರತದ ಪ್ರವಾಸ ಮಾಡಿ ಕಚೇರಿಗಳಲ್ಲಿ ನುಡಿಸಿ ಖ್ಯಾತರಾದರು. ಮಹಾತ್ಮ ಗಾಂಧೀಜಿ ಮತ್ತು ರವೀಂದ್ರನಾಥ ಠಾಕೂರರ ಮೆಚ್ಚಿಗೆ ಪಡೆದರು. ೧೯೩೧ರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾಗಿ ನೇಮಕಗೊಂಡರು. ಇವರ ವೀಣಾವಾದನದಲ್ಲಿ ನಾದಸೌರಭ ತುಂಬಿದೆ. ಇವರು ಬೆಂಗಳೂರಿನ ಗಾನಕಲಾಪರಿಷತ್ತಿನ ಅಧ್ಯಕ್ಷತೆ ವಹಿಸಿ ಗಾನಕಲಾ ರತ್ನ ಎಂಬ ಬಿರುದನ್ನು ಪಡೆದು ಸನ್ಮಾನಿತರಾದರು. ಸಂಗೀತನಾಟಕ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಇದಲ್ಲದೆ ವೈಣಿಕಪ್ರವೀಣ ಇತ್ಯಾದಿ ಬಿರುದಾಂಕಿತರು. ಇವರ ಮಕ್ಕಳಲ್ಲಿ ಆರ್. ಕೆ. ಶ್ರೀನಿವಾಸಮೂರ್ತಿ, ಆರ್. ಕೆ. ಸೂರ್ಯನಾರಾಯಣ ಖ್ಯಾತ ವೈಣಿಕರಾಗಿದ್ದಾರೆ.

**ಕ್ನೈಕವಶಿ**—ಈ ರಾಗವು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

ರಿಷಭ, ಮಧ್ಯಮ ಮತ್ತು ನಿಷಾದ ನ್ಯಾಸಸ್ವರಗಳು. ಪಂಚಮವು ಜೀವಸ್ವರ. ಈ ರಾಗವು ತ್ಯಾಗರಾಜರ ಕೃತಿಯಿಂದ ಉಳಿದಿದೆ. ಅವರ ವಾಚಾಮಗೋಚರಮೇ ಮನಸಾ ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ಕೈಕ್ಕಿಳೈ**—ಇದು ಪುರಾತನ ತಮಿಳು ಸಂಗೀತದಲ್ಲಿ ಗಾಂಧಾರ ಸ್ವರದ ಹೆಸರು.

**ಕೈಕೊಟ್ಟಿ ಕಳಿ**—ಇದು ಕೇರಳದ ಒಂದು ಜಾನಪದ ನೃತ್ಯ. ಇದು ಸ್ತ್ರೀಯರ ಕುಣಿತವನ್ನು ಹೋಲುತ್ತದೆ. ಸ್ತ್ರೀಯರು ಮತ್ತು ಹೆಣ್ಣುಮಕ್ಕಳು ವರ್ತುಲಾಕಾರವಾಗಿ ನಿಂತು ತಾಳಬದ್ಧವಾಗಿ ಚಪ್ಪಾಳೆ ಹೊಡೆಯುತ್ತಾ ಕುಣಿಯುತ್ತಾರೆ. ಆರಿದ್ರಾ ಉತ್ಸವದಲ್ಲಿ ಈ ಕುಣಿತವಾಡುತ್ತಾರೆ. ಇದಕ್ಕೆ ತಿರುವಾದಿರಕಳಿ ಎಂದು ಹೆಸರು.

**ಕೈಗೆಜ್ಜೆ ಕಚೇರಿ**—ಜಾನಪದ ಸಂಗೀತಗೋಷ್ಠಿಯಲ್ಲಿ ಮುಖ್ಯಸ್ಥನು ಈ ಗೆಜ್ಜೆಯ ತಾಳಕ್ಕೆ ಸರಿಯಾಗಿ ಕಥೆಗಳನ್ನು ಹಾಡುಗಳ ಮೂಲಕ ಹೇಳುತ್ತಾನೆ. ಜೊತೆಗೆ ಮೃದಂಗ ಮತ್ತು ಘಟದ ಪಕ್ಕವಾದ್ಯಗಳಿರುತ್ತವೆ.

**ಕೈಲಾಸನಾಥಸ್ವಾಮಿ ದೇವಾಲಯ**—ತಮಿಳುನಾಡಿನ ಕಾಂಚೀಪುರದಲ್ಲಿ ಇರುವ ಕೈಲಾಸನಾಥ ದೇವಾಲಯವನ್ನು ಕ್ರಿ. ಶ. ೫೬೨ರಲ್ಲಿ ನಿರ್ಮಿಸಲಾಯಿತು. ಇಲ್ಲಿ ಹಲವು ಅಮೂಲ್ಯವಾದ ಸಂಗೀತ ಶಿಲ್ಪಗಳಿವೆ.

**ಕೈವಳಿ**—ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಕೈವಾರ ಪ್ರಬಂಧ**—ಇದು ಮಧ್ಯಯುಗದಲ್ಲಿ ಪ್ರಚಲಿತವಾಗಿದ್ದ ಒಂದು ಸಂಗೀತರಚನಾ ವಿಶೇಷ. ಇದರ ಮಾತುಗಳಲ್ಲಿ ಜತಿಗಳಿರುತ್ತವೆ.

**ಕೈವೇಣಿ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ನಿ ದ ಮ ಪ ದ ಪ ಮ ಗ ರಿ ಸ

**ಕೈಶಿಕ**—(೧) ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಮ ರಿ ಸ

(೨) ರಾಮಾಯಣದಲ್ಲಿ ಉಕ್ತವಾಗಿರುವ ರಾಗ.

(೩) ಕುಡುಮಿಯಾ ಮಲೈ ಸಂಗೀತ ಶಾಸನದಲ್ಲಿ ಉಕ್ತವಾಗಿರುವ ಏಳನೆಯ ರಾಗ

**ಕೈಶಿಕಕಕುಭ**—ಇದು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ

**ಕೈಶಿಕಿ**—ಇದು ಪುರಾತನ ಸಂಗೀತ ಪದ್ಧತಿಯ ೧೮ ಶುದ್ಧ ಜಾತಿ ಅಥವಾ ರಾಗಗಳಲ್ಲಿ ಒಂದು ರಾಗ ಸಂಗೀತರತ್ನಾಕರ, ಬೃಹದ್ದೇಶಿ, ಸಂಗೀತಮಕರಂದ ಮತ್ತು ಸಂಗೀತಸಮಯಸಾರವೆಂಬ ಗ್ರಂಥಗಳಲ್ಲಿ ಉಕ್ತವಾಗಿದೆ.

**ಕೈಶಿಕಿಪಂಚಮ**—ಇದು ಮಧ್ಯಮಗ್ರಾಮದ ಸ್ವರವಾಗಿತ್ತು. ಒಂದು ಕೂದಲೆಳೆಯಷ್ಟು ಕಡಿಮೆಯಿರುವ ಪಂಚಮ ಸ್ವರ. ಇದಕ್ಕೆ ಮೃದು ಪಂಚಮ ಮತ್ತು ತ್ರಿಶ್ರುತಿಪಂಚಮವೆಂದು ಹೆಸರಿದೆ.

**ಕೈಶಿಲಂಬು-ಕೈಗೆಜ್ಜೆ**—ಇದು ಟೊಳ್ಳಾಗಿರುವ ಅಂಡಾಕೃತಿಯ ಹಿತ್ತಾಳೆ ಬಳೆ. ಒಳಗಡೆ ಲೋಹದ ಚೂರುಗಳಿರುತ್ತವೆ. ಎರಡು ಕೈಬೆರಳುಗಳಿಗೆ ಇಂತಹ ಬಳೆಗಳನ್ನು ಸಿಕ್ಕಿಸಿಕೊಂಡು ಮೇಲಕ್ಕೂ ಕೆಳಕ್ಕೂ ಮಾಡಿದಾಗ ಗೆಜ್ಜೆಯಂತೆ ಶಬ್ದವಾಗುತ್ತದೆ. ಸರ್ವಲಘು ತಾಳವಾಗುತ್ತದೆ. ಇದು ಸಾಮಾನ್ಯವಾಗಿ ಗ್ರಾಮದೇವತೆಗಳ ದೇವಾಲಯಗಳಲ್ಲಿದೆ. ಕರಗದ ಮೆರವಣಿಗೆಯಲ್ಲಿ ಇಂತಹ ಗೆಜ್ಜೆ ತಾಳ ಹಾಕುವವನು ಮುಂಭಾಗದಲ್ಲಿರುತ್ತಾನೆ ಇದಕ್ಕೆ ಪೂಜಾರಿ ಕೈಗೆಜ್ಜೆ ಎಂದು ಹೆಸರು.

**ಕೈಲಾಸವೀಣಾ**—ಪಂಡಿತಾರಾಧ್ಯ ಚರಿತ್ರೆಯಲ್ಲಿ ಪಾಲ್ಕುರಿಕೆಸೋಮನಾಥನು ಹೇಳಿರುವ ಒಂದು ಬಗೆಯ ವೀಣೆ.

**ಕೈಶಿಕೀವೃತ್ತಿ**—ಭರತನಾಟ್ಯಶಾಸ್ತ್ರದಂತೆ ಸುಕುಮಾರ ವಸ್ತ್ರಮಾಲ್ಯಾದಿಗಳಿಂದ ಚಿತ್ರಿತವಾದ ಗೀತ ನೃತ್ಯಾದಿಗಳಧಿಕತೆಯಿಂದ ಕೂಡಿದ ಸ್ತ್ರೀಯರಿಂದ ಪ್ರಯೋಗಿಸಲ್ಪಡುವ, ಕಾಮೋಪಭೋಗಗಳಿಂದ ಜನಿಸುವ ಭಾವುಕತೆಯ ರೀತಿಯು ಕೈಶಿಕೀವೃತ್ತಿ. ಇದರಲ್ಲಿ ನರ್ಮ, ನರ್ಮಸ್ಫಂಜ, ನರ್ಮಸ್ಫೋಟ, ನರ್ಮಗರ್ಭ ಎಂಬ ನಾಲ್ಕು ಬಗೆಗಳಿವೆ.

**ಕೊತ್ತವಾಶಲ್**—ಇದು ತಮಿಳುನಾಡಿನ ತಂಜಾವೂರು ಜಿಲ್ಲೆಯ ಮಾಯಾವರಂ–ತಿರುವಾರೂರು ರೇಲ್ವೆಮಾರ್ಗದಲ್ಲಿ ಪೂಂತೋಟ್ಟಂ ಎಂಬ ನಿಲ್ದಾಣದ ಸಮೀಪದಲ್ಲಿರುವ ಗ್ರಾಮ. ತಾನವರ್ಣಗಳ ಪ್ರಸಿದ್ಧ ವಾಗ್ಗೇಯಕಾರರಾದ ವೆಂಕಟರಾಮಯ್ಯರ್‌ರವರ ಜನ್ಮಸ್ಥಳ. ಇವರು ವೆಂಕಟೇಶ ಎಂಬ ಅಂಕಿತವನ್ನು ಬಳಸಿದ್ದಾರೆ.

**ಕೊಡಿ ಮದ್ದಲೆ**—ಇದು ತಮಿಳುನಾಡಿನ ನೀಲಗಿರಿ ಜಿಲ್ಲೆಯಲ್ಲಿ ಗಿರಿಜನರು ಬಾರಿಸುವ ಮೃದಂಗವನ್ನು ಹೋಲುವ ವಾದ್ಯ. ಇದನ್ನು ಮಾರಿಯಮ್ಮನ ದೇವಾಲಯಗಳಲ್ಲಿ ಉತ್ಸವಗಳ ಕಾಲದಲ್ಲಿ ಬಾರಿಸುತ್ತಾರೆ. ಕೊಡಿ, ಕೊಡಿ, ಕೊಡಿಂತ ಎಂದು ಬಾರಿಸುವುದರಿಂದ ಈ ವಾದ್ಯಕ್ಕೆ ಕೊಡಿ ಮದ್ದಲೆ ಎಂಬ ಹೆಸರು ಬಂದಿದೆ.

**ಕೋಕಿಲಪದಗಳು**—ಇವು ತೆಲುಗು ಯಕ್ಷಗಾನಗಳಲ್ಲಿ ಬರುವ ಪದಗಳು. ಕೋಗಿಲೆಯನ್ನು ಸಂಬೋಧಿಸಿ ರಚಿಸಿರುವ ಪದಗಳು.

**ಕೋಗಿಲೆಹಾಡು**—ಕೋಗಿಲೆಯನ್ನು ಸಂಬೋಧಿಸಿ ತಮಿಳಿನಲ್ಲಿ ಮಾಣಿಕ್ಯವಾಚಕರ್ ಹಾಡಿರುವ ಹತ್ತು ಹಾಡುಗಳು.

**ಕೋಲಿನೃತ್ಯ**—ಇದು ಮಹಾರಾಷ್ಟ್ರ ಮತ್ತು ಪಶ್ಚಿಮ ತೀರಪ್ರದೇಶದ ಕೋಲಿಬೆಸ್ತರ ನೃತ್ಯ.

**ಕೋಲ್ಮಣಿ**—ಇದೊಂದು ತಾಳವಾದ್ಯ ಮಲಬಾರಿನಲ್ಲಿ ಕಾಳಿಪೂಜೆಯಲ್ಲಿ ಉಪಯೋಗಿಸುತ್ತಾರೆ. ಐದು ಜನರು ನೃತ್ಯಮಾಡುತ್ತಾರೆ. ಹಿಡಿಯಿರುವ ಉದ್ದಕ್ಕೂ ಸಣ್ಣ ಲೋಹದ ಚೂರುಗಳನ್ನು ಸೇರಿಸಿರುವ ಕೋಲನ್ನು ಹಿಡಿದು ಕುಣಿಯುತ್ತಾರೆ.

**ಕೊಳತ್ತೂರು ರಾಮಕೃಷ್ಣಶಾಸ್ತ್ರಿ** (೧೯೧೭) – ರಾಮಕೃಷ್ಣಶಾಸ್ತ್ರಿಗಳು ಕರ್ಣಾಟಕದ ಕೋಲಾರ ಜಿಲ್ಲೆಯ ಆನೆಕಲ್ ತಾಲ್ಲೂಕಿನ ಕೊಳತ್ತೂರು ವಿಶ್ವೇಶ್ವರ ಶಾಸ್ತ್ರಿಗಳ ಪುತ್ರರು. ವಿಶ್ವೇಶ್ವರ ಶಾಸ್ತ್ರಿಗಳು ವೇದಪಾಠಶಾಲೆಯ ಪ್ರಾಧ್ಯಾಪಕರಾಗಿದ್ದರು. ರಾಮಕೃಷ್ಣಶಾಸ್ತ್ರಿ ತಮ್ಮ ಪ್ರಾರಂಭದ ಶಿಕ್ಷಣವನ್ನು ವೀಣೆನಾರಣಪ್ಪನವರಲ್ಲೂ, ನಂತರ ಹಲವು ವರ್ಷಗಳಕಾಲ ರತ್ನಗಿರಿ ಸುಬ್ಬಾಶಾಸ್ತ್ರಿಯವರಲ್ಲೂ, ವೀಣೆ ರಾಜಾರಾಯರಲ್ಲೂ ಹೆಚ್ಚಿನ ಶಿಕ್ಷಣ ಪಡೆದುದಲ್ಲದೆ ಸಂಸ್ಕೃತ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿ, ಮೊದಲು ಕೆನರಾ ಬ್ಯಾಂಕಿನ ಕಚೇರಿಯಲ್ಲಿ ಉದ್ಯೋಗಸ್ಥರಾಗಿ, ೧೯೪೩ರಲ್ಲಿ ಬೆಂಗಳೂರಿನ ಕಾರ್ಪೊರೇಷನ್ ಹೈಸ್ಕೂಲಿನಲ್ಲಿ ಅಧ್ಯಾಪಕರಾದರು. ೧೯೬೪ರಲ್ಲಿ ಸಂಗೀತದ ಉಪಾಧ್ಯಾಯರಾಗಿ ಕೆಲಸಮಾಡಿ ೧೯೭೪ರಲ್ಲಿ ನಿವೃತ್ತರಾದರು.

ಶಾಸ್ತ್ರಿಗಳು ಸಂಗೀತಶಾಸ್ತ್ರವನ್ನು ಕುರಿತು ಗ್ರಂಥಗಳನ್ನು ಬರೆದಿದ್ದಾರೆ. ಇವರ ಪ್ರಥಮ ಕೃತಿ ಗಾನಶಾಸ್ತ್ರಪ್ರಕಾಶಿಕೆ. ರಾಮಾಮಾತ್ಯನ ಸ್ವರಮೇಳಕಲಾನಿಧಿ ಎಂಬ ಸಂಸ್ಕೃತ ಗ್ರಂಥವನ್ನು ಕನ್ನಡಿಸಿದ್ದಾರೆ.

**ಕುನ್ನಕ್ಕುಡಿ ವೈದ್ಯನಾಥನ್** (೧೯೩೫)—ತಮಿಳುನಾಡಿನ ರಾಮನಾಡ್ ಜಿಲ್ಲೆಯ ಒಂದು ಮುಖ್ಯವಾದ ಮುರುಗಕ್ಷೇತ್ರವೆನಿಸಿರುವ ಕುನ್ನಕ್ಕುಡಿಯಲ್ಲಿ ವೈದ್ಯನಾಥನ್ ಜನಿಸಿದರು. ಇದರ ತಂದೆ ರಾಮಸ್ವಾಮಿಶಾಸ್ತ್ರಿ ಸಂಸ್ಕೃತ, ತಮಿಳು ಮತ್ತು ಕರ್ಣಾಟಕ ಸಂಗೀತ ವಿದ್ವಾಂಸರಾಗಿದ್ದುದಲ್ಲದೆ ವಾಗ್ಗೇಯಕಾರರೂ, ಹರಿಕಥಾ ವಿದ್ವಾಂಸರೂ ಆಗಿದ್ದರು. ಇಂತಹ ಸಂಗೀತ ವಾತಾವರಣವಿರುವ ಕುಟುಂಬವಲ್ಲಿ ಜನಿಸಿ ಬೆಳೆದ ವೈದ್ಯನಾಥನ್ನಿಗೆ ತಂದೆಯೇ ಸಂಗೀತ ವಿದ್ಯೆಯ ಗುರು. ಒಂದು ಸಲ ಇವರ ತಂದೆಯು ಅಸ್ವಸ್ಥರಾಗಿ ಪ್ರಜ್ಞಾಹೀನರಾದರು. ವೈದ್ಯಕೀಯ ಚಿಕಿತ್ಸೆಯಿಂದ ಗುಣವು ಕಂಡು ಬರಲಿಲ್ಲ. ಆಗ ಮನೆತನದ ವೈದ್ಯರ ಸಲಹೆಯಂತೆ ಪಿಟೀಲಿನಲ್ಲಿ ತಂದೆಗೆ ಪ್ರಿಯವಾದ ಭೈರವಿರಾಗವನ್ನು ನುಡಿಸಿದರು. ಇದನ್ನು ಕೇಳಿದ ಶಾಸ್ತ್ರಿಗಳು ಸ್ವಲ್ಪ ಹೊತ್ತಿನಲ್ಲಿ ಕಣ್ತೆರೆದರು. ಕಾಲಕ್ರಮದಲ್ಲಿ ಗುಣ ಹೊಂದಿದರು. ಮಗನು ಕೀರ್ತಿವಂತನಾಗುವುದನ್ನು ಕಣ್ಣಾರೆ ಕಂಡರು. ವೈದ್ಯನಾಥನ್ ಹೆಸರಾಂತ ಪಕ್ಕವಾದ್ಯ ಪಿಟೀಲುವಾದಕರಾದರು. ಏಳು ಮಲೈವಾಸ ವೆಂಕಟೇಶ, ಇತ್ಯಾದಿ ಹಾಡುಗಳನ್ನು ನುಡಿಸಿರುವ ಗ್ರಾಮಾಫೋನ್ ರೆಕಾರ್ಡುಗಳಿಂದ ಇವರ ಕೀರ್ತಿ ಮತ್ತಷ್ಟು ಹರಡಿತು ಇವರು ತಮ್ಮದೇ ಆದ ಶೈಲಿಯಲ್ಲಿ ತನಿ ಕಚೇರಿಗಳಿಗೆ ಖ್ಯಾತರಾಗಿದ್ದಾರೆ.

**ಕುನ್ನಕ್ಕುಡಿ ಕೃಷ್ಣಯ್ಯರ್** (೧೮೧೬–೧೮೮೮)—ಇವರು ತಮಿಳುನಾಡಿನ ರಾಮನಾಡ್ ಜಿಲ್ಲೆಯ ಕುನ್ನಕ್ಕುಡಿ ಎಂಬ ಗ್ರಾಮದಲ್ಲಿ ಜನಿಸಿದರು. ರಾಮನಾಡ್ ಸಂಸ್ಥಾನದ ಆಸ್ಥಾನ ಸಂಗೀತ ವಿದ್ವಾಂಸರಾಗಿ ರಾಮನಾಡಿನ ದೊರೆ ಮುದ್ದುರಾಮಲಿಂಗ ಸೇತುಪತಿ ಮತ್ತು ಭಾಸ್ಕರ ಸೇತುಪತಿಯವರ ಅಪಾರ ಗೌರವಕ್ಕೆ ಪಾತ್ರರಾಗಿದ್ದರು. ರಾಮಲಿಂಗ ಸೇತುಪತಿಯನ್ನು ಕುರಿತು ಝಂಪತಾಳದಲ್ಲಿ ಕಾಂಭೋಜಿರಾಗವಲ್ಲಿರುವ ಕಮಲಾಕ್ಷಿ ನಿನ್ನೇ ಕೋರಿಯುನ್ನದಿ ಎಂಬ ಪ್ರಸಿದ್ಧ ವರ್ಣವನ್ನೂ, ಭಾಸ್ಕರ ಸೇತುಪತಿಯನ್ನು ಕುರಿತು ಚೌಕಕಾಲ ವರ್ಣಗಳನ್ನು ಕೃಷ್ಣಯ್ಯರ್ ರಚಿಸಿದ್ದಾರೆ. ಅವರು ರಚಿಸಿರುವ ಆದಿತಾಳದಲ್ಲಿರುವ ಶಂಕರಾಭರಣರಾಗದ ನಾಮಿಕಿ ಸರಿಎವ್ವರೇ ಎಂಬ ಪದವರ್ಣವೂ ಬಹಳ ಪ್ರಸಿದ್ಧವಾಗಿದೆ.

ಪಲ್ಲವಿ ಹಾಡುವುದರಲ್ಲಿ ಇವರ ಪ್ರತಿಭೆ ಅಸಾಧಾರಣವಾಗಿತ್ತು. ಅಪರೂಪವಾದ ತಾಳಗಳಲ್ಲಿ ಪಲ್ಲವಿಗಳನ್ನು ರಚಿಸಿ ಇವನ್ನು ಹಾಡಬೇಕೆಂದು ವಿದ್ವಾಂಸರಿಗೆ ಸವಾಲು ಹಾಕುತ್ತಿದ್ದರು. ಇವರಂತೆಯೇ ತಿರುವೈಯ್ಯಾರ್ ಸುಬ್ರಹ್ಮಣ್ಯಾಅಯ್ಯರ್ ಎಂಬುವರು ಕಷ್ಟಕರವಾದ ಎಡುಪ್ಪು ಮತ್ತು ಗತಿಗಳಿರುವ ಪಲ್ಲವಿಗಳನ್ನು ಹಾಡುವಂತೆ ವಿದ್ವಾಂಸರಿಗೆ ಸವಾಲು ಹಾಕುತ್ತಿದ್ದರು ಆಗಿನ ಕಾಲದಲ್ಲಿ ಕೆಲವು ಸಂಗೀತ

ವಿದ್ವಾಂಸರು ಕಷ್ಟಕರವಾದ ಪಲ್ಲವಿಗಳನ್ನು ರಚಿಸಿ ವಿದ್ಯಾಮದದಿಂದ ಕೊಬ್ಬಿದ ಮೃದಂಗ ಮತ್ತು ಇತರ ಪಕ್ಕವಾದ್ಯ ವಿದ್ವಾಂಸರನ್ನು ಅಡಗಿಸಲು ಹಾಡುತ್ತಿದ್ದುದುಂಟು.

ಒಂದು ಸಲ ರಾಮನಾಡಿನಲ್ಲಿ ಸಂಗೀತ ವಿದ್ವಾಂಸರ ಸಭೆಯಲ್ಲಿ ಕೃಷ್ಣಯ್ಯರ್ ೬ಳ ಕಳೆಗಳ ಒಂದು ಪಲ್ಲವಿಯನ್ನು ಹಾಡಿ ಮಹಾವೈದ್ಯನಾಥ ಅಯ್ಯರ್‌ನ್ನು ಹಾಡುವಂತೆ ಹೇಳಿದರು. ಸಾಹಿತ್ಯದಿಂದ ತುಂಬಿದ ಪಲ್ಲವಿಯ ಸಾಹಿತ್ಯವನ್ನು ಇನ್ನೊಂದು ಸಲ ಹೇಳುವಂತೆ ವೈದ್ಯನಾಥ ಅಯ್ಯರ್ ಕೇಳಿದರು. ಇಂತಹ ಸರಳವಾದ ಪಲ್ಲವಿಯ ಸಾಹಿತ್ಯವನ್ನು ಇನ್ನೊಂದು ಸಲ ಹೇಳಬೇಕೇ ಎಂದು ಕೃಷ್ಣಯ್ಯರ್ ಉದ್ಗರಿಸಿದರು. ನಿಮ್ಮ ಪಲ್ಲವಿಯು ರೂಢಿಯಲ್ಲಿರುವ ನಿಯಮಗಳನ್ನು ಅನುಸರಿಸಿಲ್ಲ ಅದು ಒಂದು ತಮಿಳು ಪದ್ಯದಂತಿದೆ ಎಂದರಂತೆ ವೈದ್ಯನಾಥ ಅಯ್ಯರ್. ಹೀಗೆ ಕೃಷ್ಣಯ್ಯರಿಗೆ ಪ್ರಸಿದ್ಧ ವಿದ್ವಾಂಸರಿಗೆ ಸವಾಲುಹಾಕಿ ಅವರನ್ನು ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿಸುವುದು ಒಂದು ಹವ್ಯಾಸವಾಗಿ, ಆದ್ದರಿಂದ ಇವರನ್ನು "ಮುರುಕ್ಕು ಮಿಸಾಸೆ ಜಿಗಿ ಬಿಗಿ ಘನನಯ ದೇಶ್ಯ ರಟ್ಟೆ ಪಲ್ಲವಿ ಕೃಷ್ಣಯ್ಯರ್" ಎಂದು ಕರೆಯುತ್ತಿದ್ದರು.

ರಟ್ಟೆಪಲ್ಲವಿ ಎಂದರೆ ಎರಡು ಬೇರೆ ಬೇರೆ ಪಲ್ಲವಿಗಳನ್ನು ಒಂದಾಗಿ ಹೆಣೆಯುವುದು. ಇದಕ್ಕೆ ಉದಾಹರಣೆಗಳು ಕಡಿಮೆ. ಹಾಡುವವರಂತೂ ತೀರ ಕಡಿಮೆ ರಾಗಮಾಲಿಕೆಯ ಮಾದರಿಯಲ್ಲಿ ಬೇರೆ ಬೇರೆ ರಾಗಗಳಲ್ಲಿರುವ ಪಲ್ಲವಿಗಳನ್ನು ರಚಿಸಿರುವವರಲ್ಲಿ ಕೃಷ್ಣಯ್ಯರ್ ಮೊದಲಿಗರು ಇಂತಹ ಪಲ್ಲವಿಗೆ ಒಂದು ಪ್ರಸಿದ್ಧ ಉದಾಹರಣೆ—"ಶಂಕರಾಭರಣನ್ನೈ ಅಯ್ಯೈತೋಡಿವಾಡಿ ಕಲ್ಯಾಣಿ ದರ್ಬಾರ್‌ಕ್ಕ್." ಇದರಲ್ಲಿ ಶಂಕರಾಭರಣ, ತೋಡಿ, ಕಲ್ಯಾಣಿ ಮತ್ತು ದರ್ಬಾರ್ ರಾಗಗಳ ಹೆಸರುಗಳನ್ನು ಸಾಹಿತ್ಯದಲ್ಲಿ ಅರ್ಥಗರ್ಭಿತವಾಗಿ ಸೇರಿಸಿರುವುದು ಗಮನಾರ್ಹ. ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರಂತೆ ಕೃಷ್ಣಯ್ಯರಿಗೆ ತುಂಬಿದ ಗಂಡು ಶಾರೀರವಿತ್ತು. ಅವರಂತೆಯೇ ಸ್ಥಾಯಿಶ್ರುತಿಯಲ್ಲಿ ಹಾಡುತ್ತಿದ್ದರು ಇವರು ಸ್ವನಾಮ ಮುದ್ರಕಾರರು. ಇವರ ಕೆಲವು ರಚನೆಗಳಲ್ಲಿ ಒಳ್ಳೆಯ ಚಿಟ್ಟೆ ಸ್ವರಗಳೂ, ಕಮಲಾಕ್ಷಿ ಎಂಬವರ್ಣದಲ್ಲಿ ಉತ್ತಮ ಸ್ವರಾಕ್ಷರಗಳೂ ಇವೆ. ಇವರ ಕೆಲವು ಪ್ರಸಿದ್ಧ ರಚನೆಗಳು—

| | | | |
|---|---|---|---|
| ತಾನವರ್ಣ | — ಕಮಲಾಕ್ಷೀ | — ಝಂಪ | — ಕಾಂಭೋಜಿ |
| ಪದವರ್ಣ | — ಸಾಮಿಕಿಸರಿ | — ಆದಿ | — ಶಂಕರಾಭರಣ |
| ಪದಜಾತಿವರ್ಣ | — ಎಂಗೋವೈಭವಮು | — ಆದಿ | — ಕೇದಾರ |
| ಕೃತಿ | — ಶ್ರೀಪಾರ್ವತಿ | — ಅಟ | — ಶ್ರೀರಾಗ |
| | ಭಕ್ತಿಮಾರ್ಗಮೋ | — ಆದಿ | — ಸರಸಾಂಗಿ |
| | ನೀವೇನನ್ನು | — ಆದಿ | — ಕಾಂಭೋಜಿ |
| | ಜೀವಿನೆರುಗ | — ರೂಪಕ | — ಮಂದಾರಿ |
| | ಕಂಬರಾಮಾಯಣತಿಲ್ಲಾನ | — ಆದಿ | — ತೋಡಿ |

**ಕೋಲಾರದ ನಾಗರತ್ನಮ್ಮ**— ನಾಗರತ್ನಮ್ಮನ ತಾಯಿ ನಂಜುಂಡಾನಾನಿ ಆ ಕಾಲದಲ್ಲಿ ಖ್ಯಾತಳಾಗಿದ್ದ ಸಂಗೀತ ವಿದುಷಿ. ಭರತನಾಟ್ಯದಲ್ಲೂ ಪ್ರವೀಣೆಯಾಗಿದ್ದು ಅನೇಕ ಸಭೆಗಳಲ್ಲಿ ಜಯಪತ್ರಗಳಿಸಿದ್ದರು. ನಾಗರತ್ನಮ್ಮ ಪ್ರಸಿದ್ಧಳಾದ ಗಾಯಕಿಯಾಗಿದ್ದರು. ಇವರ ಸಹೋದರ ಪುಟ್ಟಸ್ವಾಮಯ್ಯ ಪಿಟೀಲು ವಾದನಕ್ಕೆ ಹೆಸರುವಾಸಿಯಾಗಿದ್ದರು. ಇವರು ಈ ಶತಮಾನದ ಆದಿಯಲ್ಲಿದ್ದರು.

**ಕಂಡದೇವಿ, ಎಸ್. ಅಳಗರ್ ಸ್ವಾಮಿ (೧೯೨೫)**—ಇವರು ತಮಿಳುನಾಡಿನ ರಾಮನಾಥಪುರಂ ಜಿಲ್ಲೆಯ ಕಂಡದೇವಿ ಗ್ರಾಮದಲ್ಲಿ ಸುಂದರರಾಜ ಅಯ್ಯಂಗಾರ್ ಎಂಬುವರ ಪುತ್ರರಾಗಿ ಜನ್ಮತಾಳಿದವರು. ೧೯೩೪ರಲ್ಲಿ ಚಿಕಪ್ಪ ಚೆಲ್ಲಂ ಅಯ್ಯಂಗಾರ್ಯರಲ್ಲಿ ಪಿಟೀಲುವಾದನದಲ್ಲಿ ಪ್ರಥಮ ಶಿಕ್ಷಣವನ್ನು ಪಡೆದು ಪ್ರೌಢಶಿಕ್ಷಣಕ್ಕಾಗಿ ೧೯೪೦ರಲ್ಲಿ ಸಂಗೀತ ಕಲಾನಿಧಿ ಮೈಸೂರು ಟಿ ಚೌಡಯ್ಯನವರನ್ನು ಆಶ್ರಯಿಸಿದರು ಅವರಂತೆಯೇ ಏಳು ತಂತಿ ಪಿಟೀಲನ್ನು ನುಡಿಸುತ್ತಿದ್ದರು. ಗುರುವಿನಷ್ಟು ಖಚಿತವಾಗಿ ನುಡಿಸಲು ಸಾಧ್ಯವಾಗದೆ ೧೯೪೫ರಲ್ಲಿ ನಾಲ್ಕು ತಂತಿ ಪಿಟೀಲಿನ ಮರೆ ಹೊಕ್ಕು ಪ್ರಾವೀಣ್ಯವನ್ನು ಪಡೆದರು. ಮೈಸೂರಿನ ಬಿಡಾರಂ ಕೃಷ್ಣಪ್ಪನವರ ಪ್ರಸನ್ನ ಸೀತಾರಾಮ ಮಂದಿರದಲ್ಲಿ ಮೊದಲ ಬಾರಿಗೆ ಚೌಡಯ್ಯನವರೊಂದಿಗೆ ನುಡಿಸಿದರು. ಅಲ್ಲಿಂದ ಎಲ್ಲ ಖ್ಯಾತ ವಿದ್ವಾಂಸರೊಂದಿಗೆ ಕಲೆತು ನುಡಿಸುತ್ತ ಬಂದಿದ್ದಾರೆ. ಎಂ. ಎಸ್. ಸುಬ್ಬಲಕ್ಷ್ಮಿಯವರೊಡನೆ ೧೯೭೭ರಲ್ಲಿ ಮನಿಲಾ, ಟೋಕಿಯೋ, ಒಸಾಕಾ, ಹಾಂಕಾಂಗ್, ಬ್ಯಾಂಕಾಕ್ ಮುಂತಾದ ಸ್ಥಳಗಳಿಗೆ ಹೋಗಿ ಬಂದರು. ಕಂಚಿ ಕಾಮಕೋಟಿ ಜಗದ್ಗುರುಗಳು ಇವರಿಗೆ ತಂತ್ರೀನಾದ ವಿಶಾರದ ಎಂಬ ಬಿರುದನ್ನಿತ್ತರು. ಇವರ ವಾದನದಲ್ಲಿ ಇಂಪು, ಸೌಮ್ಯ, ಸಂಪ್ರದಾಯಬದ್ಧತೆ ಎಲ್ಲವೂ ಇವೆ. ಇವರು ಈಗಿನ ಒಬ್ಬ ಉತ್ತಮ ಕಲಾವಿದರು.

**ಕಂದ**—ಸಂಸ್ಕೃತದ ಆರ್ಯಾಗೀತಿ ಅಥವಾ ಗಾಥಾವೃತ್ತವು ಪ್ರಾಕೃತದಲ್ಲಿ ಸ್ಕಂಧಕವೆಂದಾಗಿ, ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ವಿಶೇಷವಾಗಿ ಕಂದ ಎಂದಾಗಿದೆ. ಕಂದಪದ್ಯವು ಮಾತ್ರಾಗಣಗಳಿಂದ ಕೂಡಿರುವ ಒಂದು ಪದ್ಯಜಾತಿ. ಇದರಲ್ಲಿ ನಾಲ್ಕು ಸಾಲುಗಳಿರುತ್ತವೆ. ಒಂದು ಮತ್ತು ಮೂರನೆಯ ಸಾಲುಗಳು ಸಮನಾಗಿಯೂ, ಎರಡು ಮತ್ತು ನಾಲ್ಕು ಸಾಲುಗಳು ಮತ್ತೊಂದು ಸಮನಾಗಿಯೂ ಇರುತ್ತವೆ. ಒಂದು ಮತ್ತು ಮೂರನೆಯ ಚರಣಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳೂ, ಎರಡು ಮತ್ತು ನಾಲ್ಕನೆಯ ಚರಣಗಳಲ್ಲಿ ನಾಲ್ಕು ಮಾತ್ರೆಯ ಐದು ಗಣಗಳೂ ಬರುತ್ತವೆ.

ಉದಾ : ವಿತತ ಪುರಾತನ ಕವಿಕೃತ
ಕೃತಿ ಭೂಷಣ ಭೂಷಿತಾಂಗಿ ಭಾಸತಿ ಭುವನ
ಸ್ತುತ ಕಾಂತಿ ಗುಣಮಿಳಿತಮ
ತ್ಕೃತಿ ನವಸೀಮಂತರತ್ನಮಂ ತಳೆದಸೆವಳ್ ‖ (ರಾಜ ಶೇಖರವಿಲಾಸ)

**ಕಂಪ**—ಇದೊಂದು ಬಗೆಯ ಗಮಕ.

**ಕಂಪವಿಹೀನರಾಗ**—ಸ್ವರಗಳ ಕಂಪನವಿಲ್ಲದೆ [illegible] ರೂಪವು ವ್ಯಕ್ತವಾಗುವ ರಾಗ. ಉದಾ—ಹಂಸಧ್ವನಿ, ಕಪನ ಕುತೂಹಲ ರಾ[illegible]ಯ ರಾಗಗಳಲ್ಲಿ ಸೂಕ್ತವಾದ ಗಮಕಗಳನ್ನು ಬಳಸಿ ಹಾಡಲು ಅವಕಾಶವಿರ[illegible] ಕೆಲವು ಸ್ವರಗಳಿಗೆ ಮಾತ್ರ ಗಮಕಗಳನ್ನು ಬಳಸಿ ಹಾಡಬಹುದಾದ ರಾಗಗಳು ಅರ್ಧಕಂಪಿತ ರಾಗಗಳು. ಎಲ್ಲಾ ಸ್ವರಗಳನ್ನೂ ಗಮಕ ಯುಕ್ತವಾಗಿ ಹಾಡಬಹುದಾದ ರಾಗಗಳು ಮುಕ್ತಾಂಗ ಕಂಪಿತ ಅಥವಾ ಸಂಪೂರ್ಣ ಕಂಪಿತರಾಗಗಳು. ಈ ವರ್ಗೀಕರಣವು ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿವೆ.

**ಕಂಪಿತ**—ಇದು ಹೆಚ್ಚಾಗಿ ಬಳಸಲ್ಪಡುವ ಗಮಕ. ಒಂದು ಸ್ವರವನ್ನು ಒಂದಕ್ಷರಕಾಲ ಕಂಪಿಸಿ ಅದರ ಮೇಲಿನ ಸ್ವರದ ಛಾಯೆಯು ಬರುವಂತೆ ಮಾಡುವುದು ಕಂಪಿತ. ಇದು ದೀರ್ಘ ಅಥವಾ ಹ್ರಸ್ವ, ಘನ ಅಥವಾ ನಯ ಆಗಿರಬಹುದು. ಶ್ರೀರಾಗವಲ್ಲಿ ಗಾಂಧಾರದ ಕಂಪನವು ಹ್ರಸ್ವವಾಗಿದೆ. ಆನಂದಭೈರವಿ ಮತ್ತು ಧನ್ಯಾಸಿ ರಾಗಗಳಲ್ಲಿ ಅದರ ಕಂಪನವು ದೀರ್ಘವಾಗಿರುತ್ತದೆ.

**ಕಂಪಿತಸ್ವರ**—ಕಂಪಿಸಿ ಹಾಡಲಾಗುವ ಸ್ವರ. ಅಠಾಣ ರಾಗದ ಗಾಂಧಾರ, ಆನಂದಭೈರವಿ ರಾಗ ನಿಷಾದವು ಇದಕ್ಕೆ ಉದಾಹರಣೆ.

**ಕಂಸವಧ**—ಇದು ಕಿಳಿಮಾನೂರು ಕೋಯಿಲ್ ತಂಪುರಾನ್ ರಚಿಸಿರುವ ಒಂದು ಕಥಕಳಿ ನೃತ್ಯರೂಪಕ.

**ಕಂಸಾರಿ**—ಈ ರಾಗವು ೮ನೆ ಮೇಳಕರ್ತ ಹನುಮ ತೋಡಿಯ ಒಂದು ಜನ್ಯರಾಗ.

**ಕಿಂಜಿನ್**—ಇದು ಬೊಂಬೆ ಕುಣಿತ. ಬೊಂಬೆಗಳನ್ನು ಕುಣಿಸುವ ಕಲಾವಿದನು ತೆರೆಯ ಹಿಂದೆ ತಾನೇ ನಾಟ್ಯವಾಡುತ್ತಾನೆ. ಮತ್ತು ಕಾಣದಂತೆ ಬೊಂಬೆಗೆ ಕಟ್ಟಿರುವ ಸೂತ್ರಗಳನ್ನು ಆಡಿಸುವುದರ ಮೂಲಕ ಪರದೆಯ ಮುಂದೆ ತಾನಾಡುವ ನಾಟ್ಯವನ್ನು ಆಡಿಸುತ್ತಾನೆ. ಬೊಂಬೆಯನ್ನು ಚೆನ್ನಾಗಿ ಅಲಂಕರಿಸಿರುತ್ತಾರೆ. ಅದು ಕಣ್ಣಿನ ಗುಡ್ಡೆಗಳನ್ನೂ ಸಹ ಆಡಿಸುತ್ತದೆ. ಹರಿಶ್ಚಂದ್ರನ ಕಥೆಯನ್ನು ಆಡಿಸುವ ಮೊದಲು ಈ ಬೊಂಬೆಯನ್ನು ೧೫ ನಿಮಿಷ ಆಡಿಸಿ ಜಾವಳಿಗಳು ಮತ್ತು ಪ್ರೇಮಪದ್ಯಗಳನ್ನು ಹಾಡಲಾಗುವುದು. ಆಗ ಬೊಂಬೆಯು ಚಂದ್ರಮತಿಯಂತೆ ಕಾಣುತ್ತದೆ. ತಮಿಳು ನಾಡಿನ ಕಿಂಜಿನ್ ರಾಧಾಕೃಷ್ಣ ಅಯ್ಯರ್, ಶ್ರೀವಾಂಜಿಯಂ ಅಯ್ಯ ಎಂಬುವರು ಈ ಕಲೆಯಲ್ಲಿ ನಿಷ್ಣಾತರಾಗಿದ್ದರು.

**ಕಿಂಜಿನ್ ನಟೆನಂ**—ಕಥಕ್ ನೃತ್ಯವನ್ನು ತಮಿಳು ನಾಡಿನಲ್ಲಿ ಈ ರೀತಿ ಕರೆಯುತ್ತಾರೆ. ತಂಜಾವೂರಿನ ದೊರೆ ಸರ್ಫೋಜಿ ಭರತನಾಟ್ಯ, ಮೋಡಿನಾಟ್ಯ, ಕಿಂಜಿನ್‌ನಾಟ್ಯ ಇತ್ಯಾದಿ ವಿವಿಧ ನಾಟ್ಯಕಲೆಯ ಪೋಷಕರಾಗಿದ್ದರು.

**ಕಿಂಕಿಣಿಜಾಲ** – ನರ್ತನ ಮಾಡುವವರು ನಡುವಿಗೆ ಹಾಕಿಕೊಳ್ಳುವ ಗೆಜ್ಜೆ ಉಡ್ಯಾಣ.

**ಕಿಣ್ಣಾರಂ** — ತಂಬೂರಿಗೆ ಬಳಕೆಗೆ ಬರುವ ಮುನ್ನ ಬಟ್ಟಲುಗಳಂತಿದ್ದ ಈ ತಾಳಗಳನ್ನು ಬಳಸುತ್ತಿದ್ದರು. ಇದು ಶ್ರುತಿ ಮತ್ತು ಲಯವಾದ್ಯವಾಗಿತ್ತು. ಇದರ ಶ್ರುತಿಯು ಆಧಾರಶ್ರುತಿಯಾಗಿದ್ದು ಗಾಯಕನಿಗೆ ಸರಿಯಾದ ಶ್ರುತಿಯಲ್ಲಿ ಹಾಡಲು ಸಹಾಯಕವಾಗಿತ್ತು. ಪವಿತ್ರಗಾನವು ಹೆಚ್ಚಾಗಿ ರೂಢಿಯಲ್ಲಿದ್ದ ಕಾಲದಲ್ಲಿ ಇದು ಬಳಕೆಯಲ್ಲಿತ್ತು. ತೇವಾರಂಗಳ ಕಾಲದಲ್ಲಿ ಇವನ್ನು ಬಳಸುತ್ತಿದ್ದರು. ಗೋಪಾಲಕೃಷ್ಣ ಭಾರತಿಯು 'ನಂದನಾರ್ ಚರಿತ್ರ'ದಲ್ಲಿ ಈ ವಾದ್ಯವನ್ನು ನಂದನಾರ್ ಬಳಸುತ್ತಿದ್ದರೆಂದು ಹೇಳಿದ್ದಾರೆ

**ಕೆಂದುಳಿ** — ಇದು ಜಯದೇವ ಕವಿಯ ಜನ್ಮಸ್ಥಳವೆಂದು ಹೇಳಲಾದ ಸ್ಥಳ. ಇದಕ್ಕೆ ಕಿಂದುಬಿಲ್ವ ಮತ್ತು ದಿಂದುಬಿಲ್ವ ಎಂಬ ಹೆಸರುಗಳೂ ಇವೆ. ಈಗಿನ ಬಂಗ್ಲಾದೇಶದಲ್ಲಿದೆ. ಒನೆಯ ಅಷ್ಟಪದಿಯಲ್ಲಿ ಈ ಹೆಸರು ಉಕ್ತವಾಗಿದೆ. ಈ ಗ್ರಾಮವು ಒರಿಸ್ಸಾ ದೇಶದಲ್ಲಿದೆಯೆಂದು ಕೆಲವರ ಅಭಿಪ್ರಾಯ.

**ಕ್ರಿಯೆ** – ಕಾಲವನ್ನು ಎಣಿಸುವ ವಿಧಾನಕ್ಕೆ ಕ್ರಿಯೆ ಎಂದು ಹೆಸರು. ಘಾತದಿಂದ ಅಥವಾ ಚಪ್ಪಾಳೆಯಿಂದ ಕಾಲಗಣನೆ ಮಾಡುವುದು ಸಶಬ್ದ ಕ್ರಿಯೆ. ಸದ್ದಿಲ್ಲದೆ ಲೆಕ್ಕಹಾಕುವುದು ನಿಶ್ಶಬ್ದ ಕ್ರಿಯೆ. ಇವಲ್ಲದೆ ಮಾರ್ಗಕ್ರಿಯೆಗಳೂ, ದೇಶ್ಯ ಕ್ರಿಯೆಗಳೂ ಇವೆ. ಇವುಗಳಲ್ಲೂ ಸಶಬ್ದ ಮತ್ತು ನಿಶ್ಶಬ್ದ ಕ್ರಿಯೆಗಳಿವೆ.

**ಕ್ರಿಯಾಂಗ** — ಈ ರಾಗಗಳನ್ನು ಶಾರ್ಙ್ಗದೇವನು ರಾಗಾಂಗ, ಉಪಾಂಗ, ಭಾಷಾಂಗ ಮತ್ತು ಕ್ರಿಯಾಂಗ ರಾಗಗಳೆಂದು ವರ್ಗೀಕರಣ ಮಾಡಿದ್ದಾನೆ. ಪಾರ್ಶ್ವದೇವನ ಸಂಗೀತಸಮಯಸಾರವೆಂಬ ಗ್ರಂಥದಲ್ಲೂ ಕ್ರಿಯಾಂಗ ಸಂಪೂರ್ಣ, ಕ್ರಿಯಾಂಗ ಷಾಡವ ಮತ್ತು ಕ್ರಿಯಾಂಗ ಔಡವ ರಾಗಗಳೆಂಬ ವರ್ಗೀಕರಣವಿದೆ. ಕ್ರಿಯಾಂಗ ರಾಗದ ಸ್ವರೂಪದ ವಿಚಾರವಾಗಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿರಲಿಲ್ಲ. ಕ್ರಿಯಾಂಗ ರಾಗಗಳೆಂದರೆ ಶ್ರೋತೃಗಳಲ್ಲಿ ಉತ್ಸಾಹವನ್ನು ತುಂಬುವ ರಾಗಗಳೆಂದು ಸಂಗೀತ ದರ್ಪಣವೆಂಬ ಗ್ರಂಥಕರ್ತನು ಅಭಿಪ್ರಾಯ ಪಟ್ಟಿದ್ದಾನೆ. ಇತರರ ಅಭಿಪ್ರಾಯದಂತೆ ಅವು ವಿಶೇಷ ಸಂಚಾರಗಳಿಂದ ವ್ಯಕ್ತವಾಗುವ ರಾಗಗಳೆಂದೂ, ಕೆಲವರು ಅವು ವಕ್ರರಾಗಗಳೆಂದೂ, ಕೆಲವರು ಅವು ದೇವಕ್ರಿಯ, ರಾಮಕ್ರಿಯ, ಗಮಕಕ್ರಿಯ ಇತ್ಯಾದಿ ಕೊನೆಯಲ್ಲಿ ಕ್ರಿಯ ಎಂಬ ಪದಬರುವ ಹೆಸರಿನ ರಾಗಗಳೆಂದು ಹೇಳಿದ್ದಾರೆ. ಜನಕ, ಜನ್ಯರಾಗ ಪದ್ಧತಿಯು ಬಳಕೆಗೆ ಬಂದ ಮೇಲೆ ಕ್ರಿಯಾಂಗರಾಗ ಎಂಬ ಹೆಸರು ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ.

**ಕ್ರಿಯಾಂಗ ಔಡವ** — ಪಾರ್ಶ್ವದೇವನ ಸಂಗೀತಸಮಯಸಾರವೆಂಬ ಗ್ರಂಥದಲ್ಲಿ ಹೇಳಿರುವ ಕ್ರಿಯಾಂಗ ರಾಗಗಳ ವರ್ಗಕ್ಕೆ ಸೇರಿದ ಒಂದು ಔಡವರಾಗ.

**ಕ್ರಿಯಾಂಗಾನಿ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಕ್ರಿಯಾವತಿ**—ಈ ರಾಗವು ೫೪ನೇ ಮೇಳಕರ್ತ ವಿಶ್ವಂಭರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಗ ಸ

**ಕ್ರಿಯಾಂಗವಿರಾಮ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ನಿ ದ ಸ

ಅ: ಸ ನಿ ದ ಪ ಮ ದ ಮ ಗ ರಿ ಸ

**ಕ್ರಿಯಾಂಗ ಸಂಪೂರ್ಣ**—ಸಂಗೀತಸಮಯಸಾರವೆಂಬ ಗ್ರಂಥದಲ್ಲಿ ಹೇಳಿರುವ ಕ್ರಿಯಾಂಗ ರಾಗದ ವರ್ಗಕ್ಕೆ ಸೇರಿದ ಸಂಪೂರ್ಣರಾಗ.

**ಕ್ರಿಯಾಂಗಷಾಡವ**—ಅದೇ ಗ್ರಂಥದಲ್ಲಿ ಹೇಳಿರುವ ಕ್ರಿಯಾಂಗ ರಾಗದ ವರ್ಗಕ್ಕೆ ಸೇರಿದ ಷಾಡವರಾಗ.

**ಕೃತಿ**—ಕೃತಿ ಎಂಬುದು ಸಂಗೀತ ರಚನೆಗಳಲ್ಲಿ ಅತ್ಯುತ್ತಮವಾದ ರಚನಾ ವಿಶೇಷ. ಕಳೆದ ಎರಡು ಶತಮಾನಗಳಿಗಿಂತಲೂ ಹಿಂದಿನಿಂದ ಈ ಬಗೆಯ ರಚನೆಗಳನ್ನು ಪ್ರತಿಯೊಬ್ಬ ಪ್ರಸಿದ್ಧ ವಾಗ್ಗೇಯಕಾರರೂ ರಚಿಸುತ್ತ ಬಂದಿದ್ದಾರೆ. ಇದಕ್ಕೆ ಅನ್ವಯವಾಗುವ ನಿರ್ಬಂಧಗಳು ಕಡಿಮೆಯಿರುವುದರಿಂದ ವಾಗ್ಗೇಯಕಾರನ ಪ್ರತಿಭೆಗೆ ಇಲ್ಲಿ ಅಪಾರ ಅವಕಾಶವಿದೆ ಸಂಗೀತರಚನೆಗಳಲ್ಲಿ ಬಹುಭಾಗ ಕೃತಿಗಳೇ ಆಗಿವೆ. ಈಗಿನ ಸಂಗೀತ ಕಚೇರಿಗಳಲ್ಲಿ ಹೆಚ್ಚಾಗಿ ಕೃತಿಗಳನ್ನೇ ಹಾಡುತ್ತಾರೆ ರಾಗ, ತಾಳ, ಗತಿ, ಶೈಲಿ, ವಿಷಯ ಇವುಗಳಲ್ಲಿ ವಾಗ್ಗೇಯಕಾರನಿಗೆ ಸಂಪೂರ್ಣ ಸ್ವಾತಂತ್ರ್ಯವಿರುವುದರಿಂದ ರಾಗಭಾವದ ವಿವಿಧ ಮುಖಗಳನ್ನು ರೂಪಿಸಲು ಈ ಬಗೆಯ ರಚನೆಗಳನ್ನೇ ಹೆಚ್ಚಾಗಿ ರಚಿಸಿದ್ದಾರೆ ಕೃತಿಗಳು ಶುದ್ಧ ಸಂಗೀತದ ಉತ್ತಮ ನಿದರ್ಶನಗಳು.

ತ್ಯಾಗರಾಜರಿಗಿಂತ ಹಿಂದಿನ ತಲೆಮಾರಿನ ಮಾರ್ಗದರ್ಶಿ ಶೇಷಯ್ಯಂಗಾರ್ ಶ್ರೀನಿವಾಸ, ಘನಂಶೀನಯ್ಯ ಮುಂತಾದವರು ಕೃತಿಯ ಪ್ರವರ್ತಕರೆಂದು ಸುಬ್ಬರಾಯ ದೀಕ್ಷಿತರು ಹೇಳಿದ್ದಾರೆ. ಕರ್ಣಾಟಕದಲ್ಲಿ ಈ ಬಗೆಯ ರಚನೆಯು ಹದಿನೈದನೆ ಶತಮಾನದಿಂದ ಬಳಕೆಯಲ್ಲಿದೆ ಎನ್ನಬಹುದು. ಮೊದಲು ಈ ಬಗೆಯ ರಚನೆ ಮಾಡಿದವರು ನರಹರಿತೀರ್ಥ. ಶ್ರೀಪಾದರಾಯರ ಕಾಲದಿಂದ ಹರಿದಾಸರು ಕೃತಿಗಳನ್ನು ರಚಿಸುತ್ತ ಬಂದಿದ್ದಾರೆ. ಪುರಂದರದಾಸರು ಕೃತಿ ಎಂಬ ಗೇಯ ರಚನೆಯನ್ನೂ, ಕೀರ್ತನೆ ಎಂಬ ಶಬ್ದವನ್ನೂ ಪ್ರಪ್ರಥಮವಾಗಿ ಬಳಸಿದ್ದಾರೆ. ಕೃತಿಗಳ ರಚನೆಯು ಪ್ರಾರಂಭವಾದ ಮೇಲೆ ಹಿಂದಿನ ಹಲವು ರಚನಾ ವಿಶೇಷಗಳು ರೂಢಿಯಲ್ಲಿ ನಿಂತು ಹೋದವು. ಕೃತಿಯ ಮುಖ್ಯ ಗುಣ ಅದರಲ್ಲಿರುವ ಸಂಗೀತ.

ತಾಳ್ಳಪಾಕಂ ವಾಗ್ಗೇಯಕಾರರು ಮತ್ತು ಪುರಂದರದಾಸರ ಕಾಲದಿಂದ ಕೃತಿ ಮತ್ತು ಕೀರ್ತನೆಗಳ ವ್ಯತ್ಯಾಸವು ಬೆಳೆದು ಬಂದಿದೆ. ಅದಕ್ಕೆ ಹಿಂದೆ ಇವೆರಡಕ್ಕೂ ವ್ಯತ್ಯಾಸವಿರಲಿಲ್ಲ. ಜಯದೇವ, ಪುರಂದಾರದಾಸರು ಮತ್ತು ನಾರಾಯಣ ತೀರ್ಥರು ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳಿರುವ ರಚನೆಗಳನ್ನು ಮಾಡಿದ್ದರೂ ಕೃತಿಯ ಸಂಪೂರ್ಣ ಸ್ವರೂಪವನ್ನು ವಿಕಾಸಗೊಳಿಸಿ, ಸಂಗತಿಗಳನ್ನು ಅಳವಡಿಸಿ, ನಿರ್ದಿಷ್ಟ ಸ್ವರೂಪವನ್ನು ಕೊಟ್ಟವರು ತ್ಯಾಗರಾಜರು.

ಸುಸ್ವರಂ ಸರಸಂಚೈವ ಸುರಾಗಂ ಮಧುರಾಕ್ಷರಂ ।
ಸಾಲಂಕಾರ ಪ್ರಮಾಣಂ ಚ ಷಡ್ವಿಧಂಗೀತ ಲಕ್ಷಣಂ ॥

ಎಂದು ಗಾಂಧರ್ವ ವೇದದಲ್ಲಿ ಕೃತಿಯ ಆರು ಲಕ್ಷಣಗಳನ್ನು ಹೇಳಿದೆ. ಇದನ್ನು ಬಹುಶಃ ತ್ಯಾಗರಾಜರು ಉಪಯೋಗಿಸಿಕೊಂಡು ಈ ಆರು ಲಕ್ಷಣಗಳಿಗೆ ಸಮನಾಗಿರುವಂತೆ 'ಯತಿ ವಿಶ್ರಮ ಸದ್ಭಕ್ತಿ ವಿರತಿ' ಇದರಲ್ಲಿ ಸಾಹಿತ್ಯದ ಮಾಧುರ್ಯ ಮುಖ್ಯವಾದರೆ ಕೃತಿಯಲ್ಲಿ ಸಂಗೀತ ಕವಿತ್ವವು ಮುಖ್ಯ. ಕೃತಿಯಲ್ಲಿ ಗಾನರಸದ ಅನುಭವವಾದರೆ ಕೀರ್ತನೆಯಲ್ಲಿ ಭಕ್ತಿರಸದ ಅನುಭವವಾಗುತ್ತದೆ. ರಾಗಭಾವವನ್ನು ಚಿತ್ರಿಸುವುದು ಕೃತಿಯ ಮುಖ್ಯಗುರಿಯಾಗಿದ್ದು ಸಾಹಿತ್ಯವು ಗೌಣವಾಗಿರುತ್ತದೆ. ಕೀರ್ತನೆಗಳು ೧೪ನೆ ಶತಮಾನದಲ್ಲಿ ಪ್ರಾರಂಭವಾದುವು.

ಕೃತಿಯ ಸಾಹಿತ್ಯದ ವಿಷಯವು ದೇವತಾಸ್ತುತಿ, ನೀತಿ, ತರ್ಕ, ತತ್ವ ಅಥವಾ ಲೌಕಿಕ ವಿಷಯವಾಗಿರಬಹುದು. ಇದರಲ್ಲಿ ಪದಗಳು ಕಡಿಮೆ. ಹಾಡಲು ಬಹಳ ಅನುಕೂಲ ಇದರ ಸಂಗೀತವು ವಿವಿಧ ಸೌಂದರ್ಯ ವಿಶೇಷಗಳಿಂದ ಕೂಡಿರುತ್ತದೆ. ಪಲ್ಲವಿ, ಅನುಪಲ್ಲವಿಯಲ್ಲದೆ ಒಂದು ಅಥವಾ ಹೆಚ್ಚು ಚರಣಗಳಿರಬಹುದು. ಚರಣಗಳ ಧಾತು ಒಂದೇ ವಿಧವಾಗಿರಬಹುದು ಅಥವಾ ಅದರಲ್ಲಿ ವೈವಿಧ್ಯತೆ ಇರಬಹುದು. ಅತೀತ, ಅನಾಗತ ಪ್ರಯೋಗಗಳು ಬಹುವಾಗಿ ಕೃತಿಗಳಲ್ಲಿವೆ.

ಕೃತಿಗಳು ರಾಗದ ರತ್ನಗಳು. ಅನೇಕ ಅಪೂರ್ವ ರಾಗಗಳು ನಮಗೆ ಕೃತಿಗಳಿಂದ ತಿಳಿದು ಬರುತ್ತವೆ ಹಾಗೂ ಸಂಗೀತ ಶುದ್ಧ ಭಾಷೆಯು ತಿಳಿದುಬರುತ್ತದೆ. ಇವು ಸಾಮಾನ್ಯವಾಗಿ 1½ ಯಿಂದ 2 ಸ್ಥಾಯಿ ವ್ಯಾಪ್ತಿಯಲ್ಲಿವೆ. ಕೀರ್ತನೆಗಳನ್ನು ಅಲ್ಪಸ್ವಲ್ಪ ಸಂಗೀತ ಜ್ಞಾನವಿರುವವರು ಹಾಡಲು ಸಾಧ್ಯ. ಆದರೆ ಕೃತಿಗಳನ್ನು ಹಾಡಲು ಪ್ರತಿಭಾವಂತರೂ, ಶಿಕ್ಷಣ ಪಡೆದವರು ಮಾತ್ರ ಹಾಡಲು ಸಾಧ್ಯ. ಕೀರ್ತನೆಗಳು ಸಮೂಹ ಗಾನಕ್ಕೆ ಯೋಗ್ಯವಾಗಿವೆ. ಕೃತಿಗಳು ಹಾಗಲ್ಲ. ಕೀರ್ತನೆಗಳು ಸಾಮಾನ್ಯವಾಗಿ ಪರಿಚಿತವಾದ ರಾಗಗಳಲ್ಲಿವೆ. ಕೃತಿಗಳಾದರೋ ಸಾಮಾನ್ಯ ಮತ್ತು ಅಪರೂಪ ರಾಗಗಳಲ್ಲಿವೆ. ಅನೇಕ ರಾಗಗಳು ಉಳಿದಿರುವುದು ಕೃತಿಗಳಿಂದ ಸಂಗೀತದ ಸೌಂದರ್ಯಾನುಭವಕ್ಕಾಗಿ ಕೃತಿಗಳನ್ನು ರಚಿಸಿದ್ದಾರೆ. ತೆರತೀಯಗರಾದಾ (ಗೌಳಿಪಂತು) ಕನುಗೊಂಟಿನಿ (ಬಿಲಹರಿ), ನನುಪಾಲಿಂಪ (ಮೋಹನ) ಮುಂತಾದ ಕೃತಿಗಳು ಕೆಲವು ಘಟನೆಗಳು, ಶೋಕ, ಸಂತೋಷ

ದ್ರಾಕ್ಷಾರಸ ನವರಸಯುತ ಕೃತಿ' ಎಂದು ಲಕ್ಷಣಗಳನ್ನು ಹೊಂದಿರುವಂತೆ ಕೃತಿಗಳನ್ನು ರಚಿಸಿದರು.

ಕೃತಿಗಳಲ್ಲಿ ವಿಶೇಷವಾದ ಶೈಲಿ, ನೆರವಲ್ ಮತ್ತು ಕಲ್ಪನೆ ಸ್ವರಗಳಿಗೆ ಅವಕಾಶ ಹೆಚ್ಚು. ಇದರಲ್ಲಿ ಸಾಹಿತ್ಯಕ್ಕಿಂತ ಸಂಗೀತಕ್ಕೆ ಪ್ರಾಧಾನ್ಯ. ಕೀರ್ತನೆಯಲ್ಲಿ ಸಾಹಿತ್ಯವು ಪ್ರಧಾನ. ಸಾಹಿತ್ಯದ ವಿಷಯವು ಭಕ್ತಿಗೆ ಸಂಬಂಧಿಸಿರುತ್ತದೆ. ಕೆಲವು ಕೃತಿಗಳು ಉನ್ನತ ತತ್ವಗಳನ್ನು ಬೋಧಿಸುತ್ತವೆ.

ಕೆಲವು ಕೃತಿಗಳಲ್ಲಿ ಕೆಲವು ಚರಣಗಳ ಧಾತುವು ಅನುಪಲ್ಲವಿಯ ಧಾತುವಿನಂತೆಯೇ ಇರುತ್ತದೆ. ಮುತ್ತುಸ್ವಾಮಿದೀಕ್ಷಿತರ ಕೃತಿಗಳಲ್ಲಿ ಅನುಪಲ್ಲವಿಯ ಧಾತುವು ಚರಣದಲ್ಲಿ ಪುನರಾವರ್ತನೆಯಾಗುವುದಿಲ್ಲ. ಇವರ ಹಲವು ಸರಳವಾದ ರಚನೆಗಳಲ್ಲಿ ಪಲ್ಲವಿ ಮತ್ತು ಅನುಪಲ್ಲವಿ ಮಾತ್ರ ಇವೆ. ಉದಾ : ಶ್ರೀ ಸರಸ್ವತಿ ನಮೋಸ್ತುತೇ (ಆರಭಿ). ಇಂತಹ ಕೃತಿಗಳಲ್ಲಿ ಪಲ್ಲವಿಯ ನಂತರ ಇರುವ ಭಾಗಕ್ಕೆ ಸಮಷ್ಟಿ ಚರಣವೆಂದು ಹೆಸರು. ಅಂದರೆ ಈ ಅಂಗವೇ ಅನುಪಲ್ಲವಿ ಮತ್ತು ಚರಣ ವಾಗಿರುತ್ತದೆ. ಇವುಗಳನ್ನು ಹಿಂದಿನ ಉಗಾಭೋಗಗಳಿಗೆ ಹೋಲಿಸಬಹುದು. ಕೃತಿಯ ಚರಣಗಳಲ್ಲಿ ಒಂದು ಮುದ್ರೆ ಇರುವ ಚರಣವಾಗಿರುತ್ತದೆ. ಪಲ್ಲವಿ ಮತ್ತು ಸಮಷ್ಟಿ ಚರಣಗಳು ಪ್ರಾಸಬದ್ಧವಾಗಿರುತ್ತವೆ. ಕೆಲವು ಕೃತಿಗಳಲ್ಲಿ ಸೌಂದರ್ಯ ವನ್ನು ಹೆಚ್ಚಿಸುವುದಕ್ಕಾಗಿ ಚಿಟ್ಟೆಸ್ವರಗಳನ್ನು ಸೇರಿಸಿರುತ್ತಾರೆ. ಇವು ಸಮಕಾಲ ಅಥವಾ ಮಧ್ಯಮ ಕಾಲದ ಚಿಟ್ಟೆಸ್ವರಗಳಾಗಿರಬಹುದು. ಕೆಲವಲ್ಲಿ ಸ್ವರಾಲಂಕಾರ ಚಿಟ್ಟೆಸ್ವರಗಳಿವೆ. ಕೆಲವಲ್ಲಿ ವಿಲೋಮ ಮತ್ತು ಅನುಲೋಮ ಚಿಟ್ಟೆಸ್ವರಗಳೂ, ಕೆಲವಲ್ಲಿ ಸ್ವರಸಾಹಿತ್ಯವೂ ಇರುವುದುಂಟು.

ಓ ಜಗದಂಬ (ಆನಂದ ಭೈರವಿ), ಸಾಕೇತ ನಗರನಾಥ (ಹರಿಕಾಂಭೋಜಿ), ವಾಚಾಮ ಗೋಚರುಂಡನಿ (ಅಠಾಣ) ಮುಂತಾದ ಕೃತಿಗಳು ಸ್ವರಸಾಹಿತ್ಯವುಳ್ಳ ಕೃತಿಗಳಿಗೆ ನಿದರ್ಶನ. ಶ್ಯಾಮಾಶಾಸ್ತ್ರಿ ಮತ್ತು ಮೈಸೂರು ಸದಾಶಿವರಾಯರ ಕೃತಿಗಳಲ್ಲಿ ಸುಂದರವಾದ ಸ್ವರಸಾಹಿತ್ಯವಿದೆ. ಮಧ್ಯಮಕಾಲ ಸಾಹಿತ್ಯ, ಶೊಲ್ಕಟ್ಟು ಸ್ವರಗಳು, ಸ್ವರಾಕ್ಷರ, ಸಂಗತಿ, ಯಮಕ, ಯತಿ ಮುಂತಾದುವು ಕೃತಿಯ ಸೌಂದರ್ಯವನ್ನು ಹೆಚ್ಚಿಸುತ್ತವೆ. ಕೃತಿಯ ಮುಖ್ಯ ಭಾಗವಾದ ಮಧ್ಯಮಕಾಲ ಸಾಹಿತ್ಯವು ಅನುಪಲ್ಲವಿ ಅಥವಾ ಚರಣ ಅಥವಾ ಇವೆರಡರ ಕೊನೆಯ ಭಾಗದಲ್ಲಿ ಇದ್ದು ಕೃತಿಯ ಗಾಂಭೀರ್ಯವನ್ನು ಹೆಚ್ಚಿಸುತ್ತದೆ.

**ಕೃತ್ರಿಮ**—ಇದು ಐದು ವಿಧವಾದ ನಾದದಲ್ಲಿ ಒಂದು ಬಗೆ. ಮಿಕ್ಕ ನಾಲ್ಕು ಬಗೆಗಳು ಅಪುಷ್ಟ, ಸೂಕ್ಷ್ಮ, ಅತಿಸೂಕ್ಷ್ಮ ಮತ್ತು ಪುಷ್ಟ.

**ಕೃಷ್ಣ** - ಶ್ರೀಮನ್ನಾರಾಯಣನ ಹತ್ತು ಅವತಾರಗಳಲ್ಲಿ ಎಂಟನೆಯ ಅವತಾರ. ಚಂದ್ರವಂಶದ ಯದುಕುಲದಲ್ಲಿ ಜನಿಸಿದ ಸಾತ್ವತರಾಜನ ಸಂತತಿಯಲ್ಲಿ ಶೂರರಾಜನ ಮಗನಾದ ವಸುದೇವನ ಹೆಂಡತಿಯಾದ ದೇವಕಿಯಲ್ಲಿ ಜನಿಸಿದ ಎಂಟು ಮಕ್ಕಳಲ್ಲಿ

ಕೊನೆಯುವನು. ಮುರಳೀಧರ, ವೇಣುಗೋಪಾಲ ಎಂಬ ಇತರ ನಾಮಗಳೂ ಕೃಷ್ಣನಿಗೂ, ಕೊಳಲಿಗೂ ಇರುವ ಸಂಬಂಧ ಸೂಚಿತವಾಗಿದೆ ಹಾಗೂ ಸಂಗೀತವು ದೈವಿಕವಾದುದೆಂಬುದರ ಚಿಹ್ನೆಯಾಗಿದೆ. ಕೃಷ್ಣನನ್ನು ಊದುತ್ತಿದ್ದ ಶಂಖಕ್ಕೆ ಪಾಂಚಜನ್ಯವೆಂದು ಹೆಸರು. ಕೃಷ್ಣನ ಬಾಲಲೀಲೆಗಳು, ಜೀವನಚರಿತ್ರೆ, ಸಾಧನೆ, ಬೋಧನೆ ಮುಂತಾದುವು ಅನೇಕ ಕವಿಗಳಿಗೂ, ವಾಗ್ಗೇಯಕಾರರಿಗೂ ಸ್ಫೂರ್ತಿನೀಡಿದೆ. ಜಯದೇವನ ಗೀತಗೋವಿಂದ, ಕುಲಶೇಖರಾಳ್ವಾರರ ಮುಕುಂದ ಮಾಲಾಸ್ತೋತ್ರ, ನಾರಾಯಣತೀರ್ಥರ ಕೃಷ್ಣಲೀಲಾ ತರಂಗಿಣಿ, ಚಿಕ್ಕದೇವರಾಜ ಒಡೆಯರ ಗೀತೆ ಗೋಪಾಲ ಎಂಬುವು ಕೃಷ್ಣ ಭಕ್ತಿಯಿಂದ ತುಂಬಿದ ಮುಖ್ಯ ರಚನೆಗಳಾಗಿವೆ. ಕೃಷ್ಣ ಮತ್ತು ಗೋಪಿಯರ ಪ್ರೇಮದಲ್ಲಿ ಮಧುರಭಾವ ಮತ್ತು ಭಕ್ತಿತುಂಬಿವೆ. ಕ್ಷೇತ್ರಜ್ಞ ಮತ್ತು ಸಾರಂಗಪಾಣಿ ಮುಂತಾದವರ ಪದಗಳಲ್ಲಿ ಕೃಷ್ಣನು ನಾಯಕ.

**ಕೃಷ್ಣಕರ್ಣಾಮೃತಂ** —ಶ್ರೀಕೃಷ್ಣಕರ್ಣಾಮೃತಂ ಪ್ರಖ್ಯಾತವಾದ ನಾಲ್ಕು ವೈಷ್ಣವ ಭಕ್ತಿ ಕಾವ್ಯಗಳಲ್ಲಿ ಒಂದಾಗಿದೆ. ಕುಲಶೇಖರಾಳ್ವಾರರ ಮುಕುಂದಮಾಲಾ, ಜಯದೇವನ ಗೀತಗೋವಿಂದ, ನಾರಾಯಣತೀರ್ಥರ ಕೃಷ್ಣಲೀಲಾ ತರಂಗಿಣಿ ಇತರ ಮೂರು ಕಾವ್ಯಗಳು. ಇವುಗಳನ್ನು ಓದುವುದರಿಂದ ಭಕ್ತಿಮಾತ್ರವಲ್ಲ, ಕಾವ್ಯದಿಂದ ಒದಗುವ ಉನ್ನತ ರಸಾನುಭವವನ್ನು ಪಡೆಯುತ್ತೇವೆ. ಈ ಗ್ರಂಥಗಳ ದಾರಿ ಬೇರೆ ಬೇರೆ. ಕೃಷ್ಣ ಕರ್ಣಾಮೃತಂ ಶೀರ ಬರಿಯ ಗಾಂಭೀರ್ಯದ ಕಾವ್ಯವೂ ಅಲ್ಲ, ಶೃಂಗಾರಕಾವ್ಯವೂ ಅಲ್ಲ, ಇಂದೊಂದು ಸಂಗೀತ ರೂಪಕ. ಕವಿಯು ದೈವವಾದ ಕೃಷ್ಣನನ್ನು ಮಗುವಾಗಿ, ಎಳೆಯನಾಗಿ, ತರುಣನಾಗಿ, ಪ್ರೌಢನಾಗಿ ಭಾವಿಸಿ ಇಲ್ಲಿ ಶೃಂಗಾರ, ಇಲ್ಲಿ ಹಾಸ್ಯ, ಇಲ್ಲಿ ಗಂಭೀರ ಭಕ್ತಿ ಹೀಗೆ ಬಹು ರೀತಿಯ ಭಾವವನ್ನು ಪ್ರಕಟಿಸುವ ಖಂಡ ಶ್ಲೋಕಗಳ ಸಮುದಾಯ. ಅನೇಕ ಭಾವಗಳನ್ನು ಗುರುತಿಸಲು ತೊಡಗಿರುವ ಈ ಕಾವ್ಯವು ದೀರ್ಘವಾದ ಕಾವ್ಯವಾಗಿದೆ.

ಕವಿಲೀಲಾಶುಕ ಅಥವಾ ಬಿಲ್ವಮಂಗಳ ರಚಿಸಿರುವ ಕೃಷ್ಣಕರ್ಣಾಮೃತದ ಶ್ಲೋಕಗಳೆಲ್ಲ ಏಕಸೂತ್ರವಾಗಿ ಹರಿಯುವ ಪ್ರಸಂಗವಿಲ್ಲದವು. ಯಾವ ಶ್ಲೋಕವೂ ಸ್ವಸಂಪೂರ್ಣ, ಸ್ವತಂತ್ರ. ಒಂದೊಂದೂ ಸ್ತುತಿರೂಪದಲ್ಲಿದೆ ಅದರ ಅರ್ಥ ತಿಳಿಯಲು ಹಿಂದಿನ ಮುಂದಿನ ಶ್ಲೋಕಗಳ ಸಂಗತಿ ತಿಳಿಯಬೇಕು ಎನ್ನುವುದಿಲ್ಲ. ಇಡೀ ಕಾವ್ಯಕ್ಕೆ ಕೃಷ್ಣನೇ ಏಕಮಾತ್ರ ವಸ್ತು ಸಾಮಾನ್ಯವಾಗಿ ಪ್ರತಿಯೊಂದು ಶ್ಲೋಕದಲ್ಲೂ ಕೃಷ್ಣನ ಸೌಂದರ್ಯ ವರ್ಣನೆಯಿದೆ. ಇವುಗಳಲ್ಲಿ ಕವಿಯು ಶ್ರೀ ಕೃಷ್ಣನು ಪುನಃ ಪುನಃ ಮನಸ್ಸಿಗೆ ತಂದುಕೊಳ್ಳುತ್ತಾನೆ. ಆದ್ದರಿಂದ ಪುನರುಕ್ತಿ ಅನಿವಾರ್ಯ. ಜನಪ್ರಿಯವಾಗಿರುವ ಈ ಶ್ಲೋಕದಲ್ಲಿ ಕೃಷ್ಣನ ಮೂರ್ತಿ ಕಣ್ಮುಂದೆ ಬಂದಂತೆ ವರ್ಣಿತವಾಗಿದೆ.

ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ ।
ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂ ಕರೆಕಂಕಣಂ ॥

ಸರ್ವಾಂಗೇ ಹರಿಚಂದನಂ ಚ ಕಲಯನ್ ಕಂಠೇಚ ಮುಕ್ತಾವಲೀಂ ।
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ ಗೋಪಾಲ ಚೂಡಾಮಣಿಃ ॥

ಕಾವ್ಯದಲ್ಲಿ ಬರುವ ಕೃಷ್ಣನ ಮೂರ್ತಿಯ ಹಲವು ವಯಸ್ಸಿನವು. ವಿವಿಧ ಸನ್ನಿವೇಶಗಳು ಮೋಹಕರೂಪ, ಕಾಂತಿ, ಭಂಗಿಗಳ ರಮಣೀಯವಾದ ಚಿತ್ರಗಳು. ಅಂಬೆಗಾಲಿಡುವ ಕೃಷ್ಣ, ಬೆಣ್ಣೆಯನ್ನು ಹಿಡಿದಿರುವ ಕೃಷ್ಣ, ಅಂಗಳದ ಮಣಿಶಿಲೆಯಲ್ಲಿ ನೆರಳಿನಲ್ಲಿ ಬೆಣ್ಣೆಯನ್ನು ಕಂಡು ಅದನ್ನು ತುಡುಕನೋಡಿ ಅದು ದೊರೆಯಲಿಲ್ಲವೆಂದು ಅಳುವ ಕೃಷ್ಣ, ಹಾಲು ಬೇಡುವ, ಬೆಣ್ಣೆ ಕಳುವಕೃಷ್ಣ, ಸಂಜೆ ಬಂದ ದನಗಳ ಮುಂದೆ ನುಗ್ಗಿ ತಾಯಿ ಕೈಗೆ ಸಿಕ್ಕದೆ ಓಡುವ ಕೃಷ್ಣ, ಮಣ್ಣು ತಿಂದದ್ದು ಸುಳ್ಳು ಎಂದು ಸ್ಥಾಪಿಸಲು ತನ್ನ ಬಾಯಿ ತೆರೆದು ತೋರಿದ ಕೃಷ್ಣ, ದನಕಾಯಲು ಹೋಗುವ ಕೃಷ್ಣ, ರಾಮಾವತಾರದ ಕತೆ ಕೇಳುತ್ತ ಸೀತಾಪಹರಣದ ಮಾತು ಬಂದಾಗ ಇದು ಬೇರೆ ಅವತಾರ ಎಂಬುದನ್ನು ಮರೆತು, ಲಕ್ಷ್ಮಣಾ, ನನ್ನ ಧನುಸ್ಸೆಲ್ಲಿ ಎಂದ ಕೃಷ್ಣ, ಗೋವರ್ಧನೋದ್ಧಾರಿ ಕೃಷ್ಣ, ಕಂಸಸಂಹಾರಿ ಕೃಷ್ಣ, ಹೀಗೆ ಕಾವ್ಯದ ಮುನ್ನೂರು ಶ್ಲೋಕಗಳಲ್ಲಿ ಕೃಷ್ಣನ ಚಿತ್ರಗಳು ದೊರೆಯುತ್ತವೆ. ಕವಿಗೆ ಕೃಷ್ಣನ ಎಳೆತನದಲ್ಲಿಯೇ ಒಲವು ಹೆಚ್ಚು. ಕೃಷ್ಣನ ಮುಗ್ಧವೇಷದ ವರ್ಣನೆ ಹೃದಯಂಗಮವಾಗಿದೆ. ಒಡವೆಗಳಿಂದ ಅಲಂಕೃತವಾಗಿ ಅಂಗಳದಲ್ಲಿ ಓಡಾಡುವ ಮಗುವನ್ನು ನೋಡಿ—

ಕಿಂಕಿಣಿ ಕಿಣಿಕಿಣಿ ರಭಸೈರಂಗಣ ।
ಭುವಿರಿಂಗಣ್ಯೈಃ ಸದಾ ಟಂಕಂ ॥
ಕುಂಕುಣು ಕುಣು ಪದಯುಗಳಂ ।
ಕಂಕಣ ಕರಭೂಷಣಂ ಹರಿಂ ವಂದೇ ॥

ಆಲದ ಎಲೆಯ ಮೇಲೆ ಕಾಲು ಬೆರಳುಗಳನ್ನು ಬಾಯಲಿಟ್ಟು ಮಲಗಿರುವ ಮಗು ಕೃಷ್ಣನ ಚಿತ್ರ ಬಹುಸುಂದರ—

ಕರಾರವಿಂದೇನ ಪದಾರವಿಂದಂ ।
ಮುಖಾರವಿಂದೇ ವಿನಿವೇಶಯಂತಂ ॥
ವಟಸ್ಯ ಪತ್ರಸ್ಯ ಪುಟೇಶಯಾನಂ ।
ಬಾಲಂ ಮುಕುಂದಂ ಮನಸಾಸ್ಮರಾಮಿ ॥

ತಾಯಿ ಕೃಷ್ಣನನ್ನು ಕರೆದು ಮಣ್ಣು ತಿಂದೆಯಾ ಎಂದು ಕೇಳಿದಾಗ ಅದು ಬರಿ ಸುಳ್ಳು ಎಂದು ಬಾಯಿ ತೆರೆದು ತೋರಿಸಿದಾಗ ತಾಯಿ ಮಗುವಿನ ಬಾಯಿಯಲ್ಲಿ ವಿಶ್ವವನ್ನೇ ಕಾಣುವ ಸನ್ನಿವೇಶವನ್ನು ನೋಡಿ—

" ಕೃಷ್ಣೇನಾಂಬ ! ಗತೇನ ರಂತುಮಧುನಾ ಮೃದ್ಭಕ್ಷಿತಂ ಸ್ವೇಚ್ಛಯಾ " ।
ತಥ್ಯಂಕೃಷ್ಣ ಕಏವಮಾಹ ಮುಸಲೀ ? " ಮಿಥ್ಯಾಂಬ ಪಶ್ಯಾನನಂ । "
" ವ್ಯಾದೇಹೀ "ತಿ ವಿ ದಾರಿತೇ ಶಿಶುಮುಖೇ ದೃಷ್ಟ್ವಾ ಸಮಸ್ತಂಜಗತ್ ।
ಮಾತಾಯಸ್ಯ ಜಗಾಮ ವಿಸ್ಮಯಪದಂ ಪಾಯಾತ್ಸನಃಕೇಶವಃ ॥

ರಾಸಕೇಳಿಯಲ್ಲಿ ಮಗ್ನನಾಗಿದ್ದ ಕೃಷ್ಣನ ಚಿತ್ರ ಎಷ್ಟು ಶೃಂಗಾರಮಯವಾಗಿ ವರ್ಣಿತವಾಗಿದೆ ಎಂಬುದನ್ನು ಈ ಶ್ಲೋಕವಲ್ಲಿ ಕಾಣಬಹುದು.

ಸಾಯಂಕಾಲೇ ವನಾಂತೇ ಕುಸುಮಿತಸಮಯೇ
ಸೈಕತೇಚಂದ್ರಿಕಾಯಾಂ ।
ತ್ರೈಲೋಕ್ಯಾಕರ್ಷಣಾಂಗಂ ಸುರನರಗಣಿಕಾ
ಮೋಹನಾಪಾಂಗ ಮೂರ್ತಿಂ ॥
ಸೇವ್ಯಂ ಶೃಂಗಾರ ಭಾವೈಃ ನವರಸ ಭರಿತೈಃ
ಗೋಪಕನ್ಯಾ ಸಹಸ್ರೈಃ ।
ವಂದೇಹಂರಾಸಕೇಳೀ ರತಿಮತಿ ಸುಭಗಂ
ವಶ್ಯಗೋಪಾಲ ಕೃಷ್ಣಂ ॥

ಶ್ರೀಕೃಷ್ಣಕರ್ಣಾಮೃತವು ಕೃಷ್ಣನನ್ನು ಕುರಿತ ಕಥೆಗಳ ಮಾಲೆ, ಚಿತ್ರಮಾಲೆ. ಕವಿಯು ಕವನಚತುರ. ಶಬ್ದಬ್ರಹ್ಮವು ಅವನ ವಶವಾಗಿದೆ. ಅವನು ಇಟ್ಟ ಒಂದೊಂದು ಪದವೂ ರಸಘಟ್ಟ, ವಚೋವಿನ್ಯಾಸ ಅವ್ಯಾಹತವಾಗಿ ಓಡುತ್ತದೆ. ಭಾಷೆಯು ಸುಂದರವಾಗಿದೆ. ಅವನು ಸರಸ್ವತಿಯನ್ನು ಸಹಜ ಸರಳೇ ಎಂದಿದ್ದಾನೆ. ಕಾವ್ಯದಲ್ಲಿ ಪ್ರಾಸ, ಅನುಪ್ರಾಸಗಳ ಸೊಗಸಿದೆ: ಸ್ವರಗಳ ವಿನ್ಯಾಸವಿದೆ: ರಚನ ಚಮತ್ಕಾರವಿದೆ · ಬಹುವಿಧದ ಛಂದಸ್ಸಿದೆ: ಅರ್ಥದಲ್ಲಿ ಸರಳತೆ, ಚಾತುರ್ಯಗಳಿವೆ; ಅಲಂಕಾರವಿದೆ: ವ್ಯಂಗ್ಯವಿದೆ: ಶೃಂಗಾರ, ವೀರ, ಕರುಣ, ಹಾಸ್ಯ, ಅದ್ಭುತರಸಗಳಿವೆ. ಈ ಎಲ್ಲಾ ವ್ಯಾಪಾರಗಳನ್ನೂ ಕವಿಯು ಅತಿಮಾನುಷ ಸ್ಥಿತಿಗೆ ಏರಿಸಿದ್ದಾನೆ. ಇವರ ಎಲ್ಲ ಶ್ಲೋಕಗಳನ್ನೂ ರಾಗಗಳಿಗೆ ಅಳವಡಿಸಿದ್ದಾರೆ. ಕೇರಳ ಮತ್ತು ಬಂಗಾಳದಲ್ಲಿ ಹಲವು ಶ್ಲೋಕಗಳನ್ನು ನಾಟ್ಯಕ್ಕೆ ಹೊಂದಿಸಿಕೊಂಡಿದ್ದಾರೆ. ಈ ಕರ್ಣಾಮೃತವಾದ ಕಾವ್ಯಕ್ಕೆ ಕರ್ಣಾನಂದ ಪ್ರಕಾಶಿನೀ, ಶೃಂಗಾರರಂಗದಾ, ಕೃಷ್ಣವಲ್ಲಭಾ, ಸುಬೋಧಿನೀ ಎಂಬ ವ್ಯಾಖ್ಯಾನಗಳಿವೆ.

**ಕೃಷ್ಣನ್, ಟಿ. ಎನ್.** (೧೯೨೮)—ಇವರು ಹಿಂದಿನ ಕೊಚ್ಚಿ ಸಂಸ್ಥಾನದ ತಿರುಪ್ಪುಣಿತ್ತುರೈ ಎಂಬಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ನಾರಾಯಣ ಅಯ್ಯರ್ ರವರ ಪುತ್ರನಾಗಿ ಜನಿಸಿದರು. ಇವರ ಹೆಸರು ತ್ರಯಂಬಕೇಶ್ವರ. ಇವರ ತಾತ ಅಪ್ಪಾದೊರೈ ಭಾಗವತರು ಸಂಗೀತ ವಿದ್ವಾಂಸರಾಗಿದ್ದರು. ತ್ರಯಂಬಕೇಶ್ವರನನ್ನು ಮುದ್ದಾಗಿ ಕೃಷ್ಣ ಎಂದು ಕರೆಯುತ್ತಿದ್ದರಿಂದ ಅದೇ ಹೆಸರು ನಿಂತಿತು. ೧೯೩೪ರಿಂದ ೧೯೩೯ರ ವರಗೆ ತಂದೆಯವರಲ್ಲಿ ಸಂಗೀತ ಶಿಕ್ಷಣವನ್ನು ಪಡೆದರು. ೧೯೪೦ರಿಂದ ಮೂರು ವರ್ಷಗಳ ಕಾಲ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಇವರಿಗೆ ಉತ್ತಮವಾದ ಶಿಕ್ಷಣವನ್ನಿತ್ತು ಪ್ರೋತ್ಸಾಹಿಸಿದರು. ತಮ್ಮ ೧೩ನೆಯ ವಯಸ್ಸಿನಲ್ಲಿ ಪುದುವಯಲ್ ಗ್ರಾಮದಲ್ಲಿ ಮೊಟ್ಟಮೊದಲು ಅರಿಯಕುಡಿಯವರಿಗೆ ಪಕ್ಕವಾದ್ಯ ನುಡಿಸಿದರು. ೧೯೪೪ರಲ್ಲಿ ಮದ್ರಾಸಿನಲ್ಲಿ ನೆಲೆಸಿ ಟಿ. ಆರ್. ಮಹಾಲಿಂಗಂ ಮತ್ತು ಶೆಮ್ಮಂಗುಡಿ

ಯವರಿಗೆ ಪಕ್ಕವಾದ್ಯ ನುಡಿಸಿದರು. ಇವರ ಭವಿಷ್ಯವನ್ನು ರೂಪಿಸುವುದರಲ್ಲಿ ಅಲಿಪ್ಪಿಯ ವಕೀಲ ಪಾರ್ಥಸಾರಥಿ ಅಯ್ಯಂಗಾರ್ಯರ ಪಾತ್ರ ಬಹಳ ಮುಖ್ಯವಾದುದು.

ಕೃಷ್ಣನ್ ಮದ್ರಾಸಿನ ಕರ್ಣಾಟಕ ಸಂಗೀತದ ಕಾಲೇಜಿನಲ್ಲಿ ಪಿಟೀಲು ಅಧ್ಯಾಪಕರಾಗಿದ್ದಾರೆ. ಪಾಶ್ಚಾತ್ಯ ದೇಶಗಳಿಗೆ ಹೋಗಿ ಕಚೇರಿಗಳಲ್ಲಿ ನುಡಿಸಿ ಕೀರ್ತಿಶಾಲಿಯಾಗಿದ್ದಾರೆ. ದಕ್ಷಿಣ ಭಾರತದ ಹಿರಿಯಗಾಯಕರಿಗೆ ಹಲವಾರು ಸಲ ಪಕ್ಕವಾದ್ಯ ನುಡಿಸುತ್ತ ಬಂದಿದ್ದಾರೆ. ತನಿಕಚೇರಿಗಳಲ್ಲಿ ನುಡಿಸುವುದರಲ್ಲಿ ಅಗ್ರಗಣ್ಯರು. ಇವರ ತಂಗಿ ಎನ್. ರಾಜಂ ಹಿಂದೂಸ್ಥಾನೀ ಸಂಗೀತದ ವಿದುಷಿಯಾಗಿ ವಾರಾಣಸಿಯ ಹಿಂದೂ ವಿಶ್ವವಿದ್ಯಾಲಯದಲ್ಲಿ ಹಿಂದೂಸ್ಥಾನಿ ಸಂಗೀತದ ಪಿಟೀಲು ರೀಡರ್ ಆಗಿದ್ದಾರೆ. ಕೃಷ್ಣನ್‌ರವರ ವಾದನದಲ್ಲಿ ಶ್ರುತಿಶುದ್ಧತೆ, ಸಂಪ್ರದಾಯ, ಮಾಧುರ್ಯ, ಲಾಲಿತ್ಯ, ಅಚ್ಚುಕಟ್ಟು, ಖಚಿತವಾದ ಲಯ ಎಲ್ಲವೂ ಇವೆ. ಇವರಿಗೆ ಪದ್ಮಶ್ರೀ ಪ್ರಶಸ್ತಿಲಭಿಸಿದೆ. ಇವರು ಈಗಿನ ಒಬ್ಬ ಪ್ರಸಿದ್ಧ ಪ್ರತಿಭಾವಂತ ಪಿಟೀಲು ವಿದ್ವಾಂಸರು.

**ಕೃಷ್ಣಮೂರ್ತಿ, ಎ. ಆರ್.** (೧೯೧೮)— ಕೃಷ್ಣಮೂರ್ತಿಯವರು ಕರ್ಣಾಟಕದ ಮೈಸೂರು ಜಿಲ್ಲೆಯ ಕೊಳ್ಳೇಗಾಲದಲ್ಲಿ ಜನಿಸಿದರು. ಮೈಸೂರು ಸರ್ಕಾರದ ವಿದ್ಯುತ್‌ಶಕ್ತಿ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದ ಇವರ ತಂದೆ ಎ. ಪಿ. ರಾಮಮೂರ್ತಿ ಯವರಿಗೆ ಬೆಂಗಳೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಭೈರವಿ ಕೆಂಪೇಗೌಡರ ಪ್ರೀತಿಯು ಲಭಿಸಿ ಅವರಲ್ಲಿ ಸಂಗೀತ ಕಲಿತರು. ಕೃಷ್ಣಮೂರ್ತಿಯವರು ಮೊದಲು ತಮ್ಮ ತಂದೆಯವರಲ್ಲೂ, ನಂತರ ಕೊಳ್ಳೆಗಾಲದ ಪಿಟೀಲು ವಿದ್ವಾನ್ ನಾರಾಯಣಸ್ವಾಮಪ್ಪ ನವರಲ್ಲೂ ಸಂಗೀತಾಭ್ಯಾಸಮಾಡಿ, ಬಳಿಕ ಸಂಗೀತರತ್ನ ಟಿ ಚೌಡಯ್ಯನವರಲ್ಲಿ ಪ್ರೌಢಶಿಕ್ಷಣ ಪಡೆದರು. ಉತ್ತಮಗಾಯಕರಾಗಿ ಮದ್ರಾಸ್, ತಿರುಚಿ, ಬೆಂಗಳೂರು ಆಕಾಶವಾಣಿ ಕೇಂದ್ರಗಳಿಂದ ಹಾಡುತ್ತಿದ್ದರು. ಕಲ್ಲಿಕೋಟೆ ಮತ್ತು ದಕ್ಷಿಣ ಭಾರತದ ಇತರ ನಗರಗಳ ಸಭೆಗಳಲ್ಲಿ ಕಚೇರಿಗಳನ್ನು ಮಾಡಿ ವಿಖ್ಯಾತರಾದರು. ಶಾರೀರದ ತೊಂದರೆಯುಂಟಾದುದರ ಪರಿಣಾಮವಾಗಿ ಈಗ ಸಂಗೀತ ಶಿಕ್ಷಣ ನೀಡುವ ವೃತ್ತಿಯನ್ನು ಮಾತ್ರ ಅವಲಂಬಿಸಿದ್ದಾರೆ. ಕೃಷ್ಣಮೂರ್ತಿಯವರು ತುಂಬು ಶಾರೀರವುಳ್ಳ ಗಾಯಕರಾಗಿ ಸಂಪ್ರದಾಯಬದ್ಧವಾಗಿ ಚೆನ್ನಾಗಿ ಹಾಡುತ್ತಿದ್ದರು. ಹಲವು ಕಲಾಶಾಲೆಗಳಲ್ಲಿ ಪ್ರಧಾನಾಚಾರ್ಯರಾಗಿ ಆ ಸಂಸ್ಥೆಗಳನ್ನು ಬೆಳೆಸಿದ್ದಾರೆ. ಇವರ ಕೆಲವು ಪ್ರಮುಖ ಶಿಷ್ಯರು ಯಾರೆಂದರೆ ಹೆಚ್. ಆರ್. ಸೀತಾರಾಮಶಾಸ್ತ್ರಿ, ವಿಶ್ವನಾಥ, ರಾಜಮ್ಮ, ಸಿ. ಆರ್. ಗೌಡ, ರಾಜಲಕ್ಷ್ಮಿರಾಮರಾವ್, ಕೆ. ಎಂ. ಗೋಪಾಲಕೃಷ್ಣ ಮತ್ತು ಶ್ರೀಮತಿ ಗೋಪಾಲಕೃಷ್ಣ, ಪಾಲ್ಘಾಟ್ ಶಂಕರನ್ ಮುಂತಾದವರು.

**ಕೃಷ್ಣಮೂರ್ತಿ, ಹೆಚ್. ವಿ.** (೧೯೨೮)—ಇವರು ಕರ್ಣಾಟಕದ ಚಿಕ್ಕ ಮಂಗಳೂರಿನಲ್ಲಿ ಜನಿಸಿದರು. ಇವರ ತಂದೆ ಹೆಚ್. ವೆಂಕಟರಾಮಯ್ಯನವರು

ಸರ್ಕಾರಿ ಉದ್ಯೋಗದಲ್ಲಿದ್ದರು. ಇವರ ತಾಯಿ ನಾರಾಯಣಸ್ವಾಮಿ ಭಾಗವತರ ಸೋದರಿ ಹೀಗೆ ಸಂಗೀತದಲ್ಲಿ ಅಭಿರುಚಿ ಬೆಳೆಯುವ ವಾತಾವರಣದಲ್ಲಿ ಬೆಳೆದ ಕೃಷ್ಣಮೂರ್ತಿಯವರಿಗೆ ಭಾಗವತರಿಂದ ಎಂಟನೆಯ ವಯಸ್ಸಿನಲ್ಲಿ ಪಿಟೀಲುವಾದನದಲ್ಲಿ ಶಿಕ್ಷಣ ಆರಂಭವಾಯಿತು. ೧೯೩೪ರಲ್ಲಿ ಮೈಸೂರಿಗೆ ಬಂದು ಚೌಡಯ್ಯನವರ ವಾದನಕ್ಕೆ ಮಾರುಹೋಗಿ ಅವರ ಶಿಷ್ಯ ಅಳಗಿರಿಸ್ವಾಮಿಯ ಜೊತೆಯಲ್ಲಿ ಸೇರಿ ನುಡಿಸುತ್ತಿದ್ದರು. ಎಂ. ಎಸ್. ಸಿ. ಪದವೀಧರರಾಗಿ ೧೯೪೪ರಲ್ಲಿ ಬೆಂಗಳೂರಿನಲ್ಲಿ ಕಾರ್ಪೊರೇಷನ್ ಹೈಸ್ಕೂಲು ಉಪಾಧ್ಯಾಯರಾದರು. ೧೯೫೮ರಲ್ಲಿ ಮೆಡಿಕಲ್ ಕಾಲೇಜಿನಲ್ಲಿ ಅಧ್ಯಾಪಕರಾದರು. ೧೯೬೫ರಿಂದ ವೀರಭದ್ರಯ್ಯ ಮತ್ತು ಆನೂರು ರಾಮಕೃಷ್ಣರನ್ನು ಸೇರಿಸಿಕೊಂಡು ತ್ರಯಪಿಟೀಲು ಕಚೇರಿಗಳನ್ನು ಪಾಲ್‌ಘಾಟ್ ಮಣಿ, ಶಿವರಾಮನ್, ದೊರೆ ಮುಂತಾದ ಖ್ಯಾತ ಮೃದಂಗ ವಿದ್ವಾಂಸರೊಡನೆ ಮಾಡುತ್ತಬಂದು ಖ್ಯಾತರಾಗಿದ್ದಾರೆ ಬೆಂಗಳೂರು, ಮದ್ರಾಸ್, ಬೊಂಬಾಯಿ, ಹೈದರಾಬಾದ್, ತಿರುಪತಿ ಮುಂತಾದ ಕಡೆಗಳಲ್ಲೆಲ್ಲ ಇವರ ಕಚೇರಿಗಳು ನಡೆದಿವೆ. ಕೃಷ್ಣಮೂರ್ತಿಯವರು ಉತ್ತಮ ಪಕ್ಕವಾದ್ಯಗಾರರಾಗಿ ಖ್ಯಾತರಾಗಿದ್ದಾರೆ.

**ಕೃಷ್ಣಮೂರ್ತಿ, ಕೆ. ಎಸ್.** (೧೯೨೭)— ಕೃಷ್ಣಮೂರ್ತಿ ಪಾಲ್ಘಾಟಿನ ಬಳಿಯಿರುವ ಕೋಯಲಮ್ಮ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಕೆ. ನಾರಾಯಣ ಅಯ್ಯರ್ ಸಂಗೀತದ ಮನೆತನದವರು. ಪ್ರಾರಂಭದಲ್ಲಿ ಮೃದಂಗದಲ್ಲಿ ಮಗನಿಗೆ ಶಿಕ್ಷಣ ಕೊಡಿಸಿದರು ನಂತರ ಪಾಲ್‌ಘಾಟ್ ಕೆ. ಕುಂಜುಮಣಿ ಮತ್ತು ಪಾಲ್‌ಘಾಟ್ ಟಿ. ಎಸ್ ಮಣಿಯವರಲ್ಲಿ ಕೃಷ್ಣಮೂರ್ತಿ ಪ್ರೌಢಶಿಕ್ಷಣ ಪಡೆದರು. ಸಂಗೀತವನ್ನು ಒಂದು ಉಪವೃತ್ತಿಯನ್ನಾಗಿಟ್ಟುಕೊಂಡು ಬೆಂಗಳೂರಿನಲ್ಲಿ ಫೈರ್ ಸ್ಟೋನ್ ಕಂಪೆನಿಯಲ್ಲಿ ಉದ್ಯೋಗಸ್ಥರಾಗಿದ್ದಾರೆ. ಮೃದಂಗವಾದನವಲ್ಲದೆ ಘಟವನ್ನು ಕಲಿತರು ನಾಡಿನ ಪ್ರಮುಖ ಕಲಾವಿದರ ಕಚೇರಿಗಳಲ್ಲಿ ಈ ವಾದ್ಯವನ್ನು ನುಡಿಸಿ ಖ್ಯಾತರಾದರು. ೧೯೭೫ರಲ್ಲಿ ಪಿ ಭುವನೇಶ್ವರಯ್ಯನವರೊಡನೆ ಮಲೇಶಿಯಾ, ಸಿಂಗಪುರಗಳಲ್ಲಿ ಪ್ರವಾಸಮಾಡಿ ಖ್ಯಾತರಾಗಿ ಹಿಂತಿರುಗಿದರು. ನಂತರ ಪ್ಯಾರಿಸ್ ಮತ್ತು ರೋಂ ನಗರಗಳಿಗೆ ಹೋಗಿ ಕಚೇರಿಗಳಲ್ಲಿ ನುಡಿಸಿದ್ದಾರೆ. ತಮ್ಮ ಶಿಷ್ಯರಿಗೆ ಘಟವಾದ್ಯಕ್ಕಿಂತ ಹೆಚ್ಚಾಗಿ ಮೃದಂಗವಾದನದಲ್ಲಿ ಶಿಕ್ಷಣ ಕೊಡುತ್ತಿದ್ದಾರೆ. ಇವರ ವಾದನದಲ್ಲಿ ನಾದಸೌಖ್ಯ, ಹಿತಮಿತವಾದನುಡಿ, ಲಯಜ್ಞಾನ ಪ್ರಮುಖವಾಗಿವೆ.

**ಕೃಷ್ಣಯ್ಯಂಗಾರ್, ಎಸ್.**—ಇವರು ಮೈಸೂರಿನ ಹರಿಕಥಾ ವಿದ್ವಾಂಸರಾದ ಶ್ರೀನಿವಾಸಯ್ಯಂಗಾರ್ಯರ ಪುತ್ರನಾಗಿ ಜನಿಸಿ ಪ್ರಾರಂಭದಲ್ಲಿ ಸಂಗೀತವನ್ನು ಹೆಚ್. ವಿ. ಕೃಷ್ಣರಾವ್‌ರವರಲ್ಲೂ, ತರುವಾಯ ಅರಮನೆ ಚಂದ್ರಶಾಲೆ ತೊಟ್ಟಿಯಲ್ಲಿ ಆಸ್ಥಾನ ವಿದ್ವಾಂಸರಾಗಿದ್ದ ಸಂಗೀತರತ್ನ ಚಿಕ್ಕರಾಮರಾಯರು, ಮೈಸೂರು ವಾಸುದೇವಾಚಾರ್ಯರು ಮತ್ತು ಬಿಡಾರಂ ಕೃಷ್ಣಪ್ಪನವರಲ್ಲಿ ಪ್ರೌಢಶಿಕ್ಷಣವನ್ನು ಪಡೆದರು. ಸಂಗೀತದ ಕ್ಷೇತ್ರದಲ್ಲೂ ಹರಿಕಥಾಕ್ಷೇತ್ರದಲ್ಲೂ

೫೦ ವರ್ಷಗಳಿಗೂ ಮೀರಿ ಸೇವೆ ಸಲ್ಲಿಸಿದ್ದಾರೆ. ಈಗ್ಗೆ ಸುಮಾರು ೪೫ ವರ್ಷಗಳ ಹಿಂದೆಯೇ ಹರಿಕಥಾ ವಿಶಾರದ ಕೀರ್ತನ ಭೂಷಣ ಮುಂತಾದ ಬಿರುದನ್ನು ಪಡೆದರು. ಮೈಸೂರಿನಲ್ಲಿ ಶ್ರೀಕೃಷ್ಣಗಾಯನ ಸಭೆಯನ್ನು ಸ್ಥಾಪಿಸಿ ಯಶಸ್ವಿಯಾಗಿ ನಡೆಸಿದರು. ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರು ನಡೆಸುತ್ತಿದ್ದ ಕೃಷ್ಣೋತ್ಸವವನ್ನು ೩೫ ವರ್ಷಗಳಿಗಿಂತಲೂ ಹೆಚ್ಚು ಕಾಲ ನಡೆಸಿಕೊಂಡು ಬಂದರು. ಶಿಕ್ಷಣ ಇಲಾಖೆಯಲ್ಲಿ ೩೫ ವರ್ಷಗಳ ಕಾಲ ಸೇವೆ ಸಲ್ಲಿಸಿ ಈಗ ವಿಶ್ರಾಂತರಾಗಿ ಬೆಂಗಳೂರಿನಲ್ಲಿದ್ದಾರೆ. ದೀಕ್ಷಿತರ ನವಗ್ರಹ ಮತ್ತು ನವಾವರಣ ಕೃತಿಗಳು, ಲಕ್ಷಣ ಗೀತೆಗಳು, ತ್ಯಾಗರಾಜ ಹೃದಯ ಎಂಬ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

**ಕೃಷ್ಣಯ್ಯರ್, ಇ.**—ಇವರು ತಮಿಳುನಾಡಿನವರು. ಇವರು ೧೮೯೭ರಲ್ಲಿ ಜನ್ಮತಾಳಿದರು. ೧೯೨೩ರಲ್ಲಿ ವಕೀಲರಾದರು. ತಮ್ಮ ವಿರಾಮಕಾಲವನ್ನು ಭರತನಾಟ್ಯ ಶಾಸ್ತ್ರದ ಅಧ್ಯಯನಕ್ಕಾಗಿ ವಿನಿಯೋಗಿಸಿದರು. ತಮಿಳುನಾಡುರಾಜ್ಯದ ಸಂಗೀತ ನಾಟಕ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. Personalities in the Present day music ಮತ್ತು Bharata Natya and other dances of Tamil Nad ಎಂಬ ಗ್ರಂಥಗಳನ್ನು ಬರೆದಿದ್ದಾರೆ.

**ಕೃಷ್ಣಲೀಲಾತರಂಗಿಣಿ**—ಇದು ಸ್ವಾಮಿನಾರಾಯಣ ತೀರ್ಥರು ರಚಿಸಿರುವ ಸಂಸ್ಕೃತದ ಒಂದು ಶ್ರೇಷ್ಠ ಮತ್ತು ದೀರ್ಘವಾದ ಗೇಯನಾಟಕ. ಜಯದೇವಕವಿಯ ಅಮರಕೃತಿಯಾದ ಗೀತಗೋವಿಂದದಲ್ಲಿ ೧೨ ಸರ್ಗಗಳಿರುವಂತೆ ಇದರಲ್ಲೂ ೧೨ ತರಂಗಗಳಿವೆ. ಇವರ ವಿಷಯವು ಕೃಷ್ಣಾವತಾರದಿಂದ ಆರಂಭವಾಗಿ ಕೃಷ್ಣ-ರುಕ್ಮಿಣೀ ಕಲ್ಯಾಣದೊಂದಿಗೆ ಮುಕ್ತಾಯವಾಗುತ್ತದೆ. ದಕ್ಷಿಣ ಭಾರತದಲ್ಲಿ ಈ ಕೃತಿಯು ಇದರ ಸಂಗೀತ, ಸುಂದರವಾದ ಕವಿತೆ ಮತ್ತು ಉನ್ನತ ಭಾವನೆಗಳಿಗೆ ಪ್ರಸಿದ್ಧವಾಗಿದೆ.

ಕೃಷ್ಣಲೀಲಾತರಂಗಿಣಿಯನ್ನು ವರಹೂರಿನಲ್ಲಿ ಕೃಷ್ಣ ಜನ್ಮಾಷ್ಟಮಿಯ ದಿನ ವರಹೂರು ಪಂಜು ಭಾಗವತರೂ ಮತ್ತು ವರಹೂರು ಗೋಪಾಲ ಭಾಗವತರೂ ಹಾಡಿ ಪ್ರದರ್ಶಿಸುತ್ತಿದ್ದರು. ಈ ಕೃತಿಯು ಒಂದು ಭಜನಗ್ರಂಥ ಮಾತ್ರವಲ್ಲದೆ ಉತ್ತಮವಾದ ಸಂಗೀತ ಕಾವ್ಯವಾಗಿದೆ. ನೃತ್ಯದ ಶೊಲ್ಕಟ್ಟುಗಳನ್ನು ಒಳಗೊಂಡಿದೆ. ದಕ್ಷಿಣ ಭಾರತದ ಸಂಗೀತದ ತ್ರಿರತ್ನದಲ್ಲಿ ಒಬ್ಬರಾದ ತ್ಯಾಗರಾಜರು ಸದಾಶಿವ ಬ್ರಹ್ಮೇಂದ್ರ ಮತ್ತು ನಾರಾಯಣ ತೀರ್ಥರ ಪ್ರಭಾವಕ್ಕೆ ಒಳಗಾಗಿದ್ದರು. ತಮ್ಮ ನಾಟ್ಯರೂಪಕವಾದ ಪ್ರಹ್ಲಾದ ಭಕ್ತವಿಜಯದಲ್ಲಿ ನಾರಾಯಣ ತೀರ್ಥರಿಗೆ ಗೌರವ ಸಲ್ಲಿಸಿದ್ದಾರೆ.

ಕೃಷ್ಣಲೀಲಾ ತರಂಗಿಣಿಯು ಸಾಹಿತ್ಯದ ದೃಷ್ಟಿಯಿಂದ ಮಧುರವಾದ, ಬಹು ಲಲಿತವಾದ ಶ್ರೇಷ್ಠ ಗ್ರಂಥ. ಸಂಸ್ಕೃತ ಭಾಷೆಯಲ್ಲಿ ಗೇಯನಾಟಕದ ಪರಾಕಾಷ್ಠತೆಯನ್ನು ಇದರಲ್ಲಿ ಕಾಣಬಹುದು. ಕೃಷ್ಣನ ಲೀಲೆಗಳನ್ನು ಮನಮುಟ್ಟುವ ಹಾಗೆ ರಂಜಕವಾದ ಸಂಗೀತದ ಭೂಷಣದಲ್ಲಿ ಹೃದಯಂಗಮವಾದ ಭಾಷೆಯಲ್ಲಿ ವಿವರಿಸಲಾಗಿದೆ. ಭಾಗವತದಲ್ಲಿರುವ ಕೃಷ್ಣನಿಗೆ ಸಂಬಂಧಿಸಿದ ಮುಖ್ಯ ಘಟನೆಗಳನ್ನು ಆರಿಸಿ

ಕವಿತಾ ಪ್ರತಿಭೆಯನ್ನೂ ಸಂಗೀತದ ಸೌರಭವನ್ನೂ ಮೇಳೈಸಿ ವಿವರಿಸಲಾಗಿದೆ. ಪ್ರತಿಯೊಂದು ಘಟನೆಯನ್ನು ಕುರಿತು ಕೆಲವು ಶ್ಲೋಕಗಳಲ್ಲಿ ಹೇಳಿ ಅವುಗಳನ್ನು ಸುಂದರವಾದ ಹಾಡುಗಳಿಂದ ಕವಿ ವಿವರಿಸಿದ್ದಾನೆ. ಬ್ರಹ್ಮನ ಘಟನೆಗೆ ಸಂಬಂಧಿಸಿದ ಪ್ರಸಿದ್ಧವಾದ ಜಯಜಯ ಗೋಕುಲ ಬಾಲ, ಯಜ್ಞ ಪತ್ನಿ ಘಟನೆಗೆ ಸಂಬಂಧಿಸಿದ ಬಾಲಗೋಪಾಲ ಕೃಷ್ಣ ಪಾಹಿ ಪಾಹಿ ಮತ್ತು ಬಾಲ ಗೋಪಾಲ ಮಾಮುದ್ಧರ ಕೃಷ್ಣ ಎಂಬುವು ಇದಕ್ಕೆ ನಿದರ್ಶನ. ಗೋಪೀ ವಸ್ತ್ರಾಪಹಾರದ ಘಟನೆಗೆ ಒಂದು ನೂತನ ಸಾಹಿತ್ಯ ಸೌಂದರ್ಯ ಮತ್ತು ತಾತ್ವಿಕ ಅರ್ಥವನ್ನೂ ಕೊಡಲಾಗಿದೆ. ರಾಸಕ್ರೀಡೆ ಮತ್ತು ರಾಧಾಕೃಷ್ಣರಿಗೆ ಸಂಬಂಧಿಸಿದಂತೆ ಅದ್ಭುತವಾದ ನಾಟ್ಯದ ಶೊಲ್ಕಟ್ಟುಗಳಿವೆ. ಸುಂದರವಾದ ಕವಿತೆ, ಅಂತ್ಯಪ್ರಾಸ, ಲಲಿತವಾದ ಸ್ವರತರಂಗ ಮುಂತಾದ ಸಾಹಿತ್ಯದ ಎಲ್ಲಾ ಸೌಂದರ್ಯಾಂಶಗಳನ್ನೂ ಮೇಳೈಸಿ ಉನ್ನತ ಭಾವ, ಸಂಗೀತಗಳನ್ನು ಸೃಷ್ಟಿಸಿರುವುದು ಈ ಕೃತಿಯ ಒಂದು ವೈಶಿಷ್ಟ.

ಇದು ರಾಗ ಮತ್ತು ರಸಗಳಿಗೆ ಅಧಿಕೃತವಾದ ಒಂದು ಮುಖ್ಯಲಕ್ಷ್ಯಗ್ರಂಥ. ಸಂದರ್ಭೋಚಿತವಾಗಿ ಇದರ ಹಾಡುಗಳನ್ನು ಸಂಗೀತಕ್ಕೆ ಅಳವಡಿಸಲಾಗಿದೆ. ಹಾಡುಗಳು ಕೀರ್ತನೆ ರೂಪದಲ್ಲಿವೆ. ಮೊದಲು ಶ್ಲೋಕ, ತರುವಾಯ ವಾಕ್ಯ, ಬಳಿಕ ಹಾಡುಗಳಿವೆ ಶ್ಲೋಕಗಳು, ಚೂರ್ಣಿಕೆಗಳು, ಸಂಗೀತಮಯವಾದ ಚಿಕ್ಕ ಸಂವಾದಗಳು, ದರುಗಳು, ದ್ವಿಪದಿ ಮತ್ತು ಚತುಷ್ಪದಿಗಳು, ಮಧ್ಯೆ ಮಧ್ಯೆ ಜತಿಗಳಿಂದ ಕೂಡಿದ ಹಾಡುಗಳು ಈ ಗ್ರಂಥಕ್ಕೆ ವಿಶೇಷ ಮೆರುಗನ್ನು ಕೊಟ್ಟಿವೆ ಹಾಡುಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ವಿಭಾಗಗಳಿವೆ. ದ್ವಿತೀಯಾಕ್ಷರ ಪ್ರಾಸವನ್ನು ಬಳಸಿದ ಸಂಸ್ಕೃತ ಕವಿಗಳಲ್ಲಿ ನಾರಾಯಣ ತೀರ್ಥ ಒಬ್ಬ ಮೊದಲಿಗರು.

ಈ ಗೇಯನಾಟಕದಲ್ಲಿ ವಿಷ್ಣು, ಬ್ರಹ್ಮ, ಭೂಮಾದೇವಿ, ಸನಕಾದಿ ಮುನಿಗಳು, ದೇವಕಿ, ವಸುದೇವ, ಯಶೋದಾ, ಗೋಪಿಯರು, ಕೃಷ್ಣ, ರುಕ್ಮಿಣಿ ಮತ್ತು ರುಕ್ಮಿಣಿಯ ಪತ್ರವನ್ನು ಕೃಷ್ಣನಿಗೆ ತಲಪಿಸುವ ಬ್ರಾಹ್ಮಣ ಮುಖ್ಯ ಪಾತ್ರಗಳು. ಈ ಗ್ರಂಥದಲ್ಲಿ ಮೂವತ್ತಾರು ರಾಗಗಳನ್ನು ಬಳಸಲಾಗಿದೆ. ಇವುಗಳಲ್ಲಿ ಮಂಗಳ ಕಾಪಿ ಎಂಬುದು ಅಪರೂಪವಾದ ರಾಗ. ಆಹಿರಿ, ಮಂಜರಿ, ದ್ವಿಜಾವಂತಿ, ಕರ್ಣಾಟಕ ಸಾರಂಗ ಮತ್ತು ಗೌರೀರಾಗಗಳಲ್ಲಿರುವ ಹಾಡುಗಳು ವಿಶೇಷವಾದುವು ನಂದ ನಂದನ ಗೋಪಾಲ, ಕ್ಷೇಮಕುರು ಗೋಪಾಲ ಮುಂತಾದ ಕೆಲವು ಹಾಡುಗಳು ಅತ್ಯಂತ ಜನಪ್ರಿಯವಾಗಿವೆ. ಜಯದೇವನ ಅಷ್ಟಪದಿಗಳಂತೆಯೇ ನಾರಾಯಣ ತೀರ್ಥರ ತರಂಗವು ಪವಿತ್ರ ಸಂಗೀತಕ್ಕೆ ಸೇರಿದ ಕೃತಿ. ಇವನ್ನು ದಕ್ಷಿಣ ಭಾರತದಲ್ಲೆಲ್ಲಾ ಹಾಡುವ ಪದ್ಧತಿಯಿದೆ.

ಕೃಷ್ಣಲೀಲಾ ತರಂಗಿಣಿಯಲ್ಲಿ ಕೆಲವು ಕಡೆ ಕೊರತೆಗಳಿರುವುದು ಕಂಡು ಬರುವುದು. ಇದಕ್ಕೆ ಕಾರಣವನ್ನು ಸ್ಥಳದ ಕಥೆಯಿಂದ ತಿಳಿಯಬಹುದು. ವರಹೂರಿನಲ್ಲಿ ನಾರಾಯಣ ತೀರ್ಥರಿದ್ದಾಗ ಈ ತರಂಗಗಳನ್ನು ಗರ್ಭಗುಡಿಯಲ್ಲಿ

ಏಕಾಂತದಲ್ಲಿ ಕುರಿತು ಹಾಡಿದರು. ಮೂಲವಿಗ್ರಹದ ಬಳಿಯಿರುವ ಆಂಜನೇಯನ ವಿಗ್ರಹವು ಯಾವ ಹಾಡುಗಳಿಗೆ ತಾಳ ಹಾಕಿತೋ ಆ ಹಾಡುಗಳನ್ನು ಮಾತ್ರ ಉಳಿಸಿಕೊಂಡು ಮಿಕ್ಕಹಾಡುಗಳು ದೇವರಿಗೆ ಒಪ್ಪಿಗೆಯಿಲ್ಲವೆಂದು ಬಿಟ್ಟುಬಿಟ್ಟರು ಎಂದು ಹೇಳುತ್ತಾರೆ.

**ಕೃಷ್ಣಸ್ವಾಮಿಅಯ್ಯರ್**—ಇವರು ತ್ಯಾಗರಾಜರ ಶಿಷ್ಯರಾಗಿದ್ದ ವೀಣೆ ಕುಪ್ಪಯ್ಯರ್‌ರವರ ಮಕ್ಕಳು. ಇವರು ವೈಣಿಕರೂ ಮತ್ತು ಪಿಟೀಲು ವಿದ್ವಾಂಸರೂ ಆಗಿದ್ದರು.

**ಕೃಷ್ಣಸ್ವಾಮಿ ಅಯ್ಯರ್, ಸಿ. ಎಸ್.**—ಇವರು ಪ್ರಸಿದ್ಧಗಾಯಕ ಮತ್ತು ವಾಗ್ಗೇಯಕಾರರಾಗಿದ್ದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್‌ರವರ ಶಿಷ್ಯರಾಗಿದ್ದರು. ಇವರು ಪ್ರಥಮ ಶಿಕ್ಷಾ ಪ್ರಕರಣಂ (೧೯೧೩) ಎಂಬ ತಮಿಳು ಗ್ರಂಥವನ್ನೂ, ಶತಕೀರ್ತನಸ್ವರಾವಳಿ (೧೯೧೩) ಎಂಬ ತೆಲುಗು ಗ್ರಂಥವನ್ನೂ ರಚಿಸಿದ್ದಾರೆ. ಇವಲ್ಲದೆ ಕೇದಾರಗೌಳ ರಾಗದಲ್ಲಿ ಪರಾಕೇಲನನ್ನು ಎಂಬ ಕೃತಿಯನ್ನೂ, ಒಂಭತ್ತು ರಾಗಗಳಲ್ಲಿ ಶ್ರೀಗಾನಲೋಲ ಎಂಬ ರಾಗಮಾಲಿಕೆಯನ್ನು ಆದಿತಾಳದಲ್ಲಿ ರಚಿಸಿದ್ದಾರೆ.

**ಕೃಷ್ಣಾಟ್ಟಂ**—ಇದು ಕಲ್ಲಿಕೋಟೆಯ ಮಾನವೇದರಾಜನು ೧೬೫೪ರಲ್ಲಿ ರಚಿಸಿದ ನೃತ್ಯನಾಟಕ. ಇದನ್ನು ಕಲ್ಲಿಕೋಟೆಯ ದೇವಾಲಯದಲ್ಲಿ ಪ್ರದರ್ಶಿಸುತ್ತಿದ್ದರು. ಕೃಷ್ಣಾಟ್ಟದ ಪದಗಳನ್ನು ಜಯದೇವಕವಿ ಗೀತಗೋವಿಂದದ ಅಷ್ಟಪದಿಗಳ ಮಾದರಿಯಲ್ಲಿ ರಚಿಸಲಾಗಿವೆ. ಇವು ಸಂಸ್ಕೃತ ಭಾಷೆಯಲ್ಲಿವೆ. ಈಗ ದಕ್ಷಿಣ ಮಲಬಾರಿನ ಗುರುವಾಯೂರು ದೇವಾಲಯದ ವಾರ್ಷಿಕ ಉತ್ಸವದ ಸಂದರ್ಭದಲ್ಲಿ ಈ ನಾಟಕವನ್ನು ಪ್ರದರ್ಶಿಸುತ್ತಾರೆ.

**ಕ್ಷದ್ರಾಕ್ಷಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ರಿ ಮ ಪ ದ ನಿ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಕ್ಷಣ**—ತಾಳದ ಅತಿ ಸೂಕ್ಷ್ಮವಾದ ಭಾಗ. ಅಂದರೆ ಅತಿ ಸೂಕ್ಷ್ಮಕಾಲ. ಇದನ್ನು ಗಣನೆಗೆ ತೆಗೆದುಕೊಳ್ಳುವುದು ಕಷ್ಟ. ಕಮಲದ ದಳವನ್ನು ಒಂದು ಸೂಜಿಯಿಂದ ಚುಚ್ಚಲು ಎಷ್ಟು ಕಾಲವಾಗುತ್ತದೋ ಅಷ್ಟು ಕಾಲಕ್ಕೆ ಕ್ಷಣವೆಂದು ಹೆಸರು.

**ಕ್ಷಣಪ್ರಭೆ**—ಈ ರಾಗವು ೧ನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ದ ಪ ಮ ಗ ಸ

**ಕ್ಷಣಿಕೆ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ದ ಪ ಮ ಗ ಸ

**ಕ್ಷಪಾ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಮ ಗ ರಿ ಸ

**ಕ್ಷಾಂತಿ**—ನಾರದನ ಸಂಗೀತಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಶ್ರುತಿ ಪದ್ಧತಿಯಲ್ಲಿ ಮಧ್ಯಮದ ಮೂರನೆಯ ಶ್ರುತಿಯ ಹೆಸರು.

**ಕ್ಷಿತಿ**—ಭರತನು ಹೇಳಿರುವ ದ್ವಾವಿಂಶತಿ ಶ್ರುತಿಗಳಲ್ಲಿ ಇದು ಪಂಚಮದ ಪ್ರಥಮ ಶ್ರುತಿಯ ಹೆಸರು.

**ಕ್ಷೀರಾಬ್ಧಿಶಾಸ್ತ್ರಿ**—ಇವರು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯವರು. ಶಿವರಾಮಯೋಗಿ ಎಂಬುವರ ಶಿಷ್ಯರು. ಸಂಗೀತ ವಿದ್ವಾಂಸರೂ ವಾಗ್ಗೇಯಕಾರರೂ ಆಗಿದ್ದಲ್ಲದೆ ತಿರುವಾಂಕೂರಿನ ಸ್ವಾತಿತಿರುನಾಳ್ ಮಹಾರಾಜರ ಆಸ್ಥಾನ ವಿದ್ವಾಂಸ ರಾಗಿದ್ದರು. ಇವರು ತಮ್ಮ ಗುರುವಿನ ಹೆಸರಿನಲ್ಲಿ ಶಿವರಾಮ ಎಂಬ ಅಂಕಿತದಲ್ಲಿ ಕೃತಿ ಗಳನ್ನು ರಚಿಸಿರುವರು.

**ಕ್ಷೇತ್ರಯ್ಯ**—ಕ್ಷೇತ್ರಯ್ಯನವರು ಆಂಧ್ರದ ಕೃಷ್ಣಾಜಿಲ್ಲೆಯ ಘಂಟಸಾಲದ ಸಮೀಪದಲ್ಲಿರುವ ಮೂವ್ವಪುರಿ ಎಂಬ ಗ್ರಾಮದಲ್ಲಿ ಜನಿಸಿದರು. ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲ್ಲೂಕಿನ ಮುವ್ವ ಎಂಬ ಗ್ರಾಮದಲ್ಲಿ ಜನಿಸಿದರು ಎಂದು ಮತ್ತೊಂದು ಅಭಿಪ್ರಾಯವಿದೆ. ಇವರು ಆಂಧ್ರದ ತ್ರಿಲಿಂಗ ಬ್ರಾಹ್ಮಣ ಮನೆತನದವರು. ಚಿಕ್ಕಂದಿ ನಲ್ಲಿ ಸಂಗೀತ ಮತ್ತು ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಪಡೆದರು. ಬಾಲ್ಯದಲ್ಲಿ ಒಬ್ಬ ಯೋಗಿಯು ಇವರಿಗೆ ಗೋಪಾಲ ಮಂತ್ರವನ್ನು ಉಪದೇಶಿಸಿ ಅನುಗ್ರಹಿಸಿದರು. ಮೂವ್ವಪುರಿಯ ಗೋಪಾಲಸ್ವಾಮಿಯು ಇವರ ಆರಾಧ್ಯದೈವ. ತನ್ನ ಇಷ್ಟ ದೈವ ವನ್ನು ಭಕ್ತಿಯಿಂದ ಭಜಿಸಿ ದರ್ಶನ ಪಡೆದು ಅನುಗ್ರಹೀತರಾಗಿ ಪದಗಳನ್ನು ರಚಿಸುವ ಕಲೆಯಲ್ಲಿ ಅಸಾಧಾರಣ ಪ್ರತಿಭೆಯನ್ನು ಪಡೆದು ಮೂವಗೋಪಾಲ ಎಂಬ ಅಂಕಿತದಲ್ಲಿ ಪದಗಳನ್ನು ರಚಿಸಿದರು. ಶ್ರೀಪತಿ ಸುತು ಬಾರಿಕಿ ಎಂಬ ಆದಿತಾಳದಲ್ಲಿರುವ ಆನಂದ ಭೈರವಿ ರಾಗದ ಪದವು ಇವರ ಪ್ರಥಮ ರಚನೆ. ಇದರ ಪಲ್ಲವಿ, ಅನುಪಲ್ಲವಿ ಮತ್ತು ಮೂರು ಚರಣಗಳ ಧಾತುವು ಒಂದೇ ವಿಧವಾಗಿದೆ.

ಪ್ರಸಿದ್ಧ ವಾಗ್ಗೇಯಕಾರರಾದ ಕ್ಷೇತ್ರಜ್ಞ ೧೭ನೆ ಶತಮಾನದಲ್ಲಿದ್ದರು. ಇವರು ವೆಂಕಟಮಖಿಯ ಸಮಕಾಲೀನರು ಪದಗಳ ರಚನೆಯಲ್ಲಿ ಅದ್ವಿತೀಯರು. ಇವರು ಅಪೂರ್ವರಾಗಗಳನ್ನು ಬಳಸಿರುವ ರೀತಿ, ಸಾಹಿತ್ಯರಚನೆಯ ಕವಿತಾ ಶಕ್ತಿ ಇವರ

ಪ್ರತಿಭೆಯ ಪ್ರತೀಕವಾಗಿವೆ. ಇವರು ೪೫೦೦ ಪದಗಳನ್ನು ರಚಿಸಿ ಪುರಂದರದಾಸರ ನಂತರ ಬಹುಸಂಖ್ಯೆಯಲ್ಲಿ ಸಂಗೀತ ರಚನೆಗಳನ್ನು ಸೃಷ್ಟಿಸಿರುವ ವಾಗ್ಗೇಯಕಾರರು. ಭಾರತೀಯ ಸಾಹಿತ್ಯದಲ್ಲಿ ಕಂಡುಬರುವ ವಿವಿಧ ನಾಯಕ-ನಾಯಕಿಯರನ್ನು ಚಿತ್ರಿಸುವುದರಲ್ಲಿ, ರಾಗ ಮತ್ತು ರಸಗಳ ವಿವಿಧ ಮುಖಗಳನ್ನು ಚಿತ್ರಿಸುವುದರಲ್ಲಿ ಪದಗಳನ್ನು ಅತ್ಯಂತ ಕುಶಲತೆಯಿಂದ ಬಳಸಿದ್ದಾರೆ. ಇವರು ಪದಗಳ ರಚನೆಯಲ್ಲಿ ಇತರ ವಾಗ್ಗೇಯಕಾರರಿಗೆ ಮಾರ್ಗದರ್ಶಿ. ಜೀವನದ ಪ್ರತಿ ಒಂದು ಸ್ಥಿತಿ ಮತ್ತು ಸನ್ನಿವೇಶವನ್ನು ನಿರೂಪಿಸುತ್ತವೆ ಕ್ಷೇತ್ರಯ್ಯನವರು ತಾಳ್ಳಪಾಕಂ ಅಣ್ಣಮಾಚಾರ್ಯರ ಶೃಂಗಾರ ಸಂಕೀರ್ತನಲು ಮತ್ತು ಹರಿದಾಸರ ಪದಗಳಿಂದ ಸ್ಫೂರ್ತಿ ಪಡೆದಿರಬಹುದೆಂದು ಹೇಳಬಹುದು.

ನಾಯಕ-ನಾಯಕಿಯರ ಪ್ರಬುದ್ಧ ಶೃಂಗಾರ ಭಾವ ಮತ್ತು ರಕ್ತಿರಾಗಗಳ ಅಪೂರ್ವ ರಸೋತ್ಪಾದನೆಯು ಇವರ ಪದಗಳಿಂದ ವ್ಯಕ್ತವಾಗುತ್ತದೆ. ಸೂಳಾದಿ ಸಪ್ತತಾಳಗಳಲ್ಲೂ ಮತ್ತು ಹೆಚ್ಚು ವ್ಯಾಪ್ತಿಯಿಲ್ಲದಿರುವ ಮತ್ತು ಅಪೂರ್ವ ರಾಗಗಳಲ್ಲಿ ಪದಗಳನ್ನು ರಚಿಸಿದ್ದಾರೆ. ಆಹಿರಿ, ಘಂಟಾರವ, ನವರೋಜು, ಮಂಗಳಕೈಶಿಕಾ, ಕರ್ಣಾಟಕ ಕಾಪಿ ಮುಂತಾದ ರಾಗಗಳಲ್ಲಿ ಪದಗಳನ್ನು ರಚಿಸಿದ್ದಾರೆ ಇವುಗಳ ಸಾಹಿತ್ಯ ಮತ್ತು ಲಯವಿನ್ಯಾಸಗಳು ಭಾವರಸ ಪ್ರಧಾನವಾಗಿ ಉತ್ತಮ ಮಟ್ಟದ್ದಾಗಿವೆ. ಅರ್ಥಪುಷ್ಟಿ, ಲಲಿತಪದ ಬಂಧ ಇವರ ಸಾಹಿತ್ಯದ ಮುಖ್ಯ ಲಕ್ಷಣಗಳಾಗಿರುವುದಲ್ಲದೆ ಇವು ಕೈಶಿಕೀ ರೀತಿಯವು ಮತ್ತು ಕವಿತಾ ಪ್ರತಿಭೆಯ ಪ್ರತೀಕಗಳು. ಹಾಡುಗಳ ರಸಕ್ಕೆ ತಕ್ಕ ರಾಗಗಳನ್ನು ಆರಿಸಿಕೊಂಡಿದ್ದಾರೆ. ರಾಗಭಾವವು ಪ್ರತಿಪದದಲ್ಲಿ ಕೆನೆಯಂತೆ ಎದ್ದು ಕಾಣುತ್ತದೆ. ಇವರ ಪದಗಳನ್ನು ಕೇಳುವವರಿಗೆ ರಾಗಗಳು ಸ್ವಾಭಾವಿಕವಾಗಿ ಎದ್ದು ಮೆರೆಯುವುದು ಅನುಭವಕ್ಕೆ ಬರುತ್ತದೆ.

ಕ್ಷೇತ್ರಯ್ಯನವರ ಪದಗಳನ್ನು ಸರಿಯಾಗಿ ಹಾಡಲು ಒಳ್ಳೆಯ ಶಿಕ್ಷಣ ಪಡೆದಿರುವ ಮತ್ತು ರಸಾನುಭವವಿರುವವರಿಗೆ ಮಾತ್ರ ಸಾಧ್ಯ. ಸೂಕ್ಷ್ಮವಾದ ಶ್ರುತಿಗಳು, ಗಮಕಗಳು, ಜಾರು, ತಿರುವುಗಳನ್ನು ತಪ್ಪಿಲ್ಲದೆ ಕಲಾತ್ಮಕವಾಗಿ ಹಾಡುವುದು ಗಾಯಕನ ವಿದ್ವತ್ತು ಮತ್ತು ಯೋಗ್ಯತೆಯ ಪರೀಕ್ಷೆಯಾಗುತ್ತದೆ. ಪದವು ಮುಖ್ಯವಾಗಿ ನಾಟ್ಯದಲ್ಲಿ ಅಭಿನಯಕ್ಕಾಗಿ ರಚಿಸಲ್ಪಟ್ಟಿದ್ದರೂ, ಇದರಲ್ಲಿ ಅಡಕವಾಗಿರುವ ಉತ್ತಮ ಸಂಗೀತಕ್ಕಾಗಿ ಕಚೇರಿಗಳಲ್ಲಿ ಹಾಡುತ್ತಾರೆ. ಹಿರಿಯ ಗಾಯಕರೆಲ್ಲರೂ ಪಲ್ಲವಿಯ ನಂತರ ಒಂದೆರಡು ಪದಗಳನ್ನು ಹಾಡಿ ಅವುಗಳಿಂದ ಉಂಟಾಗುವ ಸಂಗೀತದ ಪ್ರವಾಹದಿಂದ ಶ್ರೋತೃಗಳನ್ನು ಆನಂದದಲ್ಲಿ ಮುಳುಗಿಸುತ್ತಿದ್ದರು ಇವರ ಅನೇಕ ಪದಗಳು ಬಹಿ : ಶೃಂಗಾರ ಮತ್ತು ಅಂತರಂಗ ಭಕ್ತಿಯನ್ನೂ, ಇತರ ಪದಗಳು ಗೌರವ ಶೃಂಗಾರವನ್ನೂ ಒಳಗೊಂಡಿವೆ. ನಾಟ್ಯಕ್ಕೆ ಇವು ಅಮೂಲ್ಯ ರಚನೆಗಳಾಗಿವೆ. ಆದ್ದರಿಂದ ಕ್ಷೇತ್ರಯ್ಯನಿಗೆ ಪದರಚನಾ ಚಕ್ರವರ್ತಿ ಎಂಬ ಕೀರ್ತಿ ಸಂದಿದೆ.

ಕ್ಷೇತ್ರಜ್ಞರ ನಿಜವಾದ ಹೆಸರು ವರದಯ್ಯ. ಇವರು ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿ ಕಾಲಯಾಪನೆ ಮಾಡುತ್ತಿದ್ದುದರಿಂದ ಕ್ಷೇತ್ರಯ್ಯ ಎಂಬ ಹೆಸರು ಬಂದಿತೆಂದು ಪ್ರತೀತಿ. ಇವರು ಹಲವು ಸಂಸ್ಥಾನಗಳಿಗೆ ಹೋಗಿ ತಮ್ಮ ರಚನೆಗಳನ್ನು ಹಾಡುತ್ತಿದ್ದರು. ಮಧುರೆ ಮತ್ತು ತಂಜಾವೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ವೇಡುಕಾತೋ ನಡುಚುಕೊನ್ನ ವಿಟರಾಯುಡೇ ಎಂದು ಆದಿತಾಳದಲ್ಲಿರುವ ದೇವ ಗಾಂಧಾರಿ ರಾಗದ ಪದದಿಂದ ಇವರು ಮಧುರೆಯ ತಿರುಮಲನಾಯಕನ ಆಸ್ಥಾನದಲ್ಲಿ ೧೦೦೦ ಪದಗಳನ್ನೂ, ತಂಜಾವೂರು ಆಸ್ಥಾನದಲ್ಲಿ ೨೦೦೦ ಪದಗಳನ್ನೂ ಗೋಲ್ಕೊಂಡದ ದೊರೆಯ ಸಮ್ಮುಖದಲ್ಲಿ ೧೧೦೦ ಪದಗಳನ್ನೂ ಹಾಡಿದರೆಂದು ತಿಳಿದುಬರುತ್ತದೆ. ಕಂಚಿವರದರಾಜಸ್ವಾಮಿಯನ್ನು ಕುರಿತು ಮುಂದಟಿವಲೆನಾಪ್ಪೈ, ತಿರುವಳ್ಳೂರಿನ ವೀರರಾಘವಸ್ವಾಮಿಯನ್ನು ಕುರಿತು ಸಾಮಿಕಿ ಸರಿ ಎವ್ವರೇ, ಚಿದಂಬರದ ಗೋವಿಂದರಾಜಸ್ವಾಮಿಯನ್ನು ಸ್ತುತಿಸಿ ವಿಂದು ಬೂಚಿ ತಿರುಗೆನೆ, ಶ್ರೀರಂಗದ ರಂಗನಾಥಸ್ವಾಮಿಯನ್ನು ಕುರಿತು ಪಚ್ಚಿಯೊದಲಿ ದೇವರಾ, ಆದಿವರಾಹ ಸ್ವಾಮಿಯನ್ನು ಕುರಿತು ಅಂದಗಾದಾ, ಚೆವ್ವಂಡಿ ಲಿಂಗೇಶ್ವರನನ್ನು ಕುರಿತು ಅಕ್ಕರೊ ಮಗವಾರಿ, ತೂಪಾಕುಲ ವೆಂಕಟಕೃಷ್ಣ ದೇವರನ್ನು ಕುರಿತು ಏಮನೇನೆ ಮಂದಿ ಸುದ್ದುಲು ಎಂಬ ಪದಗಳನ್ನೂ, ಸಿಂಹಳದ ಕದಿಗ್ರಾಮದ ದೇವಾಲಯದ ವೆಂಕಟೇಶ್ವರ ಮತ್ತು ಸ್ಕಂದನನ್ನು ಕುರಿತು ಪದಗಳನ್ನು ಹಾಡಿದ್ದಾರೆ.

ಇವರು ತಂಜಾವೂರಿನಲ್ಲಿದ್ದಾಗ ದೊರೆ ವಿಜಯ ರಾಘವನಾಯಕನ ಪ್ರಾರ್ಥನೆಯ ಮೇರೆ ರಾಜಾಂಕಿತದಲ್ಲಿ ಪ್ರಸಿದ್ಧವಾಗಿರುವ ವಿಜಯರಾಘವ ಪಂಚರತ್ನ ಎಂಬ ಐದು ಪದಗಳ ಮಾಲಿಕೆಯನ್ನು ರಚಿಸಿದರು. ಇವುಗಳಲ್ಲಿ ಸುದಿನ ಮಾಯೆನೆ ಮತ್ತು ದೊಂತರವಿಡೆಮುತೊ ಎಂಬುವು ಬಹು ಪ್ರಸಿದ್ಧವಾಗಿವೆ. ನಾಯಕನು ಕ್ಷೇತ್ರಜ್ಞರನ್ನು ಸನ್ಮಾನಿಸಿದ್ದನ್ನು ಸಹಿಸದ ಕೆಲವು ಆಸ್ಥಾನ ವಿದ್ವಾಂಸರು ಪದಗಳಲ್ಲಿ ಬಳಸಿರುವ ಸಾಹಿತ್ಯವನ್ನು ಕುರಿತು ಟೀಕೆ ಮಾಡಿದರು. ಇದನ್ನು ತಿಳಿದ ಕ್ಷೇತ್ರಯ್ಯ ಕೂಡಲೇ ತ್ರಿಪುಟತಾಳ ಮತ್ತು ಕಾಂಭೋಜಿ ರಾಗದಲ್ಲಿ ವದರಕಪೋವೇ ಎಂಬ ಪದವನ್ನು ಕೊನೆಯ ಚರಣವನ್ನು ಬಿಟ್ಟು ರಚಿಸಿ ದೊರೆಗೆ ಕೊಟ್ಟು ಅದನ್ನು ಆಸ್ಥಾನ ವಿದ್ವಾಂಸರಿಂದ ಸಂಪೂರ್ಣಗೊಳಿಸಬೇಕೆಂದು ಸಲಹೆಮಾಡಿ ಸೇತು ಯಾತ್ರೆಗೆ ತೆರಳಿದರು. ಆ ವಿದ್ವಾಂಸರು ಅದನ್ನು ಪೂರ್ತಿಗೊಳಿಸಲು ವಿಫಲರಾಗಿ, ಅಹಂಕಾರ ವರ್ಜಿತರಾಗಿ ಕ್ಷೇತ್ರಯ್ಯನವರು ಹಿಂತಿರುಗುವುದನ್ನು ಎದುರು ನೋಡುತ್ತಿದ್ದು ಅವರು ಬಂದನಂತರ ಒಟ್ಟಿಗೆ ಅವರನ್ನು ಭೇಟಿಮಾಡಿ ಕ್ಷಮೆ ಬೇಡಿದರು. ವಿದ್ವಾಂಸರ ಸ್ಥಿತಿಯಿಂದ ಮರುಕಗೊಂಡು ತಕ್ಷಣವೇ ಈ ರೀತಿ ಉತ್ತರ ಹೇಳಿದರು :

" ರಾಮರಾಮ ! ಈಮೆನಿತೊನಿಕವಾನಿ
ಮೋಮು ಜೂಡವಲೆನಾ ?
ಮೊದಟ ಪೋಂದೆಚಾಲು "

ಈ ಉತ್ತರವೇ ಅವರು ಪೂರ್ತಿಗೊಳಿಸದೆ ಬಿಟ್ಟಿದ್ದ ಪದದ ಚರಣವಾಯಿತು. ಇದು ಆ ಪದದ ಪೂರ್ವಾರ್ಧದ ಸಾಹಿತ್ಯಕ್ಕೆ ಛಂದೋಬದ್ಧವಾಗಿ ಹೊಂದಿಕೊಳ್ಳುವುದಲ್ಲದೆ ಹಿಂದೆ ವ್ಯಕ್ತಗೊಳಿಸಿರುವ ಭಾವವನ್ನು ಪೂರ್ಣಗೊಳಿಸುತ್ತದೆ. ಆಸ್ಥಾನ ವಿದ್ವಾಂಸರು ಇವರ ಪ್ರತಿಭೆಯನ್ನು ಮೆಚ್ಚಿ ದೊರೆಗೆ ತಿಳಿಸಿದರು. ಮೂರನೆ ಚರಣದ ಮೊದಲ ಭಾಗವು ಈ ರೀತಿಯಿದೆ.

ಭಾಮರೊ ! ಶಕುನ ಮುಲಡಿಗಿತಿ
ಮೂವ್ವಗೋಪಾಲುಡು ವಚ್ಚುನನಿ
ಕಾಮಿಂಚಿ ನಾಥುಲಗಲಯು ಚೇಲುಲಜೂಚಿ ಕರಗಿ ಚಿಂತನನೊಂದಿತಿ.

ಕ್ಷೇತ್ರಯ್ಯನವರ ಪದಗಳ ಹಸ್ತಪ್ರತಿಗಳಲ್ಲಿ ಪ್ರತಿಯೊಂದು ಪದಕ್ಕೆ ಸಂಬಂಧಿಸಿದಂತೆ ಅದನ್ನು ಯಾವ ಸನ್ನಿವೇಶದಲ್ಲಿ ಹಾಡಬೇಕು, ಅದರಲ್ಲಿ ಬರುವ ನಾಯಕ ನಾಯಕಿ ಎಂತಹವರು, ಯಾರನ್ನು ಸಂಬೋಧಿಸಿ ಹಾಡಲಾಗಿದೆ ಇತ್ಯಾದಿ ವಿಷಯಗಳನ್ನು ಕುರಿತು ಟಿಪ್ಪಣಿ ಕೊಡಲಾಗಿದೆ. ಕೆಲವು ಪದಗಳಲ್ಲಿ ಗೋಪಾಲ ಎಂಬ ಅಂಕಿತವಿದೆ. (ವದ್ದಂತೆನೆ-ಪಂತುವರಾಳಿ-ಆನಂದ ಭೈರವಿ, ಮಂಚಿದಿನ ಮುನೇಡೆ-ಆನಂದಭೈರವಿ).

ಕ್ಷೇತ್ರಜ್ಞರ ಪದಗಳು ಶೃಂಗಾರಪದಗಳು. ಇವು ಶೃಂಗಾರರಸ ಪ್ರಧಾನವಾಗಿದ್ದರೂ ಪ್ರೇಮದ ಶುದ್ಧ ಸ್ವರೂಪವಾದ ಭಕ್ತಿಯಿಂದ ಕೂಡಿದ್ದು ಸಂಗೀತ ಶಾಸ್ತ್ರದ ನಿಯಮಗಳಿಗೆ ಅನುಸಾರವಾಗಿ ರಚಿಸಲ್ಪಟ್ಟಿವೆ. ಇವುಗಳಲ್ಲಿ ಸುಂದರವಾದ ಪದಗರ್ಭಗಳಿವೆ. ಜೀವಾತ್ಮನು ಪರಮಾತ್ಮನನ್ನು ಪಡೆಯಲು ಹಂಬಲಿಸುತ್ತಿರುವುದನ್ನು ಚಿತ್ರಿಸುವುದು ಈ ಪದಗಳ ಮುಖ್ಯ ಗುರಿ. ಪಲ್ಲವಿ ಮತ್ತು ಅನುಪಲ್ಲವಿಗಳಲ್ಲದೆ ಪ್ರತಿಯೊಂದರಲ್ಲೂ ಮೂರು ಚರಣಗಳಿವೆ. ಭಾರತೀಯ ವಾಗ್ಗೇಯಕಾರರಲ್ಲಿ ಕ್ಷೇತ್ರಯ್ಯನವರ ಸ್ಥಾನವು ಹಿರಿದಾದುದು. ಸಂಗೀತದ ತ್ರಿರತ್ನರಾದ ತ್ಯಾಗರಾಜರು, ದೀಕ್ಷಿತರು ಮತ್ತು ಶ್ಯಾಮಾಶಾಸ್ತ್ರಿ ಮತ್ತು ಇತರರು ಈ ಪದಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಈ ಪದಗಳನ್ನು ಭರತನಾಟ್ಯ ಪ್ರದರ್ಶನಗಳಲ್ಲಿ ಮಾತ್ರವಲ್ಲದೆ ಸಂಗೀತ ಕಚೇರಿಗಳಲ್ಲಿ ಹಾಡುತ್ತಿರುವುದು ಅವುಗಳ ಶ್ರೇಷ್ಠತೆಯ ನಿದರ್ಶನ. ಆಕರ್ಷಣೀಯವಾದ ನಾಯಕನಾಯಕೀ ಭಾವವಿರುವ ಕೃತಿಗಳನ್ನು ಅನೇಕ ವಾಗ್ಗೇಯಕಾರರು ರಚಿಸಿದ್ದಾರೆ. ಆದರೆ ಇವರೆಲ್ಲರಿಗಿಂತ ಕ್ಷೇತ್ರಯ್ಯನವರ ಸ್ಥಾನ ಹಿರಿದಾದುದು.

ಧಾತು ಮತ್ತು ಮಾತುಗಳನ್ನು ಅತ್ಯುತ್ತಮವಾಗಿ ಮೇಳೈಸಿ ವಿವಿಧ ರಸಗಳನ್ನು ನಿರೂಪಿಸುವುದರಲ್ಲಿ. ಪ್ರತಿಯೊಂದು ಚಿಕ್ಕ ಸನ್ನಿವೇಶವನ್ನು ಬಣ್ಣಬಣ್ಣವಾಗಿ ಚಿತ್ರಿಸುವುದರಲ್ಲಿ ರಾಗಗಳ ರಸವನ್ನು ಎತ್ತಿತೋರಿಸುವುದರಲ್ಲಿ, ಯಾವ ಭಾವನೆಗೆ ಯಾವ ರಾಗವು ಸಮರ್ಪಕವಾದುದು ಎಂಬುದನ್ನು ಆರಿಸಿರುವುದರಲ್ಲಿ, ಒಂದು ಭಾವನೆಯ ಹಲವು ಮುಖಗಳನ್ನು ತೋರಿಸುವುದರಲ್ಲಿ ಅವರು ಅದ್ವಿತೀಯರು.

ಶೋಕದಲ್ಲಿ ಹಲವು ವಿಧಗಳಿವೆ—ತೋರಿಕೆಯ ಶೋಕ, ಸಾಧಾರಣ ಶೋಕ, ಹೃದಯ ವಿದ್ರಾವಕವಾದ ಶೋಕ ಇತ್ಯಾದಿ. ನಾಯಕನ ದೀರ್ಘ ಕಾಲದ ಅಗಲಿಕೆಯಿಂದ ಬೇಸರ ಹೊಂದಿದ ನಾಯಕಿ ತನ್ನ ಬೇಸರವನ್ನು ಚಿತ್ರಿಸುವ ಪದಗಳು, ಅಸೂಯೆ, ನಿಸ್ಸಹಾಯಕತೆ, ನಿರಾಶೆ ಮುಂತಾದುವುಗಳ ನಿರೂಪಣೆಯಿರುವ ಪದಗಳಿಗೆ ಬಳಸಿರುವ ರಾಗಗಳು ಆಯಾ ಸನ್ನಿವೇಶದ ಉತ್ತಮವ್ಯಾಖ್ಯಾನಗಳಂತಿವೆ. ಶೋಕ ತಪ್ತಳಾದ ನಾಯಕಿಯು ತನ್ನ ದುಃಖವನ್ನು ಸಖಿಯೊಂದಿಗೆ ತೋಡಿಕೊಳ್ಳುವುದು, ನಿರಾಶೆಯಿಂದ ನಾಯಕಿಯು ನಾಯಕನ ಪ್ರೇಮದ ಅಭಾವದ ಬಗ್ಗೆ ಚುಚ್ಚುಮಾತಿನಿಂದ ದೂಷಿಸುವುದು, ದುಃಖಾರ್ತಳಾದ ನಾಯಕಿಯು ತಾನು ಹಿಂದೆ ನಾಯಕನೊಂದಿಗೆ ಕಳೆದ ಸಂತೋಷದ ಸನ್ನಿವೇಶಗಳನ್ನು ಸ್ಮರಿಸಿಕೊಂಡು ಸಮಾಧಾನ ಪಟ್ಟು ಕೊಳ್ಳುವುದು, ಬಹುಕಾಲದ ನಂತರ ನಾಯಕನನ್ನು ಸಂಧಿಸುವ ಸಂತೋಷ ಇತ್ಯಾದಿಗಳನ್ನು ನಿರೂಪಿಸುವ ಪದಗಳು ರಾಗ ಮತ್ತು ರಸಗಳ ಅಧ್ಯಯನಕ್ಕೆ ಆಧಾರವಾದ ಲಕ್ಷ್ಯಗಳಾಗಿವೆ. ಇವು ಸಂಗೀತ ಚಿತ್ರಗಳು. ಇವನ್ನು ಕೇಳುವವರಿಗೆ ನಾಯಕಿ, ನಾಯಕ ಅಥವಾ ಸಖಿಯೋ ನಿಜವಾಗಿ ನಮ್ಮ ಮುಂದೆ ನಿಂತು ಹಾಡುತ್ತಿರುವಂತೆ ಅನುಭವವಾಗುತ್ತದೆ ಕ್ಷೇತ್ರಯ್ಯನವರು ಕಾಂಭೋಜಿ, ಆನಂದಭೈರವಿ, ದೇವಗಾಂಧಾರಿ, ಹುಸೇನಿ, ನಾದನಾಮಕ್ರಿಯ, ಭೈರವಿ ಮುಂತಾದ ರಕ್ತಿರಾಗಗಳನ್ನೇ ಹೆಚ್ಚಾಗಿ ಬಳಸಿದ್ದಾರೆ ರಾಗರಸವನ್ನು ಮಾತ್ರ ಸೃಷ್ಟಿಸುವುದು ಅವರ ಗುರಿಯಾಗಿರಲಿಲ್ಲ ಒಂದೇ ರಸವಿರುವ ಪುನ್ನಾಗವರಾಳಿ ಮುಂತಾದ ರಾಗಗಳನ್ನು ಮತ್ತು ಹಲವು ರಸಗಳಿರುವ ಕಾಂಭೋಜಿರಾಗ ಮುಂತಾದುವನ್ನು ಬಳಸಿರುವುದು ಗಮನಾರ್ಹವಾದ ಅಂಶ. ಇವರ ಪದಗಳು ಹೆಚ್ಚಾಗಿ ತ್ರಿಪುಟ ತಾಳದಲ್ಲಿವೆ. ಈ ತಾಳದ ೩+೪ ಲೆಕ್ಕವು ನಾಟ್ಯಕ್ಕೆ ಬಹುಸೂಕ್ತವಾದುದು. ಪದಗಳ ವಿಳಂಬಕಾಲವು ಗಾಯಕನಿಗೆ ತನ್ನ ಬುದ್ಧಿಶಕ್ತಿಯನ್ನು ತೋರಿಸಲು ಬಹುವಾಗಿ ಸ್ವಾತಂತ್ರ್ಯ ನೀಡಿದೆ. ಹಾಗೆಯೇ ನಾಟ್ಯಕಲಾವಿದನು ಇವುಗಳಲ್ಲಿ ಅಡಕವಾಗಿರುವ ಭಾವಗಳನ್ನು ಸ್ವಾಭಾವಿಕವಾಗಿ, ಸರಿಯಾಗಿ, ಕಲಾತ್ಮಕವಾಗಿ ನಿರೂಪಿಸಲು ಅವಕಾಶವಿದೆ.

**ಕ್ಷೇತ್ರರಾಜ**—ಇವನು ಪುರಾತನ ಕಾಲದ ಒಬ್ಬ ಸಂಗೀತ ಶಾಸ್ತ್ರಜ್ಞ.

**ಕ್ಷೇಪಿಣಿ**—ಈ ರಾಗವು ೧೨ನೆ ಮೇಳಕರ್ತ ರೂಪವತಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ದ ಪ ಮ ಗ ಸ

**ಕ್ಷೇಮಂಕರಿ**—ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ

ಅ: ಸ ನಿ ದ ಮ ರಿ ಸ

**ಕ್ರುಷ್ಟ**—ಸಾಮಗಾನದಲ್ಲಿ ಇದು ಅತಿ ಉಚ್ಚಸ್ವರ. ಇದು ಶುದ್ಧ ಮಧ್ಯಮಕ್ಕೆ ಸಮನಾದುದು. ಶ್ರುತಿಯ ಅವರೋಹಣ ಕ್ರಮದಲ್ಲಿ ಇತರ ಆರು ಶ್ರುತಿಗಳು ಯಾವುವೆಂದರೆ ಪ್ರಥಮ (ಗ), ದ್ವಿತೀಯ (ರಿ), ತೃತೀಯ (ಸ), ಚತುರ್ಥ (ನಿ), ಮಂದ್ರ (ಧ) ಮತ್ತು ಅತಿಸ್ವಾರ್ಯ (ಪ).

**ಕ್ರುಷ್ಟ**—ಇದು ತಾಳ ಅಥವಾ ಕಾಲವನ್ನು ಎಣಿಸುವ ಒಂದು ವಿಧಾನ. ಕೈಯನ್ನು ಎಡಕ್ಕೆ ಬೀಸುವ ಕ್ರಿಯೆ. ಇದು ಪ್ಲುತ ಮತ್ತು ಕಾಕಪಾದದಲ್ಲಿ ಬರುತ್ತದೆ. ಇದು ಒಂದು ಮಾತ್ರೆ ಅಥವಾ ನಾಲ್ಕು ಅಕ್ಷರ ಕಾಲದ್ದಾಗಿದೆ.

**ಖ**—ಪ್ರಜಾಪತಿ, ಪ್ರಚಂಡ, ಸರಸ್ವತಿ, ಆಕಾಶ, ದುರ್ಗಾ, ಚಂಡೀ, ಕಪಾಲೀ ಎಂಬ ನಾನಾರ್ಥಗಳಿವೆ.

**ಖಗರಾಜಿತ**—ಈ ರಾಗವು ೩೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಪ ದ ಪ ಗ ರಿ ಸ

**ಖಟ್ವೆಲಾ**—ಚಕ್ರದ ಆಕಾರದಲ್ಲಿರುವ ಮರದ ಕೈತಾಳಗಳು

**ಖಡ್ಗಪ್ರಿಯ**—ಈ ರಾಗವು ೧ನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ಪ ನಿ ಸ

ಅ: ಸ ದ ಪ ದ ಮ ಗ ರಿ ಸ

**ಖಡ್ಗಧಾರಿಣಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಪ ರಿ ಸ

**ಖಡಾ**—ನಂದನಾರ್ ಚರಿತಂ ಮುಂತಾದ ಗೇಯರೂಪಕಗಳಲ್ಲಿ ಬರುವ ಒಂದು ಬಗೆಯ ಸಂಗೀತ ರಚನೆ. ಇದು ಮಹಾರಾಷ್ಟ್ರದ ಹರಿಕಥೆಯ ಮೂಲವುಳ್ಳದ್ದು.

**ಖದಿರ**—ಇದು ಕೊಳಲನ್ನು ಮಾಡುವ ಮರ. ಈ ಮರವನ್ನು ಯಜ್ಞ ಯಾಗಾದಿಗಳಲ್ಲಿ ಉಪಯೋಗಿಸುವರು.

**ಖದ್ಯೋತಕಾಂತಿ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಖದ್ಯೋತಪ್ರಿಯ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ

ಆ: ಸ ರಿ ಮ ದ ನಿ ಸ

ಅ: ಸ ನಿ ಮ ದ ರಿ ಸ

**ಖರಜ**—ಹಿಂದೂಸ್ಥಾನಿ ಸಂಗೀತ ಪದ್ಧತಿಯಲ್ಲಿ ಇದು ಷಡ್ಜದ ಹೆಸರು.

**ಖರಂಜನಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ ನಿ ಸ

ಅ: ಸ ನಿ ದ ಪ ಮ ಗ ಸ ದ ನಿ ಧ ನಿ ಸ

**ಖರಹರಪ್ರಿಯ**—ಈ ರಾಗವು ೨೨ನೆ ಮೇಳಕರ್ತರಾಗ. ಖರ ಎಂಬ ಎರಡು ಅಕ್ಷರಗಳನ್ನು ಕಟಪಯಾದಿ ಸಂಖ್ಯೆಗೆ ಅನುಗುಣವಾಗಿ ಸೇರಿಸಿ ೨೨ನೇ ಸಂಖ್ಯೆ ಬರುವಂತೆ ಕಲ್ಪಿಸಲಾಗಿದೆ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಷಡ್ಜ, ಪಂಚಮಗಳಲ್ಲದೆ ಚತುಶ್ರುತಿ ರಿಷಭ ಮತ್ತು ಚತುಶ್ರುತಿ ಧೈವತ, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಕೈಶಿಕಿನಿಷಾದಗಳು ಈ ರಾಗದ ಸ್ವರಸ್ಥಾನಗಳು. ಪೂರ್ವಾಂಗದ ನಾಲ್ಕು ಸ್ವರಗಳೂ, ಉತ್ತರಾಂಗದ ನಾಲ್ಕು ಸ್ವರಗಳೂ ಪರಸ್ಪರ ವಾದಿಸಂವಾದಿಗಳು. ಸರ್ವಸ್ವರ ಗಮಕ ವರಿಕರಕ್ತಿರಾಗ. ರಿ, ಗ, ಧ, ನಿ ರಾಗ ಛಾಯೆ ಮತ್ತು ನ್ಯಾಸ ಸ್ವರಗಳು. ರಿ ಮತ್ತು ಪ ಅಂಶಸ್ವರಗಳು. ನೀದಪಾಮಗಾರಿ, ನೀದ ಪದ ನಿಸ ನೀದ ಪಾಮಗಾರಿ ಎಂಬುವ ರಂಜಕ ಪ್ರಯೋಗಗಳು. ಸಾರ್ವಕಾಲಿಕ ರಾಗ. ಸ, ರಿ, ಪ, ನಿ ಎಂಬ ಸ್ವರಗಳಿಂದ ಈ ರಾಗದ ರಚನೆಗಳು ಆರಂಭವಾಗುತ್ತವೆ. ಈ ರಾಗವು ತ್ಯಾಗರಾಜರಿಂದ ಪ್ರಾಮುಖ್ಯತೆಗೆ ಬಂದಿತು. ಇದು ಪುರಾತನ ಸಂಗೀತದ ಷಡ್ಜಗ್ರಾಮವನ್ನು ಹೋಲುತ್ತದೆ.

ರಿ, ಗ, ಮ, ಪ, ದ, ನಿ ಗಳನ್ನು ಶ್ರುತಿಭೇದಮಾಡಿ ಪ್ರತ್ಯೇಕ ಆಧಾರ ಷಡ್ಜ ಮಾಡಿದರೆ ತೋಡಿ, ಕಲ್ಯಾಣಿ, ಹರಿಕಾಂಭೋಜಿ, ನಠಭೈರವೀ, ಶುದ್ಧತೋಡಿ ಮತ್ತು ಶಂಕರಾಭರಣ ರಾಗಗಳು ಕ್ರಮವಾಗಿ ಬರುತ್ತವೆ. ಇದು ಅನ್ಯರಾಗ ಮೂರ್ಛನಾ ಕಾರಕರಾಗ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | | |
|---|---|---|---|---|
| ಭಾರತಿದೇವಿಯ | — | ಆದಿ | — | ಪುರಂದರದಾಸರು |
| ಚಕ್ಕನಿರಾಜ | — | ಆದಿ | — | ತ್ಯಾಗರಾಜ |
| ರಾಮನೀ ಸಮಾನ | — | ರೂಪಕ | — | ತ್ಯಾಗರಾಜ |
| ಪಕ್ಕಲನಿಲಬಡಿ | — | ತ್ರಿಪುಟ | — | ತ್ಯಾಗರಾಜ |
| ಕೋರಿಸೇವಿಂಪರಾರೇ | — | ಆದಿ | — | ತ್ಯಾಗರಾಜ |

| | | | | |
|---|---|---|---|---|
| ಸಂಕಲ್ಪವಮು | — | ಆದಿ | — | ಪಟ್ಣಂಸುಬ್ರಹ್ಮಣ್ಯ ಅಯ್ಯರ್ |
| ರಾರಾಎನಿಪಿಲಚಿತೆ | — | ಆದಿ | — | ಮೈಸೂರು ವಾಸುದೇವಾಚಾರ್ಯ |
| ಶರಣಾಗತ | — | ಆದಿ | — | ಮುತ್ತಯ್ಯಭಾಗವತರು |
| ನವಸಂದಿನಿ | — | ಆದಿ | — | ಮೈಸೂರು ಚೌಡಯ್ಯ |

**ಖಸಿಕ**—ಇದು ಪಂಚಮ ಮತ್ತು ರಿಷಭ ವರ್ಜವಾಗಿರುವ ಒಂದು ಔಡವರಾಗ.

**ಖಾಲಿ**—ಇದು ಹಿಂದೂಸ್ಥಾನಿ ಸಂಗೀತ ಪದ್ಧತಿಯ ತಾಳದ ಒಂದು ಬಗೆಯ ಕ್ರಿಯೆ. ಇದು ಸಮಕ್ಕೆ ಮೊದಲಿನ ತಾಳಕ್ರಿಯೆ ಮತ್ತು ನಿಶ್ಶಬ್ದಕ್ರಿಯೆ. ಇದನ್ನು ವಿಸರ್ಜಿತದಿಂದ ಸೂಚಿಸುವರು.

**ಖ್ಯಾಲ್**—ಇದು ಹಿಂದೂಸ್ಥಾನಿ ಸಂಗೀತದ ಒಂದು ವಿಧವಾದ ಶೈಲಿ. ಇದನ್ನು ಖಯಾಲ್ ಎಂದೂ ಹೇಳುತ್ತಾರೆ. ಈ ಪದಕ್ಕೆ ಕಲ್ಪನೆ ಎಂದರ್ಥ. ಕಲಾವಿದರು ತಮ್ಮ ಕಲ್ಪನಾವರ್ಣವೈಖರಿಯನ್ನು ಬೆಳಗಿಸಲು ಈ ಗಾಯನ ಶೈಲಿಯಲ್ಲಿ ಸಾಕಷ್ಟು ಅವಕಾಶವಿರುವುದರಿಂದ ಇದಕ್ಕೆ ಖಯಾಲ್ ಎಂದು ಹೆಸರು ಬಂದಿತು. ಖಯಾಲ್‌ಗಾನವು ಶೃಂಗಾರರಸ ಪ್ರಧಾನವಾಗಿದ್ದು ಏಕ್‌ತಾಲ್, ತೀನ್ ತಾಲ್, ಅಡಾಚೌತಾಲ್, ಝುಮ್ರಾ, ತಿಲವಾಡ್ ಮುಂತಾದ ತಾಳಗಳಲ್ಲಿ ಹಾಡುತ್ತಾರೆ. ಇದರಲ್ಲಿ ಕಲಾವಿದರು ತಮ್ಮ ಕಲ್ಪನಾವಿಲಾಸವನ್ನು ರಾಗಾಲಾಪ ಮತ್ತು ರಾಗವಿಸ್ತಾರಗಳ ಮೂಲಕ ಬೆಳಗುತ್ತಾರೆ. ಇದರ ಜಲ್ಪತಾನಗಳು ಮತ್ತು ವಿವಿಧ ಸ್ವರವಿನ್ಯಾಸದ ತರಂಗ ಮಾಲೆಗಳು ಈ ಶೈಲಿಗೆ ಹೆಚ್ಚು ಕಳೆಕಟ್ಟಿವೆ ಮಿಂಚಿನ ಗೊಂಚಲುಗಳಂತೆ ಸ್ವರವೈಚಿತ್ರ್ಯದ ಚಮತ್ಕಾರಿಕ ವಿವಿಧ ಪ್ರಯೋಗಗಳಿಗೆ ಇಲ್ಲಿ ಸಾಕಷ್ಟು ಅವಕಾಶವಿದೆ. ಧ್ರುಪದ್‌ಧಮಾರ್ ಶೈಲಿಗಳಿಗೆ ವ್ಯತಿರಿಕ್ತವಾಗಿ ಖಯಾಲ್ ಗಾನ ಶೈಲಿಯಲ್ಲಿ ಅಷ್ಟೇನೂ ಶಾಸ್ತ್ರೀಯವಾದ ವಿಶೇಷ ಕಟ್ಟುನಿಟ್ಟುಗಳಿಲ್ಲದಿದ್ದರೂ ಈ ಗಾನಕ್ಕೆ ಧ್ರುಪದವೇ ಮೂಲವಾಗಿದೆ. ಖ್ಯಾಲ್‌ಗಾನದ ಗೀತೆಗಳಿಗೆ ಧ್ರುಪದ್ ಗೀತೆಗಳು ಮೂಲಾಧಾರಗಳು. ಖ್ಯಾಲ್ ಮತ್ತು ಧ್ರುಪದ್‌ಗಾಯನಗಳೆರಡಕ್ಕೂ ಆಲಾಪವು ಅತ್ಯವಶ್ಯಕ. ಖ್ಯಾಲ್ ಗಾನದಲ್ಲಿ ಪ್ರಾರಂಭದಲ್ಲಿ ಆಲಾಪವಿದ್ದರೂ ಅದು ಕೇವಲ ರಾಗ ಸ್ವರೂಪ ದರ್ಶನಕ್ಕಾಗಿ ಮಾತ್ರವಿದ್ದು, ಆಲಾಪದ ಪರಿಪೂರ್ಣ ರಚನಾಕ್ರಮವು ನಿಬದ್ಧವಾಗಿ ಗೀತದ ಹಾಡಿನೊಂದಿಗೆ ಪ್ರಾರಂಭಗೊಳ್ಳುತ್ತದೆ. ಇದರಲ್ಲಿ ಬೋಲ್‌ತಾನಗಳು ಭಾವರಸಾಭಿ ವ್ಯಕ್ತತೆಗಾಗಿ ಪ್ರಯೋಗಿಸಲ್ಪಡುತ್ತವೆ.

ಜೌನ್‌ಪುರದ ಸುಲ್ತಾನ ಹುಸೇನ್ ಶರ್ಕಿಯಿಂದ ಖಯಾಲಿನ ಆವಿಷ್ಕಾರವು ೧೫ನೆ ಶತಮಾನದಲ್ಲಿ ಆಗಿ ಮುಂದೆ ಮಹಮದ್ ಷಾರಂಗೀಲೆ ಮತ್ತು ಆತನ ಆಸ್ಥಾನದ ಸುಪ್ರಸಿದ್ಧ ಸಂಗೀತ ಕಲಾಕೋವಿದರಾದ ಅದಾರಂಗ್, ಸಾದಾರಂಗ್, ಮನ್‌ರಂಗ್, ದಿಲ್‌ರಂಗ್, ಹರ್‌ರಂಗ್, ದರಸಪಿಯಾ, ಲಲನಪಿಯಾ ಮುಂತಾದವ

ರಿಂದ ವಿಶೇಷ ಪ್ರಚಾರ ಪಡೆದು ಜನಪ್ರಿಯವಾಯಿತೆಂದು ವಿದ್ವಾಂಸರ ಅಭಿಪ್ರಾಯ. ಇವರು ಖಯಾಲ್ ಗಾಯನ ಶೈಲಿಗೆ ಬೇಕಾದ ನೂರಾರು ಚೀಸ್‌ಗಳನ್ನು ರಚಿಸಿ ತಮ್ಮ ಶಿಷ್ಯರ ಮೂಲಕ ಈ ಶೈಲಿಯನ್ನು ಪ್ರಚಾರ ಮಾಡಿದರು.

ಖಯಾಲ್ ಗಾಯನದಲ್ಲಿ ಬಡಾಖ್ಯಾಲ್ ಮತ್ತು ಛೋಟಾಖ್ಯಾಲ್ ಎಂಬ ಎರಡು ಭಾಗಗಳಿವೆ. ಬಡಾಖ್ಯಾಲ್‌ನ್ನು ವಿಲಂಬಿತ ಲಯದಲ್ಲಿ ಏಕತಾಳ್, ಧೀಮಾ ತೀನ್‌ತಾಳ್, ಝುಮರಾ, ಆಡಾಚಾತಾಳ್, ಸವಾರಿ, ತಿಲವಾಡ್, ಝುಪ್ತಾಳ್ ಮುಂತಾದ ತಾಳಗಳಲ್ಲಿ ಹಾಡುತ್ತಾರೆ. ಛೋಟಾಖ್ಯಾಲ್‌ನ್ನು ದ್ರುತ್‌ಲಯದಲ್ಲಿ ಜಲ್ದ ತೀನ್‌ತಾಳ್, ಏಕತಾಳ್, ಝುಪ್ತಾಳ್‌ಗಳಲ್ಲಿ ಹಾಡುತ್ತಾರೆ. ವಿಲಂಬಿತ್ ಖ್ಯಾಲ್‌ಗೆ ವ್ಯತಿರಿಕ್ತವಾಗಿ ದ್ರುತ್‌ಖ್ಯಾಲ್ ಪ್ರಕೃತಿಯಿಂದ ಚಪಲವಾಗಿದ್ದೂ ಜಲ್ದ ತಾನ ವಿತಾನಗಳ ಮಿಂಚಿನ ಮಾಲೆಗಳ ಮೂಲಕ ಖ್ಯಾಲ್ ಗಾಯನ ಶೈಲಿಯ ಪರಾಕಾಷ್ಠ ದೆಸೆಯನ್ನು ಸೂಚಿಸುತ್ತದೆ. ಆಧುನಿಕ ಹಿಂದೂಸ್ಥಾನಿ ಸಂಗೀತ ಪದ್ಧತಿಯಲ್ಲಿ ಖ್ಯಾಲ್‌ಗಾಯನ ಶೈಲಿಯು ಬಹು ಮಹತ್ವದ ಸ್ಥಾನವನ್ನು ಗಳಿಸಿದೆ.

**ಖಿಲಾವಳಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ಸ

ಅ : ಸ ನಿ ಪ ಮ ಗ ರಿ ಸ

**ಖೇಚರಾಂಗಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ : ಸ ರಿ ಮ ಗ ಮ ದ ನಿ ಸ

ಅ : ಸ ದ ನಿ ಪ ಮ ಗ ರಿ ಸ

**ಖಂಬಾವತಿ**—ಇದು ಹಿಂದೂಸ್ಥಾನಿ ಸಂಗೀತದ ಖಮಾಚ್ ಥಾಟ್‌ನ ಒಂದು ಜನ್ಯರಾಗ. ಅಹೋಬಲನ ಸಂಗೀತಪಾರಿಜಾತವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಖಂಬಾತಿ**—ಇದು ಒಂದು ರಿಷಭ-ವರ್ಜ ಷಾಡವರಾಗ.

**ಖಂಡ**—ಖಂಡವೆಂದರೆ ಒಂದು ಭಾಗವೆಂದರ್ಥ. ರಾಗಾಂಗರಾಗ ಲಕ್ಷಣಗೀತೆಯಲ್ಲಿ ಸೂತ್ರಖಂಡ, ಉಪಾಂಗಖಂಡ, ಭಾಷಾಂಗಖಂಡ ಎಂಬ ಭಾಗಗಳಿವೆ.

**ಖಂಡಛಾಪು**—ಇದು ಛಾಪುತಾಳದ ಒಂದು ವಿಧ. ಇದರ ಲೆಕ್ಕದ ಸ್ವರೂಪವು ೨ + ೩ ಮತ್ತು ಇದರ ಒಂದಾವರ್ತಕ್ಕೆ ಐದು ಅಕ್ಷರ ಕಾಲ.

**ಖಂಡಗತಿ**—ಇದು ತಾಳದ ಒಂದು ಬಗೆಯ ನಡೆ. ಇದರಲ್ಲಿ ಒಂದೊಂದು ಅಕ್ಷರಕಾಲವು ಕಾಲದ ಐದು ವಿಭಾಗಗಳನ್ನು ಹೊಂದಿರುತ್ತದೆ. ಆದಿತಾಳದ ಖಂಡ ಗತಿ ಎಂದರೆ ೮ × ೫ = ೪೦ ಕಾಲ ವಿಭಾಗವನ್ನು ಹೊಂದಿರುತ್ತದೆ. ಆದೇ ತಾಳದ ಚತುರಶ್ರಗತಿ ಎಂದರೆ ೮ × ೪ = ೩೨ ಕಾಲ ವಿಭಾಗವನ್ನು ಹೊಂದಿರುತ್ತದೆ.

**ಖಂಡ ಕಂಕಾಲ**—ಇದು ೧೦೮ ತಾಳಗಳಲ್ಲಿ ೭೪ನೆ ತಾಳದ ಹೆಸರು. ಇದರ ಅಂಗಗಳು ೦೦೮೮. ಇದರ ಒಂದಾವರ್ತಕ್ಕೆ ೫ ಮಾತ್ರೆ ಅಥವಾ ೨೦ ಅಕ್ಷರಕಾಲ.

**ಖಂಡಲಘು**—ಇದು ಲಘುವಿನ ಒಂದು ಬಗೆ. ಇದು ಒಂದು ಏಟು ಮತ್ತು ನಾಲ್ಕು ಬೆರಳುಗಳ ಎಣಿಕೆಯನ್ನು ಒಳಗೊಂಡಿದೆ ಇದರ ಕಾಲ ಪ್ರಮಾಣವು ಐದು ಅಕ್ಷರಕಾಲ.

**ಖಂಡಜಾತಿಲಘು**—ಇದು ಖಂಡ ಲಘುವಿನ ಮತ್ತೊಂದು ಹೆಸರು.

**ಖಂಡಪ್ರಸ್ತಾರ**—ಇದು ತಾಳ ಪದ್ಧತಿಯಲ್ಲಿರುವ ೧೯ ಬಗೆಯ ಪ್ರಸ್ತಾರಗಳಲ್ಲಿ ಒಂದು ಬಗೆಯ ಪ್ರಸ್ತಾರ

**ಖಂಡಿಂಪು**—ಇದೊಂದು ಬಗೆಯ ಗಮಕ.

**ಖಂಡಪೂರ್ಣ**—ಶಾರ್ಙ್ಗದೇವನ ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಒಂದು ಬಗೆಯ ತಾಳ.

**ಖಂಡವರ್ಣ**—ರಾಗತಾಳ ಚಿಂತಾಮಣಿ ಎಂಬ ೧೭ನೆ ಶತಮಾನದ ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಖಂಡಿಕ**—ವಿಭಾಗವೆಂದರ್ಥ. ನಿತ್ಯಕಲ್ಯಾಣಿರಾಗಮಾಲಿಕೆ ಎಂಬ ರಚನೆಯಲ್ಲಿ ೮ ರಾಗಗಳಲ್ಲಿ ೮ ಖಂಡಿಕೆಗಳಿವೆ.

**ಖಂಡಿತ**—ಶೃಂಗಾರ ಶಾಸ್ತ್ರರೀತ್ಯಾ ಖಂಡಿತ ಎಂಬುವಳು ಒಂದು ಬಗೆಯ ನಾಯಕಿ.

**ಖಟ್ವಾಹಸ್ತ**—ಇದು ಭರತನಾಟ್ಯದ ಸಂಯುತ ಹಸ್ತಗಳಲ್ಲಿ ಒಂದು ಬಗೆಯ ಹಸ್ತಮುದ್ರೆ. ಚತುರ ಹಸ್ತದ ಮೇಲೆ ಚತುರ ಹಸ್ತವನ್ನಿಟ್ಟು ತೋರುಬೆರಳು ಹೆಬ್ಬೆರಳುಗಳನ್ನು ಚಾಚಿ ಹಿಡಿಯುವುದು ಖಟ್ವಾಹಸ್ತ. ಮಂಚವೇ ಮೊದಲಾದುವುಗಳನ್ನು ಸೂಚಿಸಲು ಈ ಹಸ್ತವನ್ನು ವಿನಿಯೋಗಿಸಲಾಗುವುದು.

**ಗ**—(೧) ಪರಮೇಶ, ಗಣೇಶ, ಶಾರ್ಙ್ಗೀ, ಗಂಧರ್ವ, ತ್ರಿಲೋಚನ, ಸರಸ್ವತೀವಿದ್ಯಾ, ಗೀತ ಇತ್ಯಾದಿ ನಾನಾರ್ಥಗಳಿವೆ.

(೨) ಭಾರತೀಯ ಸಂಗೀತದ ಸಪ್ತಸ್ವರಗಳಲ್ಲಿ ಮೂರನೆಯ ಸ್ವರ. ಇದು ಗಾಂಧಾರದ ಸಂಜ್ಞಾಕ್ಷರ.

ಇದು ೭೨ ಮೇಳಕರ್ತ ಪದ್ಧತಿಯಲ್ಲಿ ಅತ್ಯಂತ ಕೆಳಗಿನ ಗಾಂಧಾರವನ್ನು ಸೂಚಿಸುತ್ತದೆ. ಶುದ್ಧಗಾಂಧಾರ, ಸಾಧಾರಣ ಗಾಂಧಾರ ಮತ್ತು ಅಂತರ ಗಾಂಧಾರವೆಂಬ ಮೂರು ಬಗೆಯ ಗಾಂಧಾರಗಳನ್ನು ಗ, ಗಿ, ಗು ಎಂಬ ಅಕ್ಷರಗಳಿಂದ ಸೂಚಿಸಲಾಗಿದೆ.

ದ್ವಾವಿಂಶತಿ ಶ್ರುತಿಗಳಲ್ಲಿ ಇದು ಮೊದಲನೆಯ ಗಾಂಧಾರವನ್ನು ಸೂಚಿಸುತ್ತದೆ. ಕೋಮಲ ಸಾಧಾರಣ ಗಾಂಧಾರ, ಸಾಧಾರಣ ಗಾಂಧಾರ, ಅಂತರ ಗಾಂಧಾರ, ತೀವ್ರ ಅಂತರ ಗಾಂಧಾರ ಅಥವಾ ಚ್ಯುತಮಧ್ಯಮ ಗಾಂಧಾರ ಎಂಬುವು ನಾಲ್ಕು

ಬಗೆಯ ಗಾಂಧಾರಗಳು. ಇವುಗಳನ್ನು ಗ, ಗಿ, ಗು, ಗೇ ಎಂದು ಸೂಚಿಸಲಾಗಿದೆ. ಈ ಪದ್ಧತಿಯು ೭ನೆ ಶತಮಾನದಷ್ಟು ಪುರಾತನವಾದುದು.

**ಗಗನಗಾಂಧಾರಿ**— ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ.

ಆ: ಸ ರಿ ಗಾ ರಿ ಮ ಪ ನಿ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಗಗನಾದರಿ**—ಈ ರಾಗವು ೫೪ನೆ ಮೇಳಕರ್ತ ವಿಶ್ವಂಭರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ̇

ಅ: ಸ̇ ನಿ ದ ಮ ಗ ರಿ ಸ

**ಗಗನಾಂಬರಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಗಗನಭೂಪಾಲ (ಗಗನಭೂಪಾಲಿ)**—ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ಗಗನ ಮಯೂರಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ಮ ಗ ದ ನಿ ಸ̇

ಅ: ಸ̇ ನಿ ದ ಮ ಪ ಮ ಪ ಮ ಗ ರಿ ಸ

**ಗಗನಮೋಹಿನಿ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ̇

ಅ: ಸ̇ ನಿ ಪ ಮ ಗ ಸ

**ಗಗನರಂಜನಿ** —ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಗ ಮ ಪ ಸ̇

ಅ: ಸ̇ ದ ನಿ ಪ ಮ ಗ ರಿ ಸ

**ಗರ್ಗರ**—ಇದು ಋಗ್ವೇದದಲ್ಲಿ ಉಕ್ತವಾಗಿರುವ ಒಂದು ಸಂಗೀತವಾದ್ಯ.

**ಗಗೇಶ್ವರಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಮ ದ ಮ ಪ ಗ ರಿ ಸ

**ಗಜಝಂಪ**—ಇದು ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಹೇಳಿರುವ ಒಂದು ಬಗೆಯ ತಾಳ. ಇದಕ್ಕೆ ಶೇಖರಝಂಪವೆಂದೂ ಹೆಸರು.

ಇದು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಹೇಳಿರುವ ೧೨೦ ದೇಶೀತಾಳಗಳಲ್ಲಿ ೭೭ನೆಯ ತಾಳ.

**ಗಜತಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀ ತಾಳಗಳಲ್ಲಿ ೯೯ನೆ ತಾಳ. ಇದರ ಅಂಗಗಳು | | | |.

**ಗಜತಾನ**—ಇದೊಂದು ಬಗೆಯ ತಾನ. ಇದರ ಸ್ವರಗುಚ್ಛಗಳ ನಡೆಯು ಗಜದ ನಡಗೆಯಂತಿರುತ್ತದೆ.

**ಗಜಾನಂದಿನಿ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಗಜಪ್ರಾಸ**—ಈದೊಂದು ಬಗೆಯಪ್ರಾಸ

**ಗಜಲೀಲ**—(೧) ಇದು ೧೦೮ ತಾಳಗಳಲ್ಲಿ ಒಂದು ತಾಳ ವಿಶೇಷ. ಇದರ ಒಂದಾವರ್ತಕ್ಕೆ ೪¾ ಮಾತ್ರೆ ಅಥವಾ ೧೭ ಅಕ್ಷರಕಾಲ. ಇದರ ಅಂಗಗಳು | | | | ◡. ಈ ತಾಳಕ್ಕೆ ಜಗಲೀಲ ಎಂದೂ ಹೆಸರು.

(೨) ಇದೊಂದು ಬಗೆಯ ಪ್ರಬಂಧ.

(೩) ಇದು ಭರತನಾಟ್ಯದ ಹತ್ತು ಗತಿಭೇದಗಳಲ್ಲಿ ಒಂದು ವಿಧ. ಎರಡು ಕೈಗಳಲ್ಲಿ, ಎರಡು ಪಕ್ಕಗಳಲ್ಲಿ ಪತಾಕಹಸ್ತವನ್ನು ತೋರುತ್ತಾ ಸಮಪಾದದಿಂದ ಮಂದಗತಿಯಿಂದ ನಡೆಯುವುದಕ್ಕೆ ಗಜಲೀಲಾಗತಿ ಎಂದು ಹೆಸರು.

**ಗಜವರ್ಧನ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ದ ಪ ಮ ಗ ರಿ ಸ

ಇದಕ್ಕೆ ಗಜವರ್ಧನಿ ಎಂಬ ಹೆಸರೂ ಇದೆ.

**ಗಜವಿಲಸಿತ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ನಿ ಪ ದ ಸ

ಅ: ಸ ನಿ ದ ಮ ಪ ಮ ಗ ರಿ ಸ

**ಗಜಸಾರಿ**—ಈ ರಾಗವು ೯ನೆ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ

ಅ: ಸ ಪ ಮ ಗ ರಿ ಸ

**ಗಬ್ಬೂಕಿ**—ಇದು ದಖನ್ನಿನ ಒಂದು ಜಾನಪದ ತಂತೀವಾದ್ಯ.

**ಗರ್ಭಪುರಿ**—ತಮಿಳುನಾಡಿನ ಪ್ರಸಿದ್ಧ ವಾಗ್ಗೇಯಕಾರರಾಗಿದ್ದ ಕರೂರು ದಕ್ಷಿಣಾಮೂರ್ತಿಶಾಸ್ತ್ರಿ ಮತ್ತು ಕರೂರುದೇವುಡಯ್ಯನವರು ತಮ್ಮ ಕೃತಿಗಳಲ್ಲಿ ಈ ಅಂಕಿತವನ್ನು ಬಳಸಿದ್ದಾರೆ. ಶಾಸ್ತ್ರಿಗಳು ಕರೂರಿನ ಪ್ರೌಢಶಾಲೆಯಲ್ಲಿ ಅಧ್ಯಾಪಕ ರಾಗಿದ್ದರು ಇವರು ರಚಿಸಿದ ಸಾಹಿತ್ಯವನ್ನು ಪಿಟೀಲು ವಿದ್ವಾಂಸರಾಗಿದ್ದ ದೇವುಡಯ್ಯ ಸಂಗೀತಕ್ಕೆ ಅಳವಡಿಸಿದರು. ಇವರಿಬ್ಬರೂ ತೆಲುಗು ಬ್ರಾಹ್ಮಣರು. ಇವರ ಕೃತಿಗಳಿಗೆ ಗರ್ಭಪುರಿ ಕೃತಿಗಳೆಂದು ಹೆಸರು. ತೆಲುಗಿನಲ್ಲಿ ಇವರನ್ನು ಗರ್ಭಪುರಿವಾರು ಎನ್ನುತ್ತಿದ್ದರು.

**ಗರ್ಭಲೀಲಾ**—ಈ ರಾಗವು ೪೭ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ

ಆ: ಸ ಮ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ಗ ಮ ಗ ರಿ ಸ

**ಗರ್ಭಶಾರ್ದೂಲ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಗಮಕ**—ಎಲ್ಲಾ ಸಂಗೀತ ಪದ್ಧತಿಗಳಲ್ಲಿ ನಾನಾ ಬಗೆಯ ಗಮಕಗಳ ಪ್ರಯೋಗವು ಒಂದಲ್ಲ ಒಂದು ವಿಧದಲ್ಲಿ ಕಂಡುಬಂದಿದೆ. ಗಮಕ ರಹಿತವಾದ ಸ್ವರಗಳೆಲ್ಲವೂ ಕೇವಲ ಪ್ರಾಕೃತ ಶಬ್ದರೂಪಗಳಾಗುತ್ತವೆ ಸ್ವರಗಳ ಮಾಧುರ್ಯವು ಪ್ರಕಾಶಿಸಬೇಕಾದರೆ ಗಮಕಗಳೆಂಬ ವಿಶೇಷ ಅಲಂಕಾರಗಳು ಅತ್ಯವಶ್ಯಕ, ಸರ್ವಸ್ವರಗಮಕವರಿಕರಾಗಗಳಲ್ಲಿ ಮಾತ್ರವಲ್ಲದೆ ಅರ್ಧಕಂಪಿತ ಮತ್ತು ಕಂಪವಿಹೀನ ರಾಗಗಳಲ್ಲೂ ಸ್ವರಗಳು ಸಂವಾದಿ ಭಾವದಿಂದಿದ್ದೂ ಅವುಗಳಿಗೆ ಸಹಜವಲ್ಲದ ಕೆಲವು ಶ್ರುತಿವಿಶೇಷಗಳಿಂದೊಡಗೂಡಿ, ಮಾಧುರ್ಯ ಪ್ರಧಾನವಾಗಿ ಶೋಭಿಸುತ್ತವೆ.

ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಮಾಧುರ್ಯವು ಸ್ವರಗಳ ಸುಶ್ರಾವ್ಯತೆ, ರಾಗದ ವಿಶಿಷ್ಟತೆ ಮತ್ತು ರಾಗದಲ್ಲಿ ಬಳಸಲಾಗುವ ಗಮಕಗಳ ಮುಖಾಂತರವೇ ನಿರ್ಧರಿಸಲ್ಪಡುತ್ತದೆ. ಪಾಶ್ಚಾತ್ಯ ಸಂಗೀತ ಪದ್ಧತಿಯಲ್ಲಿ ಸಾಂಗತ್ಯ ಪ್ರಾಧಾನ್ಯ ವಾಗಿದುದರಿಂದ ಸ್ವರಗಳು ಏಕಕಾಲದಲ್ಲಿ ಧ್ವನಿಗೈಯುವುದರಿಂದ ಸೂಕ್ಷ್ಮ ಗಮಕಗಳು ಪ್ರತ್ಯೇಕವಾಗಿ ಗೋಚರವಾಗುವುದಿಲ್ಲ. ಸಂಗೀತದಲ್ಲಿ ಗಮಕದ ಪ್ರಾಮುಖ್ಯತೆಯನ್ನು ಕುರಿತು ಭರತನು ತನ್ನ ನಾಟ್ಯಶಾಸ್ತ್ರವೆಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ—

ಶಶಿನಾ ರಹಿತೇವನಿಶಾ ವಿಜಲೇವ ನದೀಲತಾ ವಿಪುಷ್ಪೇವ ।
ಅವಿಭೂಷಿತೇವ ಕಾಂತಾ ಗೀತಿರಲಂಕಾರ ಹೀನಾಸ್ಯಾತ್ ॥

ಗಮಕವಿಲ್ಲದ ಸಂಗೀತವು ಚಂದ್ರನಿಲ್ಲದ ರಾತ್ರಿಯಂತೆ, ನೀರಿಲ್ಲದ ನದಿಯಂತೆ, ಪುಷ್ಪಗಳಿಲ್ಲದ ಲತೆಯಂತೆ ಮತ್ತು ಆಭರಣಗಳಿಲ್ಲದ ಸ್ತ್ರೀಯಂತೆ. ಪ್ರಾಚೀನ ಕಾಲದಲ್ಲಿ ಗಮಕಗಳಿಗೆ ಬದಲಾಗಿ ಸ್ವರಗಳ ವೈವಿಧ್ಯಪೂರ್ಣವಾದ ಅಲಂಕಾರಗಳನ್ನು ಬಳಸುತ್ತಿದ್ದರು. ಈಚೆಗೆ ಗಮಕವು ಪ್ರತ್ಯೇಕವಾಗಿ ರಾಗದ ಮಾಧುರ್ಯವನ್ನು ಹೆಚ್ಚಿಸುವ ಸೂಕ್ಷ್ಮಧ್ವನಿ ವಿಶೇಷಗಳಾಗಿ ಸಂಗೀತದ ಜೆನ್ನೆಲಬಾಗಿವೆ. ಒಂದೇ ಮೇಳದಲ್ಲಿ ಜನ್ಯವಾದ ಒಂದೇ ಸಮನಾದ ಆರೋಹಣಾವರೋಹಣವಿರುವ ಎರಡು ರಾಗಗಳು ಗಮಕಗಳ ವೈವಿಧ್ಯತೆಯ ಪರಿಣಾಮವಾಗಿ ಪ್ರತ್ಯೇಕ ಸ್ವರೂಪದಿಂದ ಪ್ರಕಾಶಿಸುತ್ತವೆ. ಒಂದೇ ತೆರನಾದ ಗಮಕಗಳು ಬೇರೆ ಬೇರೆ ರಾಗಗಳಲ್ಲಿ ವಿವಿಧ ತೀವ್ರತೆಯಿಂದ, ಅಂತರಗಳಿಂದ ಮತ್ತು ವಿವಿಧವಾದ ಆವರಣಗಳಿಂದ ಕಂಡು ಬರಬಹುದು.

ಸ್ವರಸ್ಯ ಕಂಪೋಗಮಕ ಶ್ರೋತೃಚಿತ್ತಸುಖಾವಹಃ ।

ಸ್ವರಗಳ ಕಂಪನಕ್ಕೆ ಗಮಕವೆಂದು ಹೆಸರು. ಅಷ್ಟರಿಂದಲೇ ಗಮಕವಾಗದು. ಕೇಳು ವವರ ಮನಸ್ಸಿಗೆ ಹಿತವಾಗುವಂತೆ ಸುಖವಾಗುವಂತೆ ಅವುಗಳನ್ನು ಕಂಪಿಸುವುದೇ ಗಮಕ. ಅವನ್ನು ಕಂಪಿಸುವಾಗ ಕೆಳಗಿನ ಮತ್ತು ಮೇಲಿನ ಸ್ವರಗಳ ಛಾಯೆಯು ಬರುವಂತಾಗಬೇಕು. ಬರಿಯ ಕಂಪನದಿಂದಲೇ ಸಂಗೀತವು ಪರಿಣಾಮಕರವಾದ ಮಾಧುರ್ಯವನ್ನು ಪಡೆಯುವುದಿಲ್ಲ. ಆದ್ದರಿಂದ ಯಾವ ಸ್ವರವೇ ಆಗಲಿ ರಂಜಕ ವಾಗಬೇಕಾದರೆ ಸೂಕ್ತವಾದ ಗಮಕಗಳ ಪ್ರಯೋಗ ಅತ್ಯಗತ್ಯ. ಸ್ವರಗಳು ತಮ್ಮ ಸಹಜ ಪ್ರಕೃತಿಯಲ್ಲದ ರೀತಿಯಲ್ಲಿ ಕೆಲವು ಶ್ರುತಿ ವಿಶೇಷವನ್ನು ಹೊಂದಿದ್ದರೆ ಆ ಶ್ರುತಿ ವಿಶೇಷವು ಗಮಕವಾಗುತ್ತದೆ ಎಂದು ಪಾರ್ಶ್ವದೇವನು 'ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಹೇಳಿದ್ದಾನೆ. ಅಂದರೆ ಒಂದು ಸಹಜ ರೀತಿಯನ್ನು ರಂಜಕವಾಗುವಂತೆ ಬದಲಾಯಿಸಿದರೆ ಅದು ಗಮಕವಾಗುತ್ತದೆ.

ರಾಗಗಳ ರಸ, ಭಾವ, ಗುಣಾಲಂಕಾರ ಸದ್ಭಾವಗಳು ಗಮಕ ಪ್ರಯೋಗದಿಂದ ಉಂಟಾಗುತ್ತವೆ. ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಒಂದೇ ಮೂರ್ಛನೆಯಲ್ಲಿ ಅನೇಕ ರೀತಿಯ ಗಮಕಗಳು ಪಾತ್ರವಹಿಸಿ ವಿಚಿತ್ರರಸ ರೂಪಗಳನ್ನು ತಾಳುತ್ತವೆ. ಗಮಕವು ಗಾನಕಲೆಯ ವ್ಯಂಜನ ಶಕ್ತಿ, ಭಾವದ ಅವಯವ, ರಸದ ಸೂತ್ರ. ಯಾವುದಾದರೊಂದು ಸ್ವರೋಚ್ಚಾರಣೆ ಮಾಡುತ್ತಾ ಆಯಾ ರಾಗಗತವಾದ ಮೇಲಿನ ಸ್ವರವನ್ನೋ ಅಥವಾ ಕೆಳಗಿನ ಸ್ವರವನ್ನೋ ಅವಿಚ್ಛಿನ್ನನಾದದ ಮೂಲಕ ಆಡುತ್ತಾ ಇದ್ದು ಸ್ವಸ್ಥಾನಕ್ಕೆ ಬರುವುದು ಗಮಕ ಕ್ರಿಯೆಯಿಂದ ತಿಳಿಯಬೇಕು. ಕ್ರಿಯೆಯ ರೀತಿಗಳು ಅನೇಕ ವಿಧವಾಗಿರುತ್ತವೆ. ವಿವಿಧ ವಾದ್ಯಗಳು ಅದರದರ ವಿಶಿಷ್ಟಪೂರಿತ ವಾದ ಅನೇಕ ಗಮಕಗಳನ್ನು ಹೊಂದಿರುತ್ತವೆ. ವಾದ್ಯಗಳಲ್ಲಿ ಗಮಕಗಳನ್ನು

ಸ್ವರಪಡಿಸಿಯೇ ವ್ಯವಹರಿಸಬಹುದು. ಅವು ಸ್ವರಾತ್ಮಕ. ಗಾನದಲ್ಲಿ ಸ್ವರವು ನಾದಾನುಸಂಧಾನ ರೀತ್ಯಾ ಅಕ್ಷರಾತ್ಮಕವಾಗುತ್ತದೆ. ಅತ್ಯಲ್ಪ ಪ್ರಮಾಣದ ಗಮಕವಾದ ಕಂಪಿತಗಮಕವು ಒಂದು ಶ್ರುತ್ಯಂತರದಲ್ಲಿ ಚಲಿಸುತ್ತದೆ. ಇದು ದುರಿತ ಕಾಲದಲ್ಲಿ ಬರಬೇಕು. ಯುಕ್ತಾಯುಕ್ತ ವಿವೇಚನೆಯಿಂದ ಗಮಕವನ್ನು ಪ್ರಯೋಗಿಸಬೇಕು. ಪ್ರಕೃತಿ ಸ್ವರಗಳಾದ ಷಡ್ಜ ಪಂಚಮಗಳಿಗೆ ಪ್ರತ್ಯೇಕ ಗಮಕ ಬರುವುದಿಲ್ಲ. ಆದರೆ ಆ ಸ್ವರಗಳಿಗೆ ಸಂಚರಿಸಿ ಲೀನ ಮಾಡಬಹುದು. ಅದು ಶ್ರಾವ್ಯವಾಗಿರುತ್ತದೆ ಗಮಕಗಳೆಲ್ಲಾ ಜಾರು ವಿಶೇಷಗಳೇ. ಗತಿ ಮತ್ತು ರೀತಿಯ ಬದಲಾವಣೆಗಳಿಂದ ಅನ್ಯ ರೂಪನಾಮಗಳನ್ನು ಪಡೆಯುತ್ತವೆ. ಕೆಲವು ಪ್ರಯೋಗಗಳಲ್ಲಿ ಉಚ್ಚರಿಸುವ ಸ್ವರಸ್ಥಾನಗಳನ್ನು ಮುಟ್ಟದೆಯೇ ಮಿಕ್ಕ ಶ್ರುತಿಗಳನ್ನು ಸಂಚಾರ ಮಾಡುತ್ತಿರುತ್ತವೆ. ಉದಾ : ತೋಡೀರಾಗದ ಗಾಂಧಾರ, ದರ್ಬಾರ್ ರಾಗದ ನಿಷಾದ.

ಗಮಕ ಪ್ರಯೋಗಗಳು ವೇದಗಳ ಕಾಲದಿಂದ ರೂಢಿಯಲ್ಲಿವೆ. ನಾರದೀಯ ಶಿಕ್ಷ ಎಂಬ ಗ್ರಂಥದಲ್ಲಿ ಪವಿತ್ರ ಮತ್ತು ಲೌಕಿಕ ಸಂಗೀತದಲ್ಲಿ ರಕ್ತ, ಪೂರ್ಣ, ಅಲಂಕೃತ, ಪ್ರಸನ್ನ, ವ್ಯಕ್ತ, ವಿಕೃಷ್ಟ, ಸ್ಲಾಕ್ಷ್ಣ, ಸಮ, ಸುಕುಮಾರ ಮತ್ತು ಮಧುರ ಎಂಬ ಹತ್ತು ಬಗೆಯ ಅಲಂಕಾರಗಳು ಉಕ್ತವಾಗಿವೆ. ಭರತನು ತನ್ನ ನಾಟ್ಯಶಾಸ್ತ್ರ ಗ್ರಂಥದಲ್ಲಿ ಅನೇಕ ಗಮಕಗಳ ಬಳಕೆಯನ್ನು ಹೇಳಿದ್ದಾನೆ. ಮತಂಗನು ತನ್ನ ಬೃಹದ್ದೇಶೀ ಎಂಬ ಗ್ರಂಥದಲ್ಲಿ ರಾಗಗಳ ವಿವರಣಾ ಪ್ರಕರಣದಲ್ಲಿ ಗಮಕ ಎಂಬ ಪದವನ್ನು ಪ್ರಪ್ರಥಮವಾಗಿ ಬಳಸಿದ್ದಾನೆ ಇವನ ಕಾಲದಿಂದ ಗಮಕಗಳು ಹೆಚ್ಚಾಗಿ ಬಳಕೆಗೆ ಬಂದುವು. ನಾನ್ಯದೇವ ವಿರಚಿತ ಭರತನಾಟ್ಯ ಶಾಸ್ತ್ರದ ವ್ಯಾಖ್ಯಾನದಲ್ಲಿ, ಪಾರ್ಶ್ವದೇವನ ಸಂಗೀತಸಮಯಸಾರವೆಂಬ ಗ್ರಂಥದಲ್ಲೂ, ಹರಿಪಾಲನ ಸಂಗೀತ ಸುಧಾಕರವೆಂಬ ಗ್ರಂಥದಲ್ಲೂ ಏಳು ಬಗೆಯ ಗಮಕಗಳ ಪ್ರಸ್ತಾಪವಿದೆ. ಪಾರ್ಶ್ವದೇವನ ಮತದಂತೆ ಸ್ಥಾಯಿ ಎಂಬುದು ಗಮಕ ಸಹಿತವಾದ ಸ್ವರಗಳ ರೂಪ. ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ೧೯ ಬಗೆಯ ಗಮಕಗಳನ್ನೂ ಶಾರ್ಙ್ಗದೇವನ ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ೧೫ ಬಗೆಯ ಗಮಕಗಳನ್ನೂ ವಿವರಿಸಿದೆ. ಗೋವಿಂದ ದೀಕ್ಷಿತರೂ, ವೆಂಕಟಮಖಿಯೂ, ಆಮೇಲಿನ ಹಲವು ಶಾಸ್ತ್ರಜ್ಞರು ಈ ೧೫ ಗಮಕಗಳ ಪ್ರಸ್ತಾಪ ಮಾಡಿದ್ದಾರೆ. ಸೋಮನಾಥನು ರಾಗವಿಬೋಧವೆಂಬ ಗ್ರಂಥದಲ್ಲಿ ಅನೇಕ ಗಮಕಗಳನ್ನು ಹೆಸರಿಸಿ ಅವುಗಳಿಗೆ ಸ್ವರಚಿಹ್ನೆಯನ್ನು ಕೊಟ್ಟಿದ್ದಾನೆ. ಅಹೋಬಲನ ಸಂಗೀತ ಪಾರಿಜಾತವೆಂಬ ಗ್ರಂಥದಲ್ಲಿ ಹದಿನೇಳು ಗಮಕಗಳ ವಿವರಣೆಯಿದೆ ಕೆಲವು ಕಾಲಾನಂತರ ದಶವಿಧ ಗಮಕಗಳ ಪ್ರಯೋಗವು ಸೂಕ್ತವೆಂದು ಕರ್ಣಾಟಕ ಸಂಗೀತ ಪದ್ಧತಿಯಲ್ಲಿ ಅಳವಡಿಸಲಾಗಿದೆ. ಪಂಚದಶ ಗಮಕಗಳಲ್ಲಿ ಒಂದೇ ಬಗೆಯ ಮುಖ್ಯಾಂಶಗಳುಳ್ಳ ಕೆಲವು ಗಮಕಗಳು ದಶವಿಧ ಗಮಕಗಳಲ್ಲಿ ಅಡಕವಾಗಿವೆ. ಇವು ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ ಮುಖ್ಯ ಅಲಂಕಾರಗಳನ್ನು ಒಳಗೊಂಡಿವೆ.

ಶಾರ್ಙ್ಗದೇವನ ಪಂಚದಶ ಗಮಕಗಳು ಈ ರೀತಿಯಿವೆ—

ತಸ್ಯ ಭೇದಾಸ್ತು ತಿರಿಪಃ ಸ್ಫುರಿತಃ ಕಂಪಿತಸ್ತಥಾ ।
ಲೀನ ಆಂದೋಲಿತವಲೀ ಸ್ತ್ರಿಭಿನ್ನ ಕುರುಲಾಹತಾಃ ॥
ಉಲ್ಲಾಸಿತಃ ಪ್ಲಾವಿತಶ್ಚ ಗುಂಫಿತೋ ಮುದ್ರಿತಸ್ತಥಾ ।
ನಾಮಿತೋ ಮಿಶ್ರಿತಃ ಪಂಚದಶೇತಿ ಪರಿಕೀರ್ತಿತಃ ॥

**(೧) ತಿರಿಪ (ತೀಟಿಕಂಪನ)**

ಅಲ್ಪಸ್ಯ ಡಮರೋರ್ಧ್ವಾನೇಯಃ ಕಂಪನಾ ತದ್ವದ್ರಮಣೀಯಃ ।
ದ್ರುತಸ್ಯ ಚತುರ್ಥಾಂಶ ವೇಗೇನಯಃ ಸ್ವರಸ್ಯಕಂಪಃ ॥

ತಿರಿಪ ಎಂಬುದನ್ನು ಹಿಲ್ಲೋಲ ಎಂದೂ ಕರೆಯಲಾಗಿದೆ. ದ್ರುತಕಾಲ ಪ್ರಮಾಣದ ೧/೪ ಭಾಗದ ಸ್ವರಕಂಪನಕ್ಕೆ ತಿರಿಪ ಎಂದು ಹೆಸರು. ಒಂದು ಸ್ವರವನ್ನು ಅರ್ಧಾಕ್ಷರಕಾಲ ನಿಲ್ಲಿಸಿ, ಅದನ್ನು ಎಳೆದು ಮುಂದಿರುವ ಸ್ವರದ ಛಾಯೆಯು ಬರುವಂತೆ ಮಾಡುವುದು. ಇದು ಸಣ್ಣ ಡಮರುವಿನ ಧ್ವನಿಯ ಕಂಪನದಂತೆ ರಮಣೀಯದಾಗಿರುತ್ತದೆ.

**(೨) ಸ್ಫುರಿತ (ಮಿಳಿತ)**

ದ್ರುತಸ್ಯ ತೃತೀಯ ಭಾಗ ಸಮ್ಮಿತೋಯದಿವೇಗಃ
ಸ್ವರವೇಗಃ ಸ್ವರಕಂಪೋ ಭವತಿ !

ಈ ಗಮಕವನ್ನು ಗಿಕ್ಕಿರಿ ಎಂದೂ ಹೇಳುವುದುಂಟು. ದ್ರುತದ ೧/೩ ಭಾಗದಷ್ಟು ಮಾತ್ರಾಕಾಲದಲ್ಲಿ ಸ್ವರವನ್ನು ಕಂಪಿಸುವುದು ಸ್ಫುರಿತ. ಜಂಟಿ ಸ್ವರ ಪ್ರಯೋಗಗಳಲ್ಲಿ ಸ್ವರಗಳ ಮಧ್ಯೆ ಇರುವ ಇತರ ಸ್ವರಗಳು ಸೂಕ್ಷ್ಮವಾಗಿ ಕೇಳಲ್ಪಡುತ್ತವೆ. ಸ್ವರ ಜೋಡಾವಣೆಯಲ್ಲಿ ದ್ವಿತೀಯ ಸ್ವರವು ಒತ್ತಲ್ಪಟ್ಟು ನುಡಿಯುತ್ತದೆ. ಸ ಸ, ರಿ ರಿ ಮೊದಲಾದ ಆರೋಹಣ—ಅವರೋಹಣ ಜಂಟಿ ಸ್ವರಗಳನ್ನು ಹಿಂದಿನ ಸ್ವರಗಳೊಂದಿಗೆ ಕಂಪಿಸಿ ಮೇಲಿನ ಸ್ವರಗಳ ಛಾಯೆಯು ಬರುವಂತೆ ಮಾಡುವುದು.

**(೩) ಕಂಪಿತ (ಕಂಪನ)**—ಇದು ದೀರ್ಘಕಂಪನ. ಇದಕ್ಕೆ ಖಟಕವೆಂದೂ ಹೆಸರು. ದ್ರುತದ ೧/೨ ಭಾಗದಷ್ಟು ವೇಗದಿಂದ ಸ್ವರವನ್ನು ಕಂಪಿಸುವುದು ಕಂಪಿತ. ಒಂದು ಸ್ವರವನ್ನು ಒಂದಕ್ಷರಕಾಲ ಕಂಪಿಸಿ ಅದರ ಮೇಲಿನ ಸ್ವರದ ಛಾಯೆ ಬರುವಂತೆ ಮಾಡುವುದು.

**(೪) ಲೀನ (ಮಿಳಿತ)—**

ದ್ರುತಮಾನೇನ ಸ್ವರಾಣಾಂ ಕಂಪಃ ।

ಒಂದು ಸ್ವರದಲ್ಲಿ ಎರಡು ಅಕ್ಷರಕಾಲ ನಿಂತು ಕಂಪಿಸಿ, ಅದನ್ನು ಮೇಲಿನ ಸ್ವರಗಳ ಛಾಯೆ ಬರುವಂತೆ ಮಾಡಿ ಅವುಗಳ ನಾದದಲ್ಲಿ ಲಯವಾಗುವಂತೆ ಮಾಡುವುದು ಲೀನ. ಒಂದು ದ್ರುತಪ್ರಮಾಣ ವೇಗದಿಂದ ಕಂಪಿಸುವುದಕ್ಕೆ ಲೀನವೆಂದು ಶಾರ್ಙ್ಗದೇವನ

ಮತ. ವೀಣೆಯಲ್ಲಿ ಕೆಳಗಿನ ಸ್ವರದಿಂದ ತಂತಿಯನ್ನು ಮಿಾಟಿ, ಅದನ್ನು ಬೇರೊಂದು ಸ್ವರದಲ್ಲಿ ಮಿಳಿತವಾಗುವಂತೆ ಮಾಡುವುದು ಲೀನ ಈ ಗಮಕದ ಕಾಲ ಪ್ರಮಾಣವು ೩ ಮಾತ್ರಾಕಾಲ ಅಥವಾ ೩ ಅಕ್ಷರಕಾಲ. ಇದು ಮಧ್ಯಮದಿಂದ ಪಂಚಮಕ್ಕೂ, ನಿಷಾದದಿಂದ ಷಡ್ಜಕ್ಕೂ ಅಡಿಗಡಿಗೆ ಬರುವ ಗಮಕ.

**(೫) ಆಂದೋಲಿತ (ಆಂದೋಳನ)**—ಉಯ್ಯಾಲೆಯ ತೂಗಾಟದಂತೆ ಹಾಡುವುದು ಆಂದೋಲಿತ ಒಂದು ಸ್ವರವನ್ನು ೪ ಅಥವಾ ೫ ಅಕ್ಷರಕಾಲ ಎಳೆದು ಅದರ ಮೇಲಿನ ಸ್ವರದ ಛಾಯೆಯು ಬರುವಂತೆ ಮಾಡುವುದು ವೀಣೆಯ ಒಂದು ಸ್ವರಸ್ಥಾನದಲ್ಲಿ ಒಂದು ಸ್ವರವನ್ನು ನುಡಿಸಿ ಅದೇ ಸ್ಥಾನದಿಂದ ತಂತಿಯನ್ನು ಜಗ್ಗಿಸಿ ಎರಡು ಮೂರು ಸ್ವರಗಳು ತೋರುವಂತೆ ಮಾಡುವುದು

**(೬) ವಲಿ (ಸುತ್ತುವ ಕಂಪನಗಳು)**—

ಅನೇಕವಿಧ ವಕ್ರತ್ವಯುಕ್ತ ವೇಗವತಾಂ ಸ್ವರಾಣಾಂ ಕಂಪಃ ॥ (ಸಂ.ರ)

ಅನೇಕ ಬಗೆಯ ವಕ್ರತ್ವದಿಂದ ಕೂಡಿದ ವೇಗವುಳ್ಳ ಸ್ವರಗಳ ಕಂಪನವು ವಲಿ.

ಒಂದೇ ಸ್ವರಸ್ಥಾನದಲ್ಲಿ ೨-೩ ಸ್ವರಗಳ ಛಾಯೆಯನ್ನು ಉಂಟುಮಾಡಿ ತಂತಿಯನ್ನು ವರ್ತುಲಾಕಾರದಲ್ಲಿ ಸ್ವರಕಂಪನಗಳುಂಟಾಗುವಂತೆ ಜಗ್ಗಿಸುವುದು, ಒಂದು ಸ್ವರವನ್ನು ವಕ್ರವಾಗಿ ಕಂಪಿಸಿ, ಅದರ ಮೇಲಿನ ಸ್ವರಗಳ ಛಾಯೆಯು ಬರುವಂತೆ ಮಾಡುವುದು, ಇರುವೆಯು ನಾಲು ಹರಿಯುವಂತೆ ಒಂದು ಸ್ವರಕ್ಕೂ ಮತ್ತೊಂದು ಸ್ವರಕ್ಕೂ ಅಂತರವಿಲ್ಲದಂತೆ ಸ್ವರಕೂಡಿಸಿ ನುಡಿಸುವುದು ವಲಿ ಗಮಕ. ಇದು ವೇಗದಿಂದ ಕೂಡಿದ ಕಂಪನ ಮತ್ತು ವೀಣೆಯಲ್ಲಿ ನುಡಿಸುವ ಗಮಕ.

**(೭) ತ್ರಿಭಿನ್ನ**—

ಸ್ಥಾನತ್ರಯೇಪಿ ಅವಿಶ್ರಾನ್ತಾಃ ನಿಬಿಡಾಸ್ವರಾಃಯಸ್ಮಿ ॥ (ಸಂ. ರ)

ವೀಣೆಯಸಾರಣಿ, ಪಂಚಮ ಮತ್ತು ಮಂದ್ರ ಎಂಬ ಮೂರು ತಂತಿಗಳ ಮೇಲೆ ಬೆರಳೂರಿ ಏಕ ಕಾಲದಲ್ಲಿ ಅಥವಾ ಒಂದಾದ ನಂತರ ಒಂದನ್ನು ಮಿಾಟಿದರೆ ಉಂಟಾಗುವ ಸಂಗತ ಧ್ವನಿಗೆ ತ್ರಿಭಿನ್ನವೆಂದು ಹೆಸರು

**(೮) ಕುರುಳ**—ಒಂದು ಸ್ವರಸ್ಥಾನದಿಂದ ಬೇರೊಂದು ಸ್ಥಾನದ ಸ್ವರವು ಬರುವಂತೆ ನುಡಿಸುವುದು ಕುರುಳ. ಅವರೋಹಣ ಸ್ವರದಲ್ಲಿ ಕೆಳಗಿನ ಸ್ಥಾಯಿಯಲ್ಲಿರುವಾಗ ಒಂದೊಂದು ಸ್ವರವನ್ನು ಎಳೆದು ಮೇಲಿನ ಸ್ವರಚ್ಛಾಯೆ ಬರುವಂತೆ ಮಾಡುವ ಈ ಗಮಕವು ವಲಿಯನ್ನು ಹೋಲುತ್ತದೆ.

**(೯) ಆಹತ (ಹೊಡೆತ)**—ಇದು ವೀಣೆಯ ಗಮಕ. ಒಂದು ಸ್ವರವನ್ನು ನುಡಿಸಿ ಮಿಾಟಿಲ್ಲದೆ ಬೇರೊಂದು ಸ್ವರವನ್ನು ನುಡಿಸುವುದು ಆಹತ. ಗ ರಿ ಎಂದು ಆರಂಭಿಸಿದರೆ ಮತ್ತೊಂದು ಗಾಂಧಾರ ಸ್ವರ ಛಾಯೆಯು ಬರುವಂತೆ ಗ ಗ ರಿ ಎಂದು ನುಡಿಸಿದ ಹಾಗೆ ತೋರುವಂತೆ ಕಂಪಿಸುವುದು. ಪ ಮ ಎಂದು ಅವರೋಹಣ ಮಾಡುವಾಗ ಪ ಪ ಮ ಎಂದು ತೋರುವಂತೆ ಕಂಪಿಸುವುದು. ಈ ಗಮಕ

ಪ್ರಯೋಗದಿಂದ 'ಗದ್ಗದಿತ' ಎಂಬ ಕಂಪನವು ಉಂಟಾಗುತ್ತದೆ. ಕರ್ಣಾಟಕ ಸಂಗೀತದಲ್ಲಿ ಈ ಗಮಕದ ಪ್ರಯೋಗವು ಹೆಚ್ಚಾಗಿ ಕಂಡುಬರುತ್ತದೆ.

**(೧೦) ಉಲ್ಲಸಿತ**— ಇದು ಜಾರು ಗಮಕ. ಎಕ್ಕುಜಾರು ಎಂದರೆ ಮೇಲಕ್ಕೆ ಜಾರುವುದು ಮತ್ತು ದಿಗುಜಾರು ಎಂದರೆ ಕೆಳಕ್ಕೆ ಜಾರುವುದು ಎಂಬ ಎರಡು ವಿಧಗಳುಂಟು (ಏರುವ ಜಾರು, ಇಳಿಯುವ ಜಾರು). ಆರೋಹಣದಲ್ಲಾದರೆ ಏರುವ ಜಾರು, ಅವರೋಹಣದಲ್ಲಾದರೆ ಇಳಿಯುವ ಜಾರು. ಒಂದು ಸ್ವರಸ್ಥಾನದಿಂದ ಮತ್ತೊಂದು ಸ್ವರಸ್ಥಾನಕ್ಕೆ ಮಧ್ಯೆ ಇರುವ ಸ್ವರಗಳಿಗೆ ಪ್ರಾಮುಖ್ಯತೆ ಕೊಡದೆ ಜಾರುವುದು ಉಲ್ಲಸಿತ. ದಾಟು ಸ್ವರ ಪ್ರಯೋಗಗಳಲ್ಲಿ ಅಂದರೆ ಗಾಂಧಾರದಿಂದ ಧೈವತ ಅಥವಾ ಮಧ್ಯಮದಿಂದ ನಿಷಾದ ಸ್ವರಗಳನ್ನು ಹಾಡಬೇಕಾದರೆ ಮಧ್ಯೆಯಿರುವ ಸ್ವರಗಳ ಛಾಯೆಯು ಗೋಚರಿಸುತ್ತದೆ. ಉದಾ : ಪ ಸಾ ಎಂದೆನ್ನುವಾಗ ಮಧ್ಯೆ ಇರುವ ಧೈವತ ನಿಷಾದಗಳ ಛಾಯೆಯು ಬರುವಂತೆ ಪದನಿಸಾ ಎನ್ನುವಂತೆ ಕಂಪಿಸುವುದು.

**(೧೧) ಪ್ಲಾವಿತ**—

ಪ್ಲುತ ಪ್ರಮಾಣೇನ ಕಂಪಿತಃ ॥ (ಸಂ.ರ)

ಇದೊಂದು ಬಗೆಯ ಕಂಪಿತ ಗಮಕ. ಒಂದು ಸ್ವರವನ್ನು ೧೨ ಅಕ್ಷರಕಾಲ ಅಥವಾ ಮೂರು ಮಾತ್ರಾಕಾಲ ಅದರ ಮೇಲಿನ ಸ್ವರದ ಛಾಯೆ ಬರುವಂತೆ ಕಂಪಿಸುವುದು. ಪ್ಲುತಕಾಲ ಪ್ರಮಾಣದಷ್ಟು ಕಂಪಿಸುವುದು ಪ್ಲಾವಿತ ಗಮಕ.

**(೧೨) ಗುಂಫಿತ**—

ಹುಮಿತಿ ವರ್ಣೋಗರ್ಭೇ ಅಂತರಿಯಸ್ಯ ! (ಸಂ.ರ)

ಈ ಗಮಕವನ್ನು ಹುಂಪಿತವೆಂದು ಗೋವಿಂದ ದೀಕ್ಷಿತರು ಹೆಸರಿಸಿದ್ದಾರೆ. ಹುಂಕಾರವನ್ನು ಒಳಗೇ ಆರೋಹಣ ಮತ್ತು ಅವರೋಹಣ ಕ್ರಮದಲ್ಲಿ ಕಂಪಿಸುವ ಹಾಡುಗಾರಿಕೆಯ ಗಮಕವು ಹುಂಪಿತ. ಇದಕ್ಕೆ ದ್ವಿಸರಿಮಾಣಗಮಕವೆಂದು ಹೆಸರು. ಇದು ವೀಣೆಯಲ್ಲಿ ಕೆಳಗಿನ ಷಡ್ಜದಿಂದ ಮೇಲಿನ ಷಡ್ಜದವರೆಗೆ ಒಂದೇ ಹುಂಕಾರ ನಾದ ಹುಟ್ಟುವಂತೆ ನುಡಿಸಲ್ಪಡುವ ಒಂದು ಬಗೆಯ ಜಾರು ಗಮಕ.

**(೧೩) ಮುದ್ರಿತ** —

ಮುಖಂ ಮುದ್ರಯಿತ್ವಾಯಃ ಕೃತಃ ಸ್ವರಸ್ಯ ಕಂಪಃ ॥

ಇದು ಬಾಯನ್ನು ಮುಚ್ಚಿಕೊಂಡು ಹಾಡುವಾಗ ಬಳಸುವ ಕಂಪನ. ಹಾಡುಗಾರಿಕೆಯಲ್ಲಿ ಕೆಲವು ವೇಳೆ ಅಂ ಕಾರಗಳ ಪ್ರಯೋಗವಿದ್ದಲ್ಲಿ ಈ ಗಮಕವನ್ನು ಬಳಸಲಾಗುವುದು.

**(೧೪) ನಾಮಿತ**—

ಸ್ವರಾಣಾಂ ನಮನಂ ಮಂದ್ರಸ್ಥಾನೇ ಉಚ್ಚಾರಣಂ ಆರೋಹಣಂ ವಾ ॥

ಸ್ವರಗಳನ್ನು ತಗ್ಗಿಸಿ ಮಂದ್ರಸ್ಥಾಯಿಯಲ್ಲಿ ಸಂಚುಮಾಡಿ ಹಾಡಿ ಕಂಪಿಸುವುದು ನಾಮಿತ. ಕೃತಿ ಮುಂತಾದುವನ್ನು ವೀಣೆಯಲ್ಲಿ ನುಡಿಸುವಾಗ ಅಕ್ಷರಗಳಿಗೆ ಮಿಾಟು ಕೊಟ್ಟು ರಸವು ಉತ್ಪತ್ತಿಯಾಗುವಂತೆ ಮಾಡುವ ಗಮಕ.

(೧೫) **ಮಿಶ್ರಿತ**—ಇದು ಹಲವು ಗಮಕಗಳ ಮಿಶ್ರಣ. ಸ್ವರಗುಚ್ಛಗಳಲ್ಲಿ ಅಥವಾ ರಚನೆಗಳಲ್ಲಿ ಸ್ವರಗಳ ಸಂವಾದಿ ಭಾವಕ್ಕನುಗುಣವಾಗಿ ಅನೇಕ ಬಗೆಯ ಗಮಕಗಳು ಮಿಶ್ರಣಗೊಂಡು ಪ್ರಯೋಗಿಸಲ್ಪಡುತ್ತವೆ

ಪಂಚದಶ ಗಮಕಗಳಲ್ಲಿ ಲೀನ, ಆಂದೋಳಿತ, ಪ್ಲಾವಿತ ಗಮಕಗಳು ಕಂಪನದ ವಿವಿಧ ರೂಪಗಳು. ಪಂಚದಶ ಗಮಕಗಳಲ್ಲಿ ಹೆಚ್ಚು ಗಮಕಗಳು ವೀಣೆಯಲ್ಲಿ ಪ್ರಯೋಗ ವಾಗುವುದರಿಂದ ಹಾಡುಗಾರಿಕೆ ಹಾಗೂ ವಾದ್ಯಸಂಗೀತಗಳಿಗೂ ಸಮಂಜಸವಾದ ದಶ ವಿಧ ಗಮಕಗಳು ಈಗ ರೂಢಿಯಲ್ಲಿದ್ದು ಕರ್ಣಾಟಕ ಸಂಗೀತದಲ್ಲಿ ಪ್ರಾಮುಖ್ಯತೆಯನ್ನು ಪಡೆದಿವೆ.

ಅತಿ ಪ್ರಾಚೀನವಾದ ಕೆಲವು ಅಲಂಕಾರಗಳೂ ದಶವಿಧ ಗಮಕಗಳಲ್ಲಿ ಸೇರಿವೆ. ಕೋಹಲನ ಮತದಂತೆ ಅವುಗಳ ಹೆಸರನ್ನು ಈ ಶ್ಲೋಕದಲ್ಲಿ ಹೇಳಿದೆ :

ಆರೋಹಣಮವರೋಹಂ ಚ ಢಾಲು ಸ್ಫುರಿತ ಕಂಪಿತಃ ।
ಆಹತ ಪ್ರತ್ಯಾಹತಶ್ಚ ತ್ರಿಪುಚ್ಛಾಂದೋಳ ಮೂರ್ಛನಾಃ ॥

(೧) **ಆರೋಹಣ**—ಒಂದು ಸ್ವರದಿಂದ ಆರೋಹಣ ಅಥವಾ ಏರಿಕೆಯ ಕ್ರಮ ದಲ್ಲಿ ಸ್ವರಸಮೂಹಗಳಿದ್ದರೆ ಆ ಗುಂಪನ್ನು ಆರೋಹಣ ಗಮಕವೆನ್ನುತ್ತಾರೆ.

ಉದಾ : ಸ ರಿ ಗ ಮ ಪ ದ ನಿ
ರಿ ಗ ಮ ಪ ಧ ನಿ ಸ
ಗ ಮ ಪ ಧ ನಿ ಸ ರಿ

ಅನೇಕ ಗಮಕಗಳು ಪ್ರಾಯೋಗಿಕ ವಿವರಣೆಯಲ್ಲಿ ಹೆಚ್ಚಿನ ಭಿನ್ನತೆ ಪಡೆಯದಿದ್ದರೂ ಅವುಗಳ ಕಂಪನಾವರ್ತನಗಳು ಕಾಲಪ್ರಮಾಣ, ವೇಗ, ಉತ್ಪಾದನೆ ಮತ್ತು ಬೃಹತ್ವ ಗಳಿಂದ ಪ್ರಮುಖ ವ್ಯತ್ಯಾಸಗಳು ಕಾಣುತ್ತವೆ. ಗಮಕಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು.

(೧) ರವೆ ಗಮಕಗಳು, (೨) ಜಾರು ಗಮಕಗಳು.

ಇವನ್ನು ಸ್ವರಸ್ರವಣ ಗಮಕಗಳೆಂದು ಕರೆಯಲಾಗಿದೆ. ಒಂದು ಶ್ರುತಿಯಿಂದ ಮತ್ತೊಂದು ಶ್ರುತಿಗೆ ಅವಿಚ್ಛಿನ್ನವಾಗಿ ಸೇರುವುದು ಈ ಗಮಕಗಳ ವಿಶೇಷ ಗುಣ. ಕಂಪಿತ, ಲೀನ, ಆಂದೋಳಿತ, ವಲಿ, ಉಲ್ಲಸಿತ ಮತ್ತು ಗುಂಫಿತಗಳು ಜಾರು ಗಮಕ ಗಳು.

ಮುದ್ರಿತ, ನಾಮಿತ ಮತ್ತು ಮಿಶ್ರಿತ ಗಮಕಗಳು ಮೇಲಿನ ಎರಡು ಕ್ರಮ ಗಳಿಗೂ ಅನ್ವಯವಾಗುತ್ತವೆ. ದಶವಿಧ ಗಮಕಗಳೆಲ್ಲವೂ ಸ್ಥೂಲವಾಗಿ ಆದಿ ಅಪ್ಪಯ್ಯ ನವರ ಅಟತಾಳದ ವೀರಿಬೋಣಿ ಎಂಬ ಭೈರವಿ ವರ್ಣದಲ್ಲಿ ಪ್ರಯೋಗಿಸಲ್ಪಟ್ಟಿವೆ.

(೨) **ಅವರೋಹಣ**—ಮೇಲಿನ ಒಂದು ಸ್ವರದಿಂದ ಇಳುವರಿಕೆ ಕ್ರಮವು ಅವರೋಹಣ ಕ್ರಮ. ಈ ಕ್ರಮದಲ್ಲಿ ಸ್ವರಸಮೂಹಗಳು ಆಧಾರ ಸ್ವರಾಭಿಮುಖವಾಗಿ ಒಂದುಗೂಡಿದರೆ ಅವು ಅವರೋಹಣ.

ಉದಾ: ಸ ನಿ ಧ ಪ ಮ ಗ ರಿ ಸ
ನಿ ಧ ಪ ಮ ಗ ರಿ ಸ
ದ ಪ ಮ ಗ ರಿ ಸ

(೩) **ಢಾಲು**—ರಾಗ ಭಾವಕ್ಕನುಗುಣವಾಗಿ ತಗ್ಗಿನ ಒಂದು ಸ್ವರದಿಂದ ಮೇಲಿನ ಸ್ವರಗಳಿಗೆ ದಾಟಿ ಸೇರುವ ವಿಧಾನಕ್ಕೆ ಢಾಲು ಎಂದು ಹೆಸರು. ಷಡ್ಜದಿಂದ ಪಂಚಮವನ್ನೋ ಅಥವಾ ಮಧ್ಯಮವನ್ನೋ ಅಥವಾ ಗಾಂಧಾರ ಅಥವಾ ರಿಷಭ ವನ್ನೋ ಮುಟ್ಟುವ ಮಿಂಚುವ ಗಮಕ. ಉದಾ: ಸ ಪ, ಸ ಮ, ಸ ಗ, ಸ ರಿ, ಸ ಸ.

(೪) **ಸ್ಫುರಿತ**
(೫) **ಕಂಪಿತ**
(೬) **ಆಹತ**
—ಇವಕ್ಕೆ ಪಂಚದಶ ಗಮಕಗಳ ವಿವರಣೆಯು ಅನ್ವಯಿಸುತ್ತದೆ.

(೭) **ಪ್ರತ್ಯಾಹತ**—ಅವರೋಹಣ ಕ್ರಮದಲ್ಲಿ ಎರಡು ಸ್ವರಗಳ ಮೇಳವಿದ್ದು ಎರಡನೆಯ ಸಮೂಹವು ಮೊದಲನೆಯ ಸ್ವರ ಸಮೂಹದ ಕೊನೆಯ ಅಕ್ಷರದಿಂದ ಪ್ರಾರಂಭವಾಗುವುದು ಪ್ರತ್ಯಾಹತ ಉದಾ: ಸ ನಿ, ನಿ ಧ, ಧ ಪ, ಪ ಮ, ಮ ಗ, ಗ ರಿ, ರಿ ಸ.

(೮) **ತ್ರಿಪುಚ್ಛ**—ಇದು ಮೂರು ಸ್ವರಗಳಿರುವ ಸಮೂಹವನ್ನು ಉಪಯೋಗಿಸುವ ಗಮಕ.

ಉದಾ: ಸಸಸ, ರಿರಿರಿ, ಗಗಗ, ಮಮಮ, ಪಪಪ, ಧಧಧ, ನಿನಿನಿ, ಸ ಸ ಸ

(೯) **ಆಂದೋಳ**—ಇಲ್ಲಿ ಸ್ವರಗಳನ್ನು ಬಳಸುವ ರೀತಿ ಉಯ್ಯಾಲೆಯ ತೂಗಾಟದಂತಿರುತ್ತದೆ.

ಉದಾ: ಸ ರಿ ಸ ಪಾ ಪ, ರಿ ಗ ರಿ ಮಾ ಮ, ಗ ಮ ಗ ದಾ ದ.

(೧೦) **ಮೂರ್ಛನ**—ಷಡ್ಜದಿಂದ ಆರಂಭಿಸಿ, ಕ್ರಮವಾಗಿ ಆರೋಹಣ ಕ್ರಮ ದಲ್ಲಿ ಮುಂದುವರಿಸಿ, ದೀರ್ಘ ನಿಷಾದದಲ್ಲಿ ಮುಕ್ತಾಯ ಮಾಡಿ, ತರುವಾಯ ರಿಷಭ ದಿಂದ ಆರಂಭಿಸಿ ದೀರ್ಘ ಷಡ್ಜದಲ್ಲಿ ಮುಕ್ತಾಯಗೊಳಿಸುವುದು ಮೂರ್ಛನ.

ಉದಾ: ಸ ರಿ ಗ ಮ ಪ ದ ನೀ
ರಿ ಗ ಮ ಪ ದ ನಿ ಸಾ

ಕರ್ಣಾಟಕ ಸಂಗೀತದಲ್ಲಿರುವಂತೆಯೇ ಹಿಂದೂಸ್ಥಾನಿ ಪದ್ಧತಿಯಲ್ಲೂ ಹಲವು ಬಗೆಯ ಗಮಕಗಳಿವೆ.

ಪಾಲ್ಕುರಿಕೆ ಸೋಮನಾಥನು ಪಂಡಿತಾರಾಧ್ಯ ಚರಿತ್ರೆ ಎಂಬ ಗ್ರಂಥದಲ್ಲಿ ೨೧ ಬಗೆಯ ಗಮಕಗಳನ್ನು ಹೇಳಿದ್ದಾನೆ.

**ಅಲಂಕಾರಗಳು** —

ವಿಶಿಷ್ಟವರ್ಣ ಸಂದರ್ಭಮಲಂಕಾರಂ ಪ್ರಚಕ್ಷತೇ ।

ಭಾವಯುಕ್ತವಾದ, ಆಹ್ಲಾದಕರವಾದ, ಸುಂದರವಾದ ಸ್ವರಸಮೂಹಗಳಿಗೆ ಅಲಂಕಾರಗಳೆಂದು ಹೆಸರು ಆಧುನಿಕ ಸಂಗೀತದಲ್ಲಿ ಗಮಕಗಳು ಪ್ರಾಮುಖ್ಯತೆಯನ್ನು ಪಡೆದಿರುವಂತೆ, ಪ್ರಾಚೀನ ಕಾಲದಲ್ಲಿ ಅಲಂಕಾರಗಳು ಪ್ರಾಮುಖ್ಯತೆ ಪಡೆದಿದ್ದುವು. ವಾಯು ಪುರಾಣವು ಹಲವು ಬಗೆಯ ಅಲಂಕಾರಗಳನ್ನು ತಿಳಿಸುತ್ತದೆ. ದತ್ತಿಲನು ತನ್ನ ಗ್ರಂಥದಲ್ಲಿ ವರ್ಣಗಳು ಮತ್ತು ಅಲಂಕಾರಗಳನ್ನು ಕುರಿತು ಹೇಳಿದ್ದಾನೆ ಗಮಕಗಳಲ್ಲಿ ಅಲಂಕಾರಗಳು ವಿಲೀನವಾಗಿರುವುದರಿಂದ ಇವುಗಳನ್ನು ನಂತರದ ಶಾಸ್ತ್ರಗ್ರಂಥಗಳಲ್ಲಿ ಹೇಳಿಲ್ಲ.

ಪ್ರಾಚೀನ ಸಂಪ್ರದಾಯದಲ್ಲಿ ಅಲಂಕಾರಗಳು ಸ್ಥಾಯಿ, ಆರೋಹಿ, ಅವರೋಹಿ ಮತ್ತು ಸಂಚಾರಿ ಎಂಬ ನಾಲ್ಕು ಬಗೆಗಳಿದ್ದುವು.

(೧) **ಪ್ರಸನ್ನಾದಿ**—ಇದು ತಗ್ಗಿನ ಸ್ವರದಿಂದ ಪ್ರಾರಂಭಿಸಲ್ಪಡುವ ಸ್ವರಸಮೂಹ. ಉದಾ : ಸ ಸ ಸ

(೨) **ಪ್ರಸನ್ನಾಂತ**—ಮೇಲಿನ ಸ್ವರದಲ್ಲಿ ಮುಕ್ತಾಯವಾಗುವ ಸ್ವರಸಮೂಹ. ಉದಾ : ಸ ಸ ಸ

(೩) **ಪ್ರಸನ್ನಾದ್ಯಂತ**—ಮೊದಲು ಮತ್ತು ಕೊನೆಯಲ್ಲಿ ಮೇಲಿನ ಸ್ವರ ಇರುವ ಸ್ವರಸಮೂಹ. ಉದಾ : ಸ ಸ ಸ

(೪) **ಪ್ರಸನ್ನಮಧ್ಯ**—ಮಧ್ಯದ ಸ್ವರವು ಮೇಲಿನ ಸ್ವರವಾಗಿರುವುದು. ಉದಾ : ಸ ಸ ಸ

(೫) **ಕ್ರಮರೇಚ್ಛಿತ ಅಥವಾ ಭದ್ರ**—ಸ್ವರಗಳು ಕ್ರಮವಾಗಿ ಗುಂಪು ಕೂಡಿರುತ್ತವೆ. ಉದಾ : ಸ ರಿ ಸ, ರಿ ಗ ರಿ, ಗ ಮ ಗ, ಮ ಪ ಮ.

(೬) **ಪ್ರಸ್ತಾರ ಅಥವಾ ನಂದ**—ಇದರಲ್ಲಿ ಹೆಚ್ಚು ಸ್ವರಗಳು ಗುಂಪು ಕೂಡಿರುತ್ತವೆ. ಉದಾ : ಸ ಸ ರಿ ರಿ ಸ ಸ, ರಿ ರಿ ಗ ಗ ರಿ ರಿ.

(೭) **ಜಿತ**—ಈ ಸ್ವರಸಮೂಹವು ಒಂದು ತಗ್ಗಿನ ಸ್ವರದಲ್ಲಿ ಪ್ರಾರಂಭವಾಗಿ ಮೇಲಿನ ಸ್ವರವನ್ನು ಸೇರಿ ಪುನಃ ತಗ್ಗಿನ ಸ್ವರವನ್ನು ಸೇರುವುದು. ಉದಾ : ಸ ಗ ರಿ ಸ, ರಿ ಮ ಗ ರಿ, ಗ ಪ ಮ ಗ

ಆರೋಹಿ ಅಲಂಕಾರಗಳಲ್ಲಿ ಬಿಂದು, ತ್ರಿವರ್ಣ, ಆಕ್ಷಿಪ್ತ, ಹಸಿತ ಎಂಬ ನಾಲ್ಕು ವಿಧಗಳಿವೆ.

(೧) **ಬಿಂದು**—ಸ ಸ ಸ ರಿ, ರಿ ರಿ ರಿ ಗ, ಗ ಗ ಗ ಮ ಎಂಬ ಸ್ವರ ಸಮೂಹಗಳು.

(೨) **ತ್ರಿವರ್ಣ**—ಸ ರಿ ಗ ಗ ಗ, ರಿ ಗ ಮ ಮ ಮ, ಗ ಮ ಪ ಪ ಪ ಎಂಬಂತೆ ಸ್ವರಸಮೂಹವ ಕೊನೆಯಲ್ಲಿ ಮೂರು ಬಾರಿ ಒಂದೇ ಸ್ವರ ನುಡಿಯುವುದು.

(೩) **ಆಕ್ಷಿಪ್ತ**—ಸ ಸ ಗ ಗ, ರಿ ರಿ ಮ ಮ, ಗ ಗ ಪ ಪ ಎಂಬಂತೆ ಸ್ವರಗಳು ಒಂದುಗೂಡುವುದು.

(೪) **ಹಸಿತ**—ಸ ರಿ ರಿ. ಗ ಗ ಗ, ಮ ಮ ಮ ಮ, ಪ ಪ ಪ ಪ ಪ ಎಂಬಂತೆ ಸ್ವರಗಳು ಹೆಚ್ಚುತ್ತಾ ಹೋಗುವುದು.

ಇವಲ್ಲದೆ ಆರೋಹಿ ಅಲಂಕಾರಗಳಲ್ಲಿ ವಿಸ್ತೀರ್ಣ, ನಿರ್ಷರ್ಕ, ಗಾತ್ರವರ್ಣ, ಉದ್ಗೀತ, ಅಭ್ಯೋಛಯ, ಹೇಂಫಿತ, ಸಂಧಿಪ್ರಚ್ಛಾದನ, ಉದ್ವಾಹಿತ, ವೇಣಿ ಎಂಬ ಬಗೆಗಳಿವೆ ಮೇಲಿನವೆಲ್ಲವೂ ಅವರೋಹಣ ಕ್ರಮದಲ್ಲಿದ್ದರೆ ಅವರೋಹಿ ಅಲಂಕಾರಗಳಾಗುತ್ತವೆ.

ಸಂಚಾರಿ ಅಲಂಕಾರಗಳು ಅನೇಕವಾಗಿವೆ. ಅವುಗಳಲ್ಲಿ ಮುಖ್ಯವಾದುವು ಒಂಭತ್ತು ವಿಧಗಳು.

(೧) **ತಾರಮಂದ್ರಪ್ರಸನ್ನ**—ಇವರಲ್ಲಿ ತಾರಸ್ವರ ಮತ್ತು ತಗ್ಗಿನ ಎರಡು ಸ್ವರಗಳು ಬರುತ್ತವೆ.

ಉದಾ : ಸ ಸ ಸ

(೨) **ಮಂದ್ರತಾರಪ್ರಸನ್ನ**—ಎರಡು ಮಂದ್ರಸ್ವರಗಳ ಮಧ್ಯೆ ತಾರಸ್ವರ ಬರುತ್ತದೆ. ಉದಾ : ಸ ಸ ಸ

(೩) **ಆವರ್ತಕ**—ಸಸ ರಿರಿ, ಸಸ ರಿಸ, ರಿರಿ ಗಗ ರಿರಿ ಗರಿ ಮುಂತಾದುವು.

(೪) **ಸಂಪ್ರದಾನ**—ಸಸ ರಿರಿ ಸಸ, ರಿರಿ ಗಗ ರಿರಿ ಮುಂತಾದುವು

(೫) **ವಿದ್ಧೂತ**—ಸಗ ಸಗ, ರಿಮ ರಿಮ, ಗಪ ಗಪ

(೬) **ಉಪಾಲೋಲಕ** ಸರಿ ಸರಿ ಗರಿ ಗರಿ, ರಿಗ ರಿಗ ಮಗ ಮಗ, ಗಮ ಗಮ ಪಮ ಪಮ ಮುಂತಾದುವು.

(೭) **ಉಲ್ಲಸಿತ**—ಸಸಗ ಸಗ, ರಿರಿಮ ರಿಮ, ಗಗಪ ಗಪ ಇತ್ಯಾದಿ.

(೮) **ಉದ್ವಾಹಿತ**—ಸರಿಗರಿ, ರಿಗಮಗ, ಗಮಪಮ ಮುಂತಾದುವು.

(೯) **ಉದ್ಘಾತೀತ**—ಸರೀಪಮಗರೀ, ರಿಗಾಧಪಮಗಾ ಮುಂತಾದುವು.

ಸೂಳಾದಿ ಸಪ್ತತಾಳ ಅಲಂಕಾರಗಳಿಗೆ ಇಂಪ್ರನೀಲ, ಮಹಾವಜ್ರ, ನಿರ್ದೋಷ, ಶೀರ, ಕೋಕಿಲ, ಆವರ್ತ ಮತ್ತು ಸದಾನಂದ ಎಂಬ ಹೆಸರುಗಳಿದ್ದುವು.

**ಗಮಕಕಲೆ**—ಗಮಕವೆಂದರೆ ಗದ್ಯಪದ್ಯವಾಚನ ಕಲೆ. ಕಾವ್ಯಗಳ ವಿವಿಧ ಛಂದಸ್ಸುಗಳ, ಶೈಲಿಯ ಜಾಡನ್ನು ಹಿಡಿದು ಆ ಕಾವ್ಯದ ಕಥಾನಕ ರೀತಿಗನುಗುಣವಾಗಿ,

ರಮ್ಯವಾಗಿ, ರಸವತ್ತಾಗಿ ನಡೆಸಿಕೊಂಡು ಹೋಗುವ ಕಲೆಯೇ ಗಮಕಕಲೆ. ಪದ್ಯಮಾತ್ರವೇ ಅಲ್ಲ, ಗದ್ಯವನ್ನು ಓದುವುದೂ ಗಮಕಕಲೆಯ ಸೀಮೆಗೆ ಸೇರಿಕೊಂಡಿದೆ.

ಗಮಕದ ಪ್ರಾಚೀನತೆಯನ್ನು ವಾಲ್ಮೀಕಿ ರಾಮಾಯಣದ ಕಾಲಕ್ಕೆ ಕೊಂಡೊಯ್ಯಬಹುದು. ಲವಕುಶರು ವಾಲ್ಮೀಕಿ ರಾಮಾಯಣವನ್ನು ಪಠಿಸಿ, ರಾಮನನ್ನೂ, ಜನರನ್ನೂ ಮೆಚ್ಚಿಸಿದರು ಎಂಬ ವಿಷಯ ಸರ್ವವೇದ್ಯ. ಕಾವ್ಯವು ಎಂದು ಹುಟ್ಟಿತೋ ಅಂದು ಗಮಕಿಗೆ ಸ್ಥಾನ ಉಂಟಾಯಿತು. ಗಮಕಕಲೆಯ ಪ್ರಾಚೀನತೆಯನ್ನು ಸಮರ್ಥಿಸಲು ರಾ. ನರಸಿಂಹಾಚಾರ್ಯರು ಹೀಗೆ ಹೇಳಿದ್ದಾರೆ 'ಕ್ರಿ. ಪೂ. ಒಂದನೇ ಶತಮಾನದ ಗ್ರಂಥವಾದ "ಲಲಿತವಿಸ್ತರ"ದಲ್ಲಿ ಬುದ್ಧನು ೬೪ ವಿದ್ಯೆಗಳನ್ನು ಕಲಿತಿದ್ದನೆಂದೂ ಹೇಳಿದೆ. ಆ ಅರವತ್ತುನಾಲ್ಕು ಕಲೆಗಳ ಎಣಿಕೆ ಮಾಡಿ ಹೇಳುವಾಗ ಈ ಗಮಕಕಲೆಯನ್ನು ೩೮ನೆ ಕಲೆಯನ್ನಾಗಿ ಮಾಡಿದ್ದಾರೆ. ಕ್ರಿ.ಶ. ಒಂದನೇ ಶತಮಾನದಲ್ಲಿದ್ದ ವಾತ್ಸ್ಯಾಯನನು ರಚಿಸಿದ "ಗೀತಪರಿತಂ" ಎಂಬ ಗ್ರಂಥದಲ್ಲಿ ಗಮಕಕಲೆಯನ್ನು "ಪುಸ್ತಕವಾಚನಂ" ಎಂದು ಕರೆದಿದೆ ಎಂದು ತಿಳಿಸಿರುವರು.' ಪ್ರಾಚೀನ ಗ್ರಂಥಗಳಲ್ಲಿ ಈ ಕಲೆಯ ಬಗ್ಗೆ ನೃಪತುಂಗನ ಕವಿರಾಜಮಾರ್ಗದಲ್ಲಿರುವ ಉಲ್ಲೇಖವನ್ನು ಗಮನಿಸಬಹುದು.

"ವೀರರಸಂ ಸ್ಫುಟೋಕ್ತಿಯನುದಾರತಮಂ ಕರುಣಾರಸಂ ಮೃದೋಚ್ಚಾರಣೆಯಿಂದ ಮದ್ಭುತರಸಮಂ ನಿಬಿಡೋಕ್ತಿಗಳಿಂದ ಮತ್ತೆ ಶೃಂಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂದ ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಿಂ". ರಸೋತ್ಪತ್ತಿಯನ್ನುಂಟು ಮಾಡುವ ರೀತಿಯೆಂದು ಗಮಕದ ಲಕ್ಷಣಗಳನ್ನು ಕೊಟ್ಟಿದ್ದಾನೆ. ಇವುಗಳಿಂದ ಗಮಕವು ಬಹು ಪ್ರಾಚೀನವಾದುದೆಂಬುದನ್ನು ಸಮರ್ಥಿಸಬಹುದು.

ಕವಿ, ಗಮಕಿ, ವಾದಿ, ವಾಗ್ಮಿ ಎಂಬ ನಾಲ್ಕು ಪದಗಳನ್ನು ಸಾಹಿತ್ಯದಲ್ಲಿ ಬಹಳ ಹಿಂದಿನಿಂದಲೂ ಉಪಯೋಗಿಸುತ್ತಿದ್ದಾರೆ. ಇವು ಒಂದು ಚತುಷ್ಟಯ. ಕಾವ್ಯವನ್ನು ರಚಿಸತಕ್ಕವನು ಕವಿ ಅದನ್ನು ಅರ್ಥ ರಸ ಭಾವಗರ್ಭಿತವಾಗಿ ಓದುವವನು ಗಮಕಿ. ಮನಸ್ಸಿನ ಮೇಲೆ ಪರಿಣಾಮವುಂಟಾಗುವಂತೆ ಭಾಷಣ ಮಾಡುವವನು ವಾಗ್ಮಿ ಸ್ವಪಂಥವನ್ನು ಪ್ರತಿಪಾದಿಸುವ ನೈಪುಣ್ಯವನ್ನು ಪಡೆದಿರುವವನು ವಾದಿ. ಕವಿಗೂ ಗಮಕಿಗೂ ಬಹು ಸಿಕಟ ಬಾಂಧವ್ಯವಿರುವುದು ಸ್ವತಃ ಸಿದ್ಧ ಹಾಗೂ ಹಿಂದೆ ರಾಜರ ಆಸ್ಥಾನಗಳಲ್ಲಿ ಕವಿ ಗಮಕಿಗಳಿಗೆ ಸ್ಥಾನವಿತ್ತು. 'ವಿವೇಕ ಚಿಂತಾಮಣಿ'ಯಲ್ಲಿ ಉಕ್ತವಾಗಿರುವಂತೆ ಸಭೆಯ ಸಪ್ತಾಂಗಗಳಲ್ಲಿ ಪೌರಾಣಿಕರು ಒಂದು ಅಂಗವಾಗಿದ್ದರು. ಗೋವಿಂದವೈದ್ಯನ 'ಕಂಠೀರವನರಸರಾಜವಿಜಯ'ದಲ್ಲಿ ಮೈಸೂರು ಅರಸರ ಆಸ್ಥಾನದಲ್ಲಿ ಭಾರತಿಗಳು ಅಥವಾ ಗಮಕಿಗಳಿದ್ದರೆಂದು ಹೇಳಿದೆ. ತನ್ನ ಕಾವ್ಯವನ್ನು 'ಭಾರತೀನಂಜನೊಲಿದು' ಅವನ ಮುಖದಿಂದ ವಾಚಿಸಿ ರಾಜಾಸ್ಥಾನದಲ್ಲಿ ವಿಸ್ತಾರ

ಪಡಿಸಿದುದು" ಎಂದಿದ್ದಾನೆ ಅಲ್ಲಿ ಸ್ತ್ರೀಯರೂ ಸಹ ವಾಚನ ಮಾಡುತ್ತಿದ್ದರಂತೆ. ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ 'ಗಮಕಿಶ್ರೇಣಿ' 'ಗಮಕಿಗಳ್' ಇದ್ದರು ಓದುವಗಿರಿಯ (೧೫೩೫ ಕ್ರಿ ಶ) ಪ್ರಸಿದ್ಧ ಗಮಕಿಯಾಗಿದ್ದನು ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ತಿರುಮಲಮ್ಮ ಮತ್ತು ನಾಗಶ್ರೀ ಎಂಬುವರು ಪ್ರಸಿದ್ಧ ಗಮಕಿಗಳಾಗಿದ್ದರು. ಚಾಮರಾಜ ಒಡೆಯರ ಆಸ್ಥಾನದಲ್ಲಿ ಉದ್ದಾಮ ಕವಿಯೂ, ಅದ್ವಿತೀಯ ಗಮಕಿಯೂ ಆದ ಅಭಿನವ ಕಾಳಿದಾಸ ಬಸಪ್ಪಶಾಸ್ತ್ರಿಗಳಿದ್ದರು. ತಮ್ಮ ಭಾರತವಾಚನದಿಂದ ಗೋವುಗಳನ್ನೂ ಮೇವು ಮರೆಯುವಂತೆ ಮಾಡುತ್ತಿದ್ದರಂತೆ! ಇತ್ತೀಚಿನ ದಿನಗಳಲ್ಲಿ ಸಂ. ಗೋ. ಬಿಂದೂರಾಯರು, ಕಳಲೆ ಸಂಪತ್ಕುಮಾರಾಚಾರ್ಯರು, ಕೃಷ್ಣಗಿರಿ ಕೃಷ್ಣರಾಯರು, ಗಮಕಿ ರಾಮಕೃಷ್ಣಶಾಸ್ತ್ರಿ ಮುಂತಾದವರು ಪ್ರಸಿದ್ಧ ಗಮಕಿಗಳಾಗಿದ್ದರು. ಈಗಿನ ಗಮಕಿಗಳಲ್ಲಿ ಗಮಕಕಲೆ ಗಮಕರಹಸ್ಯ, ಕಾವ್ಯಾನುಭವ ಇತ್ಯಾದಿ ಗ್ರಂಥಗಳ ಕರ್ತೃ ಕೆ. ಟಿ. ರಾಮಸ್ವಾಮಿ ಅಯ್ಯಂಗಾರ್, ಹೆಚ್. ಕೆ ರಾಮಸ್ವಾಮಿ, ಗಮಕಿ. ಎಂ.ರಾಘವೇಂದ್ರರಾವ್, ಬಿ. ಎಸ್. ಎಸ್ ಕೌಶಿಕ್, ಜೋಳದ ರಾಶಿ ದೊಡ್ಡಣ್ಣಗೌಡ, ತಲಕಾಡು ಮಾಯಿಗೌಡ, ರಾಮಾರಾಧ್ಯ, ಮಂಡ್ಯದ ಶೇಷಗಿರಿರಾವ್, ಆನಂದ ಪುರದ ವಿ. ಕೆ ಆನಂದಾಳ್ವಾರ್, ಗಿರಿಧರ್, ಶಕುಂತಳಾಬಾಯಿ ಪಾಂಡುರಂಗರಾವ್, ಹೊಸಬಾಳೆ ಸೀತಾರಾಮಯ್ಯ, ಗೌರಮ್ಮ ನಾಗರಾಜ್ ಮುಂತಾದವರು ಪ್ರಮುಖರು.

ಹಿಂದಿನಿಂದ ಬೆಳೆದು ಬಂದ ಗಮಕ ಕಲೆಯು 'ಮಲಿನವಸದೊಳು ಮುಸುಕಿದ ಮಾಣಿಕ್ಯ'ದಂತಿದ್ದು ಹರಿದಾಸರ ವೈವಿಧ್ಯಮಯವಾದ ಸಾಹಿತ್ಯ ಮತ್ತು ವಚನ ಸಾಹಿತ್ಯಗಳಿಂದ ಮತ್ತಷ್ಟು ಪ್ರಚಲಿತವಾಯಿತು. ಉಗಾಭೋಗ, ಸೂಳಾದಿಗಳು, ತ್ರಿಪದಿ, ರಗಳೆ, ಸಾಂಗತ್ಯ ಇತ್ಯಾದಿ ಜಾತಿಯ ಕಾವ್ಯಗಳನ್ನು ಭಾವ ಮತ್ತು ಅರ್ಥಗಳು ಕೆಡದಂತೆ ಗಮಕಕಲೆಯಲ್ಲಿ ಬಳಸುವ ಪದ್ಧತಿ ಬೆಳೆಯಿತು. ಕುಮಾರವ್ಯಾಸನ ಭಾರತ, ಲಕ್ಷ್ಮೀಶನ ಕಾವ್ಯ ಇತ್ಯಾದಿಗಳಿಂದ ಗಮಕ ಮತ್ತು ಗಮಕಿಗಳಿಗೆ ಬೃಹತ್ ಸ್ಥಾನವೇ ನಿರ್ಮಾಣವಾಯಿತು.

**ಗಮಕವು ಹೇಗಿರಬೇಕು?**—ಕವಿಗಳು ಪ್ರತಿಭಾನ್ವಿತರು. ರವಿಕಾಣದುದನ್ನು ಅವರು ಕಾಣುತ್ತಾರೆ. ಪದಗಳ ಸರಿಯಾದ ಅರ್ಥ, ಉಚಿತ ಪ್ರಯೋಗ, ಪದಭಂಡಾರ, ಪ್ರತಿಭೆ ಇವೆಲ್ಲವೂ ಅವರ ಅಧೀನ. ಅವರು ತಮ್ಮ ಪದಸಂಪತ್ತಿನಿಂದ ಮನೋಹರ ವರ್ಣನೆ. ಹೃದಯಂಗಮವಾದ ಮಾತುಗಳ ಬಳಕೆಯಿಂದ ಕಾವ್ಯಗಳನ್ನು ರಚಿಸಿರುವರು. "ಭಾಷೆ ಎಂಬುದು ಕವಿಗಳ ಸೊತ್ತು. ಅಭಿಪ್ರಾಯವೆಂಬ ಕನ್ನಿಕೆಗೆ ಭಾಷೆಯೆಂಬ ಮೋಹದ ರೂಪದ ಉಡುಪನ್ನು ಉಡಿಸಿ, ಅಲಂಕಾರವೆಂಬ ಒಡವೆಗಳನ್ನು ತೊಡಿಸಿ, ಆ ಕನ್ನಿಕೆಯ ಮೋಹನಾಸ್ತ್ರದಿಂದ ದಿಗ್ಭ್ರಾಂತರಾಗುವಂತೆ ಮಾಡುತ್ತಾರೆ" (ಗಮಕ ರಹಸ್ಯ ಪು. ೧೮). ಹಿಂದೆ ಜನರು 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದರು. ಅವರಿಗೆ ಗಮಕ ಪಠಣದಿಂದ ಭಾಷಾವಿವೇಚನಾಶಕ್ತಿ

ಬಂದಿರಬೇಕು. ಕಾವ್ಯಗಳ ರಸಾಸ್ವಾದನ ಮಾಡುವುದು ವಾಚನದಿಂದ ಮಾತ್ರ ಸಾಧ್ಯ. ಈ ವಾಚನತಂತ್ರವನ್ನು ರೂಢಿಸಿಕೊಂಡಿರುವವನು ಗಮಕಿ. ಕರ್ಣಾಟಕದಲ್ಲಿ ಕವಿಚಕ್ರವರ್ತಿಗಳಾಗಿದ್ದ ಪಂಪ, ರನ್ನ, ಲಕ್ಷ್ಮೀಶ, ಹರಿಹರ, ಕುಮಾರವ್ಯಾಸ, ಪೊನ್ನ, ನರಹರಿ ಮುಂತಾದವರು ಮಹಾಕಾವ್ಯಗಳ ಅಮೂಲ್ಯ ಆಸ್ತಿಯನ್ನು ಬಿಟ್ಟು ಹೋಗಿದ್ದಾರೆ.

ಗಮಕಿಯು ಕಾವ್ಯ ಮತ್ತು ಸಹೃದಯರ ಮಧ್ಯವರ್ತಿ. ಹಿಂದಿನ ಕವಿ ಶ್ರೇಷ್ಠರು ರಚಿಸಿದ ಕಾವ್ಯಸಂಪತ್ತಿನ ಪ್ರತಿನಿಧಿ; ಅವರ ಕಾವ್ಯಸುಧೆಯನ್ನು ನಮಗೆ ನೀಡುವ ಮಹೋಪಕಾರಿ ಕಾವ್ಯಗಳಲ್ಲಿರುವ ರಸ, ಅಲಂಕಾರ, ಅರ್ಥಸಂಪತ್ತು ಮತ್ತು ಗುಣ ವಿಶೇಷಗಳನ್ನೆಲ್ಲಾ ಮೊದಲು ತಾನು ಗ್ರಹಿಸಿ, ಅನುಭವಿಸಿ, ತರುವಾಯ ಅದರ ರಸಪಾಕಮಾಡಿ ರಸಿಕರಿಗೆ ಹಂಚುತ್ತಾನೆ. ಕಾವ್ಯ ರಾಶಿಗೂ ಅದರ ಮುಖ್ಯ ರಸ ಸಂಪತ್ತಿಗೂ ಸೇತುವೆಯಂತಿದ್ದು ಅದರ ಅರಿವಿನತ್ತ ನಮ್ಮನ್ನು ಕೊಂಡೊಯ್ಯುತ್ತಾನೆ. ಒಂದು ಕಾವ್ಯಭಾಗವನ್ನು ತೆಗೆದುಕೊಂಡು ಶ್ರೋತೃಗಳಿಗೆ ಸುಲಭವಾಗಿ ಅರ್ಥವಾಗುವಂತೆ, ತಾನೂ ಆನಂದಿಸಿ, ಅನುಭವಿಸಿ, ರಾಗ ಮತ್ತು ರಸಬದ್ಧವಾಗಿ ವಾಚಿಸುತ್ತಾನೆ. ಕವಿಯ ಕಾವ್ಯದ ಸೊಬಗು, ಅರ್ಥದ ಸೊಬಗು, ಪದಲಾಲಿತ್ಯದ ವೈಖರಿ, ಭಾವವೈಭವ ನಮ್ಮ ಹೃದಯವನ್ನು ಮುಟ್ಟಲು ಗಮಕಿಯ ಶ್ರಮವೇ ಮುಖ್ಯ. ಅವನ ವಾಚನ ಕಲೆಯೇ ರಸಪುಷ್ಟಿ. ಅವನ ವಾಚನವು ಕೇಳುವವರ ಕಿವಿಗಳಿಗೆ ಇಂಪು, ಮನಸ್ಸಿಗೆ ಸೊಂಪು, ಹೃದಯಕ್ಕೆ ತಂಪು ಉಂಟಾಗುವಂತಿರಬೇಕು. ಗಮಕವು ಹೇಗಿರಬೇಕು ಎಂಬುದನ್ನು ವಾಲ್ಮೀಕಿ ರಾಮಾಯಣದಲ್ಲಿ ಲವಕುಶರ ಗಮಕ ಕೌಶಲದಿಂದ ತಿಳಿಯಬಹುದು—

ಕುಶೀಲವೌತು ಧರ್ಮಜ್ಞೌ ರಾಜಪುತ್ರೌ ಯಶಸ್ವಿನೌ ।
ಭ್ರಾತರೌ ಸ್ವರಸಂಪನ್ನೌ ದದರ್ಶಾಯಾ ಶ್ರಮವಾಸಿನೌ ॥
ಪಾಠ್ಯೇಗೇಯೇ ಚ ಮಧುರಂ ಪ್ರಮಾಣೈಸ್ತ್ರಿಭಿರನ್ವಿತಂ ।
ಜಾತಿಭಿಃ ಸಪ್ತಭಿರ್ಯುಕ್ತಂ ತಂತ್ರೀಲಯ ಸಮನ್ವಿತಂ ॥
ರಸೈಶ್ಶೃಂಗಾರ ಕರುಣಾಹಾಸ್ಯ ರೌದ್ರಭಯಾನಕೈಃ ।
ವೀರಾದಿಭಿಃ ರಸೈರ್ಯುಕ್ತಂ ಕಾವ್ಯಮೇತದಗಾಯತಾಂ ॥

ಗಾಯಕನಿಗೂ ಗಮಕಿಗೂ ಹೆಚ್ಚು ವ್ಯತ್ಯಾಸವಿಲ್ಲ. ಗಾಯಕನ ಲಕ್ಷಣವನ್ನು ಕುಮಾರವ್ಯಾಸನು ಇಂತು ವರ್ಣಿಸಿದ್ದಾನೆ—

ಗ್ರಾಮ ಮೂರರ ಸಂಚರಣೆಗಳ
ಸೀಮೆಯಲಿ ಸರಿಗಮ ಪದನಿಗಳ
ನೇಮತಪ್ಪದೆ ಹರಣ ಭರಣದ ಕಂಪುತಿರುಪುಗಳ
ಕೋಮಲಿತ ಶಾರೀರ ಹೃದಯದ

ರಮಣೀಯಕ ರಚನೆಯಲಿ ಸ
ನಾಮನೆನಿಸುವನೆ ಗಾಯಕನರಸಕೇಳೆಂದ ||

ಇವೆಲ್ಲಾ ಗಮಕಿಗೂ ಸಲ್ಲತಕ್ಕದ್ದೇ.

ನಿಜಗುಣ ಶಿವಯೋಗಿಯು (೧೫ ನೆ ಶ.) ಸ್ಪಷ್ಟವಾಗಿ ಗಮಕಿಯ ಲಕ್ಷಣವನ್ನು ಇಂತು ನಿರೂಪಿಸಿದ್ದಾನೆ.

" ಗಾನತಾನಮಾನಂಗಳಂತೋರಿ ಯತಿಚರಣಾರ್ಧೋಲ್ಲೇಖಾದಿ
ಸಾಂದರ್ಭಿಕ ಮಿಶ್ರವರಿತು ಪದಸಂವ್ಯಕ್ತಿಗೈದು ಕೇಳ್ವರಿಗಿಂಪು
ಗೊಳಿಸಿ ಮೃದುಮಧುರ ವ್ಯಕ್ತವರ್ಣೋಚ್ಚಾರಣದಿಂ
ಭಾವಸೂಚಕರಾದ ಗಮಕಿಗಳಿಂ ತುದ್ಗೀತರಾಗಿ "

ಷಡಕ್ಷರಿಯು (೧೬೫೪) ಗಮಕದ ರೂಪರೇಖೆಗಳನ್ನು ವರ್ಣಿಸಿರುವ ರೀತಿಯಿದು :

ಕವಿ ವಿಬುಧರ ಕಿವಿಯೊಳ್ ಸೂಸುವ
ನವರಸ ಮಿಳಿದು ತೀವಿ ತನುವಂ ಮನಮಂ
ಕವಿದು ಪೊರಸೂಸಿತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ ||.

ಕವಿ ಲಕ್ಷ್ಮೀಶನು (೧೭೦೦) ಪ್ರಬಂಧದ ಲಕ್ಷಣವನ್ನು ಈ ರೀತಿ ವಿವರಿಸಿ ಕಾವ್ಯವನ್ನು ಓದುವಾಗ ಈ ವಿಷಯಗಳನ್ನು ಗಮನಿಸಬೇಕೆಂದು ಸೂಚನೆಯಿತ್ತಿದ್ದಾನೆ.

" ಚತುರ ಪದಗತಿಯ ಸರಸಧ್ವನಿಯ ವರ್ಣ ಶೋ
ಭಿತದಲಂಕಾರದ ಸುಲಕ್ಷಣದ ಲಾಲಿತ
ಶೃತಿರಂಜನದ ವಿಶೇಷಾರ್ಥ ಸಂಚಿತದ ವಿಸ್ತಾರದಿಂ ಪೊಸತೆನಿಸುವ
ನುತ ಸತ್ಕವಿ ಪ್ರೌಢತರ ಸುಪ್ರಬಂಧದಂತೆ "

ಹೀಗೆ ಗಮಕದ ರೂಪರೇಖೆಗಳು ಕ್ರಮೇಣ ಬೆಳೆದು ಬಂದಿವೆ.

**ಗಮಕ ಮತ್ತು ಸಂಗೀತ**—ಕಾವ್ಯವಾಚನವು ಮೋಹನದ ತನಿರಸವಾಗಿ, ಕರ್ಣಾಮೃತವಾಗಿ, ತನುವನ್ನು ಹೊಕ್ಕು ಮನಸ್ಸನ್ನು ಹಿಂಡಬೇಕಾದರೆ ಅದಕ್ಕೆ ಸಂಗೀತದ ಹಿನ್ನೆಲೆ ಬೇಕು. ಸಂಗೀತದ ಲಕ್ಷಣವೆಂದರೆ ಮೂರು ಸ್ಥಾಯಿಗಳಲ್ಲಿ ಸಂಚಾರ ಮಾಡುವ ಶಾರೀರ, ರಮಣೀಯಕ ರಾಗಭಾವಗಳುಳ್ಳ ಕಂಪಿತ, ಮೂರ್ಛನೆ ಇತ್ಯಾದಿ. ಯಾವ ರಸಕ್ಕೆ ಯಾವ ರಾಗ ಅಥವಾ ರಾಗಗಳು ಉಚಿತ ಎಂಬುದನ್ನು ತಿಳಿದು ಸಾಹಿತ್ಯದ ರಸವನ್ನೂ ರಾಗರಸವನ್ನೂ ಒಂದುಗೂಡಿಸಿ, ಸಾಹಿತ್ಯದ ಸೊಬಗನ್ನು ತೋರಿಸಿಕೊಡಬೇಕು. ರಸಕ್ಕೆ ಹೊಂದದ ಯಾವುದೋ ರಾಗದಿಂದ ವಾಚಿಸಬಾರದು. ಗಮಕದಲ್ಲಿ ಸಂಗೀತವು ಪ್ರಧಾನವಲ್ಲದಿದ್ದರೂ ಸಾಹಿತ್ಯರಸ ಭಾವಾರ್ಥಗಳ ಪ್ರಕಾಶಕ್ಕೆ ಸಹಾಯಕವಾಗಿದೆ. ಗಮಕಿಗೆ ೨೦–೩೦ ರಾಗಗಳಾದರೂ ಚೆನ್ನಾಗಿ ಪರಿಚಯ ವಿರಬೇಕು. ಯಾವ ರಾಗಕ್ಕೆ ಯಾವ ರಸ ಎಂಬುದನ್ನು ಸಂಗೀತಶಾಸ್ತ್ರ ಗ್ರಂಥಗಳಿಂದ

ತಿಳಿಯಬಹುದು. ಶೃಂಗಾರಕ್ಕೆ ಭೂಪಾಳಿ, ಯಮನ್ ಕಲ್ಯಾಣ್, ಫರಜ್, ಕಾಂಭೋಧಿ, ಖಮಾಚ್, ನವರೋಜ್, ಸುರಟಿ, ಕಾಪಿ, ಭೈರವಿ, ಶಂಕರಾಭರಣ ; ವೀರರಸಕ್ಕೆ ಬಿಲಹರಿ, ಅಠಾಣ, ಕೇದಾರಗೌಳ, ಸೌರಾಷ್ಟ್ರ, ಪಂತುವರಾಳಿ ; ಕರುಣರಸಕ್ಕೆ ಆಹಿರಿ, ಗೌಳೀಪಂತು, ಶಹಾನ, ದೇವಗಾಂಧಾರಿ ; ಭಯಾನಕಕ್ಕೆ ಮಾಳವ, ಪಂತುವರಾಳಿ, ಭೈರವಿ, ರೇಗುಪ್ತಿ ; ಅದ್ಭುತಕ್ಕೆ ಬೇಹಾಗ್, ಭೀಭತ್ಸಕ್ಕೆ ವರಾಳಿ, ಶಾಂತಕ್ಕೆ ಸಾಮ, ಆನಂದಕ್ಕೆ ಬಿಲಹರಿ, ಮೋಹನ, ಭಕ್ತಿಗೆ ಕೇದಾರಗೌಳ, ತೋಡಿ, ಭೈರವಿ, ವಾತ್ಸಲ್ಯಕ್ಕೆ ನೀಲಾಂಬರಿ, ಕಾಂಬೋಧಿ, ವ್ಯಥೆಗೆ ಯದುಕುಲ ಕಾಂಬೋಧಿ, ಅಹಂಕಾರಕ್ಕೆ ದೇವಗಾಂಧಾರಿ, ಜಂಬಕ್ಕೆ ಸುರಟಿ, ಬೇಡಿಕೆ ಮತ್ತು ದೈನ್ಯಕ್ಕೆ ರೀತಿಗೌಳ, ಪೂರ್ವಿಕಲ್ಯಾಣಿ, ಅಸೂಯೆಗೆ ಕಲ್ಯಾಣಿ ಇತ್ಯಾದಿ. ಇದಲ್ಲದೆ ಯಾವ ರಾಗಕ್ಕೆ ಯಾವ ರಾಗವು ಸೂಕ್ತ, ರಸಕ್ಕೆ ಅನುಗುಣವಾದ ವೃತ್ತವನ್ನು ಕೂಡ ಶಾಸ್ತ್ರಜ್ಞರು ಹೇಳಿದ್ದಾರೆ.

ಗಮಕಿಯು ಗಮನಿಸಬೇಕಾದ ಮತ್ತೊಂದು ಅಂಶವಿದೆ. ಪ್ರತಿಯೊಬ್ಬ ಕವಿಯೂ ತನಗೆ ಕರಗತವಾದ ನಡೆಯಲ್ಲಿ ಕಾವ್ಯವನ್ನು ರಚಿಸಿದ್ದಾನೆ. ಒಂದೊಂದು ಕಾವ್ಯವು ಒಂದೊಂದು ಬಗೆಯ ನಡೆಯಲ್ಲಿ ಓಡುತ್ತದೆ. ಕಾವ್ಯವನ್ನು ವಾಚಿಸುವಾಗ ಅದು ಯಾವ ಗತಿಯಲ್ಲಿ ನಡೆದಿದೆ, ಅದರ ಸ್ವರಲಾಸ್ಯವೇನು ಎಂಬುದನ್ನು ಗಮನಿಸಿ ಅದನ್ನು ಮೆರಸಬೇಕು. ಏಕೆಂದರೆ ಗಮಕಕಲೆಯು ಕಾವ್ಯರಸ, ಗಾನರಸ ಮತ್ತು ಲಯಬದ್ಧವಾದ ನಡೆಯ ಮಧುರಸಂಗಮ. ವಾಚನವು ಹೇಗಿರಬೇಕೆಂಬುದು ಈ ಪದ್ಯವು ನಿರೂಪಿಸುತ್ತದೆ.

ಎಡರದೆ ತಡೆಯದೆ ತಲೆಯಂ
ಕೊಡಹದೆ ರಸಮಂ ।
ಕೆಡಿಸದೆ ಸರ್ವರ ಚಿತ್ತ
ಕ್ಕೊಡಬಡಲೋದುವನೆ ಗಮಕಿ ಕನ್ನಡ ಜಾಣಾ ॥ (ನೀತಿಸಾರ)

ಕಾವ್ಯಾನಂದದ ಕಲ್ಪನಾವಿಲಾಸ, ಮಾತಿನ ಪಲುಕು ಕುಲುಕುಗಳು, ಏರಿಳಿತಗಳು, ಶಬ್ದಗಳ ನಿನಾದ, ಸಂಗೀತದ ನಾದ, ನಡೆ, ಗತಿ ಎಲ್ಲವೂ ಸರಿಸಮನಾಗಿ ಸೇರಿದರೆ ಗಮಕಕಲೆಯು ಕಾಂತಿಯುತವಾಗಿ ಹೊಳೆದು ಚಿತ್ತಾಕರ್ಷಕವಾದ ಕಾವ್ಯರಾಶಿ ಉಳಿಯುತ್ತದೆ.

ಚೆಲುವಿರೆ ಬರೆವರ ಕೈಯೋಳ್
ಇಂಪಿರೆ ಒರೆವರ ಬಾಯೋಳ್
ಸವಿಯಿರೆ ಕೇಳ್ವರ ಕಿವಿಯೋಳ್
ಬಾಳ್ವುದು ಭಾಷೆಯು ನಾಡೋಳ್ (ಕೆ.ಟಿ.ಆರ್. ಅಯ್ಯಂಗಾರ್)

**ಗವಾಂಕಕ್ರಿಯಾ** — ಇದು ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೫೩ನೆಯ ಮೇಳದ ಹೆಸರು. ಇದು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ದ ಪ ಮ ಗ ಮ ರೀ ಸ

**ಗಮಕಪ್ರಿಯ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ

ಅ: ಸ ದ ಪ ಮ ಗ ರಿ ಸ

**ಗಮನಸರಸೀರುಹ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ̣ ಸ

**ಗಮಕಸ್ವರ**—ಗಮಕ ಸಹಿತವಾದ ಸ್ವರ.

**ಗಮಕಸಾಮಂತ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಗಮನಕ್ರಿಯ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ̇

ಅ: ಸ ನಿ ದ ಪ ಮ ಗ ಮ ರಿ ಸ

**ಗಮನಭಾಸ್ಕರ**—ಈ ರಾಗವು ೨೯ನೆಯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ಪ ನಿ ಸ

ಅ: ಸ ದ ಪ ಮ ಗ ಸ

**ಗಮನತರಂಗಿಣಿ**—ಈ ರಾಗವು ೨೦ನೆಯ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ರಿ ಮ ನಿ ದ ನಿ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಗಮನನಿರ್ಮಲ**—ಈ ರಾಗವು ೫೩ನೆಯ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ಮ ರಿ ಸ

**ಗಮನಪ್ರಿಯ**—೫೩ನೆ ಮೇಳಕರ್ತ ಗಮನಶ್ರಮದ ಮತ್ತೊಂದು ಹೆಸರು.

**ಗಮನಶ್ರಮ**—ಇದು ೫೩ನೆಯ ಮೇಳಕರ್ತರಾಗ. ೯ನೆಯ ಚಕ್ರವಾದ ಬ್ರಹ್ಮಚಕ್ರದ ೫ನೆ ಮೇಳ. ರಾಗಾಂಗರಾಗ. ಸರ್ವಸ್ವರಗಮಕವರಿಕ ತ್ರಿಸ್ಥಾಯಿರಾಗ ಮತ್ತು ಉಭಯ ಸಂಪೂರ್ಣರಾಗ. ಶುದ್ಧರಿಷಭ, ಅಂತರಗಾಂಧಾರ, ಪ್ರತಿಮಧ್ಯಮ, ಚತುಶ್ರುತಿಧೈವತ ಮತ್ತು ಕಾಕಲಿನಿಷಾದಗಳು ಈ ರಾಗದ ಸ್ವರಸ್ಥಾನಗಳು. ಷಡ್ಜ ಸ್ವರವು ಗ್ರಹ, ಅಂಶ ಮತ್ತು ನ್ಯಾಸಸ್ವರ. ಗಾಂಧಾರ, ಧೈವತಗಳು, ಗಾಂಧಾರ, ನಿಷಾದಗಳು, ಮಧ್ಯಮ, ನಿಷಾದಗಳು ಪರಸ್ಪರ ವಾದಿ ಸಂವಾದಿಗಳು. ಭಕ್ತಿರಸ ಪ್ರಧಾನವಾದ ಸಾಯಂಕಾಲದ ರಾಗ. ಈ ರಾಗಕ್ಕೆ ಗಮನಾಶ್ರಯ ಎಂಬ ಮತ್ತೊಂದು ಹೆಸರಿದೆ. ಬಿಡಾರಂ ಕೃಷ್ಣಪ್ಪನವರು ' ಪಾರ್ವತೀ ಶಮಾಂಪಾಹಿ ' ಎಂಬ ಕೃತಿಯನ್ನು ಈ ರಾಗದಲ್ಲಿ ರಚಿಸಿದ್ದಾರೆ.

**ಗಮನ ಲಲಿತ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಸ ಗ ಮ ಪ ದ ನಿ ದ ಸ

ಅ: ಸ ದ ಮ ಗ ರಿ ಸ

**ಗತಿ ಭೇದಗಳು**—ಭರತನಾಟ್ಯದ ಪಾದಭೇದಗಳಲ್ಲಿ ಹತ್ತು ವಿಧವಾದ ಗತಿಭೇವಗಳಿವೆ. ಅವು ಹಂಸೀಗತಿ, ಮಯೂರೀ, ಮೃಗೀ, ಗಜಗತಿ, ತುರಂಗಿಣೀಗತಿ, ಸಿಂಹೀ, ಭುಜಂಗೀ, ಮಂಡೂಕೀ, ವೀರ ಮತ್ತು ಮಾನವೀಗತಿ.

**ಗತಿ**—ಗತಿ ಎಂದರೆ ಒಂದು ನಡೆ, ಒಂದು ಧಾಟಿ. ಇದನ್ನು ತಿಳಿಯಲು ಒಂದು ಉದಾಹರಣೆ ಸಾಕು.

ತ ಅ ಅ ನಂ ತೋಂ

ತ ಅ ಅ ಅ ಅ ನಂ

ತೋಂ ತ ಅ ಅ ನಂ

ಎಂಬ ಅಕ್ಷರಗಳನ್ನು ತಾನದಲ್ಲಿ ಪ್ರತಿ ಶುದ್ಧವಾಗಿ ಹಾಡುತ್ತಾರೆ. ಇದಕ್ಕೊಂದು ಗತಿಯುಂಟು. ಗತಿ ಎಂದರೆ ಓಟ, ಕಾಲ ಎಂದು ಸಾಮಾನ್ಯ ಅರ್ಥ. ಒಂದು ಕೃತಿಯನ್ನು ದ್ರುತಗತಿಯಲ್ಲಿ ಅಥವಾ ಮಂದಗತಿಯಲ್ಲಿ ಹಾಡಿದರು ಎಂದು ಹೇಳುವುದು ವಾಡಿಕೆ. ಸಂಗೀತವು ದ್ರುತಲಯ ಅಥವಾ ಚೌಕಲಯದಲ್ಲಿತ್ತು ಎಂದು ಹೇಳಿದರೆ ಸಮರ್ಪಕವಾಗಿರುತ್ತದೆ.

ಗತಿ ಎಂದರೆ ತಾಳಾಕ್ಷರಗಳಲ್ಲಿ ಅಡಕವಾಗಿರುವ ಓಟವನ್ನು ಸೂಚಿಸುತ್ತದೆ. ಸಂಗೀತ ರಚನೆಯ ಸಾಹಿತ್ಯವು ಆದರ ಗತಿಗೆ ಹೊಂದಿಕೊಂಡಿರುತ್ತದೆ ತಾಳದಲ್ಲಿ ಅದರ ಜಾತಿಗೆ ಅನುಸಾರವಾಗಿ ಅಕ್ಷರ ಕಾಲಗಳಿರುತ್ತವೆ. ಪ್ರತಿ ಅಕ್ಷರ ಕಾಲವು ಅವಕ್ಕೆ ತಕ್ಕ ವಿಭಾಗಗಳನ್ನು ಹೊಂದಿರುತ್ತದೆ. ಪ್ರತಿ ಅಕ್ಷರ ಕಾಲದ ಅಂಗಗಳು ತಾಳದ ಸ್ವರೂಪವನ್ನು ನಿರ್ಧರಿಸುತ್ತದೆ. ತಾಳದಲ್ಲಿ ತಿಶ್ರ (೩), ಚತುರಶ್ರ (೪), ಖಂಡ (೫), ಮಿಶ್ರ (೭), ಸಂಕೀರ್ಣ (೯)—ಎಂಬ ಐದು ಬಗೆಯ ಗತಿಗಳಿವೆ ಉದಾಹರಣೆಗೆ

ಆದಿತಾಳ. ಇವರಲ್ಲಿ ಮೇಲ್ಕಂಡ ಐದು ಬಗೆಯ ಗತಿಗಳುಳ್ಳ ಆದಿತಾಳವನ್ನು ನಾವು ಭಾವಿಸಬಹುದು. ಬರಿಯ ಆದಿತಾಳವೆಂದರೆ ಅದು ಚತುರಶ್ರಗತಿ ಆದಿತಾಳವೆಂದರ್ಥ. ಇದು ಬಹಳ ಸ್ವಾಭಾವಿಕವಾದ ತಾಳವಾದುದರಿಂದ ಕೃತಿಗಳು ಬಹುವಾಗಿ ಈ ತಾಳದಲ್ಲಿವೆ. ಒಂದು ಕೃತಿ ಅಥವಾ ರಚನೆಯು ಖಂಡಗತಿಯಲ್ಲಿದೆ ಎಂದರೆ ಅದರ ಪ್ರತಿ ತಾಳಾಕ್ಷರವು ಐದು ಭಾಗಗಳನ್ನು ಒಳಗೊಂಡಿದೆ ಎಂದರ್ಥ. ಒಂದು ರಚನೆಯು ತಿಶ್ರಗತಿ ಆದಿತಾಳದಲ್ಲಿದ್ದರೆ ಪ್ರತಿ ಆವರ್ತಕ್ಕೆ $8 \times 3 = 24$ ಮಾತ್ರಾ ಕಾಲವೆಂದರ್ಥ. ಮೇಲ್ಕಂಡ ಗತಿಭೇದಗಳಿಂದ ೩೫ ಸೂಳಾದಿ ತಾಳಗಳು ೧೭೫ ಬಗೆಯ ತಾಳಗಳಾಗುತ್ತವೆ.

**ಗದ್ಯ**—ಸಂಗೀತ ರಚನೆಯಲ್ಲಿ ಸಾಹಿತ್ಯವು ಗದ್ಯ ಅಥವಾ ಪದ್ಯವಾಗಿರಬಹುದು ಅಥವಾ ಗದ್ಯ ಪದ್ಯ ಸಾಹಿತ್ಯವಾಗಿರಬಹುದು.

**ಗದ್ಯಪದ್ಯಸಾಹಿತ್ಯ**—ಸಂಗೀತ ರಚನೆಯ ಸಾಹಿತ್ಯವು ಭಾಗಶಃ ಪದ್ಯರೂಪವಾಗಿಯೂ, ಭಾಗಶಃ ಗದ್ಯರೂಪವಾಗಿಯೂ ಇದ್ದರೆ ಅದು ಗದ್ಯ ಪದ್ಯ ಸಾಹಿತ್ಯವಾಗುತ್ತದೆ.

**ಗಣ**—ಅಲಂಕಾರ ಶಾಸ್ತ್ರದಲ್ಲಿ ಎಂಟು ಮುಖ್ಯಗಣಗಳು ಮತ್ತು ಕೆಲವು ಉಪಗಣಗಳಿವೆ. ಎಂಟು ಮುಖ್ಯಗಣಗಳು ಈ ರೀತಿ ಇವೆ.

ಮ ಗಣ — ಮೂರು ಗುರು
ಭ ಗಣ — ಒಂದು ಗುರು ಎರಡು ಲಘು
ಜ ಗಣ — ಒಂದು ಲಘು—ಗುರು—ಲಘು
ಸ ಗಣ — ಎರಡು ಲಘು—ಲಘು
ನ ಗಣ — ಮೂರು ಲಘು
ಯ ಗಣ — ಒಂದು ಲಘು ಎರಡು ಗುರು
ರ ಗಣ — ಒಂದು ಗುರು—ಲಘು—ಗುರು
ತ ಗಣ — ಎರಡು ಗುರು—ಒಂದು ಲಘು

ಗುರು ಎಂದರೆ ದೀರ್ಘ, ಲಘು ಎಂದರೆ ಹ್ರಸ್ವ.
ಪ್ರಾಚೀನವಾದ ೧೦೮ ತಾಳಗಳನ್ನು ಕುರಿತು ಹೇಳುವ ಶ್ಲೋಕಗಳಲ್ಲಿ ಆಯಾ ಗಣದ ಲಕ್ಷಣವನ್ನೂ ಹೆಸರನ್ನೂ ಹೇಳಿದೆ.

**ಗಣಿತವಿನೋದಿನಿ** –ಈ ರಾಗವು ೧೭ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ. ಇದಕ್ಕೆ ಗುಣಿತವಿನೋದಿನಿ ಎಂಬ ಹೆಸರಿದೆ.

ಆ: ಸ ಗ ಮ ಪ ನಿ ಸ
ಅ: ಸ ನಿ ದ ಪ ಮ ಗ ರಿ ಸ

**ಗಣೇಶಾಷ್ಟಪದಿ**—ಇದು ಗಣೇಶನನ್ನು ಕುರಿತು ಸಂಸ್ಕೃತ ಭಾಷೆಯಲ್ಲಿರುವ ರಚನೆ ಇದು ಜಯದೇವನ ಅಷ್ಟಪದಿಯ ಮಾದರಿಯಲ್ಲಿದೆ.

**ಗಣೇಶಯ್ಯಂಗಾರು**—ಇವರು ತ್ಯಾಗರಾಜರ ಒಬ್ಬ ಶಿಷ್ಯರು.

**ಗರಲಾರಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಗರಿಗದ್ಯ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ನಿ̣ ಸ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ̣ ಸ

**ಗರುಡಪ್ರಿಯ**—ಈ ರಾಗವು ೪೫ನೆಯ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ

ಆ: ಸ ಮ ಪ ದ ನಿ ಸ̇

ಅ: ಸ̇ ರಿ ಸ̇ ನಿ ದ ಪ ಮ ರಿ ಗ ರಿ ಸ

**ಗರುಡಭ್ರಮರಿ**—ಇದು ಭರತನಾಟ್ಯದ ಪಾದಭೇದಗಳಲ್ಲಿ ಒಂದು ಭ್ರಮರಿ. ಒಂದು ಮೊಣಕಾಲನ್ನು ನೆಲದ ಮೇಲೆ ಊರಿ, ಇನ್ನೊಂದು ಕಾಲನ್ನು ಅದಕ್ಕೆ ಅಡ್ಡಲಾಗಿ ಚಾಚಿ ಕೈಗಳೆರಡನ್ನೂ ಚಾಚಿ ಸುತ್ತು ತಿರುಗುವುದಕ್ಕೆ ಗರುಡಭ್ರಮರಿ ಎಂದು ಹೆಸರು.

**ಗರುಡಧ್ವನಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರತಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಗ ರಿ ಸ

ಉಪಾಂಗ ಮತ್ತು ಗಮಕವರಿಕರಕ್ತಿರಾಗ. ನಿಷಾದ ಮಧ್ಯಮಗಳು ಅವರೋಹಣದಲ್ಲಿ ವರ್ಜ್ಯ. ರಿಷಭ, ಗಾಂಧಾರ ಮತ್ತು ಧೈವತವು ರಾಗಛಾಯಾಸ್ವರಗಳು. ಸಾರ್ವಕಾಲಿಕ ರಾಗ. ತ್ಯಾಗರಾಜರ ತತ್ವಮೆರುಗತರಮಾ ಮತ್ತು 'ಆನಂದಸಾಗರಮಿಾದನಿ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು. ಪಲ್ಲವಿ ಶೇಷಯ್ಯರ್‌ರವರ ನೀತೊಜೆಪ್ಪಗ ಮತ್ತು ಗರ್ಭಪುರಿಯುವರ ಏಮಿನೇರಮು ಎಂಬುವು ಈ ರಾಗದ ಇತರ ಕೃತಿಗಳು. ತ್ಯಾಗರಾಜರ ಈ ಕೃತಿಗಳಲ್ಲಿ ವೇದದ ತತ್ವಸಾರವು ವ್ಯಕ್ತವಾಗಿರುವುದರಿಂದ ಈ ರಾಗಕ್ಕೆ ಗರುಡಧ್ವನಿ ಎಂಬ ಹೆಸರಿಟ್ಟಿದ್ದಾರೆ.

**ಗರುಡವರ್ಧನಿ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ಮ ಪ ದ ನಿ ಸ̇

ಅ: ಸ̇ ನಿ ಪ ಮ ರಿ ಸ

**ಗರುಡವರಾಳಿ** – ಈ ರಾಗವು ೫೯ನೆಯ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗರುಡಹಸ್ತ** —ಇದು ಭರತನಾಟ್ಯದ ಸಂಯುತ ಹಸ್ತಗಳಲ್ಲಿ ಒಂದು ಬಗೆಯ ಹಸ್ತಮುದ್ರೆ. ಎರಡು ಅರ್ಧಚಂದ್ರ ಹಸ್ತಗಳನ್ನು ಒಳಮುಖವಾಗಿ ತಿರುಗಿಸಿ ಹೆಬ್ಬೆರಳುಗಳನ್ನು ಸೇರಿಸಿ ಹಿಡಿಯುವುದು ಗರುಡ ಹಸ್ತವಾಗುತ್ತದೆ. ಗರುಡನನ್ನು ಸೂಚಿಸುವ ಅರ್ಥದಲ್ಲಿ ಈ ಹಸ್ತವಿನಿಯೋಗವಾಗುವುದು

**ಗವಾಂಭೋದಿ**—ಇದು ೪೩ನೆ ಮೇಳಕರ್ತರಾಗ. ರಾಗಾಂಗರಾಗ. ಷಡ್ಜ, ಶುದ್ಧ ರಿಷಭ ಸಾಧಾರಣ ಗಾಂಧಾರ, ಪ್ರತಿ ಮಧ್ಯಮ, ಪಂಚಮ, ಶುದ್ಧಧೈವತ ಮತ್ತು ಶುದ್ಧ ನಿಷಾದಗಳು ಸ್ವರಸ್ಥಾನಗಳು ರಿಷಭ ಧೈವತಗಳು ಮತ್ತು ಗಾಂಧಾರ ಧೈವತಗಳು ಪರಸ್ಪರ ವಾದಿಸಂವಾದಿಗಳು. ಗಾಂಧಾರ, ಮಧ್ಯಮ, ಧೈವತಗಳು ರಾಗದ ಛಾಯಾ ಮತ್ತು ಜೀವಸ್ವರಗಳು. ಷಡ್ಜಸ್ವರವು ಗ್ರಹ, ಅಂಶ ಮತ್ತು ನ್ಯಾಸಸ್ವರ. ಸಾರ್ವಕಾಲಿಕ ರಾಗ ಮತ್ತು ಶೋಕರಸ ಪ್ರಧಾನವಾದ ರಾಗ.

**ಗಾಡಿಚಕ್ಕೆ** – ವೀಣೆಯ ದಂಡಿಯ ಮೇಲ್ಭಾಗದಲ್ಲಿ ಉದ್ದಕ್ಕೂ ಅಳವಡಿಸಿರುವ ಮರದ ಚಕ್ಕೆ. ಇವುಗಳ ಮೇಲೆ ಮೇಣವನ್ನು ಕೂರಿಸಿ ಮೆಟ್ಟಲುಗಳನ್ನು ನೆಡುತ್ತಾರೆ.

**ಗಾತ್ರದಂಡಿ**—ವೀಣೆಯಲ್ಲಿ ನುಡಿಸುವ ನಂ, ತೋಂ ಇತ್ಯಾದಿ ತಾನವನ್ನು ಹಾಡುವುದಕ್ಕೆ ಗಾತ್ರದಂಡಿತಾನವೆಂದು ಹೆಸರು.

**ಗಾತ್ರವೀಣಾ**—ನಾರದಶಿಕ್ಷಾ ಎಂಬ ಗ್ರಂಥದಲ್ಲಿ ಹೇಳಿರುವಂತೆ ಮಾನವನ ಕಂಠಶ್ರೀಗೆ ಗಾತ್ರವೀಣಾ ಎಂದು ಹೆಸರು

**ಗಾಥ**—ಗೀತದಂತೆ ಹಾಡಲ್ಪಡುವ ಒಂದು ಹಾಡು.

**ಗಾಥಿಕ**—ಇದು ವೇದದ ಸಂಗೀತಕ್ಕೆ ಸಂಬಂಧಿಸಿದೆ.

**ಗಾನ**—ಇದು ಗಾಯನ, ತಂತೀವಾದ್ಯ, ವೀಣೆ, ವೇಣು ಇವುಗಳ ಸಂಗೀತ.

**ಗಾನಕಾಲ**—ಗಾನ ಮಾಡಲು ಸೂಕ್ತವಾದ ವೇಳೆ. ಪ್ರತಿಯೊಂದು ರಾಗಕ್ಕೂ ಗಾನಕಾಲವನ್ನು ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ.

**ಗಾನಕಾಲಚಂದ್ರಿಕ** –ಅರಿಪಿರಾಲ ಸತ್ಯನಾರಾಯಣಮೂರ್ತಿ ವಿರಚಿತವಾದ (೧೯೩೩) ಒಂದು ಸಂಗೀತಶಾಸ್ತ್ರಗ್ರಂಥ.

**ಗಾನಕಲಾಬೋಧಿನಿ** –ಶ್ರೀಮತಿ ಮತ್ತು ಶ್ರೀ ಎನ್. ಸಿ. ಪಾರ್ಥಸಾರಥಿ ವಿರಚಿತ(೧೯೫೧)ವಾದ ಒಂದು ತೆಲುಗಿನ ಸಂಗೀತ ಪಠ್ಯಪುಸ್ತಕ.

**ಗಾನಕಥಾ**—ಸಂಗೀತದ ಮೂಲಕ ನಿರೂಪಿಸಲ್ಪಡುವ ಕಥೆ.

**ಗಾನಕ್ರಮ**—ಇದು ಸಂಗೀತರಚನೆಯ ವಿವಿಧ ಭಾಗಗಳನ್ನು ಹಾಡುವ ಪದ್ಧತಿ. ಪ್ರಾರಂಭದಿಂದ ಕೊನೆಯವರೆಗೆ ಪುನರುಕ್ತಿಯಿಲ್ಲದೆ ಗೀತವನ್ನು ಹಾಡು

ತ್ತಾರೆ. ಕೃತಿಯಲ್ಲಿ ಪ್ರತಿಸಂಗತಿಯನ್ನು ಎರಡು ಸಲ ಹಾಡಲಾಗುವುದು. ಪಲ್ಲವಿಯ ನಂತರ ಅನುಪಲ್ಲವಿಯನ್ನೂ, ತರುವಾಯ ಚರಣವನ್ನೂ ಹಾಡುತ್ತಾರೆ. ಅದರಲ್ಲಿ ಸ್ವರಸಾಹಿತ್ಯವಿದ್ದರೆ, ಅನುಪಲ್ಲವಿಯ ನಂತರ ಚಿಟ್ಟೆಸ್ವರದ ಭಾಗವನ್ನೂ, ಚಿಟ್ಟೆಸ್ವರದ ಸಾಹಿತ್ಯವನ್ನೂ ಚರಣದ ನಂತರ ಹಾಡುವರು. ಇದೇ ಗಾನಕ್ರಮ.

**ಗಾನಗೀತ**—ಸಂಗೀತ ಕಲೆಗೆ ಸೇರಿದ ರಚನೆಗಳಿಗೆ ಗಾನಗೀತಗಳೆಂದು ಹೆಸರು. ಇವನ್ನು ಪ್ರಸಿದ್ಧ ವಾಗ್ಗೇಯಕಾರರು ರಚಿಸಿದ್ದಾರೆ. ಜನಪದಗೀತೆಗಳು ಅಜ್ಞಾತ ರಚನಕಾರರಿಂದ ರಚಿಸಲ್ಪಟ್ಟು ಅವು ಅನಾದಿ ಸಂಪ್ರದಾಯಕ್ಕೆ ಸೇರಿವೆ

**ಗಾನಚಕ್ರವರ್ತಿ**—ತ್ಯಾಗರಾಜರ ಒಬ್ಬ ಪ್ರಮುಖ ಶಿಷ್ಯರೂ, ಪ್ರಸಿದ್ಧ ಗಾಯಕರೂ, ವೈಣಿಕರೂ ವಾಗ್ಗೇಯಕಾರರೂ ಆಗಿದ್ದ ವೀಣೆ ಕುಪ್ಪಯ್ಯರ್‌ರಿಗೆ ಈ ಬಿರುದು ಇತ್ತು.

**ಗಾನತತ್ತ್ವಾಮೃತ ಬೋಧಿನಿ**—ವೀಣಾಬಸವಪ್ಪನವರು ಬರೆದಿರುವ ಕನ್ನಡದ ಒಂದು ಸಂಗೀತ ಶಾಸ್ತ್ರಗ್ರಂಥ.

**ಗಾನಪ್ರಿಯ**—(೧) ಶಿವನ ಒಂದು ವಿಶೇಷ ನಾಮ.

(೨) ಇದು ೧೯ನೆ ಮೇಳಕರ್ತ ಝುಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

**ಗಾನಬೋಧಿನಿ**—ಸಿ. ತಿರುಮಲಯ್ಯನಾಯ್ಡು ವಿರಚಿತ (೧೯೦೬) ವಾದ ತೆಲುಗಿನ ಒಂದು ಸಂಗೀತ ಶಾಸ್ತ್ರಗ್ರಂಥ.

**ಗಾನಭಾಸ್ಕರ**—ಕೆ. ವಿ. ಶ್ರೀನಿವಾಸ ಅಯ್ಯಂಗಾರ್ ರಚಿಸಿರುವ ಪಾಂಡಿತ್ಯ ಪೂರ್ಣವಾದ ತೆಲುಗಿನ ಒಂದು ಸಂಗೀತ ಶಾಸ್ತ್ರಗ್ರಂಥ (೧೯೩೪) ಮತ್ತು ಪಠ್ಯ ಪುಸ್ತಕ.

**ಗಾನಮಯೂರಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ಮ ಗ ದ ನಿ ಸ

ಅ: ಸ ನಿ ದ ಮ ಪ ಮ ಗ ರಿ ಸ

**ಗಾನಮೂರ್ತಿ**—ಈ ರಾಗವು ೩ನೆಯ ಮೇಳಕರ್ತರಾಗ. ಶುದ್ಧರಿಷಭ, ಶುದ್ಧಗಾಂಧಾರ, ಶುದ್ಧಮಧ್ಯಮ, ಶುದ್ಧಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಗಳು. ಸಂಪೂರ್ಣ ಆರೋಹಣಾವರೋಹಣವಿರುವ ರಾಗ. ಷಡ್ಜಸ್ವರವು ಗ್ರಹಾಂಶನ್ಯಾಸ ದ ನಿ ಸ ರಿ ಗಾ ರಿ ಸ ಎಂಬುದು ರಂಜಕ ಪ್ರಯೋಗ. ವೀರ ಮತ್ತು ಅದ್ಭುತ ರಸ ಪ್ರಧಾನವಾದ ರಕ್ತಿರಾಗ. ಮಧ್ಯಮ, ನಿಷಾದಗಳು ರಾಗ ಛಾಯಾಸ್ವರಗಳು. ತ್ಯಾಗರಾಜರ 'ಗಾನಮೂರ್ತೇ ಶ್ರೀಕೃಷ್ಣ' ಎಂಬುದು ಈ ರಾಗದ ಪ್ರಸಿದ್ಧ ಕೃತಿ.

**ಗಾನಾಮೃತಮು**—ಟಿ. ಎಂ. ವೆಂಕಟೇಶಶಾಸ್ತ್ರಿ ವಿರಚಿತವಾದ (೧೮೯೩) ತೆಲುಗಿನ ಒಂದು ಸಂಗೀತ ಶಾಸ್ತ್ರಗ್ರಂಥ.

**ಗಾನಮಂಜೂಷ**—ವೀಣೆ ಅನಂತಕೃಷ್ಣಯ್ಯರ್ ವಿರಚಿತವಾದ (೧೯೩೪) ತಮಿಳಿನ ಒಂದು ಸಂಗೀತ ಶಾಸ್ತ್ರಗ್ರಂಥ.

**ಗಾನನಾಟಕ**—ಗೇಯನಾಟಕ ಅಥವಾ ಸಂಗೀತರೂಪಕ.

**ಗಾನಾಂಗಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ದ ನಿ ಸ

ಅ: ಸ ದ ನಿ ದ ಮ ಪ ಮ ಗ ರಿ ಸ

**ಗಾನಯೋಗ**—ಸಂಗೀತದ ಮೂಲಕ ಭಗವಂತನ ಸಾಕ್ಷಾತ್ಕಾರ ಪಡೆಯುವುದು ಗಾನಯೋಗ. ತ್ಯಾಗರಾಜರು ಗಾನಯೋಗಿ.

**ಗಾನರಸ ಮತ್ತು ನವರಸ**—ಭಾರತೀಯ ಸೌಂದರ್ಯತತ್ವದಲ್ಲಿ ರಸ ಸಿದ್ಧಾಂತವು ವಿಶಿಷ್ಟವಾದುದು. ಇದನ್ನು ಕುರಿತು ಭರತ ಮತ್ತು ಇತರ ಹಲವು ವಿದ್ವಾಂಸರು ವಿವೇಚಿಸಿದ್ದಾರೆ ರಸವೆಂದರೆ ಸಾಮಾನ್ಯ ಅರ್ಥದಲ್ಲಿ ಸಾರ, ರುಚಿ ಎಂದರ್ಥ 'ವಿಭಾವಾನುಭಾವ ವ್ಯಭಿಚಾರಿ ಸಂಯೋಗಾತ್ ರಸನಿಷ್ಪತ್ತಿಃ'—ವಿಭಾವಗಳು, ಅನುಭಾವಗಳು, ಸಂಚಾರಿ ಭಾವಗಳು ಇವುಗಳ ಸಂಯೋಗದಿಂದ ರಸ ನಿಷ್ಪತ್ತಿಯಾಗುವುದು. ಇದು ಭರತನ ಪ್ರಸಿದ್ಧವಾದ ಸೂತ್ರ ಕವಿಯ ಟಂಕಸಾಲೆಯಲ್ಲಿ ನಿರ್ಮಾಣವಾದ ಪದಗಳು ಮತ್ತು ಮಾತುಗಳಿಂದ ಸಾಹಿತ್ಯದಲ್ಲಿ ರಸ ಉಂಟಾಗುತ್ತದೆ. ಇಲ್ಲಿ ಶಬ್ದ ಮತ್ತು ಅರ್ಥ ಇವುಗಳ ಸಂಯೋಗ ವಿಶೇಷದಿಂದ ನಮ್ಮಲ್ಲಿ ವಿಶೇಷವಾದ ಭಾವಪ್ರಚೋದನೆಯಾಗಿ ಅನುಭವ ಉಂಟಾಗುತ್ತದೆ. ನಾಟಕ ಮತ್ತು ನಾಟ್ಯದಲ್ಲಿ ಸಂಗೀತ, ಮಾತು ಮತ್ತು ಅಭಿನಯದಿಂದ ರಸೋತ್ಪತ್ತಿಯಾಗುತ್ತದೆ. ಮನಸ್ಸು, ಕಣ್ಣು ಮತ್ತು ಕಿವಿ ಈ ಮೂರರ ಪ್ರತಿಕ್ರಿಯೆಯಿಂದ ರಸಾನುಭವ ಒದಗುತ್ತದೆ. ನೃತ್ಯನಾಟಕದಲ್ಲಿ ಮಾತು, ನಟನೆ, ಸಂಗೀತ ಮತ್ತು ನಾಟ್ಯಗಳಿಂದ ರಸಾನುಭವವಾಗುತ್ತದೆ. ಕೇವಲ ಸಂಗೀತ ಮಾತ್ರದಿಂದಲೇ ರಸಾನುಭವವುಂಟಾಗುವುದು ಈ ಕಲೆಯ ವೈಶಿಷ್ಟ್ಯ. ಸ್ವರಗಳನ್ನು ಜೋಡಿಸಿ ಅವುಗಳ ಸ್ಥಾನಕ್ಕೆ ತಕ್ಕಂತೆ ಹಾಡಿದರೆ ರಾಗ ಹುಟ್ಟಿಕೊಳ್ಳುತ್ತದೆ. ಗಾಯಕನು ರಾಗದ ಭಾವವೇನೆಂದು ತಿಳಿದು ಅದನ್ನು ಮನಸ್ಸಿನಲ್ಲಿ ನಿರ್ಣಯಿಸಿ, ಹೃದಯದಲ್ಲಿ ಅನುಭವಿಸಿ, ಗಂಟಲಲ್ಲಿ ಹೊರಹೊಮ್ಮಿಸಿದಾಗ ಅದಕ್ಕೆ ಒಂದು ವ್ಯಕ್ತಿವೈಶಿಷ್ಟ್ಯದ ವಿಶೇಷವು ಸೇರಿಕೊಂಡು ರಾಗವೇ ಮೂರ್ತಿವತ್ತಾಗಿ ಒಂದು ಸ್ವರೂಪವನ್ನು ಹೊಂದಿ ಮೆರೆಯುತ್ತದೆ. ಆಗ ಅಲ್ಲೊಂದು ರಸವು ತಲೆದೋರುತ್ತದೆ. ಅದರ ಸೌಖ್ಯವು ಕಿವಿಯನ್ನು ಆವರಿಸಿ ಮನಸ್ಸಿಗೆ ಆನಂದವನ್ನು ಉಂಟುಮಾಡುತ್ತದೆ. ಹೀಗೆ ಹಲವು ಬಗೆಯ ರಸಗಳ ಅನುಭವಕ್ಕೆ ದಾರಿಯಾಗುತ್ತದೆ

ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ ಮತ್ತು ಶಾಂತ ರಸಗಳಲ್ಲದೆ ಸಂಗೀತಕ್ಕೆ ವಿಶಾಸಲಾದ ಗಾನರಸವಿದೆ. ಸಂಗೀತವನ್ನು ಕೇಳಿದಾಗ ಉಂಟಾಗುವ ಶುದ್ಧ ಆನಂದವೇ ಗಾನರಸ. ಒಂದು ರಾಗದ ಆಲಾಪನೆ ಯನ್ನು ವಾದ್ಯದಲ್ಲಿ ಕೇಳಿದರೆ ಅದು ಶುದ್ಧ ಸಂಗೀತವಾಗಿದ್ದು ನಮಗೆ ಗಾನರಸಾನುಭವ ಉಂಟಾಗುತ್ತದೆ. ತತ್ಕಾರಣ ಹಿಂದಿನ ಗ್ರಂಥಗಳಲ್ಲಿ ಶಿಶುರ್ವೇತ್ತಿ ಪಶುರ್ವೇತ್ತಿ ಗಾನ ರಸಂಪುಣಿಃ ಎಂದು ಹೇಳಿರುವುದು. ಸುಮಾರು ಸಾವಿರ ವರ್ಷಗಳ ಹಿಂದೆ ರಾಗದ ಆಲಾಪನೆಯ ಸ್ವರೂಪವು ವಿಕಾಸಗೊಂಡಾಗ ಸಂಗೀತ ಕಲೆಯೂ ಬೆಳೆದು ಗಾನರಸ ವೆಂಬ ನೂತನ ಸಿದ್ಧಾಂತಕ್ಕೆ ದಾರಿಯಾಯಿತು. ಭರತನು ನಾಟ್ಯಶಾಸ್ತ್ರದಲ್ಲಿ ಬಳಸಿರುವ ಕಲಾಧ್ವನಿ ಎಬ ಮಾತು ಗಾನರಸವನ್ನು ಸೂಚಿಸುತ್ತದೆ.

**ಗಾನಲಲಿತ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ̇
ಅ: ಸ̇ ನಿ ದ ಪ ಮ ಗ ರಿ ಸ

**ಗಾನಲೋಲ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ̇
ಅ: ಸ̇ ನಿ ಪ ದ ಪ ಮ ಗ ಮ ರಿ ಸ

**ಗಾನವಸಂತ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ̇
ಅ: ಸ̇ ನಿ ದ ಪ ಮ ಗ ರಿ ಸ

**ಗಾನವಾದ್ಯ**—ಸಂಗೀತಕ್ಕಾಗಿ ಬಳಸುವ ವಾದ್ಯ. ವೀಣೆ, ಕೊಳಲು, ಪಿಟೀಲು ಮುಂತಾದುವು ಗಾನವಾದ್ಯಗಳು. ಗಾನಭೇದ ಪ್ರದರ್ಶಿನಿ, ನೋನೋಮಿಟರ್ ಮುಂತಾದುವು ಪ್ರದರ್ಶನ ವಾದ್ಯಗಳು.

**ಗಾನವಾರಿಧಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ದ ನಿ ಸ̇
ಅ: ಸ̇ ದ ನಿ ಪ ಮ ರಿ ಸ

ತ್ಯಾಗರಾಜರ ದಯ ಜೂಚುಟಕಿದಿ ವೇಳರಾ ಎಂಬುದು ಈ ರಾಗದ ಒಂದು ಪ್ರಸಿದ್ಧ ಕೃತಿ.

**ಗಾನವಿದ್ಯಾತರಂಗಿಣಿ**—ಕೆ. ನರಸಿಂಹನ್ ಎಂಬುವರು ರಚಿಸಿರುವ ತೆಲುಗಿನ ಒಂದು ಸಂಗೀತ ಶಾಸ್ತ್ರಗ್ರಂಥ.

**ಗಾನವಿದ್ಯಾಪ್ರಕಾಶಿನಿ**—ಪೆರುಂಗುಲಂ ಶ್ರೀನಿವಾಸಅಯ್ಯಂಗಾರ್ ಎಂಬುವರು ಪ್ರಕಟಿಸುತ್ತಿದ್ದ ತಮಿಳಿನ ಒಂದು ಸಂಗೀತಪತ್ರಿಕೆ.

**ಗಾನವಿದ್ಯಾವಿನೋದಿನಿ**— ವೀಣಾ ಬಸವಪ್ಪ (೧೯೧೫) ವಿರಚಿತ ಕನ್ನಡದ ಒಂದು ಸಂಗೀತ ಶಾಸ್ತ್ರಗ್ರಂಥ

**ಗಾನವಿದ್ಯಾಸಂಜೀವಿನಿ**—ಸಿ. ತಿರುಮಲಯ್ಯನಾಯ್ಡು ಎಂಬುವರು ರಚಿಸಿದ ತೆಲುಗಿನ ಒಂದು ಸಂಗೀತ ಗ್ರಂಥ.

**ಗಾನಸಾಮವರಾಳಿ**—ಈ ರಾಗವು ಅಸಂಪೂರ್ಣ ಮೇಳಪದ್ಧತಿಯಲ್ಲಿ ೩ನೆ ಮೇಳ ಇದು ಸಾಮವರಾಳಿರಾಗ.

ಆ: ಸ ರಿ ಮ ಪ ದ ನಿ ಸಂ

ಅ: ಸಂ ನಿ ದ ಪ ಮ ಗ ರಿ ಸ

ಆಧುನಿಕ ಪದ್ಧತಿಯಂತೆ ೩ನೆ ಮೇಳಕರ್ತ ಗಾನಮೂರ್ತಿ ರಾಗದ ಉಪಾಂಗ ಜನ್ಯರಾಗ. ಸಾರ್ವಕಾಲಿಕರಾಗ. ಬೃಹದೀಶ್ವರೋ ರಕ್ಷತು ಎಂಬ ಮುತ್ತುಸ್ವಾಮಿ ದೀಕ್ಷಿತರ ಕೃತಿಯು ಈ ರಾಗದ ಪ್ರಸಿದ್ಧ ಕೃತಿ.

**ಗಾನಸ್ವಭಾವ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಪ ಸಂ

ಅ: ಸಂ ದ ನಿ ದ ಪ ಮ ಗ ರಿ ಸ

**ಗಾನಸ್ತಂಭ**—ಸಂಗೀತದ ಸ್ತಂಭಗಳಲ್ಲಿ ಶ್ರುತಿಸ್ತಂಭ, ತಾಳಸ್ತಂಭ, ದ್ವಿಗುಣತ್ವ ಮತ್ತು ಅನುರಣನ ಮುಂತಾದುವನ್ನು ತೋರಿಸುವ ಪ್ರದರ್ಶನ ಸ್ತಂಭಗಳಿವೆ.

**ಗಾನಶಾಸ್ತ್ರ ಪ್ರಶ್ನೋತ್ತರಾವಳಿ**—ಅರಿಪಿರಾಲ ಸತ್ಯನಾರಾಯಣ ಮೂರ್ತಿ ವಿರಚಿತವಾದ ಒಂದು ತೆಲುಗು ಸಂಗೀತ ಶಾಸ್ತ್ರಗ್ರಂಥ. ಪ್ರಶ್ನೆಗಳು ಮತ್ತು ಉತ್ತರ ರೂಪದಲ್ಲಿ ಸಂಗೀತಶಾಸ್ತ್ರವನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

**ಗಾನಸಿಂಧು** ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ

ಆ: ಸ ಮ ಗ ಮ ಪ ದ ನಿ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಗಾನೇಂದುಶೇಖರಂ**—ತಚ್ಚೂರು ಶಿಂಗರಾಚಾರ್ಯುಲು ಸಹೋದರರು ಬರೆದಿರುವ ತೆಲುಗಿನ ಒಂದು ಸಂಗೀತ ಶಾಸ್ತ್ರಗ್ರಂಥ. ಇದರಲ್ಲಿ ಲಕ್ಷಣ ಗೀತಗಳು, ಕೆಲವು ಕೃತಿಗಳು ಮತ್ತು ಪಲ್ಲವಿಗಳಿವೆ

**ಗಾಯಕಪಾರಿಜಾತಂ**—ತಚ್ಚೂರು ಶಿಂಗರಾಚಾರ್ಯುಲು ವಿರಚಿತವಾದ ತೆಲುಗು ಸಂಗೀತ ಪಠ್ಯಪುಸ್ತಕಗಳಲ್ಲಿ ಎರಡನೆಯದು (೧೮೭೭). ಇದರಲ್ಲಿ ತಾನವರ್ಣಗಳಿವೆ.

**ಗಾಯಕಪ್ರಿಯ**—ಇದು ೧೩ನೆ ಮೇಳಕರ್ತರಾಗ. ೩ನೆ ಚಕ್ರದ ಮೊದಲನೆ ರಾಗ. ಸಂಪೂರ್ಣರಾಗ. ಶುದ್ಧ ರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಶುದ್ಧಧೈವತ, ಶುದ್ಧನಿಷಾದಗಳು ಈ ರಾಗದ ಸ್ವರಸ್ಥಾನಗಳು. ರಿಷಭ ಧೈವತಗಳು ಪರಸ್ಪರ ವಾದಿಸಂವಾದಿ ಸ್ವರಗಳು.

**ಗಾಯಕಮಂದಿನಿ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ಸ̇

ಅ: ಸ ದ ಪ ಮ ಗ ರಿ ಸ

**ಗಾಯಕರಂಜನಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಸ

**ಗಾಯಕಾಲಾಪಿನಿ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ. ಇದಕ್ಕೆ ಗಾಯಾಲಾಪಿನಿ ಎಂದೂ ಹೆಸರು.

ಆ: ಸ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಸ

**ಗಾಯಕಲೋಚನಂ**—ಇದು ೧೯೦೨ರಲ್ಲಿ ತಚ್ಚೂರು ಶಿಂಗಾರಾಚಾರ್ಯುಲು ರಚಿಸಿ ಪ್ರಕಟಿಸಿದ ತೆಲುಗು ಸಂಗೀತಶಾಸ್ತ್ರ ಪಠ್ಯಪುಸ್ತಕ. ಇದರಲ್ಲಿ ಸಂಗೀತ ಶಾಸ್ತ್ರದ ನಿಯಮಗಳ ವಿವರಣೆಗಳು, ೧೦೦೦ ರಾಗಗಳ ಆರೋಹಣಾವರೋಹಣಗಳು ಮತ್ತು ಅನೇಕ ಅಪರೂಪ ಕೃತಿಗಳ ಸಾಹಿತ್ಯವಿದೆ.

**ಗಾಯಕಸಿದ್ಧಾಂಜನಂ**—ಇದು ತಚ್ಚೂರು ಶಿಂಗರಾಚಾರ್ಯುಲು ವಿರಚಿತ ವಾದ ತೆಲುಗು ಸಂಗೀತಶಾಸ್ತ್ರ ಪಠ್ಯಪುಸ್ತಕಗಳಲ್ಲಿ ಐದನೆಯದು (೧೯೦೫) ಇದು ಎರಡು ಭಾಗಗಳಲ್ಲಿದೆ. ಪ್ರಥಮ ಭಾಗದಲ್ಲಿ ಪ್ರೌಢಮಟ್ಟದ ಲಕ್ಷ್ಯವನ್ನೂ, ಎರಡನೆಯ ಭಾಗದಲ್ಲಿ ಹಲವು ವಾಗ್ಗೇಯಕಾರರ ಜೀವನಚರಿತ್ರೆಯನ್ನೂ ಸಂಕ್ಷೇಪವಾಗಿ ಕೊಡಲಾಗಿದೆ.

**ಗಾರವಸಿಂಹಳಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ ಪ ದ ಪ ಸ̇

ಅ: ಸ̇ ನಿ ಪ ದ ಪ ಮ ಗ ರಿ ಸ

**ಗಾಂಗೇಯ ಭೂಷಣಿ**—ಇದು ೩೩ನೆ ಮೇಳಕರ್ತರಾಗ. ಉಭಯ ಸಂಪೂರ್ಣ ರಾಗಾಂಗರಾಗ. ಷಟ್ಶ್ರುತಿರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಶುದ್ಧಧೈವತ, ಕಾಕಲಿನಿಷಾದಗಳು ಈ ರಾಗದ ಸ್ವರಸ್ಥಾನಗಳು. ಗಾಂಧಾರ ನಿಷಾದ

ಗಳು ಪರಸ್ಪರ ವಾದಿಸಂವಾದಿಗಳು. ಗಾಂಧಾರ ಮಧ್ಯಮ ನಿಷಾದಗಳು ಜೀವಸ್ವರ ಮತ್ತು ನ್ಯಾಸಸ್ವರಗಳು. ಷಡ್ಜಸ್ವರವು ಗ್ರಹಾಂಶನ್ಯಾಸ ಸ್ವರ. ಮಂಗಳಕರವಾದ ಶೃಂಗಾರ ರಸ ಪ್ರಧಾನರಾಗ ಹಾಗೂ ಸಾರ್ವಕಾಲಿಕರಾಗ. ತ್ಯಾಗರಾಜರ ' ಎವ್ವರೇ ರಾಮಯ್ಯ ' ಎಂಬುದು ಈ ರಾಗದ ಪ್ರಸಿದ್ಧ ಕೃತಿ

**ಗಾಂದಾರಂ**—ಪುರಾತನ ತಮಿಳು ಸಂಗೀತದ ಒಂದು ಪಣ್ ಅಥವಾ ರಾಗ. ಇದು ತೇವಾರಂ ಸಂಗೀತದಲ್ಲಿ ಬರುತ್ತದೆ. ಈಗಿನ ನವರೋಜ್ ರಾಗವನ್ನು ಹೋಲುತ್ತದೆ

**ಗಾಂಧಾರಪಂಚಮ**—ತೇವಾರಂ ಹಾಡುಗಳಲ್ಲಿ ಬರುವ ಪುರಾತನ ಸಂಗೀತದ ಒಂದು ರಾಗ. ಇದು ಈಗಿನ ಕೇದಾರಗೌಳ ರಾಗವನ್ನು ಹೋಲುತ್ತದೆ.

**ಗಾಂಧಾರ**—ಇದು ಭಾರತೀಯ ಸಂಗೀತದ ಸಪ್ತಸ್ವರಗಳಲ್ಲಿ ಮೂರನೆಯ ಸ್ವರ ಇದು ಗಾಂಧರ್ವ ಸುಖವನ್ನು ಕೊಡುವುದರಿಂದ ಇದಕ್ಕೆ ಗಾಂಧಾರವೆಂದು ಹೆಸರು. ಆಡು, ಕುರಿಗಳ ಕೂಗು ಗಾಂಧಾರವನ್ನು ಸೂಚಿಸುತ್ತದೆ. ಇದು ಕರುಣರಸವನ್ನು ಸೂಚಿಸುತ್ತದೆ.

ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಇದೊಂದು ಸೂರ್ಯಾಂಶರಾಗ ಎಂದು ಹೇಳಿದೆ.

**ಗಾಂಧಾರಗತಿ**—ಪಾರ್ಶ್ವದೇವನ ಸಂಗೀತಸಮಯಸಾರ ಮತ್ತು ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಹೇಳಿರುವಂತೆ ಇದೊಂದು ಔಡವರಾಗದ ಹೆಸರು.

**ಗಾಂಧಾರಗತಿಕ**—ಇದು ಪುರಾತನ ಶಾಸ್ತ್ರಗ್ರಂಥಗಳಲ್ಲಿ ಉಕ್ತವಾಗಿರುವ ಭಾಷಾಂಗವರ್ಗದ ಒಂದು ಪೂರ್ವ ಪ್ರಸಿದ್ಧರಾಗ.

**ಗಾಂಧಾರಗೌಳ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ

ಆ: ಸ ಮ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಗಾಂಧಾರಗ್ರಾಮ**—ಇದು ಪುರಾತನ ಸಂಗೀತದ ಮೂರು ವಿಧವಾದ ಗ್ರಾಮಗಳಲ್ಲಿ ಒಂದು ಬಗೆ. ಯಾವುದಾದರೊಂದು ಆಧಾರ ಸ್ವರದಿಂದ ಸ್ವರ ಸಪ್ತಕದ ಪೂರ್ತಿಕೆಯು ಗ್ರಾಮವೆನಿಸುತ್ತದೆ. ಭರತನ ನಾಟ್ಯಶಾಸ್ತ್ರಕ್ಕೂ ಹಿಂದೆ ಗಾಂಧಾರ ಗ್ರಾಮವು ಬಳಕೆಯಲ್ಲಿತ್ತು ಇದು ಮಹಾಭಾರತದಲ್ಲಿ ಉಕ್ತವಾಗಿದೆ. ಗ್ರಾಮಗಳಿಂದ ಮೂರ್ಛನಗಳುಂಟಾದುವು. ಒಂದೊಂದು ಗ್ರಾಮವೂ ಏಳು ಬಗೆಯ ಮೂರ್ಛನವನ್ನು ಹೊಂದಿದೆ. ಗಾಂಧಾರದಿಂದ ಏಳು ಸ್ವರಗಳನ್ನು ವಿಸ್ತರಿಸಿಕೊಂಡು ಹೋಗುವುದು ಗಾಂಧಾರಗ್ರಾಮದ ಏಳು ಮೂರ್ಛನಗಳಾಗುತ್ತವೆ.

**ಗಾಂಧಾರಪಂಚಮ**—ಶಾರ್ಙ್ಗದೇವನ ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗಾಂಧಾರ ಪಂಚಮಿ**—ಇದು ಪುರಾತನ ಭಾರತೀಯ ಸಂಗೀತ ಪದ್ಧತಿಯ ಒಂದು ವಿಕೃತ ಜಾತಿ. ಈ ರಾಗವು ಮತಂಗನ 'ಬೃಹದ್ದೇಶಿ'ಯಲ್ಲೂ ಶಾರ್ಙ್ಗದೇವನ 'ಸಂಗೀತ ರತ್ನಾಕರ'ದಲ್ಲೂ ಟಕ್ಕ ಭಾಷಾ ಎಂದು ಉಕ್ತವಾಗಿದೆ.

**ಗಾಂಧಾರವಲ್ಲಿ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗಾಂಧಾರಿ**—(೧) ಪುರಾತನ ಸಂಗೀತದ ಮಧ್ಯಮಗ್ರಾಮದ ಮೂರು ಜಾತಿಗಳಲ್ಲಿ ಒಂದು ಜಾತಿ.

(೨) ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ ಇದು ಸೌವೀರಿಯ ಒಂದು ಭಾಷಾ.

**ಗಾಂಧರ್ವಕಲ್ಪವಲ್ಲಿ** — ೧೯೧೧ರಲ್ಲಿ ಪಿ. ಎಸ್. ರಾಮುಲುಚೆಟ್ಟಿ ಎಂಬುವರು ಪ್ರಕಟಿಸಿದ ತೆಲುಗು ಗ್ರಂಥ. ಇದರಲ್ಲಿ ಕೃತಿಗಳನ್ನು ಸ್ವರಲಿಪಿ ಸಹಿತ ಕೊಡಲಾಗಿದೆ.

**ಗಾಂಧಾರೋದೀಚ್ಯ**—(೧) ಮತಂಗನ 'ಬೃಹದ್ದೇಶೀ' ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

(೨) ಶಾರ್ಙ್ಗದೇವನ 'ಸಂಗೀತರತ್ನಾಕರ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಪುರಾತನ ಭಾರತೀಯ ಸಂಗೀತ ಪದ್ಧತಿಯ ಒಂದು ವಿಕೃತಜಾತಿ.

**ಗಾಂಧರ್ವವೇದ**—ಸಂಗೀತ ಶಾಸ್ತ್ರಕ್ಕೆ ಗಾಂಧರ್ವ ವೇದವೆಂದು ಹೆಸರು. ಆಯುರ್ವೇದ, ಧನುರ್ವೇದ, ಅರ್ಥಶಾಸ್ತ್ರ ಮತ್ತು ಗಾಂಧರ್ವವೇದ ಇವು ನಾಲ್ಕು ಉಪವೇದಗಳು.

ಗಾಂಧರ್ವವೇದ ಎಂಬ ಹೆಸರಿನ ಒಂದು ಸಂಗೀತದ ಗ್ರಂಥವನ್ನು ತಾಂತ್ರಿಕ ವಿದ್ಯೆಯ ಗ್ರಂಥವೊಂದರಲ್ಲಿ ಹೆಸರಿಸಿದೆ ಇದು ೩೬೦೦೦ ಅನುಷ್ಟುಪ್ ಶ್ಲೋಕಗಳಿರುವ ಸಂಗೀತ ಶಾಸ್ತ್ರಗ್ರಂಥವೆಂದು ಹೇಳಿದೆ. ಸಂಗೀತ ಶಾಸ್ತ್ರಕ್ಕೆ ಗಾಂಧರ್ವತತ್ತ್ವ ಎಂಬ ಹೆಸರೂ ಇದೆ.

**ಗಾಂಧರ್ವವೇದವಿಶಾರದ** ಸಂಗೀತ ಶಾಸ್ತ್ರದಲ್ಲಿ ಉದ್ದಾಮ ಪಂಡಿತರಾಗಿದ್ದ ಪ್ರೊಫೆಸರ್. ಪಿ. ಸಾಂಬಮೂರ್ತಿಯವರಿಗೆ ಮದ್ರಾಸಿನ ಹಿಂದೂಧರ್ಮ ಮಹಾಮಂಡಲವು ೧೯೪೩ರಲ್ಲಿ ಈ ಬಿರುದನ್ನಿತ್ತು ಗೌರವಿಸಿತು.

**ಗಾಂಧರ್ವಿ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವಂತೆ ಗಾಂಧಾರದ ಆರು ರಾಗಿಣಿಗಳಲ್ಲಿ ಇದು ಒಂದು ರಾಗಿಣಿಯ ಹೆಸರು.

**ಗಾಂಭೀರ್ಯ ಘೋಷಣೆ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಪ ಮ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಗ ಸ

**ಗಾಂಭೀರ್ಯನಾಟಿ**— ಈ ರಾಗವು ೩೬ನೆ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ಪ ಮ ರಿ ಸ

**ಗ್ರಾಮಗಾನಕಾಲ**—ಸಂಗೀತದ ಇತಿಹಾಸದಲ್ಲಿ ರಾಗಪದ್ಧತಿಯು ವಿಕಾಸ ವಾಗುವುದಕ್ಕೆ ಹಿಂದೆ ಗ್ರಾಮ ಮೂರ್ಛನ ಪದ್ಧತಿಯು ರೂಢಿಯಲ್ಲಿದ್ದ ಕಾಲ

**ಗ್ರಾಮತ್ರಯ**—ಮತಂಗನ ಹೇಳಿಕೆಯಂತೆ ಯಾವುದಾದರೊಂದು ಆಧಾರ ಸ್ವರದಿಂದ ಸ್ವರಸಪ್ತಕವನ್ನು ಪೂರೈಸಿದರೆ ಅದು ಗ್ರಾಮವೆನಿಸುತ್ತದೆ. ಪುರಾತನ ಸಂಗೀತದ ಷಡ್ಜ, ಮಧ್ಯಮ ಮತ್ತು ಗಾಂಧಾರಗ್ರಾಮಗಳು ಗ್ರಾಮತ್ರಯಗಳು. ಅತಿ ಪ್ರಾಚೀನವೆಂದರೆ ಭರತನಾಟ್ಯ ಶಾಸ್ತ್ರದ ಕಾಲಕ್ಕೂ ಹಿಂದೆ ಗಾಂಧಾರ ಗ್ರಾಮವು ಬಳಕೆಯಲ್ಲಿತ್ತು. ಕಾಲಕ್ರಮದಲ್ಲಿ ಷಡ್ಜಗ್ರಾಮವು ಮಾತ್ರ ಬಳಕೆಯಲ್ಲಿದ್ದು ಮಿಕ್ಕ ರಾಗಗಳೆಲ್ಲವೂ ಷಡ್ಜರಾಗದ ಮೂರ್ಛನಗಳಿಂದೂ, ಅದರ ಸ್ವರಗಳ ಗ್ರಹ ಭೇದ ದಿಂದ ಹುಟ್ಟಿದುವೆಂಬ ಅಭಿಪ್ರಾಯ ಸ್ಥಿರಪಟ್ಟಿತು. ಇದು ಇಂದಿಗೂ ಖರಹರಪ್ರಿಯ ಮೇಳದಲ್ಲಿ ಕಂಡು ಬರುತ್ತದೆ. ಮಧ್ಯಮ ಮತ್ತು ಗಾಂಧಾರ ಗ್ರಾಮಗಳ ತಗ್ಗು ಶ್ರುತಿಯ ಪಂಚಮಗಳು ಕಾಲಾಂತರದಲ್ಲಿ ಪ್ರತಿಮಧ್ಯಮದ ರಾಗೋತ್ಪತ್ತಿಗೆ ಕಾರಣ ವಾದುವು.

**ಗ್ರಾಮ್ಯನಾಟಕ**—ಜಾನಪದ ಸಂಗೀತವುಳ್ಳ ನಾಟಕ. ಇದಕ್ಕೆ ಗ್ರಾಮಿಕ ನಟನವೆಂದೂ ಹೆಸರು.

**ಗ್ರಾಮರಾಗ**—ಇದು ಮಾರ್ಗೀರಾಗಗಳ ವರ್ಗಕ್ಕೆ ಸೇರಿದ ಒಂದು ರಾಗ. 'ಸಂಗೀತರತ್ನಾಕರ'ವೆಂಬ ಗ್ರಂಥದಲ್ಲಿ ಇದು ಉಕ್ತವಾಗಿದೆ.

**ಗ್ರಾಂಥಿಕ**—ಭಾಗವತ ಮೇಳ ನಾಟಕಗಳಲ್ಲಿ ಅಥವಾ ನೃತ್ಯನಾಟಕಗಳಲ್ಲಿ ಬರುವ ಗದ್ಯ ಭಾಗಗಳನ್ನು ಓದುವವನಿಗೆ ಗ್ರಾಂಥಿಕನೆಂದು ಹೆಸರು.

**ಗ್ವಾಲಿಯರ್**—ಇದು ಮಧ್ಯಭಾರತದಲ್ಲಿರುವ ಒಂದು ಪುರಾತನ ನಗರ. ರಾಜಾಮಾನ್‌ಸಿಂಗನ ಕಾಲದಲ್ಲಿ (೧೪೮೬–೧೫೧೭) ಇದೊಂದು ಪ್ರಸಿದ್ಧ ಕಲಾ ಕೇಂದ್ರವಾಗಿತ್ತು. ಇಲ್ಲಿಯ ಆಸ್ಥಾನದಲ್ಲಿ ಅನೇಕ ವಾಗ್ಗೇಯಕಾರರು ಮತ್ತು ವಿದ್ವಾಂಸರು ಇದ್ದರು. ಧ್ರುಪದ್ ಶೈಲಿಯ ಗಾಯನವು ಆರಂಭವಾದುದು ಇಲ್ಲಿಯೇ. ಪ್ರಸಿದ್ಧ ಗಾಯಕ ತಾನ್‌ಸೇನನ ಸಮಾಧಿಯು ಇಲ್ಲಿದೆ. ಇಲ್ಲಿ ಪ್ರತಿವರ್ಷ ತ್ಯಾಗರಾಜರ ಸಂಗೀತೋತ್ಸವದಂತೆ ತಾನ್‌ಸೇನ್ ಸಂಗೀತೋತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಕೃಷ್ಣರಾವ್ ಶಂಕರ್ ಪಂಡಿತ್ ಗ್ವಾಲಿಯರ್ ಘರಾನಕ್ಕೆ ಸೇರಿದ ಪ್ರಸಿದ್ಧ ಹಿರಿಯ ಗಾಯಕರು.

**ಗಿರಿಕರ್ಣಿಕ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಗಿರಿಕುಂತಳಿ**—ಈ ರಾಗವು ೭೨ನೆ ಮೇಳಕರ್ತ ರಸಿಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಗ ಮ ಪ ಸ

ಅ: ಸ ನಿ ದ ನಿ ಪ ಮ ಗ ಸ

**ಗಿರಿಧರ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಗಿರಿಯಪ್ಪಗಾರು**—ಇವರು ಹಲವು ಭಕ್ತಿಗೀತೆಗಳನ್ನು ತೆಲುಗು ಮತ್ತು ಸಂಸ್ಕೃತದಲ್ಲಿ ರಚಿಸಿರುವ ಒಬ್ಬ ವಾಗ್ಗೇಯಕಾರರು. ಟಿ. ಪಿ. ಕೋದಂಡರಾಮ ಅಯ್ಯರ್ ಬರೆದಿರುವ ಭಗವದ್ಭಜನ ಪದ್ಧತಿ ಎಂಬ ಗ್ರಂಥದಲ್ಲಿ ಗಿರಿಯಪ್ಪನವರ ಕೆಲವು ರಚನೆಗಳಿವೆ ಹರಿಕಾಂಭೋಜಿರಾಗ (ಆದಿತಾಳ ತಿಶ್ರಗತಿ)ದಲ್ಲಿರುವ ರಾಮಚಂದ್ರನನ್ನು ಬ್ರೋವ ಎಂಬ ಕೃತಿಯು ಪ್ರಸಿದ್ಧವಾಗಿದೆ

**ಗಿರಿರಾಜಕವಿ**—ಗಿರಿರಾಜ ಬ್ರಹ್ಮ ಅಥವಾ ಗಿರಿರಾಜ ಕವಿ ತ್ಯಾಗರಾಜರ ಪಿತಾಮಹರು. ಇವರು ಭಾರದ್ವಾಜಗೋತ್ರದ ಮುಲಿಕಿನಾಡು ತೆಲುಗು ಬ್ರಾಹ್ಮಣರು ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿ ಜನಿಸಿದರು. ತೆಲುಗು ಮತ್ತು ಸಂಸ್ಕೃತ ವಿದ್ವಾಂಸರಾಗಿದ್ದುದಲ್ಲದೆ ಪ್ರತಿಭಾವಂತ ವಾಗ್ಗೇಯಕಾರರಾಗಿದ್ದರು. ಇವರು ಹಲವು ಯಕ್ಷಗಾನಗಳನ್ನು ರಚಿಸಿದ್ದಾರೆ. ತಂಜಾವೂರಿನ ಷಹಜೀ ಮಹಾರಾಜನ (೧೬೮೪-೧೭೧೧) ಆಸ್ಥಾನ ವಿದ್ವಾಂಸರಾಗಿದ್ದು ಅವನ ಅಪಾರ ಗೌರವ ಸನ್ಮಾನಗಳಿಗೆ ಪಾತ್ರರಾಗಿದ್ದರು.

**ಗಿರೀಶಪ್ರಿಯ**—ಈ ರಾಗವು ೩೯ನೆ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗೀತ**—ಸಾಮಾನ್ಯವಾಗಿ ಹಾಡನ್ನು ಗೀತ ಎನ್ನುತ್ತೇವೆ. ಸಂಗೀತದಲ್ಲಿ ಇದೊಂದು ವಿಶೇಷವಾದ ರಚನೆ ಸಂಗೀತದ ವಿದ್ಯಾರ್ಥಿಯು ಸ್ವರಾವಳಿಗಳು ಮತ್ತು ಅಲಂಕಾರಗಳನ್ನು ಕಲಿತ ನಂತರ ಗೀತಗಳನ್ನು ಅಭ್ಯಾಸ ಮಾಡಬೇಕು. "ಧಾತು ಮಾತು ಸಮಾಯುಕ್ತಂ ಗೀತ ಮಿತ್ಯುಚ್ಯತೇ ಬುಧೈಃ ||" ಗೀತವು ಮಾತು ಅಥವಾ ಸಾಹಿತ್ಯ ಮತ್ತು ಸಂಗೀತದ ಪರಿಚಯ ಮಾಡಿಸುವ ರಚನೆ. ಕೆಲವು ಗೀತಗಳಲ್ಲಿ ಸೂತ್ರಖಂಡ, ಭಾಷಾಂಗ ಖಂಡಗಳೆಂಬ ಖಂಡಿಕೆಗಳು ಮಾತ್ರ ಇವೆ. ಗೀತಗಳು

ನಾನಾ ದೇವತಾಸ್ತುತಿ ರೂಪದಲ್ಲಿವೆ. ಕೆಲವಲ್ಲಿ ಅರ್ಥವಿಲ್ಲದ ಅಯ್ಯ, ತಿಯ್ಯಾ ಎಂಬ ಪದಗಳನ್ನು ಸಾಹಿತ್ಯದಲ್ಲಿ ಸೇರಿಸಿರುತ್ತಾರೆ. ಇವುಗಳಿಗೆ ಮಾತೃಕಾ ಪದಗಳೆಂದು ಹೆಸರು. ಇವುಗಳ ಸಂಗೀತವು ಸುಲಭ ಮತ್ತು ಸರಳ. ನಡೆ ಅಥವಾ ಓಟವು ಸಾಮಾನ್ಯವಾಗಿರುತ್ತದೆ ಸಂಸ್ಕೃತ, ಕನ್ನಡ ಮತ್ತು ಭಾಂಡೀರ ಭಾಷೆಗಳಲ್ಲಿ ಗೀತಗಳಿವೆ. ಪ್ರಸಿದ್ಧವಾಗಿರುವ ಸಂಸ್ಕೃತ ಶ್ಲೋಕಗಳನ್ನು ಬುದ್ಧಿವಂತಿಕೆಯಿಂದ ಸಂಗೀತಕ್ಕೆ ಅಳವಡಿಸಿರುವುದನ್ನು ಗಮನಿಸಬಹುದು. ಕೆಲವು ಗೀತಗಳು ಅಪರೂಪವಾದ ತಾಳಗಳಲ್ಲಿವೆ. ತ್ಯಾಗರಾಜರ ಕಾಲಕ್ಕಿಂತ ಹಿಂದೆ ಇದ್ದ ವಾಗ್ಗೇಯಕಾರರು ಹೆಚ್ಚಾಗಿ ಗೀತಗಳನ್ನು ರಚಿಸಿದರು. ಪುರಂದರದಾಸರು ಮತ್ತು ಪೈದಾಳ ಗುರುಮೂರ್ತಿ ಶಾಸ್ತ್ರಿ ಗೀತಗಳನ್ನು ಹೆಚ್ಚಾಗಿ ರಚಿಸಿದ್ದಾರೆ.

ಗೀತಗಳಲ್ಲಿ ಎರಡು ವಿಧ (೧) ಸಂಚಾರಿ ಗೀತಗಳು ಅಥವಾ ಸಾಮಾನ್ಯ ಗೀತಗಳು (೨) ಲಕ್ಷಣ ಗೀತಗಳು.

ಲಕ್ಷಣ ಗೀತಗಳನ್ನು ರಾಗದ ಲಕ್ಷಣವನ್ನು ತಿಳಿಸಲು ರಚಿಸಿದ್ದಾರೆ. ಸ್ವರ ಮತ್ತು ಅಲಂಕಾರಗಳನ್ನು ಕಲಿತ ನಂತರ ಸಂಚಾರಿ ಗೀತಗಳನ್ನು ಕಲಿಯಬೇಕು. ಇವುಗಳಲ್ಲಿ ಪಲ್ಲವಿ, ಅನುಪಲ್ಲವಿ, ಚರಣವೆಂಬ ಅಂಗಗಳಿರುವುದಿಲ್ಲ ಆದರೆ ೨-೩ ವಿಭಾಗಗಳು ಅಥವಾ ಖಂಡಿಕಗಳಿರಬಹುದು.

**ಗೀತನಟನಿ**—ಈ ರಾಗವು ೫೩ನೆ ಮೇಳಕರ್ತ ಗಮನ ಶ್ರಮದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ರಿ ಸ

**ಗೀತಪ್ರಬಂಧ**—ಪ್ರಬಂಧಗಳ ಲಕ್ಷಣಗಳಿರುವ ಗೀತ

**ಗೀತಪ್ರಿಯ**—(೧) ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇ ಪ ದ ಸ̇

ಅ: ಸ̇ ನಿ ದ ಪ ಮ ರಿ ಗ ರಿ ಸ

(೨) ಇದು ಅಸಂಪೂರ್ಣ ಮೇಳಪದ್ಧತಿಯಲ್ಲಿ ೬೩ನೆ ರಾಗಾಂಗರಾಗ ಮತ್ತು ಮುತ್ತುಸ್ವಾಮಿದೀಕ್ಷಿತರು ಈ ರಾಗದಲ್ಲಿ 'ಸಾಧುಜನ ವಿನುತಂ' ಎಂಬ ಕೃತಿಯನ್ನು ರಚಿಸಿದ್ದಾರೆ.

(೩) ತಿರುವೈಯ್ಯಾರ್ ಸುಬ್ರಹ್ಮಣ್ಯ ಅಯ್ಯರ್ ರಚಿಸಿರುವ ಸಂಗೀತ ಕೌಮುದಿ ಎಂಬ ಗ್ರಂಥದಲ್ಲಿ ಈ ರಾಗವು ೧೩ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗವೆಂದು ಹೇಳಿದೆ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ಗ ರಿ ಸ

(೪) ಇದು ಶಿವನ ನಾಮಾವಳಿಯಲ್ಲಿ ಬರುವ ಒಂದು ನಾಮ ವಿಶೇಷ.

**ಗೀತಮೂರ್ತಿ**—ಈ ರಾಗವು ೩೩ನೆ ಮೇಳಕರ್ತ ಗಾಂಗೇಯಭೂಷಣಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ದ ನಿ ಸ

ಅ : ಸ ನಿ ದ ಪ ಮ ಗ ರಿ ಸ

**ಗೀತಮೋಹಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ನಿ ಸ

ಅ : ಸ ನಿ ದ ಪ ಮ ಗ ರಿ ಸ

**ಗೀತಗೋಪಾಲ**—ಮೈಸೂರು ಸಂಸ್ಥಾನದ ದೊರೆಯಾಗಿದ್ದ ಚಿಕ್ಕದೇವರಾಜ ಒಡೆಯರ ಕಾಲವು (೧೬೭೩–೧೭೦೪), ಸಾಹಿತ್ಯ, ಸಂಗೀತ ಮತ್ತು ಧಾರ್ಮಿಕ ಚಟುವಟಿಕೆಗಳಿಂದ ಕೂಡಿದ ಒಂದು ಉತ್ತಮ ಕಾಲವಾಗಿತ್ತು. ಸ್ವತಃ ಒಡೆಯರೂ, ವಿದ್ವಾಂಸರೂ, ಕಲಾಪ್ರೇಮಿಯೂ ಆಗಿದ್ದು ಸಾಹಿತ್ಯ, ಕಲೆ, ಸಂಗೀತಗಳ ಉದಾರ ಪೋಷಕರಾಗಿದ್ದರು. ವಿಷ್ಣುವಿನ ಪರಮಭಕ್ತರಾಗಿದ್ದು ಜಯದೇವನ ಗೀತಗೋವಿಂದ ಕಾವ್ಯದ ಮಾದರಿಯಲ್ಲಿ ಗೀತಗೋಪಾಲವೆಂಬ ಹಾಡುಗಳ ಸಂಕಲನವನ್ನು ರಚಿಸಿದ್ದಾರೆ. ವಿಶಿಷ್ಟಾದ್ವೈತ ತತ್ವಕ್ಕೆ ಅನುಗುಣವಾದ ಸಂಪೂರ್ಣ ಶರಣಾಗತಿ ಭಕ್ತಿಯು 'ಗೀತಗೋಪಾಲ'ದ ಮೂಲಸಾಮಗ್ರಿ. ಮೋಕ್ಷವನ್ನು ಸಾಧಿಸಲು ಉಪಾಯವಾದ ಪ್ರಪತ್ತಿ ಮಾರ್ಗವನ್ನು ಪ್ರಚಾರ ಮಾಡುವುದು ಕವಿಯ ಧ್ಯೇಯ. ಭಕ್ತರು ಮತ್ತು ಭಾಗವತದಲ್ಲಿ ಉಪದೇಶಿಸಿರುವ ತತ್ವಗಳನ್ನೂ, ಭಗವದ್ಗೀತೆಯ ನ್ನೂ ಆಳವಾಗಿ ಅಭ್ಯಾಸಮಾಡಿ ಅವುಗಳ ಸಾರವತ್ತಾದ ಅಂಶಗಳನ್ನು ಈ ಕೀರ್ತನೆಗಳಲ್ಲಿ ಬಹಳ ಸರಳವಾದ ರೀತಿಯಲ್ಲಿ ಬಹಳ ಸೊಗಸಾಗಿ ನಿರೂಪಿಸಲಾಗಿದೆ. ಸಾಮಾನ್ಯ ಜನರಿಗೆ ಭಗವದ್ಗೀತೆಯ ತತ್ವವನ್ನು ತಿಳಿಸಿ, ಮೋಕ್ಷ ಮಾರ್ಗವನ್ನು ಬೋಧಿಸುವುದು ದೊರೆಯ ಉದ್ದೇಶ. (ಈ ಲೋಗರೊಳ್ವ ಗೀತದ ಮೂಲದೊಳೇ ಮುಕ್ತಿಗತಿಯ ಮೊಗದೋರಿಸಿದಂ).

ಗೀತಗೋಪಾಲವು ಎರಡು ಭಾಗಗಳನ್ನೊಳಗೊಂಡಿದೆ. ಪ್ರತಿ ಭಾಗದಲ್ಲಿ ಸಪ್ತಪದಿಗಳಿವೆ. ಪೂರ್ವಭಾಗದಲ್ಲಿರುವ ಸಪ್ತಪದಿಗಳು ತ್ರಿಪದಿಗಳು. ಉತ್ತರ ಭಾಗದಲ್ಲಿರುವ ಹಾಡುಗಳು ಪಂಚಪದಿ, ತ್ರಿಪದಿ ಮತ್ತು ಏಕಪದಿ ಛಂದಸ್ಸುಗಳಲ್ಲಿವೆ. ಇವುಗಳ ಸಂಖ್ಯೆ ವಿವಿಧವಾಗಿವೆ ಕವಿಯು ತಾನು ಹೇಳಬೇಕಾದ ತತ್ವಗಳನ್ನು ವಚನದಲ್ಲಿ ಹೇಳಿದ ನಂತರ ಅದಕ್ಕೆ ಅನುಗುಣವಾದ ಕೀರ್ತನೆಯನ್ನು ರಚಿಸಿದ್ದಾನೆ. ಇವೆರಡೂ ಭಾಗಗಳೂ ಭಗವಂತನ ಅಪಾರ ಕಾರುಣ್ಯ ಮತ್ತು ಅನುಗ್ರಹದಲ್ಲಿ ದೃಢವಾದ ನಂಬಿಕೆಯನ್ನು ಬೋಧಿಸುತ್ತವೆ (ಎರಡುಂ ಭಾಗದೊಳ್ ನಂಬುಗೆಯೆಂಬ ತದುಪಾಯಮಂ ನಿರೂಪಿಸುವರ್)

ಪೂರ್ವಭಾಗದ ವಿಷಯು ಶ್ರೀಕೃಷ್ಣನ ಬಾಲ್ಯ ಮತ್ತು ಬಾಲಲೀಲೆಗಳ ಹೃದಯಂಗಮವಾದ ಚಿತ್ರ. ಕೃಷ್ಣನನ್ನು ಎಬ್ಬಿಸುವ ಮತ್ತು ಅವನ ಲೀಲೆಗಳನ್ನು ಚಿತ್ರಿಸುವ ಗೀತೆಗಳು ಸೊಗಸಾಗಿವೆ "ಮೂಡು ಬೆಳಗಾಯಿತೆಚ್ಚರು ಮುದ್ದು ಗೋಪಾಲ, ಆಡುವ ಮಕ್ಕಳು ನಿನ್ನನರಸುತ್ತ ಬಂದಿವೆ ನೋಡು" ಎಂದು ತಾಯಿ ಕೃಷ್ಣನನ್ನು ಎಬ್ಬಿಸುತ್ತಾಳೆ 'ತನ್ನ ನೆನೆವುದು ಜೀವ' ಎಂಬ ಗೀತೆ ಲೌಕಿಕ ಮತ್ತು ಅಲೌಕಿಕ ವಿಷಯಗಳ ತುಯ್ದಾಡುವ ಭಕ್ತನ ಪ್ರಾಮಾಣಿಕ ಮಾನಸಿಕ ತಲ್ಲಣವನ್ನು ಸುಂದರವಾಗಿ ಚಿತ್ರಿಸುತ್ತದೆ.

"ತನ್ನ ನೆನೆವುದು ಜೀವ ತಲ್ಲಣಿವುದು ಕೂಡೆ ನಿನ್ನ
ನೆನೆವುದೊಯ್ಯನೆ ನೆಲೆಗೆ ನಿಲ್ಲುವುದು ।। ಪ ।।
ಮರಳಿ ಮರಳಿತಾನು ಮಾಡುವ ಪಾಪಂಗಳ
ಬಿರುಬ ನೆನೆದುಮಿಗೆ ಬೆದರುವುದು
ನರಪತಿ ಯದುಕುಲನಾಥ ತೇರೇರಿ ನೀ
ನೊರೆದೊಂದು ನುಡಿಯರಿತುರ್ಬಿ ಕೊರ್ಬುವುದು ।।

"ಚೆಲ್ಲವಾಡದಿರೆನ್ನ ಸಲಹೊ ಪಶ್ಚಿಮರಂಗ" ಎಂಬ ಮತ್ತೊಂದು ಗೀತೆಯಲ್ಲಿ ಭಗವಂತನಲ್ಲಿ ಮಾಡಿಕೊಂಡ ಪ್ರಪತ್ತಿ ಮತ್ತು ಆರ್ತ ಮೊರೆಯು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿದೆ.

ಗೀತಗಳಲ್ಲಿ ಪಲ್ಲವಿಯ ನಿಲುವನ್ನು ಸಾಧಿಸುವ ಹೋಲಿಕೆಗಳಿಂದ ಕೂಡಿದ ಅನೇಕ ಚರಣಗಳಿವೆ. ಇದಲ್ಲದೆ ಈ ರಚನೆಗಳಲ್ಲಿ ವಿವಿಧ ಭಾವಗಳು ವ್ಯಕ್ತವಾಗಿವೆ.

"ಒಲಿದು ಲಾಲಿಸಿದೊಡವೊಲ್ಲದಿರ್ದೊಡವೊಂದೆ
ನೆಲೆಯೊಳು ನಲ್ಲನನೆರೆ ನಂಬಿ ಬಾಳುವ
ಕುಲದೊಳು ಪುಟ್ಟಿದ ಕುವರಿಯಂದದೊಳು ನೀ
ನ್ನೊಲವ ಕೂರ್ತಿರುವ ನಾನುಳಿದುದ ನರಿಯೆನು"

ಎಂಬುದರಲ್ಲಿ ಮಧುರ ಭಾವ ವ್ಯಕ್ತವಾಗಿದೆ.

"ತಡೆಯಲಾರದ ಕೋಪದಟ್ಟುಳಿಯಿಂದೊಮ್ಮೆ
ಬಡಿದು ನೂಕಿದತಾಯ ಬಳಿಯಿಂದ ತೊಲಗದೆ
ಎಡೆವಿಡದಳುತವಳೆರಕವನೆಳಸುವ
ಕಡುಗೂಸಿನಂದವ ಕೈವಿಡಿದೆರ್ಪೆನು"

ಎಂಬುದರಲ್ಲಿ ವಾತ್ಸಲ್ಯಭಾವವು ತುಂಬಿದೆ.

ಶ್ರೀಕೃಷ್ಣನ ದಿವ್ಯಚರಿತ್ರೆಯನ್ನು ಗೋಪಿಯರ ದೃಷ್ಟಿಯಿಂದ ಚಿತ್ರಿಸುವಲ್ಲಿ ಒಂದು ಬಗೆಯ ಸರಳ ಮುಗ್ಧತೆ ಮತ್ತು ಮಾಯಕತೆಯು ವ್ಯಾಪಿಸಿ ವಿಶಿಷ್ಟವಾದ ಒಂದು ನಿಲುವು ಉಂಟಾಗಿರುವುದನ್ನು ಗಮನಿಸಬಹುದು.

'ಗೀತಗೋಪಾಲ'ವು 'ಗೀತಗೋವಿಂದ'ದ ಮಾದರಿಯಲ್ಲಿದ್ದರೂ ಅದರ ಅಂಧಾನುಕರಣೆಯಲ್ಲ. ಇದರಲ್ಲಿ ಗೋಪಿಯರ ಅದ್ವೈಹಿಕ ದಿವ್ಯತೆಯಿಂದ ಕೂಡಿದ ವಿರಹ ಮತ್ತು ಹಾಡುಗಳ ರಚನಾತಂತ್ರವನ್ನು ಕಾಣಬಹುದು ಮಹತ್ವದ ಸಂಗತಿಗಳನ್ನು ಸುಲಭವಾದ ಭಾಷೆಯಲ್ಲಿ ಹಾಗೂ ಲಯಬದ್ಧವಾದ ಸಂಗೀತದ ಭಾಷೆಯಲ್ಲಿ ಹೇಳಿರುವುದು ಈ ರಾಜಕವಿಯ ಹಿರಿಮೆಯಾಗಿದೆ. ಚಿಕ್ಕದೇವರಾಜ ಒಡೆಯರಿಗೆ 'ರಸಿಕಜನ ಕರ್ಣರಸಾಯನೀಕೃತ ಸಂಗೀತ ವಿಸ್ತರಂ' ಎಂಬ ಸಾರ್ಥಕವಾದ ಬಿರುದು ಇತ್ತು.

**ಗೀತಗಂಗಾಧರ**–ಮೈಸೂರಿನ ಇತಿಹಾಸದಲ್ಲಿ ಪ್ರಖ್ಯಾತನಾಗಿರುವ ಕರಾಚೂರಿ ನಂಜರಾಜಯ್ಯ ಅಥವಾ ಕಳಲೆಯ ನಂಜರಾಜನು ಕವಿಗಳಿಗೂ, ಕಲಾವಿದರಿಗೂ ಆಶ್ರಯದಾತನಾಗಿದ್ದನು. ಇವನ ಆಶ್ರಯ ಪೋಷಣೆಯಲ್ಲಿ ಸಂಸ್ಕೃತ, ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಹಲವು ಕಾವ್ಯಗಳ ರಚನೆಯಾಯಿತು. ಗೀತಗಂಗಾಧರ ಎಂಬ ಕಾವ್ಯವನ್ನು ನಂಜರಾಜನು ತನ್ನ ಆರಾಧ್ಯದೈವವಾದ ಗರಳಪುರಿ ನಂಜನಗೂಡಿನ ಶ್ರೀಕಂಠೇಶ್ವರನಿಗೆ ಕಾಣಿಕೆಯಾಗಿ ಅರ್ಪಿಸಿದ್ದಾನೆ. ಇದು ಪ್ರಸಿದ್ಧವಾಗಿರುವ ಜಯದೇವಕವಿಯ ಗೀತಗೋವಿಂದ ಕಾವ್ಯದ ಮಾದರಿಯಲ್ಲಿ ರಚಿಸಲಾಗಿರುವ ಗೇಯಕಾವ್ಯ ಈ ಕಾವ್ಯದಲ್ಲಿ ೨೪ ಅಷ್ಟಪದಿಗಳು ಮತ್ತು ೭೨ ಶ್ಲೋಕಗಳಿವೆ. ಶಿವಪಾರ್ವತಿಯರ ಪ್ರಣಯ ಪ್ರಸಂಗಗಳು ಇದರ ವಸ್ತು. ಇದನ್ನು ಸಂಗೀತಕ್ಕೆ ಅಳವಡಿಸಿ ವಿದ್ವಾನ್ ಆನೂರು ರಾಮಕೃಷ್ಣ ಮತ್ತು ವೃಂದದವರು ನಿರೂಪಣೆ ಮಾಡಿದ್ದಾರೆ

**ಗೀತಗೋವಿಂದ**—ಗೀತಗೋವಿಂದವು ಜಯದೇವ ಕವಿಯ ಅಮರಕಾವ್ಯ. ಜಯದೇವನು ಕ್ರಿಸ್ತಶಕ ೧೨ನೆ ಶತಮಾನದ ಅಂತ್ಯ ಭಾಗದಲ್ಲಿ ಹುಟ್ಟಿ ೧೬೧೦ರಲ್ಲಿ ಕಾಲವಾದನೆಂದು ಹೇಳುತ್ತಾರೆ. ಬಂಗಾಳದಲ್ಲಿ ಪುಷ್ಯಮಾಸದ ಶುಕ್ಲಸಪ್ತಮಿಯಂದು ಅವನ ಪುಣ್ಯತಿಥಿಯನ್ನು ಆಚರಿಸುತ್ತಾರೆ. ಜಯದೇವನು ಬಂಗಾಳದ ಸೇನವಂಶದ ಬಲ್ಲಾಳ ಲಕ್ಷ್ಮಣ ಸೇನನ (೧೧೭೦—೧೨೦೦) ಆಸ್ಥಾನ ಕವಿಯಾಗಿದ್ದನು ಈ ರಾಜನ ಆಸ್ಥಾನದಲ್ಲಿ ಜಯದೇವನಲ್ಲದೆ ಗೋವರ್ಧನಾಚಾರ್ಯ, ಶರಣ, ಉಮಾಪತಿಧರ, ಕವಿರಾಜ ಧೋಯಿ ಇದ್ದರೆಂದು ಒಂದು ಶ್ಲೋಕವು ಹೇಳುತ್ತದೆ. ಕೃಷ್ಣಕರ್ಣಾಮೃತವೆಂಬ ಪ್ರಸಿದ್ಧ ಕೃತಿಯ ಕವಿಯಾದ ಲೀಲಾಶುಕನೇ ಕಾಲಾಂತರದಲ್ಲಿ ಜಯದೇವನಾಗಿ ಜನ್ಮವೆತ್ತಿ ಬಂದನೆಂದು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ದೃಢವಾದ ನಂಬಿಕೆಯಿದೆ

ಗೀತಗೋವಿಂದವು ಜಯದೇವನ ಹೆಸರನ್ನು ಸಂಸ್ಕೃತ ಸಾಹಿತ್ಯದಲ್ಲೂ ವೈಷ್ಣವ ಸಂಸ್ಕೃತಿಯಲ್ಲೂ ಅಮರವಾಗಿಸಿರುವ ಗ್ರಂಥ. ಇದಕ್ಕೆ ಹಲವಾರು ಉತ್ತಮ ವ್ಯಾಖ್ಯಾನಗಳಿವೆ. ಇವುಗಳಲ್ಲಿ ೧೪ನೆ ಶತಮಾನದ ಮೇವಾಡದ ರಾಣಾ ಕುಂಭನ 'ರಸಿಕಪ್ರಿಯಾ' ಎಂಬ ವ್ಯಾಖ್ಯಾನವು ಬಹು ಪ್ರಸಿದ್ಧವಾದುದು. ಇವನಿಗೆ

ಸಂಗೀತದಲ್ಲಿ ವಿಶೇಷವಾದ ಪಾಂಡಿತ್ಯವಿತ್ತು. ಈಗಿನ ಗೀತಗೋವಿಂದದ ಪಾಠಗಳಲ್ಲಿ ಕಾಣಿಸಿರುವ ರಾಗ ಮತ್ತು ತಾಳಗಳನ್ನು ಇವನೇ ವ್ಯವಸ್ಥೆ ಮಾಡಿದನೆಂದು ಹೇಳುತ್ತಾರೆ ವಿಜಯನಗರದ ಆರವೀಡು ವಂಶದ ತಿರುಮಲರಾಯನು (೧೫೬೭–೧೫೭೫) ಪೆನುಗೊಂಡೆಯಲ್ಲಿ ರಾಜನಾಗಿದ್ದಾಗ ಅವನ ಆಸ್ಥಾನದಲ್ಲಿ ಕವಿಯಾಗಿದ್ದ ಲಕ್ಷ್ಮೀಧರನು ಬರೆದಿರುವ ಮತ್ತೊಂದು ವ್ಯಾಖ್ಯಾನ 'ಶ್ರುತಿರಂಜನಿ', ಕೃಷ್ಣದತ್ತನ 'ಶಶಿಲೇಖಾ', ಮತ್ತು ಜಗದ್ಧರನ 'ಸಾರದೀಪಿಕಾ' ಮುಂತಾದುವು ಇತರ ಬಳಕೆಯಲ್ಲಿರುವ ವ್ಯಾಖ್ಯಾನಗಳು 'ಮಹಾಮಹೋಪಾಧ್ಯಾಯ ಶಂಕರಮಿತ್ರರು ಬರೆದಿರುವ ರಸಮಂಜರಿ.'

ಗೀತಗೋವಿಂದದಲ್ಲಿ ೨೪ ಅಷ್ಟಪದಿಗಳು, ೧೨ ಸರ್ಗಗಳು, ಮಧ್ಯೆ ಹಲವಾರು ಸಂಯೋಜನ ಶ್ಲೋಕಗಳಿವೆ ೧೨ ಸರ್ಗಗಳು ಭಾಗವತದ ೧೨ ಕಾಂಡಗಳಿಗೂ, ೨೪ ಅಷ್ಟಪದಿಗಳು ಗಾಯತ್ರಿಯ ೨೪ ಅಕ್ಷರಗಳಿಗೂ ಸರಿಯಾಗಿವೆ. ಇಡೀ ಕಾವ್ಯದಲ್ಲಿ ಮಾತಾನಾಡುವವರು ಮೂರೇ ಮಂದಿ–ಕೃಷ್ಣ, ರಾಧೆ, ರಾಧೆಯ ಸಖಿ. ಪ್ರತಿಯೊಂದು ಸರ್ಗವೂ ಇವರಲ್ಲಿ ಒಬ್ಬರ ಮಾತು ಬ್ರಹ್ಮವೈವರ್ತ ಪುರಾಣದಲ್ಲಿ ಬರುವ ಒಂದು ಪ್ರಸಂಗವನ್ನು ಅಧಿಕರಿಸಿ ಇಡೀ ಕಾವ್ಯ ರಚಿತವಾಗಿದೆಯೆಂಬ ಸೂಚನೆ ಮಂಗಳ ಶ್ಲೋಕವಲ್ಲಿದೆ. ಇದು ಶೃಂಗಾರ ಮಹಾಕಾವ್ಯ, ಭಕ್ತಿಗೀತೆಗಳ ಚೂಡಾಮಣಿ. ಜಾರ್ಜ್‌ಕೈಟ್ ಹೇಳಿರುವಂತೆ "ಗೀತಗೋವಿಂದವು ಭಾವಗೀತೆಗೂ ನಾಟಕಕ್ಕೂ ಮಧ್ಯಸ್ಥವಾಗಿದ್ದು, ಭಾರತೀಯ ಸಾಹಿತ್ಯದಲ್ಲೇ ಅದ್ವಿತೀಯವಾದ ಪ್ರೇಮಗೀತೆ ಯಾಗಿದೆ. ಇದರ ವಸ್ತು ವಿರಹದುಃಖ. ವಿಪ್ರಲಂಭ ಶೃಂಗಾರದ ಇಂತಹ ಸರಳವೂ ಸುದೀರ್ಘವೂ ಆದ ವರ್ಣನೆ ಅಖಿಲ ಗೀರ್ವಾಣ ವಾಙ್ಮಯದಲ್ಲೇ ಅಪೂರ್ವ ವಾದುದು, ಅನ್ಯಾದೃಶ್ಯವಾದುದು. ಇಲ್ಲಿ ಪ್ರತಿಪಾದಿತವಾಗಿರುವುದು ಇಂದ್ರಿಯ ಗ್ರಾಹ್ಯವೂ, ಸ್ವಾರ್ಥದೂಷಿತವೂ—ಸುಖಾಪೇಕ್ಷಿಯೂ ಆದ ಕೀಳು ಪ್ರೇಮವಲ್ಲ. ಇಲ್ಲಿ ವರ್ಣಿತವಾಗಿರುವುದು ಇಂದ್ರಿಯಾತೀತವಾದ ಸ್ವಾರ್ಥವಿದೂರವಾದ, ಸುಖಾಪೇಕ್ಷೆಯಿಲ್ಲದ ಶುದ್ಧ ದೈವಿಕ ಪ್ರೇಮ. ಪರಸ್ಪರ ಅನುರೂಪರಾದ ಇಬ್ಬರು ಮಹಿಮಾಮಯ ವ್ಯಕ್ತಿಗಳ ಅವಿನಾಭಾವಸಂಯೋಗ. ಒಬ್ಬರಲ್ಲಿ ಒಬ್ಬರು ಸಂಪೂರ್ಣವಾಗಿ ಲಯ ಹೊಂದುವ ವರ್ಣಪೂರ್ಣವಾದ ಚಿತ್ರಣ. ಮಾನವಾತೀತ ವಾದ ಈ ಪ್ರೇಮ ಸಾಯುಜ್ಯದಲ್ಲಿ ಸ್ಥೂಲಾತಿಸ್ಥೂಲವಾದ ಭಾವನೆಗಳಿಗೆ ಹೇಗೋ ಹಾಗೆ ಸೂಕ್ಷ್ಮಾತಿ ಸೂಕ್ಷ್ಮವಾದ ಭಾವನೆಗಳಿಗೂ ಪ್ರಾಣವನ್ನೇ ಬಲಿದಾನ ಮಾಡಲು ಸರ್ವದಾ ಸಿದ್ಧವಾದ ಅತ್ಯುಚ್ಚತರವಾದ ಪ್ರೇಮಾರಾಧನೆಗೂ ಅವಕಾಶವುಂಟು. ಈ ಪ್ರೇಮವು ಪರೋಕ್ಷವೂ, ಅಸ್ಪಷ್ಟವೂ ಅನಿರ್ದಿಷ್ಟವೂ, ಬಾಹ್ಯಗತವೂ ಆದ ನಿಗೂಢ ಶಕ್ತಿಯೊಂದರ ಸಹಾಯವನ್ನು ಅಪೇಕ್ಷಿಸುವುದಿಲ್ಲ. ಈ ಕೃತಿಯಲ್ಲಿನ ಕಾಮಪ್ರೇಮಗಳ ಸಮನ್ವಯದಲ್ಲಿ ಕ್ಷುದ್ರವಾದುದು ಯಾವುದೂ ಇಲ್ಲ. ಈ ಕಾವ್ಯವು ಕಾಮದ ಕಬ್ಬಿಣವಲ್ಲ ಪ್ರೇಮದ ಅಪರಂಜಿ. ಭೋಗಕ್ಕೆ

ಯೋಗದ ಮೂಸೆಯಲ್ಲಿ ಪುಟಕೊಡಲು ಮಾಡಿದ ಪ್ರಯತ್ನದ ಶ್ರೇಷ್ಠತಮ ಫಲ ".

ಈ ಕಾವ್ಯದಲ್ಲಿ ಅತಿ ಸುಂದರವಾದ ಪ್ರಣಯ ಪ್ರಪಂಚವೊಂದು ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಹೊರನೋಟಕ್ಕೆ ಶೃಂಗಾರರಸ ನೊರೆಗಟ್ಟಿ ಹರಿಯುವಂತೆ ಕಾಣುತ್ತಿದ್ದರೂ, ಇಲ್ಲಿ ಕಂಡುಬರುವುದು ನವ ವಿಧ ಭಕ್ತಿಗಳಲ್ಲಿ ಒಂದಾದ ಮಧುರ ಭಕ್ತಿ. ಪಿತಾ-ಪುತ್ರ, ಯಜಮಾನ-ಸೇವಕ ಈ ಸಂಬಂಧವನ್ನು ಕಲ್ಪಿಸಿದರೆ ಭಕ್ತಿಮಾರ್ಗವನ್ನು ಹರಡಲು ಆಗುವುದಿಲ್ಲವೆಂದು ಭಾವಿಸಿ ನಾಯಕ-ನಾಯಕೀ ಭಾವವನ್ನು ಬಳಸಿದ್ದಾನೆ. ಶ್ರೀಕೃಷ್ಣನು ನಾಯಕ, ನಯನ ಮನೋಹರಳಾದ ರಾಧೆ ನಾಯಕಿ, ಗೋಪಿಯರು ಸಖಿಯರು. ಗೋಪಿಯರೆಲ್ಲರೂ ಶ್ರೀಕೃಷ್ಣನನ್ನು ಕಂಡು ಪರವಶರಾಗುತ್ತಾರೆ. ಶ್ರೀಕೃಷ್ಣನು ಸೌಂದರ್ಯ ನಿಧಿಯಾದ ರಾಧೆಯನ್ನು ಕಂಡು ಮುಗ್ಧನಾಗುತ್ತಾನೆ. ಇವುಗಳೆಲ್ಲರ ವಿವರಣೆಯಲ್ಲಿ ಜಯದೇವನು ತನ್ನ ಅದ್ಭುತ ಕವಿತಾಶಕ್ತಿಯನ್ನು ತೋರ್ಪಡಿಸಿದ್ದಾನೆ. ಸಂಸ್ಕೃತವನ್ನು ಅರಿಯದವರಿಗೂ ಗೀತಗೋವಿಂದವು ಆದರಣೀಯವಾಗಬಲ್ಲುದು. ಇಲ್ಲಿಯ ಮಾತುಗಳ ಜೋಡಣೆ ಅಂತಹುದು. ಅಪೂರ್ವವಾದ ಸಂಗೀತ ಮಾಧುರ್ಯವು ಇಲ್ಲಿಯ ಮಾತುಗಳಲ್ಲಿ ಅಡಗಿದೆ. ಅರ್ಥಕ್ಕೆ ತಕ್ಕ ಮಾತುಗಳು ಬರುವುದರಿಂದ ಗೀತೆಯನ್ನು ಹಾಡುತ್ತಿರುವಂತೆಯೇ ಭಾಷೆ ಬರದವನೂ ಭಾವಪರವಶನಾಗಬಲ್ಲ. ಇಂತಹ ಕಾವ್ಯ ಮತ್ತೊಂದಿಲ್ಲ. ಜಯದೇವನು 'ನಾದಲೋಲ'. ಪೂಜಾ ಕಾಲದಲ್ಲಿ ತನ್ನ ಗಾನಕ್ಕೆ ಮೇಳೈಸುವಂತೆ ತನ್ನ ಪತ್ನಿಯಾದ ಪದ್ಮಾವತಿಯನ್ನು ನಾಟ್ಯವಾಡಿಸುತ್ತಿದ್ದನಲ್ಲದೆ 'ಮಧುರ ಕೋಮಲಕಾಂತಿ ಪದಾವಳಿಯ' ಪ್ರಯೋಗದಿಂದ ತನ್ನ ಕಾವ್ಯದಲ್ಲಿ ಸಾಕ್ಷಾತ್ ಸರಸ್ವತಿಯನ್ನೇ ಕುಣಿಸಿ ಬಿಟ್ಟಿದ್ದಾನೆ. ಕುಲಶೇಖರ ಆಳ್ವಾರರ ಮುಕುಂದ ಮಾಲಾ ಸ್ತೋತ್ರದಂತೆಯೇ ಇದೂ ಸಹ ಗಾನಕುಶಲರ ಮೆಚ್ಚುಗೆಗೆ ಪಾತ್ರವಾಗಿದೆ.

ತತ್ವದೃಷ್ಟಿಯಿಂದ ಈ ಜಗತ್ತು ಒಂದು ಬೃಂದಾವನ. ಅದರಲ್ಲಿ ಕಾಮಗಂಧ ವಿಹೀನವಾದ ಪ್ರೇಮಿಕ ಪುರುಷನಾದ ಶ್ರೀಕೃಷ್ಣನು ರಾಧೆಯೊಡನೆ ಕ್ರೀಡಿಸುತ್ತಾನೆ. ಇವನೇ ಪರಮ ಪುರುಷ, ಪರಮಾತ್ಮ ಅಥವಾ ಪರಬ್ರಹ್ಮ, ರಾಧೆಯೇ ಜೀವಾತ್ಮ ಜೀವಾತ್ಮನು ಪರಮಾತ್ಮನೊಡನೆ ಬಯಸುವ ಸಂಶ್ಲೇಷೆಯೇ ರಾಧಾಕೃಷ್ಣರ ಪ್ರೇಮ ವಿಹಾರ. ಮುಕುಂದನ ಸುತ್ತಲೂ ಚಕ್ರಾಕಾರದಲ್ಲಿ ನರ್ತಿಸುವ ಗೋಪಿಯರು ಭೂಲೋಕದ ಜೀವಿಗಳ ಪ್ರತಿನಿಧಿಗಳು. ಈ ಲಲನಾ ಚಕ್ರದ ನೇಮಿಯಾದ ಮುರಳೀಧರನು ಜಗನ್ನಾಟಕ ಸೂತ್ರಧಾರ. ಈ ಜಗಜ್ಜೀವನವೇ ಅವನು ಅಭಿನಯಿಸುತ್ತಿರುವ ಮಹಾರಾಸಲೀಲೆ. ರಾಗ ಭೋಗಗಳ ಬಣ್ಣ ಬಣ್ಣದ ಜ್ವಾಲೆಯಿಂದ ಆಕರ್ಷಿತರಾಗಿ ಅದರಲ್ಲಿ ಪತಂಗಗಳಂತೆ ಮುನ್ನುಗ್ಗುತ್ತಿರುವ ಮಾನವರನ್ನು ಮೋಹಕವಾದ ವೇಣುಗಾನದಿಂದ ತನ್ನೆಡೆಗೆ ಸೆಳೆದುಕೊಳ್ಳುತ್ತಿದ್ದಾನೆ.

ಮತ್ತೊಂದು ದೃಷ್ಟಿಯಿಂದ ರಾಧೆಯೇ ಜಗನ್ಮಾತೆ, ಜಗದ್ಧಾತ್ರಿ. ಆಕೆಯ ಸಂಕಲ್ಪವಿನಾ ಶ್ರೀ ಕೃಷ್ಣನ ಅನುಗ್ರಹವು ಎಂದಿಗೂ ಲಭಿಸಲಾರದು. ಆಕೆ ಜೀವರ ಬಂಧವಿಮೋಚನೆ ಮಾಡಿ, ಅವರಿಗೆ ಮೋಕ್ಷವನ್ನೀಯುವಂತೆ ತನ್ನ ಪತಿಯಾದ ಶ್ರೀ ಕೃಷ್ಣನಲ್ಲಿ ಬಿನ್ನೈಸಿಕೊಳ್ಳುತ್ತಾಳೆ. ಗೀತಗೋವಿಂದದಲ್ಲಿ ಸಾರಿರುವ ತತ್ವವು ಭಗವದ್ಗೀತೆಯಲ್ಲಿ ಅಡಗಿದೆ ಎಂದು ವಿದ್ವಾಂಸರ ಅಭಿಪ್ರಾಯ. ಇದಕ್ಕೆ ನಿದರ್ಶನವಾಗಿ ಗೀತಗೋವಿಂದದಲ್ಲಿ ನಾಲ್ಕನೆಯ ಸರ್ಗದ ಒಂಭತ್ತನೆಯ ಶ್ಲೋಕವೂ, ಭಗವದ್ಗೀತೆಯ ಐದನೆಯ ಸರ್ಗದ ಒಂಭತ್ತನೆಯ ಶ್ಲೋಕವೂ ಒಂದೇ ತತ್ವವನ್ನು ಸಾರುತ್ತವೆ ಎಂದಿದ್ದಾರೆ. ಭಗವದ್ಗೀತೆಯು ವೇದಾಂತ ಸ್ವರೂಪ. ಗೀತಗೋವಿಂದವು ದೈವಿಕ ಶೃಂಗಾರ ಸ್ವರೂಪ

ಈ ಕಾವ್ಯದಲ್ಲಿ ವೈಶಿಷ್ಟ್ಯವೇನೆಂದರೆ ರಾಗಮಾಧುರ್ಯವನ್ನು ಹೊರಹೊಮ್ಮಿಸುವಂತೆ ಮಾಡಲು ಪದಗಳ ಅಪೂರ್ವ ಜೋಡಣೆ. ಇಲ್ಲಿಯ ಪದಲಾಲಿತ್ಯವನ್ನು ಮೆಚ್ಚಬೇಕಾದರೆ ಸಂಸ್ಕೃತದ ಮೂಲಗ್ರಂಥವನ್ನು ಓದಬೇಕು. ಮೂಲದಲ್ಲಿ ಪ್ರತಿ ಒಂದು ಶ್ಲೋಕಕ್ಕೂ ಒಂದು ರಾಗ ಮತ್ತು ತಾಳವನ್ನು ಕೊಟ್ಟಿದೆ ಆದರೆ ಈಗ ಅವುಗಳನ್ನು ಬೇರೆ ಬೇರೆ ರಾಗಗಳಲ್ಲಿ ಹಾಡುತ್ತಾರೆ. ರಾಣಾ ಕುಂಭನು ತನ್ನ ಕಾಲದಲ್ಲಿ ಬಳಕೆಯಲ್ಲಿದ್ದವು ಎಂದು ಹೇಳಲಾಗಿರುವ ರಾಗಗಳನ್ನು ಕೊಟ್ಟಿದ್ದಾನೆ. ಉತ್ತರ ಭಾರತದಲ್ಲಿ ಒಂದೊಂದು ಕಡೆ ಒಂದೊಂದು ರಾಗವು ಬಳಕೆಯಲ್ಲಿದೆ. ಕೇದಾರ, ಗುರ್ಜರೀ, ಗುಣಕರೀ, ದೇಶಾಂಕ, ಭೈರವ, ವರಾಢಿ, ವಿಭಾಸ ರಾಗಗಳಲ್ಲಿ ಸುಂದರವಾದ ಸರ್ಗಗಳನ್ನು ಗೇಯಗುಣ ಪ್ರಧಾನವಾಗಿ ರಚಿಸಿದ್ದಾನೆ. ಈ ದೃಷ್ಟಿಯಿಂದಲೂ ಗೀತಗೋವಿಂದವು ಶ್ರವಣಸುಖಕ್ಕೆ ಪ್ರೌಢ ನಿದರ್ಶನವಾದ ಅತ್ಯುತ್ತಮ ಕಾವ್ಯ. ಪಾಂಡಿತ್ಯ, ರಸಿಕತೆ, ಭಕ್ತಿಗಳ ಮಧುರ ಸಂಗಮವನ್ನು ಕಾಣಬಹುದು. ಕರ್ಣಾಟಕ ಸಂಗೀತದ ರಾಗಗಳನ್ನು ಕೊಟ್ಟಿರುವವರು ತಿರುಮಲ ರಾಜಪಟ್ಟಣದ ರಾಮುಡು ಭಾಗವತರು

ಗೀತಗೋವಿಂದದ ಅಷ್ಟಪದಿಗಳು ಅಖಿಲ ಭಾರತದ ಪ್ರಸಿದ್ಧಿ ಪಡೆದಿವೆ. ಸಂಗೀತ ಕಚೇರಿಗಳಲ್ಲಿ ಒಂದೆರಡು ಅಷ್ಟಪದಿಗಳನ್ನು ಹಾಡುವ ಸಂಪ್ರದಾಯವಿದೆ. ಸಂಗೀತವು ಕರ್ಣಾಟಕ ಮತ್ತು ಹಿಂದೂಸ್ಥಾನಿ ಎಂಬ ಎರಡು ಶಾಖೆಗಳಾಗುವ ಮುನ್ನವೇ ಈ ಕಾವ್ಯವನ್ನು ರಚಿಸಲಾಗಿತ್ತು. ಈ ಅಷ್ಟಪದಿಗಳು ದ್ವಿಧಾತು ಪ್ರಬಂಧಗಳು. ಇದರಲ್ಲಿ ಉದ್ಗ್ರಾಹ ಮತ್ತು ಧ್ರುವ ಎಂಬ ಎರಡು ಭಾಗಗಳಿವೆ. ಇವೇ ಮುಂದೆ ಪಲ್ಲವಿ ಮತ್ತು ಚರಣ ಎಂದಾದುವು. ಈ ಕಾವ್ಯದಲ್ಲಿ ದ್ವಿತೀಯಾಕ್ಷರ ಪ್ರಾಸವಿಲ್ಲ. ಅಂತ್ಯ ಪ್ರಾಸಗಳಿವೆ. ವಾಗ್ಗೇಯಕಾರರಲ್ಲಿ ಜಯದೇವನ ಸ್ಥಾನ ಹಿರಿದಾದುದು. ಪ್ರತಿಯೊಂದು ಗೀತೆಯ ಕೊನೆಯಲ್ಲಿ ಮಂಗಳ ಶ್ಲೋಕಗಳಿವೆ. ಜಯದೇವನು ಈ ಕಾವ್ಯವನ್ನು ರಚಿಸಿ ಪೂರ್ತಿಗೊಳಿಸಿದ ಸ್ಥಳಕ್ಕೆ ಜಯದೇವಪುರ

ವೆಂದು ಹೆಸರು. ಹರಿಸ್ಮರಣೆಯನ್ನೇ ಕಾವ್ಯದ ಪರಮಪ್ರಯೋಜನವನ್ನಾಗಿಟ್ಟು ಕೊಂಡ ಕವಿಯು ಈ ಅಷ್ಟಪದಿಗಳನ್ನು ಇಂತಹ ರಾಗಗಳು ಮತ್ತು ತಾಳಗಳಲ್ಲಿ ಹಾಡಬೇಕೆಂದು ಸೂಚಿಸಿದ್ದಾನೆ. ಕಾಲಕ್ರಮದಲ್ಲಿ ಇವುಗಳಲ್ಲಿ ಬಹಳ ವ್ಯತ್ಯಾಸಗಳಿವೆ. ಅವನು ಹೇಳಿರುವ ರಾಗಗಳಾವುವೆಂದರೆ—

ಅಷ್ಟಪದಿ ೧ — ರಾಗ—ಮಾಲವ — ತಾಳ—ರೂಪಕ
ಅಷ್ಟಪದಿ ೨ — ರಾಗ—ಗುರ್ಜರೀ — ತಾಳ—ನಿಃಸಾರು
ಅಷ್ಟಪದಿ ೩ — ರಾಗ—ವಸಂತ — ತಾಳ—ಯತಿತಾಳ
ಅಷ್ಟಪದಿ ೪ — ರಾಗ—ರಾಮಕರಿ — ತಾಳ—ಯತಿತಾಳ
ಅಷ್ಟಪದಿ ೫ — ರಾಗ—ಗುರ್ಜರೀ — ತಾಳ—ಯತಿತಾಳ
ಅಷ್ಟಪದಿ ೬ — ರಾಗ—ಮಾಲವಗೌಡ — ತಾಳ—ಏಕತಾಲೀ
ಅಷ್ಟಪದಿ ೭ — ರಾಗ—ಗುರ್ಜರೀ — ತಾಳ—ಯತಿ
ಅಷ್ಟಪದಿ ೮ — ರಾಗ—ಕರ್ಣಾಟ — ತಾಳ—ಏಕತಾಲೀ
ಅಷ್ಟಪದಿ ೯ — ರಾಗ—ದೇಶಾಖ್ಯ — ತಾಳ—ಏಕತಾಲೀ
ಅಷ್ಟಪದಿ ೧೦ — ರಾಗ—ದೇಶೀವರಾಟೀ — ತಾಳ—ರೂಪಕ
ಅಷ್ಟಪದಿ ೧೧ — ರಾಗ—ಗುರ್ಜರೀ — ತಾಳ—ಏಕತಾಲೀ
ಅಷ್ಟಪದಿ ೧೨ — ರಾಗ—ಗೌಂಡಕರೀ — ತಾಳ—ರೂಪಕ
ಅಷ್ಟಪದಿ ೧೩ — ರಾಗ—ಮಾಲವ — ತಾಳ—ಯತಿ
ಅಷ್ಟಪದಿ ೧೪ — ರಾಗ—ವಸಂತ — ತಾಳ—ಯತಿ
ಅಷ್ಟಪದಿ ೧೫ — ರಾಗ—ಗುರ್ಜರೀ — ತಾಳ—ಏಕತಾಲೀ
ಅಷ್ಟಪದಿ ೧೬ — ರಾಗ—ದೇಶವರಾಟೀ — ತಾಳ—ರೂಪಕ
ಅಷ್ಟಪದಿ ೧೭ — ರಾಗ—ಭೈರವೀ — ತಾಳ—ಯತಿ
ಅಷ್ಟಪದಿ ೧೮ — ರಾಗ—ಗುರ್ಜರೀ — ತಾಳ—ಯತಿ
ಅಷ್ಟಪದಿ ೧೯ — ರಾಗ—ದೇಶವರಾಲೀ — ತಾಳ—ಅಷ್ಟ
ಅಷ್ಟಪದಿ ೨೦ — ರಾಗ—ವಸಂತ — ತಾಳ—ಯತಿ
ಅಷ್ಟಪದಿ ೨೧ — ರಾಗ—ವರಾಲೀ — ತಾಳ—ರೂಪಕ
ಅಷ್ಟಪದಿ ೨೨ — ರಾಗ—ವರಾಲೀ — ತಾಳ—ಯತಿ
ಅಷ್ಟಪದಿ ೨೩ — ರಾಗ—ವಿಭಾಸ — ತಾಳ—ಏಕತಾಲೀ
ಅಷ್ಟಪದಿ ೨೪ ನೇ ಪ್ರಬಂಧ — ದೇವಶಾಖಾ — ತಾಳ—ಜಯಮಂಗಳ
ಅಷ್ಟಪದಿ ೨೫ — ರಾಗ—ಗೌಡೀ — ತಾಳ—ವಿಜಯಾನಂದ
ಅಷ್ಟಪದಿ ೨೬ — ರಾಗ—ಕರ್ಣಾಟ ಬಂಗಾಲ — ತಾಳ—ವಿಜಯಾನಂದ
ಅಷ್ಟಪದಿ ೨೭ — ರಾಗ—ಮರುತ್ ಕೃತಿ — ತಾಳ—ಪ್ರತಿಕಾಲ
ಅಷ್ಟಪದಿ ೨೮ — ರಾಗ—ರಾಮಕರೀ — ತಾಳ—ಯತಿ

ಅಷ್ಟಪದಿಗಳ ಗಾಯನವು ದಕ್ಷಿಣ ಭಾರತದಲ್ಲಿ ಪ್ರಾರಂಭವಾದುದು ೧೭ನೆ ಶತಮಾನದಲ್ಲಿ. ತಮಿಳುನಾಡು, ಆಂಧ್ರ, ಕೇರಳ, ಕರ್ಣಾಟಕದಲ್ಲಿ ಏಕರೂಪವಾದ ಶೈಲಿಯ ಗಾಯನ ಕಂಡುಬರುವುದಿಲ್ಲ. ಒಂದೊಂದು ಪ್ರದೇಶದಲ್ಲೂ ಭಿನ್ನತೆ ಕಂಡು ಬರುತ್ತದೆ.

ಗೀತಗೋವಿಂದದ ಒಂದೊಂದು ಸರ್ಗದ ಹೆಸರೂ ಮನೋಹರವಾಗಿದೆ. ಕೃಷ್ಣನು ಕಾವ್ಯದ ಏಕೈಕ ನಾಯಕ. ಅವನ ಸ್ವಭಾವ ಧೀರಲಲಿತ ಮತ್ತು ಕಾವ್ಯದ ಕ್ರಿಯೆ ಕೃಷ್ಣನ ಶೃಂಗಾರ ಎಂಬುದು ಈ ಹೆಸರುಗಳಿಂದಲೇ ಹೇಳಬಹುದು. ಗೀತ ಗೋವಿಂದದ ಸರ್ಗಗಳ ತಾತ್ಪರ್ಯವನ್ನು ಹೀಗೆ ಸಂಗ್ರಹಿಸಬಹುದು—

**ಪ್ರಥಮ ಸರ್ಗ—ಸಾಮೋದದಾಮೋದರಂ—ಅಷ್ಟಪದಿಗಳು—೧-೪** ಈ ಸರ್ಗದ ಮೊದಲಲ್ಲೇ ದಶಾವತಾರಗಳನ್ನು ಮಾಡಿದ ಕೃಷ್ಣನಿಗೆ ನಮಸ್ಕಾರವಿದೆ. ಜಯಜಗದೀಶ ಹರೇ ಎಂಬ ಪಲ್ಲವಿಯಿಂದ ದಶಾವತಾರಗಳನ್ನು ವರ್ಣಿಸಲಾಗಿದೆ. ವಸಂತಋತುವಿನ ವರ್ಣನೆ, ಕೃಷ್ಣನು ಗೋಪಿಕಾಸ್ತ್ರೀಯರೊಂದಿಗೆ ಕಾಲಕಳೆಯು ತ್ತಿದ್ದುದನ್ನು ಸಖಿಯು ರಾಧೆಗೆ ವರ್ಣಿಸುತ್ತಾಳೆ.

**ಎರಡನೆಯ ಸರ್ಗ— ಅಕ್ಲೇಶ ಕೇಶವ—ಅಷ್ಟಪದಿಗಳು – ೫-೬** ತಾನೊಬ್ಬಳೇ ಕೃಷ್ಣನ ಪ್ರೇಮಕ್ಕೆ ಅರ್ಹಳು ಎಂಬ ರಾಧೆಯ ಅಹಂಭಾವವು ನಶಿಸಿ ಹೋಗುವುದು. ಕೃಷ್ಣನಲ್ಲಿ ಏನೇ ತಪ್ಪಿದ್ದರೂ ಅವನೊಂದಿಗೆ ಇದ್ದ ಸವಿನೆನಪುಗಳನ್ನು ಮರೆಯಲಾಗದೆಂದು ರಾಧೆ ತನ್ನ ಸಖಿಗೆ ಹೇಳುತ್ತಾಳೆ. ಹೇಗಾದರೂ ಮಾಡಿ ಕೃಷ್ಣನನ್ನು ಸಂಧಿಸಲು ಏರ್ಪಾಡು ಮಾಡಬೇಕೆಂದು ಹೇಳುತ್ತಾಳೆ.

**ಮೂರನೆಯ ಸರ್ಗ—ಮುಗ್ಧ ಮಧುಸೂದನ — ಅಷ್ಟಪದಿ—೭** ಕೃಷ್ಣನು ರಾಧೆಯನ್ನು ಮರೆತುದಕ್ಕೆ ಪಶ್ಚಾತ್ತಾಪ ಪಡುತ್ತಾನೆ.

**ನಾಲ್ಕನೆಯ ಸರ್ಗ—ಸ್ನಿಗ್ಧ ಮಧುಸೂದನ—ಅಷ್ಟಪದಿ—೮-೯** ಸಖಿಯು ರಾಧೆಯ ಮನಸ್ಸಿನ ಹೊಯ್ದಾಟವನ್ನು ಕೃಷ್ಣನಿಗೆ ತಿಳಿಸುತ್ತಾಳೆ.

**ಐದನೆ ಸರ್ಗ—ಸಾಕಾಂಕ್ಷ ಪುಂಡರೀಕಾಕ್ಷ - ಅಷ್ಟಪದಿ—೧೦-೧೧** ರಾಧೆಯನ್ನು ಸಂತೈಸಿ ಕರೆತರುವಂತೆ ಕೃಷ್ಣನು ಸಖಿಗೆ ಹೇಳುತ್ತಾನೆ. ಸಖಿಯು ರಾಧೆಯನ್ನು ಕಂಡು ಕೃಷ್ಣನ ಅಭೀಷ್ಟವನ್ನು ತಿಳಿಸುತ್ತಾಳೆ

**ಆರನೆಯ ಸರ್ಗ—ಧೃಷ್ಟವೈಕುಂಠ (ಸೋತ್ಕಂಠವೈಕುಂಠ)— ಅಷ್ಟ ಪದಿ—೧೨**—ಸಖಿಯು ಪುನಃ ಕೃಷ್ಣನ ಬಳಿಗೆ ಬಂದು ರಾಧೆಯ ಮನಸ್ಸು ಸ್ಥಿಮಿತ ವಿಲ್ಲದ ಪ್ರಯುಕ್ತ ಅವಳಿಗೆ ಕೃಷ್ಣನ ಬಳಿ ಬರಲು ಸಾಧ್ಯವಿಲ್ಲವೆಂದೂ, ಕೃಷ್ಣನೇ ಆಕೆಯ ಬಳಿ ಹೋಗಬೇಕೆಂದೂ ತಿಳಿಸುತ್ತಾಳೆ.

**ಏಳನೆಯ ಸರ್ಗ—ನಾಗರನಾರಾಯಣ (ನಾಗರಿಕನಾರಾಯಣ)— ಅಷ್ಟಪದಿ—೧೩-೧೬** – ಚಂದ್ರೋದಯವಾಗಿದೆ. ಕೃಷ್ಣನು ತನ್ನ ಬಳಿಗೆ ಬರಲಿಲ್ಲ. ಮತ್ತಾರೋ ಗೋಪಿಗೆ ಕೃಷ್ಣನ ಸಹವಾಸ ಲಭಿಸಿದೆ. ಆಕೆಗೆ ತನ್ನಂತೆ ವ್ಯಥೆಯೇನೂ

ಆಗುವುದಿಲ್ಲ. ಆದರೆ ತನಗೆ ಮಾತ್ರ ತೀವ್ರ ವ್ಯಥೆಯಾಗಿದೆ ಎಂದು ರಾಧೆಯು ಪ್ರಲಾಪಿಸುವಳು.

**ಎಂಟನೆಯ ಸರ್ಗ - ವಿಲಕ್ಷ್ಯ ಲಕ್ಷ್ಮೀಪತಿ—ಅಷ್ಟಪದಿ-೧೭—** ರಾತ್ರಿಯು ಕಳೆದು ಬೆಳಗಾಯಿತು. ರಾಧೆಗೆ ಬಹಳ ಕೋಪ ಬಂದಿತು. ಆ ವೇಳೆಗೆ ಸರಿಯಾಗಿ ಕೃಷ್ಣನು ಅವಳ ಬಳಿ ಬಂದು ತನ್ನನ್ನು ಕ್ಷಮಿಸಬೇಕೆಂದು ಕೇಳುವನು. ಆದರೂ ರಾಧೆಯು ಅವನನ್ನು ಕಟುವಾಗಿ ಟೀಕಿಸುವಳು.

**ಒಂಭತ್ತನೆಯ ಸರ್ಗ — ಮುಗ್ಧಮುಕುಂದ— ಅಷ್ಟಪದಿ-೧೮—** ಕೃಷ್ಣನು ನಿರಾಶನಾಗಿ ಹೊರಟು ಹೋಗುವನು. ಅದನ್ನು ಕಂಡ ಸಖಿಯು ರಾಧೆಯನ್ನು ಅವಳು ಮಾಡಿದ ಕೆಲಸವು ತಪ್ಪೆಂದೂ, ಅದರಿಂದ ಕೃಷ್ಣನು ಕೋಪಗೊಂಡು ಬರದೇ ಹೋದರೆ ಏನು ಮಾಡುವೆ ಎಂದು ಹೀಯ್ಯಾಳಿಸುವಳು.

**ಹತ್ತನೆಯ ಸರ್ಗ —ಚತುರ ಚತುರ್ಭುಜ —ಅಷ್ಟಪದಿ-೧೯—**ಆದರೆ ಆ ದಿನ ಸಂಜೆ ಕೃಷ್ಣನು ಮರಳಿ ರಾಧೆಯ ಬಳಿ ಬಂದು ನಡೆದುದನ್ನು ಮರೆತು ಬಿಡುವಂತೆ ಕೇಳಿಕೊಳ್ಳುವನು

**ಹನ್ನೊಂದನೆಯ ಸರ್ಗ — ಸಾನಂದದಾಮೋದರ —ಅಷ್ಟಪದಿ - ೨೦-೨೨—**ಸಖಿಯು ರಾಧೆಯ ಅದೃಷ್ಟವನ್ನು ಕೊಂಡಾಡುವಳು. ಕೃಷ್ಣನನ್ನು ಮಾಮೂಲು ಸ್ಥಳದಲ್ಲಿ ಸಂಧಿಸಬೇಕೆಂದು ರಾಧೆಯನ್ನು ಪ್ರೇರೇಪಿಸುವಳು. ರಾಧೆಯು ಶೃಂಗರಿಸಿಕೊಂಡು ಹೊರಟು ಕೃಷ್ಣನನ್ನು ಲತಾಗೃಹದ ಬಳಿ ಸಂಧಿಸುವಳು.

**ಹನ್ನೆರಡನೆ ಸರ್ಗ—ಸುಪ್ರೀತ ಪೀತಾಂಬರ-ಅಷ್ಟಪದಿ-೨೩-೨೪—** ರಾಧೆಯ ಜೊತೆಯಲ್ಲಿ ಬಂದ ಸಖಿಯರೆಲ್ಲರೂ ಒಂದೊಂದು ನೆಪ ಹೇಳಿ ಹೊರಟು ಹೋಗುವರು. ರಾಧಾಕೃಷ್ಣರು ಆನಂದದಿಂದ ಕೂಡಿ ನಲಿಯುತ್ತಾರೆ.

ಗೀತ ಗೋವಿಂದದ ೨೪ ಅಷ್ಟಪದಿಗಳೂ ಅಭಿನಯಕ್ಕೆ ಯೋಗ್ಯವಾಗಿವೆ. ಇದರ ಪ್ರತಿಯೊಂದು ಮಾತಿಗೂ ಅಭಿನಯವನ್ನು ಸೂಚಿಸುವ ವ್ಯಾಖ್ಯಾನಗಳಿವೆ. ಅಪ್ರಮೇಯಶಾಸ್ತ್ರಿ ಮತ್ತು ಪೆರಿಯಸ್ವಾಮಿ ತಿರುಮಲಾಚಾರ್ಯರು ಅಷ್ಟಪದಿಗಳಿಗೆ ಟೀಕನ್ನು ಕನ್ನಡದಲ್ಲಿ ಬರೆದಿದ್ದಾರೆ.

ಗೀತಗೋವಿಂದವು ನಮ್ಮ ಸಂಗೀತ ಸಾಹಿತ್ಯ ಸಂಸ್ಕೃತಿಗಳ ಮೇಲೆ ಬಹುವಾಗಿ ಪ್ರಭಾವ ಬೀರಿದೆ. ಇದೇ ಹೆಸರು ಮತ್ತು ವಸ್ತುವನ್ನುಳ್ಳ ಅನೇಕ ಕಾವ್ಯಗಳನ್ನು ಸಂಸ್ಕೃತ ಮತ್ತು ದೇಶ ಭಾಷೆಗಳಲ್ಲಿ ಹಲವರು ರಚಿಸಿದ್ದಾರೆ ಹರಿಶಂಕರನ ಗೀತರಾಘವ, ಪ್ರಭಾಕರನ ಗೀತರಾಘವ, ಭಾನುದತ್ತನ ಗೀತ ಗೌರೀಪತಿ, ಕಲ್ಯಾಣ ಕವಿಯ ಗೀತಗಂಗಾಧರ, ರಾಮಭಟ್ಟನ ಗೀತ ಗಿರೀಶ, ವಂಶ ಮಣಿಯ ಗೀತದಿಗಂಬರ, ಚತುರ್ಭುಜನ ಗೀತಗೋಪಾಲ, ಪುರುಷೋತ್ತಮ ಮಿಶ್ರನ ಅಭಿನವ ಗೀತಗೋವಿಂದ, ಸದಾಶಿವ ದೀಕ್ಷಿತನ ಗೀತಸುಂದರಂ, ಅನಂತ ನಾರಾಯಣನ ಗೀತಶಂಕರಂ, ತಿರುಮಲನ ಗೀತಗೌರೀ ಮುಂತಾದುವು ಇಂತಹ ಕಾವ್ಯಗಳು. ಹೀಗೆಯೇ ಗೇಯ

ಕಾವ್ಯಗಳನ್ನು ಹಲವರು ರಚಿಸಿದ್ದಾರೆ. ಇಂತಹವುಗಳಲ್ಲಿ ವೆಂಕಟಮಖಿಯ ತ್ಯಾಗರಾಜಾಷ್ಟಪದಿ, ಶಾಹಜೀಯ ಅಷ್ಟಪದೀಕಾವ್ಯ, ಉಪನಿಷದ್ ಬ್ರಹ್ಮನ ರಾಮಾಷ್ಟಪದಿ, ಚಂದ್ರಶೇಖರೇಂದ್ರ ಸರಸ್ವತಿಯ ಶಿವಾಷ್ಟಪದಿ, ಮೈಸೂರಿನ ವೆಂಕಟಪ್ಪ ನಾಯಕನ ಶಿವಾಷ್ಟಪದಿ ಮುಂತಾದುವುಗಳನ್ನು ಹೆಸರಿಸಬಹುದು. ಕನ್ನಡದಲ್ಲಿ ಚಿಕ್ಕ ದೇವರಾಜ ಒಡೆಯರ ಗೀತಗೋಪಾಲ ಮತ್ತು ತಿರುಮಲಾರ್ಯ ವಿರಚಿತ ಚಿಕ್ಕದೇವ ರಾಯ ಸಪ್ತಪದಿ, ಕಳಲೆ ನಂಜರಾಜ ವಿರಚಿತ ಸಂಸ್ಕೃತದ ಗೀತಗಂಗಾಧರ ಇವು ಕರ್ಣಾಟಕದ ಕೊಡುಗೆಗಳು.

**ಗೀತಸುಂದರಂ**—ಇದು ಸದಾಶಿವ ದೀಕ್ಷಿತರು ಶಿವ ಮತ್ತು ಪಾರ್ವತಿಯನ್ನು ಕುರಿತು ಜಯದೇವ ಕವಿಯ ಗೀತ ಗೋವಿಂದ ಕಾವ್ಯದ ಮಾದರಿಯಲ್ಲಿ ರಚಿಸಿರುವ ಸಂಸ್ಕೃತ ಕಾವ್ಯ.

**ಗೀತಶಂಕರ**—ಜಯದೇವನ ಗೀತ ಗೋವಿಂದ ಕಾವ್ಯದ ಮಾದರಿಯಲ್ಲಿ ಅನಂತನಾರಾಯಣ ಎಂಬ ಕವಿ ರಚಿಸಿರುವ ಒಂದು ಸಂಸ್ಕೃತ ಕಾವ್ಯ. ಇದು ತಂಜಾವೂರಿನ ಸರಸ್ವತೀ ಮಹಲ ಗ್ರಂಥಾಲಯದಲ್ಲಿದೆ.

**ಗೀತಾನುಗ**—ಗಾಯನದಲ್ಲಿ ಪಕ್ಕವಾದ್ಯಗಳಾಗಿ ನುಡಿಸಲಾಗುವ ವಾದ್ಯಗಳಿಗೆ ಗೀತಾನುಗವೆಂದು ಹೆಸರು. ಪಿಟೀಲು, ಸಾರಂಗಿ, ಹಾರ್ಮೋನಿಯಂ ವಾದ್ಯಗಳು ಗೀತಾನುಗ.

**ಗೀತಾಯನ**—ಸಂಗೀತ ವಾದ್ಯಗಳಾದ ವೀಣೆ ಮತ್ತು ಕೊಳಲೇ ಮುಂತಾದುವು ಗೀತಾಯನ ವಾದ್ಯಗಳು.

**ಗೀರ್ವಾಣಪದ**—ಈ ರಾಗವು ೭೨ನೆ ಮೇಳಕರ್ತ ರಸಿಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗೀರ್ವಾಣಪ್ರಿಯ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ನಿ ದ ಮ ಗ ರಿ ಸ

**ಗೀರ್ವಾಣಿ**—(೧) ಈ ರಾಗವು ೪೩ನೆ ಮೇಳಕರ್ತ ಗವಾಂಭೋದಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಗ ಮ ದ ನಿ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

(೨) ಅಸಂಪೂರ್ಣ ಮೇಳಪದ್ಧತಿಯಲ್ಲಿ ಇದು ೪೩ನೆ ರಾಗಾಂಗರಾಗ.

ಆ: ಸ ರಿ ಗ ಮ ಪ ದ ನಿ ದ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ಮುತ್ತುಸ್ವಾಮಿ ದೀಕ್ಷಿತರು ರಚಿಸಿರುವ ' ನಮೋ ನಮಸ್ತೇ ' ಎಂಬ ಕೃತಿಯು ಈ ರಾಗದಲ್ಲಿದೆ.

**ಗ್ರೀವಾ ಭೇದಗಳು**—ಭರತನಾಟ್ಯದಲ್ಲಿ ಗ್ರೀವಾ ಭೇದಗಳೆಂದರೆ ಕತ್ತಿನ ಚಲನೆಗಳು. ಭರತಮುನಿ ಹೇಳಿರುವ ಭೇದಗಳು ಒಂಭತ್ತು ವಿಧ. ಅವು—ಸಮ, ನತ, ಉನ್ನತ, ತ್ರ್ಯಶ್ರ, ರೇಚಿತ, ಕುಂಚಿತ, ಅಂಚಿತ, ವಲಿತ ಮತ್ತು ವಿವೃತ್ತ. ನಂದಿಕೇಶ್ವರನ ರೀತ್ಯಾ ಗ್ರೀವಾ ಭೇದಗಳು ನಾಲ್ಕು. ಅವು—ಸುಂದರಿ, ತಿರಶ್ಚೀನ, ಪರಿವರ್ತಿತಾ ಮತ್ತು ಪ್ರಕಂಪಿತ.

**ಗ್ರೀಷ್ಮಾವಳಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ದ ಮ ಗ ರಿ ಸ

**ಗು**—ಸಪ್ತ ಸ್ವರಗಳ ಸ್ವರಸ್ಥಾನ ಸೂಚಕಗಳಲ್ಲಿ ಅಂತರ ಗಾಂಧಾರದ ಸಂಜ್ಞಾಸೂಚಕ ಅಕ್ಷರ. ೨೨ ಶ್ರುತಿಗಳಲ್ಲಿ ಅಂತರ ಗಾಂಧಾರ ಶ್ರುತಿ ಅಥವಾ ಮೂರನೆಯ ಶ್ರುತಿಯನ್ನು ಸೂಚಿಸುವ ಸಂಜ್ಞಾಕ್ಷರ.

**ಗುಜ್ಜರಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ. ಇದಕ್ಕೆ ಘೂರ್ಜರಿ ಎಂದೂ ಹೆಸರು.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ನಿ ಪ ಮ ಗ ರಿ ಸ

ಬೃಹದ್ಧರ್ಮ ಪುರಾಣ, ಸಂಗೀತ ಮಕರಂದ. ಸಂಗೀತ ರತ್ನಾಕರ ಇತ್ಯಾದಿ ಗ್ರಂಥಗಳಲ್ಲಿ ಉಕ್ತವಾಗಿರುವ ಪುರಾತನ ರಾಗ. ಬೇರೆ ಬೇರೆ ಪ್ರದೇಶಗಳಲ್ಲಿ ಈ ರಾಗವು ಪ್ರಚಲಿತ ವಾಗಿದ್ದು ದ್ರಾವಿಡ ಗುಜ್ಜರಿ, ದಕ್ಷಿಣ ಗುಜ್ಜರಿ, ಮಹಾರಾಷ್ಟ್ರ ಗುಜ್ಜರಿ, ಸೌರಾಷ್ಟ್ರ ಗುಜ್ಜರಿ ಎಂಬ ಹೆಸರಿದ್ದಿತು. ಜಯದೇವನ ಒಂದು ಅಷ್ಟಪದಿಯು ಈ ರಾಗದಲ್ಲಿದೆ. ಈ ರಾಗದಲ್ಲಿ ತ್ಯಾಗರಾಜರ ' ವರಾಲಂದು ಕೊಮ್ಮನಿ (ಆದಿ) ಎಂಬ ಕೃತಿಯು ಪ್ರಸಿದ್ಧವಾಗಿದೆ

**ಗುಣಕರಿ**—ಇದು ಹಂಸವಿಲಾಸ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಭೈರವದ ಒಂದು ಜನ್ಯರಾಗ.

**ಗುಣಪ್ರಿಯ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗಾ ಮ ಸ ಪ ಮ ದ ನಿ ಸ

ಅ: ಸ ದ ನಿ ಪ ಮ ಗ ಸ ರಿ ಸ

**ಗುಣಭೂಷಣಿ**— ಈ ರಾಗವು ೩೭ನೆ ಮೇಳಕರ್ತ ಸಾಳಗದ ಒಂದು ಜನ್ಯರಾಗ.

ಆ : ಸ ರಿ ಗ ಮ ಮ ಪ ಸ
ಅ : ಸ ಪ ಮ ಗ ರಿ ಸ

**ಗುಣಾಚಾರ್ಯ**— ನಾಟ್ಯದರ್ಪಣವೆಂಬ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥವನ್ನು ಗುಣಾಚಾರ್ಯ ಮತ್ತು ರಾಮಚಂದ್ರ ಎಂಬ ಇಬ್ಬರೂ ಸೇರಿ ರಚಿಸಿದ್ದಾರೆ.

**ಗುಣಿತವಿನೋದಿನಿ** —ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ : ಸ ಗ ಮ ಪ ನಿ ಸ
ಅ : ಸ ನಿ ದ ಪ ಮ ಗ ರಿ ಸ

**ಗುತ್ತಿಲ** — ಬುದ್ಧನ ೨೪೩ನೆಯ ಜಾತಕದ ಕಥೆಯಲ್ಲಿ ಗುತ್ತಿಲನೆಂಬ ಒಬ್ಬ ಪ್ರಸಿದ್ಧ ಸಂಗೀತಗಾರನ ವಿಚಾರವು ಬರುತ್ತದೆ ಬುದ್ಧನು ತನ್ನ ಒಂದು ಪೂರ್ವಜನ್ಮದಲ್ಲಿ ಗುತ್ತಿಲನಾಗಿದ್ದನು. ಉಜ್ಜಯಿನಿಯ ಮೂಸಿಲನೆಂಬ ಸಂಗೀತಗಾರನು ಗುತ್ತಿಲನಲ್ಲಿ ವೀಣಾವಾದನದಲ್ಲಿ ಪ್ರೌಢ ಶಿಕ್ಷಣ ಪಡೆದನು ಕಾಲಾಂತರದಲ್ಲಿ ಇವನಿಗೆ ತನ್ನ ವಿದ್ಯಾಪ್ರೌಢಿಮೆಯ ಬಗ್ಗೆ ವಿಪರೀತ ಅಹಂಕಾರವುಂಟಾಗಿ ತನ್ನ ಗುರುವಿಗೆ ಸವಾಲು ಹಾಕಿದನು. ಗುತ್ತಿಲನು ವಾರಾಣಸಿಯ ಆಸ್ಥಾನ ವಿದ್ವಾಂಸನಾಗಿದ್ದನು ಅವನ ಸ್ಥಾನವನ್ನು ತಾನು ಆಕ್ರಮಿಸಬೇಕೆಂಬುದು ಶಿಷ್ಯನ ಉದ್ದೇಶ್ಯವಾಗಿತ್ತು. ಗುತ್ತಿಲನು ತನಗೆ ಜಯವನ್ನು ಕರುಣಿಸಬೇಕೆಂದು ದೇವರನ್ನು ಪ್ರಾರ್ಥಿಸಿದನು. ಪ್ರಾರಂಭದಲ್ಲಿ ಗುರುವಿನ ನಂತರ ಶಿಷ್ಯನು ನುಡಿಸಿದ ಮೇಲೆ ವಾದ್ಯದ ಒಂದೊಂದು ತಂತಿಯನ್ನು ಕಿತ್ತು ನುಡಿಸಬೇಕೆಂದೂ, ಕೊನೆಯ ತಂತಿಯೂ ಕಿತ್ತುಹೋದ ಮೇಲೂ, ಮರದ ಚೌಕಟ್ಟನ್ನೇ ನುಡಿಸಬೇಕೆಂದು ದೇವರ ಅಪ್ಪಣೆಯಾಯಿತು. ಗುತ್ತಿಲನು ಅದರಂತೆಯೇ ಮಾಡಿದನು ಆದರೆ ಮೂಸಿಲನಿಂದ ಇದು ಸಾಧ್ಯವಾಗದೇ ಸೋತನು ಈ ಘಟನೆಯು ಕ್ರಿಸ್ತಶಕಕ್ಕೆ ಹಲವು ಶತಾಬ್ದಿಗಳ ಹಿಂದೆಯೇ ನಡೆಯಿತು.

ಸವಾಲಿನ ದಿನ ಗುರುಶಿಷ್ಯರಿಬ್ಬರೂ ಏಳು ತಂತಿಯ ಹಾರ್ಪ್‌ವಾದ್ಯವನ್ನು ನುಡಿಸಬೇಕಾಗಿತ್ತು ಕಾಶಿಯ ರಾಜನಲ್ಲದೆ ಅನೇಕ ಸಂಗೀತ ವಿದ್ವಾಂಸರೂ, ಆಸ್ಥಾನಿಕರೂ ಹಾಜರಿದ್ದರು. ಗುರುವು ಏಳು ತಂತಿಗಳನ್ನು ನುಡಿಸುತ್ತಾ ಅಂದಿನ ಸವಾಲನ್ನು ಆರಂಭಿಸಿದನು. ಶಿಷ್ಯನೂ ಪ್ರತಿಯಾಗಿ ಉತ್ತಮವಾಗಿ ನುಡಿಸಿದನು. ನಂತರ ಗುರುವು ಒಂದು ತಂತಿಯನ್ನು ಕಿತ್ತುಹಾಕಿ ಇತರ ಆರು ತಂತಿಗಳಲ್ಲಿ ನುಡಿಸಿದನು. ಶಿಷ್ಯನೂ ಅದೇ ರೀತಿ ಮಾಡಿದನು ಹೀಗೆ ನುಡಿಸುತ್ತಾ ಕೊನೆಗೆ ಒಂದೇ ತಂತಿ ಉಳಿಯಿತು. ಶಿಷ್ಯನೂ ಸಹ ಅದೇ ರೀತಿ ಮಾಡಿ ಸ್ವಲ್ಪ ಕಷ್ಟದಿಂದ ನುಡಿಸಿದನು. ಕೊನೆಗೆ ಗುತ್ತಿಲನು ಕೊನೆಯ ತಂತಿಯನ್ನು ಕಿತ್ತುಹಾಕಿ ಮರದ ಚೌಕಟ್ಟಿನ ಮೇಲೆ ನುಡಿಸಿದನು. ಸಂಗೀತವು ಮೊದಲಿನಂತೆ ವೈವಿಧ್ಯಮಯ ಮತ್ತು ಸೊಗಸಾಗಿ ಮುಂದುವರಿಯಿತು. ಶಿಷ್ಯನಿಂದ ಮರದ ಚೌಕಟ್ಟನ್ನು ನುಡಿಸಲು ಸಾಧ್ಯವಾಗಲಿಲ್ಲ.

ಅವನ ಅಹಂಕಾರವು ಅಡಗಿತು. ಗುರುವಿಗೆ ಶರಣಾಗತನಾಗಿ ಅಪರಾಧಕ್ಷಾಪಣ ಮಾಡಿದನು.

**ಗುಮ್ಮಕಾಂಭೋಜಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗುಮ್ಕಿ**—ಮೃದಂಗವಾದನದಲ್ಲಿ ಗುಂಕಾರವನ್ನು ನುಡಿಸುವಿಕೆಗೆ ಗುಮ್ಕಿ ಎಂದು ಹೆಸರು. ಮೃದಂಗದ ಎಡಭಾಗವನ್ನು ತಟ್ಟಿ ಅಂಗೈಯಿಂದ ಮಧ್ಯಕ್ಕೆ ನುಡಿಸುವುದು ಬಲಭಾಗದ ಕರಣೆಯನ್ನು ಬೆರಳಿನಿಂದ ಬಾರಿಸಿದ ಕೂಡಲೆ ಎಡಗೈನ ನುಡಿಕಾರ ಪ್ರಾರಂಭವಾಗುತ್ತದೆ.

**ಗುಮ್ಮಾವಳಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಗುಮ್ಮದ್ಯುತಿ**—ಈ ರಾಗವು ೨೯ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗುರು**—(೧) ಇದು ಕರ್ಣಾಟಕ ಸಂಗೀತದ ತಾಳ ಪದ್ಧತಿಯ ಷಡಂಗಗಳಲ್ಲಿ ಒಂದು ಅಂಗ. ಇದರ ಕಾಲ ಪ್ರಮಾಣ ೨ ಮಾತ್ರೆಗಳು ಅಥವಾ ೮ ಅಕ್ಷರಕಾಲ. ಬಲಗೈಯಿಂದ ತಟ್ಟಿ ಒಂದು ಸುತ್ತು ಮುಷ್ಟಿಯನ್ನು ಪ್ರದಕ್ಷಿಣವಾಗಿ ಚಲಿಸುವ ಕ್ರಿಯೆ. (೨) ಭರತನಾಟ್ಯದ ಒಂದು ದೇವತಾ ಹಸ್ತ. ಎರಡು ಕೈಯಲ್ಲೂ ಶಿಖರ ಹಸ್ತವನ್ನು ಜನಿವಾರದಂತೆ ತೋರಿಸಿ, ನಂತರ ಬಲಗೈಯಲ್ಲಿ ಪತಾಕ ಹಸ್ತವನ್ನು ಹಿಡಿಯುವುದು.

**ಗುರುಗದ್ಯ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ

ಆ: ನಿ ಸ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ ಸ

**ಗುರುಗುಹ**—ಸಂಗೀತ ತ್ರಿರತ್ನರಲ್ಲಿ ಒಬ್ಬರಾದ ಮುತ್ತುಸ್ವಾಮಿ ದೀಕ್ಷಿತರು ತಮ್ಮ ಕೃತಿಗಳಲ್ಲಿ ಗುರುಗುಹ ಎಂಬ ಮುದ್ರೆಯನ್ನು ಬಳಸಿದ್ದಾರೆ. ಅವರ ಜೀವನದ ಒಂದು ಘಟನೆಯು ಈ ಅಂಕಿತದ ಬಳಕೆಗೆ ಕಾರಣವಾಯಿತು.

ದೀಕ್ಷಿತರು ವಾರಣಾಸಿಯಲ್ಲಿ ಹಲವು ವರ್ಷಗಳಿದ್ದು ದಕ್ಷಿಣ ಭಾರತಕ್ಕೆ ಹಿಂತಿರುಗಿದರು. ತಿರುತ್ತಣಿಗೆ ಹೋಗಿ ಸುಬ್ರಹ್ಮಣ್ಯಸ್ವಾಮಿಯ ದರ್ಶನ ಮಾಡಿ

ಸ್ತುತಿಸಿದರು. ಸುಬ್ರಹ್ಮಣ್ಯನು ಇವರಿಗೆ ಒಬ್ಬ ವೃದ್ಧನ ರೂಪದಲ್ಲಿ ದರ್ಶನವಿತ್ತು ಬಾಯನ್ನು ತೆರೆಯುವಂತೆ ಹೇಳಿ ಕಲ್ಲು ಸಕ್ಕರೆಯ ಚೂರೊಂದನ್ನು ಹಾಕಿ ಅದೃಶ್ಯ ನಾದನು. ದೀಕ್ಷಿತರಿಗೆ ಸಂಗೀತ ಲೋಕದ ಸಂಪೂರ್ಣ ಜ್ಞಾನವು ಉಂಟಾಯಿತು ತಕ್ಷಣವೇ ವಾಗ್ಗೇಯಕಾರರಾದರು. ಅವರು ಪ್ರಥಮವಾಗಿ ರಚಿಸಿದ ಕೃತಿ ಮಾಯಾ ಮಾಳವಗೌಳರಾಗದ (ಆದಿತಾಳ) ' ಶ್ರೀನಾಥಾದಿ ಗುರುಗುಹೋ ಜಯತಿ ' ಎಂಬುದು. ಕೃತಿ ರಚನೆಗೆ ಗುಹನು ಇವರಿಗೆ ಗುರುವಾದುದರಿಂದ ದೀಕ್ಷಿತರು ' ಗುರುಗುಹ ' ಎಂಬ ಅಂಕಿತವನ್ನು ಬಳಸಿದರು.

**ಗುರುಗುಹಗಾನಾಮೃತವರ್ಷಿಣಿ**—ಮುತ್ತುಸ್ವಾಮಿದೀಕ್ಷಿತರ ಕಮಲಾಂಬ ನವಾವರಣ ಕೀರ್ತನೆಗಳನ್ನು ಸ್ವರಲಿಪಿಸಹಿತ ತಮಿಳಿನಲ್ಲಿ ಕಲ್ಲಿಡೈ ಕುರುಚಿ ವೇದಾಂತ ಭಾಗವತರೆಂಬುವರು (೧೯೩೬) ಪ್ರಕಟಿಸಿದ ಗ್ರಂಥದ ಹೆಸರು.

**ಗುರುಜ್ಯೋತಿ**—ಈ ರಾಗವು ೭೧ನೆ ಮೇಳಕರ್ತ ಕಾಂತಿ ಮತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

**ಗುರುದೇವ**—ಜಗದ್ವಿಖ್ಯಾತ ಕವಿ ಮತ್ತು ವಾಗ್ಗೇಯಕಾರರಾಗಿದ್ದ ರವೀಂದ್ರ ನಾಥಠಾಕೂರರನ್ನು ಗುರುದೇವ ಎಂದು ಎಲ್ಲರೂ ಕರೆಯುತ್ತಿದ್ದರು.

**ಗುರುದ್ರುತ**—ಕರ್ಣಾಟಕ ಸಂಗೀತದ ತಾಳಪದ್ಧತಿಯ ಷೋಡಶಾಂಗಗಳಲ್ಲಿ ಇದು ಒಂದು ಅಂಗ. ಇದರ ಕಾಲಪ್ರಮಾಣವು ಎರಡೂವರೆ ಮಾತ್ರೆಗಳು ಅಥವಾ ಹತ್ತು ಅಕ್ಷರಕಾಲ.

**ಗುರುದ್ರುತವಿರಾಮ**—ಇದು ಕರ್ಣಾಟಕ ಸಂಗೀತದ ತಾಳಪದ್ಧತಿಯ ಷೋಡಶಾಂಗಗಳಲ್ಲಿ ಒಂದು ಅಂಗ. ಇದರ ಕಾಲಪ್ರಮಾಣವು ಎರಡೂಮುಕ್ಕಾಲು ಮಾತ್ರೆಗಳು ಅಥವಾ ಹನ್ನೊಂದು ಅಕ್ಷರಕಾಲ

**ಗುರುಪರಂಪರೆ**—ಪ್ರಸಿದ್ಧರಾದ ಸಂಗೀತ ವಿದ್ವಾಂಸರು ತಮ್ಮ ಗುರುಗಳ ಪೀಳಿಗೆಯನ್ನು ಹೇಳಿಕೊಳ್ಳಲು ಹೆಮ್ಮೆಪಡುವುದುಂಟು. ಅರಿಯಕುಡಿ ರಾಮಾನುಜ ಅಯ್ಯಂಗಾರ್ಯರ ಗುರು ರಾಮನಾಡ್ ಶ್ರೀನಿವಾಸಯ್ಯಂಗಾರ್. ಮೈಸೂರು ವಾಸು ದೇವಾಚಾರ್ಯರ ಮತ್ತು ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ಯರ ಗುರು ಪಟ್ಣಂ ಸುಬ್ರಹ್ಮಣ್ಯ ಅಯ್ಯರ್. ಅವರ ಗುರು ಮಾನಂಬುಚಾವಡಿ ವೆಂಕಟಸುಬ್ಬಯ್ಯರ್. ಅವರ ಗುರು ಸಂಗೀತದ ತ್ರಿರತ್ನರಲ್ಲಿ ಒಬ್ಬರಾದ ತ್ಯಾಗರಾಜರು. ಗುರುಗಳ ಪೀಳಿಗೆಯನ್ನು ಗುರು ಪರಂಪರೆ ಎಂದು ಹೇಳುವುದು ರೂಢಿ. ಹೀಗೆಯೇ ಶಿಷ್ಯರನ್ನು ಹೇಳಿದರೆ ಅದು ಶಿಷ್ಯಪರಂಪರೆ.

**ಗುರುಪುರಂದರವಿಠಲ**—ಇದು ಪುರಂದರದಾಸರ ಎರಡನೆಯ ಪುತ್ರ ತನ್ನ ಕೃತಿಗಳಲ್ಲಿ ಬಳಸಿರುವ ಅಂಕಿತ.

**ಗುರುಪ್ರಕಾಶಿ**—ಈ ರಾಗವು ೩೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಪ ಮ ರಿ ಸ

**ಗುರುಪ್ರಿಯ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಗುರುಬಸವ** (ಸು. ೧೪೩೦)—ಕನ್ನಡದಲ್ಲಿ ಭಕ್ತಿಗೀತೆಗಳನ್ನು ವಿಪುಲವಾಗಿ ರಚಿಸಿರುವ ಶೈವವಾಗ್ಗೇಯಕಾರ.

**ಗುರುಮಧ್ವಪತಿ ಪುರಂದರವಿಠಲ**—ಇದು ಪುರಂದರದಾಸರ ಮೂರನೆಯ ಪುತ್ರ ತನ್ನ ರಚನೆಗಳಲ್ಲಿ ಬಳಸಿರುವ ಅಂಕಿತ.

**ಗುರುಮೇರು**—ಇದು ತಾಳ ಪ್ರಸ್ತಾರದ ೧೪ ವಿಧಗಳಲ್ಲಿ ಒಂದು ವಿಧ. ಇದು ಒಂಭತ್ತನೆಯದು. ಪ್ರಸ್ತಾರದಲ್ಲಿ ಗುರುವು ಎಷ್ಟು ಸಲ ಬರುತ್ತದೆ ಎಂಬುದನ್ನು ಲೆಕ್ಕ ಮಾಡುವುದು ಗುರುಮೇರು.

**ಗುರುರಾಯಾಚಾರ್ಯುಲು** (೧೯ನೆ ಶ)—ಇವರು ಆಂಧ್ರದ ವಿಜಯನಗರ ಆಸ್ಥಾನ ವಿದ್ವಾಂಸರೂ, ಪ್ರಸಿದ್ಧ ಗಾಯಕ ಮತ್ತು ವೈಣಿಕರಾಗಿದ್ದರು. ಘನ, ನಯ ಮತ್ತು ದೇಶ್ಯಮಾರ್ಗಗಳಲ್ಲಿ ಹಾಡುವುದರಲ್ಲಿ ಬಹುಪರಿಣತರಾಗಿದ್ದರು ಅನೇಕ ತಾನಗಳು, ಸ್ವರಜತಿಗಳು, ಜಕ್ಕಿನಿದರುಗಳು, ಸ್ವರಪಲ್ಲವಿಗಳು, ಶಬ್ದ ಪಲ್ಲವಿಗಳು ಮತ್ತು ಗೀತಗಳನ್ನು ರಚಿಸಿದ್ದಾರೆ. ವೀಣೆಯನ್ನು ಷಟ್ಕಾಲದಲ್ಲಿ ನುಡಿಸುತ್ತಿದ್ದರು. ಇವರನ್ನು ಅಲ್ಲಿಯ ರಾಜನು ಬಿರುದುಗಳು ಮತ್ತು ಛತ್ರಚಾಮರಗಳನ್ನಿತ್ತು ಗೌರವಿಸಿದನು ಇವರ ಪುತ್ರ ಸೀತಾರಾಮಪ್ಪ ಮತ್ತು ಮೊಮ್ಮಗ ಗುರುರಾಯಾಚಾರ್ಯುಲು ಪ್ರಸಿದ್ಧ ವಿದ್ವಾಂಸರಾಗಿದ್ದರು. ಈ ಗುರುರಾಯಾಚಾರ್ಯುಲುರವರ ಮಗನೇ ಪ್ರಸಿದ್ಧ ವೀಣಾ ವೆಂಕಟರಮಣದಾಸರು. ಮೈಸೂರಿನ ವೀಣೆ ಶೇಷಣ್ಣನವರು ಮತ್ತು ವೆಂಕಟರಮಣದಾಸರೂ ಒಂದೇ ವಂಶದ ಪೀಳಿಗೆಯವರು.

**ಗುರುರಾಯಾಚಾರ್ಯುಲು**—ಇವರು ಆಂಧ್ರದ ಪ್ರಸಿದ್ಧ ವೈಣಿಕ ವೆಂಕಟರಮಣದಾಸರ ತಂದೆ. ಇವರು ಆಂಧ್ರದ ವಿಜಯನಗರ ಖ್ಯಾತ ಆಸ್ಥಾನ ವಿದ್ವಾಂಸರಾಗಿದ್ದು ತಮ್ಮ ತಾತನಂತೆಯೇ ಹಲವು ಬಿರುದುಗಳನ್ನೂ ಸನ್ಮಾನಗಳನ್ನೂ ಪಡೆದಿದ್ದರು

**ಗುರುರಾವ್ ದೇಶಪಾಂಡೆ** (೧೯೦೦)—ಗುರುರಾಯರ ತಂದೆ ನಾರಾಯಣ ಶಿವರಾವ್ ದೇಶಪಾಂಡೆ ಕರ್ಣಾಟಕ ಮತ್ತು ಹಿಂದೂಸ್ಥಾನಿ ಸಂಗೀತಗಳಲ್ಲಿ ವಿದ್ವಾಂಸರಾಗಿದ್ದರು. ತಾತ ಶಿವರಾವ್ ಸುಖಾಜಿರಾವ್ ದೇಶಪಾಂಡೆ ಒಳ್ಳೆಯ ಸಂಗೀತಗಾರ

ರಾಗಿದ್ದು ಯಕ್ಷಗಾನದಲ್ಲಿ ಕೀರ್ತಿ ಪಡೆದಿದ್ದರು. ಇಂತಹ ಸಂಗೀತಗಾರರ ಮನೆತನದಲ್ಲಿ ಜನಿಸಿ ಕನ್ನಡಿಗರಾದ ಗುರುರಾವ್ ಹಿಂದೂಸ್ಥಾನಿ ಸಂಗೀತ ಪ್ರಪಂಚದಲ್ಲಿ ಹಿರಿಯ ಕಲಾವಿದರಾಗಿದ್ದಾರೆ. ಗುರುರಾಯರು ಶಾಲೆಯಲ್ಲಿ ಓದುತ್ತಿದ್ದಾಗಲೇ ಸಂಗೀತಾಭ್ಯಾಸವನ್ನು ಆರಂಭಿಸಿ ಮೊದಲು ದತ್ತೋಪಂತಜೋಷಿ ಮತ್ತು ಪಿತ್ರೆವಕೀಲರಲ್ಲಿ ಕಲಿತು ನಂತರ ರಾಮಕೃಷ್ಣಬುವಾ ವಝೆ ಅವರ ಶಿಷ್ಯರಾಗಿ ದೀರ್ಘಕಾಲ ಪ್ರೌಢ ಶಿಕ್ಷಣ ಪಡೆದರು. ಭಾರತದ ಬಿಂದೂರಾಯರಲ್ಲಿ ಗಮಕಕಲೆಯನ್ನು ಅಭ್ಯಾಸಮಾಡಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಗಮಕ ಶಿಕ್ಷಣದ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಧಾರವಾಡದ ಆಕಾಶವಾಣಿ ಕೇಂದ್ರದಲ್ಲಿ ಸಂಗೀತದ ಉಪ ನಿರ್ಮಾಪಕರಾಗಿದ್ದು ೧೯೭೭ರಲ್ಲಿ ನಿವೃತ್ತರಾದರು. ೧೯೭೦ರಲ್ಲಿ ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ದೊರಕಿತು. ಗುರುರಾಯರು ಮನಮೋಹಕವಾದ ಶಾರೀರವುಳ್ಳ ರಸಿಕರ ಮನಸ್ಸನ್ನು ಸೂರೆಗೊಳ್ಳುವ ಹಿರಿಯ ಗಾಯಕರು.

**ಗುರುಂಜಿ** :—ಇದು ಪಾರ್ಶ್ವದೇವನ 'ಸಂಗೀತ ಸಮಯಸಾರ' ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಷಾಡವ ರಾಗ.

**ಗುರುವಿರಾಮ**—ಇದು ಕರ್ಣಾಟಕ ಸಂಗೀತದ ತಾಳಪದ್ಧತಿಯ ಷೋಡಶಾಂಗಗಳಲ್ಲಿ ಒಂದು ಅಂಗ. ಇದರ ಕಾಲ ಪ್ರಮಾಣವು ಎರಡೂಕಾಲು ಮಾತ್ರೆಗಳು ಅಥವಾ ೯ ಅಕ್ಷರಕಾಲ.

**ಗುರುಸ್ವಾಮಿ ದೇಶಿಕರ್** (೧೯ ನೆ ಶ.)—ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿದ್ದರು. ತಮಿಳಿನ ತೇವಾರಂ ಗೀತಗಳನ್ನು ಹಾಡುವುದರಲ್ಲಿ ಪ್ರಸಿದ್ಧರಾಗಿದ್ದ ವಿದ್ವಾಂಸರಾಗಿದ್ದರು.

**ಗುಹದಾಸ**—ಪ್ರಸಿದ್ಧ ಗಾಯಕರೂ, ವಾಗ್ಗೇಯಕಾರರೂ ಆಗಿದ್ದ ಮಹಾವೈದ್ಯನಾಥ ಅಯ್ಯರ್ ಮತ್ತು ಅವರ ಸಹೋದರರು ತಮ್ಮ ರಚನೆಗಳಲ್ಲಿ ಬಳಸಿರುವ ಮುದ್ರೆ.

**ಗುಹಪ್ರಿಯ**—ಈ ರಾಗವು ೧೬ ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯ ರಾಗ.

ಆ : ಸ ರಿ ಗಾ ಮ ಸ ಪ ಮ ದ ನಿ ಸ

ಅ : ಸ ನಿ ದಾ ಪ ಮ ಗ ಸ ರಿ ಸ

**ಗೂರ್ಜರಿಕಾ**—ಸೋಮನಾಥನ 'ರಾಗವಿಬೋಧ' ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೂಡಾ**—ಇದು ಭಾವಭಟ್ಟನ ಶ್ರುತಿಪದ್ಧತಿಯಲ್ಲಿ ಷಡ್ಜದ ಮೂರನೆಯ ಶ್ರುತಿಯ ಹೆಸರು.

**ಗೆಟ್ಟುವಾದ್ಯ**—ಇದು ದಕ್ಷಿಣ ಭಾರತದ ಅಪರೂಪವಾದ ಒಂದು ತಂತೀ ವಾದ್ಯ ಹಾಗೂ ತಾಳವಾದ್ಯ. ಇದು ತಂಬೂರಿಯಂತಿದ್ದು ನಾಲ್ಕು ತಂತಿಗಳನ್ನು

ಹೊಂದಿದೆ. ಸುಮಾರು ಎರಡು ಅಡಿ ಉದ್ದವಿದೆ. ತಂತಿಗಳನ್ನು ಸ ಪ ಸ ಸ್ವರಗಳಿಗೆ ಶ್ರುತಿ ಮಾಡಲಾಗುತ್ತದೆ. ಎರಡು ಕೈಗಳಲ್ಲಿ ಎರಡು ಕಡ್ಡಿಗಳಿಂದ ತಂತಿಗಳನ್ನು ತಾಡನ ಮಾಡಿ ನುಡಿಸುತ್ತಾರೆ, ಎಡಗೈಯಲ್ಲಿ ತಾಳಕ್ಕೆ ತಕ್ಕಂತೆ ತಾಡನ ಮಾಡುತ್ತಿದ್ದರೆ ಬಲಗೈಯಿಂದ ತಾಡಿಸಿ ಮೃದಂಗದ ನುಡಿಕಾರಗಳಂತೆ ನುಡಿಸಲಾಗುವುದು. ಇದು ಮೃದಂಗದ ಒಂದು ಸಹ ತಾಳವಾದ್ಯ. ಇತ್ತೀಚೆಗೆ ಇದರ ಬಳಕೆ ಬಹಳ ಅಪರೂಪವಾಗಿದೆ. ಇದನ್ನು ನುಡಿಸುವ ವಿದ್ವಾಂಸರೂ ವಿರಳ. ಅವಿಡಯೂರ್ ಕೋವಿಲ್ ಹರಿಹರ ಭಾಗವತರು ಈ ವಾದ್ಯವನ್ನು ನುಡಿಸುವುದರಲ್ಲಿ ವಿದ್ವಾಂಸರು. ಮೈಸೂರು ಜಿಲ್ಲೆಯ ಚಾಮರಾಜನಗರದ ತಾಲ್ಲೂಕಿನ ಹಳೇ ಆಲೂರಿನ ದೇವಾಲಯದಲ್ಲಿ ಒಬ್ಬ ವ್ಯಕ್ತಿಯು ಈ ವಾದ್ಯವನ್ನು ನುಡಿಸುತ್ತಿರುವ ಶಿಲ್ಪವಿದೆ.

**ಗೆಜ್ಜೆ**—ಭಾಗವತರೂ, ನಟರೂ, ನಾಟ್ಯವಾಡುವವರೂ ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುತ್ತಾರೆ. ಇದು ತಾಳವಾದ್ಯ ಹಾಗೂ ಆಭರಣ. ಕಂಚಿನ ಪೊಳ್ಳಾದ ದುಂಡು ಗುಳಿಗೆಗೆ ಅರ್ಧಭಾಗದವರೆಗೂ ಬಾಯಿ ಬಿಡಿಸಿ, ಒಳಗೆ ಸಣ್ಣ ಸಣ್ಣ ಬೆಣಚು ಕಲ್ಲಿನ ಚೂರುಗಳನ್ನು ಸೇರಿಸುತ್ತಾರೆ. ಗುಳಿಗೆಯ ಇನ್ನೊಂದು ಕಡೆ ಸಣ್ಣ ಉಂಗುರವನ್ನು ಅಳವಡಿಸುತ್ತಾರೆ. ಈ ಗುಳಿಗೆಗಳನ್ನು ಗಟ್ಟಿಯಾದ ದಾರದಲ್ಲಿ ಗೆಜ್ಜೆಗಳ ಮಧ್ಯೆ ದಾರದಲ್ಲಿ ಗಂಟು ಬರುವಂತೆ, ೫೦ ರಿಂದ ೧೦೦ ರವರೆಗೂ ಗೆಜ್ಜೆಗಳನ್ನು ಪೋಣಿಸುತ್ತಾರೆ. ಈ ಹಾರವನ್ನು ಕಾಲಿನ ಕೀಲಿಗೆ ಕಟ್ಟಿಕೊಳ್ಳುತ್ತಾರೆ. ಹಾವಾಡಿಗರೂ, ದೊಂಬರೂ, ಭಜನಗೋಷ್ಠಿಯವರೂ ಕಟ್ಟಿಕೊಳ್ಳುವುದುಂಟು. ಭಾಗವತರು ತಮ್ಮ ವೃತ್ತಿಯನ್ನು ಪ್ರಾರಂಭಿಸುವ ಮುನ್ನ ಹಿರಿಯರಿಂದ ಆಶೀರ್ವಾದ ಪೂರ್ವಕವಾಗಿ ಗೆಜ್ಜೆಯನ್ನು ಪಡೆಯುತ್ತಾರೆ. ಗೆಜ್ಜೆಯು ಬಹಳ ಪವಿತ್ರವಾದುದು. ದೇವದಾಸಿಯರಲ್ಲಿ ಗೆಜ್ಜೆಪೂಜೆ ಬಹು ಮುಖ್ಯವಾದುದು. ದಿವ್ಯನಾಮ ಸಂಕೀರ್ತನವು ಮುಕ್ತಾಯವಾಗುವುದನ್ನು ಗೆಜ್ಜೆಯನ್ನು ಬಿಚ್ಚುವುದರಿಂದ ಸೂಚಿಸುವರು. ಹಳ್ಳಿಗಳಿಗೆ ಟಪಾಲು ತೆಗೆದು ಕೊಂಡು ಹೋಗುತ್ತಿದ್ದ ಅಂಚೆ ಪೇದೆಗಳು ಗೆಜ್ಜೆಕಟ್ಟಿದ ಕೋಲನ್ನು ಉಪಯೋಗಿಸುತ್ತಿದ್ದರು. ಸಂಕ್ರಾಂತಿ ಹಬ್ಬದಲ್ಲಿ ಗೋವುಗಳನ್ನು ಗೆಜ್ಜೆಗಳಿಂದ ಅಲಂಕರಿಸುತ್ತಾರೆ. ದಿವಂಗತ ತಂಜಾವೂರಿನ ಪಟ್ಟಿ ಕೃಷ್ಣಭಾಗವತರು ತಮ್ಮ ಕಂಠದ ಶ್ರುತಿಗೆ ಹೊಂದಿಕೊಳ್ಳುತ್ತಿದ್ದ ಗೆಜ್ಜೆಯನ್ನು ಬಳಸುತ್ತಿದ್ದರು.

**ಗೇಯಚರಿತ್ರೆ**—ಇದು ಪದ್ಯ ಮತ್ತು ಹಾಡುಗಳ ರೂಪದಲ್ಲಿರುವ ಕಥಾ ರೂಪಕ. ಇದನ್ನು ಹಾಡಿ ವ್ಯಾಖ್ಯಾನ ಮಾಡುತ್ತಾರೆ. ಉಪಾಖ್ಯಾನಗಳು ಇದಕ್ಕೆ ನಿದರ್ಶನ. ಇವುಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿ ನಾಟಕಗಳನ್ನು ಪ್ರದರ್ಶಿಸಬಹುದು. ಗಮಕರೂಪಕಗಳು ಕರ್ಣಾಟಕದಲ್ಲಿ ಪ್ರಚಲಿತವಾಗಿದೆ. ರಾಮಸ್ವಾಮಿ ಶಿವನ್ ಪೆರಿಯಪುರಾಣದ ೬೩ ಪುರಾತನರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ರಚಿಸಿದ್ದಾರೆ.

**ಗೇಯನಾಟಕ**—ಇದಕ್ಕೆ ಸಂಗೀತ ರೂಪಕ ಅಥವಾ ಗಾನನಾಟಕವೆಂದು ಹೆಸರು ಇದು ಪದ್ಯ, ಸಂಗೀತ, ನೃತ್ಯ ಎಲ್ಲವನ್ನೂ ಒಳಗೊಂಡಿದೆ. ನೃತ್ಯನಾಟಕದಲ್ಲಿ ನೃತ್ಯವು ನಾಟಕದ ಮುಖ್ಯಭಾಗ. ಗೇಯನಾಟಕದಲ್ಲಿ ನೃತ್ಯವು ಪ್ರಮುಖವಲ್ಲ ಅಭಿನಯವು ಬಹು ಪ್ರಧಾನ. ಸಂಗೀತವು ಅಭಿನಯದ ವ್ಯಾಖ್ಯಾನವಂತೆ ಸಮ್ಮಿಳನವಾಗಿರುತ್ತದೆ. ಗೇಯನಾಟಕವು ಸಂಗೀತ ಮತ್ತು ಸಾಹಿತ್ಯದ ಸುಮಧುರ ಸಮ್ಮಿಳನ ಇವುಗಳಲ್ಲಿ ಸಂಗೀತ ಮತ್ತು ನಾಟಕ ಇವೆರಡರ ಮನರಂಜನೆ ದೊರಕುತ್ತದೆ. ಲಲಿತ ಕಲೆಗಳ ಮುಖ್ಯಾಂಶಗಳ ಸುಮಧುರ ಸಂಗಮವನು ಇಂತಹ ನಾಟಕಗಳಲ್ಲಿ ಕಾಣಬಹುದು. ಇವುಗಳು ಕಣ್ಣಿಗೆ ತಂಪು, ಕಿವಿಗಳಿಗೆ ಇಂಪು. ಕೇವಲ ವೇಷಭೂಷಣಗಳಿಂದ ಕೂಡಿದ ಸಂಗೀತ ಕಚೇರಿಯೆಂದು ಗೇಯ ನಾಟಕಗಳನ್ನು ಭಾವಿಸುವುದು ಸಾಧುವಲ್ಲ. ಇದರಲ್ಲಿ ಸಂಗೀತವು ನಾಟಕದ ಒಂದು ಅವಿಭಾಜ್ಯ ಅಂಗವಾಗಿ ಸ್ವಾಭಾವಿಕವಾಗಿ ಹೆಣೆದುಕೊಂಡಿದೆ. ಗೇಯನಾಟಕಗಳನ್ನು ರಚಿಸಬೇಕಾದರೆ ವಿಶೇಷ ಪ್ರತಿಭೆಯಿರಬೇಕು. ನಾಟಕ ರಚನಾಕಾರನಿಗೆ ಇರಬೇಕಾದ ಪ್ರತಿಭೆ, ಮಾನವನ ಸ್ವಭಾವದ ಸಂಪೂರ್ಣ ಪರಿಜ್ಞಾನ, ಪಾತ್ರಗಳನ್ನು ಪ್ರಭಾವ ಪೂರ್ಣವಾಗಿ ಸೃಷ್ಟಿಸುವ ಶಕ್ತಿ, ಪ್ರಾಸಂಗಿಕವಾಗಿ ವಿಶೇಷ ಪಾತ್ರಗಳನ್ನೂ ಮತ್ತು ದೃಶ್ಯಗಳನ್ನೂ ಸೃಷ್ಟಿಸುವ ಮೂಲಕ ನಾಟಕವು ಹೃದಯಂಗಮವಾಗಿ ಮಾಡುವ ಕಲ್ಪನಾಚಾತುರ್ಯ, ಸಾಹಿತ್ಯ ಹಾಗೂ ಕವಿತಾಶಕ್ತಿ, ನಮ್ಮ ದೇಶದ ಪುರಾಣ ಮತ್ತು ಕಥಾಸಾಹಿತ್ಯದ ಸಂಪೂರ್ಣ ಜ್ಞಾನ, ಸಂಗೀತ ಕೃತಿ ರಚನಾ ಸಾಮರ್ಥ್ಯ, ಸಂಭಾಷಣೆ ಮತ್ತು ಸಂಗೀತದಿಂದ ಕೂಡಿದ ಸ್ವಗತ ರಚನಾಶಕ್ತಿ, ಭಾವನೆಗಳಿಗೆ ತಕ್ಕ ಸಾಹಿತ್ಯ ಮತ್ತು ಸಂಗೀತ ರಚನೆ ಇವೆಲ್ಲವೂ ಗೇಯನಾಟಕಗಳನ್ನು ಚೆನ್ನಾಗಿ ರಚಿಸಬೇಕಾದ ಕವಿಗೆ ಇರಬೇಕಾದ ಗುಣಗಳು. ಇಷ್ಟೆಲ್ಲಾ ಅರ್ಹತೆಗಳಿರಬೇಕಾಗಿರುವುದರಿಂದ ನಮ್ಮಲ್ಲಿ ರಚನೆಯಾಗಿರುವ ಗೇಯನಾಟಕಗಳು ಕೆಲವು ಮಾತ್ರ.

ದಕ್ಷಿಣ ಭಾರತದಲ್ಲಿ ಹಲವು ಪ್ರಸಿದ್ಧ ವಾಗ್ಗೇಯಕಾರರು ಗೇಯನಾಟಕಗಳನ್ನೂ, ಗೇಯಚರಿತ್ರೆಗಳನ್ನೂ ರಚಿಸಿದ್ದಾರೆ. ತ್ಯಾಗರಾಜರ 'ಪ್ರಹ್ಲಾದ ಭಕ್ತಿ ವಿಜಯಂ' ಎಂಬುದು ಐದು ಅಂಕಗಳ ಗೇಯನಾಟಕ. ಅವರ 'ನೌಕಾಚರಿತ್ರೆ'ವು ಒಂದು ಚಿಕ್ಕನಾಟಕ. ಷಹಜೀ ಮಹಾರಾಜರ ಪಲ್ಲಕ್ಕಿ ಸೇವಾ ಪ್ರಬಂಧವು ಅತ್ಯಂತ ರಂಜನೀಯವಾದ ಗೇಯನಾಟಕ.

**ಗೇಯಪ್ರಬಂಧ**—ಕಾಲಕ್ಷೇಪಕ್ಕಾಗಿ ಹಾಡುಗಳ ರೂಪದಲ್ಲಿರುವ ಕಥೆ. ಇದಕ್ಕೆ ಸ್ವಾತೀತಿರುನಾಳ್ ಮಹಾರಾಜರ ಕುಚೇಲೋಪಾಖ್ಯಾನವೆಂಬುದು ಉತ್ತಮ ನಿದರ್ಶನ.

**ಗೇಯಹೆಜ್ಜುಜ್ಜಿ**—ಅಸಂಪೂರ್ಣ ಮೇಳಪದ್ಧತಿಯಂತೆ ಇದು ೧೩ನೆಯ ಮೇಳ. ಗೇಯ ಎಂಬ ಪದವನ್ನು ಕಟಪಯಾದಿ ಸಂಖ್ಯೆಗೆ ಅಳವಡಿಸಲು ಸೇರಿಸಿದೆ.

**ಗೊಬ್ಬಿ**—ಇದೊಂದು ತೆಲುಗು ಜಾನಪದ ನೃತ್ಯ. ಹಲವು ಸ್ತ್ರೀಯರು ಅಥವಾ ಬಾಲಕಿಯರು ವರ್ತುಲಾಕಾರದಲ್ಲಿ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ ಮತ್ತು ಚಪ್ಪಾಳೆ ತಟ್ಟಿ ಕೈಬೀಸುವುದರ ಮೂಲಕ ಗತಿಯನ್ನು ಅನುಸರಿಸುತ್ತಾರೆ. ಇದು ತಮಿಳು ದೇಶದ ಕುಮ್ಮಿಕುಣಿತದಂತೆ. ಇಂತಹ ನೃತ್ಯದಲ್ಲಿ ಗೊಬ್ಬಿಹಾಡುಗಳನ್ನು ಹಾಡುತ್ತಾರೆ. ಈ ಹಾಡುಗಳಲ್ಲಿ ಹಲವು ಪದ್ಯಗಳಿವೆ. ವಿವಾಹ ಸಂದರ್ಭಗಳಲ್ಲಿ, ಭಜನೆ ಮತ್ತು ಪೊಂಗಲ್ ಹಬ್ಬಗಳಲ್ಲಿ ನೃತ್ಯಗಳಾಗುತ್ತವೆ. ಮುಖ್ಯವ್ಯಕ್ತಿಯು ಹಾಡಿದ್ದನ್ನು ಇತರರು ಹೇಳುತ್ತಾರೆ. ಮದುವೆಯಲ್ಲಿ ವಧು ಗೊಬ್ಬಿನೃತ್ಯದಲ್ಲಿ ಭಾಗವಹಿಸದಿದ್ದರೆ ಅವಳಿಗೆ ಮುಂದೆ ಮೂಕನಾದ ಮಗುವಾಗುತ್ತದೆ ಎಂದು ನಂಬಿರುವರು

**ಗೊಲ್ಲಭಾಮಾ**—ಇದು ದಕ್ಷಿಣ ಭಾರತದಲ್ಲಿ ಊತ್ತುಕ್ಕಾಡ್, ಕೂಚಿಪ್ಪೂಡಿ ಮುಂತಾದ ಸ್ಥಳಗಳಲ್ಲಿ ಪ್ರದರ್ಶಿಸಲಾಗುತ್ತಿರುವ ತೆಲುಗು ಭಾಷೆಯ ಒಂದು ನೃತ್ಯ ರೂಪಕ.

**ಗೊಲ್ಲಿ**—ಇದು ಸಂಗೀತ ರತ್ನಾಕರದಲ್ಲಿ ಉಕ್ತವಾಗಿರುವ ಒಂದು ಭಾಷಾಂಗ ರಾಗ.

**ಗೋ**—ಇದು ೭೨ ಮೇಳಕರ್ತ ಪದ್ಧತಿಯ ಸಂಜ್ಞಾ ಸೂಚಕದಲ್ಲಿ ಒಂದು ಚಕ್ರದ ಮೂರನೆಯ ಮೇಳವನ್ನು ಸೂಚಿಸುವ ಸಂಜ್ಞಾಕ್ಷರ. ಬಾಣ–ಗೋ ಎಂದರೆ ಬಾಣಚಕ್ರ ಅಥವಾ ೫ನೆಯ ಚಕ್ರದ ೩ನೆಯ ಮೇಳ ಎಂದಾಗುತ್ತದೆ. ಕಟಪಯಾದಿ ಪದ್ಧತಿಯಂತೆ ಇದು ೨೭ನೆಯ ಮೇಳ ಸರಸಾಂಗಿಯನ್ನು ಸೂಚಿಸುತ್ತದೆ.

**ಗೋಕುಲಮೂರ್ತಿ**—ಇದು ೬೨ನೆ ಮೇಳಕರ್ತ ರಿಷಭ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗೋಪಾಲಕೃಷ್ಣ**—(೧) ತಮಿಳುನಾಡಿನ ಪ್ರಸಿದ್ಧ ವಾಗ್ಗೇಯಕಾರ ಗೋಪಾಲಕೃಷ್ಣ ಭಾರತಿ ಬಳಸಿರುವ ಮುದ್ರೆ.

(೨) ೧೮ನೆ ಶತಾಬ್ದಿಯಲ್ಲಿದ್ದ ಇನಿಪಸನಿಗಲು ವೆಂಕಟರಾಮಯ್ಯನವರು ತಮ್ಮ ಕೃತಿಗಳಲ್ಲಿ ಬಳಸಿರುವ ಮುದ್ರೆ. ಇನಿಪಸನಿಗಲು ಎಂದರೆ ಕಬ್ಬಿಣದ ಕಡಲೆ ಎಂದರ್ಥ. ವೆಂಕಟರಾಮಯ್ಯನವರ ಕೃತಿಗಳು ಅತಿಕಠಿಣವಾಗಿದ್ದುದರಿಂದ ಈ ಹೆಸರು ಬಂದಿತು. ಇವರು ರಚಿಸಿರುವ ತೋಡಿರಾಗದ 'ಶತಮನಿ ಪ್ರಣಾತಿಂಪುಚುನು' ಎಂಬ ಪ್ರಸಿದ್ಧ ಕೃತಿಯು ಬೋಧೇಂದ್ರ ಸದ್ಗುರುಸ್ವಾಮಿಯವರ ಸ್ತುತಿಯಾಗಿದೆ.

**ಗೋಪಾಲಕೃಷ್ಣ ಟಿ. ವಿ.**—ಗೋಪಾಲಕೃಷ್ಣ ಚೆಂಬೈವೈದ್ಯನಾಥಅಯ್ಯರ್ ರವರ ಒಬ್ಬ ಪ್ರಮುಖ ಶಿಷ್ಯರು. ಮೊದಲು ತಮ್ಮ ಚಿಕ್ಕಪ್ಪ ಜಿ. ನಾರಾಯಣಸ್ವಾಮಿ ಅಯ್ಯರವರಲ್ಲೂ ನಂತರ ಕೊಚ್ಚಿ ಸಂಸ್ಥಾನದ ಆಸ್ಥಾನದ ವಿದ್ವಾಂಸರಾಗಿದ್ದ ಟಿ. ಜಿ.

ವಿಶ್ವನಾಥ ಅಯ್ಯರಲ್ಲೂ ಕಲಿತರು. ಪಂಡಿತ್ ಕೃಷ್ಣಾನಂದರಲ್ಲಿ ಹಿಂದೂಸ್ಥಾನಿ ಸಂಗೀತವನ್ನೂ ಕಲಿತರು ತಮ್ಮ ೬ ನೆ ವಯಸ್ಸಿನಲ್ಲೇ ಕಚೇರಿಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದ ೩೦ ವರ್ಷಗಳಿಂದ ಹಿರಿಯ ವಿದ್ವಾಂಸರ ಕಚೇರಿಗಳಿಗೆ ಪಕ್ಕವಾದ್ಯ ನುಡಿಸುತ್ತ ಬಂದಿದ್ದಾರೆ. ಕರ್ಣಾಟಕ ಮತ್ತು ಹಿಂದೂಸ್ಥಾನಿ ಸಂಗೀತಗಳೆರಡರಲ್ಲಿ ಗಾಯಕರಾಗಿ ಪಂಡಿತ್ ರವಿಶಂಕರ್, ಉಸ್ತಾದ್ ಅಲ್ಲಾ ರಖಾ ಮುಂತಾದವರ ಜೊತೆ ನುಡಿಸಿದ್ದಾರೆ. ಇಂಗ್ಲೆಂಡ್, ಅಮೆರಿಕ, ಯೂರೋಪ್, ಕೆನಡಾಗಳಲ್ಲಿ ಪ್ರವಾಸ ಮಾಡಿ ಕಚೇರಿಗಳಲ್ಲಿ ನುಡಿಸಿದ್ದಾರೆ. ಇವರು ವಾಗ್ಗೇಯಕಾರರೂ ಆಗಿದ್ದಾರೆ ಇವರು ಮದ್ರಾಸ್ ವಿಶ್ವವಿದ್ಯಾನಿಲಯದ ಬಿ ಕಾಂ. ಪದವೀಧರರು. ಸಂಗೀತ ವಿದ್ಯಾ ರತ್ನ, ಗಾನಕಲಾಭಾರತಿ, ಸಂಗೀತಕಲಾವಿಭೂಷಣ ಇತ್ಯಾದಿ ಬಿರುದಾಂಕಿತರು

**ಗೋಪಾಲಕೃಷ್ಣ ಭಾರತಿ** (೧೮೧೦-೧೮೯೬)—ಗೋಪಾಲಕೃಷ್ಣ ಭಾರತಿ ತಮಿಳಿನ ವಾಗ್ಗೇಯಕಾರರಲ್ಲಿ ಅತ್ಯಂತ ಶ್ರೇಷ್ಠರು. ಇವರು ತಂಜಾವೂರು ಜಿಲ್ಲೆಯ ಮುಡಿಕೊಂಡಾನ್ ಎಂಬಲ್ಲಿ ಜನಿಸಿದರು. ಭಾರದ್ವಾಜ ಗೋತ್ರದ ವಡಮ ಬ್ರಾಹ್ಮಣ ಮನೆತನಕ್ಕೆ ಸೇರಿದವರು ಇವರ ಪೂರ್ವಿಕರು ಸಂಗೀತ ವಿದ್ವಾಂಸರಾಗಿದ್ದರು. ಇವರ ತಂದೆ ಶಿವರಾಮಭಾರತಿ, ತಾತ ರಾಮಸ್ವಾಮಿಭಾರತಿ, ಮುತ್ತಾತ ವಳರ್ ಕೋದಂಡ ರಾಮಭಾರತಿ ಎಲ್ಲರೂ ಸಂಸ್ಕೃತ ವಿದ್ವಾಂಸರೂ ವೈಣಿಕರೂ ಆಗಿದ್ದರು

ಚಿಕ್ಕಂದಿನಲ್ಲೇ ಮಾತಾಪಿತರನ್ನು ಕಳೆದುಕೊಂಡ ಗೋಪಾಲಕೃಷ್ಣಭಾರತಿಯ ಜೀವನವು ಸುಗಮವಾಗಿರಲಿಲ್ಲ. ಇವರು ತಂಜಾವೂರು ಜಿಲ್ಲೆಯ ಕೂತ್ತನೂರು ದೇವಾಲಯದಲ್ಲಿ ಕೆಲವು ಕಾಲ ಪರಿಚಾರಕರಾಗಿದ್ದಾಗ ಇಲ್ಲಿಯ ಸರಸ್ವತೀ ದೇವಿಯು ಪ್ರತ್ಯಕ್ಷಳಾಗಿ ಇವರನ್ನು ಅನುಗ್ರಹಿಸಿದಳೆಂದು ಶ್ರದ್ಧಾವಂತರು ಹೇಳುತ್ತಾರೆ. ಗೋವಿಂದಯತಿ ಎಂಬುವರಲ್ಲಿ ವೇದಾಧ್ಯಯನ ಮಾಡಿದರು ಹಲವು ಭಾಷೆಗಳಲ್ಲಿ ವಿದ್ವತ್ತನ್ನು ಗಳಿಸಿದರು ತಿರುವಡಮರುದೂರಿನ ಅಮರಸಿಂಹ ರಾಜನ ಪೋಷಣೆ ಯಲ್ಲಿದ್ದ ರಾಮದಾಸರೆಂಬುವರಲ್ಲಿ ಸಂಗೀತ ಶಿಕ್ಷಣ ಪಡೆದರು. ಹಿಂದೂಸ್ಥಾನೀ ಸಂಗೀತದ ಪಾಂಡಿತ್ಯದಿಂದ ಹಮೀರ್‌ಕಲ್ಯಾಣಿ, ಬೇಹಾಗ್ ಮುಂತಾದ ಉತ್ತರಾದಿ ರಾಗಗಳಲ್ಲಿ ಕೃತಿಗಳನ್ನು ರಚಿಸಿದರು. ನಂತರ ಅನತಾಂಡವಪುರದಲ್ಲೂ, ಅಣ್ಣಾ ವಯ್ಯಾರ್‌ನ ಮಿರಾಸ್‌ದಾರರೊಬ್ಬರ ಪೋಷಣೆಯಲ್ಲಿ ಹಲವು ವರ್ಷಗಳಕಾಲ ಇದ್ದರು.

ಭಾರತಿಯವರು ನೈಷ್ಟಿಕ ಬ್ರಹ್ಮಚಾರಿಗಳಾಗಿದ್ದು ಯೋಗಾಭ್ಯಾಸದಲ್ಲಿ ನಿರತ ರಾಗಿದ್ದು ಏಕಾಂತ ಜೀವಿಗಳಾಗಿದ್ದರು. ಹರಿಕಥೆ ಮಾಡುವುದರಲ್ಲಿ ಪ್ರವೀಣರಾದ ಮೇಲೆ ಹಲವು ಕಡೆ ಕಥಾಕಾಲಕ್ಷೇಪ ಮಾಡಲು ತೊಡಗಿದರು. ಕಥಾಕಾಲಕ್ಷೇಪಕ್ಕೆ ೬೦ ರೂ. ಶುಲ್ಕವನ್ನು ಕೊಡಬೇಕೆಂದು ಗೊತ್ತುಮಾಡಿ, ಸಂಭಾವನೆಯನ್ನು ಆಗ ತೆಗೆದುಕೊಳ್ಳದೆ ದಾನಧರ್ಮಗಳನ್ನು ಮಾಡಬೇಕಾಗಿ ಬಂದಾಗ ಚೀಟಿ ಬರೆದು ಕಳುಹಿಸುತ್ತಿದ್ದರು. ಖರ್ಚಾಗದೇ ಉಳಿದಿದ್ದ ಹಣವನ್ನು ಚಿದಂಬರಂ ಮತ್ತು

ಮಾಯಾವರಂ ದೇವಾಲಯಗಳಿಗೆ ಬರುವ ಯಾತ್ರಾರ್ಥಿಗಳಿಗೆ ರಾತ್ರಿಯ ವೇಳೆ ಅನ್ನ ದಾನಮಾಡಲು ಪುದುವಟ್ಟುಗಳನ್ನು ಸ್ಥಾಪಿಸಿದರು.

ಹಲವು ಭಾಷೆಗಳಲ್ಲಿ ಪಾಂಡಿತ್ಯ, ಶಾಸ್ತ್ರಪುರಾಣಗಳಲ್ಲಿ ವೈದುಷ್ಯ, ಸಂಗೀತದಲ್ಲಿ ವಿದ್ವತ್ತು ಮುಂತಾದ ಅರ್ಹತೆಗಳಿಂದ ಇವರು ಉತ್ತಮ ವಾಗ್ಗೇಯಕಾರರಾದರು. ಪರಿಚಿತ ರಾಗಗಳಲ್ಲಿ ಇವರು ರಚಿಸಿದ ಮೊದಲಿನ ಕೃತಿಗಳು ಜನಪ್ರಿಯವಾದುವು. ನಾಟಕಪ್ರಿಯರಾಗದ 'ಶಿವಲೋಕಮೆಂಗಿರ', ಸರಸಾಂಗಿರಾಗದ 'ಮಹಾದೇವಶರಣಂ', ಆಹಿರಿರಾಗದ 'ಅಂಬಲವಾಣನೈ', ಜಗನ್ಮೋಹಿನಿರಾಗದ 'ಶಿವಕಾಮಸುಂದರಿ' ಮಾಂಜಿ ರಾಗದ 'ಸಂಜಲಪದವೇಂಡಾಮ್' ಮುಂತಾದ ಕೃತಿಗಳು ಇವರ ಪ್ರತಿಭೆಯ ಪ್ರತೀಕ ಗಳಾಗಿವೆ. ತ್ಯಾಗರಾಜರ ನಂತರ ಈ ಅಪರೂಪರಾಗಗಳಲ್ಲಿ ಕೃತಿಗಳನ್ನು ರಚಿಸಿದವರಲ್ಲಿ ಇವರೇ ಮೊದಲಿಗರು. ಆಕರ್ಷಕ ಶೈಲಿ, ತಿಳಿಯಾದ ಸಾಹಿತ್ಯ, ಭಾವಕ್ಕೆತಕ್ಕ ರಾಗ ಇವುಗಳಿಂದ ಇವರ ಕೃತಿಗಳು ಜನಪ್ರಿಯವಾಗಿವೆ. ಇವರ ಕೈಯಲ್ಲಿ ಲಾವಣಿಗಳು ಮತ್ತು ಚಿಂದುಗಳು ಹೊಸ ಚೈತನ್ಯ ಪಡೆದುವು. ತ್ಯಾಗರಾಜರೂ ಕೂಡ ಇವರ ರಚನೆಗಳಿಗೆ ಮನಸೋತಿದ್ದರು. ಸಂಗೀತ ರೂಪಕಗಳಲ್ಲದೆ 'ವಿಡುತಿ' ಬಿಡು ಕೀರ್ತನೆ ಗಳನ್ನು ರಚಿಸಿದರು ಇವಲ್ಲಿ ಇವರ ಅಂಕಿತವಿಲ್ಲ. ಸಾಹಿತ್ಯವು ಬೇರೆ ಬೇರೆ ವಿಷಯ ಗಳಿಗೆ ಸಂಬಂಧಿಸಿದೆ. ಇವರು ರಚಿಸಿದ ವಿಡುತಿ ಕೀರ್ತನೆಗಳೂ, ಕಣ್ಣಿಗಳೂ ೧೮೦ ಇವೆ. ಇವರ ಸಂಗೀತ ರೂಪಕಗಳಲ್ಲಿರುವ ಕೀರ್ತನೆಗಳು ೪೨೬ ಇವೆ ಒಟ್ಟಿನಲ್ಲಿ ಇವರು ಸಾವಿರಕ್ಕೂ ಮಿಗಿಲಾಗಿ ಕೃತಿಗಳನ್ನು ರಚಿಸಿದ್ದಾರೆ.

ಮಾಯಾವರಂನಲ್ಲಿದ್ದ ಕೃಷ್ಣಾನಂದಯೋಗಿ ಎಂಬ ಇವರ ಮಿತ್ರರು ಇವರ ರಚನೆಗಳನ್ನೆಲ್ಲಾ ಬರೆದಿಟ್ಟರು. ಅಲ್ಲಿ ಮುನ್ಸಿಫ್ ಆಗಿದ್ದ ವೇದನಾಯಕಂಪಿಳ್ಳೈ ಇವರ ಒಬ್ಬ ಅಚ್ಚುಮೆಚ್ಚಿನ ಶಿಷ್ಯರು. ಪಿಳ್ಳೈಯವರ 'ಸರ್ವಸಮಯ ಸಮರಸ ಕೀರ್ತನೆ' ಗಳಲ್ಲಿ ಭಾರತಿಯವರ ಪ್ರಭಾವವನ್ನು ಕಾಣಬಹುದು. ಭಾಗವತದ ದಶಮಸ್ಕಂದದ ಕೀರ್ತನೆಗಳು ಎಂಬ ಗ್ರಂಥದ ಕರ್ತೃವಾದ ಅನಂತಭಾರತಿ (೧೮೪೫-೧೯೦೫) ಇವರ ಸ್ನೇಹಿತರಾಗಿದ್ದರು. ಭಾರತಿಯವರು ತ್ಯಾಗರಾಜರ ನೌಕಾ ಚರಿತಂ ಮತ್ತು ಪ್ರಹ್ಲಾದಭಕ್ತಿವಿಜಯಂ ಎಂಬ ಸಂಗೀತ ರೂಪಕಗಳಿಂದ ಪ್ರಭಾವಿತರಾಗಿದ್ದರು. ಭಕ್ತನಂದನಾರ್‌ರ ಜೀವನ ಚರಿತ್ರೆಯನ್ನು ಸಂಗೀತರೂಪಕದ ವಿಷಯವನ್ನಾಗಿ ತೆಗೆದು ಕೊಂಡು ರಚಿಸಿದರು

'ನಂದನಾರ್' ಚರಿತವು ದಕ್ಷಿಣ ಭಾರತದ ಸಂಗೀತಕ್ಕೆ ಭಾರತಿಯವರ ಒಂದು ಅಮೂಲ್ಯವಾದ ಕೊಡುಗೆ. ಬಹಳ ಜನಪ್ರಿಯವಾದ ಆಗಾಗ್ಗೆ ಪ್ರದರ್ಶಿತವಾಗು ತ್ತಿರುವ ರೂಪಕ. ಇದರ ಹಾಡುಗಳು ಚಿರಪರಿಚಿತವಾಗಿದ್ದು ತಮಿಳು ದೇಶದ ಎಲ್ಲಾ ವರ್ಗಗಳ ಜನರು ಹಾಡುತ್ತಾರೆ. ಭಾರತಿಯವರು ಈ ರೂಪಕದಲ್ಲಿ ತಮ್ಮ ಭಾವನೆ ಮತ್ತು ಅನುಭವಗಳನ್ನು ನೊಗಸಾಗಿ ಚಿತ್ರಿಸಿದ್ದಾರೆ. ಅವರು ಬಳಸಿರುವ ಸುಂದರ ವಾದ ಸಾಹಿತ್ಯ, ಪದಲಾಲಿತ್ಯ, ಪ್ರಾಸಗಳ ನಿನಾದ, ಸಾಹಿತ್ಯದಲ್ಲಿ ಅಡಕವಾಗಿರುವ

ತತ್ವಗಳು, ಜೇನಿನಂತೆ ಹರಿಯುವ ಸಂಗೀತ, ಅವುಗಳಲ್ಲಿರುವ ಉದಾತ್ತ ಭಾವನೆಗಳು, ಕೆಲವು ಕೀರ್ತನೆಗಳಲ್ಲಿ ಅಡಕವಾಗಿರುವ ಸುಂದರವಾದ ಜತಿಗಳು ಇವೆಲ್ಲವೂ ಭಾರತಿ ಯವರಿಗೆ ಅಪಾರ ಕೀರ್ತಿ ತಂದುವು. ನಾಗಪಟ್ಟಣದ ಒಬ್ಬ ಶ್ರೀಮಂತ ವರ್ತಕ ಪ್ರೋತ್ಸಾಹ ಹಾಗೂ ಪೋಷಣೆಯಿಂದ ತನ್ನ ಕೃತಿಯ ಪ್ರಥಮ ಪ್ರದರ್ಶನ ನೀಡಿದರು. ತರುವಾಯ ಹಲವಾರು ಕಡೆ ಪ್ರದರ್ಶನಕ್ಕೆ ಬೇಡಿಕೆ ಬಂದಿತು. ಮೊದಲು ೧೮೬೧ ರಲ್ಲಿ ಗ್ರಂಥರೂಪದಲ್ಲಿ ಪ್ರಕಟಿಸಲ್ಪಟ್ಟಿತು. ೧೯೬೨ರಲ್ಲಿ ದ್ವಿತೀಯಾವೃತ್ತಿ ಪ್ರಕಟಿಸ ಲಾಯಿತು.

ಶೆಕ್ಕಿಲಾರ್ ಕವಿಯ ಪೆರಿಯಪುರಾಣಂ ಎಂಬ ಗ್ರಂಥದಲ್ಲಿ ನಂದನಾರ್‌ರ ವಿಷಯವು ೩೭ ಪದ್ಯಗಳಲ್ಲಿ ಸಂಗ್ರಹವಾಗಿದೆ. ಇಷ್ಟು ಸ್ವಲ್ಪ ವಿಷಯವನ್ನು ಆಧರಿಸಿ ವಿಸ್ತಾರವಾದ ರೂಪಕವನ್ನು ರಚಿಸಿದರು. ವಿಪರೀತ ಮಡಿವಂತ, ನಿರ್ದಯಿ ಮತ್ತು ಹಠವಾದಿಯಾದ ಜಮೀನ್ದಾರ, ಒಬ್ಬ ಜ್ಞಾನವೃದ್ಧ ಮುಂತಾದ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ನಂದನಾರ್ ಮತ್ತು ಜಮೀನ್ದಾರ ಇವರಿಬ್ಬರ ಪಾತ್ರಗಳು ನೇರ ವಿರುದ್ಧವಾದುವು. ಈ ಪಾತ್ರಗಳ ವಿರೋಧವನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಪದ್ಯಗಳ ಅಂತಶ್ಶಕ್ತಿ, ಸ್ವಾಭಾವಿಕವಾಗಿ ಹರಿಯುವ ಸಂಗೀತ, ನಂದನಾರ್ ಬಗ್ಗೆ ಅನುಕಂಪ, ಜಮೀನ್ದಾರನ ಬಗ್ಗೆ ಕ್ರೋಧವುಂಟಾಗುವಂತೆ ಪಾತ್ರ ರಚನೆ, ಸುಂದರ ವಾಚ ಇದು ಶೊಲ್ಲಲಂಕಾರಗಳು ಮತ್ತು ನೊಂಡಿ ಚಿಂದುಗಳು ಭಾರತಿಯ ರಚನಾ ಕೌಶಲ್ಯದ ಪ್ರತೀಕಗಳು. ಈ ರೂಪಕದ ಸಂಗೀತವು ಆಹ್ಲಾದಕರವಾಗಿದೆ. ಭಕ್ತಿ ಯಿಲ್ ಕರೈಕಂಡವನ್ ಪಾರ್ತ್‌ಪಾರ್ತ್‌ವುಂಡರ್ವ ಎಂಬ ಮಾತು ಭಕ್ತಿಯ ಪರಿಚಯವನ್ನು ಪರಿಣಾಮಕಾರಿಯಾಗಿ ಮಾಡುತ್ತದೆ.

ಭಾರತಿಯವರೇ ನಂದನಾರ್ ಚರಿತದ ಕಾಲಕ್ಷೇಪವನ್ನು ಮೂರು ದಿನಗಳ ಕಾಲ ಮಾಡುತ್ತಿದ್ದರು. ಈ ರೂಪಕದ ಜನಪ್ರಿಯತೆಗೆ ಬಹುಮಟ್ಟಿಗೆ ಕಾರಣರಾದ ವರು ಆಧುನಿಕ ಕಥಾಕಾಲಕ್ಷೇಪದ ಪದ್ಧತಿಯನ್ನು ರೂಪಿಸಿದ ತಂಜಾವೂರು ಕೃಷ್ಣ ಭಾಗವತರು (೧೮೪೭–೧೯೦೩). ಭಾರತಿಯವರು ನಂದನಾರ್ ಚರಿತ್ರಂ ಅಲ್ಲದೆ ತಿರುನೀಲಕಂಠ ನಾಯನಾರ್ ಚರಿತ್ರಂ, ಇಯರ್‌ಪಗ್ಗೆನಾಯನಾರ್ ಚರಿತ್ರಂ ಮತ್ತು ಕಾರೈಕ್ಕಾಲ್‌ಅಮ್ಮೈಯಾರ್ ಚರಿತ್ರಂ ಎಂಬ ಚಿಕ್ಕರೂಪಕಗಳನ್ನು ರಚಿಸಿದ್ದಾರೆ. ಇದಲ್ಲದೆ ಜ್ಞಾನಚಿಂದು, ಜ್ಞಾನಕುಮ್ಮಿ, ಚಿದಂಬರಂ ಕಣ್ಣಿ, ಮಾಮಿನಾಟಕಂ ಎಂಬುವುಗಳನ್ನು ರಚಿಸಿದ್ದಾರೆ. ವಿವಾಹ ಸಂದರ್ಭಗಳಲ್ಲಿ ಹಾಡಲು ಹಾಡುಗಳ ಸಾಹಿತ್ಯವನ್ನು ರಚಿಸಿದರು. ಚಿದಂಬರದ ನಟರಾಜ ಮತ್ತು ಗೋವಿಂದರಾಜಸ್ವಾಮಿ ಸನ್ನಿಧಿಗಳಲ್ಲಿ ನಡೆಯುವ ಪೂಜಾದಿಗಳ ಹೋಲಿಕೆ ಮತ್ತು ವಿವರಣೆಯನ್ನು ಸುರಟಿ ರಾಗದ ತಿಲ್ಲೈಯಂಬಲತ್ತಾನೈ ಎಂಬ ಹಾಡಿನಲ್ಲಿ ಚಿತ್ರಿಸಿರುವರು. ವಸಂತರಾಗದ ನಟನಮಾಡಿನಾರ್ ಎಂಬ ಹಾಡು ನೃತ್ಯಪ್ರದರ್ಶನಗಳಲ್ಲಿ ಬಹುವಾಗಿ ಪ್ರಚಾರವಾಗಿದೆ.

ಆಡಿಯು ಪಾದ ಎಂಬ ಕೀರ್ತನೆಯಲ್ಲಿ ತಾಂ ಎಂಬ ಜತಿ ಅಕ್ಷರವನ್ನು ಎರಡು ಅರ್ಥಗಳುಂಟಾಗುವಂತೆ ಬಳಸಿದ್ದಾರೆ. ಇವರ ರಚನೆಗಳು ರಾಗ, ಲಯ, ತಾಳ, ಯತಿ, ಪ್ರಸ್ತಾರ, ಲಕ್ಷ್ಯಲಕ್ಷಣ, ಸಂವಿಧಾನಪ್ರತ್ಯಯ ಪರಿಪೂರ್ಣವಾಗಿ ನವರಸಭರಿತವಾಗಿ ಸರ್ವಾಂಗಪುಷ್ಟವಾಗಿವೆ. ಭಾರತಿಯವರು ತಮ್ಮ ೮೬ನೆ ವಯಸ್ಸಿನಲ್ಲಿ ಮಹಾಶಿವರಾತ್ರಿಯ ದಿನ ಕಾಲವಾದರು.

**ಗೋಪಾಲಕೃಷ್ಣಯತಿ** —ಇವರು ಹಲವು ಭಕ್ತಿಕೃತಿಗಳನ್ನು ಕೃಷ್ಣ ಎಂಬ ಅಂಕಿತದಲ್ಲಿ ರಚಿಸಿರುವ ಪ್ರಸಿದ್ಧ ವಾಗ್ಗೇಯಕಾರ. ಇವರು ರಚಿಸಿರುವ ಕೇದಾರಗೌಳ ರಾಗದ 'ಭಕ್ತೇ ಶ್ರೀಧರವೆಂಕಟ ಗುರುವರ್ಯ' ಎಂಬ ತೆಲುಗು ಕೃತಿಯು ಪ್ರಸಿದ್ಧವಾಗಿದೆ. ಇದು ಮಹಾಭಕ್ತರಾಗಿದ್ದ ಶ್ರೀಧರವೆಂಕಟೇಶ್ವರದೀಕ್ಷಿತರ (ಅಯ್ಯಾವಾಳ್) ಸ್ತುತಿಯಾಗಿದೆ.

**ಗೋಪತಿ**—ಈ ರಾಗವು ೪೨ನೆ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ

ಅ: ಪ ಮ ಗ ರಿ ಸ ನಿ

**ಗೋಪಾಲದಾಸ**—ಇದು ತ್ಯಾಗರಾಜರ ಶಿಷ್ಯ ವೀಣೆ ಕುಪ್ಪಯ್ಯರ್ ಮತ್ತು ಅವರ ಪುತ್ರ ತಿರುವೊಟ್ಟಿಯೂರ್ ತ್ಯಾಗಯ್ಯರ್ ತಮ್ಮ ಸಂಗೀತರಚನೆಗಳಲ್ಲಿ ಬಳಸಿರುವ ಅಂಕಿತ. ವೇಣುಗೋಪಾಲಸ್ವಾಮಿಯು ಈ ವಾಗ್ಗೇಯಕಾರರ ಮನೆ ದೇವರಾದ್ದರಿಂದ ತಮ್ಮ ಭಕ್ತಿಸೂಚಕವಾಗಿ ಈ ಅಂಕಿತವನ್ನು ಬಳಸಿದ್ದಾರೆ. ಕುಪ್ಪಯ್ಯರ್‌ರವರ ರಚನೆಗಳನ್ನು ಪಲ್ಲವಿ ಸ್ವರಕಲ್ಪವಲ್ಲಿ (೧೯೦೦) ಎಂಬ ಗ್ರಂಥದಲ್ಲಿ ಮತ್ತು ತ್ಯಾಗಯ್ಯರ್‌ರ ರಚನೆಗಳನ್ನು ಸಂಕೀರ್ತನ ರತ್ನಾವಳಿ (೧೯೦೮) ಎಂಬ ಗ್ರಂಥದಲ್ಲಿ ಪ್ರಕಟಿಸಲಾಗಿದೆ. ಇವೆರಡೂ ತೆಲುಗು ಗ್ರಂಥಗಳು. ತಂದೆ ಮತ್ತು ಮಗನ ಅಂಕಿತವು ಒಂದೇ ಆಗಿದ್ದರೂ, ಅವರ ರಚನೆಗಳು ಬೇರೆ ಬೇರೆ ಗ್ರಂಥಗಳಲ್ಲಿರುವುದರಿಂದ ಗೊಂದಲಕ್ಕೆ ಅವಕಾಶವಿಲ್ಲ.

**ಗೋಪಾಲದಾಸರು** (೧೭೨೨–೧೭೮೫)—ಗೋಪಾಲದಾಸರು ಕರ್ನಾಟಕದ ರಾಯಚೂರ್ ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸರುಕಲ್ಲು ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಹರಿತಸ ಗೋತ್ರದ ಮುರಾರಿರಾಯರು ಮತ್ತು ತಾಯಿ ವೆಂಕಮ್ಮ. ಗೋಪಾಲದಾಸರ ಮೊದಲ ಹೆಸರು ಭಾಗಣ್ಣ. ತಮ್ಮಂದಿರು ಮೂರು ಮಂದಿ. ಚಿಕ್ಕಂದಿನಲ್ಲಿ ತಂದೆಯ ವಿಯೋಗದಿಂದ ತಾಯಿ ವೆಂಕಮ್ಮ ನಿರ್ಗತಿಕರಾಗಿ ಮಕ್ಕಳ ಸಹಿತ ಭಿಕ್ಷುಕಳಾಗಿ ಸಂಚರಿಸುತ್ತಾ ಗದ್ವಾಲ ಸಂಸ್ಥಾನದ ಸಂಕಾಪುರಕ್ಕೆ ಬಂದು ಅಲ್ಲಿಯ ಮಾರುತಿಯ ಗುಡಿಯಲ್ಲಿದ್ದು ಜೀವನ ಸಾಗಿಸುತ್ತಿದ್ದಳು. ಭಾಗಣ್ಣನಿಗೆ ಚಿಕ್ಕಂದಿನಲ್ಲೇ ಧರ್ಮೋಪನಯನವಾಗಿ ಗಾಯತ್ರಿ ಪುನಶ್ಚರಣೆಯಿಂದ ವಾಕ್ಸಿದ್ಧಿ ಪಡೆದರು. ಇದರ ಪ್ರಭಾವದಿಂದ ಜನರಿಗೆ ಭವಿಷ್ಯ ಹೇಳಲು ತೊಡಗಿದರು. ದ್ರವ್ಯಾರ್ಜನೆಯಲ್ಲದೆ ಅದ್ಭುತ ಕವಿತಾ ಶಕ್ತಿ ಬಂದಿತು. ಗದ್ವಾಲದ ರಾಜನು

ಇವರನ್ನು ಸನ್ಮಾನಿಸಿದನು. ಮುಂದೆ ತಾಯಿ ಮತ್ತು ತಮ್ಮಂದಿರೊಡನೆ ಉತ್ತನೂರಿನಲ್ಲಿ ವಾಸಿಸತೊಡಗಿದರು. ವಿಜಯದಾಸರ ಶಿಷ್ಯರಾಗಿ ಗೋಪಾಲವಿಠಲ ಎಂಬ ಅಂಕಿತವನ್ನು ಪಡೆದರು. ಗೋಪಾಲದಾಸರಾಗಿ ತಮ್ಮಂದಿರಿಗೆ ವರದಗೋಪಾಲವಿಠಲ, ಗುರು ಗೋಪಾಲವಿಠಲ, ತಂದೆ ಗೋಪಾಲವಿಠಲ ಎಂಬ ಅಂಕಿತವನ್ನು ಅನುಗ್ರಹಿಸಿದರು. ಕೊನೆಯ ತಮ್ಮ ರಂಗಪ್ಪನ ವಿನಾ ಮಿಕ್ಕ ಇಬ್ಬರೂ ಅಪರೋಕ್ಷ ಜ್ಞಾನಿಗಳೆನಿಸಿದರು.

ಗೋಪಾಲದಾಸರು ಎಲ್ಲ ಕ್ಷೇತ್ರಗಳನ್ನು ಸಂದರ್ಶಿಸಿ ಅನೇಕ ಪದಗಳನ್ನೂ ಸುಳಾದಿಗಳನ್ನೂ ರಚಿಸಿದರು. ವಿಜಯದಾಸರ ಅಪ್ಪಣೆಯಂತೆ ಬ್ಯಾಗವಟ್ಟಿ ಶ್ರೀನಿವಾಸಾಚಾರ್ಯರಿಗೆ ತಮ್ಮ ಆಯುಷ್ಯದಲ್ಲಿ ೪೦ ವರ್ಷ ಆಯುಷ್ಯವನ್ನು ದಾನ ಮಾಡಿದರು. ಇವರೇ ಮುಂದೆ ಜಗನ್ನಾಥದಾಸರೆಂದು ಪ್ರಖ್ಯಾತರಾದರು. ಗೋಪಾಲದಾಸರ ಜೀವನದಲ್ಲಿ ನಡೆದ ಪವಾಡಗಳು ಹಲವು ಇವರು ಪಂಡರಪುರಕ್ಕೆ ಬರುವಂತೆ ವಿಠಲನು ಒಬ್ಬ ಅಶ್ವಾರೋಹಿ ರೂಪದಲ್ಲಿ ದರ್ಶನವಿತ್ತು ಆಜ್ಞೆ ಮಾಡಿ ಮರೆಯಾದನು ಪಂಡರಪುರದ ನಂತರ ದಾಸರು ಮೈಸೂರು, ಶಿವಮೊಗ್ಗದ ಮೂಲಕ ಉಡುಪಿಗೆ ಹೋದರು. ದಾರಿಯಲ್ಲಿ ಯಾತ್ರಿಕರಿಗೆ ಕಂಟಕನಾಗಿ ಸುಲಿಗೆ ಮಾಡಿ ಜೀವಿಸುತ್ತಿದ್ದ ಮುಂಡಗದ್ದೆ ಭೀಮಸೆಂಬುವನು ಇವರ ತಂಡದೊಡನೆ ಸೇರಿ ಕೊಂಡನು. ದಾಸರು ಠಕ್ಕರು ಎತ್ತಿದ ಕೈಯನ್ನು ಇಳಿಸಲಾಗದಂತೆ, ನಾಲಿಗೆ ನಿಂತು ಹೋಗಿ ಕಣ್ಣು ಕಾಣದಂತೆ ಮಾಡಿ ಎಲ್ಲರನ್ನೂ ಕಾಪಾಡಿದರು ಜಗನ್ನಾಥರಿಗೆ ಆಯುರ್ದಾನ ಮಾಡಿದ್ದರಿಂದ ಅವರ ಉದರಶೂಲೆಯು ಇವರ ಬೆನ್ನು ಹತ್ತಿತು. ಹೀಗಿದ್ದಾಗ ಒಂದು ಸಲ ತಿರುಪತಿಯ ಬ್ರಹ್ಮೋತ್ಸವಕ್ಕೆ ಪಾದಚಾರಿಗಳಾಗಿ ಪ್ರಯಾಣ ಬೆಳೆಸಿದರು. ತಮ್ಮ ಜೊತೆಗೆ ಬಂದು ಸೇರದ ದಾಸರನ್ನು ಕುರಿತು ಅವರ ತಮ್ಮ ದಾಸಪ್ಪದಾಸರು ಕೀರ್ತನೆ ಮಾಡಿ ಭಗವಂತನನ್ನು ಸ್ತುತಿಸಿದರು. ಇದರ ಪರಿಣಾಮವಾಗಿ ಗೋಪಾಲದಾಸರಿಗೆ ಉದರವ್ಯಾಧಿಯು ಪರಿಹಾರವಾಯಿತು. ದಾಸರ ಅಪರೋಕ್ಷ ಜ್ಞಾನವನ್ನು ಪರೀಕ್ಷೆ ಮಾಡಲು ಉತ್ತರಾದಿಮಠದ ಸತ್ಯ ಬೋಧರು ಪ್ರಯತ್ನಿಸಿ ಇವರ ಜ್ಞಾನಕ್ಕೆ ತಲೆತೂಗಿದರು. ರಾಯಚೂರಿನಿಂದ ಮಂತ್ರಾಲಯದ ಮಾರ್ಗವಾಗಿ ಉತ್ತನೂರಿಗೆ ಪ್ರಯಾಣ ಮಾಡುತ್ತಿದ್ದಾಗ ಒಂದು ಗ್ರಾಮದ ಗೌಡನಿಗೆ ಹರಕೆಯಂತೆ ಮೂರು ಸಹೋದರರ ಭೋಜನ ಮಾತ್ರದಿಂದ ಲಕ್ಷ ಬ್ರಾಹ್ಮಣ ಭೋಜನ ಮಾಡಿಸಿದ ಪುಣ್ಯ ಪ್ರಾಪ್ತಿಯಾಗುವುದಲ್ಲದೆ ಅವನ ಮೂರು ತಲೆಮಾರಿನವರೆಗೆ ಮಹದೈಶ್ವರ್ಯ ಮತ್ತು ವಂಶಾಭಿವೃದ್ಧಿಯಾಗುವಂತೆ ಮಾಡಿದರು. ಈ ರೀತಿ ಅನೇಕ ಮಹಿಮೆಗಳನ್ನು ತೋರಿ ಉತ್ತನೂರಿನಲ್ಲಿ ೧೭೬೫ರಲ್ಲಿ ವೈಕುಂಠವಾಸಿಗಳಾದರು. ಇವರ ಶಿಷ್ಯರಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದವರಲ್ಲಿ ಕೆಲವರು ಹೆಳವನಕಟ್ಟೆ ಗಿರಿಯಮ್ಮ ಮತ್ತು ವ್ಯಾಸತತ್ವಜ್ಞರು.

ಗೋಪಾಲದಾಸರ ಪದಗಳು ಮತ್ತು ಸುಳಾದಿಗಳು ಅತ್ಯಂತ ಪ್ರಸಿದ್ಧವಾದುವು. ಇವು ಭಾವಗರ್ಭಿತವಾಗಿ, ಪ್ರಮೇಯಪುಷ್ಟವೂ ಭಗವದ್ಭಕ್ತಿಪೂರ್ಣವಾಗಿದೆ. ಇವರ

ಸುಳಾದಿಗಳಲ್ಲಿ ಹರಿಯ ಮಹಿಮೆಯು, ಶಾಸ್ತ್ರಾರ್ಥವೂ ಬಹು ವಿಸ್ತಾರವಾಗಿ ವರ್ಣಿತವಾಗಿದೆ. ದಾಸಸಾಹಿತ್ಯದಲ್ಲಿ ಗೋಪಾಲದಾಸರ ಕೃತಿಗಳಿಗೆ ಬಹಳ ಮಹತ್ವವಿದೆ. ಇವರ ಮಡಿ ಸುಳಾದಿ ಬಹು ಬೋಧಪ್ರದ. ಇವರು ರಚಿಸಿ ಹಾಡಿದ ಸುರಟಿರಾಗದ ಮಂಗಳಂ ಮಂಗಳಂ ದಯಾನಿಧೇ ಮಂಗಳಂ ಮಂಗಳಂ ಎಂಬ ಕೃತಿಯನ್ನು ಈಗಲೂ ಉತ್ತನೂರಿನ ವೆಂಕಟೇಶ ದೇವಾಲಯದಲ್ಲಿ ಹಾಡುತ್ತ ಸ್ವಾಮಿಗೆ ಆರತಿ ಎತ್ತುವುದು ಪದ್ಧತಿಯಾಗಿ ಬಂದಿದೆ.

**ಗೋಪಾಲನಾಯಕ** – ಇವನು ಅಲ್ಲಾವುದ್ದೀನ ಖಿಲ್ಜಿಯ (೧೨೯೫–೧೩೧೫) ಆಸ್ಥಾನವಿದ್ವಾಂಸನಾಗಿದ್ದನು ಹಾಗೂ ಅತ್ಯಂತ ಪ್ರಸಿದ್ಧ ಗಾಯಕ ಮತ್ತು ವಾಗ್ಗೇಯಕಾರನಾಗಿದ್ದನು. ಅದೇ ಆಸ್ಥಾನ ಕವಿ ಮತ್ತು ಪರ್ಷಿಯನ್ ವಿದ್ವಾಂಸನಾಗಿದ್ದ ಅಮೀರ್ ಖುಸ್ರುವಿಗೆ ಗೋಪಾಲನಾಯಕನಲ್ಲಿ ಅಪಾರ ಗೌರವ ಮತ್ತು ಸ್ನೇಹವಿದ್ದಿತು. ಒಂದು ಸಲ ಗೋಪಾಲನಾಯಕನು ಒಂದೇ ರಾಗವನ್ನು ಏಳು ದಿನ ಸಾಯಂಕಾಲದಲ್ಲಿ ಹಾಡಿದ್ದನ್ನು ಅಮೀರ್‌ಖುಸ್ರುವು ಅಲ್ಲಾವುದ್ದೀನನ ಸಿಂಹಾಸನದ ಹಿಂದೆ ಅವಿತುಕೊಂಡು ಕೇಳಿ ಆ ರಾಗದ ಮುಖ್ಯಾಂಶಗಳು ಮತ್ತು ಸ್ವರಗಳನ್ನು ಗುರುತು ಮಾಡಿಕೊಂಡು, ಎಂಟನೆಯ ಸಂಜೆ ನಾಯಕನ ಶೈಲಿಯಲ್ಲಿ ಹಾಡಿ ಎಲ್ಲರನ್ನೂ ಬೆರಗುಗೊಳಿಸಿದನು. ಗೋಪಾಲನಾಯಕನೂ ಖುಸ್ರುವೂ ಆತ್ಮೀಯ ಗೆಳೆಯರಾಗಿ ಆಗಾಗ್ಗೆ ಸಂಗೀತದ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಗೋಪಾಲನಾಯಕನು ತಾಳಾರ್ಣವಂ, ರಾಗ ಕದಂಬಕಂ ಮತ್ತು ಗ್ರಹಸ್ವರ ಪ್ರಬಂಧಂ ಎಂಬ ಮೂರು ಗ್ರಂಥಗಳನ್ನು ರಚಿಸಿದ್ದಾನೆ. ಕಲ್ಲಿನಾಥನು ಈ ಗ್ರಂಥಗಳಿಂದ ಹಲವು ಅಂಶಗಳನ್ನು ಉದಾಹರಿಸಿದ್ದಾನೆ. ಗೀತ, ಆಲಾಪ, ಠಾಯ ಮತ್ತು ಪ್ರಬಂಧಗಳನ್ನು ಹಾಡುವುವರಲ್ಲಿ ನಾಯಕನು ಅದ್ವಿತೀಯನಾಗಿದ್ದನು. ಸಂಗೀತ ಕ್ಷೇತ್ರದಲ್ಲಿ ಗೋಪಾಲನಾಯಕನ ಸ್ಥಾನವು ಅದ್ವಿತೀಯವಾದುದು. ಖುಸ್ರು ಮತ್ತು ನಾಯಕ ಇವರಿಬ್ಬರೂ ಸಂಗೀತ ಪದ್ಧತಿಗಳ ಮಥನ, ವಿಮರ್ಶೆ, ಮಿಲನ ಮತ್ತು ಪ್ರಯೋಗಮಾಡಿ ಹಿಂದೂಸ್ಥಾನಿ ಗಾನಪದ್ಧತಿಯ ಆದಿಪುರುಷರಾದರು.

**ಗೋಪಿಕಾಕುಸುಮ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳ ರಾಗದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ

ಅ: ಸ ನಿ ದ ಮ ರಿ ಸ

**ಗೋಪಿಕಾಗೀತ**—ಇವು ತತ್ವಬೋಧಕವಾದ ಸಂಸ್ಕೃತದ ಹಾಡುಗಳು. ಇವನ್ನು ಭಜನೆಗಳಲ್ಲಿ ಹಾಡುತ್ತಾರೆ.

**ಗೋಪಿಕಾಂಭೋಧಿ**—ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೋಪಿಕಾಭರಣಂ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋದಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗೋಪಿಕಾಭೂಷಣಂ**—ಈ ರಾಗವು ೧೫ನೆ ಮೇಳಕರ್ತ ಮಾಯಾ ಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ

ಅ: ಸ ನಿ ದ ಮ ರಿ ಸ

**ಗೋಪೀಚಂದ್**—ಇದು ಬಿದಿರಿನ ಒಂದು ವಾದ್ಯ. ಇದಕ್ಕೆ ನಂದಿ ಎಂದು ಹೆಸರು. ಇದರಲ್ಲಿ ಒಂದು ತಂತಿ ಇದೆ. ಹಲವು ಸಣ್ಣ ಬಿದಿರಿನ ಕಡ್ಡಿಗಳಿದ್ದು ತಂತಿ ಯನ್ನು ಸಡಿಲ ಅಥವಾ ಬಿಗಿ ಮಾಡಬಹುದು ಇದನ್ನು ಛೋಟಾನಾಗಪುರದ ಪ್ರದೇಶದಲ್ಲಿ ನುಡಿಸುತ್ತಾರೆ.

**ಗೋಪಿಕಾತಿಲಕಂ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗೋಪಿಕಾಮನೋರಂಜನಿ**—ಈ ರಾಗವು ೬೭ನೆ ಮೇಳಕರ್ತ ಸುಚರಿತ್ರದ ಒಂದು ಜನ್ಯರಾಗ

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗೋಪುಚ್ಛಯತಿ**—ಇದು ತಾಳ ದಶಪ್ರಾಣಗಳಲ್ಲಿ ೯ನೆಯದಾದ **ಯತಿ** ಪ್ರಾಣದಲ್ಲಿ ಒಂದಾಗಿದೆ. ತಾಳಾಂಗಗಳಲ್ಲಿ ಸಾಹಿತ್ಯಾಕ್ಷರಗಳು ಹಸುವಿನ ಬಾಲದಂತೆ ಹೆಚ್ಚುವರಿಯ ಕ್ರಮದಿಂದ ಅಲ್ಪಾರ್ಥವಾಗಿ ಬರುವುದು. ಅಂಗಗಳಲ್ಲಿ ಮೊದಲು ಕಾಕಪಾದ, ಪ್ಲುತ, ಗುರು, ಲಘು ಹೀಗೆ ಅಕ್ಷರಕಾಲಗಳು ಅವರೋಹಣ ಕ್ರಮ ದಲ್ಲಿರುತ್ತವೆ ಉದಾ: ದೀಕ್ಷಿತರ ಶ್ರೀವರಲಕ್ಷ್ಮಿ ನಮಸ್ತುಭ್ಯಂ ಎಂಬ ಶ್ರೀರಾಗದ ಕೃತಿಯಲ್ಲಿ ಗೋಪುಚ್ಛಯತಿಯು ಈ ರೀತಿ ಬರುತ್ತದೆ.

ಶ್ರೀ ಸಾ ರ ಸ ಪ ದೇ

ರ ಸ ಪ ದೇ

ಸ ಪ ದೇ

ಪ ದೇ

ಮಾಯೆ ತ್ವಂ ಯಾಹಿ ಎಂಬ ಸುಧಾತರಂಗಿಣಿ ರಾಗದ ಕೃತಿಯಲ್ಲಿ

ಸ ರ ಸ ಕಾ ಯೇ
ರ ಸ ಕಾ ಯೇ
ಸ ಕಾ ಯೇ
ಆ ಯೇ

ಇದಕ್ಕೆ ವಿರುದ್ಧವಾದುದು ಶ್ರೋತೋವಹಯತಿ.

**ಗೋಟ್ನಾರಿ**—ಈ ರಾಗವು ೬೩ನೆಯ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ
ಅ: ಸ ನಿ ದ ಪ ಗ ರಿ ಸ

**ಗೋಪಿಕಾವಸಂತ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

(೧) ಆ: ಸ ಮ ಪ ನಿ ದ ನಿ ದ ಸ
ಅ: ಸ ನಿ ದ ಪ ಮ ಗ ಸ
(೨) ಆ: ರಿ ಸ ರಿ ಗ ಮ ಪ ದ ಪ ನಿ ನೀ ಸ
ಅ: ಸ ನಿ ದ ಪ ಮ ಗ ರಿ ಮ ಗ ಸ

**ಗೋಪ್ರಿಯ**—ಈ ರಾಗವು ೬೨ನೆ ಮೇಳಕರ್ತ ರಿಷಭಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಮ ದ ನಿ ಸ
ಅ: ಸ ನಿ ದ ಮ ಗ ರಿ ಸ

ಈ ರಾಗವನ್ನು ಫ್ರಾನ್ಸಿನ ವಾಗ್ಗೇಯಕಾರ ಡೆಬುಸ್ಸಿ ಎಂಬುವನು ಯೂರೋಪಿನಲ್ಲಿ ಪ್ರಚಾರಕ್ಕೆ ತಂದನು. ಈ ರಾಗದಲ್ಲಿ ಗ್ರಹಭೇದ ಮಾಡಿದರೆ, ಯಾವ ಸ್ವರವನ್ನು ಆಧಾರ ಷಡ್ಜವನ್ನಾಗಿ ತೆಗೆದುಕೊಂಡರೂ ಗೋಪ್ರಿಯರಾಗದ ಆರೋಹಣ ಅವರೋಹಣಗಳುಂಟಾಗುತ್ತವೆ.

**ಗೋಪುರಂ**—ಮದ್ರಾಸಿನ ಪಶ್ಚಿಮಕ್ಕೆ ಹನ್ನೆರಡೂವರೆ ಮೈಲಿ ದೂರ ದಲ್ಲಿರುವ ಕೋವೂರು ಎಂಬ ಸ್ಥಳಕ್ಕೆ ತ್ಯಾಗರಾಜರು ಭೇಟಿಕೊಟ್ಟು ಕೋವೂರು ಪಂಚರತ್ನವೆಂದು ಪ್ರಸಿದ್ಧವಾಗಿರುವ ಸಮುದಾಯ ಕೃತಿಗಳನ್ನು ರಚಿಸಿದರು. ಶಂಭೋ ಮಹಾದೇವ ಎಂಬ ಪಂತುವರಾಳಿ ರಾಗದ ಕೃತಿಯಲ್ಲಿ ಅಲ್ಲಿಯ ದೇವರನ್ನು ಗೋಪುರವಾಸ ಎಂದು ಹೇಳಿದ್ದಾರೆ. ಕೋವೂರಿಗೆ ಗೋಪುರ ಎಂಬ ಮತ್ತೊಂದು ಹೆಸರುಂಟು.

**ಗೋಟು**—ಗೋಟುವಾದ್ಯವನ್ನು ನುಡಿಸಲು ಉಪಯೋಗಿಸುವ ಮರದ ತುಂಡಿಗೆ ಗೋಟು ಎಂದು ಹೆಸರು.

**ಗೋಟುಮೀಟು**—ಇದು ವೀಣೆಯ ತಂತಿಗಳನ್ನು ಮೀಟುವ ೨೨ ವಿಧಾನಗಳಲ್ಲಿ ಒಂದು ವಿಧ. ಇದೊಂದು ಸಂಕೀರ್ಣಮೀಟು. ಸಾರಣಿ ತಂತಿಯನ್ನು ಬಲಗೈಯ ತೋರುಬೆರಳಿನಿಂದ ಕೆಳಕ್ಕೆ ಮೀಟಿ ತಾಳದ ತಂತಿಯನ್ನು ಕಿರುಬೆರಳಿನಿಂದ ಅದೇ ವೇಳೆಯಲ್ಲಿ ಮೇಲಕ್ಕೆ ಮೀಟುವುದು ಗೋಟುಮೀಟು

**ಗೋಟುವಾದ್ಯ**—ಇದು ದಕ್ಷಿಣಭಾರತದ ಒಂದು ಪ್ರಸಿದ್ಧ ತಂತೀವಾದ್ಯ. ಕಲಾವಿದನ ಬೆರಳುಗಳ ನೇರ ಸಂಪರ್ಕವಿಲ್ಲದೆ ನುಡಿಸುವ ವಾದ್ಯಗಳಲ್ಲಿ ಇದು ಪ್ರಸಿದ್ಧ. ಇದು ಸುಮಾರು ನಾಲ್ಕು ಶತಮಾನಗಳಷ್ಟು ಪುರಾತನವಾದುದು ೭-೧೩ ಶತಾಬ್ದಿಗಳ ಕಾಲದ ಶಿಲ್ಪದಲ್ಲಿ ಈ ವಾದ್ಯವಿಲ್ಲದಿರುವುದರಿಂದ ಇದು ಇತ್ತೀಚಿನ ವಾದ್ಯವೆಂದು ಹೇಳಬಹುದು. ೧೭ನೆ ಶತಾಬ್ದಿಯಲ್ಲಿ ರಘುನಾಥನಾಯಕ ವಿರಚಿತ ಶೃಂಗಾರ ಸಾವಿತ್ರಿ ಎಂಬ ತೆಲುಗು ಕಾವ್ಯದಲ್ಲಿ ಈ ವಾದ್ಯದ ಹೆಸರು ಬರುತ್ತದೆ. ಇದಕ್ಕೆ ಮಹಾನಾಟಕ ವೀಣೆಯೆಂದು ಹೆಸರು. ಇದನ್ನು ಗೇಯನಾಟಕ ಮತ್ತು ನೃತ್ಯನಾಟಕಗಳಲ್ಲಿ ಹೆಚ್ಚಾಗಿ ಬಳಸುತ್ತಿದ್ದರು ಇದು ಕಚೇರಿಗೆ ಅತ್ಯಂತ ಸಮರ್ಪಕವಾದ ವಾದ್ಯ. ಗೂಟ ಎಂದರೆ ಮರದ ತುಂಡು ಈ ತುಂಡಿನಿಂದ ಈ ವಾದ್ಯವನ್ನು ನುಡಿಸುವುದರಿಂದ ಇದಕ್ಕೆ ಗೋಟುವಾದ್ಯ ಎಂದು ಹೆಸರು ಬಂದಿದೆ.

ತಮಿಳಿನಲ್ಲಿ ಕೋಡು ಎಂದರೆ ಒಂದು ತುಂಡು ಕೋಡುವಾದ್ಯ ಎಂಬ ಹೆಸರು ಗೋಟುವಾದ್ಯ ಎಂದಾಗಿದೆ. ರಘುನಾಥನಾಯಕನ ಕಾಲದಲ್ಲಿ ತಂಜಾವೂರು ವೀಣೆಯನ್ನು ರೂಪಿಸಿದಾಗ ಗೋಟುವಾದ್ಯದ ಕಲ್ಪನೆಯು ವಿಕಾಸಗೊಂಡಿತು ವೀಣೆಯಲ್ಲಿರುವ ಮೆಟ್ಟಲುಗಳನ್ನು ಕಳಚಿದರೆ ಉಳಿಯುವುದೇ ಈ ವಾದ್ಯ. ಇದು ಮೆಟ್ಟಲುಗಳಿಲ್ಲದ ವೀಣೆ ಇದು ಎಲ್ಲಾ ರೀತಿಯಲ್ಲೂ ವೀಣೆಯನ್ನು ಹೋಲುವ ವಾದ್ಯವಾದರೂ ಮೆಟ್ಟಲುಗಳಿಲ್ಲದ ಕಾರಣ ಇದನ್ನು ಊರ್ಧ್ವಮುಖವಾಗಿ ನಿಲ್ಲಿಸಿಕೊಂಡಾಗಲೀ ಅಥವಾ ತೊಡೆಯ ಮೇಲೆ ಅಡ್ಡಲಾಗಿ ಇಟ್ಟುಕೊಂಡಾಗಲೀ ನುಡಿಸಲು ಸಾಧ್ಯವಿಲ್ಲ. ಇದನ್ನು ನೆಲದ ಮೇಲೆ ಇಟ್ಟು, ವೀಣೆಯಂತೆಯೇ ಶ್ರುತಿಮಾಡಲ್ಪಟ್ಟ ತಂತಿಗಳ ಮೇಲೆ, ಎಡಗೈಯಲ್ಲಿ ಮರದ ಅಥವಾ ಕೊಂಬಿನ ತುಂಡನ್ನು ಹಿಡಿದು, ಅದನ್ನು ಸ್ವರಸ್ಥಾನಗಳ ಮೇಲೆ ಜರುಗಿಸಿ, ಬಲಗೈ ಬೆರಳುಗಳಿಂದ ಮೀಟುಹಾಕಿ ನುಡಿಸಬೇಕು ಮೆಟ್ಟಲುಗಳಿಲ್ಲದಿರುವುದರಿಂದ ಈ ವಾದ್ಯದ ತಂತಿಯನ್ನು ಬಿಗಿಯಾಗಿ ಶ್ರುತಿ ಮಾಡಲಾಗುವುದು. ಆದ್ದರಿಂದ ಹೆಚ್ಚು ನಾದವು ಹೊರಹೊಮ್ಮುತ್ತದೆ. ಸ್ವರಸ್ಥಾನಶುದ್ಧಿಯಿಂದ ಈ ವಾದ್ಯವನ್ನು ನುಡಿಸಲು ಅಪಾರ ಸಾಧನೆ ಬೇಕು.

ತಂತಿಗಳನ್ನು ಮೀಟಿ ನುಡಿಸುವ ವಾದ್ಯಗಳ ಗುಂಪಿಗೆ ಸೇರಿದ ವಾದ್ಯವನ್ನು ಒಂದು ಮರದ ತುಂಡನ್ನು ಜರುಗಿಸುವುದರಿಂದ ನುಡಿಸಬಹುದೆಂಬ ಭಾವನೆಯು ೨೦೦೦ ವರ್ಷಗಳಿಗೂ ಹಿಂದಿನದು. ಅಮರಾವತಿ ಶಿಲ್ಪದಲ್ಲಿ ಹಾರ್ಪ್‌ವಾದ್ಯಗಾರನ ಕೈಯಲ್ಲಿ ಮರದ ಒಂದು ಚಿಕ್ಕ ತುಂಡು ಇರುವುದನ್ನು ಕಾಣಬಹುದು.

ಗೋಟುವಾದ್ಯದ ಮುಖ್ಯ ಪರಿಕರಗಳು ಹಲಸಿನಮರ; ಭೂಮಿಯನ್ನು ದೃಷ್ಟಿಸುವಂತೆ ಬಗ್ಗಿದ ವ್ಯಾಳೀ ಮುಖದ ತಲೆ, ವೀಣೆಯಂತೆಯೇ ಹಲಸಿನ ಮರದ ಕೊಡ; ಇದರ ಮಟ್ಟಸವಾದ ಮೇಲ್ಭಾಗದಲ್ಲಿ ಮರದ ಮುಖ್ಯಕುದುರೆ; ಇದರ ಮೇಲೆ ಬೆಳ್ಳಿ ಅಥವಾ ಪಂಚಲೋಹದ ಸಣ್ಣಪ್ಲೇಟ್. ಈ ಕುದುರೆಗೆ ಸೇರಿಸಿರುವ ಪಕ್ಕದ ಬ್ರಿಡ್ಜ್ ಇರುತ್ತದೆ ಕೊಡವನ್ನು ದಂಡಿಯ ಬುಡಕ್ಕೆ ದಂತದ ತುಂಡಿನಿಂದ ಸೇರಿಸಲಾಗಿದೆ. ದಂಡಿಯ ಮೇಲಿನ ಭಾಗಕ್ಕೆ ತೆಳುವಾದ ಮರದ ಹಲಗೆಯನ್ನು ಜೋಡಿಸಲಾಗಿದೆ. ದಂಡಿಯ ಕತ್ತಿನ ಭಾಗವು ಕೆಳಕ್ಕೆ ಬಗ್ಗಿದೆ. ಕತ್ತಿನ ಕೆಳಭಾಗದಲ್ಲಿ ಸೋರೆಬುರುಡೆಯನ್ನು ಸೇರಿಸಲಾಗಿದೆ. ಇದರ ಕೆಳಭಾಗದಲ್ಲಿ ರಂಧ್ರವಿದೆ. ಈ ವಾದ್ಯಕ್ಕೆ ಎಂಟು ತಂತಿಗಳಿವೆ. ನುಡಿಸುವುದಕ್ಕಾಗಿ ಐದು, ಶ್ರುತಿ ಮತ್ತು ತಾಳಕ್ಕಾಗಿ ಮೂರು ತಂತಿಗಳಿವೆ. ಐದರಲ್ಲಿ ಒಂದಕ್ಕೊಂದು ಸಮೀಪದಲ್ಲಿರುವ ಎರಡು ತಂತಿಗಳು ಸಾರಣಿ ತಂತಿಗಳು. ಇತರ ಮೂರು ತಂತಿಗಳು ಪಂಚಮ, ಮಂದ್ರ ಮತ್ತು ಅನುಮಂದ್ರದ ತಂತಿಗಳು. ಅವರೋಹಣ ಕ್ರಮದಲ್ಲಿ ಈ ಐದು ತಂತಿಗಳನ್ನು ಸ ಸ ಪ̣ ಸ̣ ಪ̣ ಗಳಿಗೆ ಶ್ರುತಿ ಮಾಡಲಾಗುತ್ತದೆ. ಪಕ್ಕದ ಮೂರು ತಂತಿಗಳನ್ನು ಸ ಪ ಸ ಗಳಿಗೆ ಶ್ರುತಿ ಮಾಡಲಾಗುತ್ತದೆ. ಇವುಗಳಿಗೆ ಪಕ್ಕಸಾರಣಿ, ಪಕ್ಕಪಂಚಮ ಮತ್ತು ಹೆಚ್ಚುಸಾರಣಿ ಎಂದು ಹೆಸರು. ನುಡಿಸುವ ತಂತಿಗಳ ಕೆಳಭಾಗದಲ್ಲಿ ಅನುರಣನಕ್ಕಾಗಿ ಹಲವು ತಂತಿಗಳಿವೆ. ಈ ತಂತಿಗಳನ್ನು ಹರಿಕಾಂಭೋಜಿ ಮೇಳದ ಸ್ವರಗಳಿಗೆ ಶ್ರುತಿ ಮಾಡುತ್ತಾರೆ. ಇವನ್ನು ನಾಗಪಾಶಕ್ಕೆ ಬಿಗಿದಿರುತ್ತಾರೆ. ಶ್ರುತಿಮಾಡಲು ಚಿಕ್ಕ ಬಳೆಗಳಿವೆ. ಐದು ಮುಖ್ಯ ತಂತಿಗಳನ್ನು ಮರದ ಬಿರಡೆಗಳಿಗೆ ಸುತ್ತಲಾಗಿದೆ. ದಂಡಿಯ ಕೆಳಗಡೆ ಪಕ್ಕದಲ್ಲಿರುವ ಸಣ್ಣ ಬಿರಡೆಗಳಿಗೆ ತಾಳದ ತಂತಿಗಳನ್ನು ಸುತ್ತಲಾಗಿದೆ. ಅನುರಣನದ ತಂತಿಗಳನ್ನು ದಂಡಿಯ ಮತ್ತೊಂದು ಕಡೆ ಇರುವ ಚಿಕ್ಕ ಬಿರಡೆಗಳಿಗೆ ಸುತ್ತಲಾಗಿದೆ. ಪ್ರಸಿದ್ಧ ವಿದ್ವಾಂಸರಾಗಿದ್ದ ಗೋಟುವಾದ್ಯಂ ನಾರಾಯಣ ಅಯ್ಯಂಗಾರ್ಯರು ಹಲವು ವರ್ಷಗಳ ಕಾಲ ಪ್ರಯೋಗಮಾಡಿ ೨೨ ತಂತಿಗಳುಳ್ಳ ವಾದ್ಯವನ್ನು ರೂಪಿಸಿದರು. ಈ ವಾದ್ಯದಲ್ಲಿ ಮುಖ್ಯವಾದ ಏಳು ತಂತಿಗಳೂ, ಅವುಗಳ ಕೆಳಭಾಗದಲ್ಲಿ ಹನ್ನೆರಡು ಅನುರಣನದ ತಂತಿಗಳೂ, ತಾಳದ ಮೂರು ತಂತಿಗಳೂ ಇವೆ. ಈ ವಾದ್ಯವು ನಾಲ್ಕು ಸ್ಥಾಯಿಗಳ ವ್ಯಾಪ್ತಿಯನ್ನು ಹೊಂದಿದೆ.

ಗೋಟುವಾದ್ಯದಲ್ಲಿ ಹಲವು ವೈವಿಧ್ಯಗಳಿವೆ.

**ಏಕಾಂಡ ಗೋಟುವಾದ್ಯ**—ಈ ವಾದ್ಯವನ್ನು ಸಂಪೂರ್ಣವಾಗಿ ಒಂದೇ ಮರದ ತುಂಡಿನಿಂದ ಮಾಡಲಾಗಿದೆ.

**ಏಕದಂಡಿ ಗೋಟುವಾದ್ಯ**—ಈ ವಾದ್ಯದ ಕೊಡ ಮತ್ತು ದಂಡಿಯನ್ನು ಒಂದೇ ಮರದ ತುಂಡಿನಿಂದ ಮಾಡುತ್ತಾರೆ.

**ಗೋಟುವಾದ್ಯಂ, ಕೆ. ಎಸ್. ನಾರಾಯಣ ಅಯ್ಯಂಗಾರ್**(೧೯೦೩–೧೯೫೯)—ಗೋಟುವಾದ್ಯಕ್ಕೆ ಉತ್ತರ ಭಾರತದಲ್ಲಿ ವಿಚಿತ್ರವೀಣಾ ಎಂದು ಹೆಸರು. ಈ ಕಠಿಣತರವಾದ ವಾದ್ಯವನ್ನು ನುಡಿಸುವುದರಲ್ಲಿ ಅಸಾಧಾರಣ ಪ್ರತಿಭೆಯನ್ನು ಹೊಂದಿದ್ದ ನಾರಾಯಣ ಅಯ್ಯಂಗಾರ್ಯರು ಮೈಸೂರಿನ ಕೀರ್ತಿಯನ್ನು ಭಾರತಾದ್ಯಂತವಲ್ಲದೆ ವಿದೇಶಗಳಲ್ಲಿ ಹರಡಿದ ಕಲಾವಿದರು. ಇವರು ತಮಿಳುನಾಡಿನ ತಿರುನೆಲ್ವೇಲಿ ಜಿಲ್ಲೆಯ ಮಹೇಂದ್ರ ಗಿರಿ ಎಂಬ ಬೆಟ್ಟದ ಸಮೀಪದಲ್ಲಿರುವ ಬೂದಂಪಾಡಿ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಶ್ರೀನಿವಾಸ ಅಯ್ಯಂಗಾರ್ ಲೋಕೋಪಯೋಗಿ ಇಲಾಖೆಯಲ್ಲಿ ಓವರ್‌ಸೀಯರ್ ಆಗಿದ್ದರು. ಇವರ ತಾಯಿಯ ಹೆಸರು ಶ್ರೀವರಮಂಗೈ. ತಂದೆಗೆ ಸ್ವಲ್ಪ ಪಿಟೀಲು ನುಡಿಸುವ ಅಭ್ಯಾಸವಿತ್ತು. ನಾರಾಯಣ ಅಯ್ಯಂಗಾರ್ಯರಿಗೆ ಚಿಕ್ಕಂದಿನಿಂದಲೂ ಸಂಗೀತದ ಗೀಳು. ತಂದೆಗೆ ತಿಳಿಯದೆಯೇ ಗುಟ್ಟಾಗಿ ಸಂಗೀತಾಭ್ಯಾಸ ಮಾಡುತ್ತಿದ್ದರು ಹೈಸ್ಕೂಲ್ ವಿದ್ಯಾಭ್ಯಾಸದ ನಂತರ ಕಾಲೇಜಿನಲ್ಲಿ ಎಫ್. ಎ. ತರಗತಿಗೆ ಸೇರಿದರು ಸಂಗೀತಾಭ್ಯಾಸವನ್ನು ಮುಂದುವರಿಸಲು ಕಾಲೇಜನ್ನು ಬಿಟ್ಟುಬಿಟ್ಟರು. ಮೊದಲು ಕೋಡಗನೆಲ್ಲೂರು ಸುಬ್ಬಯ್ಯ ಭಾಗವತರಲ್ಲಿ ಹಾಡುಗಾರಿಕೆ ಕಲಿತರು ಅವರ ಅಪ್ಪಣೆಯಂತೆ ಅವರ ಗೋಟುವಾದ್ಯವನ್ನು ತೆಗೆದುಕೊಂಡು ಹೋಗಿ ಸತತವಾಗಿ ಅಭ್ಯಾಸ ಮಾಡಿದರು. ನಂತರ ಆಗಿನ ಸುಪ್ರಸಿದ್ಧ ವಿದ್ವಾಂಸರಾಗಿದ್ದ ತಿರುವಡ ಮರುದೂರು ಸಖಾರಾಮರಾಯರಲ್ಲಿ ಸ್ವಲ್ಪ ಕಾಲ ಕಲಿತು ಅವರ ವಾದ್ಯವನ್ನು ಪಡೆದು ತಿರುಮಲೆಯ ತುಂಬುರು ತೀರ್ಥಕ್ಕೆ ಹೋಗಿ ಕೆಲವು ತಿಂಗಳ ಕಾಲ ಸತತವಾಗಿ ಸಾಧನೆ ಮಾಡಿ, ತರುವಾಯ ಶೀಘ್ರವಾಗಿ ಕೀರ್ತಿ ಶಿಖರವನ್ನೇರಿದರು.

೧೯೨೭ರಲ್ಲಿ ಹೈದರಾಬಾದಿನಲ್ಲಿ ಮಹಾತ್ಮಗಾಂಧೀಜಿಯವರ ಸಮ್ಮುಖದಲ್ಲಿ ನುಡಿಸಿ ಅವರ ಪ್ರಶಂಸೆ ಪಡೆದರು. ೧೯೨೮ರಲ್ಲಿ ಕೊಲಂಬಿಯಾ ಗ್ರಾಮಾಫೋನ್ ಕಂಪೆನಿಯು ಇವರ ಹಲವು ಕೃತಿಗಳ ವಾದನದ ಮುದ್ರಿಕೆಗಳನ್ನು ಹೊರತಂದಿತು. ಒಂದೆರಡು ಸಲ ಭಾರತಾದ್ಯಂತ ಪ್ರವಾಸ ಮಾಡಿ ಹಲವಾರು ಕಡೆ ಕಚೇರಿಗಳನ್ನು ಮಾಡಿ ಪ್ರಸಿದ್ಧರಾದರು. ನಾಲ್ವಡಿ ಕೃಷ್ಣರಾಜ ಒಡೆಯರು ಇವರನ್ನು ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿದರು. ೧೯೨೮ ರಿಂದ ೧೯೩೮ ರವರೆಗೆ ಅನೇಕ ರಾಜ ಮಹಾರಾಜರ ಆಸ್ಥಾನಗಳಲ್ಲಿ, ಮಠಾಧಿಪತಿಗಳ ಮತ್ತು ಭಾರತೀಯ ನಾಯಕರ ಸಮ್ಮುಖದಲ್ಲಿ ನುಡಿಸಿ ಮೆಚ್ಚುಗೆ ಮತ್ತು ಗೌರವ ಪಡೆದರು. ೧೯೩೯ ರಿಂದ ೧೯೪೧ ರವರೆಗೆ ಬರ್ಮ, ಮಲಯ, ಸಿಂಹಳ ಮುಂತಾದ ದೇಶಗಳಲ್ಲಿ ಪ್ರವಾಸ ಮಾಡಿ ಕಚೇರಿಗಳನ್ನು ಮಾಡಿದರು. ೧೯೫೯ರಲ್ಲಿ ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ಕಾರ್ಯಕ್ರಮವನ್ನು ಮುಗಿಸುತ್ತಿದ್ದಾಗಲೇ ಕೊನೆಯುಸಿರನ್ನೆಳೆದರು.

ಅಯ್ಯಂಗಾರ್ಯರು ಪ್ರತಿಭಾವಂತ ಕಲಾವಿದರು. ಗೋಟುವಾದ್ಯಕ್ಕೆ ನವ ಚೇತನವನ್ನಿತ್ತು ಅದರ ಹಿರಿಮೆಯನ್ನು ಸ್ಥಾಪಿಸಿದರು. ಸತತ ಪ್ರಯೋಗದಿಂದ ೨೨

ತಂತಿಗಳನ್ನುಳ್ಳ ವಾದ್ಯವನ್ನು ರೂಪಿಸಿದರು. ಅನುರಣನದ ತಂತಿಗಳನ್ನು ಬಳಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರು ಬಹಳ ಭಾವಪರವಶರಾಗಿ ಶೋಕ ಮತ್ತು ಕರುಣರಸ ಪ್ರಧಾನವಾದ ರಾಗಗಳನ್ನು ನುಡಿಸುವುದರಲ್ಲಿ ಖ್ಯಾತರಾಗಿದ್ದರು ಗಾಯನ ದಂತೆ ನುಡಿಸುವುದು ಇವರ ವೈಶಿಷ್ಟ್ಯವಾಗಿತ್ತು ಹಾಗೂ ಸಾಂಪ್ರದಾಯಿಕವೂ ಚೇತೋಹಾರಿಯೂ ಆಗಿತ್ತು. ರಾಗಗಳನ್ನು ವಿಸ್ತಾರವಾಗಿ ಗಂಟೆಗಟ್ಟಲೆ ನುಡಿಸು ತ್ತಿದ್ದರು. ಹಿಂದೂಸ್ಥಾನಿ ಸಂಗೀತ, ಜ್ಯೋತಿಷ್ಯ, ಮೃದಂಗವಾದನ, ಛಾಯಾಚಿತ್ರ ಗ್ರಹಣ, ತೈಲಚಿತ್ರರಚನೆ ಇವರ ಹವ್ಯಾಸಗಳಾಗಿದ್ದುವು. ಭಕ್ತಿ ಮತ್ತು ಶೃಂಗಾರರಸ ಪ್ರಧಾನವಾದ ಹಲವು ತಮಿಳು ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಸಂದಿರುವ ಹಲವು ಬಿರುದುಗಳಲ್ಲಿ ದಿಗ್ವಿಜಯ ನಾದವಾಣಿ, ಗೋಟುವಾದ್ಯಗಾನಶಿಖಾಮಣಿ, ಗೋಟುವಾದ್ಯ ಕಲಾನಿಧಿ, ನಾದಬ್ರಹ್ಮ ವಿದ್ಯಾವಾರಿಧಿ, ಗೋಟುವಾದ್ಯ ಸಾಮ್ರಾಟ್ ಎಂಬುವು ಕೆಲವು. ಇವರ ಶಿಷ್ಯರಲ್ಲಿ ಪುತ್ರ ನರಸಿಂಹನ್, ವಿ ಶ್ರೀನಿವಾಸ ಅಯ್ಯಂಗಾರ್, ಎಂ. ವಿ. ವರಾಹಸ್ವಾಮಿ ಮತ್ತು ಮನ್ನಾರುಗುಡಿ ಸಾವಿತ್ರಿಅಮ್ಮಾಳ್ ಪ್ರಮುಖರು.

**ಗೋದಾರಿ**—ಇದು ೩೯ನೆ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಗೋಧವಿನಾಕ**—ಇದೊಂದು ಬಗೆಯ ತಂತೀವಾದ್ಯ.

**ಗೋಧಿಕ**—ಮೊಸಳೆಯ ಚರ್ಮವಿರುವ ಒಂದು ಮದ್ದಳೆ.

**ಗೋಮಂಡಲ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ನಿ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಗೋಮುಖ**—ಇದು ರಾಮಾಯಣ ಮತ್ತು ಮಹಾಭಾರತದಲ್ಲಿ ಉಕ್ತವಾಗಿ ರುವ ಒಂದು ರಣವಾದ್ಯ. ಗೋಮುಖವನ್ನು ಹೋಲುವ ಊದುವ ಭಾಗವುಳ್ಳ ಶಂಖ.

**ಗೋಮುಖಿ**—(೧) ಇದೊಂದು ಸುಷಿರವಾದ್ಯ.

(೨) ಇದು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಗ ರಿ ಸ ಮ ಪ ದ ನಿ ಸ

ಅ: ಸ ನಿ ದ ಪ ರಿ ಗ ಸ

**ಗೋಮೂತ್ರಕ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಗೋಮೋಧಿಕ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಗೋರಂಜಿ**—ಪಾರ್ಶ್ವದೇವನ ಸಂಗೀತಸಮಯಸಾರವೆಂಬ ಗ್ರಂಥದಲ್ಲಿ ಇದು ಒಂದು ಭಾಷಾಂಗ ಸಂಪೂರ್ಣರಾಗವೆಂದು ಉಕ್ತವಾಗಿದೆ.

**ಗೋಲ್ಕೊಂಡ ಬಾದ್‌ಷಾ**—ಪದಗಳ ವಾಗ್ಗೇಯಕಾರ ಕ್ಷೇತ್ರಜ್ಞರನ್ನು ಗೌರವಿಸಿದ ಗೋಲ್ಕೊಂಡದ ದೊರೆ. ಕ್ಷೇತ್ರಜ್ಞ ಗೋಲ್ಕೊಂಡದಲ್ಲಿದ್ದಾಗ ೪೦ ದಿನಗಳಲ್ಲಿ ೧೫೦೦ ಪದಗಳನ್ನು ರಚಿಸಿದರೆಂದೂ, ದೊರೆಯು ಅತ್ಯಂತ ಉದಾರವಾಗಿ ಅವರನ್ನು ಗೌರವಿಸಿದನೆಂದೂ ‹ ವೆಡಲಕ ತೋನಡುಚುಕೊನ್ನ › ಎಂಬ ದೇವ ಗಾಂಧಾರಿರಾಗದ ಪದದಲ್ಲಿ ಸೂಚಿಸಿದ್ದಾರೆ.

**ಗೋವರ್ಧನಿ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗೋವಿಡಂಬಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ದ ಪ ಗ ರಿ ಸ

**ಗೋವಿಂದ**—ಸಂಗ್ರಹ ಚೂಡಾಮಣಿ ಎಂಬ ಗ್ರಂಥವನ್ನು ಬರೆದಿರುವ ಗೋವಿಂದಾಚಾರ್ಯ.

**ಗೋವಿಂದಾಚಾರ್ಯ**—ಇವರು ೧೮ನೆ ಶತಮಾನದಲ್ಲಿ ತಂಜಾವೂರು ರಾಜಾಸ್ಥಾನದಲ್ಲಿ ಜ್ಯೋತಿಷ್ಯ ವಿದ್ವಾಂಸರಾಗಿದ್ದರು ಕಾಕವಟ್ಟೂರಕಂ ಎಂಬಲ್ಲಿ ವಾಸಿಸುತ್ತಿದ್ದರು. ಇವರಿಗೆ ಅಕಳಂಕ ಎಂಬ ಬಿರುದು ಇದ್ದಿತು. ಇವರು ರಚಿಸಿರುವ ಸಂಗ್ರಹ ಚೂಡಾಮಣಿ ಎಂಬ ಸಂಸ್ಕೃತದಲ್ಲಿರುವ ಲಕ್ಷಣ ಗ್ರಂಥವು ಆಧುನಿಕ ಸಂಗೀತ ಪದ್ಧತಿಗೆ ಅನುಗುಣವಾಗಿದೆ. ಈಗಿನ ೭೨ ಮೇಳಗಳ ಹೆಸರನ್ನು ಪ್ರಥಮ ಬಾರಿ ಈ ಗ್ರಂಥದಲ್ಲಿ ಕೊಡಲಾಗಿದೆ. ಈ ಮೇಳಗಳಿಗೆ ೭೨ ಲಕ್ಷಣ ಗೀತಗಳನ್ನೂ, ಆಗಿನ ಪ್ರಸಿದ್ಧವಾಗಿದ್ದ ೨೯೪ ಜನ್ಯರಾಗಗಳಿಗೆ ೨೯೪ ಲಕ್ಷಣ ಗೀತೆಗಳನ್ನೂ ರಚಿಸಿದ್ದಾರೆ. ಈ ಗ್ರಂಥವು ಹಿಂದಿನ ಪದ್ಧತಿಗಳಲ್ಲಿ ಕಂಡುಬರುವ ನ್ಯೂನತೆಗಳನ್ನು ಸರಿಪಡಿಸುವ ಪ್ರಯತ್ನದಲ್ಲಿ ಪ್ರಮುಖ ಹೆಜ್ಜೆಯಾಗಿದೆ.

**ಗೋವಿಂದ ಧನ್ಯಾಸಿ** – ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಗೋವಿಂದದೀಕ್ಷಿತರು** (೧೫೫೪-೧೬೨೪)—ಇವರು ಅಪ್ಪಯ್ಯದೀಕ್ಷಿತರ ಸಮಕಾಲೀನರಾಗಿದ್ದರು. ಇವರು ಹೊಯ್ಸಳ ಕರ್ಣಾಟಕ ಬ್ರಾಹ್ಮಣರೂ ಮತ್ತು ಕರ್ಣಾಟಕದ ಶಿವಮೊಗ್ಗ ಜಿಲ್ಲೆಯವರೆಂದು ತಿಳಿದುಬರುತ್ತದೆ ತಂಜಾವೂರನ್ನು ಆಳಿದ ಚೆವ್ವಪ್ಪನಾಯಕ, ಅಚ್ಯುತನಾಯಕ, ಮತ್ತು ರಘುನಾಥನಾಯಕರ ಪ್ರಧಾನಿಯಾಗಿದ್ದು ತನ್ನ ಅಧಿಕಾರಾವಧಿಯಲ್ಲಿ ತಂಜಾವೂರಿನ ಏಳಿಗೆಗೆ ಕಾರಣ ರಾದರು ರಘುನಾಥನಾಯಕನ ಹೆಸರಿನಲ್ಲಿ ಸಂಗೀತಸುಧಾ ಎಂಬ ಶಾಸ್ತ್ರ ಗ್ರಂಥವನ್ನೂ, ಒಂದು ನೂತನ ವೀಣಾ ಪ್ರಕಾರವನ್ನೂ ರಚಿಸಿದರು. ಇವರ ಹಿರಿಯ ಮಗ ಯಜ್ಞನಾರಾಯಣದೀಕ್ಷಿತನು ೧೭ನೆ ಶತಮಾನದ ಒಬ್ಬ ಶ್ರೇಷ್ಠ ಸಾಹಿತಿ ಮತ್ತು ಅದ್ವೈತಾಚಾರ್ಯ. ಎರಡನೆಯ ಮಗನಾದ ವೆಂಕಟೇಶ್ವರದೀಕ್ಷಿತನು ವೆಂಕಟಾಧ್ವರಿ ಮತ್ತು ವೆಂಕಟಮಖಿಯೆಂದು ಪ್ರಸಿದ್ಧನಾಗಿದ್ದಾನೆ.

**ಗೋವಿಂದನಾರಾಯಣಿ**—ಈ ರಾಗವು ೫೭ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಗೋವಿಂದಪುರ**—ಈ ಗ್ರಾಮವು ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುವಡ ಮರುದೂರಿನ ಸಮೀಪದಲ್ಲಿ ಕಾವೇರಿ ನದಿಯ ತೀರದಲ್ಲಿದೆ. ಇಲ್ಲಿ ಬೋಧೇಂದ್ರ ಸದ್ಗುರು ಸ್ವಾಮಿಯ ಸಮಾಧಿಯಿದೆ.

**ಗೋವಿಂದಮಾರಾರ್** (೧೭೯೮-೧೮೪೩)—ಇವರು ೧೯ನೆ ಶತಮಾನದ ಪೂರ್ವಾರ್ಧದಲ್ಲಿದ್ದ, ಅದ್ಭುತ ಲಯಜ್ಞಾನ ಮತ್ತು ರವೆಜಾತಿ ಶಾರೀರವಿದ್ದ ಪ್ರಖ್ಯಾತ ಸಂಗೀತ ವಿದ್ವಾಂಸರೂ ಗಾಯಕರೂ ಆಗಿದ್ದರು. ಕೇರಳದ ತಿರುವಾಂಕೂರಿನ ಮೂವತ್ತು ಪುಳತಾಲ್ಲೂಕಿನ ರಾಮಮಂಗಲವೆಂಬ ಗ್ರಾಮವು ಇವರ ಜನ್ಮಸ್ಥಳ. ಇವರಿಗೆ ಯಾವ ರಚನೆಯನ್ನಾದರೂ ಆರು ಕಾಲದಲ್ಲಿ ಹಾಡಿ ಎಲ್ಲರನ್ನೂ ಬೆರಗು ಗೊಳಿಸಿ ಶರಣು ಹೋಗುವಂತೆ ಮಾಡುವ ಶಾರೀರವಿತ್ತು. ಆದ್ದರಿಂದ ಇವರು ಷಟ್ಕಾಲಗೋವಿಂದಮಾರಾರ್ ಎಂದು ಪ್ರಸಿದ್ಧರಾಗಿದ್ದರು. ಪರಮ ದೈವಭಕ್ತರೂ, ನಿಷ್ಕಾಮಂತರೂ, ಭಾಗವತ ಸಂಪ್ರದಾಯದ ಸಾಧುಶಿರೋಮಣಿಯೂ ಆಗಿದ್ದರು. ಷಟ್ಕಾಲ ಎಂಬ ಬಿರುದನ್ನು ಸೇಲಂ ನರಸಯ್ಯ ಮತ್ತು ವಿಜಯನಗರದ ವೀಣಾವೆಂಕಟ ರಮಣದಾಸರು ಪಡೆದಿದ್ದರು ಎಂಬುದನ್ನು ಇಲ್ಲಿ ಸ್ಮರಿಸಬಹುದು. ದಾಸರಿಗೆ ಷಟ್ಕಾಲ ಚಕ್ರವರ್ತಿ ಎಂಬ ಬಿರುದು ಇದ್ದಿತು

ತ್ಯಾಗರಾಜರ ಕೃತಿಗಳನ್ನು ತಿರುವಾಂಕೂರಿನಲ್ಲಿ ಪ್ರಥಮತಃ ಅವರ ಶಿಷ್ಯ ಕನ್ನಯ್ಯ ಭಾಗವತರು ಪ್ರಚಾರಕ್ಕೆ ತಂದರು. ಅವುಗಳಿಂದ ಆಕರ್ಷಿತರಾದ

ಸ್ವಾತಿತಿರುನಾಳ್ ಮಹಾರಾಜರು ಮತ್ತು ಪರಮೇಶ್ವರ ಭಾಗವತರು (೧೮೧೫–೧೮೪೨) ತಿರುವೈಯ್ಯಾರಿಗೆ ಹೋಗಿ ತ್ಯಾಗರಾಜರ ದರ್ಶನ ಮಾಡಬೇಕೆಂಬ ಅಭಿಲಾಷೆ ಹೊಂದಿದರು. ಒಂದು ಸಲ ಗೋವಿಂದ ಮಾರಾರ್ ಕಾಶೀಯಾತ್ರಾರ್ಥಿಯಾಗಿ ಹೋಗುವ ದಾರಿಯಲ್ಲಿ ಸ್ವಾತಿತಿರುನಾಳರ ಅತಿಥಿಯಾಗಿದ್ದು ನಂತರ ತಿರುವೈಯ್ಯಾರಿಗೆ ತ್ಯಾಗರಾಜರ ದರ್ಶನಾರ್ಥಿಯಾಗಿ ಬಂದರು ಇವರು ಏಳು ತಂತಿಗಳ ತಂಬೂರಿಯನ್ನು ಉಪಯೋಗಿಸುತ್ತಿದ್ದರು. ತಂಬೂರಿಗೆ ಸ್ಪರ್ಧಾಸೂಚಕ ಧ್ವಜವನ್ನು ಕಟ್ಟಲಾಗಿತ್ತು. ಬಲಗೈ ಬೆರಳುಗಳಿಂದ ತಂಬೂರಿಯನ್ನು ಮೀಟುತ್ತಾ ಬಲಗಾಲಿನ ಹೆಬ್ಬೆರಳಿನಿಂದ ಹಿಡಿದ ಖಂಜರವನ್ನು ಎಡಗೈಯಿಂದ ಬಾರಿಸಿಕೊಂಡು ಹಾಡುತ್ತಾ ಎಲ್ಲರನ್ನೂ ದಿಗ್ಭ್ರಮೆಗೊಳಿಸುತ್ತಿದ್ದರು.

ಇವರು ತಿರುವೈಯ್ಯಾರಿಗೆ ಬಂದ ದಿನ ಏಕಾದಶಿ ದಿನವಾಗಿತ್ತು. ಅಂದು ರಾತ್ರಿ ತ್ಯಾಗರಾಜರ ಮನೆಯಲ್ಲಿ ಯಥಾ ಪ್ರಕಾರ ಭಜನೆಯಾಗುತ್ತಿತ್ತು ಮಾರಾರು ಸಾಮಾನ್ಯನಂತೆ ಅಲ್ಲಿದ್ದ ಭಜನಗೋಷ್ಠಿಯಲ್ಲಿ ಕುಳಿತರು. ವಾಡಿಕೆಯಂತೆ ಹಾಡುವ ಸರದಿಯು ಮಾರಾರ್ ಪಾಲಿಗೆ ಬಂದಿತು. ಇವರ ರೀತಿ, ತಂಬೂರಿಗಳನ್ನು ನೋಡಿದ ಸಭಿಕರು ಅತ್ಯಂತ ಕೂತೂಹಲಭರಿತರಾಗಿದ್ದರು ಮಾರಾರ್ ತಮ್ಮ ಸರದಿ ಬಂದ ಕೂಡಲೇ ತನ್ನ ಏಳು ತಂತಿಯ ತುಂಬೂರಿಯನ್ನು ಲಕ್ಷಣವಾಗಿ ಶ್ರುತಿಮಾಡಿ ಖಂಜರವನ್ನು ಬಲಗಾಲಿನ ಹೆಬ್ಬೆಟ್ಟಿನಿಂದ ಹಿಡಿದು ಎಡಗೈಯಿಂದ ಬಾರಿಸುತ್ತಾ ಜಯದೇವನ ಗೀತಗೋವಿಂದದ 'ಚಂದನ ಚರ್ಚಿತ' ಎಂಬ ನಾಲ್ಕನೆಯ ಅಷ್ಟಪದಿಯನ್ನು ಹಾಡಲು ತೊಡಗಿದರು. ಇದನ್ನು ಪಂತುವರಾಳಿರಾಗ–ಆದಿತಾಳದಲ್ಲಿ ಅತಿ ಅತಿ ವಿಳಂಬಕಾಲದಲ್ಲಿ ಪ್ರಾರಂಭಿಸಿ ಕಾಲಪ್ರಮಾಣವನ್ನು ಸಿದ್ಧಮಾಡಿದ ಕೂಡಲೇ ಸಭಿಕರು ಚಕಿತರಾದರು ನಂತರ ಅತಿ ವಿಳಂಬ, ವಿಳಂಬಿತ, ಮಧ್ಯಮಕಾಲ, ದ್ರುತಕಾಲ ಮತ್ತು ಅತಿದ್ರುತಕಾಲದಲ್ಲಿ ಹಾಡಿದಾಗ ಸಭಿಕರು ಮಾತ್ರವಲ್ಲದೆ ತ್ಯಾಗರಾಜರೂ ಚಕಿತರಾದರು. ಇವರ ಲಯ ಸಂಪತ್ತನ್ನು ಕೊಂಡಾಡಿ ಆಗಲೇ ರಚಿತವಾಗಿದ್ದ ಶ್ರೀರಾಗದ 'ಎಂದುರೋ ಮಹಾನುಭಾವುಲು' ಎಂಬ ಕೃತಿಯನ್ನು ಶಿಷ್ಯ ಸಮೇತರಾಗಿ ಪ್ರಶಂಸಾರೂಪವಾಗಿ ಹಾಡಿ ಸಂತೋಷವನ್ನು ವ್ಯಕ್ತಪಡಿಸಿ, ಮಾರಾರರನ್ನು ತಮ್ಮ ಅತಿಥಿಯಾಗಿ ಉಳಿಸಿಕೊಂಡರು ಮಾರಾರರ ಕಲಾಕೌಶಲ್ಯವು ಅಸದೃಶವಾಗಿತ್ತು. ಇವರಿಗೆ ಗೋವಿಂದದಾಸ ಎಂಬ ಹೆಸರಿತ್ತು.

**ಗೋವಿಂದಯತಿ**—ಇವರು ತಮಿಳುನಾಡಿನ ಪ್ರಸಿದ್ಧವಾಗ್ಗೇಯಕಾರರಾಗಿದ್ದ ಗೋಪಾಲಕೃಷ್ಣ ಭಾರತಿಯ ಗುರು. ಇವರಲ್ಲಿ ಭಾರತಿ ವೇದಾಧ್ಯಯನ ಮಾಡಿದರು. 'ಎಂಗಳ್ ಗುರುನಾಥರ್ಕ್ಕ್' ಎಂಬ ಸುರಟಿರಾಗದ ಕೃತಿಯಲ್ಲಿ ತಮ್ಮ ಗುರುವನ್ನು ವಂದಿಸಿದ್ದಾರೆ.

**ಗೋವಿಂದಸಾಮಯ್ಯ**—ಗೋವಿಂದಸಾಮಯ್ಯ ಮತ್ತು ಇವರ ಸಹೋದರ ಕೂವನಸಾಮಯ್ಯ ಆಂಧ್ರದ ಚಿತ್ತೂರು ಜಿಲ್ಲೆಯ ಕಾರ್ವೇಟ್ ನಗರದ ವೆಂಕಟ್ಟ

ಪೆರುಮಾಳ್ ರಾಜನ ಆಸ್ಥಾನ ವಿದ್ವಾಂಸರಾಗಿದ್ದರು. ನೃತ್ಯಕಲೆಯಲ್ಲಿ ನಿಷ್ಣಾತರಾಗಿದ್ದರು. ಗೋವಿಂದಸಾಮಯ್ಯನವರು ಸ್ಫುರದ್ರೂಪಿಯಾಗಿದ್ದು ಹಲವು ಸಂದರ್ಭಗಳಲ್ಲಿ ಸ್ತ್ರೀವೇಷಧರಿಸಿ ನೃತ್ಯ ಮಾಡುತ್ತಿದ್ದರು ಇವರು ಗಂಡಸೆಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಇವರ ಸಹೋದರ ಕೂವನಸಾಮಯ್ಯ ವಾಗ್ಗೇಯಕಾರರಾಗಿದ್ದರು. ಪ್ರಸಿದ್ಧವಾದ ಪಂಚರತ್ನ ವರ್ಣಗಳನ್ನು ಗೋವಿಂದಸಾಮಯ್ಯ ರಚಿಸಿದ್ದಾರೆ. ಇವು ಮೋಹನ, ಕೇದಾರಗೌಳ, ನಾಟಕುರಂಜಿ, ನವರೋಜ್ ಮತ್ತು ಸಾರಂಗ ರಾಗಗಳಲ್ಲಿವೆ. ನಾಟ್ಯಕ್ಕೆ ಬಹಳ ಚೆನ್ನಾಗಿವೆ ಮತ್ತು ಸಂಗೀತ ರಚನೆಯಲ್ಲಿ ಉತ್ತಮವಾದುವು. ಸಾಹಿತ್ಯವೂ ಬಹಳ ಉತ್ತಮವಾಗಿದೆ ಇವುಗಳನ್ನು ಹಿರಿಯ ವಿದ್ವಾಂಸರು ಮಾತ್ರ ಹಾಡುತ್ತಾರೆ. ಇವಲ್ಲದೆ ಹಲವು ಪದಗಳನ್ನೂ, ಜಾವಳಿಗಳನ್ನೂ ರಚಿಸಿದ್ದಾರೆ. ಇವೆಲ್ಲವೂ ಈಗ ಪ್ರಚಾರದಲ್ಲಿವೆ

**ಗೋವಿಂದಸ್ವಾಮಿ, ಎಂ. ಎಸ್**— ಇವರು ಮೈಸೂರಿನ ವ್ಯಾಪಾರಿ ಮತ್ತು ಭಾರತಜನಮನೋಲ್ಲಾಸಿನಿ ಎಂಬ ಸಂಗೀತ ನಾಟಕ ಸಭೆಯ ಸ್ಥಾಪಕರಾಗಿದ್ದ ಸಂಜೀವಯ್ಯನವರ ದ್ವಿತೀಯ ಪುತ್ರನಾಗಿ ೧೯೧೩ರಲ್ಲಿ ಜನಿಸಿದರು. ಈ ಸಭೆಯ ನಾಟಕಗಳಲ್ಲಿ ಶ್ರೀಕೃಷ್ಣ, ಮನ್ಮಥ ಮುಂತಾದ ಪಾತ್ರಗಳನ್ನು ಧರಿಸಿ ತಮ್ಮ ಉತ್ತಮ ಅಭಿನಯ ಮತ್ತು ಮಧುರ ಸಂಗೀತದಿಂದ ಕೀರ್ತಿಶಾಲಿಗಳಾದರು. ನಾಲ್ವಡಿ ಕೃಷ್ಣರಾಜ ಒಡೆಯರು ಇವರ ಪಾತ್ರಗಳನ್ನು ಮೆಚ್ಚಿ ಕೆಲವು ಕಾಲ ಅರಮನೆಯಲ್ಲಿರಿಸಿಕೊಂಡು ಸನ್ಮಾನಿಸಿದರು. ರಂಗಭೂಮಿಯಲ್ಲಿ ಪ್ರಸಿದ್ಧರಾಗಿದ್ದ ಎ. ವಿ. ವರದಾಚಾರ್ಯರು, ಬಳ್ಳಾರಿ ರಾಘವಾಚಾರ್ಯರು, ಮತ್ತು ಜಿ. ಎಚ್. ವೀರಣ್ಣನವರು ಇವರಿಗೆ ಸುವರ್ಣ ಪದಕಗಳನ್ನಿತ್ತು ಪ್ರೋತ್ಸಾಹಿಸಿದರು. ಅಭಿನಯ ಕಂಠೀರವ ಎಂ. ಎಸ್. ಗಂಗಾಧರರಾಯರ ನಾಟಕದ ಕಂಪೆನಿಯಲ್ಲಿ ಏಳು ವರ್ಷಗಳ ಕಾಲ ಮತ್ತು ಸಿ. ಬಿ. ಮಲ್ಲಪ್ಪನವರ ಕಂಪೆನಿಯಲ್ಲಿ ೬–೭ ವರ್ಷಗಳ ಕಾಲವಿದ್ದು ನಟಶ್ರೇಷ್ಠರೆನಿಸಿಕೊಂಡಿದ್ದ ಕಾಲಪಿಲ್ಲಯ್ಯ, ಮಹಮದ್‌ಪೀರ್, ಗುರುಮೂರ್ತಪ್ಪ, ಸುಬ್ಬರಾಯರು, ಸುಬ್ಬಯ್ಯನಾಯ್ಡು ಇವರೆಲ್ಲರ ಜೊತೆಯಲ್ಲಿ ನಟಿಸಿ ಅನೇಕ ಪಾರಿತೋಷಕಗಳನ್ನು ಪಡೆದಿದ್ದಾರೆ. ನಂತರ ದೇವೇಂದ್ರಪ್ಪನವರಲ್ಲಿ ಪ್ರೌಢ ಶಿಕ್ಷಣ ಪಡೆದು ನುರಿತ ವಿದ್ವಾಂಸರಾಗಿ ಮೈಸೂರು ರಾಜ್ಯ, ಆಂಧ್ರ, ಮದರಾಸು, ಬೊಂಬಾಯಿ ರಾಜ್ಯಗಳಲ್ಲಿ ಅನೇಕ ಕಚೇರಿಗಳನ್ನು ಮಾಡಿ ಸನ್ಮಾನಿತರಾದರು. ಗದ್ವಾಲ್ ಸಂಸ್ಥಾನದಲ್ಲಿ ಕೆಲವು ಕಾಲ ಆಸ್ಥಾನ ವಿದ್ವಾಂಸರಾಗಿದ್ದರು. ಈಗ ಬೆಂಗಳೂರಿನಲ್ಲಿ ಪ್ರಣವ ಮ್ಯೂಸಿಕ್ ಕಾಲೇಜ್ ಎಂಬ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿ ಕಲಾಸೇವೆ ಮಾಡುತ್ತಿದ್ದಾರೆ.

**ಗೋವಿಂದಸ್ವಾಮಿ ಪಿಳ್ಳೆ** (೧೮೭೪–೧೯೩೧) — ಗೋವಿಂದಸ್ವಾಮಿಪಿಳ್ಳೆಯವರು ಅತ್ಯಂತ ಪ್ರತಿಭಾವಂತರಾದ ಪಿಟೀಲು ವಿದ್ವಾಂಸರಾಗಿದ್ದು ವಿದ್ವತ್ಪೂರ್ಣ ಹಾಗೂ ಆಹ್ಲಾದಕರವಾದ ಕಚೇರಿಗಳಿಂದ ತಮ್ಮ ಕಾಲದ ಸಂಗೀತಗಾರರನ್ನೂ,

ಸಂಗೀತಪ್ರಿಯರನ್ನೂ ಆನಂದದಲ್ಲಿ ತಣಿಸಿದರು. ತಿರುಕ್ಕೋಡಿ ಕಾವಲ್ ಕೃಷ್ಣಯ್ಯರ್ ಜೀವಂತರಾಗಿದ್ದಾಗಲೇ ಇವರು ಕೀರ್ತಿಶಾಲಿಗಳಾದರು ಮತ್ತು ಅವರ ಪ್ರಶಂಸೆಯನ್ನು ಪಡೆದಿದ್ದರು. ಪಿಟೀಲು ವಾದ್ಯದಲ್ಲಿ ಕರ್ಣಾಟಕ ಸಂಗೀತವನ್ನು ಎಷ್ಟು ಚೆನ್ನಾಗಿ ನುಡಿಸಬಹುದು ಎಂದು ತೋರಿಸಿಕೊಟ್ಟ ಆದ್ಯರಲ್ಲಿ ಪಿಳ್ಳೆಯವರು ಒಬ್ಬ ಪ್ರಮುಖ ವಿದ್ವಾಂಸರು.

ತಮಿಳುನಾಡಿನ ನನ್ನಿಲಂ ತಾಲ್ಲೂಕಿನ ಅಚ್ಯುತ ಮಂಗಲವೆಂಬ ಗ್ರಾಮವು ಇವರ ಜನ್ಮಸ್ಥಳ. ಪಿಳ್ಳೆಯವರು ತಮ್ಮ ಹನ್ನೆರಡನೆ ವಯಸ್ಸಿನಲ್ಲಿ ಸಂಗೀತಾಭ್ಯಾಸವನ್ನು ಆರಂಭಿಸಿದರು ಪ್ರಾರಂಭದ ಶಿಕ್ಷಣವನ್ನು ಉಮಯಾಳ್ಪುರಂ ಪಂಚಾಪಕೇಶ ಅಯ್ಯರ್‌ರವರಲ್ಲಿ ಪಡೆದರು. ತರುವಾಯ ಹಲವಾರು ಕೃತಿಗಳನ್ನು ಎಟ್ಟೆಯಾಪುರಂ ರಾಮಚಂದ್ರಭಾಗವತರಿಂದ ಕಲಿತರು. ಆಗಿನ ಹಿರಿಯ ಗಾಯಕರು ಇವರ ಪಕ್ಕವಾದ್ಯವನ್ನು ಬಹುವಾಗಿ ಬಯಸುತ್ತಿದ್ದರು. ಗಾಯಕನ ಸಂಗೀತವನ್ನು ಚೆನ್ನಾಗಿ ಅನುಸರಿಸಿ ಅದಕ್ಕೆ ಮೆರುಗು ಕೊಡುವ ಕಲೆಯಲ್ಲಿ ನಿಸ್ಸೀಮರಾಗಿದ್ದರು. ಶರಭ ಶಾಸ್ತ್ರಿಗಳಾದಿಯಾಗಿ ಆಗಿನ ಎಲ್ಲ ಪ್ರಸಿದ್ಧ ವಿದ್ವಾಂಸರ ಗಾಯನಕ್ಕೆ ಪಕ್ಕವಾದ್ಯ ನುಡಿಸಿದರು. ಇವರ ನುಡಿಕಾರದಲ್ಲಿ ಆಲಾಪನೆಗಳು, ನೆರವಲ್‌ಗಳು ಮತ್ತು ಕಲ್ಪನೆಸ್ವರಗಳು ಇವರ ಪ್ರತಿಭೆಯ ಪ್ರತೀಕಗಳಾಗಿದ್ದುವು. ತಾನ ನುಡಿಸುವಾಗ ಕಮಾನನ್ನು ಡೋಲಾಯಮಾನವಾಗಿ ಎಳೆಯುವ ವಿಧಾನವನ್ನು ರೂಢಿಗೆ ತಂದರು. ಈ ವಿಧಾನವನ್ನು ಈಗ ಎಲ್ಲರೂ ಅನುಸರಿಸುತ್ತಾರೆ. ತನಿ ಕಚೇರಿಗಳಲ್ಲಿ ಪಿಳ್ಳೆಯವರ ಪ್ರೌಢಿಮೆ, ಪ್ರತಿಭೆಗಳು ಸಂಪೂರ್ಣವಾಗಿ ಪ್ರಕಾಶಿಸುತ್ತಿದ್ದುವು. ಕೃತಿಗಳನ್ನು ನುಡಿಸುವುದರಲ್ಲಿ ಅಚ್ಚುಕಟ್ಟು, ಭಾವ ಸಂಪೂರ್ಣತೆ ಎದ್ದು ಕಾಣುತ್ತಿದ್ದುವು ತ್ಯಾಗರಾಜರ ಒಂದು ಶ್ರೇಷ್ಠಕೃತಿಯಾದ ದೇವಗಾಂಧಾರಿ ರಾಗದ 'ಕ್ಷೀರಸಾಗರ ಶಯನ'ವನ್ನು ನುಡಿಸುವಾಗ, ಅದರ ಚರಣದ 'ತಾರಕನಾಮ' ಎಂಬ ಭಾಗವನ್ನು ನುಡಿಸುವಾಗ ಒಂದು ವಿಶೇಷ ಸಂಗತಿಯನ್ನು ನುಡಿಸಿ ಅತಿತಾರಸ್ಥಾಯಿ ಷಡ್ಜವನ್ನು ಮುಟ್ಟುತ್ತಿದ್ದರು. ಇದು ಆ ಉತ್ತಮ ಕೃತಿಗೆ ವಿಶೇಷ ಸೊಬಗನ್ನು ನೀಡುತ್ತಿತ್ತು. ನಯಃವಾದ ಏರು ಜಾರುಗಳು, ಸಂಸ್ಕರಿಸಿದ ವಾದನ ವಿಧಾನ, ಇಂಪು ಮತ್ತು ಶುದ್ಧತೆಯಿಂದ ಕೂಡಿದ ಸ್ವರಗಳು, ಕೃತಿಗಳ ಸೊಗಸಾದ ನಿರೂಪಣೆ, ಕಮಾನನ್ನು ಎಳೆಯುವ ಕುಶಲತೆ, ಮೇಲಿನ ಸ್ಥಾಯಿಗಳಲ್ಲಿ ಅತಿ ಸುಲಭವಾಗಿ ನುಡಿಸುವುದು, ಮೂರು ಕಾಲಗಳಲ್ಲಿ ಕಲಾತ್ಮಕವಾಗಿ ಲಯಸಂಪತ್ತಿನಿಂದ ನುಡಿಸಿ ಮನಮೋಹಕವಾದ ಮುಕ್ತಾಯಗಳನ್ನು ಕೊಡುವುದು, ಶ್ರೇಷ್ಠಕಲಾಭಿಜ್ಞತೆ ಮುಂತಾದ ಅಂಶಗಳೆಲ್ಲವೂ ಇವರ ವಾದನದಲ್ಲಿ ಎದ್ದು ಕಾಣುತ್ತಿದ್ದುದರಿಂದ ಇವರ ಸಮಕಾಲೀನರ ಗೌರವಕ್ಕೆ ಪಾತ್ರರಾದರು.

ಇವರು ಸರಳ ಜೀವಿಗಳೂ, ಹಸನ್ಮುಖಿಗಳೂ, ಸಹೃದಯರೂ ಆಗಿದ್ದರು. ತಮ್ಮ ಸಂಗೀತದಿಂದ ಆನಂದ ಪಡೆದು ಇತರರಿಗೆ ಆನಂದ ನೀಡುತ್ತಿದ್ದ

ನಾದೋಪಾಸಕರಾಗಿದ್ದರು. ಕೊಳಲು ಮತ್ತು ಮೃದಂಗವಾದನದಲ್ಲಿ ಪರಿಣತರಾಗಿದ್ದು ದಲ್ಲದೆ ತಮಿಳಿನಲ್ಲಿ ಪಾಂಡಿತ್ಯ ಪಡೆದಿದ್ದರು.

**ಗೋವಿಂದಶಿವ**—ಇವರು ಪಲ್ಲವಿ ದೊರೆಸ್ವಾಮಿ ಅಯ್ಯರ್‌ರವರ ಪುತ್ರರು. ಇವರೂ ಮತ್ತು ಇವರ ಸಹೋದರ ಸಭಾಪತಿಶಿವ ತ್ಯಾಗರಾಜರ ಶಿಷ್ಯರಾಗಿದ್ದರು. ಶಿವನ ಸ್ತುತಿರೂಪವಾದ ಹಲವು ತಮಿಳು ಕೃತಿಗಳನ್ನು ಗೋವಿಂದಶಿವ ರಚಿಸಿದ್ದಾರೆ. ಸಹೋದರ ಸಭಾಪತಿ ಶಿವರವರ ಪುತ್ರ ಸಾಂಬಶಿವ ಅಯ್ಯರ್ (೧೮೩೭–೧೯೦೩) ಪಿಟೀಲು ವಿದ್ವಾಂಸರಾಗಿ ಮಹಾವೈದ್ಯನಾಥ ಅಯ್ಯರ್ ರವರ ಗಾಯನಕ್ಕೆ ಪಕ್ಕವಾದ್ಯ ನುಡಿಸುತ್ತಿದ್ದರು. ಇವರ ಪುತ್ರರಾದ ಸಭೇಶ ಅಯ್ಯರ್ (೧೮೭೨–೧೯೪೮) ಚಿದಂಬರದ ರಾಜಾ ಅಣ್ಣಾಮಲೈ ಚೆಟ್ಟಿಯಾರ್ ಸಂಗೀತದ ಕಾಲೇಜಿನ ಪ್ರಥಮ ಪ್ರಧಾನಾಚಾರ್ಯರಾಗಿದ್ದರು.

**ಗೋಷ್ಠಿಗಾನ**—ಹಲವು ಜನರು ಒಟ್ಟಿಗೆ ಹಾಡುವುದು ಅಥವಾ ವಾದ್ಯಗಳನ್ನು ನುಡಿಸುವುದು ಅಥವಾ ಹಾಡುವುದಲ್ಲದೆ ವಾದ್ಯಗಳನ್ನು ನುಡಿಸುವುದು ಗೋಷ್ಠಿಗಾನ.

**ಗೋಷ್ಠಿನಟನ**—ಹಲವು ಜನರು ಒಟ್ಟಿಗೆ ನಾಟ್ಯವಾಡುವುದು ಗೋಷ್ಠಿನಟನ

**ಗೋಂಡ**—ಇದು ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೋಂಡಕರಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡ**—ಹಿಂದೆ ಗೌಳರಾಗಕ್ಕೆ ಗೌಡ ಎಂಬ ಹೆಸರಿತ್ತು. ಸಂಗೀತ ರತ್ನಾಕರ ಮತ್ತು ಸಂಗೀತಮಕರಂದ ಎಂಬ ಗ್ರಂಥಗಳಲ್ಲಿ ಈ ರಾಗವನ್ನು ಪುಲ್ಲಿಂಗರಾಗವೆಂದು ಹೇಳಿದೆ.

**ಗೌಡಕ್ರಿಯಾ**—ಇದು ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಕೃತಿ**—ಸಂಗೀತರತ್ನಾಕರ ಮತ್ತು ಸಂಗೀತಸುಧಾ ಎಂಬ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಕೈಶಿಕ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಕೈಶಿಕಮಧ್ಯಮ**—ಇದು 'ಸಂಗೀತರತ್ನಾಕರ'ದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಪಂಚಮ**—ಇದು 'ಸಂಗೀತರತ್ನಾಕರ' ದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಮಲ್ಹಾರ್**—ಈ ರಾಗವು ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ. ಇದಕ್ಕೆ ಗೌಡಮಲ್ಹಾರಿ ಮತ್ತು ಗೌಡಮಲ್ಹಾರು ಎಂಬ ಹೆಸರುಗಳಿವೆ.

ಆ: ಸ ರಿ ಮ ಪ ದ ಸ

ಅ: ಸ ನಿ ದ ಮ ಗ ರಿ ಸ

ಮುತ್ತಯ್ಯ ಭಾಗವತರು ರಚಿಸಿರುವ 'ಸಾರಸಮುಖಿಸಕಲ ಭಾಗ್ಯದೆ' ಎಂಬ ಕೃತಿಯೂ ಈ ರಾಗದ ಒಂದು ಪ್ರಸಿದ್ಧ ಕೃತಿ.

**ಗೌಡರಾಜ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಒಂದು ರಾಗ.

**ಗೌಡಸಾರಂಗ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

**ಗೌತಮ**—ಪುರಾತನ ಸಂಗೀತ ಶಾಸ್ತ್ರಜ್ಞ. ಇವನ ಹೆಸರನ್ನು ಹಿಂದಿನ ಗ್ರಂಥಗಳಲ್ಲಿ ಹೇಳಿದೆ.

**ಗೌತಮಿ**—ಈ ರಾಗವು ೧ನೆಯ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಗೌತಮ್, ಎಂ. ಆರ್.** (೧೯೨೪)—ಎಂ. ಆರ್. ಗೌತಮ್ ಬೆಂಗಳೂರಿನ ಎಂ. ಎನ್. ರಾಮಸ್ವಾಮಿ ಅಯ್ಯರ್‌ರವರ ಪುತ್ರರು. ಮೊದಲು ಕರ್ಣಾಟಕ ಸಂಗೀತ ಶಿಕ್ಷಣವನ್ನು ಪಡೆದು ಹಿಂದೂಸ್ಥಾನಿ ಸಂಗೀತದಿಂದ ಆಕರ್ಷಿತರಾಗಿ ರಾಮರಾವ್ ನಾಯಕರಲ್ಲಿ ೧೨ ವರ್ಷಗಳ ಕಾಲ ಶಿಕ್ಷಣ ಪಡೆದು ನಂತರ ಅಜ್‌ಮಲ್ ಹುಸೇನ್, ದಿಲೀಪ್ ಚಂದ್ರತ್ರಿವೇದಿ, ವಿಲಾಯತ್ ಹುಸೇನ್ ಮತ್ತು ಹಿರಿಯ ಡಾಗರ್ ಸಹೋದರರಲ್ಲಿ ತಮ್ಮ ಶಿಕ್ಷಣವನ್ನು ಮುಂದುವರಿಸಿ ೧೯೬೩ರಲ್ಲಿ ಗಾಂಧರ್ವ ಮಹಾ ವಿದ್ಯಾಲಯದ ಡಾಕ್ಟರೇಟ್ ಪದವಿಯನ್ನು ಪಡೆದರು. ೧೩ನೆ ಶತಮಾನದ ವರೆಗೆ ಭಾರತೀಯ ಸಂಗೀತವಲ್ಲಿ ರಾಗತಾಳಗಳ ಬೆಳವಣಿಗೆ ಎಂಬ ಪ್ರಬಂಧವನ್ನು ಬರೆದು ವಾರಣಾಸಿಯ ಹಿಂದೂ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ. ಇವರು ಮೊದಲು ಇಂದೂರು ಆಕಾಶವಾಣಿ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದು ತರುವಾಯ ವಾರಣಾಸಿಯ ಹಿಂದೂ ವಿಶ್ವವಿದ್ಯಾನಿಲಯದ ಸಂಗೀತ ವಿಭಾಗದ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದಾರೆ. ಕರ್ಣಾಟಕ ಸಂಗೀತದ ಹಿನ್ನೆಲೆಯಲ್ಲಿ ಬೆಳೆದ ಇವರ ಗಾಯನವು ಹಲವು ಘರಾಣಗಳ ಉತ್ತಮಾಂಶಗಳ ಸಮ್ಮಿಳನವನ್ನು ಹೊಂದಿದ್ದೂ ಇಂಪು, ಸೊಗಸು, ಲಾಲಿತ್ಯ ಮತ್ತು ಭಾವ ಪೂರಿತವಾಗಿದ್ದು ಬಹಳ ಉತ್ತಮವಾಗಿದೆ.

**ಗೌರಿ**—(೧) ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ದೇಶೀಯರಾಗ. ಅವರೋಹಣದಲ್ಲಿ ಪ್ರತಿ ಮಧ್ಯಮಕ್ಕಿಂತ ಒಂದು ಪ್ರಮಾಣ ಶ್ರುತಿ ತೀವ್ರವಿರುವ ಚ್ಯುತಪಂಚಮವು ಬರುತ್ತದೆ. ಶಾಂತರಸ ಪ್ರಧಾನವಾದ ಸಾಯಂಕಾಲದ ವೇಳೆಯಲ್ಲಿ ಹಾಡಲು ಸೂಕ್ತವಾದ ರಾಗ. ಮಧ್ಯಮ ಮತ್ತು ನಿಷಾದ ರಾಗ ಛಾಯಾ ಸ್ವರಗಳು ತ್ಯಾಗರಾಜರ ' ಜಯ ಜಯ ಶ್ರೀರಘು ' ಮುತ್ತುಸ್ವಾಮಿದೀಕ್ಷಿತರ 'ಗೌರೀ ಗಿರಿರಾಜ ಕುಮಾರಿ' ಮತ್ತು ಪಲ್ಲವಿ ದೊರೆಸ್ವಾಮಿ ಅಯ್ಯರ್‌ರವರ ' ಧೂರ್ಜಟಿ ನಟಿಂಚಿನಿ ' ಎಂಬ ಪ್ರಸಿದ್ಧ ಕೃತಿಗಳು ಈ ರಾಗದಲ್ಲಿವೆ (೨) ಪಾರ್ವತಿಯ ರೂಪಾಂತರ.

**ಗೌರೀಕಟಿಕೆ**—ಇದೊಂದು ರಾಗಗಳ ನಿಘಂಟು. ಇದರಲ್ಲಿ ಹಲವು ರಾಗಗಳ ಲಕ್ಷಣಗಳನ್ನು ಕೊಡಲಾಗಿದೆ.

**ಗೌರೀಕಾಲ**—ಇದು ದೇವಾಲಯಗಳಲ್ಲಿರುವ ಒಂದು ಸುಷಿರವಾದ್ಯ. ಹಿತ್ತಾಳೆಯ ಕೋನಾಕಾರದ ಕಹಳೆ.

**ಗೌರೀಕ್ರಿಯ**—ಈ ರಾಗವು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ : ಸ ಗ ಮ ಪ ದ ನಿ ಸ

ಅ : ಸ ನಿ ದ ನಿ ಪ ಮ ಗ ಸ

**ಗೌರಿಕುಪ್ಪುಸ್ವಾಮಿ** (೧೯೩೧)—ಗೌರಿಯವರು ತಮಿಳುನಾಡಿನ ಒಂದು ಅಯ್ಯರ್ ಕುಟುಂಬಕ್ಕೆ ಸೇರಿದವರು. ಇವರ ತಂದೆ ಉನ್ನತ ಅಧಿಕಾರದಲ್ಲಿದ್ದರು. ಸಂಗೀತ ಶಿಕ್ಷಣವನ್ನು ಪ್ರಥಮವಾಗಿ ಸಂಗೀತ ಭೂಷಣ ಕೆ. ಎಸ್. ಕೃಷ್ಣಮೂರ್ತಿ ಅಯ್ಯರ್‌ರವರಲ್ಲೂ, ವೀಣಾವಾದನದಲ್ಲಿ ಶಿಕ್ಷಣವನ್ನು ಸಂಗೀತ ಭೂಷಣ ಕೆ. ವಿ. ವೆಂಕಟರಾಮಯ್ಯರ್‌ರವರಲ್ಲೂ, ನಂತರ ಮದ್ರಾಸಿನಲ್ಲಿ ಜಿ. ಎನ್. ಬಿ. ರವರ ಶಿಷ್ಯರಾದ ಟಿ. ಆರ್. ಬಾಲಸುಬ್ರಹ್ಮಣ್ಯಂ ಮತ್ತು ಎಂ. ಎಲ್. ವಸಂತ ಕುಮಾರಿ ಯವರಲ್ಲಿ ಶಿಕ್ಷಣವನ್ನು ಮುಂದುವರಿಸಿದರು. ಮೈಸೂರಿನ ಕೇಂದ್ರ ಆಹಾರ ಸಂಶೋಧನಾಲಯದಲ್ಲಿ ಉನ್ನತ ಹುದ್ದೆಯಲ್ಲಿರುವ ಎಸ್. ಕುಪ್ಪುಸ್ವಾಮಿಯವರನ್ನು ವಿವಾಹವಾಗಿ ಮೈಸೂರಿಗೆ ಬಂದು ನೆಲೆಸಿದರು. ಸ್ವಲ್ಪಕಾಲ ಆರ್ ಕೆ. ಶ್ರೀಕಂಠನ್ ರವರಲ್ಲಿ ಶಿಕ್ಷಣ ಪಡೆದರು. ೧೯೩೭ರಿಂದ ವೇದಿಕೆಯಲ್ಲಿ ಹಾಡಲು ತೊಡಗಿದರು. ಮೈಸೂರಿನಲ್ಲಿ ವಾಣೀ ವಿಳಾಸ ಮೊಹಲ್ಲಾದ ಸಂಗೀತ ಭೂಷಣ ಎಂ. ವಿ ನರಸಿಂಹಾ ಚಾರ್ಯರ ಗಾನಕಲಾಮಂದಿರದಲ್ಲಿ ಪ್ರಥಮವಾಗಿ ಹಾಡಿದರು. ಅಂದಿನಿಂದ ಎಲ್ಲೆಲ್ಲೂ ಹಾಡುತ್ತ ಬಂದಿದ್ದಾರೆ. ೧೯೫೦ 'ರಿಂದ ಆಕಾಶವಾಣಿ ಕೇಂದ್ರಗಳಿಂದ ಹಾಡುತ್ತಿದ್ದಾರೆ. ೧೯೬೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಲಲಿತ ಕಲಾ ಕಾಲೇಜಿನಲ್ಲಿ ಸಂಗೀತಾಧ್ಯಾಪಕಿಯಾಗಿ ಸೇರಿ ಈಗ ರೀಡರ್ ಆಗಿದ್ದಾರೆ. ೧೯೭೦ರಲ್ಲಿ ಭರತನಾಟ್ಯ ಕಲಾವಿದೆ ಕಮಲಾರವರ ತಂಡದೊಂದಿಗೆ ರಷ್ಯ, ಪೂರ್ವಜರ್ಮನಿ, ಯುಗೋಸ್ಲೇವಿಯಾ, ಬಲ್ಗೇರಿಯಾ ದೇಶಗಳಿಗೆ ಹೋಗಿ ಬಂದರು. ಸಂಗೀತಕ್ಕೆ

ಸಂಬಂಧಿಸಿದ ಹಲವು ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. ೧೯೮೧ರ ಮಾರ್ಚ್‌ನಲ್ಲಿ ಅಮೆರಿಕ, ಕೆನಡಾ ಮುಂತಾದ ದೇಶಗಳಲ್ಲಿ ಸಂಗೀತದ ಕಾರ್ಯಕ್ರಮಗಳಿಗಾಗಿ ಪ್ರವಾಸ ಕೈಗೊಂಡಿದ್ದಾರೆ. ನವುರಾದ ಶಾರೀರ, ಅಚ್ಚುಕಟ್ಟಾದ ನಿರೂಪಣೆ ಮುಂತಾದುವು ಇವರ ಗಾಯನದ ಪ್ರಧಾನ ಅಂಶಗಳು.

**ಗೌರೀಗಾಂಧಾರಿ**—ಈ ರಾಗವು ೨ನೆ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗೌರೀತಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಇದೊಂದು ತಾಳ.

**ಗೌರೀನಿಷಾದ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧಿನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ಧ ಫ ಮ ದ ಮ ಗ ರಿ ಸ

**ಗೌರೀಬಂಗಾಳ**–ಈ ರಾಗವು ೯ನೆಯ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಧ ಸ ರಿ ಮ ಪ ದ ನಿ

ಅ: ದ ಪ ಪ ಗ ರಿ ಸ ನಿ ಧ ಸ

**ಗೌರೀಮನೋಹರಿ**—ಈ ರಾಗವು ೨೩ನೆ ಮೇಳಕರ್ತರಾಗ. ಇದನ್ನು ವೆಂಕಟಮಖಿ ಗೌರೀವೇಳಾವಳಿ ಎಂದು ಕರೆದಿದ್ದಾರೆ. ರಾಗಾಂಗರಾಗ. ಸಂಪೂರ್ಣ ಗಮಕವರಿಕರಕ್ತಿರಾಗ. ಚತುಶ್ರುತಿ ಋಷಭ ಮತ್ತು ಧೈವತಗಳು, ಸಾಧಾರಣ ಗಾಂಧಾರ, ಶುದ್ಧಮಧ್ಯಮ, ಕಾಕಲಿನಿಷಾದಗಳು. ಈ ರಾಗದ ನಿಯತ ಸ್ವರಸ್ಥಾನಗಳು. ಋಷಭ ಧೈವತಗಳು ಪರಸ್ಪರವಾದಿ ಸಂವಾದಿಗಳು. ಮಧ್ಯಮ ನಿಷಾದಗಳು ರಾಗಛಾಯಾ ಸ್ವರಗಳು. ಚತುಶ್ರುತಿ ಋಷಭ ಮತ್ತು ಕಾಕಲಿ ನಿಷಾದಗಳು ನ್ಯಾಸ ಸ್ವರಗಳು. ಪೂರ್ವಾಂಗದಲ್ಲಿ ಖರಹರ ಪ್ರಿಯದ ಸ್ವರಸ್ಥಾನಗಳೂ, ಉತ್ತರಾಂಗದಲ್ಲಿ ಶಂಕರಾಭರಣದ ಸ್ವರಸ್ಥಾನಗಳೂ, ಬಂದಂತಾಗಿ ಎರಡು ರಾಗಗಳ ಸಂಕೀರ್ಣ ರಸಭಾವ ಹೊಂದಿರುತ್ತದೆ. ಭಕ್ತಿ ಮತ್ತು ಕರುಣರಸ ಪ್ರಧಾನರಾಗ. ಇದು ಮೂರ್ಛನ ಕಾರಕ ಮೇಳ ಇದರ ಋಷಭ, ಮಧ್ಯಮ ಮತ್ತು ಪಂಚಮ ಸ್ವರಗಳ ಗ್ರಹಭೇದದಿಂದ ಕ್ರಮವಾಗಿ ನಾಟಕಪ್ರಿಯ, ವಾಚಸ್ಪತಿ, ಮತ್ತು ಚಾರುಕೇಶಿರಾಗಗಳುಂಟಾಗುತ್ತವೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು :

ಗುರುಲೇಕ ಎಟುವಂಟಿ — ಖಂಡಛಾಪು — ತ್ಯಾಗರಾಜರು
ಬ್ರೋವಸಮಯ — ಆದಿ — ಗರ್ಭಪುರಿ
ಒಕ ಮಾಟಾಡವೇಲರ — ಆದಿ — ಪಲ್ಲವಿ ಶೇಷಯ್ಯರ್

**ಗೌರೀವಲ್ಲಭರಾಜ** – ಈತನು ತಮಿಳುನಾಡಿನ ಶಿವಗಂಗೆಯರಾಜನಾಗಿದ್ದನು ಮತ್ತು ಸಂಗೀತದ ಉದಾರ ಪೋಷಕನಾಗಿದ್ದನು. ಪ್ರಸಿದ್ಧ ತಮಿಳು ವಾಗ್ಗೇಯಕಾರ ಕವಿಕುಂಜರ ಭಾರತಿಯನ್ನು (೧೮೧೦–೧೮೯೬) ಸನ್ಮಾನಿಸಿದನು.

**ಗೌರೀವಸಂತ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ
ಅ: ಸ ನಿ ದ ಪ ಮ ರಿ ಗ ರಿ ಸ

**ಗೌರೀವೇಳಾವಳಿ**—ಈ ರಾಗವು ಅಸಂಪೂರ್ಣ ಮೇಳಪದ್ಧತಿಯಲ್ಲಿ ೨೩ನೆ ಮೇಳರಾಗ. ಇದು ವೇಳಾವಳಿರಾಗ. ಕಟಪಯಾದಿ ಪದ್ಧತಿಗೆ ಹೊಂದಿಸಲು ಗೌರೀ ಎಂಬ ಪದವನ್ನು ಸೇರಿಸಲಾಗಿದೆ. ಈಗಿನ ಪದ್ಧತಿಯಂತೆ ಗೌರೀಮನೋಹರಿರಾಗದ ಉಪಾಂಗ ಜನ್ಯರಾಗ.

ಆ: ಸ ರಿ ಗ ಗ ಸ ರಿ ಮ ಮ ಪ ದ ದ ಸಾ
ಅ: ಸ ನಿ ದ ಪ ಮ ಗ ಗ ರಿ ಸ

ಮುತ್ತುಸ್ವಾಮಿದೀಕ್ಷಿತರ ಕೌಮಾರೀ ಗೌರೀವೇಳಾವಲಿ ಎಂಬ ರಚನೆಯು ಈ ರಾಗದ ಪ್ರಸಿದ್ಧಕೃತಿ

**ಗೌರ್ ಸಾರಂಗ್**—ಇದು ಹಿಂದೂಸ್ಥಾನಿ ಪದ್ಧತಿಯ ಒಂದುರಾಗ.

**ಗೌರೀಸೀಮಂತಿ (ಗೌರೀಸೀಮಂತಿನಿ)**—ಈ ರಾಗವು ೭೦ನೆ ಮೇಳಕರ್ತ ನಾಸಿಕಾಭೂಷಣಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ
ಅ: ಸ ನಿ ಪ ಮ ಗ ಸ

**ಗೌಳ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ
ಅ: ಸ ನಿ ಪ ಮ ರಿ ಗ ಮ ರಿ ಸ

ಇದೊಂದು ಘನಪಂಚಕರಾಗ. ಉಪಾಂಗರಾಗ. ಶುದ್ಧಋಷಭ, ಅಂತರಗಾಂಧಾರ, ಶುದ್ಧಮಧ್ಯಮ ಮತ್ತು ಕಾಕಲಿ ನಿಷಾದವು ಈ ರಾಗದ ಮುಖ್ಯ ಸ್ವರಗಳು. ರಿ, ಮ ಮತ್ತು ನಿ ರಾಗಛಾಯಾ ಸ್ವರಗಳು. ರಿ ಮತ್ತು ಪ ನ್ಯಾಸ ಸ್ವರಗಳು. ಈ ರಾಗದ ಋಷಭಕ್ಕೆ ಏಕಶ್ರುತಿಋಷಭ ಮತ್ತು ಗೌಳಋಷಭವೆಂದು ಹೆಸರು. ತ್ರಿಸ್ಥಾಯಿರಾಗ. ಕರುಣರಸ ಪ್ರಧಾನವಾದ ಸಾರ್ವಕಾಲಿಕ ಹಾಗೂ ಪುರಾತನ

ಪ್ರಸಿದ್ಧರಾಗ. ಸಾಧಾರಣವಾಗಿ ಈ ರಾಗದ ರಚನೆಗಳು ಋಷಭ ಮತ್ತು ಪಂಚಮ ಸ್ವರಸ್ಥಾನಗಳಿಂದ ಪ್ರಾರಂಭವಾಗುತ್ತದೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು

| | | | |
|---|---|---|---|
| ಗೀತೆ | — ಸಕಲಸುರ | — ರೂಪಕ | — |
| ವರ್ಣ | — ಚೆಲುವಿಮಿಕೋರಿ | — ಆದಿ | — ವೀಣಾಕುಪ್ಪಯ್ಯರ್ |
| ವರ್ಣ | — ಪಲುಮಾರುನಾತೊ | — ಅಟ್ಟ | — ವೀಣಾಕುಪ್ಪಯ್ಯರ್ |
| ಪಂಚರತ್ನಕೃತಿ | — ದುಡುಕುಗಲ | — ಆದಿ | — ತ್ಯಾಗರಾಜರು |
| ಕೃತಿ | — ಶ್ರೀ ಮಹಾಗಣಪತಿ | — ತ್ರಿಪುಟ | — ಮುತ್ತುಸ್ವಾಮಿ ದೀಕ್ಷಿತರು |
| ಕೃತಿ | — ತ್ಯಾಗರಾಜ | — ಆದಿ | — ಮುತ್ತುಸ್ವಾಮಿ ದೀಕ್ಷಿತರು |
| ಕೃತಿ | — ಏಲಾ ನೀದಯ | — ಆದಿ | — ತಿರುವೊಟ್ಟಿಯೂರು ತ್ಯಾಗಯ್ಯರ್ |
| ಕೃತಿ | — ಪ್ರಣಮಾಮ್ಯಹಂ | — ಆದಿ | — ಮೈಸೂರು ವಾಸು ದೇವಾಚಾರ್ಯ |

**ಗೌಳಗಾಂಧಾರಿ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿ ಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗೌಳಪಂಚಮ**—ಈ ರಾಗವು ೨೪ನೆ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಗೌಳಪಂತುವರಾಳಿ**—ಇದು ಪುರಂದರದಾಸರ ಕೃತಿಗಳಲ್ಲಿ ಕಂಡು ಬರುವ ಒಂದು ರಾಗ

**ಗೌಳಿಪಂತು**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಈ ರಾಗದ ಹಿಂದಿನ ಹೆಸರು ಗೌಡಿಪಂತು. ಇದು ತಾಳ್ಳಪಾಕಂ ವಾಗ್ಗೇಯಕಾರರ ರಚನೆಗಳಲ್ಲಿ ಬರುತ್ತದೆ. ರಿ, ಮ, ನಿ ಗಳು ರಾಗಛಾಯಾ ಸ್ವರಗಳು. ರಿಷಭವು ನ್ಯಾಸಸ್ವರ. ಸಾರ್ವಕಾಲಿಕ ರಕ್ತಿರಾಗ ಮತ್ತು ಕರುಣರಸ ಪ್ರಧಾನ ರಾಗ. ತ್ಯಾಗರಾಜರ ತೆರತೀಯಗರಾದ ಮತ್ತು ಮುತ್ತುಸ್ವಾಮಿದೀಕ್ಷಿತರ ಕೃಷ್ಣಾನಂದ ಮುಕುಂದ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಗೌರೀಮಾಳವಿ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ನಿ ಸ

ಅ: ಸ ಪ ದ ನಿ ಪ ಮ ಗ ರಿ ಸ

**ಗೌಳಋಷಭ**—ಗೌಳರಾಗದ ಶುದ್ಧಋಷಭವು ೨೫೬/೨೪೩ ಶ್ರುತಿ ಮೌಲ್ಯವನ್ನು ಹೊಂದಿ ಏಕಶ್ರುತಿಋಷಭವೆನಿಸಿದೆ. ಇದಕ್ಕೆ ಗೌಳಋಷಭವೆಂದು ಹೆಸರು.

**ಗೌಳಶಾರೀರ**—ತುಂಬಿದ, ಗಂಭೀರವಾದ ಘನಶಾರೀರಕ್ಕೆ ಗೌಳಶಾರೀರ ವೆಂದೂ, ಇಂತಹ ಶಾರೀರವುಳ್ಳ ವಿದ್ವಾಂಸನ ಗಾಯನಕ್ಕೆ ಗೌಳಗಾತ್ರವೆನ್ನುವುದುಂಟು. ಇಂತಹವರು ಹಾಡುವ ನಾಭಿತಾನವು ಕೇಳಲು ಬಲುಸೊಗಸು. ಚೆಂಬೈ ವೈದ್ಯನಾಥ ಭಾಗವತರು ಮತ್ತು ಎಂ. ಡಿ. ರಾಮನಾಥನ್ ಇವರನ್ನು ಗೌಳಶಾರೀರವುಳ್ಳ ಗಾಯಕರೆನ್ನಬಹುದು.

**ಗಂಗಾತರಂಗಿಣಿ**—(೧) ಈ ರಾಗವು ೩೩ನೆ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ಸ

ಅ: ಸ ನಿ ದ ಪ ಮ ಗ ಮ ರಿ ಸ

(೨) ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೩೩ನೆ ಮೇಳರಾಗ. ಸುಬ್ಬರಾಯದೀಕ್ಷಿತರು ಈ ರಾಗಾಂಗರಾಗವ ಆರೋಹಣಾವರೋಹಣವನ್ನು ಈ ರೀತಿ ಕೊಟ್ಟಿದ್ದಾರೆ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ದ ಮ ಗ ಮ ರಿ ಸ

ಮುತ್ತುಸ್ವಾಮಿದೀಕ್ಷಿತರು ಈ ರಾಗದಲ್ಲಿ ವರದರಾಜ ಎಂಬ ಕೃತಿಯನ್ನು ರಚಿಸಿದ್ದಾರೆ.

**ಗಂಗೂಬಾಯಿಹಾನಗಲ್** (೧೯೧೩) — ಗಂಗೂಬಾಯಿಯವರು ಕರ್ಣಾಟಕದ ಖ್ಯಾತ ಹಿಂದೂಸ್ಥಾನೀ ಕಲಾವಿದೆ. ಇವರು ೧೯೧೩ರಲ್ಲಿ ಧಾರವಾಡದಲ್ಲಿ ಜನಿಸಿದರು. ಇವರ ತಾಯಿ ಅಂಬಾಬಾಯಿ ಕರ್ಣಾಟಕ ಸಂಗೀತದಲ್ಲಿ ಪರಿಣತರಾಗಿದ್ದರು. ಗಂಗೂಬಾಯಿಯವರು ಮೊದಲು ಪ್ರಸಿದ್ಧಕಿನ್ನರಿ ವಿದ್ವಾನ್ ಹುಲಗೂರು ಕೃಷ್ಣಾಚಾರ್ಯರಲ್ಲಿ ಒಂದು ವರ್ಷ ಶಿಕ್ಷಣ ಪಡೆದು ನಂತರ ಪ್ರತಾಪಲಾಲ್ ಮತ್ತು ದತ್ತೋಪಂತ್ ದೇಶಾಯಿಯವರಲ್ಲಿ ಠುಮ್ರಿಯನ್ನು ಕಲಿತು ತರುವಾಯ ಸವಾಯಿ ಗಂಧರ್ವರೆಂದು ಪ್ರಸಿದ್ಧರಾದ ಕುಂದಗೋಳ ರಾಮರಾಯರಲ್ಲಿ ಹಲವು ವರ್ಷಗಳ ಕಾಲ ಶಿಕ್ಷಣ ಪಡೆದರು. ೧೯೩೩ರಲ್ಲಿ ಗ್ರಾಮಾಫೋನ್ ರೆಕಾರ್ಡ್‌ಗಳಿಗಾಗಿ ಹಾಡಿದರು. ೧೯೩೮ರಲ್ಲಿ ಕಲ್ಕತ್ತದಲ್ಲಿ ಹಾಡಿ ಪ್ರಸಿದ್ಧರಾದರು. ನೇಪಾಳ, ಪಾಕಿಸ್ಥಾನಗಳಿಗೆ ಸಾಂಸ್ಕೃತಿಕ ನಿಯೋಗದ ಸದಸ್ಯರಾಗಿ ಹೋಗಿ ಖ್ಯಾತಿ ಪಡೆದರು. ೧೯೬೩ರಲ್ಲಿ ಕರ್ಣಾಟಕ ರಾಜ್ಯ ಸಂಗೀತನಾಟಕ ಅಕಾಡೆಮಿಯು ಇವರಿಗೆ ಪ್ರಶಸ್ತಿ

ನೀಡಿ ಗೌರವಿಸಿತು. ಅಮೆರಿಕಾ ಮುಂತಾದ ಪಾಶ್ಚಾತ್ಯ ದೇಶಗಳಿಗೆ ಹೋಗಿ ಕಚೇರಿಯಲ್ಲಿ ಹಾಡಿ ಖ್ಯಾತಿ ಪಡೆದಿದ್ದಾರೆ. ಸಂಪ್ರದಾಯ ಚೌಕಟ್ಟಿನಲ್ಲಿ ಮನೋಜ್ಞವಾಗಿ ಆಲಾಪ್, ಖ್ಯಾಲ್, ಠುಮ್ರಿಗಳನ್ನು ಗಾಂಭೀರ್ಯ, ಉತ್ಸಾಹ ಮತ್ತು ಗತ್ತಿನಿಂದ ಹಾಡುತ್ತಾರೆ. ಇವರ ಮಗಳು ಕೃಷ್ಣಾ ಹಾನಗಲ್ ಉದಯೋನ್ಮುಖ ಕಲಾವಿದೆ. ನವಿಾಪದ ಬಂಧು ಶೇಷಗಿರಿ ಹಾನಗಲ್ ಉತ್ತಮ ತಬಲಾವಾದನ ಪಟು.

**ಗಂಭೀರ**—ಭೂತಪೂಜೆ ಮಾಡುವಾಗ ಆಡುವ ಒಂದು ನೃತ್ಯ. ಇದು ಬಂಗಾಳ ರಾಜ್ಯದಲ್ಲಿ ರೂಢಿಯಲ್ಲಿದೆ.

**ಗಂಭೀರಕಲ್ಯಾಣಿ**—ಇದು ಕುಪ್ಪುಸ್ವಾಮಯ್ಯನವರ ಕೃತಿಗಳಲ್ಲಿ ಬರುವ ಒಂದು ಅಪೂರ್ವರಾಗ. ಅವರ 'ಸಂಗೀತ ಸರ್ವಾರ್ಥಸಾರ ಸಂಗ್ರಹಮು' ಎಂಬ ಗ್ರಂಥದಲ್ಲಿರುವ "ರಾದಾ ನಾಪಿಾದ ದಯಲೇದ" ಎಂಬ ಕೃತಿಯು ಈ ರಾಗದಲ್ಲಿದೆ.

**ಗಂಭೀರತಾನ**—ಇದು ಆರು ವಿಧವಾದ ತಾನಗಳಲ್ಲಿ ಒಂದು ಬಗೆ.

**ಗಂಭೀರನಾಟ**—ಈ ರಾಗವು ೩೬ನೆ ಮೇಳಕರ್ತ ಛಲನಾಟದ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಸ

ಜಯಚಾಮರಾಜ ಒಡೆಯರ 'ಜಾಲಂಧರ' ಎಂಬ ಈ ರಾಗದ ಕೃತಿಯು ಪ್ರಸಿದ್ಧ ವಾಗಿದೆ.

**ಗಂಭೀರಾನಂದವಾದ್ಯ**—ದಕ್ಷಿಣ ಭಾರತದ ದೇವಾಲಯಗಳ ಪೂಜಾ ಸಂಪ್ರದಾಯಗಳಲ್ಲಿ ವರುಣ ದೇವರನ್ನು ಸ್ತುತಿಸುವಾಗ ನುಡಿಸುವ ಒಂದು ವಾದ್ಯವಿಶೇಷ.

**ಗಂಭೀರವಸಂತ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಮ ಗ ಮ ರಿ ಗ ಮ ಪ ನಿ ದ ನಿ ಪ ದ ನಿ ಸ

ಅ: ಸ ದ ಪ ಮ ರಿ ಸ

**ಗಂಭೀರವಾಣಿ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ

ಆ: ಸ ಗ ಪ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಗ ರಿ ಸ

**ಗಂಭೀರಿ**—ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೨೦ ಭಾಷಾಂಗಗಳಲ್ಲಿ ಒಂದು ಭಾಷಾಂಗದ ಹೆಸರು.

**ಗಂಭೀರಿಣಿ**—ಈ ರಾಗವು ೨೩ನೆಯ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಗಂಧರ್ವ**—(೧) ಭಾರತದ ಪುರಾತನ ಸಾಹಿತ್ಯದಲ್ಲಿ ಗಂಧರ್ವರ ವಿಚಾರವು ಬರುತ್ತದೆ. ಗಂಧರ್ವರು ದೇವಲೋಕದ ಗಾಯಕರು. ಮಂದರು ಮೇರು ಮುಂತಾದ ಪರ್ವತ ಪ್ರದೇಶಗಳಲ್ಲಿರುವವರು. ಅವರ ಶಾರೀರವು ದಿವ್ಯವಾದುದು. ಹಾಡುವುದು, ನೃತ್ಯ, ವೀಣೆ ನುಡಿಸುವುದರಲ್ಲಿ ಬಹು ಪ್ರವೀಣರು. ಅವರ ಪತ್ನಿಯರೆಲ್ಲರೂ ದೇವಲೋಕದ ಅಪ್ಸರೆಯರು.

(೨) ಈ ರಾಗವು ೬೨ನೆ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಮ ಪ ಧ ನಿ ಸ ರಿ ಗ

ಅ: ಗ ರಿ ಸ ನಿ ಪ ಮ

**ಗಂಧರ್ವಕನ್ನಡ**—ಈ ರಾಗವು ೩೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಗಂಧರ್ವಗಾನ**—ಅತ್ಯುತ್ತಮವಾದ ಗಾನವನ್ನು ಗಂಧರ್ವಗಾನವೆನ್ನುವುದು ವಾಡಿಕೆ. ಮಹಾವೈದ್ಯನಾಥ ಅಯ್ಯರ್‌ರ ಗಾಯನವನ್ನು ಗಂಧರ್ವಗಾನವೆನ್ನುತ್ತಿದ್ದರು.

**ಗಂಧರ್ವಗೀತ**—ಅನಾದಿ ಸಂಪ್ರದಾಯದಿಂದ ಬೆಳೆದುಬಂದ ಸಂಗೀತ. ಇದು ಗಾನಗೀತಕ್ಕಿಂತ ಪುರಾತನ.

**ಗಂಧರ್ವನಾರಾಯಣಿ**—ಈ ರಾಗವು ೨೬ನೆ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ಸ

**ಗಂಧರ್ವಪ್ರೀತಿ**—ಗಂಧರ್ವರನ್ನು ಸ್ತುತಿಸಿ ಅವರ ಅನುಗ್ರಹವನ್ನು ಪಡೆಯಲು ವಿವಾಹದ ಸಂದರ್ಭಗಳಲ್ಲಿ ಕಚೇರಿಗಳನ್ನು ನಡೆಸುತ್ತಾರೆ.

**ಗಂಧರ್ವಮನೋಹರಿ**—ಈ ರಾಗವು ೨೬ನೆ ಮೇಳಕರ್ತ ಚಾರುಕೇಶಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ಸ

ಅ: ಸ ನಿ ದ ಮ ಗ ರಿ ಸ

**ಗಂಧರ್ವಮೇಳ**—ಕಾಶೀನಾಥ ವಿರಚಿತ ರಾಮಾಯಣ ಪಟ್ಟಾಭಿಷೇಕ ಶಬ್ದದಲ್ಲಿ ಉಕ್ತವಾಗಿರುವ ಒಂದು ವಾದ್ಯವೃಂದದ ಹೆಸರು.

**ಗಂಧರ್ವರಾಜ**—ತಂಜಾವೂರು ಸರಸ್ವತೀ ಮಹಲ್ ಪುಸ್ತಕ ಭಂಡಾರದಲ್ಲಿರುವ ರಾಗರತ್ನಾಕರವೆಂಬ ಸಂಸ್ಕೃತ ಗ್ರಂಥ ಕರ್ತೃವಿನ ಹೆಸರು.

**ಗಂಧರ್ವಲೋಕ**—ಗಂಧರ್ವ ವಾಸಿಸುವ ಲೋಕ, ದೇವಾಲಯಗಳ ಉತ್ಸವಗಳಲ್ಲಿ ಸಂಗೀತಕ್ಕಾಗಿ ಹಣ ವೆಚ್ಚ ಮಾಡುವವರು ಗಂಧರ್ವಲೋಕಕ್ಕೆ ಹೋಗುತ್ತಾರೆಂದು ನಂಬಿಕೆಯಿದೆ

**ಗಂಧಿನಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಏಳುದಾಸೀರಾಗಗಳಲ್ಲಿ ಒಂದರ ಹೆಸರು

**ಗಂಡಕರ್ಮ**—ಭರತನಾಟ್ಯದ ಕೆನ್ನೆಗಳ ವಿವಿಧ ಕ್ರಿಯಾ ಭೇದಗಳಿಗೆ ಗಂಡ ಕರ್ಮವೆಂದು ಹೆಸರು. ಇವು ಆರು ವಿಧ—ಕ್ಷಾಮ, ಫುಲ್ಲ, ಪೂರ್ಣ, ಕಂಪಿತ, ಕುಂಚಿತ ಮತ್ತು ಸಮ

**ಗುಂಡಕ್ರಿ**—ಇದು ಪಾರ್ಶ್ವದೇವನ ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಷಾಡವರಾಗ

**ಗುಂಡಕ್ರಿಯ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ̇

ಅ: ಸ̇ ನಿ ಪ ದ ಪ ಮ ಗ ರಿ ಸ

ಇದೊಂದು ಪುರಾತನ ರಾಗ. ಆಂಜನೇಯನು ಈ ರಾಗವನ್ನು ಹಾಡಿ ಸಮೀಪದಲ್ಲಿದ್ದ ಬಂಡೆಯನ್ನು ಕರಗಿಸಿದನೆಂದು ಪುರಾಣಗಳಲ್ಲಿ ಹೇಳಿದೆ ತ್ಯಾಗರಾಜ ವಿರಚಿತ 'ಇಂತನುಚು ವರ್ಣಿಂಪ ತರಮಾ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ಗುಂಡಪ್ಪ ನಟುವನಾರ್**—ಗುಂಡಪ್ಪನವರು ಕರ್ಣಾಟಕದ ನೃತ್ಯಕಲೆಗೆ ಪ್ರಸಿದ್ಧವಾಗಿದ್ದ ಮನೆತನದಲ್ಲಿ ೧೮೮೮ರಲ್ಲಿ ಜನಿಸಿದರು. ಇವರ ಮುತ್ತಜ್ಜಿ ರಂಗನಾಯಕಮ್ಮ ಮೈಸೂರು ರಾಜರ ಆಸ್ಥಾನದ ಗೌರವಕ್ಕೆ ಪಾತ್ರರಾಗಿದ್ದರು ಇವರ ಅಜ್ಜಿ ರಂಗಮ್ಮ ಬಸವನಹಳ್ಳಿಯ ರಂಗನಾಥಸ್ವಾಮಿ ದೇವಾಲಯದಲ್ಲಿ ನಾಟ್ಯ ಸೇವೆ ಸಲ್ಲಿಸುತ್ತಿದ್ದರು. ಗುಂಡಪ್ಪನವರು ಕೋಲಾರದ ಕಿಟ್ಟಪ್ಪನವರಲ್ಲಿ ಸುಮಾರು ಹನ್ನೆರಡು ವರ್ಷಗಳ ಕಾಲ ನಾಟ್ಯ ಶಿಕ್ಷಣವನ್ನು ಪಡೆದರು. ತಮ್ಮ ಗುರುವಿನ ನಾಟ್ಯ ಪ್ರದರ್ಶನಗಳಲ್ಲಿ ಭಾಗವಹಿಸುತ್ತಿದ್ದರು. ಅವರ ಮರಣಾನಂತರ ಆ ನಾಟ್ಯವೃಂದದ ಧುರೀಣರಾದರು. ನಟುವನಾರ್ ಮನೆತನದ ಏಕೈಕ ಕಲಾವಿದರಾಗಿ ಸುಮಾರು ಮೂರು ದಶಕಗಳ ಕಾಲದಲ್ಲಿ ಕರ್ಣಾಟಕದಲ್ಲಿ ಪ್ರಸಿದ್ಧರಾಗಿರುವ ಬಹು ಮಂದಿ ಶಿಷ್ಯರು, ಶಿಷ್ಯೆಯರಿಗೆ ನಾಟ್ಯಕಲೆಯಲ್ಲಿ ಶಿಕ್ಷಣ ನೀಡಿದ್ದಾರೆ.

**ಗುಂಡಾಚಾರ್ಯರು**—ಇವರು ಸುರಪುರದ ಆನಂದದಾಸರಲ್ಲಿ ಕೀರ್ತನಾಭ್ಯಾಸ ಮಾಡಿ ಹೆಸರುವಾಸಿಯಾದ ಪುರಾಣಿಕರಾಗಿದ್ದರು. ಇವರ ಕಂಠಶ್ರೀ ಮತ್ತು ಗಾನ ಮಾಧುರ್ಯಗಳು ಆನಂದದಾಸರನ್ನು ಜ್ಞಾಪಕಕ್ಕೆ ತರುತ್ತಿದ್ದುವು.

**ಗುಂಗುರು**—ಇದೊಂದು ಘನವಾದ್ಯ. ಇದಕ್ಕೆ ಘುಂಗರು ಎಂಬ ಹೆಸರೂ ಇದೆ. ಮರದ ಒಂದು ಚೌಕಟ್ಟಿನಲ್ಲಿ ಸಮಾನಾಂತರವಾಗಿ ಹಲವು ತಂತಿಗಳನ್ನು

ಕಟ್ಟಲಾಗಿದೆ. ಈ ತಂತಿಗಳಿಗೆ ಬೇರೆ ಬೇರೆ ಅಂತರದಲ್ಲಿ ವಿವಿಧ ಶ್ರುತಿಯ ಚಿಕ್ಕ ಗಂಟೆಗಳನ್ನು ಕಟ್ಟಿದೆ. ಇವುಗಳನ್ನು ಬೆರಳುಗಳಿಂದ ತಟ್ಟಿ ಈ ವಾದ್ಯವನ್ನು ನುಡಿಸುವರು. ಇದು ಉತ್ತರಭಾರತದ ದರ್ಭಾಂಗ ಮುಂತಾದ ಹಲವು ಕಡೆ ಪ್ರಚಲಿತವಿದೆ. ಇದನ್ನು ನೇರವಾಗಿ ನಿಲ್ಲಿಸಿಕೊಂಡು ನುಡಿಸುತ್ತಾರೆ. ಇದೊಂದು ಚಿಕ್ಕ ಗಂಟಾತರಂಗ್ ವಾದ್ಯ.

**ಗುಂಡುತಾಳ**—ಇದು ಸಮ ಅಳತೆಯ ಎರಡು ಕಂಚಿನ ಬಿಲ್ಲೆಗಳನ್ನೊಳಗೊಂಡ ತಾಳವಾದ್ಯ. ಒಂದನ್ನೊಂದು ತಟ್ಟಿದಾಗ ಇಂಪಾದ ನಾದ ಕೊಡುತ್ತವೆ. ಇವುಗಳ ಹೊರಮೈ ಕೇಂದ್ರವು ಉಬ್ಬಾಗಿದ್ದು ಮಧ್ಯದಲ್ಲಿ ರಂಧ್ರವಿರುತ್ತದೆ. ಇದಕ್ಕೆ ದಪ್ಪವಾಗಿರುವ ಹತ್ತಿ ದಾರದ ಗಂಟು ಹಾಕಿದೆ. ಈ ಗಂಟನ್ನು ಹಿಡಿದು ತಾಳವನ್ನು ಹಾಕಬೇಕು. ಹರಿಕಥಾವಿದ್ವಾಂಸರು ಮತ್ತು ಭಜನ ಗೋಷ್ಠಿಯವರು ಈ ತಾಳವನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

**ಗುಂಪಿತ**—ಇದು ಪಂಚದಶ ಗಮಕಗಳಲ್ಲಿ ಒಂದು ಬಗೆಯ ಗಮಕ. ಇದಕ್ಕೆ ಹುಂಪಿತವೆಂದೂ ಹೆಸರು (ವಿವರಗಳಿಗೆ ನೋಡಿ–ಗಮಕ)

**ಗ್ರಹಭೇದ**—ರಾಗಗಳ ಸಂಖ್ಯೆಯನ್ನು ಅಧಿಕಗೊಳಿಸಲು ಅಳವಡಿಸುವ ಸೂತ್ರವೇ ಗ್ರಹಭೇದ. ಇದಕ್ಕೆ ಗ್ರಹಸ್ವರ ಭೇದ ಅಥವಾ ಆಧಾರಷಡ್ಜ ವರ್ಗಾವಳಿ ಎಂದೂ ಹೆಸರು. ಒಂದು ರಾಗದ ಪ್ರತಿಯೊಂದು ಸ್ವರವನ್ನು ಆಧಾರ ಸ್ವರವನ್ನಾಗಿ ಇಟ್ಟುಕೊಂಡು ಆ ರಾಗದ ಆರೋಹಣಾವರೋಹಣಗಳನ್ನು ಒಂದುಗೂಡಿಸುವುದು ಗ್ರಹಭೇದ. ಇದರಿಂದ ಅನೇಕ ಇತರ ರಾಗಗಳುಂಟಾಗುತ್ತವೆ. ಇದರಲ್ಲಿ ಮಾನಸಿಕ ಪದ್ಧತಿ, ಅಂತರ ವಿಧಾನ, ಸ್ವರಸ್ಥಾನ ವಿಧಾನ, ಸ್ವರಭೇದ ವಿಧಾನ, ಪ್ರಯೋಗ ವಿಧಾನ ಎಂಬ ಹಲವು ವಿಧಾನಗಳಿವೆ.

ಉತ್ತಮ ಸ್ವರಜ್ಞಾನ ಮತ್ತು ಅನುಭವವಿರುವ ವಿದ್ವಾಂಸರು ರಾಗಾಲಾಪನೆ ಮಾಡುವಾಗ ವಿಚಿತ್ರ ಕಲ್ಪನೆಯನ್ನು ಮಾಡಿ ಗ್ರಹಭೇದದಿಂದ ಇನ್ನೊಂದು ರಾಗವನ್ನು ಸ್ವಲ್ಪ ತೋರಿಸಬಹುದು. ಪುರಾತನ ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ಅನ್ಯರಾಗಕಾಕು ಎಂಬ ಪದವು ಸೂಕ್ತವಾದ ಜಾಗದಲ್ಲಿ ಗ್ರಹಭೇದ ಮಾಡುತ್ತಿದ್ದರೆಂಬುದನ್ನು ಸೂಚಿಸುತ್ತದೆ. ರಸಿಕನಾದ ಶ್ರೋತೃವಿಗೆ ಮುಖ್ಯರಾಗದ ಹಿನ್ನೆಲೆಯಲ್ಲಿ ಗ್ರಹಭೇದವು ಒಂದು ಮಿಂಚಿನಂತೆ ಭಾಸವಾಗುತ್ತದೆ.

**ಗ್ರಹಭೇದಪ್ರದರ್ಶಿನಿ**—ಇದೊಂದು ಪ್ರದರ್ಶನವಾದ್ಯ. ಗ್ರಹಭೇದದಿಂದ ಉಂಟಾಗುವ ರಾಗಗಳನ್ನು ತೋರಿಸುತ್ತದೆ. ಈ ವಾದ್ಯವು ನೋಡಲು ಒಂದು ಚಿಕ್ಕ ಹಾರ್ಮೋನಿಯಂ ವಾದ್ಯದಂತಿದೆ. ಇದರಲ್ಲಿ ೨೫ ಕೀ ಗಳಿವೆ. ೧೨ ಕೀ ಗಳು ಪ್ರಥಮ ಸ್ಥಾಯಿಯ ೧೨ ಸ್ವರಸ್ಥಾನಗಳನ್ನು ಸೂಚಿಸುತ್ತವೆ. ಎರಡನೆಯ ೧೨ ಕೀ ಗಳು ಎರಡನೆ ಸ್ಥಾಯಿಯ ೧೨ ಸ್ವರಸ್ಥಾನಗಳನ್ನೂ, ೨೫ನೇ ಕೀ ಮೂರನೆ ಸ್ಥಾಯಿಯ ಷಡ್ಜವನ್ನೂ ಸೂಚಿಸುತ್ತದೆ. ಈ ಕೀ ಗಳೆಲ್ಲವೂ ಒಂದೇ ಮಟ್ಟದಲ್ಲಿವೆ.

ಕೀಲುಮಣೆಯ ಮೇಲೆ ೧೨ ಸ್ವರಸ್ಥಾನಗಳನ್ನು ಗುರುತುಮಾಡಿರುವ ಭಿನ್ನಾಂಶ ಮಾಪಕವಿದೆ. ಸ್ವರಗಳ ಅಕ್ಷರಗಳ ಮೇಲ್ಭಾಗದಲ್ಲಿ ಶಂಕರಾಭರಣ ಅಥವಾ ಹಿಂದೂಸ್ಥಾನಿ ಬಿಲಾವಲ್ ರಾಗದ ಸ್ವರಗಳನ್ನು ಗುರುತು ಮಾಡಲಾಗಿದೆ. ಭಿನ್ನಾಂಶ ಮಾಪಕವನ್ನು ಗೊತ್ತಾದ ನೇರದಲ್ಲಿ ಚಲಿಸಬಹುದು. ಈ ವಾದ್ಯವನ್ನು ಅವಶ್ಯವಿದ್ದರೆ ಶ್ರುತಿಪೆಟ್ಟಿಗೆಯಾಗಿ ಬಳಸಬಹುದು.

**ಗ್ರಹತ್ರಯ**—ಇವು ಸಂಗೀತ ರಚನೆಗಳಲ್ಲಿ ಕಂಡುಬರುವ ಮೂರು ಬಗೆಯ ಗ್ರಹ ಅಥವಾ ಎಡುಪ್ಪುಗಳು. ಇವು ಯಾವುವೆಂದರೆ —

೧. **ಸಮಗ್ರಹ**—ಸಂಗೀತ ಮತ್ತು ತಾಳಾವರ್ತವು ಒಟ್ಟಿಗೆ ಆರಂಭವಾಗುವುದು ಸಮಗ್ರಹ.

೨. **ಅನಾಗತಗ್ರಹ**—ತಾಳಾವರ್ತವು ಆರಂಭವಾದ ನಂತರ ಸಂಗೀತವು ಆರಂಭವಾದರೆ ಅದು ಅನಾಗತ ಗ್ರಹ ಸಂಗೀತವು ೧/೪, ೧/೨, ೩/೪, ೧ ಅಥವಾ ೧೨ ಅಕ್ಷರಕಾಲದ ನಂತರ ಆರಂಭವಾಗಬಹುದು.

೩. **ಅತೀತಗ್ರಹ**—ತಾಳಾವರ್ತಕ್ಕೆ ಮೊದಲೇ ಅಂದರೆ ಹಿಂದಿನ ಆವರ್ತದ ಕೊನೆಯ ಅಕ್ಷರ ಅಥವಾ ಅದಕ್ಕೆ ಹಿಂದಿನ ಅಕ್ಷರದಿಂದ ಸಂಗೀತವು ಆರಂಭವಾಗುತ್ತದೆ. ಸಾಹಿತ್ಯದ ವಿಶೇಷ ಲಕ್ಷಣಗಳಿಂದ ಈ ಬಗೆಯ ಗ್ರಹವಿರುವುದು ಸಂಗೀತ ರಚನೆಗಳಲ್ಲಿ ಕಂಡುಬರುತ್ತದೆ.

**ಗ್ರಹಸ್ವರ ಪ್ರಬಂಧ**—ಇದೊಂದು ಬಗೆಯ ಸಂಗೀತರಚನೆ ಇದರ ಸಾಹಿತ್ಯದ ಕೆಲವು ಭಾಗಕ್ಕೆ ಬದಲಾಗಿ ಸ್ವರಸಂಜ್ಞಾಸೂಚಕ ಅಕ್ಷರಗಳನ್ನು ಬಳಸಿ ಆಯಾ ಭಾಗದ ರಾಗವನ್ನು ಹಾಡಲಾಗುವುದು. ಈ ಅಕ್ಷರಗಳು ಸ್ವರಾಕ್ಷರಗಳಿಗಿಂತ ಭಿನ್ನವಾಗಿರುತ್ತವೆ. ಗೋಪಾಲನಾಯಕನು (೧೬ನೆ ಶ) ಭೈರವಿ ರಾಗವಲ್ಲಿ ಗ್ರಹಸ್ವರ ಪ್ರಬಂಧವನ್ನು ರಚಿಸಿದ್ದಾನೆ.

**ಘ**—ಮರೀಚ, ವರುಣ, ಮೇಘ ಇತ್ಯಾದಿ ಅರ್ಥಗಳಿವೆ.

**ಘಟ**—ಇದೊಂದು ಉಪತಾಳ ವಾದ್ಯ. ರಾಮಾಯಣದ ಕಾಲದಿಂದಲೂ ಪ್ರಸಿದ್ಧವಾಗಿರುವ ಕಚೇರಿವಾದ್ಯ ಮತ್ತು ಜಾನಪದ ವಾದ್ಯ ಈ ಮಡಕೆ ವಾದ್ಯವನ್ನು ತಯಾರಿಸಲು ವಿಶೇಷ ಗುಣವುಳ್ಳ ಮಣ್ಣನ್ನು ಆಯ್ದು ಅದನ್ನು ಕೆಲವು ತಿಂಗಳ ಕಾಲ ಕೊಳೆ ಹಾಕುತ್ತಾರೆ. ನಂತರ ಇದರೊಡನೆ ಕಬ್ಬಿಣದ ಪುಡಿಯನ್ನು ಕಲಸಿ ಬೇಯಿಸಿ ವಾದ್ಯವನ್ನು ತಯಾರಿಸುತ್ತಾರೆ. ಬೆಂಗಳೂರು ಜಿಲ್ಲೆಯ ಚೆನ್ನಪಟ್ಟಣವು ಸೊಗಸಾದ ಘಟವಾದ್ಯಗಳ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಇಲ್ಲಿ ತಯಾರಾಗುತ್ತಿದ್ದ ವಾದ್ಯವು ನೇರಳೆ ಹಣ್ಣಿನ ಬಣ್ಣ ಹೊಂದಿದ್ದು ಕಲ್ಲಿನಿಂದ ತಯಾರಾದ ವಾದ್ಯದಂತೆ ಗಟ್ಟಿಯಾಗಿದ್ದು ದೀರ್ಘಕಾಲ ಬಾಳಿಕೆ ಬರುತ್ತಿತ್ತು. ಈಗ ನಾವು ಕಾಣುವ ವಾದ್ಯದ ಬಾಯಿಗಿಂತಲೂ ಚಿಕ್ಕಬಾಯಿ ಇದ್ದು, ನುಡಿಸುವಾಗ ಹೊಟ್ಟೆಗೆ ಆತುತೆಗೆದಾಗ ಮನೋಹರವಾದ ಘುಂಕಾರ ಕೊಡುತ್ತಿತ್ತು. ಘಟವಾದ್ಯದ ಹೊರ ಮೈ ಕತ್ತಿನ ಭಾಗದಲ್ಲಿ, ಹೊಟ್ಟೆಯ

ಕೆಳಭಾಗದಲ್ಲಿ ನುಡಿಕೆಗಳು ಮನೋಹರವಾದ ನಾದವೈವಿಧ್ಯವನ್ನು ತೋರುತ್ತವೆ. ಎರಡು ಅಂಗೈಗಳು ಮತ್ತು ಬೆರಳುಗಳಿಂದ ಈ ವಾದ್ಯವನ್ನು ನುಡಿಸುತ್ತಾರೆ. ಕಚೇರಿಗಳಲ್ಲಿ ತನಿ ನುಡಿಸುವಾಗ ಮುಕ್ತಾಯದ ಘಟ್ಟದಲ್ಲಿ ಇದನ್ನು ಮೇಲಕ್ಕೆ ಎಸೆದು, ಮುಕ್ತಾಯದ ಎಡುಪಿಗೆ ಸರಿಯಾಗಿ ಕೈಸೇರುವಂತೆ ನುಡಿಸುವ ಸಮರ್ಥ ವಾದಕರು ಅನೇಕರು ಇದ್ದಾರೆ. ಸಾಧಕ ಮಾಡಿ ಬಹುತೀವ್ರಗತಿಯಲ್ಲಿ ಜತಿಗಳನ್ನು ನುಡಿಸಬಹುದು. ಇದನ್ನು ಖಂಜರ ಅಥವಾ ಮೃದಂಗದ ಜೊತೆಗೆ ನುಡಿಸುವರು. ಜರುಗಿಸಿ ನುಡಿಸಬಹುದಾದ ವಾದ್ಯ ಇದೊಂದೇ. ಘಟ ವಿದ್ವಾಂಸರಲ್ಲಿ ಹಲವು ಶ್ರುತಿಗಳ ಘಟಗಳಿರುತ್ತವೆ. ತಮಿಳುನಾಡಿನ ಪನ್‌ರುಟಿ ಮತ್ತು ಮಾನಾ ಮಧುರೆಯಲ್ಲಿ ಒಳ್ಳೆಯ ಘಟವಾದ್ಯಗಳನ್ನು ತಯಾರಿಸುತ್ತಾರೆ. ಮದ್ರಾಸಿನ ಟಿ ಎಸ್. ವಿಲ್ವಾದ್ರಿ ಅಯ್ಯರ್, ರಾಮಚಂದ್ರನ್ ಮುಂತಾದ ಖ್ಯಾತ ಘಟಂ ವಿದ್ವಾಂಸರಾಗಿದ್ದರು. ಬೆಂಗಳೂರಿನ ಮಂಜುನಾಥ್, ಮೈಸೂರಿನ ಎಂ. ಎ. ಕೃಷ್ಣ ಮೂರ್ತಿ ಮುಂತಾದವರು ಈಗಿನ ಖ್ಯಾತ ಘಟಂ ವಿದ್ವಾಂಸರು.

**ಘನ**—ಇದು ಮನೋಧರ್ಮ ಸಂಗೀತದ ಒಂದು ಭಾಗ ಮಧ್ಯಗತಿಯಲ್ಲಿ ರಾಗವನ್ನು ತಾನದ ಶೈಲಿಯಲ್ಲಿ ಹಾಡುವುದು ಘನಂಶೈಲಿ ಘನಂ ಕೃಷ್ಣಯ್ಯರ್, ಘನಂ ಶೀನಯ್ಯ, ಘನಂ ತಿರುಮಲಯ್ಯರ್, ಪೈದಾಳ ಗುರುಮೂರ್ತಿ ಶಾಸ್ತ್ರಿ, ವಿಜಯ ನಗರದ ಹಿರಿಯ ಗುರುರಾಯಾಚಾರ್ಯುಲು ಘನಂ ಶೈಲಿಯ ಹಾಡುಗಾರಿಕೆಯಲ್ಲಿ ಪ್ರವೀಣರಾಗಿದ್ದರು.

**ಘನಆಂದೋಳಿಕೆ**—ಇದು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ಗ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಗ ಸ

**ಘನಕೇಶಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ರಿ ಸ

**ಘನಂಕೃಷ್ಣಯ್ಯರ್**—ಕೃಷ್ಣಯ್ಯರ್ ೧೯ನೆ ಶತಮಾನದ ಒಬ್ಬ ಪ್ರಸಿದ್ಧ ಸಂಗೀತ ವಿದ್ವಾಂಸರು. ತಮಿಳುನಾಡಿನ ತಿರುಚಿಯ ಬಳಿಯಿರುವ ಪೆರಿಯತಿರುಕ್ಕುನ್ರಂ ಎಂಬ ಊರಿನ ಅಷ್ಟಸಹಸ್ರಂ ಬ್ರಾಹ್ಮಣ ಪಂಗಡದ ರಾಮಸ್ವಾಮಿ ಅಯ್ಯರ್ ಎಂಬು ವರ ಕಿರಿಯ ಮಗನಾಗಿ ಜನಿಸಿದರು. ಮೊದಲು ಪಚ್ಚಿಮಿರಿಯಂ ಆದಿ ಅಪ್ಪಯ್ಯ ನವರಲ್ಲಿ ಸಂಗೀತ ಶಿಕ್ಷಣವನ್ನು ಪಡೆದು ನಂತರ ಬೊಬ್ಬಿಲಿ ಕೇಶವಯ್ಯನವರಲ್ಲಿ ಘನಂ ಶೈಲಿಯ ಹಾಡುಗಾರಿಕೆಯನ್ನು ಕಲಿತು ಆ ಶೈಲಿಯ ಗಾಯನದಲ್ಲಿ ಪ್ರವೀಣರಾದರು. ತಂಜಾವೂರು ಆಸ್ಥಾನ ವಿದ್ವಾಂಸರಾದರು. ಕಪಿಸ್ಥಳದ ರಾಮಭದ್ರ ಮೂಪ್ಪನಾರ್,

ತಿರುವಡಮರುದೂರಿನ ಅಮರಸಿಂಹ ಮಹಾರಾಜ ಮತ್ತು ಉಡೈಯಾರ್‌ಪಾಳ್ಯದ ಕಚ್ಚಿ ಕಲ್ಯಾಣರಂಗ ಮುಂತಾದವರು ಇವರ ಪೋಷಕರಾಗಿದ್ದರು.

ಕೃಷ್ಣಯ್ಯರ್ ರಚಿಸಿರುವ ತಮಿಳು ಪದಗಳು ಕರ್ಣಾಟಕ ಸಂಗೀತದ ರಚನೆಗಳ ಒಂದು ಮುಖ್ಯಭಾಗವಾಗಿವೆ. ಇವು ಭಾವ, ರಸ, ಸಾಹಿತ್ಯ ಮತ್ತು ಸಂಗೀತದ ಸಾಮರಸ್ಯ ಮತ್ತು ಲಾಲಿತ್ಯಗಳಿಗೆ ಪ್ರಸಿದ್ಧವಾಗಿವೆ. ಇವು ಅಭಿನಯಕ್ಕೆ ಬಹುಯುಕ್ತ ವಾದ ಮಾದರಿ ಪದಗಳು. ಇವುಗಳಲ್ಲಿ ಮುತ್ತುಕುಮಾರ, ವೇಲವ, ಸುಬ್ರಹ್ಮಣ್ಯ ಮತ್ತು ಇವಕ್ಕೆ ಸರಿಸಮಾನವಾದ ಅಂಕಿತಗಳನ್ನು ಬಳಸಿದ್ದಾರೆ. ಇವರು ಹಲವು ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ದೇವರುಗಳನ್ನು ಕುರಿತು ಪದಗಳನ್ನೂ, ಭಕ್ತಿಗೀತೆ ಗಳನ್ನೂ ಹಾಡಿದ್ದಾರೆ. ಇವರಿಗೆ ಸಂಗೀತದ ದಿಗ್ಗಜಗಳಾಗಿದ್ದ ತ್ಯಾಗರಾಜರು, ಗೋಪಾಲಕೃಷ್ಣಭಾರತಿ, ಶಂಕರಾಭರಣಂ ನರಸಯ್ಯ ಮುಂತಾದವರ ಸ್ನೇಹವಿದ್ದಿತು. ಭೈರವಿರಾಗದ ವೇಲವರೇ, ಕಲ್ಯಾಣಿರಾಗದ ಪಾರೆಂಗುಂ ಪಾರ್ತಾಲುಂ ಎಂಬ ಪದಗಳು ಪೂರ್ಣ ವರಿಕ ಶೈಲಿಗೆ ಪ್ರಸಿದ್ಧವಾದ ಪದಗಳು.

ಕೃಷ್ಣಯ್ಯರ್‌ಗೆ ದೊರೆತ ಸನ್ಮಾನಗಳು ಅಪಾರ. ಅನೇಕ ರಾಜರು ಮತ್ತು ಜಮೀನ್ದಾರರು ಇವರನ್ನು ಸನ್ಮಾನಿಸಿದರು. ಇವರಿಗೆ ಪ್ರಯಾಣ ಮಾಡಲು ಒಂದು ಕುದುರೆಯನ್ನೂ, ಅದನ್ನು ನೋಡಿಕೊಳ್ಳಲು ಒಬ್ಬ ಸೇವಕನನ್ನೂ ಕೊಟ್ಟಿದ್ದರು. ಇವರ ಶಿಷ್ಯರಲ್ಲಿ ಆದಿಮೂರ್ತಿ ಅಯ್ಯರ್ ಎಂಬುವರು ಪ್ರಮುಖರು. ತೆಲುಗು ಪದಗಳಿಗೆ ಕ್ಷೇತ್ರಯ್ಯನವರ ಸ್ಥಾನವು ಎಷ್ಟು ಹಿರಿದಾದುದೋ ಅಷ್ಟೇ ಕೃಷ್ಣಯರ್‌ರವರ ಸ್ಥಾನವು ತಮಿಳು ಪದಗಳಿಗೆ ಹಿರಿದಾದುದು. ನಾಟ್ಯ ಪ್ರದರ್ಶನಗಳಲ್ಲಿ ಇವರ ಪದಗಳು ಇದ್ದೇ ಇರುತ್ತವೆ.

**ಘನತರಂಗಿಣಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ರಿ ಮ ಪ ದ ನಿ ಪ ಸಂ

ಅ : ಸಂ ಪ ನಿ ದ ಮ ಗ ಸ

**ಘನತಾನ**—ಇದು ಘನರಾಗಗಳ ತಾನ.

**ಘನನಾಯಕಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ : ಸ ಗ ಮ ನಿ ದ ಪ ದ ನಿ ಸಂ

ಅ : ಸಂ ನಿ ದ ಪ ಮ ಗ ರಿ ಸ

**ಘನಪಂಚಕ**—ನಾಟ, ಗೌಳ, ಆರಭಿ, ಶ್ರೀರಾಗ ಮತ್ತು ವರಾಳಿ—ಈ ಐದು ರಾಗಗಳಿಗೆ ಘನಪಂಚಕಗಳೆಂದು ಹೆಸರು.

ಕೇದಾರ, ನಾರಾಯಣಗೌಳ, ರೀತಿಗೌಳ, ಸಾರಂಗನಾಟ, ಭೌಳಿ—ಈ ಐದು ರಾಗಗಳಿಗೆ ದ್ವಿತೀಯ ಘನಪಂಚಕಗಳೆಂದು ಹೆಸರು.

**ಘನಮಟ್ಯ**—ಇದು ರಾಗತಾಳಚಿಂತಾಮಣಿ (೧೭ನೆ ಶ) ಎಂಬ ಒಂದು ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಘಟಂಮಣಿಅಯ್ಯರ್**—ಮಣಿ ಅಯ್ಯರ್ ತಮಿಳುನಾಡಿನ ಮಧುರೆಯ ಶಂಕರನಾರಾಯಣ ಅಯ್ಯರ್ ಮತ್ತು ಲಕ್ಷ್ಮಿ ಅಮ್ಮಾಳ್‌ರವರ ಮಗನಾಗಿ ೧೯೧೫ರಲ್ಲಿ ಜನಿಸಿದರು. ಮೊದಲು ವಿದ್ವಾನ್ ಮಾಮುಂಡಿಯಾ ಪಿಳ್ಳೆಯವರಲ್ಲಿ ಘಟವಾದನದಲ್ಲಿ ಶಿಕ್ಷಣ ಪಡೆದು ತರುವಾಯ ಪಳನಿ ಮುತ್ತಯ್ಯ ಪಿಳ್ಳೆಯವರಲ್ಲಿ ಮೃದಂಗವಾದನವನ್ನು ಕಲಿತರು. ೧೯೩೦ರಿಂದ ತಮ್ಮ ಸಂಗೀತ ಜೀವನವನ್ನು ಆರಂಭಿಸಿ, ಮುತ್ತಯ್ಯ ಭಾಗವತರು, ಕಾರೈಕ್ಕುಡಿ ಸಹೋದರರು ಮುಂತಾದ ಹೆಸರಾಂತ ವಿದ್ವಾಂಸರಿಗೆ ಪಕ್ಕವಾದ್ಯ ನುಡಿಸುತ್ತಿದ್ದರು. ಇವರಿಗೆ ಹಲವು ಜಮೀನ್ದಾರರು ಮತ್ತು ಆಸ್ಥಾನಗಳ ಪೋಷಣೆ ದೊರಕಿತ್ತು.

**ಘನರಾಗ**—ತಾನದ ಶೈಲಿಯಲ್ಲಿ ಹಾಡಿದಾಗ ವಿಶಿಷ್ಟ ಸ್ವರೂಪವು ವ್ಯಕ್ತವಾಗುವ ರಾಗ. ನಾಟ, ಗೌಳ, ಆರಭಿ, ವರಾಳಿ ಮತ್ತು ಶ್ರೀರಾಗಗಳು ಘನರಾಗಗಳಿಗೆ ಉದಾಹರಣೆಗಳು

**ಘನರಾಗಗೀತ**—ನಾಟ, ಗೌಳ, ಆರಭಿ, ಶ್ರೀ ಮುಂತಾದ ಘನರಾಗಗಳಲ್ಲಿ ರಚಿಸಲ್ಪಟ್ಟಿರುವ ಗೀತ.

**ಘನರಾಗಪಂಚರತ್ನ**—ತ್ಯಾಗರಾಜ ವಿರಚಿತವಾದ ಪ್ರಸಿದ್ಧ ಘನರಾಗದ ಕೃತಿಗಳಿಗೆ ಘನರಾಗ ಪಂಚರತ್ನಕೃತಿಗಳೆಂದು ಹೆಸರು. ಇವು ತ್ಯಾಗರಾಜರ ಸಂಗೀತ ಪ್ರತಿಭೆಯ ನಿದರ್ಶನಗಳಾಗಿವೆ. ಇವು ಆದಿತಾಳದಲ್ಲಿವೆ. ಪ್ರತಿಯೊಂದು ಕೃತಿಯಲ್ಲೂ ಹಲವು ಚರಣಗಳಿವೆ. ಈ ಚರಣಗಳು ಬೇರೆ ಬೇರೆ ಧಾತುಗಳಲ್ಲಿವೆ ಮತ್ತು ಹಾಡುವಾಗ ಚರಣದಲ್ಲಿ ಮೊದಲು ಸ್ವರದ ಭಾಗವನ್ನೂ ನಂತರ ಸಾಹಿತ್ಯ ಭಾಗವನ್ನೂ ಹಾಡುವುದು ಪದ್ಧತಿ
ಘನರಾಗ ಪಂಚರತ್ನಗಳು ಯಾವುವೆಂದರೆ—

| | | |
|---|---|---|
| ಜಗದಾನಂದಕಾರಕ | — | ನಾಟ |
| ದುಡುಕುಗಲ | — | ಗೌಳ |
| ಸಾಧಿಂಚೆನೆ | — | ಆರಭಿ |
| ಕನಕನರುಚಿರಾ | — | ವರಾಳಿ |
| ಎಂದರೋ ಮಹಾನುಭಾವುಲು | — | ಶ್ರೀರಾಗ |

**ಘನರಾಗಮಾಲಿಕಾವರ್ಣ**— ಘನರಾಗಗಳಲ್ಲಿ ರಚಿತವಾಗಿರುವ ರಾಗ ಮಾಲಿಕಾವರ್ಣ. ವೀಣಾಕುಪ್ಪಯ್ಯರ್ ಈ ಬಗೆಯ ವರ್ಣವನ್ನು ರಚಿಸಿದ್ದಾರೆ.

**ಘನವತಿ**—ಈ ರಾಗವು ೩೩ನೆ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಸ

**ಘನವಾದ್ಯ** - ಗಟ್ಟಿವಸ್ತುಗಳನ್ನು ಪರಸ್ಪರ ಹೊಡೆಯುವುದರಿಂದ ನಾದವನ್ನುಂಟುಮಾಡುವ ತಾಳವಾದ್ಯಗಳಿಗೆ ಘನವಾದ್ಯಗಳೆಂದು ಹೆಸರು. ಶಾಸ್ತ್ರಗ್ರಂಥಗಳು ತಾಳ, ಕಾಂಸ್ಯತಾಳ, ಘಂಟೆ, ಜಯಘಂಟೆ (ಜಾಗಟೆ), ಕ್ಷುದ್ರಘಂಟೆ, ಕಮ್ರಾ, ಶುಕ್ತಿ, ಪಟ್ಟ, ಬ್ರಹ್ಮತಾಳ ಮುಂತಾದುವನ್ನು ವರ್ಣಿಸಿವೆ ಕ್ಷುದ್ರಘಂಟೆಗೆ ಗೆಜ್ಜೆ, ಶುಕ್ತಿವಾದ್ಯಕ್ಕೆ ಕಿರಿಕಿಟ್ಟ, ಕಾಂಸ್ಯತಾಳಕ್ಕೆ ಕಂಸಾಳೆ ಮುಂತಾದುವು ಕನ್ನಡದ ಹೆಸರುಗಳು. ತಿರುಜ್ಞಾನ ಸಂಬಂಧರ್‌ಗೆ (೭ನೆ ಶ) ದೊರಕಿದ ಚಿನ್ನದ ತಾಳವು (ಪೋಟ್ರಾಲಂ) ಬೆಲೆಬಾಳುವ ಲೋಹದ ತಾಳಗಳಿಗೆ ನಿದರ್ಶನ.

**ಘನಸಿಂಧು**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ

ಆ: ಸ ಮ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಘನಸುಪ್ರಭಾತ**—ಈ ರಾಗವು ೬೫ನೆ ಮೆಳಕರ್ತ ಮೇಚ ಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ಪ ದ ನಿ ದ ಪ ಮ ಗ ರಿ ಸ

**ಘನಶ್ಯಾಮಳ**—ಈ ರಾಗವು ೫ನೆ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಘನಶೋಭಿತ**—ಈ ರಾಗವು ೧೪ನೆ ಮೇಳಕರ್ತ ವಕುಳಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ದ ಸ

ಅ: ಸ ದ ನಿ ಪ ಮ ಗ ರಿ ಸ

**ಘನಾ**—ಸಂಗೀತದಾಮೋದರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಋಷಭದ ಒಂದು ಶ್ರುತಿಯ ಹೆಸರು.

**ಘನಾಂದೋಳಿಕ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಘಾತ**—ಇದು ತಾಳವನ್ನು ತೋರಿಸುವ ಸಶಬ್ದ ಕ್ರಿಯೆ.

**ಘೋರದರ್ಶಿನಿ**—ಈ ರಾಗವು ೩೬ನೆ ಮೇಳಕರ್ತ ಛಲನಾಟದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ ದ ಪ ಮ ಗ ರಿ ಸ

**ಘೋಷಾಕರಿ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ ದ ಪ ಮ ಗ ರಿ ಸ

**ಘೋಷಣಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ದ ಸ̇

ಅ: ಸ ನಿ ದ ಪ ಮ ಗ ಮ ರಿ ಸ

**ಘೋಷಮಂಜರಿ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ಪ ನಿ ಸ̇

ಅ: ಸ ನಿ ಪ ದ ನಿ ಪ ಮ ರಿ ಗ ರಿ ಸ

**ಘೋಷವತಿ**—ದೊರೆ ಉದಯನನು ನುಡಿಸುತ್ತಿದ್ದ ಪುರಾತನ ವೀಣೆ. ಇದನ್ನು ಅವನು ನುಡಿಸಿ ಕಾಡಾನೆಗಳನ್ನು ವಶಪಡಿಸಿಕೊಳ್ಳುತ್ತಿದ್ದನು.

**ಘೋಷವಿನೋದಿನಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ದ ಪ ಮ ಗ ರಿ ಸ

**ಘೋಷಸ್ವಾಣಿ**—ಈ ರಾಗವು ೫೭ನೆ ಮೇಳಕರ್ತ ಸಿಂಹೇಂದ್ರಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ಘಂಟಾ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ಚತುಶ್ರುತಿ ರಿಷಭವು ಅನ್ಯಸ್ವರವಾಗಿರುವ ಒಂದು ಭಾಷಾಂಗರಾಗ. ಇದೊಂದು ಪುರಾತನ ರಕ್ತಿರಾಗ. ಕಥಕಳಿಯಲ್ಲಿ ಇದನ್ನು ಧುಃಖ ಘಂಟಾರಂ ಎನ್ನುತ್ತಾರೆ.

ಕೆಲವು ಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಇದು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ ಮತ್ತು ಶುದ್ಧರಿಷಭವು ಅನ್ಯಸ್ವರ. ಗೇಯನಾಟಕಗಳಲ್ಲಿ ಈ ರಾಗವನ್ನು ಹೆಚ್ಚಾಗಿ ಬಳಸುತ್ತಾರೆ ಈ ರಾಗದಲ್ಲಿ ಮಂಗಳಗಳಿವೆ. ತ್ಯಾಗರಾಜರ ಇನ್ನಾಳ್ಳು ನನ್ನೇಲಿ, ಇಂಕಯೋಚನ, ಗಾರವಿಂಪರಾದಾ, ರಾಮ ರಾಮ ರಾಮಚಂದ್ರ, ಜಯ ಮಂಗಳಂ ಮತ್ತು ಮುತ್ತುಸ್ವಾಮಿದೀಕ್ಷಿತರ ನವಾವರಣ ಕೃತಿಗಳಲ್ಲಿ ಒಂದಾದ ಶ್ರೀಕಮಲಾಂಬಿಕೆ ಎಂಬುವು ಈ ರಾಗದ ಪ್ರಸಿದ್ಧ ಕೃತಿಗಳು.

**ಘಂಟಾಣ**—ಈ ರಾಗವು ೫೭ನೆ ಮೇಳಕರ್ತ ಸಿಂಹೇಂದ್ರಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ‍ಂ

ಅ: ಸ‍ಂ ನಿ ದ ಮ ಗ ರಿ ಸ

**ಘೃತಾಚಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ‍ಂ

ಅ: ಸ‍ಂ ನಿ ದ ಮ ರಿ ಸ

**ಚ**—ವಾಣೀ, ಸುದರ್ಶನ, ಲಕ್ಷ್ಮೀ, ದೇವಿ, ಕೌಮಾರೀ ಇತ್ಯಾದಿ ನಾನಾರ್ಥಗಳಿವೆ.

**ಚಕ್ರ**—(೧) ಮೇಳಕರ್ತ ರಾಗಗಳನ್ನು ೧೨ ರಿಂದ ಭಾಗಿಸಿ ಒಂದೊಂದು ಭಾಗಕ್ಕೆ ಒಂದೊಂದು ಚಕ್ರವೆಂದು ವೆಂಕಟಮಖಿ ಹೆಸರಿಟ್ಟಿದ್ದಾರೆ. ಪ್ರತಿಚಕ್ರದಲ್ಲಿ ೬ ಮೇಳರಾಗಗಳಿರುತ್ತವೆ

(೨) ತಿಶ್ರಜಾತಿರೂಪಕತಾಳಕ್ಕೆ ಚಕ್ರವೆಂದು ಹೆಸರು. ಇದರ ಒಂದಾವರ್ತಕ್ಕೆ ೫ ಅಕ್ಷರ ಕಾಲವಾಗುತ್ತದೆ.

**ಚಕ್ರತಾನ** ತಾನಗಳಲ್ಲಿ ವಕ್ರತಾನ, ಮಿಶ್ರತಾನ, ಮಾಲಿಕಾತಾನ, ಗಂಭೀರತಾನ, ವಿದ್ಯುತಾನ ಮತ್ತು ಚಕ್ರತಾನ ಎಂಬ ಆರು ವಿಧಗಳಿವೆ. ಚಕ್ರತಾನವು ರಾಗಾಲಾಪನೆಯ ಒಂದು ಮುಖ್ಯ ಶಾಖೆ. ಮೊದಲು ಎಂದಿನಂತೆ ಹಾಡಿ ಅಥವಾ ನುಡಿಸಿ ನಂತರ ಆಹ್ಲಾದಕರ ಮತ್ತು ಚಮತ್ಕಾರಯುತವೂ ಕುತೂಹಲಕಾರಿಯೂ ಆದ ತಾನಗಳನ್ನು ಹಾಡುವರು ಅಥವಾ ನುಡಿಸುವರು. ಚಕ್ರದ ಮಾದರಿಯ ಸ್ವರಸಮೂಹಗಳನ್ನು ದ್ರುತಗತಿಯಲ್ಲಿ ಹಾಡುವುದು ಚಕ್ರತಾನ. ಇದನ್ನು ಹಾಡಲು ಉನ್ನತ ಮಟ್ಟದ ಸಾಮರ್ಥ್ಯ ಮತ್ತು ಪ್ರತಿಭೆ ಬೇಕು.

**ಚಕ್ರತುಲ್ಯ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ‍ಂ

ಅ: ಸ‍ಂ ನಿ ದ ಪ ಮ ಗ ರಿ ಸ

**ಚಕ್ರಧರೀ** –ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ

ಆ: ಸ ರಿ ಮ ಗ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಚಕ್ರಪ್ರದೀಪ್ತಾ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ಮ ದ ನಿ ಸ

ಅ: ಸ ನಿ ದ ಮ ಗ ಸ

**ಚಕ್ರಬಂಧ**—ಇದು ವೀಣೆಯನ್ನು ನುಡಿಸುವ ಒಂದು ವಿಧಾನ. ಇಡೀ ಕೃತಿಯನ್ನು ಅಥವಾ ಒಂದು ಭಾಗವನ್ನು ೫-೬ ಮೆಟ್ಟುಗಳಲ್ಲಿ ಎಡಗೈ ಬೆರಳುಗಳಿಂದ ಸ್ವರಸ್ಥಾನಗಳನ್ನು ನಾಲ್ಕು ತಂತಿಗಳಲ್ಲಿ ನುಡಿಸುವುದು ಚಕ್ರಬಂಧ ಶೈಲಿ. ಹೀಗೆ ನುಡಿಸುವ ಬೆರಳುಗಳ ವರ್ತುಲಾಕಾರ ಚಲನೆ ನೋಡಲು ಆಹ್ಲಾದಕರ. ವಿಜಯನಗರದ ವೀಣಾ ವೆಂಕಟರಮಣದಾಸರು (೧೮೬೬-೧೯೪೮) ಈ ಶೈಲಿಯ ವಾದನದಲ್ಲಿ ಪ್ರವೀಣರಾಗಿದ್ದರು

**ಚಕ್ರಮಂಜರಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ದ ನಿ ಸ

ಅ: ಸ ದ ಪ ಮ ರಿ ಸ

**ಚಕ್ರಭ್ರಮರಿ** —ಇದು ಭರತನಾಟ್ಯದ ಪಾದಭೇದಗಳಲ್ಲಿ ಒಂದಾದ ಭ್ರಮರಗಳಲ್ಲಿ ಒಂದು ವಿಧ. ನೆಲದ ಮೇಲೆ ಕಾಲುಗಳನ್ನೆಳೆಯುತ್ತಾ ಎರಡು ಕೈಗಳಲ್ಲಿ ತ್ರಿಪತಾಕವನ್ನು ಪ್ರದರ್ಶಿಸುತ್ತಾ ಚಕ್ರದಂತೆ ತಿರುಗುವುದಕ್ಕೆ ಚಕ್ರಭ್ರಮರಿ ಎಂದು ಹೆಸರು.

**ಚಕ್ರವಾಕ** –ಈ ರಾಗವು ೧೬ನೆ ಮೇಳಕರ್ತರಾಗ. ೩ನೆ ಚಕ್ರವಾದ ಅಗ್ನಿಚಕ್ರದ ನಾಲ್ಕನೆ ರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಶುದ್ಧರಿಷಭ, ಅಂತರಗಾಂಧಾರ, ಶುದ್ಧಮಧ್ಯಮ, ಚತುಶ್ರುತಿಧೈವತ ಮತ್ತು ಕೈಶಿಕಿ ನಿಷಾದವು ಈ ರಾಗದ ಸ್ವರಸ್ಥಾನಗಳು. ಗಾಂಧಾರ ಧೈವತಗಳು ಪರಸ್ಪರವಾದಿ ಸಂವಾದಿಗಳು. ರಿಷಭ ಮತ್ತು ನಿಷಾದ ನ್ಯಾಸಸ್ವರಗಳು. ಸರ್ವಸ್ವರಗಮಕವರಿಕ ರಕ್ತಿರಾಗ. ಗ ಮ ರೀ ಸ, ಪ ಮ ದಾ ವಿಶೇಷ ಸಂಚಾರಗಳು. ಈ ರಾಗದಲ್ಲಿ ಕಂಪಿತ ನಿಷಾದ ಪ್ರಯೋಗವುಂಟು. ತ್ರಿಸ್ಥಾಯಿರಾಗ ಹಾಗೂ ಗಾನರಸ ಪ್ರಧಾನವಾದ ಸಾರ್ವಕಾಲಿಕ ರಾಗ. ಈ ರಾಗದ ಕೃತಿಗಳು ಸ, ಗ ಮತ್ತು ಪ ಸ್ವರಗಳಿಂದ ಆರಂಭವಾಗುತ್ತವೆ. ಗ್ರಹಭೇದ ಮಾಡುವುದರಿಂದ ಅನ್ಯರಾಗ ಮೂರ್ಛನೆಗೆ ಅವಕಾಶ

ವಿದೆ. ಈ ರಾಗವನ್ನು ತ್ಯಾಗರಾಜರು ಪ್ರಕಾಶಕ್ಕೆ ತಂದರು. ಇದನ್ನು ವೈದ್ಯನಾಥ ಅಯ್ಯರ್‌ರವರು ತಮ್ಮ ೧೨ ನೆ ವಯಸ್ಸಿನಲ್ಲಿ ವಿದ್ವದ್ಗೋಷ್ಠಿಯಲ್ಲಿ ಅದ್ಭುತವಾಗಿ ಹಾಡಿ 'ಮಹಾ' ಎಂಬ ಪ್ರಶಸ್ತಿಯನ್ನು ಪಡೆದು ಅಂದಿನಿಂದ ಮಹಾವೈದ್ಯನಾಥ ಅಯ್ಯರ್ ಎಂದು ಪ್ರಖ್ಯಾತರಾದರು.

ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | | |
|---|---|---|---|---|
| ವರ್ಣ | — | ಜಲಜಾಕ್ಷಿ | — ಆದಿ | — ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| ಸ್ವರಜತಿ | — | ಸದಯ | — ಆದಿ | — ಪೊನ್ನಯ್ಯಪಿಳ್ಳೆ |
| ಕೃತಿ | — | ಎಟುಲ ಬ್ರೋತುವೋತೆಲಿಯ | — ಛಾಪು | — ತ್ಯಾಗರಾಜ |
| ಕೃತಿ | — | ಸುಗುಣಮುಲೇ | — ರೂಪಕ | — ತ್ಯಾಗರಾಜ |
| ಕೃತಿ | — | ಇಂಕದಯಾ | — ರೂಪಕ | — ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ |
| ಕೃತಿ | — | ನೀವೇಪಾಲಿಂಚರಾ | — ಆದಿ | — ಮೈಸೂರು ಕರಿಗಿರಿರಾಯರು |
| ಕೃತಿ | — | ನೆರನಮ್ಮಿತಿ ನೀವೇಗತಿ | — ತ್ರಿಪುಟ | — ಮೈಸೂರು ವಾಸುದೇವಾಚಾರ್ಯ |
| ಕೃತಿ | — | ಮಧುರಾಪುರ | — ತ್ರಿಪುಟ | — ಮುತ್ತಯ್ಯ ಭಾಗವತರು |

**ಚಕ್ರವಾಕಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಒಂದು ದಾಸೀರಾಗ

**ಚಚ್ಚತ್ಪುಟ**—ಇದು ಪುರಾತನ ಪದ್ಧತಿಯ ೧೦೮ ತಾಳಗಳಲ್ಲಿ ಮೊದಲನೆಯ ತಾಳ ಮತ್ತು ಪಂಚಮಾರ್ಗೀ ತಾಳಗಳಲ್ಲಿ ಒಂದು ತಾಳ. ಇದರ ಅಂಗಗಳು ಒಂದು ಗುರು, ಲಘು ಮತ್ತು ಪ್ಲುತ. ಇದರ ಒಂದಾವರ್ತಕ್ಕೆ ೮ ಮಾತ್ರೆಗಳು ಅಥವಾ ೩೨ ಅಕ್ಷರ ಕಾಲವಾಗುತ್ತದೆ.

**ಚರ್ಚರಿ**—(೧) ಇದೊಂದು ಬಗೆಯ ವಸಂತ ನೃತ್ಯ. ಇದರಲ್ಲಿ ೩೨ ಸ್ತ್ರೀಯರು ಪಾಲ್ಗೊಳ್ಳುತ್ತಾರೆ

(೨) ಇದು ಪುರಾತನ ೧೦೮ ತಾಳಗಳಲ್ಲಿ ಒಂದು ತಾಳ. ಇದರ ಒಂದಾವರ್ತಕ್ಕೆ ೧೮ ಮಾತ್ರೆಗಳು ಅಥವಾ ೭೨ ಅಕ್ಷರ ಕಾಲ.

(೩) ಇದು ಲುಪ್ತವಾಗಿರುವ ಮಧ್ಯಯುಗದ ಒಂದು ಬಗೆಯ ಪ್ರಬಂಧ.

**ಚಚ್ಚರೀ**—ಸಂಗೀತ ಸುಧಾ ಮುಂತಾದ ಪುರಾತನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ಬಗೆಯ ಪ್ರಬಂಧ.

**ಚಟಿ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಮದ್ದಲೆ.

**ಚತುರ್ಥ**—ಸಾಮಸ್ವರ ಮೇಳದ ಅವರೋಹಣ ಕ್ರಮದಲ್ಲಿ ಇದು ನಾಲ್ಕನೆಯ ಸ್ವರ. ನಿಷಾದಕ್ಕೆ ಸಮನಾದುದು. ಸ್ವರಾಂತರಕ್ಕೆ ಚತುರ್ಥ ಎಂದು ಹೆಸರು.

**ಚತುರ್ಥಕಾಲ**—ನಾಲ್ಕನೆಯ ಕಾಲ.

**ಚತುರ್ಥರಾಗವರ್ಧಿನಿ**—ಇದು ರಾಗಾಲಾಪನೆಯ ನಾಲ್ಕನೆಯ ಹಂತ. ಮೂರ್ಛನ ಪ್ರಸ್ತಾರ ಅಥವಾ ಸಂಚಾರವನ್ನು ದ್ರುತಗತಿಯಲ್ಲಿ ಮಾಡುವುದು ಆಲಾಪನೆಯ ನಾಲ್ಕನೆ ಹಂತದ ಮುಖ್ಯ ಲಕ್ಷಣ.

**ಚತುರಹಸ್ತ**—ಇದು ಭರತನಾಟ್ಯದ ಅಸಂಯುತ ಹಸ್ತಗಳಲ್ಲಿ ಒಂದು ಬಗೆ. ಕಿರುಬೆರಳನ್ನು ನೇರವಾಗಿ ಚಾಚಿ, ಉಳಿದ ಮೂರನ್ನು ಸೇರಿಸಿ ಅದರಿಂದ ಪ್ರತೇಕಿಸಿ, ಹೆಬ್ಬೆರಳನ್ನು ಅನಾಮಿಕೆಯ ಮೂಲದಲ್ಲಿ ಇಡುವುದು ಚತುರಹಸ್ತ. ಕಸ್ತೂರಿ, ಸ್ವಲ್ಪ ಎಂಬ ಅರ್ಥದಲ್ಲಿ, ಚಿನ್ನ, ತಾಮ್ರಾದಿ ಲೋಹಗಳು, ಒದ್ದೆ, ಖೇದ, ರಸಾಸ್ವಾದನೆ, ಕಣ್ಣು, ವರ್ಣಭೇದ, ಪ್ರಮಾಣ, ಸರಸ, ಮಂದಗಮನ, ತುಂಡಿರಿಸುವುದು, ಆಸನ, ತುಪ್ಪ, ಎಣ್ಣೆ ಮೊದಲಾದ ದ್ರವ ವಸ್ತುಗಳ ಸೂಚನೆಗೆ ಈ ಹಸ್ತವಿನಿಯೋಗವಾಗುವುದು

**ಚತುರ್ಥವಿದಾರಿ**—ಇದು ರಾಗಾಲಾಪನೆಯ ನಾಲ್ಕನೆಯ ಹಂತವಾದ ಮುಕ್ತಾಯಭಾಗ.

**ಚತುರ್ಥಸೈಂಧವಿ**—ಇದು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಸೈಂಧವಿರಾಗ.

**ಚತುರ್ದಶಮೂರ್ಛನಗಳು**—ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮದ ಗ್ರಹ ಭೇದದಿಂದ ೧೪ ಸ್ವರಮೇಳಗಳನ್ನು ಪಡೆಯಲು ಸಾಧ್ಯವಿದೆ.

**ಷಡ್ಜಗ್ರಾಮಮೂರ್ಛನೆದಿಂದ ಉಂಟಾಗುವ ಏಳು ಸ್ವರಮೇಳಗಳು**

| | | |
|---|---|---|
| ಉತ್ತರ ಮಂದ್ರ | — | ಷಡ್ಜದಿಂದ ಷಡ್ಜದವರೆಗೆ |
| ರಜನಿ | — | ನಿಷಾದದಿಂದ ನಿಷಾದದವರೆಗೆ |
| ಉತ್ತರಾಯತ | — | ಧೈವತದಿಂದ ಧೈವತದವರೆಗೆ |
| ಶುದ್ಧ ಷಡ್ಜ | — | ಪಂಚಮದಿಂದ ಪಂಚಮದವರೆಗೆ |
| ಮತ್ಸರಿಕೃತ | — | ಮಧ್ಯಮದಿಂದ ಮಧ್ಯಮದವರೆಗೆ |
| ಅಶ್ವಕ್ರಾಂತ | — | ಗಾಂಧಾರದಿಂದ ಗಾಂಧಾರದವರೆಗೆ |
| ಅಭಿರುದ್ಗತ | — | ಋಷಭದಿಂದ ಋಷಭದವರೆಗೆ |

**ಮಧ್ಯಮಗ್ರಾಮದ ೭ ಮೂರ್ಛನಗಳು ಮತ್ತು ಸ್ವರಮೇಳಗಳು**

| | | |
|---|---|---|
| ಸೌವೀರಿ | — | ಮಧ್ಯಮದಿಂದ ಮಧ್ಯಮದವರೆಗೆ |
| ಹರಿಣಾಶ್ವ | — | ಗಾಂಧಾರದಿಂದ ಗಾಂಧಾರದವರೆಗೆ |

| | | |
|---|---|---|
| ಕಲೋಪನಾಥ | — | ಋಷಭದಿಂದ ಋಷಭದವರೆಗೆ |
| ಶುದ್ಧಮಧ್ಯ | — | ಷಡ್ಜದಿಂದ ಷಡ್ಜದವರೆಗೆ |
| ಮಾರ್ಗಿ | — | ನಿಷಾದದಿಂದ ನಿಷಾದದವರೆಗೆ |
| ಪೌರವಿ | — | ಧೈವತದಿಂದ ಧೈವತದವರೆಗೆ |
| ಹೃಷ್ಯಕ | — | ಪಂಚಮದಿಂದ ಪಂಚಮದವರೆಗೆ |

**ಚತುರ್ದಂಡಿ**—ತಂಜಾವೂರಿನ ದೊರೆ ತುಳಜಾಜಿ ವಿರಚಿತ ಸಂಗೀತ ಸಾರಾಮೃತವೆಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ ಚತುರ್ದಂಡಿ ಎಂದರೆ ಗೀತ, ಆಲಾಪ, ಠಾಯ ಮತ್ತು ಪ್ರಬಂಧ. ಈ ನಾಲ್ಕರ ಮೂಲಕ ಒಂದು ರಾಗದ ಸ್ವರೂಪವು ವ್ಯಕ್ತವಾಗುತ್ತದೆ

ಹಿಂದಿನ ಗ್ರಂಥಗಳಲ್ಲಿ ಸ್ಥಾಯಿ, ಆರೋಹಿ, ಅವರೋಹಿ ಮತ್ತು ಸಂಚಾರಿ ಎಂಬ ನಾಲ್ಕು ಗಾನಕ್ರಿಯೆಗಳನ್ನು ಚತುರ್ದಂಡಿ ಎಂದು ಹೇಳಿದೆ ವಿಜಯನಗರದ ಕೃಷ್ಣ ದೇವರಾಯನ ಆಸ್ಥಾನ ವಿದ್ವಾಂಸನಾಗಿದ್ದ ಲಕ್ಷ್ಮೀನಾರಾಯಣ ವಿರಚಿತ (೧೬ನೆ ಶ) ಸಂಗೀತ ಸೂರ್ಯೋದಯ ಎಂಬ ಗ್ರಂಥದಲ್ಲಿ ಸ್ಥಾಯಿ, ಆರೋಹಿ ಅವರೋಹಿ, ಸಂಚಾರಿ ಎಂಬ ನಾಲ್ಕು ವರ್ಣಗಳಿಗೆ ಚತುರ್ದಂಡಿ ಎಂದು ಹೇಳಿದೆ.

**ಚತುರ್ದಂಡಿ ಪ್ರಕಾಶಿಕಾ**—ತಂಜಾವೂರು ಸಂಸ್ಥಾನವು ಹದಿನೇಳನೆಯ ಶತಮಾನದಲ್ಲಿ ತನ್ನ ಗರಿಷ್ಠ ಉತ್ಕರ್ಷಾವಸ್ಥೆಯನ್ನು ಮುಟ್ಟಿತ್ತು. ಈ ಕಾಲದಲ್ಲಿ ಸಂಗೀತವು ತನ್ನ ಅತ್ಯುನ್ನತ ಸ್ಥಿತಿಯನ್ನು ಮುಟ್ಟಿತು. ವೆಂಕಟೇಶ್ವರ ದೀಕ್ಷಿತ ಅಥವಾ ವೆಂಕಟಮಖಿಯು ಸಂಗೀತಶಾಸ್ತ್ರ ಪ್ರವರ್ತಕ, ಮಹಾವಾಗ್ಗೇಯಕಾರ ಮತ್ತು ಗಾಯಕ ಹಾಗೂ ವೈಣಿಕರಾಗಿದ್ದು ಚತುರ್ದಂಡಿ ಪ್ರಕಾಶಿಕಾ ಎಂಬ ಪ್ರಸಿದ್ಧ ಸಂಗೀತ ಶಾಸ್ತ್ರ ಗ್ರಂಥವನ್ನು ರಚಿಸಿದರು. ಇದು ಆಧುನಿಕ ಕರ್ಣಾಟಕ ಸಂಗೀತ ನಾಂದಿ ರೂಪವಾದ ಆಧಾರಭೂತ ಸಂಸ್ಕೃತದಲ್ಲಿರುವ ಪ್ರಾಮಾಣಿಕ ಗ್ರಂಥ. ಇದು ಹತ್ತು ಪ್ರಕರಣಗಳ ಗ್ರಂಥ. ವೀಣಾ, ಶ್ರುತಿ, ಸ್ವರ ಮೇಳ, ರಾಗ, ಆಲಾಪ, ಠಾಯ, ಗೀತ, ಪ್ರಬಂಧ ಮತ್ತು ತಾಳ ಪ್ರಕರಣಗಳಿಂದ ಕೂಡಿದೆ. ಈ ಗ್ರಂಥದಲ್ಲಿ ರಾಗಾಂಗ, ಉಪಾಂಗ, ಭಾಷಾಂಗ ರಾಗಗಳ ಲಕ್ಷಣಗಳನ್ನೂ, ಗೀತ ಮತ್ತು ಸಂಚಾರೀ ರೂಪದ ಲಕ್ಷ್ಯಗಳನ್ನೂ, ಅವುಗಳಲ್ಲಿರುವ ಧಾತುವಿನ ಚಮತ್ಕಾರಗಳು, ಶುದ್ಧವಿಕೃತ ಸ್ವರ ಗಳನ್ನು ಸೂಚಿಸುವ ಸಂಕೇತಾಕ್ಷರಗಳು, ಚಕ್ರ ಮೇಳಗಳನ್ನು ಸೂಚಿಸುವ ಸಂಕೇತ ಗಳನ್ನೂ ಕೊಟ್ಟಿದೆ.

೭೨ ಮೇಳಕರ್ತ ಪದ್ಧತಿಯನ್ನು ತಿಳಿಸುವ ಮೇಳಪ್ರಕರಣವು ಈ ಗ್ರಂಥದ ಮುಖ್ಯಭಾಗ. ಮೇಳದ ಕಲ್ಪನೆಯು ವಿದ್ಯಾರಣ್ಯರ ಕಾಲದಿಂದ ಮೊದಲ್ಗೊಂಡು, ಕಲ್ಲಿನಾಥ, ರಾಮಾಮಾತ್ಯ, ಪೋಲೂರಿ ಗೋವಿಂದ, ಪುಂಡರೀಕವಿಠಲ, ಸೋಮನಾಥ ಮೊದಲಾದವರಿಂದ ಬೆಳೆಸಲ್ಪಟ್ಟು ವೆಂಕಟಮಖಿಯಲ್ಲಿ ಸಂಪೂರ್ಣ ವಿಕಾಸಗೊಂಡಿತು ಎನ್ನಬಹುದು. ಈ ಪದ್ಧತಿಯು ಭಾರತೀಯ ಸಂಗೀತದಲ್ಲಿ ಹಾಗೂ ಕರ್ಣಾಟಕ

ಸಂಗೀತದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಇವರ ಕಾಲದಲ್ಲಿ ಪ್ರಸಿದ್ಧವಾಗಿದ್ದ ೧೯ ಮೇಳಗಳಿಗೆ ಕಲ್ಪಿತಮೇಳಕರ್ತಗಳೆಂದೂ, ಮಿಕ್ಕ ೫೩ ಮೇಳಗಳನ್ನು ಸಾಧ್ಯವಾಗುವ (ಕಲ್ಪ್ಯಮಾನ) ಮೇಳಗಳು ಮತ್ತು ಕಲ್ಪಯಿಷ್ಯಮಾನ ಮೇಳಗಳೆಂದೂ ಹೇಳಿದ್ದಾರೆ. ಈ ಗ್ರಂಥದಲ್ಲಿ ೭೨ ಮೇಳಕರ್ತ ಪದ್ಧತಿಯನ್ನು ಮಾತ್ರ ವಿವರಿಸಿದೆ. ಆದರೆ ಅವುಗಳ ಹೆಸರಿನ ಪಟ್ಟಿಯನ್ನು ಕೊಟ್ಟಿಲ್ಲ ಆಗಿನ ಪ್ರಸಿದ್ಧ ಮೇಳಗಳು ತಮ್ಮ ಪದ್ಧತಿಯಲ್ಲಿ ಯಾವ ಸ್ಥಾನವನ್ನು ಪಡೆದಿವೆ ಎಂಬುದನ್ನು ಸಮಾಕರಿಸಿದ್ದಾರೆ. ಉದಾ : ಗೌಳ (೧೫), ಮುಖಾರಿ (೧), ಭೈರವೀ (೨೦), ಆಹರೀ (೨೧) ಇತ್ಯಾದಿ. ಇವರ ನಂತರ ಒಬ್ಬ ವಿದ್ವಾಂಸರು ಒಂದು ಸ್ವರಗ್ರಾಮಕ್ಕೆ ಅದರಿಂದಾಗುವ ರಾಗಗಳಲ್ಲಿ ಒಂದು ಮುಖ್ಯರಾಗದ ಹೆಸರಿರಬೇಕೆಂದು ಯೋಚಿಸಿ ಕನಕಾಂಬರಿ–ಫೇನದ್ಯುತಿ ಎಂಬ ಹೆಸರಿನ ಪಟ್ಟಿಯನ್ನು ರೂಪಿಸಿದರು. ಇದು ವೆಂಕಟಮಖಿಯ ಕಾಲದಲ್ಲಿ ಪ್ರಸಿದ್ಧವಾಗಿಲ್ಲದಿದ್ದ ಅನೇಕ ಜನ್ಯರಾಗಗಳನ್ನು ಒಳಗೊಂಡಿದೆ. ನಂತರ 'ಸಂಗ್ರಹ ಚೂಡಾಮಣಿ' ಎಂಬ ಗ್ರಂಥದಲ್ಲಿ ಕನಕಾಂಗಿ–ರತ್ನಾಂಗಿ ಎಂಬ ಹೆಸರಿನ ಪಟ್ಟಿಯು ಬೆಳಕಿಗೆ ಬಂದಿತು. ಇದು ಮೇಳ ಮತ್ತು ಅದರಿಂದ ಉಂಟಾಗುವ ರಾಗಕ್ಕೆ ಇರುವ ವ್ಯತ್ಯಾಸವನ್ನೂ, ಮೇಳದ ಕ್ರಮ ಸಂಪೂರ್ಣ ಲಕ್ಷಣವನ್ನೂ ಸೂಚಿಸುವುದರಿಂದ ಅತ್ಯಂತ ಸಮರ್ಪಕವಾದ ಪದ್ಧತಿಯಾಗಿದೆ. ನಂತರ ಕಟಪಯಾದಿ ಪದ್ಧತಿಗೆ ಅನುಗುಣವಾಗಿ ಪಟ್ಟಿಯಲ್ಲಿರುವ ಹೆಸರುಗಳಿಗೆ ಕೆಲವು ಪದಗಳನ್ನು ಸೇರಿಸಲಾಯಿತು. ಈ ಪಟ್ಟಿಯು ೧೭೫೦ರ ನಂತರ ರೂಢಿಗೆ ಬಂದಿರಬೇಕು.

ವೆಂಕಟಮಖಿಯು ಸರ್ವರಾಗಮೇಳವೀಣಾ, ಏಕರಾಗಮೇಳವೀಣಾ, ಶುದ್ಧ ಮೇಳವೀಣಾ, ಮಧ್ಯಮೇಳವೀಣಾ ಇತ್ಯಾದಿ ವೀಣೆಗಳನ್ನು ವರ್ಣಿಸಿದ್ದಾರೆ. ಇವುಗಳಲ್ಲಿ ಯಾವ ತಂತಿಯಲ್ಲಿ ಯಾವ ಸ್ವರವನ್ನು ನಿಯೋಜಿಸಬೇಕು, ಎಷ್ಟು ಮೆಟ್ಟಿಗಳನ್ನಿಡಬೇಕು, ಅವುಗಳಲ್ಲಿ ಯಾವ ಸ್ವರಗಳನ್ನಿಟ್ಟುಕೊಂಡು ಯಾವ ಸ್ವರಗಳನ್ನು ಬಿಡಬೇಕು, ಮಂದ್ರಸ್ಥಾಯಿ ಸ್ವರಗಳು ವಿಫಲವಾಗದೆ ಇರಬೇಕಾದರೆ ಪಕ್ಕಸಾರಣಿ ಮಾರ್ಗವನ್ನು ಹೇಗೆ ಬಳಸಬೇಕು ಎಂಬ ವಿಷಯಗಳನ್ನು ವೀಣಾಪ್ರಕರಣವು ವಿವರಿಸುತ್ತದೆ. ಒಟ್ಟಿನಲ್ಲಿ ಸಂಗೀತ ಪ್ರಪಂಚದಲ್ಲಿ ವೆಂಕಟಮಖಿಯವರ ಪಾತ್ರ ಅನಾದೃಶ್ಯವಾದುದು. ಇವರ ಮೇಳಕರ್ತವು ಯುಕ್ತಿಯುತವಾಗಿದೆ. ಇವರ ಅಮೋಘವಾದ ಚಾತುರ್ಯವನ್ನು ಅಂಗೀಕರಿಸಿ ಮೇಳ ಮತ್ತು ಜನ್ಯಗಳನ್ನು ಮುಂದಿನ ಪೀಳಿಗೆಯ ವಿದ್ವಾಂಸರು ಸ್ಥಿರೀಕೃತಗೊಳಿಸಿದರು.

**ಚತುರ್ಧಾತು ಪ್ರಬಂಧ**—ಉದ್ಗ್ರಾಹ, ಮೇಳಾಪಕ, ಧ್ರುವ ಮತ್ತು ಆಭೋಗವೆಂಬ ನಾಲ್ಕು ಧಾತುಗಳನ್ನು ಒಳಗೊಂಡಿರುವ ಪ್ರಬಂಧ.

**ಚತುರಕಲ್ಲಿನಾಥ**—ವಿಜಯನಗರ ದೊರೆ ಇಮ್ಮಡಿ ದೇವರಾಯನ ಕಾಲದಲ್ಲಿದ್ದ ಸಂಗೀತ ವಿದ್ವಾಂಸ. ಲಕ್ಷ್ಮೀಧರ ಮತ್ತು ನಾರಾಯಣೀ ದೇವಿಯರ ಮಗ. ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥಕ್ಕೆ ಅದ್ಭುತವಾದ ಸಂಗೀತ ಕಲಾನಿಧಿ

ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ (೧೪೫೦ ಕ್ರಿ. ಶ.). ಶ್ರುತಿ, ಸ್ಮೃತಿ, ಉಪನಿಷತ್ತು, ಭಗವದ್ಗೀತೆ, ಷಡ್ದರ್ಶನಗಳು, ವ್ಯಾಕರಣ, ತರ್ಕ, ಅಲಂಕಾರ ಇತ್ಯಾದಿ ಹಲವು ಶಾಸ್ತ್ರಗಳಲ್ಲಿ ವಿದ್ವಾಂಸ. ಸ್ಪಷ್ಟವೂ, ವಿದ್ವತ್ಪೂರ್ಣವೂ, ತರ್ಕಬದ್ಧವೂ, ಪ್ರಾಮಾಣಿಕವೂ ಆದ ವ್ಯಾಖ್ಯಾನವನ್ನು ಬರೆದು ಮಹದುಪಕಾರ ಮಾಡಿದ್ದಾನೆ. ಇವನಿಗೆ ರಾಯಬಯಕಾರ ಎಂಬ ಬಿರುದು ಇದ್ದಿತು.

**ಚತುರಪ್ಪಾಲೈ**—ಇದು ಪುರಾತನ ತಮಿಳು ಸಂಗೀತದ ನಾಲ್ಕು ಮುಖ್ಯ ಮೂರ್ಛನೆಗಳಲ್ಲಿ ಒಂದು ಬಗೆಯ ಮೂರ್ಛನೆ.

**ಚತುರ್ಭಾಗ**—ಅರ್ಧ ಅನುದ್ರುತಕ್ಕೆ ಸಮನಾದ ಒಂದು ಪ್ರಮಾಣ.

**ಚತುರ್ಮುಖಿ** (೧) ಊದುವ ರಂಧ್ರಕ್ಕೂ ನುಡಿಸುವ ಮೊದಲ ರಂಧ್ರಕ್ಕೂ ನಾಲ್ಕು ಅಂಗುಲ ದೂರವಿರುವ ಕೊಳಲು. ನುಡಿಸುವ ೧-೭ ರಂಧ್ರಗಳನ್ನು ಮುಚ್ಚಿ ಊದಿದಾಗ ಮಧ್ಯಸ್ಥಾಯಿ ಪಂಚಮವು ಕೇಳಿಬರುತ್ತದೆ.

(೨) ಪುರಾತನ ೧೦೮ ತಾಳಗಳಲ್ಲಿ ಇದೊಂದು ತಾಳದ ಹೆಸರು ಇದರ ಒಂದಾವರ್ತಕ್ಕೆ ೭ ಮಾತ್ರೆಗಳು. ಲಘು, ಗುರು, ಲಘು, ಪ್ಲುತ ಈ ತಾಳದ ಅಂಗಗಳು.

**ಚತುರ್ಮುದ್ರ ಪ್ರಬಂಧ**—ದ್ವಾದಶ ಮುದ್ರೆಗಳಲ್ಲಿ ಯಾವುದಾದರೂ ನಾಲ್ಕು ಮುದ್ರೆಗಳನ್ನು ಸಾಹಿತ್ಯದಲ್ಲಿ ಒಳಗೊಂಡಿರುವ ಒಂದು ಸಂಗೀತ ರಚನೆ

**ಚತುರ್ಮುಖವಾದ್ಯ**—ಇದು ನಾಲ್ಕು ಮುಖಗಳಿರುವ ಒಂದು ಬಗೆಯ ನಗಾರಿ

**ಚತುರಾನನಪ್ರಿಯ**—ಈ ರಾಗವು ೧೧ನೆ ಮೇಳಕರ್ತ ಕೋಕಿಲಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಚತುರಶ್ರ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಕೂರ್ಪರ ಅಂಸಗಳು ಸಮಾನವಾಗಿರುವಂತೆ ಎದೆಗೆ ಎದುರಾಗಿ, ಎಂಟು ಅಂಗುಲ ದೂರದಲ್ಲಿ ಪ್ರೇಕ್ಷಕರಿಗೆ ಎದುರಾಗಿರುವಂತೆ, ಕಟಕಾಮುಖ ಹಸ್ತಗಳನ್ನು ಹಿಡಿದರೆ ಅದು ಚತುರಶ್ರ ಮುದ್ರೆ

**ಚತುಸ್ಸ್ವರಶ್ರುತಿವಾದ್ಯ**—ನಾಲ್ಕು ಶ್ರುತಿಸ್ವರಗಳನ್ನು ಕೊಡುವ ಶ್ರುತಿವಾದ್ಯ ಷ ಸ ಸ ಸ ಎಂಬ ಶ್ರುತಿಸ್ವರಗಳನ್ನು ಕೊಡುವ ತಂಬೂರಿಯು ಇದಕ್ಕೆ ನಿದರ್ಶನ. ಮಂದ್ರಸ್ಥಾಯಿಷಡ್ಜ, ಮಧ್ಯಸ್ಥಾಯಿಷಡ್ಜ, ಮಧ್ಯಸ್ಥಾಯಿ ಪಂಚಮ ಮತ್ತು ತಾರ ಸ್ಥಾಯಿ ಷಡ್ಜ ಸ್ವರಗಳನ್ನು ಕೊಡುವ ಶ್ರುತಿಪೆಟ್ಟಿಗೆಯು ಮತ್ತೊಂದು ನಿದರ್ಶನ.

**ಚತುಸ್ತಾಳ**—ಪುರಾತನ ೧೦೮ ತಾಳಗಳಲ್ಲಿ ಇದೊಂದು ಬಗೆಯ ತಾಳ. ಇದರ ಅಂಗಗಳು ಒಂದು ಗುರು ಮತ್ತು ಮೂರು ದ್ರುತಗಳು ಇದರ ಒಂದಾವರ್ತಕ್ಕೆ ಮೂರುವರೆ ಮಾತ್ರೆ ಅಥವಾ ೧೪ ಅಕ್ಷರಕಾಲ.

**ಚತುರಶ್ರಗತಿ**—ತಾಳದ ಪ್ರತಿ ಎಣಿಕೆಯು ನಾಲ್ಕು ವಿಭಾಗಗಳನ್ನು ಒಳಗೊಂಡಿರುವ ತಾಳದ ನಡೆ.

**ಚತುರಶ್ರಲಘು**—ಇದು ಒಂದು ಘಾತ ಮತ್ತು ಮೂರು ಬೆರಳುಗಳ ಎಣಿಕೆಯುಳ್ಳ ಒಂದು ಬಗೆಯ ಲಘು. ಇದು ನಾಲ್ಕು ಅಕ್ಷರಕಾಲವುಳ್ಳದ್ದು ಇದಕ್ಕೆ ಚತುರಶ್ರಜಾತಿ ಲಘು ಎಂದು ಹೆಸರು.

**ಚತುರಶ್ರವರ್ಣ**—ಇದು ಪುರಾತನ ೧೦೮ ತಾಳಗಳಲ್ಲಿ ಒಂದು ಬಗೆಯ ತಾಳ. ಇದರ ಅಂಗಗಳು ಎರಡು ಗುರು, ಒಂದು ಲಘು, ಎರಡು ದ್ರುತಗಳು ಮತ್ತು ಒಂದು ಗುರು. ಇದರ ಒಂದಾವರ್ತಕ್ಕೆ ೮ ಮಾತ್ರೆಗಳು.

**ಚತುರಶ್ರವರ್ಣರಾಜತಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಇದೊಂದು ಬಗೆಯ ತಾಳ.

**ಚತುಶ್ರುತಿಅಂತರ**—ಈ ಅಂತರವು ೯/೮ ಇರುತ್ತದೆ. ಶುದ್ಧ ಮಧ್ಯಮಕ್ಕೂ ಪಂಚಮಕ್ಕೂ ಚತುಶ್ರುತಿ ಅಂತರವಿರುತ್ತದೆ.

**ಚತುಶ್ರುತಿಧೈವತ**—ಇದು ಧೈವತ ಸ್ವರದ ಒಂದು ತೀವ್ರ ಸ್ವರೂಪ. ಇದರ ಕಂಪನ ಪ್ರಮಾಣವು ೨೭/೧೬ ಇರುತ್ತದೆ.

**ಚತುಶ್ರುತಿರಿಷಭ**—ಇದು ರಿಷಭ ಸ್ವರದ ತೀವ್ರ ಸ್ವರೂಪ. ಇದರ ಕಂಪನ ಪ್ರಮಾಣವು ೯/೮ ಇರುತ್ತದೆ.

**ಚತುರಂಗ**—ಇದು ಹಿಂದೂಸ್ಥಾನಿ ಸಂಗೀತದ ಒಂದು ಬಗೆಯ ರಚನೆ. ಇದರಲ್ಲಿ ಖ್ಯಾಲ್, ತರಾನ, ಸರ್‌ಗಮ್, ತ್ರಿವತ ಎಂಬ ನಾಲ್ಕು ಅಂಗಗಳಿವೆ.

**ಚತುರಂಗಪ್ರಸ್ತಾರ**—ಲಘು, ಗುರು, ಪ್ಲುತ ಮತ್ತು ಕಾಕಪಾದ ಎಂಬ ನಾಲ್ಕು ತಾಳಾಂಗಗಳನ್ನು ನಾನಾ ವಿಧದಲ್ಲಿ ಬಳಸಿ ಮಾಡುವ ಒಂದು ತಾಳಪ್ರಸ್ತಾರ.

**ಚತುರಂಭಾ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ದ ನಿ ಸ<br>
ಅ: ಸ ನಿ ದ ಪ ಮ ಗ ರಿ ಗ ಸ

**ಚತುರ್ವಿಂಶತಿಶ್ರುತಿಗಳು**—೨೪ ಶ್ರುತಿಗಳ ಪದ್ಧತಿಯನ್ನು ಮೇಳಾಧಿಕಾರ ಲಕ್ಷಣವೆಂಬ ಗ್ರಂಥದಲ್ಲಿ ಹೇಳಿದೆ. ೨೨ ಶ್ರುತಿಗಳಲ್ಲದೆ ಗಾಂಧಾರ ಮತ್ತು ನಿಷಾದ ಶ್ರುತಿಗಳೆಂಬ ಎರಡು ಶ್ರುತಿಗಳೂ ಸೇರಿ ೨೪ ಶ್ರುತಿಗಳು. ಇವುಗಳಲ್ಲಿ ಸಾಧಾರಣ ಗಾಂಧಾರ ಮತ್ತು ಅಂತರಗಾಂಧಾರದ ಮಧ್ಯೆ ಒಂದು ಶ್ರುತಿಯೂ, ಮತ್ತೊಂದು ಶ್ರುತಿಯು ಕೈಶಿಕಿನಿಷಾದ ಮತ್ತು ಕಾಕಲಿ ನಿಷಾದದ ಮಧ್ಯೆ ಬರುತ್ತದೆ. ಇವಕ್ಕೆ ಪ್ರತಿ ಅಂತರ ಗಾಂಧಾರ ಮತ್ತು ಪ್ರತಿಕಾಕಲಿ ನಿಷಾದವೆಂದು ಹೆಸರು. ಇವು ಸಾವೇರಿ ರಾಗದ ಸ ರಿ ಗ ರಿ ಸ ಮತ್ತು ಪ ದ ನಿ ದ ಪ ಮ ಗ ರಿ ಸ ಎಂಬ ಸ್ವರ ಸಮೂಹಗಳಲ್ಲಿ ಬರುತ್ತದೆ.

**ಚಣ**—ಇದು ಖಂಡಜಾತಿ ಝಂಪತಾಳದ ಹೆಸರು. ಇದರ ಒಂದಾವರ್ತಕ್ಕೆ ೮ ಅಕ್ಷರ ಕಾಲ.

**ಚಣವಾರಿಕೆ**—ಈ ರಾಗವನ್ನು ಮಂಡಲ ಪಂಡಿತ ವಿರಚಿತ 'ಮಾತೃಕಾ ವಿಲಾಸ'ವೆಂಬ ಗ್ರಂಥವಲ್ಲಿ ಹಿಂದೋಳ ರಾಗದ ಒಂದು ಸ್ತ್ರೀರಾಗವೆಂದು ಹೇಳಿದೆ.

**ಚಪಲಾ**—ನಾರದ ವಿರಚಿತ ಸಂಗೀತ ಮಕರಂದವೆಂಬ ಗ್ರಂಥವಲ್ಲಿ ಹೇಳಿರುವ ೨೨ ಶ್ರುತಿ ಪದ್ಧತಿಯಂತೆ ಇದು ಪಂಚಮದ ಎರಡನೆ ಶ್ರುತಿಯ ಹೆಸರು.

**ಚಂಚೌಲಿನಿ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ದ ನಿ ಪ ಸ

ಅ: ಸ ನಿ ದ ಗ ರಿ ಸ

**ಚರ್ಮಜ**—ಚರ್ಮಾವನದ್ಧ ವಾದ್ಯಗಳಿಂದ ಹೊರಡುವ ಶಬ್ದವು ಚರ್ಮಜ. ಸಂಗೀತ ಧ್ವನಿ ಉಂಟಾಗುವ ಮೂಲವನ್ನು ಅನುಸರಿಸಿ ಶಾರೀರಜ, ನಖಜ, ವಾಯುಜ, ಚರ್ಮಜ, ಲೋಹಜ ಎಂಬ ವರ್ಗೀಕರಣವು ನಾರದ ವಿರಚಿತ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಚಮತ್ಕಾರಪ್ರಿಯ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ

ಅ: ಸ ನಿ ದ ಪ ರಿ ಸ

**ಚರ್ಮವಾದ್ಯ**—ಚರ್ಮಾವನದ್ಧ ವಾದ್ಯಗಳಿಗೆ ಚರ್ಮವಾದ್ಯಗಳೆಂದು ಹೆಸರು. ಇವು ತಾಳವಾದ್ಯಗಳು. ತಮಟೆ, ಮೃದಂಗ, ಡೋಲಕ್, ತವಿಲ್, ಖಂಜರ ಮುಂತಾದುವು ಈ ವರ್ಗಕ್ಕೆ ಸೇರಿವೆ.

**ಚತುಷ್ಕಾಲ**—ಇದು ತಾಳದಶಪ್ರಾಣಗಳಿಗೆ ಸಂಬಂಧಿಸಿದ ವಿಷಯ. ಇದರಲ್ಲಿ ತಾಳದ ಪ್ರತಿಕ್ರಿಯೆಗೆ ನಾಲ್ಕು ಕಾಲ ಪ್ರಮಾಣಗಳು ಮತ್ತು ನಾಲ್ಕು ಸ್ವರಗಳಿರುತ್ತವೆ.

**ಚತುಷ್ಪದಿ**—ಇದು ನಾಲ್ಕು ಪಾದಗಳಿರುವ ಒಂದು ಸಂಗೀತ ರಚನಾ ವಿಶೇಷ.

**ಚತುಃಷಷ್ಟಿ ಕಲೆಗಳು**—ಕಲೆ ಎಂದರೆ ಅಂಶ ಅಥವಾ ಕರ್ತೃತ್ವ. ಕ ಕಾರವು ಬ್ರಹ್ಮವಾಚಕವಾದುದರಿಂದ ಸೃಷ್ಟಿಯನ್ನೂ, ಲ ಕಾರವು ಲಯವನ್ನೂ ಸೂಚಿಸುವುದರಿಂದ ಕಲೆಯು ಸೃಷ್ಟಿಸ್ಥಿತಿ ಸಂಹಾರ ರೂಪವಾದುದು. ೬೪ ಕಲೆಗಳು ಯಾವುವೆಂದರೆ ಗೀತ, ವಾದ್ಯ, ನೃತ್ಯ, ಅಲೇಖ್ಯ, ವಿಶೇಷಕ ಛೇದ್ಯ, ತಂಡುಲ ಬಲಿ, ಕುಸುಮ ವಿಕಾರ, ಪುಷ್ಪಾಸ್ತರಣ, ದಶನ–ವಸನಾಂಗರಾಗ, ಮಣಿಭೂಮಿಕಾಕರ್ಮ, ಶಯನರಚನ, ಉದಕವಾದ್ಯ, ಚಿತ್ರಾಶ್ವಯೋಗ, ಮಾಲ್ಯಗ್ರಥನವಿಕಲ್ಪ, ಶೇಖರಾಪೀಡಯೋಜನ, ನೇಪಥ್ಯಸಂಯೋಗ, ಕರ್ಣಪತ್ರಭಂಗ, ಗಂಧಯುಕ್ತಭೂಷಣ

ಯೋಜನ, ಇಂದ್ರಜಾಲ, ಕುಚಪೂರಯೋಗ, ಹಸ್ತಲಾಘವ, ಚಿತ್ರ-ಶಾಕಾಪೂಪ, ಭಕ್ತವಿಕಾರಕ್ರಿಯಾ, ಪಾನಕ-ರಸಾಸವ-ರಾಗಯೋಜನ, ಸೂಚೀವಾನಕ್ರಮ, ಸೂತ್ರ ಕ್ರೀಡಾ, ವೀಣಾಡಮರುಕವಾದ್ಯ, ಪ್ರಹೇಳಿಕಾ, ಪ್ರತಿಮಾಲಾ, ದುರ್ವಾಚಕ ಯೋಗ, ಪುಸ್ತಕವಾಚನ, ನಾಟಕಾಖ್ಯಾಯಿಕಾ ದರ್ಶನ, ಕಾವ್ಯ ಸಮಸ್ಯಾಪೂರ್ಣ, ಪಟ್ಟಿ ಕಾವೇತ್ರ ಬಾಣವಿಕಲ್ಪ, ತಕ್ಷಕರ್ಮ. ತಕ್ಷಣ, ವಾಸ್ತುವಿದ್ಯಾ ರೂಪರತ್ನಪರೀಕ್ಷಾ, ಧಾತುವಾದ, ಮಣಿರಾಗಾಕರಜ್ಞಾನ, ವೃಕ್ಷಾಯುರ್ವೇದ, ಮೇಷ-ಕುಕ್ಕುಟ-ಲಾವಕ ಯುದ್ಧವಿಧಿ, ಶುಕಸಾರಿಕಾಪ್ರಲಪನ, ಉತ್ಸಾದನ, ಸಂವಾಹನ, ಕೇಶಮರ್ದನ ಕೌಶಲ್ಯ, ಅಕ್ಷರ ಮುಷ್ಟಿಕಾಕಥನ, ಮ್ಲೇಚ್ಛಿತವಿಕಲ್ಪ, ದೇಶಭಾಷಾವಿಜ್ಞಾನ, ಪುಷ್ಪ ಶಕಟಿಕಾ, ನಿಮಿತ್ತಜ್ಞಾನ, ಯಂತ್ರ ಮಾತೃಕಾ, ಧಾರಣಮಾತೃಕಾ, ಸಂಪಾಠ್ಯ, ಮಾನಸೀಕಾವ್ಯಕ್ರಿಯಾ, ಅಭಿಧಾನ ಕೋಶ, ಛಂದೋವಿಜ್ಞಾನ, ಕ್ರಿಯಾವಿಕಲ್ಪ, ಛಲಿತಕಯೋಗ, ವಸ್ತ್ರಗೋಪನ, ದ್ಯೂತವಿಶೇಷ, ಆಕರ್ಷಕ್ರೀಡಾ, ಬಾಲಕ್ರೀಡನಕ, ವೈನಯಿಕ, ವೈಜಯಿಕ, ವ್ಯಾಯಾಮಿಕ, ವಿದ್ಯಾಜ್ಞಾನ ವಾತ್ಸ್ಯಾಯನ ಕಾಮಸೂತ್ರ.

**ಚಲ್ಲಗಾಳಿ**—ತಂಪಾದ ಮಾರುತ ಎಂದರ್ಥ. ಅತ್ಯಂತ ಹಿತವಾಗಿ ಹಾಡುತ್ತಿದ್ದ ಗಾಯಕರಿಗೆ ಹಿಂದಿನ ಕಾಲದಲ್ಲಿ ಈ ಪ್ರಶಸ್ತಿಯನ್ನು ನೀಡುತ್ತಿದ್ದರು ೧೯ನೆ ಶತಮಾನದಲ್ಲಿದ್ದ ಚಲ್ಲಗಾಳಿ ಕೃಷ್ಣಯ್ಯರ್ ಮತ್ತು ಚಲ್ಲಗಾಳಿ ವೀರರಾಘವ ಅಯ್ಯರ್ ಇವರಿಬ್ಬರಿಗೆ ಈ ಪ್ರಶಸ್ತಿಯಿದ್ದಿತು

**ಚಲ್ಲಗಾಳಿ ಕೃಷ್ಣಯ್ಯರ್**—ಇವರು ಪಲ್ಲವಿ ಗೋಪಾಲಅಯ್ಯರ್‌ರವರ ಸುಪುತ್ರ ಮತ್ತು ತಂಜಾವೂರಿನ ಶಿವಾಜಿ ಮಹಾರಾಜನ (೧೮೩೪–೧೮೬೫) ಆಸ್ಥಾನ ವಿದ್ವಾಂಸರಾಗಿದ್ದರು ಹಾಗೂ ಅತ್ಯುತ್ತಮ ಗಾಯಕ ಮತ್ತು ವೈಣಿಕರಾಗಿದ್ದರು. ಇವರ ಗಾಯನ ಮತ್ತು ವಾದನವು ಆಹ್ಲಾದಕರವಾಗಿದ್ದುದರಿಂದ ಇವರಿಗೆ ಚಲ್ಲಗಾಳಿ ಎಂಬ ಬಿರುದು ಬಂದಿತು ತಿರುವಾಲಂಗಾಡು ತ್ಯಾಗರಾಜ ದೀಕ್ಷಿತರು, ಕಂಚಿ ವೀಣೆ ನೀಲಕಂಠಶಾಸ್ತ್ರಿ ಮತ್ತು ಮಾಯಾವರಂ ವೀಣೆ ವೈದ್ಯನಾಥ ಅಯ್ಯರ್ ಇವರ ಪ್ರಮುಖ ಶಿಷ್ಯರು.

**ಚಲ್ಲಗಾಳಿ ವೀರರಾಘವ ಅಯ್ಯರ್**—ಇವರು ತಂಜಾವೂರಿನ ಒಬ್ಬ ಪ್ರಸಿದ್ಧ ಗಾಯಕ ಮತ್ತು ಆಸ್ಥಾನ ವಿದ್ವಾಂಸರಾಗಿದ್ದರು.

**ಚಲತಾಳ**—ಇದು ಶಾರ್ಙ್ಗಧರ ಪದ್ಧತಿ ಎಂಬ ಕನ್ನಡ ಯಕ್ಷಗಾನದಲ್ಲಿ ಕಂಡು ಬರುವ ಒಂದು ಅಪೂರ್ವತಾಳ.

**ಚಲನ**—ಇದು ಭರತನಾಟ್ಯದ ಚಾರಿ ಭೇದಗಳಲ್ಲಿ ಒಂದು ವಿಧ. ನಿಂತಿರುವ ಸ್ಥಾನದಿಂದ ಮುನ್ನಡಿ ಇಟ್ಟು ನಡೆಯುವುದು ಚಲನಚಾರಿ ಎಂದೆನಿಸುವುದು.

**ಚಲನಾಟ**—ಇದು ೩೬ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಇದು ಆರನೆ ಚಕ್ರವಾದ ಋತುಚಕ್ರದ ಆರನೆಯ ರಾಗ. ಷಟ್ಶ್ರುತಿಧೈವತ, ಷಟ್ಶ್ರುತಿರಿಷಭ, ಅಂತರಗಾಂಧಾರ, ಶುದ್ಧಮಧ್ಯಮ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸಸ್ವರ. ಷಟ್ಶ್ರುತಿಋಷಭ ಮತ್ತು ಧೈವತ, ಅಂತರಗಾಂಧಾರ ಮತ್ತು ಕಾಕಲಿ ನಿಷಾದಗಳು ಪರಸ್ಪರವಾದಿ ಸಂವಾದಿಗಳು ಋಷಭ, ಮಧ್ಯಮ ಮತ್ತು ನಿಷಾದಗಳು ರಾಗ ಛಾಯಾ ಸ್ವರಗಳು, ಜೀವ ಮತ್ತು ನ್ಯಾಸಸ್ವರಗಳು. ಅತ್ಯಂತ ಪ್ರಾಚೀನವಾದ ರಾಗಾಂಗರಾಗ ಮತ್ತು ಮಂಗಳಕರರಾಗ ಮಹಾವೈದ್ಯನಾಥ ಅಯ್ಯರ್‌ರವರ ಮೇಳರಾಗಮಾಲಿಕೆಯಲ್ಲಿ ಈ ರಾಗವು ಬರುತ್ತದೆ. ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ಈ ರಾಗದಲ್ಲಿ ಕೃತಿರಚನೆ ಮಾಡಿದ್ದಾರೆ.

**ಚಲನವರಾಳಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ದ ಸ

ಅ: ಸ ದ ಮ ಗ ರಿ ಸ

**ಚಲವೀಣಾ**—ಇದು ಪ್ರಯೋಗಕ್ಕಾಗಿ ಬಳಸುವ ವೀಣೆ. ಇದರಲ್ಲಿ ಏಳು ತಂತಿಗಳ ಶ್ರುತಿಗಳನ್ನು ಕ್ರಮವಾಗಿ ಕಡಿಮೆ ಮಾಡಲಾಗುತ್ತದೆ. ಧ್ರುವವೀಣೆಯಲ್ಲಿ ಏಳು ತಂತಿಗಳ ಶ್ರುತಿಯು ಒಂದೇ ಸಮನಾಗಿರುತ್ತದೆ.

**ಚಲನಸ್ವರ**—ಇದು ಕಂಪಿತ ಸ್ವರವಾಗಿ ಬರುವ ಸ್ವರ. ಶುದ್ಧ ರಿಷಭ ಮತ್ತು ಸಾಧಾರಣ ಗಾಂಧಾರ ಇವು ಚಲನಸ್ವರಗಳಿಗೆ ಉದಾಹರಣೆ. ಇದಕ್ಕೆ ವಿರುದ್ಧವಾದುದು ನಿಶ್ಚಲ ಸ್ವರ.

**ಚಲನಿ**—ಈ ರಾಗವು ೩೬ನೆ ಮೇಳಕರ್ತ ಶೂಲಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಮ ಗ ರಿ ಸ

**ಚರಣ**—ಕರ್ಣಾಟಕ ಸಂಗೀತದ ರಚನೆಗಳಾದ ವರ್ಣ, ಕೃತಿ, ಪದ, ಜಾವಳಿ ಮುಂತಾದುವುಗಳ ಮೂರನೆಯ ಅಂಗಕ್ಕೆ ಚರಣವೆಂದು ಹೆಸರು. ಇದು ಪಲ್ಲವಿ ಮತ್ತು ಅನುಪಲ್ಲವಿಯ ಮೊತ್ತದಷ್ಟು ದೊಡ್ಡದಾಗಿರುತ್ತದೆ ಅಥವಾ ಅನುಪಲ್ಲವಿಯಷ್ಟು ಅಥವಾ ಅದರ ನಾಲ್ಕರಷ್ಟು ದೊಡ್ಡದಾಗಿರುವುದುಂಟು. ಅನೇಕ ಕೃತಿಗಳಲ್ಲಿ ಚರಣದ ಉತ್ತರ ಭಾಗದ ಸಂಗೀತವು ಅನುಪಲ್ಲವಿಯ ಸಂಗೀತದಂತೆ ಇರುತ್ತದೆ.

**ಚರಾವಳಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಗ ರಿ ಸ

**ಚರವಿಭಾಸಿನಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ಮ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಚರವಿಭಾಸಿತ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಚರವೀಣಾ**—ಸ್ಥಳದಿಂದ ಸ್ಥಳಕ್ಕೆ ಕಚೇರಿಯಲ್ಲಿ ನುಡಿಸಲು ತೆಗೆದುಕೊಂಡು ಹೋಗಬಹುದಾದ ವೀಣೆ.

**ಚಾಕಾರಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಚಾಕ್ಕಿಯರ್ಾರ್**—ಕ್ರಿ. ಶ. ೨ನೆ ಶತಮಾನದ ತಮಿಳು ಗ್ರಂಥವಾದ ಶಿಲಪ್ಪದಿಕಾರಂ ಎಂಬುದರಲ್ಲಿ ಉಕ್ತವಾಗಿರುವ ನಾಟ್ಯವಾಡುವವರ ವರ್ಗ.

**ಚಾಚತ್ಪುಟ**—ಇದು ಅಷ್ಟೋತ್ತರ ಶತತಾಳಗಳಲ್ಲಿ (೧೦೮) ಎರಡನೆಯದು ಮತ್ತು ಪಂಚಮಾರ್ಗಿ ತಾಳಗಳಲ್ಲಿ ಒಂದು ತಾಳ. ಇದರ ಅಂಗಗಳು ಗುರು, ಲಘು, ಲಘು ಮತ್ತು ಗುರು. ಇದರ ಒಂದಾವರ್ತಕ್ಕೆ ೬ ಮಾತ್ರೆಗಳು ಅಥವಾ ೨೪ ಅಕ್ಷರ ಕಾಲ.

**ಚಾತ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಚಾತಾಳ್**—ಹಿಂದೂಸ್ಥಾನಿ ಸಂಗೀತ ಪದ್ಧತಿಯ ಒಂದು ತಾಳ.

**ಚಾಪಘಂಟಾರವ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ ಇದು ನಿಷಾದಾಂತ್ಯ ರಾಗ.

ಆ: ಸ ಗ ಮ ಪ ನಿ

ಅ: ದ ಮ ಗ ರಿ ಸ ನಿ

**ಚಾಪರಾ**—ಇದು ಭಾವಭಟ್ಟನ ಅನೂಪಸಂಗೀತವಿಲಾಸವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೨೨ ಶ್ರುತಿಪದ್ಧತಿಯಂತೆ ಮಧ್ಯಮದ ಎರಡನೆ ಶ್ರುತಿಯ ಹೆಸರು

**ಚಾಮರ**—(೧) ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ. ಪ ದ ನಿ ಸ ಎಂಬುದು ಒಂದು ವಿಶೇಷ ಪ್ರಯೋಗ.

ಆ: ಸ ಗ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

(೨) ಅಸಂಪೂರ್ಣ ಮೇಳಪದ್ಧತಿಯಲ್ಲಿ ೫೬ನೆ ಮೇಳಕರ್ತದ ಹೆಸರು. ಇದು ಸಂಪೂರ್ಣ ರಾಗ.

ಮುತ್ತುಸ್ವಾಮಿ ದೀಕ್ಷಿತರ ನವಗ್ರಹ ಕೀರ್ತನೆಯ (ಕೇತು) ಗುರುಗುಹಚಾಮರ ಭರಣಂ ಎಂಬ ಚರಣದ ಉತ್ತರಭಾಗದಲ್ಲಿ ಮಧ್ಯಮ ಕಾಲದಲ್ಲಿ ಈ ರಾಗದ ಹೆಸರಿದೆ.

**ಚಾಮುಂಡಿ**—ಈ ರಾಗವು ೬೩ನೆಯ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ನಿ ದ ಸ

ಅ: ಸ ದ ನಿ ಪ ಮ ಗ ರಿ ಸ

**ಚಾರಿಭೇದಗಳು**—ಇವು ಭರತನಾಟ್ಯದ ಪಾದಚಾರಿಭೇದಗಳು. ಇವು ಎಂಟು ವಿಧ. ಇವುಗಳಿಗೆ ಚಲನಚಾರಿ, ಚಂಕ್ರಮಣ, ಸರಣ, ವೇಗಿನಿ, ಕುಟ್ಟನ, ಲುಠಿತ, ಲೋಲಿತ, ವಿಷಯಸಂಚರ ಎಂದು ಹೆಸರು.

**ಚಾರುಕರ್ಣಾಟಕ ಸಾರಂಗರಾಗ**—ಇದು ಅರಬಟ್ಟನಾವಲರ್ ವಿರಚಿತ ಭರತಶಾಸ್ತಿರಂ ಎಂಬ ತಮಿಳು ಸಂಗೀತಶಾಸ್ತ್ರ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ

**ಚಾರುಕುಂತಳ**—ಈ ರಾಗವು ೨೬ನೆ ಮೇಳಕರ್ತ ಚಾರುಕೇಶಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಚಾಲಕ್ಕುಡಿ ನಾರಾಯಣಸ್ವಾಮಿ** (೧೯೨೬)—ನಾರಾಯಣಸ್ವಾಮಿ ಯವರು ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಇಂದು ಒಬ್ಬ ಖ್ಯಾತ ಪಿಟೀಲು ವಿದ್ವಾಂಸ ರಾಗಿದ್ದಾರೆ. ಇವರು ಕೇರಳದ ತಿರುಚೂರು ಜಿಲ್ಲೆಯ ಚಾಲಕುಡಿ ಗ್ರಾಮದಲ್ಲಿ ಸಂಗೀತಗಾರರ ಮನೆತನದಲ್ಲಿ ಜನಿಸಿದರು. ಮೊದಲು ತಮ್ಮ ಚಿಕ್ಕಪ್ಪ ಅಖಿಲೇಶ್ವರ ಭಾಗವತರಿಂದ ಶಿಕ್ಷಣ ಪಡೆದು ತರುವಾಯ ಶೆಮ್ಮಂಗುಡಿ ಶ್ರೀನಿವಾಸಅಯ್ಯರ್‌ರವರ ಮಾರ್ಗದರ್ಶನದಲ್ಲಿ ಪ್ರೌಢಿಮೆ ಬೆಳೆಸಿಕೊಂಡರು. ಹತ್ತು ವರ್ಷಗಳ ಕಾಲ ತಿರುವನಂತಪುರದ ರೇಡಿಯೋ ಕೇಂದ್ರದಲ್ಲಿ ಕಲಾವಿದರಾಗಿದ್ದು ೧೯೫೬ ರಿಂದ ಅದೇ ಊರಿನ ಸ್ವಾತಿ ತಿರುನಾಳ್ ಸಂಗೀತ ಕಾಲೇಜಿನ ಪಿಟೀಲು ಪ್ರಾಚಾರ್ಯರಾಗಿದ್ದಾರೆ. ಇವರ ವಾದನದಲ್ಲಿ ಉತ್ತಮ ಮನೋಧರ್ಮ, ನಯವಾದ ಇಂಪಾದ ರಾಗ ಮತ್ತು ಕೃತಿಗಳ ನಿರೂಪಣೆ, ಕಚೇರಿಗೆ ಕಳೆಕಟ್ಟಿಸುವ ಕಲೆ ಪ್ರಮುಖವಾಗಿ ಕಂಡುಬರುತ್ತವೆ.

**ಚಾರುಕೇಶಿ**—ಇದು ೨೬ನೆ ಮೇಳಕರ್ತ ರಾಗ. ಐದನೆ ಬಾಣಚಕ್ರದ ಎರಡನೆ ರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಚತುಶ್ರುತಿ ರಿಷಭ, ಅಂತರ ಗಾಂಧಾರ, ಶುದ್ಧ ಮಧ್ಯಮ, ಶುದ್ಧಧೈವತ ಮತ್ತು ಕೈಶಿಕಿನಿಷಾದ ಈ ರಾಗದ ಸ್ವರಸ್ಥಾನಗಳು. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸ ಸ್ವರ. ಮಧ್ಯಮ, ನಿಷಾದಗಳು ಪರಸ್ಪರವಾದಿ ಸಂವಾದಿಗಳು ರಾಗದ ಪೂರ್ವಾಂಗವು ಶಂಕರಾಭರಣ ರಾಗವನ್ನೂ, ಉತ್ತರಾಂಗವು ತೋಡಿ ರಾಗವನ್ನೂ ಸೂಚಿಸುವಂತಿದೆ. ಸರ್ವಸ್ವರ ಗಮಕವರಿಕರಾಗ. ಸಾರ್ವಕಾಲಿಕ ರಾಗ. ಈ ರಾಗವನ್ನು ಶ್ರೀ ತ್ಯಾಗರಾಜರು ಪ್ರಕಾಶಕ್ಕೆ ತಂದರು. ಅವರು ರಚಿಸಿರುವ ಆಡಮೋಡಿಗಲದೆ, ಸ್ವಾತಿ ತಿರುನಾಳ್ ಮಹಾರಾಜರ ಕೃಪಯಾಪಾಲಯ ಶೌರೇ ಮತ್ತು ಜಯ ಜಯ ಪದ್ಮನಾಭ ಮುರಾರೇ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಚಾರುರೂಪಿಣಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಮಲ್ಲಾರ ರಾಗದ ಒಂದು ರಾಗಿಣಿಯ ಹೆಸರು.

**ಚಾರುಲೀಲಾವಿಲಾಸಮು**—ಮಾರ್ಪೆದ್ದಿ ಚೆಂಗಲ್ವರಾಯಶಾಸ್ತ್ರಿ (೧೮೧೦–೧೯೦೦) ವಿರಚಿತ ತೆಲುಗಿನ ಒಂದು ಪದ್ಯರೂಪದಲ್ಲಿರುವ ಪ್ರಬಂಧ.

**ಚಾರುವರ್ಧಿನಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಚಾಲನಿಕ**—ಸಂಗೀತದಾಮೋದರವೆಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ ಇದು ಋಷಭದ ಮೂರನೆ ಶ್ರುತಿಯ ಹೆಸರು.

**ಚಿಕ್ಕದೇವರಾಜ ಸಪ್ತಪದಿ**—ಸಪ್ತಪದಿ ಎಂಬುದು ಏಳು ಹಾಡುಗಳ ಒಂದು ಗುಚ್ಛ. ಅಂತಹ ಏಳು ಗೀತಗಳು ಚಿಕ್ಕದೇವರಾಜ ಸಪ್ತಪದಿಯಲ್ಲಿವೆ. ಒಂದರಲ್ಲಿ ಮಾತ್ರ ೧೦ ಹಾಡುಗಳಿವೆ. ಮಂಗಳದ ಹಾಡೂ ಸೇರಿ ಒಟ್ಟು ೫೩ ಹಾಡುಗಳಿವೆ. ಹಾಡುಗಳಿಗೆ ರಾಗ–ತಾಳಗಳ ನಿರ್ದೇಶನವಿದೆ. ಪಲ್ಲವಿಗಳೂ ಇವೆ. ಇದರಲ್ಲಿ ಶೃಂಗಾರರಸವನ್ನು ನಿರೂಪಿಸಲು ಉತ್ತಮ ಸಾಹಿತ್ಯವುಳ್ಳ ಗೀತೆಗಳನ್ನು ಬಳಸಲಾಗಿದೆ. ಇವು ಚಿಕ್ಕದೇವರಾಜ ಒಡೆಯರ ಅಂತಃಪುರದ ಪ್ರೇಮ ಜೀವನವನ್ನು ಬಿಡಿಸಿ ಬಣ್ಣಿಸುತ್ತವೆ. ಶೃಂಗಾರರಸ ನಿರೂಪಣೆಗೆ ಈ ರೀತಿ ಗೀತಗಳನ್ನು ಉದಾಹರಣೆಯಾಗಿ ಕನ್ನಡದಲ್ಲಿ ಬಳಸಿರುವ ಪ್ರಯತ್ನದಲ್ಲಿ ಇದು ಮೊಟ್ಟಮೊದಲನೆಯದು. ಚಿಕ್ಕದೇವ ರಾಜ ಒಡೆಯರನ್ನು ನಾಯಕನಾಗಿಟ್ಟುಕೊಂಡು ಅವನನ್ನು ಪ್ರೀತಿಸಿದ ಸ್ತ್ರೀಯರ ನೋವು ನಲಿವುಗಳನ್ನೂ, ಅವನ ಸಹೃದಯ ಪ್ರತಿಕ್ರಿಯೆಗಳನ್ನೂ ಚಮತ್ಕಾರದಿಂದ ನುಡಿಗಳಲ್ಲಿ, ಪಲ್ಲವಿಗಳಲ್ಲಿ ಚಿತ್ರಿಸಲಾಗಿದೆ. ವಿಪ್ರಲಂಭಸಂಭೋಗ, ವಿರಹಿಣಿಯಲ್ಲಿ

ತಲೆದೋರುವ ಹತ್ತು ಬಗೆಯ ಶೃಂಗಾರಭಾವವನ್ನು ನಾಯಿಕೆಯಲ್ಲಿರುವ ಮೂರು ಭೇದಗಳನ್ನು ಹೇಳಲಾಗಿದೆ.

**ಚಿಕ್ಕುಪಾಧ್ಯಾಯ** —ಚಿಕ್ಕುಪಾಧ್ಯಾಯನು ಮೈಸೂರಿನ ದೊರೆ ಚಿಕ್ಕದೇವ ರಾಜ ಒಡೆಯರ ಕಾಲದಲ್ಲಿದ್ದ ಕವಿ. ಈತನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯ ಮಧುರ ಪ್ರೇಮವನ್ನು ಕುರಿತು ಹಾಡುಗಳನ್ನು ರಚಿಸಿ ತನ್ಮೂಲಕ ಶೃಂಗಾರರಸ ಪ್ರತಿ ಪಾದನೆ ಮಾಡಿದ್ದಾನೆ. ಇವು ಲೌಕಿಕ ಮತ್ತು ಅಲೌಕಿಕ ವಿಷಯಗಳುಳ್ಳ ಪ್ರೇಮ ಗೀತೆಗಳಾಗಿವೆ.

**ಚಿಕ್ಕವರ್ಣ**—ಆದಿತಾಳದ ವರ್ಣವನ್ನು ಸಾಮಾನ್ಯವಾಗಿ ಚಿಕ್ಕವರ್ಣವೆಂದು ಹೇಳುವುದು ರೂಢಿ ಅಟತಾಳ ವರ್ಣವನ್ನು ಪೆರಿಯವರ್ಣಂ ಅಥವಾ ದೊಡ್ಡವರ್ಣ ವೆಂದು ಹೇಳುವುದು ರೂಢಿ. ಸಂಗೀತಾಭ್ಯಾಸಿಗಳು ಮೊದಲು ಆದಿತಾಳ ವರ್ಣಗಳನ್ನು ಕಲಿತು ನಂತರ ಅಟತಾಳ ವರ್ಣಗಳನ್ನು ಕಲಿಯುತ್ತಾರೆ.

**ಚಿಕಾರಿ**—ಇದು ಉತ್ತರಭಾರತದ ಒಂದು ತಂತೀವಾದ್ಯ. ಸಂಗೀತವನ್ನು ನುಡಿಸಲು ಮೂರು ನರದ ತಂತಿಗಳೂ, ಲೋಹದ ಐದು ಅನುರಣನ ತಂತಿಗಳೂ ಇವೆ. ಇವನ್ನು ಕಮಾನಿನಿಂದ ನುಡಿಸುತ್ತಾರೆ

**ಚಿಟ್ಟೆ**—ಇದು ಗಾಯನದ ಒಂದು ಶೈಲಿ ಕೃತಿಯ ಸಂಗೀತ ಮತ್ತು ತಾಳಕ್ಕೆ ಬದ್ಧವಾಗಿ ರಚಿಸಿರುವ ಸ್ವರಗಳು ಚಿಟ್ಟೆ ಸ್ವರಗಳು. ವರ್ಣದ ಎತ್ತುಗಡೆ ಪಲ್ಲವಿಗೆ ಚಿಟ್ಟೆ ಪಲ್ಲವಿ ಎಂದು ಹೆಸರು. ಇಂತಹ ಪಲ್ಲವಿಯಲ್ಲಿ ನೆರವಲ್‌ಗೆ ಅವಕಾಶವಿಲ್ಲ. ಮನೋಧರ್ಮ ಸಂಗೀತದ ಪಲ್ಲವಿಯಲ್ಲಿ ನೆರವಲ್‌ಗೆ ಅವಕಾಶವಿರುತ್ತದೆ. ಗಾಯಕನ ಆಲಾಪನೆಯು ಒಂದೇ ತರಹ ಇದ್ದರೆ ಅದನ್ನು ಚಿಟ್ಟೆ ಆಲಾಪನೆ ಎನ್ನಬಹುದು.

**ಚಿಟ್ಟೆತಾನಗಳು** —ಗೀತಗಳನ್ನು ಅಭ್ಯಾಸ ಮಾಡಿದ ನಂತರ ವರ್ಣಗಳನ್ನು ನುಡಿಸುವುದನ್ನು ಕಲಿಯುವ ಮುನ್ನ ವೀಣಾವಾದನವನ್ನು ಕಲಿಯುವವರಿಗಾಗಿ ವಿಶೇಷ ತಾನಗಳನ್ನು ರಚಿಸಿದ್ದಾರೆ. ಇವು ಅಭ್ಯಾಸತಾನಗಳು. ಈ ಚಿಟ್ಟೆತಾನಗಳನ್ನು ನಾಟ, ಗೌಳ, ಆರಭಿ, ಶ್ರೀರಾಗ, ವರಾಳಿ ಮುಂತಾದ ಘನರಾಗಗಳಲ್ಲಿ ರಚಿಸಲಾಗಿದೆ.

**ಚಿಟ್ಟೆಸ್ವರ**—ಕೃತಿಯ ಅಂದವನ್ನು ಹೆಚ್ಚಿಸಲು ಸ್ವರಾಲಂಕಾರಗಳನ್ನು ಸೇರಿ ಸಿರುತ್ತಾರೆ. ಇವೇ ಚಿಟ್ಟೆಸ್ವರಗಳು ಇವನ್ನು ಅನುಪಲ್ಲವಿ ಮತ್ತು ಚರಣಗಳ ಕೊನೆಯಲ್ಲಿ ಹಾಡಲಾಗುವುದು. ಇವನ್ನು ೨, ೪, ೬ ಆವರ್ತಗಳಾಗಿ ಮಧ್ಯಮ ಕಾಲದಲ್ಲಿ ರಚಿಸಿರುತ್ತಾರೆ. ತೃತೀಯ ಕಾಲದಲ್ಲೂ ಚಿಟ್ಟೆಸ್ವರಗಳನ್ನು ರಚಿಸಿರುವು ದುಂಟು. ಸಮಕಾಲದ ಚಿಟ್ಟೆಸ್ವರಗಳನ್ನು ಅನುಪಲ್ಲವಿಯ ನಂತರವೂ, ಮಧ್ಯಮ ಕಾಲದಲ್ಲಿರುವುದನ್ನು ಚರಣದ ನಂತರವೂ ಹಾಡಲಾಗುವುದು ಜನರಂಜನಿ ರಾಗದ ಪಾಹಿಮಾಂ ಶ್ರೀರಾಜರಾಜೇಶ್ವರಿ ಎಂಬ ಕೃತಿಯ ಚಿಟ್ಟೆಸ್ವರವು ಸಮಕಾಲದಲ್ಲಿದೆ. ಆನಂದಭೈರವಿರಾಗದ ನೀಮದಿಚಲ್ಲಗ ಎಂಬ ಕೃತಿಯ ಚಿಟ್ಟೆಸ್ವರವು ಮಧ್ಯಮ ಕಾಲ ದಲ್ಲಿದೆ. ಕೆಲವು ಕೃತಿಗಳ ಚಿಟ್ಟೆಸ್ವರವು ಪುರಾತನ ಅಲಂಕಾರಗಳಿಂದ ಕೂಡಿವೆ.

ನೀಲಾಂಬರಿ ರಾಗದ ಶೃಂಗಾರಲಹರಿ ಎಂಬ ಕೃತಿಯ ಚಿಟ್ಟೆಸ್ವರಗಳಲ್ಲಿ ಇದನ್ನು ಕಾಣಬಹುದು. ಕೆಲವು ಕೃತಿಗಳ ಚಿಟ್ಟೆಸ್ವರಗಳು ಒಂದೇ ವಿಧವಾದ ಸ್ವರಸಮೂಹದಿಂದ ಆರಂಭವಾಗುತ್ತವೆ. ಉದಾ : ಬೇಗಡೆ ರಾಗದ ಇಂತ ಪರಾಕೇಲನವ್ಮ ಎಂಬ ಕೃತಿ. ಕೆಲವು ಚಿಟ್ಟೆಸ್ವರಗಳ ಕೊನೆಯ ಆವರ್ತದಲ್ಲಿ ಆಕರ್ಷಕವಾದ ಮುಕುಟಸ್ವರ ಅಥವಾ ಮುಕ್ತಾಯಸ್ವರವಿರುತ್ತದೆ ಉದಾ : ಖಮಾಚ್ ರಾಗದ ಬ್ರೋಚೇವಾರೆವರುರ ಎಂಬ ಕೃತಿಯ ಚಿಟ್ಟೆಸ್ವರ. ಕೆಲವು ಕೃತಿಗಳಲ್ಲಿ ವಿಲೋಮ ಮತ್ತು ಅನುಲೋಮ ಕ್ರಮಗಳ ಚಿಟ್ಟೆಸ್ವರಗಳಿರುವುದುಂಟು ಇವುಗಳನ್ನು ಪ್ರಾರಂಭದಿಂದ ಕೊನೆಯವರೆಗೂ ಅಂದರೆ ಅನುಲೋಮ ಕ್ರಮದಲ್ಲಿ ಮತ್ತು ಕೊನೆಯಿಂದ ಮೊದಲಿನವರೆಗೆ ಅಂದರೆ ವಿಲೋಮ ಕ್ರಮದಲ್ಲಿ ಹಾಡಬಹುದು. ಉದಾ : ಕಲ್ಯಾಣಿರಾಗದ ಕಮಲಾಂಬಾಂ ಭಜರೇ ಎಂಬ ಕೃತಿಯಲ್ಲಿ ಒಂದು ವಿಲೋಮ ಚಿಟ್ಟೆಸ್ವರವಿದೆ

ವಾಗ್ಗೇಯಕಾರರು ತಮ್ಮ ಕೃತಿಗಳಿಗೆ ಚಿಟ್ಟೆಸ್ವರಗಳನ್ನು ರಚಿಸಿ ಸೇರಿಸುವುದು ಪದ್ಧತಿ. ಆದರೆ ಕೆಲವು ಕೃತಿಗಳಿಗೆ ಇತರ ವಾಗ್ಗೇಯಕಾರರು ಚಿಟ್ಟೆಸ್ವರಗಳನ್ನು ಸೇರಿಸಿರುವ ನಿದರ್ಶನಗಳಿವೆ. ಜಗನ್ಮೋಹಿನಿ ರಾಗದ ಮಾಮವ ಸತತಂ ಎಂಬ ಕೃತಿಯ ಚಿಟ್ಟೆಸ್ವರವು ಇದಕ್ಕೆ ನಿದರ್ಶನ. ತ್ಯಾಗರಾಜರ ರಚನೆಯಾದ ಈ ಕೃತಿಗೆ ಅವರ ಶಿಷ್ಯ ವಾಲಾಜಪೇಟೆ ಕೃಷ್ಣಸ್ವಾಮಿ ಭಾಗವತರು ಚಿಟ್ಟೆಸ್ವರವನು ಸೇರಿಸಿದರು. ಕೆಲವು ರಾಗಮಾಲಿಕಾ ಕೀರ್ತನೆಗಳಲ್ಲಿ ಚಿಟ್ಟೆಸ್ವರಗಳು ಮೊದಲು ಒಂದನೆ ಕಾಲದಲ್ಲೂ, ನಂತರ ಮಧ್ಯಮ ಕಾಲದಲ್ಲೂ, ಕೊನೆಯಲ್ಲಿ ಒಂದು ಅಥವಾ ಎರಡು ಮಧ್ಯಮ ಕಾಲದ ಚಿಟ್ಟೆಸ್ವರಗಳು ಪ್ರಾರಂಭವಾದ ರಾಗದಿಂದ ಕ್ರಮವಾಗಿ ಇತರ ರಾಗಗಳಲ್ಲಿದ್ದೂ, ಪುನಃ ಅದೇ ರಾಗಗಳ ಅವರೋಹಣ ಕ್ರಮದಲ್ಲಿದ್ದೂ ಪ್ರಾರಂಭದ ರಾಗಕ್ಕೆ ಸೇರುತ್ತವೆ. ಉದಾ : ಸ್ವಾತಿ ತಿರುನಾಳ್ ಮಹಾರಾಜರ 'ಭಾವಯಾಮಿ' ಎಂಬ ರಾಮಾಯಣದ ಕೀರ್ತನೆ ಮತ್ತು ಕಮಲಜಾಸ್ಯ ಎಂಬ ದಶಾವತಾರದ ಕೀರ್ತನೆ.

**ಚಿಟ್ಟಿಬಾಬು (೧೯೩೬)**—ಇವರು ಈಗಿನ ಆಂಧ್ರದ ಒಬ್ಬ ಖ್ಯಾತ ವೈಣಿಕರು. ಚಲ್ಲಪಲ್ಲಿ ರಂಗರಾವ್ ಮತ್ತು ಸುಂದರಮ್ಮ ಎಂಬುವರ ಪುತ್ರನಾಗಿ ಕಾಕಿನಾಡದಲ್ಲಿ ಜನಿಸಿದರು. ಇವರ ಹೆಸರು ಚಲ್ಲಪಲ್ಲಿ ಹನುಮಾನುಲು. ತಮ್ಮ ಐದನೆ ವಯಸ್ಸಿನಲ್ಲಿ ವೀಣಾವಾದನದಲ್ಲಿ ಶಿಕ್ಷಣವನ್ನು ಪಾಂಡ್ರವದವು ಶಿಂಗರಾಜು ಎಂಬುವರಲ್ಲೂ, ನಂತರ ಎರಡು ವರ್ಷಗಳ ಕಾಲ ಇಯ್ಯುಣ್ಣಿ ಅಪ್ಪಳಾಚಾರ್ಯುಲು ಎಂಬುವರಲ್ಲಿ ಪಡೆದು ತಂದೆಯೊಡನೆ ಮದ್ರಾಸಿಗೆ ಹೋಗಿ ನೆಲೆಸಿದರು. ಅಲ್ಲಿ ಪ್ರಸಿದ್ಧ ವೈಣಿಕರಾದ ಏಮನಿ ಶಂಕರಶಾಸ್ತ್ರಿಯವರಲ್ಲಿ ಪ್ರೌಢಶಿಕ್ಷಣ ಪಡೆದರು. ಇವರ ಪ್ರತಿಭೆಯು ಬೆಳಕಿಗೆ ಬರಲು ಕಾರಣ ಖ್ಯಾತ ಚಲನಚಿತ್ರ ನಿರ್ದೇಶಕ ಶ್ರೀಧರ್. ಇವರು ನಿರ್ದೇಶಿಸಿದ ಕಲ್ಯಾಣಕೋವಿಲ್ ಎಂಬ ಚಲನಚಿತ್ರಕ್ಕೆ ಚಿಟ್ಟಿಬಾಬು ಉತ್ತಮವಾದ ಹಿನ್ನೆಲೆ ಸಂಗೀತವನ್ನು ಒದಗಿಸಿದರು. ಅಲ್ಲಿಂದ ಇವರ ಅದೃಷ್ಟದ ಬಾಗಿಲು ತೆರೆಯಿತು. ಎಲ್ಲೆಲ್ಲೂ ಇವರ ಕಚೇರಿಗಳಾಗಲು ಮೊದಲಾಯಿತು. ೧೯೬೦ರಲ್ಲಿ ಮೈಸೂರು ದರ್ಬಾರಿನಲ್ಲಿ

ವೈಣಿಕ ಶಿಖಾಮಣಿ ಎಂಬ ಬಿರುದು ದೊರಕಿತು. ೧೯೭೮ರಲ್ಲಿ ಯುಗೋಸ್ಲೇವಿಯಾ, ರೋಮ್, ೧೯೭೯ರಲ್ಲಿ ಗುರುವಾಯೂರು ದೊರೆ ಮತ್ತು ಬೆಂಗಳೂರು ಮಂಜನಾಥ ರೊಡನೆ ಪಶ್ಚಿಮ ಜರ್ಮನಿ, ೧೯೭೬ರಲ್ಲಿ ಮಲೇಷಿಯಾ, ೧೯೭೪ರಲ್ಲಿ ಕೆನಡಾ ಮತ್ತು ಯು ಎಸ್.ಎ. ದೇಶಗಳಿಗೆ ಹೋಗಿ ಕಚೇರಿಗಳನ್ನು ಮಾಡಿ ಬಂದರು. ೧೯೭೪ರಲ್ಲಿ ಮದ್ರಾಸಿನ ಬಾಲಸುಬ್ರಹ್ಮಣ್ಯ ಸಂಗೀತ ಸಭೆಯು ಇವರಿಗೆ ವೈಣಿಕ ಕುಲಾಲಂಕಾರ ಎಂಬ ಬಿರುದನ್ನಿತ್ತು ಸನ್ಮಾನಿಸಿತು ಮದ್ರಾಸಿನ ಕೊಲಂಬಿಯಾ ಗ್ರಾಮಾಫೋನ್ ಕಂಪೆನಿಗೆ ಹಲವು L. P. ರೆಕಾರ್ಡುಗಳನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ರಂಜನ ಮಾಲ ಎಂಬುದು ಬಹಳ ಜನಪ್ರಿಯವಾಗಿದೆ. ಇವರ ಮಿಾಟಿನಲ್ಲಿ ಸೌಖ್ಯ, ಹಿತ, ನಾದಮಾಧುರ್ಯ, ಖಚಿತವಾದ ಸ್ವರಗಳ ಮಿಾಟಿನ ಪರಿಮಿತಿ, ಲಯದ ಮೇಲೆ ಸಂಪೂರ್ಣ ಹತೋಟಿ ಇವರ ವಾದನದ ಮುಖ್ಯಾಂಶಗಳು. ತಮ್ಮ ಗುರುವಿನಂತೆ ಯಾವ ಬಗೆಯ ಸಂಗೀತವನ್ನಾದರೂ ನುಡಿಸಬಲ್ಲರು. ಲಘು ಸಂಗೀತವನ್ನು ನುಡಿಸುವುದರಲ್ಲೂ ಪರಿಣತರು

**ಚಿಟ್ಟಿ ಬಾಬುನಾಯ್ಡು, ಬಿ.**—ಇವರು ಕೀ ಟು ಹಿಂದು ಮ್ಯೂಸಿಕ್ ಎಂಬ ಆಂಗ್ಲ ಗ್ರಂಥಕರ್ತರು.

**ಚಿಟ್ಟಿವೈದ್ಯನಾಥ ಅಯ್ಯರ್**—ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ಅರಂತಾಂಗಿ ಎಂಬ ಊರಿನವರು ಸಿಳ್ಳೆ ಹೊಡೆಯುವುದರಲ್ಲಿ ನಿಷ್ಣಾತ ರಾಗಿದ್ದರು ಸಿಳ್ಳೆಯ ಮೂಲಕ ಪಿಟೀಲು ಮತ್ತು ಮೃದಂಗ ಪಕ್ಕವಾದ್ಯಗಳೊಡನೆ ಸಂಗೀತಕಚೇರಿಗಳನ್ನು ಮಾಡುತ್ತಿದ್ದರು ಇವು ಅತ್ಯಂತ ಜನಪ್ರಿಯವಾಗಿದ್ದುವು.

ಮೈಸೂರಿನ ನ್ಯಾಯವಾದಿಯಾಗಿದ್ದ ಮತ್ತು ಬಿಡಾರಂ ಕೃಷ್ಣಪ್ಪನವರ ರಾಮ ಮಂದಿರದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಎಸ್ ಕೆ. ರಾಮಾಚಾರ್ ಎಂಬುವರು ಸಿಳ್ಳೆ ಹಾಕಿ ಕಚೇರಿ ಮಾಡುತ್ತಿದ್ದರು.

**ಚಿಟ್ಟಿವೆಂಕಟೇಸಾಮಯ್ಯ**—ಇವರು ತಮಿಳುನಾಡಿನ ನಾಗಪಟ್ಟಣದವರು. ಸಿಳ್ಳೆ ಹಾಕಿ ಕಚೇರಿ ಮಾಡುವುದರಲ್ಲಿ ಬಹಳ ಖ್ಯಾತರಾಗಿದ್ದರು. ಇವರ ಕಚೇರಿಗಳು ಕೊಳಲುವಾದನಕ್ಕಿಂತ ಉತ್ತಮವಾಗಿದ್ದುವು.

**ಚಿತ್ತದ್ಯುತಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಚಿತ್ತರಂಜನಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನೀ

ಅ: ನಿ ದ ಪ ಪ ಗ ರಿ ಸ

ಈ ರಾಗವಲ್ಲಿ ಸಾಮವೇದದ ಸ್ವರಗಳು ಬಂದಿವೆ. ಚತುಶ್ರುತಿ ಧೈವತ, ತ್ರಿಶ್ರುತಿ ಗಾಂಧಾರ ನಿಷಾದಗಳು ಸ್ವರಸ್ಥಾನಗಳು. ರಿಷಭ ಧೈವತಗಳು ಪರಸ್ಪರವಾದಿ ಸಂವಾದಿಗಳು. ಶಾಂತರಸ ಪ್ರಧಾನವಾದ ಸಾರ್ವಕಾಲಿಕ ರಾಗ. ನಿಷಾದಾಂತ್ಯ ರಾಗ. ಇದರಲ್ಲಿ ಸಾಮವೇದದ ಸ್ವರಗಳು ಬರಬೇಕೆಂಬ ಇಚ್ಛೆಯಿಂದ ತ್ಯಾಗರಾಜರು 'ನಾದ ತನುಮನಿಶಂ' ಎಂಬ ಕೃತಿಯನ್ನು ರಚಿಸಿದ್ದಾರೆ. ಈ ರಾಗದ ಸ್ವರೂಪವನ್ನು ತಿಳಿಯಲು ಈ ಕೃತಿಯು ಪ್ರಮಾಣವಾಗಿದೆ.

**ಚಿತ್ತಕರ್ಷಣಿ**—ಈ ರಾಗವು ೭ನೆ ಮೇಳಕರ್ತ ಸೇನಾವತಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಮ ದ ಸ

ಅ : ಸ ದ ಮ ಗ ರಿ ಸ

**ಚಿತ್ತೂರು ಸುಬ್ರಹ್ಮಣ್ಯಪಿಳ್ಳೆ** (೧೮೯೮ ೧೯೭೫)—ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗನೂರು ಎಂಬಲ್ಲಿ ಗಾಯನ, ಪಿಟೀಲುವಾದನ ಮತ್ತು ಹರಿಕಥೆ ಮಾಡುವುದರಲ್ಲಿ ನಿಷ್ಣಾತರೂ, ಸಂಸ್ಕೃತ ವಿದ್ವಾಂಸರೂ ಆಗಿದ್ದ ಪೋನಾರ್ಯ ಎಂಬುವರ ಮೂರನೆ ಪುತ್ರನೇ ಸುಬ್ರಹ್ಮಣ್ಯಪಿಳ್ಳೆ. ಇವರ ಸಂಗೀತದ ಪ್ರಥಮ ಗುರು ಪೋನಾರ್ಯ. ನಂತರ ೧೬ನೇ ವಯಸ್ಸಿನಲ್ಲಿ ಕಾಂಚೀಪುರಂ ನಾಯನಾಪಿಳ್ಳೆಯವರಲ್ಲಿ ಗುರುಕುಲ ವಾಸಮಾಡಿ ನಾಲ್ಕು ವರ್ಷಗಳ ಕಾಲ ಪ್ರೌಢಶಿಕ್ಷಣ ಪಡೆದು ಎಟ್ಟಿಯಾಪುರಂ ರಾಮಚಂದ್ರ ಭಾಗವತರ ಮನೆಯಲ್ಲಿ ಪ್ರಥಮ ಕಚೇರಿ ಗಾಯನ ಮಾಡಿದರು. ೧೯೨೮ರಲ್ಲಿ ಮದ್ರಾಸಿನಲ್ಲಿ ನೆಲೆಸಿದರು. ಇವರು ಶಾರೀರಬಲ ಮತ್ತು ಪಾಂಡಿತ್ಯ ಬಲವಿದ್ದ ಲಯಪಂಡಿತರು. ಷಟ್ಕಾಲ ಪಲ್ಲವಿಯನ್ನು ನಿರಾಂತಕವಾಗಿ ಹಾಡುತ್ತಿದ್ದರು. ಇವರ ಶಾರೀರವು ಮಧ್ಯಮಕಾಲದ ಶಾರೀರವಾಗಿದ್ದುದರಿಂದ ಮಧ್ಯಮ ಕಾಲದ ಕೃತಿಗಳನ್ನು ಹೆಚ್ಚಾಗಿ ಹಾಡುತ್ತಿದ್ದರು. ಪಿಟೀಲು, ಮೃದಂಗವಲ್ಲದೆ, ಘಟ, ಖಂಜಿರ, ಮೋರ್ಚಿಂಗ್, ಕೊನಕ್ಕೋಲು ಮುಂತಾದ ಹೆಚ್ಚಿನ ಸಂಖ್ಯೆಯ ಪಕ್ಕವಾದ್ಯಗಳೊಡನೆ ಕಚೇರಿ ಮಾಡುತ್ತಿದ್ದರು ೧೯೪೧ರಲ್ಲಿ ತಿರುನೆಲ್ವೇಲಿಯಲ್ಲಿ ಇಶೈಮನ್ನರ್, ೧೯೫೭ರಲ್ಲಿ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಅಧ್ಯಕ್ಷರಾಗಿ ಸಂಗೀತಕಲಾನಿಧಿ ಎಂಬ ಬಿರುದುಗಳನ್ನು ಪಡೆದರು. ಇವರ ಶಿಷ್ಯರಲ್ಲಿ ಮಧುರೆ ಸೋಮಸುಂದರಂ ಪ್ರಖ್ಯಾತರು

**ಚಿತ್ರ**—(೧) ಇದು ತಾಳದಶಪ್ರಾಣಗಳಿಗೆ ಸಂಬಂಧಿಸಿದ ಷಣ್ಮಾರ್ಗಗಳಲ್ಲಿ ಮೂರನೆಯದು ಇದರಲ್ಲಿ ತಾಳದ ಪ್ರತಿ ಎಣಿಕೆಗೆ ೨ ಮಾತ್ರೆಗಳು ಅಥವಾ ೮ ಅಕ್ಷರ ಕಾಲವಿರುತ್ತದೆ. ಈ ಬಗೆಯ ವಿಳಂಬ ನಡೆಯನ್ನು ಕೆಲವು ಪಲ್ಲವಿಗಳಲ್ಲಿ ಕಾಣಬಹುದು.

(೨) ಇದು ಏಳು ತಂತಿಗಳಿರುವ ಒಂದು ವಿಧವಾದ ವೀಣೆ.

(೩) ಮಧ್ಯಮದಿಂದ ಆರಂಭವಾಗುವ ಗಾಂಧಾರ ಗ್ರಾಮದ ಒಂದು ಮೂರ್ಛನ.

**ಚಿತ್ರಚಂದ್ರಿಕ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ನಿ ದ ಸ

ಅ: ಸ ನಿ ದ ಮ ಗ ರಿ ಸ

**ಚಿತ್ರಘೋಷಾವಳಿ**—ಇದೊಂದು ಬಗೆಯ ವೀಣೆ.

**ಚಿತ್ರತಮ**—ಇದು ತಾಳದಶಪ್ರಾಣಗಳಿಗೆ ಸಂಬಂಧಿಸಿದ ಆರು ಮಾರ್ಗಗಳಲ್ಲಿ ಐದನೆಯದು. ಈ ತಾಳವ ಒಂದು ಎಣಿಕೆಗೆ ೨ ಅಕ್ಷರಕಾಲ ಅಥವಾ ೧/೨ ಮಾತ್ರಾ ಕಾಲವಾಗುತ್ತದೆ. ಹಂಸಧ್ವನಿರಾಗದ ರಘುನಾಯಕ ಎಂಬ ಕೃತಿಯು ಚಿತ್ರತಮ ಮಾರ್ಗತಾಳದಲ್ಲಿದೆ.

**ಚಿತ್ರತಾಳ**—ಅರಭಟ್ಟನಾವಲರ್ ವಿರಚಿತ ತಮಿಳಿನ ಭರತಶಾಸ್ತಿರಮ್ ಎಂಬ ಸಂಗೀತಶಾಸ್ತ್ರ ಗ್ರಂಥದಲ್ಲಿ ಉಕ್ತವಾಗಿರುವ ನವತಾಳಗಳಲ್ಲಿ ಇದೊಂದು ಬಗೆಯ ತಾಳ.

**ಚಿತ್ರತರ**—ಇದು ತಾಳದಶಪ್ರಾಣಗಳಿಗೆ ಸಂಬಂಧಿಸಿದ ಆರು ಮಾರ್ಗಗಳಲ್ಲಿ ನಾಲ್ಕನೆಯದು. ಇದರ ಒಂದೊಂದು ಅಕ್ಷರಕ್ಕೆ ೧ ಮಾತ್ರಾಕಾಲವಾಗುತ್ತದೆ. ಕಾಂಭೋಜಿರಾಗದ ಎವರಿಮಾಟ ಮತ್ತು ಶಂಕರಾಭರಣರಾಗದ ಸರೋಜದಳ ನೇತ್ರಿ ಎಂಬ ಕೃತಿಗಳು ಚಿತ್ರತರ ಮಾರ್ಗ ತಾಳದಲ್ಲಿವೆ.

**ಚಿತ್ರನಾಟ್ಯಜತಿ**—ಇವು ಚಿತ್ರನಾಟ್ಯ ಅಥವಾ ವಿಶೇಷ ರೀತಿಯ ನಾಟ್ಯದಲ್ಲಿ ಬಳಸುವ ಜತಿಗಳು.

**ಚಿತ್ರನಾಟ್ಯ**—ಇದೊಂದು ವಿಶೇಷ ರೀತಿಯ ನಾಟ್ಯ. ಇದನ್ನು ಪ್ರದರ್ಶಿಸುವ ಕಲಾವಿದರಿಗೆ ಅಪಾರ ಕಲಾಕೌಶಲ್ಯವಿರಬೇಕು. ಸಿಂಹನಟನವೆಂಬುದು ಇದಕ್ಕೆ ಉದಾಹರಣೆ. ಒಂದು ಜಮಖಾನ ಅಥವಾ ನೆಲದ ಮೇಲೆ ಸಣ್ಣಮರಳನ್ನು ಒಂದೇ ಸಮನಾಗಿ ಹರಡಲಾಗುವುದು ಕಲಾವಿದೆಯು ಚಿತ್ರನಾಟ್ಯಜತಿಗೆ ನಾಟ್ಯವಾಡುತ್ತಾ ತನ್ನ ಪಾದ ಚಲನಾಕೌಶಲ್ಯದಿಂದ ಪ್ರದರ್ಶನದ ಮುಕ್ತಾಯದ ವೇಳೆಗೆ ಆ ಮರಳನ್ನು ಒಂದು ಸಿಂಹದ ಆಕಾರದಂತೆ ರೂಪಿಸುತ್ತಾಳೆ.

**ಚಿತ್ರಸಾದಿತ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ

ಆ: ಸ ಗ ರಿ ಗ ಮ ದ ಮ ಪ ದ ನಿ ಸ

ಅ: ಸ ದ ಪ ಮ ರಿ ಗ ರಿ ಸ

**ಚಿತ್ರಪ್ರಬಂಧ**—ಇದು ಅಪರೂಪ ಅಲಂಕಾರಗಳಿಂದ ಕೂಡಿರುವ ಒಂದು ಸಂಗೀತ ರಚನೆ. ತೆಲುಗಿನ 'ಪನ್ನಗಾದ್ರೀಶ' ಎಂಬ ರಾಗಮಾಲಿಕೆಯು ಚಿತ್ರ ಪ್ರಬಂಧಕ್ಕೆ ಒಳ್ಳೆಯ ಉದಾಹರಣೆ.

**ಚಿತ್ರಮಣಿ**—ಈ ರಾಗವು ೧೧ನೆ ಮೇಳಕರ್ತ ಕೋಕಿಲಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಚಿತ್ರಮಾಲಿಕಾ**—ಈ ರಾಗವು ೨೩ನೆ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ರಿ ಸ

**ಚಿತ್ರಮಂದಿರಾ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಚಿತ್ರಮೋಹಿನಿ**—ಈ ರಾಗವು ೧೦ನೆ ಮೇಳಕರ್ತ ನಾಟಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

**ಚಿತ್ರರವ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ಸ

**ಚಿತ್ರರೂಪಿ**—ಈ ರಾಗವು ೪ನೆ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ದ ಮ ಗ ರಿ ಸ

**ಚಿತ್ರರಂಜಿಲಿನಿ**—ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ಪ ಮ ರಿ ಗ ಮ ರಿ ಸ

**ಚಿತ್ರಲಘು**—ಇದು ಸಂಕೀರ್ಣ ಲಘು.

**ಚಿತ್ರವತಿ**—ಇದು ಗಾಂಧಾರ ಗ್ರಾಮದ ಪಂಚಮ ಮೂರ್ಛನದ ಹೆಸರು.

**ಚಿದಂಬರ ಭಾಗವತರು** (೧೮೮೦-೧೯೩೮)—ಇವರು ೨೦ನೆ ಶತಮಾನದ ಒಬ್ಬ ಪ್ರಸಿದ್ಧ ಹರಿಕಥಾ ಭಾಗವತರು. ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ಮಾಂಗುಡಿ ಎಂಬ ಹಳ್ಳಿಯಲ್ಲಿ ಜನಿಸಿದರು. ಇವರು ತಂಜಾವೂರಿನ ದೊರೆ ಶರಭೋಜಿ ಮಹಾರಾಜನ ಆಸ್ಥಾನ ವಿದ್ವಾಂಸರಾಗಿದ್ದ ಘನಂ ತಿರುಮಲಯ್ಯರ್‌ರ ವಂಶಕ್ಕೆ ಸೇರಿದವರು. ಇವರು ವಕೀಲರಾಗಬೇಕೆಂದು ಆಸೆಪಟ್ಟರು. ಆದರೆ ಇವರ ಪ್ರತಿಭೆ ಬೇರೆ ಕ್ಷೇತ್ರದಲ್ಲಿ ಪ್ರಕಾಶಗೊಂಡಿತು. ಇವರು ತಂಜಾವೂರು ಕೃಷ್ಣ ಭಾಗವತರ ಕಥಾಕಾಲಕ್ಷೇಪದಿಂದ ಆಕರ್ಷಿತರಾದರು. ಸಂಸ್ಕೃತ, ತೆಲುಗು ಮತ್ತು ತಮಿಳು

ಭಾಷೆಗಳಲ್ಲಿ ಪಾಂಡಿತ್ಯಗಳಿಸಿ ತಮ್ಮ ಸಹೋದರರ ಜೊತೆಯಲ್ಲಿ ಕಥಾಕಾಲಕ್ಷೇಪದ ಭಾಗವತರಾಗಿ ಪ್ರಸಿದ್ಧರಾದರು. ಇವರ ಸಹೋದರ ಮಹಾಲಿಂಗ ಸಹ ಗಾಯನ ಮಾಡುತ್ತಿದ್ದರು. ಇನ್ನೊಬ್ಬ ಸಹೋದರ ಶೇಷನ್ ಮೃದಂಗ ನುಡಿಸುತ್ತಿದ್ದರು. ಇವರಿಗೆ ಸಂಗೀತ, ಭರತನಾಟ್ಯ, ವಾಲ್ಮೀಕಿರಾಮಾಯಣ, ತಮಿಳು ಪುರಾಣಗಳಲ್ಲಿ ಪ್ರೌಢಿಮೆ, ಪ್ರತಿಭಾ ಪೂರ್ಣವಾದ ನಿರೂಪಣೆ, ಹಾಸ್ಯಪ್ರಿಯತೆ, ಒಳ್ಳೆಯ ಕಂಠ, ಕಥನಕೌಶಲ್ಯ ಮುಂತಾದ ಗುಣಗಳಿದ್ದು ಇವರ ಕಾಲಕ್ಷೇಪಗಳು ಬಹು ಆಕರ್ಷಕ ವಾಗಿರುತ್ತಿದ್ದುವು. ಇವರಿಗೆ ಮಹಾಕಥಕ ಕಂಠೀರವ ಎಂಬ ಬಿರುದಿತ್ತು. ಇವರು ಹಲವು ಕೃತಿಗಳನ್ನು ರಚಿಸಿದ್ದಾರೆ.

**ಚಿದಂಬರಂ**—ಇದು ತಮಿಳುನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿರುವ ಪ್ರಸಿದ್ಧ ಕ್ಷೇತ್ರ. ಇಲ್ಲಿ ವಿಖ್ಯಾತವಾದ ನಟರಾಜಸ್ವಾಮಿ ದೇವಾಲಯವಿದೆ. ಅನೇಕ ವಾಗ್ಗೇಯಕಾರರು ಈ ದೇವಾಲಯವನ್ನೂ, ನಟರಾಜಸ್ವಾಮಿಯನ್ನೂ ಕುರಿತು ಕೃತಿ ಗಳನ್ನು ರಚಿಸಿ ಹಾಡಿದ್ದಾರೆ. ಸಂಗೀತ ಮತ್ತು ನೃತ್ಯ ಶಿಲ್ಪದ ಸಂಬಂಧವಾದ ಅನೇಕ ಶಿಲ್ಪಾಕೃತಿಗಳು ಈ ದೇವಾಲಯದಲ್ಲಿದೆ. ಪೂರ್ವದ ಗೋಪುರದಲ್ಲಿ ಹಲವು ನಾಟ್ಯ ಭಂಗಿಗಳಲ್ಲಿರುವ ವಿಗ್ರಹಗಳು ತತ್ಸಂಬಧವಾದ ಶ್ಲೋಕಗಳೊಡನೆ ಇವೆ. ಗರ್ಭಗುಡಿಯ ಎದುರಿನಲ್ಲಿರುವ ಕಲ್ಲಿನ ರಥದಲ್ಲಿ ಪಂಚಮುಖವಾದ್ಯವನ್ನು ನುಡಿಸುತ್ತಿರುವ ಒಂದು ಶಿಲ್ಪಾಕೃತಿ ಇದೆ.

**ಚಿದಂಬರನಾಥಯೋಗಿ** (೧೮ನೆ ಶ)—ಇವರು ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಮುತ್ತುಸ್ವಾಮಿ ದೀಕ್ಷಿತರು ಮತ್ತು ಅವರ ತಂದೆ ರಾಮಸ್ವಾಮಿ ದೀಕ್ಷಿತರ ಗುರು. ಒಂದು ಸಲ ರಾಮಸ್ವಾಮಿ ದೀಕ್ಷಿತರ ವೀಣಾವಾದನವನ್ನು ಚಿದಂಬರದ ನಟ ರಾಜಸ್ವಾಮಿ ದೇವಾಲಯದಲ್ಲಿ ಕೇಳಿದ ಯೋಗಿಗಳು ಅದರಿಂದ ಮುಗ್ಧರಾದರು. ಅವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಶ್ರೀ ವಿದ್ಯೆಯನ್ನು ಉಪದೇಶಿಸಿದರು. ಮತ್ತು ತಿರುವಾರೂರಿಗೆ ಹೋಗುವಂತೆ ಹೇಳಿದರು. ಹಲವು ವರ್ಷಗಳ ತರುವಾಯ ಮಣಾಲಿ ವೆಂಕಟಕೃಷ್ಣ ಮುದಲಿಯಾರರ ಕೋರಿಕೆಯಂತೆ ದೀಕ್ಷಿತರು ಸಕುಟುಂಬರಾಗಿ ಮಣಾಳಿಗೆ ಹೋದಾಗ ಅಲ್ಲಿ ಪುನಃ ಯೋಗಿಗಳ ಸಂದರ್ಶನ ಲಭಿಸಿತು. ತರುಣ ಮುತ್ತುಸ್ವಾಮಿ ದೀಕ್ಷಿತರನ್ನು ತನ್ನ ಸಂಗಡ ಯೋಗಿ ವಾರಣಾಸಿಗೆ ಕರೆದುಕೊಂಡು ಹೋದರು. ಅಲ್ಲಿ ಮುತ್ತುಸ್ವಾಮಿ ದೀಕ್ಷಿತರು ಐದು ವರ್ಷಗಳ ಕಾಲವಿದ್ದರು. ತಮ್ಮ ಗುರುಸಿದ್ಧಿ ಪಡೆದ ನಂತರ ದಕ್ಷಿಣ ಭಾರತಕ್ಕೆ ಹಿಂತಿರುಗಿದರು ಚಿದಂಬರನಾಥ ಯೋಗಿಯ ಸಮಾಧಿಯು ವಾರಣಾಸಿಯ ಹನುಮಾನ್ ಘಾಟ್‌ನಲ್ಲಿದೆ.

**ಚಿದಂಬರ ವಿಲಾಸ**—ಇದು ಗೋಪಾಲಕೃಷ್ಣಭಾರತಿ ವಿರಚಿತ ತಮಿಳು ಗೇಯರೂಪಕವಾದ ನಂದನಾರ್ ಚರಿತ್ರಂ ಎಂಬುದರ ಮೂರನೆಯ ಭಾಗ. ಈ ಭಾಗವು ಪವಾಡದ ನಂತರ ಆರಂಭವಾಗುತ್ತದೆ.

**ಚಿದಾನಂದಿ—ಈ ರಾಗವು ೩೬ನೆ ಮೇಳಕರ್ತ ಛಲನಾಟದ ಒಂದು ಜನ್ಯರಾಗ.**

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ಚಿನ್ನಪಕ್ಕಿರಿ**—ಇವರು ೨೦ನೆ ಶತಮಾನದ ಒಬ್ಬ ಪ್ರಸಿದ್ಧ ನಾಗಸ್ವರ ವಿದ್ವಾಂಸರು. ಇವರು ತಮಿಳುನಾಡಿನ ತಂಜಾವೂರು ಜಿಲ್ಲೆಯ ಮನ್ನಾರ್ ಗುಡಿ ಎಂಬ ಊರಿನವರು. ನೀಡಮಂಗಲಂ ಶಿಂಗಾರಂ ಎಂಬುವರು ಇವರ ಗುರು. ತಿರುಮರುಗಲ್ ನಟೇಶನ್ ನಂತರ ಚಿನ್ನಪಕ್ಕಿರಿ ಅತ್ಯಂತ ಶ್ರೇಷ್ಠ ನಾಗಸ್ವರ ವಿದ್ವಾಂಸರೆಂದು ಪರಿಗಣಿಸಲ್ಪಟ್ಟಿದ್ದರು ಯಾವ ದುರ್ವ್ಯಸನಗಳೂ ಇಲ್ಲದ ಅತ್ಯಂತ ಸರಳಜೀವಿಯಾಗಿ ತಿರುನೆಲ್ಲಿಕಾವಲ್ ಎಂಬ ಗ್ರಾಮದಲ್ಲಿದ್ದು ಹಲವು ಕಾಲ ಸತತವಾದ ಸಾಧಕ ಮಾಡಿ ಪ್ರಸಿದ್ಧ ವಿದ್ವಾಂಸರಾದರು. ಇವರು ಕೃತಿಗಳನ್ನು ಹೆಚ್ಚಾಗಿ ನುಡಿಸುತ್ತಿರಲಿಲ್ಲ. ಯಾವಾಗಲೂ ರಾಗ ಮತ್ತು ಪಲ್ಲವಿ ನುಡಿಸುವುದೇ ಇವರ ವೈಶಿಷ್ಟ್ಯವಾಗಿತ್ತು. ಇವರ ಮನೋಧರ್ಮ ಬಹಳ ಉನ್ನತಮಟ್ಟದ್ದಾಗಿತ್ತು. ನುಡಿಕಾರದಲ್ಲಿ ವರ್ಣಿಸಲಸದಳವಾದ ಇಂಪು, ತಂಪು, ಸೊಂಪುಗಳಿದ್ದುವು. ಉಸಿರಿನ ಮೇಲೆ ಹತೋಟಿ ಇವರಿಗೆ ಬಹುವಾಗಿತ್ತು. ಖರಹರಪ್ರಿಯ, ಹೇಮವತಿ, ಹಂಸಭ್ರಮರಿ, ಕೀರವಾಣಿ, ಸಿಂಹೇದ್ರ ಮಧ್ಯಮ, ಷಣ್ಮುಖಪ್ರಿಯ, ವಾಚಸ್ಪತಿ ಮ ಎಂತಾದ ರಾಗಗಳನ್ನು ಅತ್ಯಂತ ಜನಪ್ರಿಯವಾಗಿಸಿದರು. ದ್ರುತಗತಿಯಲ್ಲಿ ನುಡಿಸುವುದರಲ್ಲಿ ನಿಷ್ಣಾತರಾಗಿದ್ದರು. ರಾಜರತ್ನಂ ಪಿಳ್ಳೆಯವರು ಇವರ ವಾದನದ ಕೆಲವು ಅಂಶಗಳನ್ನು ಪಡೆದಿದ್ದರು.

**ಚಿನ್ನಯ್ಯ ಮುದಲಿಯಾರ್ ಮಣಲಿ** —ಇವರು ಕವಿಗಳ ಮತ್ತು ಸಂಗೀತ ವಿದ್ವಾಂಸರ ಉದಾರ ಪೋಷಕರಾಗಿದ್ದರು. ಇವರ ಹೆಸರು ವೆಂಕಟಕೃಷ್ಣ ಮುದಲಿಯಾರ್. ಸಂಗೀತದ ಇತಿಹಾಸದಲ್ಲಿ ಅತ್ಯಂತ ದೀರ್ಘ ರಚನೆಯಾದ ೧೦೮ ರಾಗ ತಾಳ ಮಾಲಿಕೆಯನ್ನು ರಾಮಸ್ವಾಮಿ ದೀಕ್ಷಿತರು ಸಂಪೂರ್ಣಗೊಳಿಸಿದಾಗ ಮಣಲಿ ಚಿನ್ನಯ್ಯ ಮುದಲಿಯಾರರು ಅವರಿಗೆ ಕನಕಾಭಿಷೇಕ ಮಾಡಿದರು ಬಾಲುಸ್ವಾಮಿ ದೀಕ್ಷಿತರಿಗೆ ಪಾಶ್ಚಾತ್ಯ ಸಂಗೀತ ಮತ್ತು ಪಿಟೀಲುವಾದನದಲ್ಲಿ ಒಬ್ಬ ಪಾಶ್ಚಾತ್ಯ ಪಿಟೀಲು ವಿದ್ವಾಂಸರಿಂದ ಶಿಕ್ಷಣ ಕೊಡಿಸಿದರು. ಪಿಟೀಲು ಒಂದು ಉತ್ತಮ ಪಕ್ಕವಾದ್ಯವಾಗಲು ಯುಕ್ತವಾದುದೆಂದು ಪರಿಗಣಿಸಿ ಪ್ರದರ್ಶಿಸಿದವರು ಬಾಲುಸ್ವಾಮಿ ದೀಕ್ಷಿತರು. ಈ ವಾದ್ಯವು ಈಗ ಕರ್ಣಾಟಕ ಸಂಗೀತ ಕಚೇರಿಗಳ ಒಂದು ಮುಖ್ಯ ಪಕ್ಕವಾದ್ಯವಾಗಿದೆ.

**ಚಿನ್ನಯ್ಯ (೧೮೦೭–೧೮೫೭)**—ತಂಜಾವೂರಿನ ಸಹೋದರರೆಂದು ಪ್ರಸಿದ್ಧರಾಗಿರುವ ಚಿನ್ನಯ್ಯ. ಶಿವಾನಂದ, ವಡಿವೇಲು, ಪೊನ್ನಯ್ಯ ಎಂಬ ನಾಲ್ಕು ಸಹೋದರರು ಮುತ್ತುಸ್ವಾಮಿ ದೀಕ್ಷಿತರ ಶಿಷ್ಯರಾಗಿದ್ದರು ಇವರೆಲ್ಲರೂ ತಂಜಾವೂರಿನಲ್ಲಿ ವಾಸಿಸುತ್ತಿದ್ದು ಭರತನಾಟ್ಯದಲ್ಲಿ ಪಾಂಡಿತ್ಯ ಮತ್ತು ಸಂಪ್ರದಾಯಗಳನ್ನು ಕಾಪಾಡಿಕೊಂಡು ಬಂದ ಕುಟುಂಬಕ್ಕೆ ಸೇರಿದ ನಟುವನಾರ್ ಆಗಿದ್ದರು. ಇವರ ತಂದೆ ಸುಬ್ಬಯ್ಯ ನಟುವನಾರ್. ಚಿನ್ನಯ್ಯನವರು ಕೆಲವು ವರ್ಣಗಳು, ಕೃತಿಗಳು ಮತ್ತು

ತಿಲ್ಲಾಣಗಳನ್ನು ರಚಿಸಿದ್ದಾರೆ. ಇವರು ಮೈಸೂರಿನ ಆಸ್ಥಾನದಿಂದ ಆಹ್ವಾನಿತರಾಗಿ ಸುಮಾರು ಹತ್ತು ವರ್ಷಗಳ ಕಾಲ ಮೈಸೂರಿನಲ್ಲಿದ್ದರು ಇವರ ಕೃತಿಗಳಲ್ಲಿ ಆರಭಿ ರಾಗದ ಅಂಬಾ ಸೌರಂಬಾ ಎಂಬ ರಚನೆಯು ಬಹಳ ಶ್ರೇಷ್ಠವಾದುದು

**ಚಿನ್ನವೈತ್ತಿ**—ಇವರು ತಮಿಳುನಾಡಿನ ಒಬ್ಬ ಪ್ರಸಿದ್ಧ ಗಾಯಕ. ೧೯ನೆ ಶತಮಾನದಲ್ಲಿದ್ದರು ತಮ್ಮ ಹಿರಿಯ ಸಹೋದರ ಪೆರಿಯವೈತ್ತಿಯೊಡನೆ ಕಚೇರಿ ಮಾಡುತ್ತಿದ್ದರು ಮೈಸೂರು ಆಸ್ಥಾನ ವಿದ್ವಾಂಸರಾಗಿ ನೇಮಕಗೊಂಡು ಪ್ರತಿ ತಿಂಗಳೂ ಗೌರವಧನ ಪಡೆಯುತ್ತಿದ್ದರು. ಪಲ್ಲವಿ ಹಾಡುವುದರಲ್ಲಿ ನಿಷ್ಣಾತರಾಗಿದ್ದರು ವೈತ್ತಿ ಎನ್ನುವುದು ವೈದ್ಯನಾಥ ಎಂಬ ಹೆಸರಿನ ಅಪಭ್ರಂಶ.

**ಚಿನ್ನಸ್ವಾಮಿದಾಸರು** (೧೮೨೮—೧೮೮೧)—ಇವರು ತಮಿಳುನಾಡಿನ ಕಾಂಚೀಪುರದಲ್ಲಿ ಶೇಷಯ್ಯರ್ ಮತ್ತು ಗಂಗಾಭವಾನಿ ಎಂಬ ದಂಪತಿಗಳ ಮಗನಾಗಿ ಜನಿಸಿದರು. ಸಂಸ್ಕೃತ, ತಮಿಳು ಮತ್ತು ಸಂಗೀತದಲ್ಲಿ ವಿದ್ವಾಂಸರಾಗಿದ್ದರು. ಸಂಸ್ಕೃತ ಮತ್ತು ತಮಿಳಿನಲ್ಲಿ ಅನೇಕ ಭಕ್ತಿಗೀತಗಳನ್ನು ರಚಿಸಿದ್ದಾರೆ ಇವರು ಸ್ವನಾಮ ಮುದ್ರಕಾರರು. ಕೀರ್ತನೆ ರೂಪದಲ್ಲಿ ರುಕ್ಮಾಂಗದ, ಅಂಬರೀಷ ಮತ್ತು ಕುಚೇಲೋಪಾಖ್ಯಾನವನ್ನೂ ರಚಿಸಿದ್ದಾರೆ. ಭದ್ರಾಚಲರಾಮದಾಸರ ಕೀರ್ತನೆಗಳು, ಭಾಷ್ಯಕಾರ ಚರಿತ್ರ ಕೀರ್ತನೆಗಳು, ಸುಭದ್ರಾಕಲ್ಯಾಣ ಕೀರ್ತನೆಗಳು ಮತ್ತು ಪಾಂಡವ ಚರಿತ್ರ ಕೀರ್ತನೆಗಳು ಎಂಬ ಗ್ರಂಥಗಳನ್ನು ರಚಿಸಿದ್ದಾರೆ

**ಚಿನ್ನಸ್ವಾಮಿ ದೀಕ್ಷಿತರು** (೧೭೭೮–೧೮೨೩)— ಇವರು ಪ್ರಸಿದ್ಧ ವಾಗ್ಗೇಯಕಾರರಾದ ಮುತ್ತುಸ್ವಾಮಿ ದೀಕ್ಷಿತರ ಕಿರಿಯ ಸಹೋದರ ಸಂಸ್ಕೃತ, ತೆಲುಗು, ತಮಿಳು ಭಾಷೆಗಳಲ್ಲಿ ಉದ್ದಾಮ ಪಂಡಿತರೂ, ಶ್ರೇಷ್ಠಗಾಯಕ ಮತ್ತು ವೈಣಿಕರಾಗಿದ್ದರು. ಮಣಲಿ ಚಿನ್ನಯ್ಯ ಮುದಲಿಯಾರ್ ಮತ್ತು ಇತರ ಹಲವು ಜಮೀನ್ದಾರರ ಮತ್ತು ರಾಜರ ಗೌರವ, ಸನ್ಮಾನಕ್ಕೆ ಪಾತ್ರರಾಗಿದ್ದರು. ನಾರದ ಸ್ತುತಿಯಾದ ಗಾನಲೋಲ ಕರುಣಾಲವಾಲ ಎಂಬ ಇವರ ತೋಡಿರಾಗದ ಕೃತಿಯು ಬಹು ಪ್ರಸಿದ್ಧವಾಗಿದೆ. ಇವರ ಮುದ್ರೆ ನಾರಾಯಣದಾಸ. ಇವರೂ ಇವರ ಸಹೋದರ ಬಾಲಸ್ವಾಮಿ ದೀಕ್ಷಿತರು ಹಲವು ಕಡೆ ದ್ವಂದ್ವಗಾಯನ ಮಾಡಿ ಅದರ ಸೊಗಸನ್ನು ಪ್ರಕಾಶಕ್ಕೆ ತಂದರು ಮತ್ತು ಮುತ್ತುಸ್ವಾಮಿ ದೀಕ್ಷಿತರ ಕೃತಿಗಳನ್ನು ಹೆಚ್ಚಾಗಿ ಪ್ರಚಾರ ಮಾಡಿದರು.

ಸುಬ್ಬರಾಮ ದೀಕ್ಷಿತರ ‘ ಸಂಗೀತ ಸಂಪ್ರದಾಯ ಪ್ರದರ್ಶಿನಿ ’ ಎಂಬ ಗ್ರಂಥದಲ್ಲಿ ಇವರಿಗೆ ಸಂಬಂಧಿಸಿದ ಒಂದು ಘಟನೆಯ ಉಲ್ಲೇಖವಿದೆ. ಒಂದು ರಾತ್ರಿ ಇವರು ತಿರುವಾರೂರಿನಲ್ಲಿ ನಾಗಸ್ವರಾವಳಿ ರಾಗಾಲಾಪನೆ ಮಾಡುತ್ತಿದ್ದರು ಅಂದಿನ ಸಭೆಯಲ್ಲಿ ಅನೇಕ ವಿದ್ವಾಂಸರು ಮತ್ತು ಸುಸಂಸ್ಕೃತರಿದ್ದರು. ಆಗ ಒಂದು ನಾಗರಹಾವು ಅವರ ಮುಂದೆ ಕಾಣಿಸಿಕೊಂಡು ಹೆಡೆಯನ್ನು ಬಿಚ್ಚಿ ಆಡಲು ತೊಡಗಿತು. ಸಭಿಕರಿಗೆ ಹಾವನ್ನು ನೋಡಿ ವಿಪರೀತ ಭಯವಾಯಿತು. ಸಭೆಯು ಶಾಂತವಾಗಿರಬೇಕೆಂದು

ದೀಕ್ಷಿತರು ಕೇಳಿಕೊಂಡರು. ಹಾವು ತನ್ನ ಉದ್ದದಷ್ಟು ಎತ್ತರ ನಿಂತು ಜೋರಾಗಿ ಆಡಿ ಸುಸ್ತಾಗಿ ನೆಲದ ಮೇಲೆ ಬಿದ್ದಿತು. ಸಂಗೀತವು ಮುಗಿದ ನಂತರ ಅದು ಸದ್ದಿಲ್ಲದೆ ಹೊರಟುಹೋಯಿತು. ಈ ಘಟನೆಯನ್ನು ಕಣ್ಣಾರೆ ಕಂಡ ದೀಕ್ಷಿತರ ಶಿಷ್ಯರಿಂದ ತಿಳಿದು ಸುಬ್ಬರಾಮ ದೀಕ್ಷಿತರು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಚಿನ್ನಸ್ವಾಮಿಯವರು ಮಧುರೆಗೆ ಕಚೇರಿಗಾಗಿ ಹೋಗಿದ್ದಾಗ ತಮ್ಮ ೪೫ನೆ ವಯಸ್ಸಿನಲ್ಲಿ ಕಾಲವಾದರು.

**ಚಿನ್ನಸ್ವಾಮಿ ಮುದಲಿಯಾರ್, ಎ. ಎಂ.**—ಇವರು ೧೮೯೨ರಲ್ಲಿ ಪ್ರಕಟಿವಾದ ಓರಿಯಂಟಲ್ ಮ್ಯೂಸಿಕ್ ಇನ್ ಯೂರೋಪಿಯನ್ ನೊಟೇಷನ್ ಎಂಬ ಗ್ರಂಥಕರ್ತರು. ಈ ಬೃಹದ್ಗ್ರಂಥದಲ್ಲಿ ಕರ್ಣಾಟಕ ಸಂಗೀತದ ಕೃತಿಗಳು, ಶಾಸ್ತ್ರದ ವಿಚಾರವಾಗಿ ಪ್ರೌಢವಾದ ಪೀಠಿಕಾ ಪ್ರಕರಣ ಮತ್ತು ಜಾನಪದ ರಾಗಗಳಿವೆ. ಇದರ ಪ್ರಕಟಣೆಯಿಂದ ಭಾರತೀಯ ಸಂಗೀತದ ವಿಚಾರವಾಗಿ ಪಾಶ್ಚಾತ್ಯ ವಿದ್ವಾಂಸರು ಕಣ್ತೆರೆದರು ಮುದಲಿಯಾರರು ರೋಮನ್ ಕ್ಯಾಥೊಲಿಕ್ ಮತಕ್ಕೆ ಸೇರಿದವರು. ತ್ಯಾಗರಾಜರ ಶಿಷ್ಯರಾದ ಉಮೈಯಾಳ್ಪುರಂ ಕೃಷ್ಣಭಾಗವತರು ಮತ್ತು ಸುಂದರ ಭಾಗವತರಿಂದ ಕೃತಿಗಳನ್ನು ಕಲಿತರು. ಸುಬ್ಬರಾಮ ದೀಕ್ಷಿತರು 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಉದ್ಗ್ರಂಥವನ್ನು ಬರೆಯಲು ಪ್ರೇರೇಪಿಸಿದರು. ಇವರು ಮದ್ರಾಸ್ ವಿಶ್ವವಿದ್ಯಾನಿಲಯದ ಎಂ. ಎ. ಪದವೀಧರರಾಗಿ ಸೆಕ್ರೆಟೇರಿಯಟ್‌ನಲ್ಲಿ ಸೂಪರಿಂಟೆಂಡೆಂಟ್ ಹುದ್ದೆಯಲ್ಲಿದ್ದರು. ತಮ್ಮ ವಿರಾಮ ಕಾಲ ಸಂಗೀತಾಭ್ಯಾಸ ಮಾಡಿ, ತಮ್ಮ ಹಣವನ್ನೆಲ್ಲಾ ಈ ಗ್ರಂಥದ ಪ್ರಕಟನೆಗಾಗಿ ವಿನಿಯೋಗಿಸಿದರು.

**ಚಿನ್ನ ಶಿಂಗರಾಚಾರ್ಯುಲು** (೨೦ನೆ ಶ)—ಇವರು ಶಿಂಗರಾಚಾರ್ಲು ಸಹೋದರರೆಂದು ಪ್ರಸಿದ್ಧರಾಗಿದ್ದವರಲ್ಲಿ ಕಿರಿಯರು. ತೆಲುಗು ಶ್ರೀವೈಷ್ಣವ-ಬ್ರಾಹ್ಮಣ ಪಂಗಡದವರಾಗಿದ್ದರು. ಪ್ರಸಿದ್ಧ ಗಾಯಕರಾಗಿದ್ದರು. ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಶ್ಯಾಮಾಶಾಸ್ತ್ರಿಗಳ ಮೊಮ್ಮಗ ಅಣ್ಣಾಸ್ವಾಮಿ ಶಾಸ್ತ್ರಿಗಳಲ್ಲಿ ಸಂಗೀತ ಶಿಕ್ಷಣ ಪಡೆದರು. ತಮ್ಮ ಹಿರಿಯ ಸಹೋದರರೊಡನೆ ದಕ್ಷಿಣ ಭಾರತದಲ್ಲೆಲ್ಲಾ ಸಂಚರಿಸಿ ಸ್ವರಲಿಪಿ ಸಹಿತ ಅನೇಕ ಕೃತಿಗಳನ್ನೂ, ಸಂಗೀತಶಾಸ್ತ್ರ ಮತ್ತು ಚರಿತ್ರೆಗೆ ಸಂಬಂಧಿಸಿದ ಹಲವು ಮೂಲ ಆಕರಗಳನ್ನೂ ಸಂಗ್ರಹಿಸಿದರು. ಈ ಸಹೋದರರಿಬ್ಬರೂ ಸಂಗೀತ ಶಾಸ್ತ್ರಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಗಾಯಕ ಪಾರಿಜಾತಂ, ಸಂಗೀತಕಲಾನಿಧಿ, ಸ್ವರಮಂಜರಿ, ಗಾಯಕ ಲೋಚನಂ, ಗಾಯಕಸಿದ್ಧಾಂಜನಂ, ಗಾನೇಂದು ಶೇಖರಂ, ಭಾಗವತಸಾರಾಮೃತಂ ಮತ್ತು ಸ್ವರಮಂಜರಿ ಎಂಬ ತೆಲುಗು ಗ್ರಂಥಗಳನ್ನು ಪ್ರಕಟಿಸಿದ್ದಾರೆ.

**ಚಿನ್ನಂ**—ಇದು ಕಹಳೆಯಂತಹ ಒಂದು ಸುಷಿರವಾದ್ಯ. ತಿರುಚಿನ್ನಂ ಮತ್ತು ನಾಗಚಿನ್ನಂ (ನಾಗಸ್ವರ) ಎಂಬುದು ಈ ವಾದ್ಯದ ಎರಡು ವೈವಿಧ್ಯಗಳು.

**ಚಿನ್ಮಯಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗಾ ಮ ಪ ಮ ದ ನಿ ಸ

ಅ: ಸ ನಿ ನಿ ಪ ಮ ಗಾ ರಿ ಸ

**ಚಿನ್ನಕೃಷ್ಣದಾಸ** (೧೯ನೆ ಶ.)—ಇವರು ಸ್ವರಜತಿಗಳು ಮತ್ತು ಕೃತಿಗಳನ್ನು ರಚಿಸಿರುವ ವಾಗ್ಗೇಯಕಾರರು. ಸ್ವನಾಮ ಮುದ್ರಕಾರರು. ಖಮಾಚ್‌ರಾಗದ 'ಸಾಂಬಶಿವಾಯನವೇ' ಎಂಬ ಸ್ವರಜತಿಯು ಸಂಗೀತಾಭ್ಯಾಸಿಗಳಿಗೆ ಚಿರಪರಿಚಯ ವಿರುವ ರಚನೆ. ಇವರು ರಚಿಸಿರುವ ಬಿಲಹರಿ ರಾಗದ (ರೂಪಕ ತಾಳ) 'ಎಂತೋ ಬ್ರಹ್ಮಾನಂದಮು' ಮತ್ತು 'ಅಂಬಾ ನಿನ್ನು ನೆರನಮ್ಮಿತಿ' ಎಂಬ ರಾಗಮಾಲಿಕೆ ಪ್ರಸಿದ್ಧವಾಗಿವೆ.

**ಚಿತ್ರನೃತ್ತ**—ಇದೊಂದು ವಿಶಿಷ್ಟ ಅಲಂಕಾರಮಯವಾದ ನರ್ತನ.

**ಚಿತ್ರವರಾಳಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ

ಅ: ಸ ನಿ ಮ ಗ ರಿ ಸ

**ಚಿತ್ರವೀಣಾ**—ಇದು ಏಳು ತಂತಿಗಳಿರುವ ಒಂದು ಬಗೆಯ ವೀಣೆ.

**ಚಿತ್ರವೇಳ**—ಇದು ರಾತ್ರಿಯ ಉತ್ತರಾರ್ಧದಲ್ಲಿ ಹಾಡಬಹುದಾದ ಒಂದು ರಾಗ.

**ಚಿತ್ರವೇಳಾವಳಿ**—ಅರಭಟ್ಟನಾವಲರ್ ವಿರಚಿತ 'ಭರತಶಾಸ್ತಿರಂ' ಎಂಬ ತಮಿಳು ಸಂಗೀತಶಾಸ್ತ್ರ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಚಿತ್ರಸೌರಭ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ಸ

**ಚಿತ್ರಸ್ವರೂಪಿ ಅಥವಾ ಚಿತ್ರಸ್ವರೂಪಿಣಿ**—ಈ ರಾಗವು ೨೬ನೆ ಮೇಳ ಕರ್ತ ಚಾರುಕೇಶಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಚಿತ್ರಿಣಿ**—ಶೃಂಗಾರಶಾಸ್ತ್ರ ರೀತ್ಯಾ ಸ್ತ್ರೀಯರನ್ನು ಪದ್ಮಿನಿ, ಚಿತ್ರಿಣಿ, ಶಂಖಿನಿ ಮತ್ತು ಹಸ್ತಿನಿ ಎಂಬ ನಾಲ್ಕು ಬಗೆಯ ವರ್ಗೀಕರಣ ಮಾಡಲಾಗಿದೆ. ಇದರಲ್ಲಿ ಚಿತ್ರಿಣಿ ಜಾತಿ ಸ್ತ್ರಿ ಎರಡನೆ ವರ್ಗದವಳು. ರತಿಮಂಜರಿ ಎಂಬ ಸಂಸ್ಕೃತ ಗ್ರಂಥದಲ್ಲಿ ಈ ಬಗೆಯ ವರ್ಗೀಕರಣವಿದೆ.

**ಚಿತ್ರಂಬಲ ಕುರವಂಜಿ**—ಕೆ. ಎನ್. ದಂಡಾಯುಧಪಾಣಿ ಪಿಳ್ಳೆ ರಚಿಸಿರುವ ನೂತನವಾದ ಒಂದು ತಮಿಳು ನೃತ್ಯರೂಪಕ.

**ಚಿಂತ್ಲಾ** –ಇದು ಆಕಾರದಲ್ಲಿ ದೊಡ್ಡದಾಗಿರುವ ತಾಳ. ಇದನ್ನು ಮಧ್ಯ ಪ್ರದೇಶದ ಬುಂದೇಲ್ ಖಂಡದಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ.

**ಚಿಂದು**—ಇದು ತಮಿಳಿನ ಒಂದು ಜಾನಪದ ಸಂಗೀತ ರಚನಾ ವಿಶೇಷ. ಇದರಲ್ಲಿ ಹಲವು ಪದ್ಯಗಳಿವೆ. ಇವಲ್ಲಿ ಕೆಲವು ಹಾಡುಗಳ ರಾಗಗಳು ಬಹಳ ಇಂಪಾಗಿವೆ. ಕಾವಡಿ ಚಿಂದು ಅಥವಾ ಯಾತ್ರಿಕರ ಹಾಡುಗಳು, ನೊಂಡಿ ಚಿಂದು, ಸುರುಲ್ ನೊಂಡಿ ಚಿಂದು, ವಂಡಿ ಚಿಂದು, ವಯ್ಯಿನಡೆ ಚಿಂದು ಮುಂತಾದುವು ಹಲವು ಬಗೆಯ ಚಿಂದುಗಳು.

**ಚಿಪ್ಲಾ ಅಥವಾ ಚಿಟಿಕೆ**—ಇದು ಹರಿದಾಸರು ಭಜನ ಗೋಷ್ಠಿಯಲ್ಲಿ ಉಪಯೋಗಿಸುವ ತಾಳವಾದ್ಯ ಬಲಗೈಯಲ್ಲಿ ತಂಬೂರಿ ಮೀಟುತ್ತಾ ಎಡಗೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳಿಗೆ ಈ ಚಿಟಿಕೆಗಳನ್ನು ಸಿಕ್ಕಿಸಿಕೊಂಡು ತಾಳಕ್ಕೆ ಸರಿಯಾಗಿ ಈ ವಾದ್ಯವನ್ನು ತಟ್ಟುತ್ತಾರೆ. ಹರಿಕಥೆ ಮಾಡುವವರು ಈ ವಾದ್ಯವನ್ನು ಹೆಚ್ಚಾಗಿ ಬಳಸುತ್ತಾರೆ. ಇದು ಸುಮಾರು ಆರು ಅಂಗುಲ ಉದ್ದ ಮತ್ತು ಒಂದೂವರೆ ಅಂಗುಲ ಅಗಲವಿರುವ ಎರಡು ಮರದ ತುಂಡುಗಳನ್ನು ಒಳಗೊಂಡಿದೆ. ಈ ತುಂಡುಗಳ ಒಂದು ಮುಖವು ಚಪ್ಪಟೆಯಾಗಿದ್ದು ಮತ್ತೊಂದು ಮುಖವು ಉಬ್ಬಾಗಿರುತ್ತದೆ. ಈ ಉಬ್ಬಿದ ಮುಖಗಳಿಗೆ ಕೈ ಬೆರಳುಗಳಿಗೆ ಸಿಕ್ಕಿಸಿಕೊಳ್ಳಲು ಅನುಕೂಲವಾಗುವಂತೆ ಎರಡು ಲೋಹದ ಪಟ್ಟಿ ಉಂಗುರಗಳಿವೆ ಈ ತುಂಡುಗಳ ತುದಿಯನ್ನು ಕೊರೆದು ಲೋಹದ ಬಿಲ್ಲೆಗಳನ್ನೂ ಗೆಜ್ಜೆಗಳನ್ನೂ ಅಳವಡಿಸಲಾಗಿದೆ ಬೆರಳುಗಳಿಗೆ ಇವುಗಳನ್ನು ಸಿಕ್ಕಿಸಿಕೊಂಡು ಚಪ್ಪಟೆಯಾಗಿರುವ ಮುಖಗಳನ್ನು ತಟ್ಟಿದಾಗ, ಲೋಹದ ಬಿಲ್ಲೆಗಳು ಮತ್ತು ಗೆಜ್ಜೆಗಳು ಇಂಪಾದ ಕಿಣಿಕಿಣಿ ನಾದ ಉಂಟು ಮಾಡುತ್ತವೆ. ಈ ತಾಳವಾದ್ಯ ವನ್ನು ತೇಗ ಅಥವಾ ಕರಿಮರದಿಂದ ಮಾಡಿರುತ್ತಾರೆ.

**ಚಿಲಕಲಪುಡಿ ವೆಂಕಟೇಶ್ವರಶರ್ಮ**—ಇವರು ಆಂಧ್ರ ಪ್ರದೇಶದ ಶ್ರೀಕಾಕುಲಂನಲ್ಲಿ ೧೮೯೭ರಲ್ಲಿ ಜನಿಸಿದರು. ಆಂಧ್ರ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಮತ್ತು ತೆಲುಗು ಭಾಷೆಗಳ ಅಧ್ಯಯನ ಮಾಡಿ ಉಭಯ ಭಾಷಾ ಪ್ರವೀಣ ರಾದರು. ಮೂವತ್ತು ವರ್ಷಗಳ ಕಾಲ ತೆಲುಗು ಪಂಡಿತರಾಗಿ ಸೇವೆಸಲ್ಲಿಸಿದರು. ಪಾರುಪಲ್ಲಿ ರಾಮಕೃಷ್ಣಯ್ಯ ಪಂತುಲುರವರಲ್ಲಿ ಸಂಗೀತ ಶಿಕ್ಷಣ ಪಡೆದು ವಿದ್ವಾಂಸರಾಗಿ ೪೦ ವರ್ಷಗಳ ಕಚೇರಿ ಗಾಯನ ಮಾಡಿದರು. ಸಂಸ್ಕೃತದ ಸಂಗೀತ ಶಾಸ್ತ್ರಗ್ರಂಥ ಗಳನ್ನು ತೆಲುಗಿಗೆ ಭಾಷಾಂತರಿಸಿದರು ಮುತ್ತುಸ್ವಾಮಿ ದೀಕ್ಷಿತರ ಕೃತಿಗಳ ಸಂಕಲನ ಮಾಡಿದ್ದಾರೆ ಆಂಧ್ರ ಪ್ರದೇಶದ ಸಂಗೀತ ನಾಟಕ ಅಕಾಡಮಿಯ ವಿಜಯವಾಡ ಕೇಂದ್ರದ ಗುರುಕುಲದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು.

**ಚಿಂತನಪಲ್ಲಿ ಕೃಷ್ಣಮೂರ್ತಿ** (೧೯೨೯)— ಕರ್ಣಾಟಕ ಸಂಗೀತ ಕ್ಷೇತ್ರ ದಲ್ಲಿ ಪ್ರಸಿದ್ಧರಾಗಿದ್ದ ವೆಂಕಟರಾಯರ ದೌಹಿತ್ರರಾಗಿ ಕೃಷ್ಣಮೂರ್ತಿ ೧೯೨೯ರಲ್ಲಿ ಕೋಲಾರ ಜಿಲ್ಲೆಯ ಗುಡಿಬಂಡೆಯಲ್ಲಿ ಜನಿಸಿದರು. ತಾತನ ಬಳಿಯಲ್ಲಿ ಬೆಳೆದು

ಸಂಗೀತ ಶಿಕ್ಷಣ ಪಡೆದು ಹತ್ತನೆ ವಯಸ್ಸಿನಲ್ಲಿ ಬೆಂಗಳೂರಿಗೆ ಬಂದು ಸೋದರಮಾವ ರಾಮಚಂದ್ರರಾಯರಲ್ಲಿ ಶಿಕ್ಷಣವನ್ನು ಮುಂದುವರಿಸಿ ಪಾಂಡಿತ್ಯವನ್ನು ಪಡೆದರು. ಸಂಗೀತ ಕ್ಷೇತ್ರದ ಹಿರಿಯ ವಿದ್ವಾಂಸರಾದ ಅರಿಯಾ ಕುಡಿ, ಮಧುರೆ ಮಣಿ, ಆಲತ್ತೂರು ಸಹೋದರರು ಮುಂತಾದವರ ಗಾಯನದಿಂದ ಪ್ರಭಾವಿತರಾದರು. ಗಂಭೀರವಾದ ಶಾರೀರ ಸಂಪತ್ತು ಇರುವ ಇತರ ಸಂಪ್ರದಾಯ ಬದ್ಧವಾದ ಲಯ ಶುದ್ಧತೆಯಿಂದ ಕೂಡಿರುವ ಗಾಯನವು ಇವರದು.

**ಚಿಂತನಪಲ್ಲಿ ರಾಮಚಂದ್ರರಾಯರು**—ಇವರು ಕರ್ಣಾಟಕದ ಸಂಗೀತ ಗಾರರ ಮನೆತನಕ್ಕೆ ಸೇರಿದ ಪ್ರಸಿದ್ಧ ಸಂಗೀತ ವಿದ್ವಾಂಸರು. ರಾಮಚಂದ್ರರಾಯರ ತಂದೆ ಸಂಗೀತರತ್ನ ಚಿಂತನಪಲ್ಲಿ ವೆಂಕಟರಾಯರು. ವಿದ್ವಾನ್ ವೆಂಕಟಾಚಲಯ್ಯ ನವರು ರಾಯರ ಚಿಕ್ಕಪ್ಪ. ಏಳನೆ ವಯಸ್ಸಿನಲ್ಲಿ ಚಿಕ್ಕಪ್ಪನವರಲ್ಲಿ ಸಂಗೀತ ಶಿಕ್ಷಣ ಆರಂಭವಾಯಿತು. ತರುವಾಯ ತಂದೆ ವೆಂಕಟರಾಯರು ಮತ್ತು ಸೋಮೇಶ್ವರ ಭಾಗವತರಲ್ಲೂ ಶಿಕ್ಷಣ ಪಡೆದು ಅಣ್ಣಾಮಲೆ ಸಂಗೀತ ಕಾಲೇಜಿನಲ್ಲಿ ಪೊನ್ನಯ್ಯ ಪಿಳ್ಳೆಯವರಲ್ಲೂ ಶಿಕ್ಷಣ ಪಡೆದು ವಿದ್ವಾಂಸರಾದರು. ೧೯೩೪ರಲ್ಲಿ ತಮ್ಮ ೧೮ನೆ ವಯಸ್ಸಿನಲ್ಲಿ ಕಚೇರಿ ಗಾಯನ ಆರಂಭಿಸಿದರು ಭಾರತಾದ್ಯಂತ ಪ್ರವಾಸಮಾಡಿ ಸಂಗೀತ ಕಚೇರಿ ಮಾಡಿ ಪ್ರಸಿದ್ಧರಾಗಿದ್ದಾರೆ ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಹಲವು ಮಠಾಧಿಪತಿಗಳಿಂದ ಸನ್ಮಾನ ಪಡೆದಿದ್ದಾರೆ. ೧೯೬೯ರಲ್ಲಿ ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ಲಭಿಸಿತು. ಉತ್ತಮ ಶಾರೀರ, ಮನೋಧರ್ಮ, ಕಷ್ಟವಾದ ಪಲ್ಲವಿಗಳನ್ನು ಲೀಲಾಜಾಲವಾಗಿ ಹಾಡುವುದು, ಶುದ್ಧ ಸಂಪ್ರದಾಯ, ಮೇಲ್ಮಟ್ಟದ ಕಲಾಭಿಜ್ಞತೆ ಇವರ ವೈಶಿಷ್ಟ್ಯ.

**ಚಿಂತನಪಲ್ಲಿ ವೆಂಕಟರಾಯರು** (೧೮೭೫-೧೯೬೯)—ವೆಂಕಟರಾಯರು ಬಿಜಾಪುರದ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಪ್ರಸಿದ್ಧಿ ಪಡೆದಿದ್ದ ಸಂಗೀತ ವಿದ್ವಾಂಸರ ಮನೆತನಕ್ಕೆ ಸೇರಿದವರು. ೧೮೭೫ರಲ್ಲಿ ಕರ್ಣಾಟಕದ ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲ್ಲೂಕಿನ ಹುಣಸನ ಹಳ್ಳಿಯಲ್ಲಿ ಜನ್ಮತಾಳಿದರು ತಮ್ಮ ಆರನೆ ವಯಸ್ಸಿನಲ್ಲಿ ಸಂಗೀತ ಶಿಕ್ಷಣ ಪಡೆಯಲು ಆರಂಭಿಸಿ, ಚಿಕ್ಕಪ್ಪ ಭಾಸ್ಕರರಾವ್ ಮತ್ತು ವೆಂಕಟದಾಸಪ್ಪನವರ ಸಂಗೀತದಿಂದ ಪ್ರಭಾವಿತರಾದರು ನಂತರ ಕರೂರು ರಾಮಸ್ವಾಮಿ, ಪಕ್ಕಹನುಮಂತಾಚಾರ್, ನೇಯ್ಯಾರ ಪಟ್ಟಿಪಲ್ಲವಿ ಶೇಷಯ್ಯರ್, ಹಾನಗಲ್ ಚಿದಂಬರಯ್ಯ ಇವರುಗಳ ಶಿಷ್ಯರಾಗಿ ಪ್ರೌಢ ಶಿಕ್ಷಣ ಪಡೆದರು ಚಿಕ್ಕಂದಿನಲ್ಲೇ ಸಂಗೀತ ಕಚೇರಿಗಳನ್ನು ಮಾಡಲು ಮೊದಲಿಟ್ಟರು. ಸಂಡೂರು, ಗದ್ವಾಲ್, ವಿಶಾಖ ಪಟ್ಟಣ ಮುಂತಾದ ಕಡೆಗಳಲ್ಲಿ ಹಾಡಿ ಸನ್ಮಾನಿತರಾದರು. ಮೈಸೂರು ಮತ್ತು ಬರೋಡಾ ರಾಜಾಸ್ಥಾನಗಳಲ್ಲಿ ಹಾಡಿ ಕೀರ್ತಿಶಾಲಿಗಳಾದರು. ಮೈಸೂರು ದರ್ಬಾರಿನಲ್ಲಿ ಸಂಗೀತರತ್ನ ಎಂಬ ಬಿರುದು ದೊರಕಿತು. ಹೀಗೆಯೇ ಇವರಿಗೆ ಬಂದ ಬಿರುದುಗಳು ಹಲವು. ರಾಯರು ಸಂಗೀತದಲ್ಲಿ ಮಹಾವಿದ್ವಾಂಸರ

ಪಂಕ್ತಿಗೆ ಸೇರಿದವರು. ಅವರ ಶಾಸ್ತ್ರ ಸಂಸ್ಕಾರ ಬಹು ದೊಡ್ಡದು. ಅವರ ಸಂಗೀತವು ಮನಃ ಪರಿಪಾಕದ್ದು. ಹೃದಯದಿಂದ ಬಂದದ್ದು. ಅವರ ಶಾರೀರದಲ್ಲಿ ಅತಿಮನೋಹರವಾದ ಪಲುಕುಬಡಿಯಿತ್ತು. ಅವರ ಸಂಗೀತ ಸ್ವಾನುಭವದಿಂದ ಸಂಗೀತ ಪರವಶತೆಯಾಗುವಂತಹುದು.

**ಚಿಂತಾಮಣಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಪ ಮ ಪ ದ ನಿ ಸ

ಅ: ಸ ಪ ದ ಪ ಮ ಗ ರಿ ಸ

ಭಾಷಾಂಗರಾಗ. ರಿಷಭ, ಮಧ್ಯಮ, ಧೈವತ ಮತ್ತು ನಿಷಾದವು ರಾಗ ಛಾಯಾ ಸ್ವರಗಳು. ಪರಿಗರಿ ಎಂಬುದು ವಿಶೇಷ ಪ್ರಯೋಗ. ಕರುಣರಸ ಪ್ರಧಾನ ರಾಗ ಹಾಗೂ ಗಮಕವರಿಕರಕ್ತಿರಾಗ. ರಾತ್ರಿ ವೇಳೆಯು ಇದರ ಗಾನ ಕಾಲ. ಶ್ಯಾಮಾಶಾಸ್ತ್ರಿಗಳು ರಚಿಸಿರುವ 'ದೇವಿ ಬ್ರೋವ ಸಮಯಮಿದೇ' ಎಂಬ ಕೃತಿಯು ಈ ರಾಗದ ಸುಪ್ರಸಿದ್ಧ ಕೃತಿ.

**ಚಿಂತಾರಮಣಿ**—ಈ ರಾಗವು ೫೨ನೆ ಮೇಳಕರ್ತ ರಾಮಕ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ

ಅ: ದ ಪ ಮ ಪ ಗ ರಿ ಸ ನಿ

**ಚಿರಂಟಿ**—ಈ ರಾಗವು ೭ ನೆ ಮೇಳಕರ್ತ ಸೇನಾವತಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಚಿಹ್ನ**—(೧) ಇದು ಭರತನಾಟ್ಯದ ಗಲ್ಲದ ಭೇದಗಳಲ್ಲಿ ಒಂದು ವಿಧ. ವ್ಯಾಧಿ, ಭಯ, ರೋದನ, ಮರಣ, ವ್ಯಾಯಾಮ ಇತ್ಯಾದಿಗಳನ್ನು ಸೂಚಿಸಲು ತುಟಿಗಳನ್ನು ಗಟ್ಟಿಯಾಗಿ ಒತ್ತಿ ಹಿಡಿಯುವುದು (೨) ಇದು ಭರತ ನಾಟ್ಯದಲ್ಲಿ ಐದು ವಿಧವಾದ ಕಟೀ ಭೇದಗಳಲ್ಲಿ ಒಂದು ಬಗೆ. ಕಟೀಮಧ್ಯವು ವಲಿತವಾದಲ್ಲಿ ಅದು ಚಿಹ್ನೆ.

**ಚಿಹ್ನೆ**—ಭರತನಾಟ್ಯ ಹನ್ನೆರಡು ಹಸ್ತಪ್ರಾಣಗಳಲ್ಲಿ ಇದೊಂದು ಬಗೆ. ನಾಟ್ಯಪ್ರದರ್ಶನದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷ ವಸ್ತುಗಳ ಸ್ಥಾವರ ಜಂಗಮತ್ವವನ್ನು ತಿಳಿಸುವ ಚಿಹ್ನೆಗಳು ಎಂಟು. ವ್ಯಕ್ತಿಯ ಆಕಾರವನ್ನು ತೋರಿಸುವುದು, ಮುಖವನ್ನು ತೋರಿಸುವುದು, ಅವುಗಳಿರುವ ಸ್ಥಳಗಳನ್ನು ತೋರಿಸುವುದು. ವ್ಯಕ್ತಿಯ ಧ್ವಜ ಲಾಂಛನಗಳನ್ನು ಸೂಚಿಸುವುದು, ಅವನಿಂದ ಆಗುವ ಪ್ರಯೋಜನ, ಅವನ ಪ್ರಭಾವ ವ್ಯಾಪ್ತಿಗಳನ್ನು ಪ್ರದರ್ಶಿಸುವುದು, ಅವನ ಚೇಷ್ಟೆಗಳನ್ನು ಸೂಚಿಸುವುದು ಮುಂತಾದ ಎಂಟು ಲಕ್ಷಣಗಳ ಹಸ್ತಕ್ಕೆ ಚಿಹ್ನೆ ಎಂದು ಹೆಸರು.

**ಚುಕ್ಕ**—ಇದು ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಸುಷಿರವಾದ್ಯ.

**ಚುಕ್ಕಿತ**—ಇದು ಭರತನಾಟ್ಯದ ಏಳು ಬಗೆಯ ಗಲ್ಲದ ಭೇದಗಳಲ್ಲಿ ಒಂದು ಬಗೆ. ತುಟಿಗಳನ್ನು ದೊಡ್ಡದಾಗಿ ಬಿಡಿಸಿ ಹಿಡಿದಾಗ ಉಂಟಾಗುವ ಚಿಬುಕಪರ್ವ.

**ಚುತುರಂಗಿಣಿ**—(೧) ಈ ರಾಗವು ೭೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ನಿ ಸ

ಅ: ನಿ ದ ನಿ ಪ ಗ ಮ ಗ ರಿ ಸ

(೨) ಇದೇ ಹೆಸರಿನ ರಾಗವು ಅಸಂಪೂರ್ಣ ಮೇಳ ಪದ್ಧತಿಯ ೭೬ನೆ ಮೇಳ ಕರ್ತವಾಗಿದೆ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ಚ್ಯುತ**—ಚ್ಯುತವೆಂದರೆ ಜಾರಿದ ಎಂದರ್ಥ. ಸ್ವರ ಮೇಳದ ಒಂದು ಸ್ವರವು ಅದರ ಸ್ಥಾನಕ್ಕಿಂತ ಸ್ವಲ್ಪ ತಗ್ಗಿನ ಶ್ರುತಿಯಲ್ಲಿ ಬಂದರೆ ಅದು ಚ್ಯುತ ಸ್ವರವಾಗುತ್ತದೆ. ಶ್ರುತಿಗಳು ಶುದ್ಧ, ಚ್ಯುತ ಮತ್ತು ತೀವ್ರ ಎಂಬ ಮೂರು ವಿಧ. ಶುದ್ಧವೆಂದರೆ ಮೇಳದಲ್ಲಿ ಮೂಲಸ್ಥಾನದಲ್ಲಿರುವುದು. ಚ್ಯುತವೆಂದರೆ ಸ್ವಲ್ಪ ತಗ್ಗಾಗಿರುವುದು. ತೀವ್ರವೆಂದರೆ ಸ್ವಲ್ಪ ಮೇಲಿನ ಸ್ಥಾನದಲ್ಲಿರುವುದು.

**ಚ್ಯುತ ಪಂಚಮ—ಚ್ಯುತ ಪಂಚಮ ಮಧ್ಯಮ**—೨೨ ಶ್ರುತಿ ಪದ್ಧತಿಯಲ್ಲಿ ಪಂಚಮಕ್ಕಿಂತ ತಗ್ಗಿನಲ್ಲಿ ಬರುವ ಸ್ವರ. ಪಂಚಮವು ಅವಿಕೃತ ಸ್ವರವೆಂದು ಪರಿಗಣಿಸಲ್ಪಟ್ಟ ನಂತರ ಚ್ಯುತ ಪಂಚಮವು ಪ್ರತಿ ಮಧ್ಯಮದ ತೀವ್ರ ಸ್ವರೂಪವನ್ನು ಸೂಚಿಸುತ್ತದೆ ಎಂದು ಪರಿಗಣಿಸಲಾಗಿದೆ.

**ಚ್ಯುತ ಮಧ್ಯಮ—ಚ್ಯುತ ಮಧ್ಯಮ ಗಾಂಧಾರ**—೨೨ ಶ್ರುತಿಗಳಲ್ಲಿ ಅಂತರ ಗಾಂಧಾರ ಮತ್ತು ಶುದ್ಧ ಮಧ್ಯಮ ಇವುಗಳ ಮಧ್ಯೆ ಇರುವ ಶ್ರುತಿ. ಇದು ದೇವ ಗಾಂಧಾರಿ ರಾಗದ ಮಾ, ಗರೀ ಎಂಬ ಸ್ವರಗುಚ್ಛದಲ್ಲಿ ಬರುತ್ತದೆ.

**ಚ್ಯುತಷಡ್ಜ—ಚ್ಯುತಷಡ್ಜ ನಿಷಾದ**—ಇದು ಕಾಕಲಿ ನಿಷಾದ ಮತ್ತು ತಾರ ಷಡ್ಜದ ಮಧ್ಯೆ ಬರುವ ಸ್ವರ. ಇದು ಕುರಂಜಿ ರಾಗದಲ್ಲಿ ಬರುತ್ತದೆ.

**ಚೂತಮಂಜರಿ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಚೂತಾವಳಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಚೂರ್ಣಿಕ**—ಸರಳವಾದ ನಡೆಯಿರುವ ಒಂದು ಬಗೆಯ ಗದ್ಯ ರಚನೆ. ಇದನ್ನು ದೇವಗಾಂಧಾರಿ ರಾಗದಲ್ಲಿ ಹಾಡುತ್ತಾರೆ. ತ್ಯಾಗರಾಜ ವಿರಚಿತ ಪ್ರಹ್ಲಾದ ಭಕ್ತಿ ವಿಜಯವೆಂಬ ಗೇಯ ರೂಪಕದಲ್ಲಿ ಬರುವ 'ಜಯತು ಜಯತು' ಎಂಬ ಚೂರ್ಣಿಕೆಯು ಪ್ರಸಿದ್ಧವಾಗಿದೆ.

**ಚೂರ್ಣಿಕ ವಿನೋದಿನಿ**—ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಚೂಡಾಮಣಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ಪ ನಿ ದ ಮ ಗ ಸ

**ಚೆನ್ನಕೇಶವಯ್ಯ, ಎನ್.** (೧೮೯೫)—ಚೆನ್ನಕೇಶವಯ್ಯನವರು ಕರ್ಣಾಟಕದ ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ನಾಟನಹಳ್ಳಿಯ ಸಂಗೀತದ ಸಣ್ಣಪ್ಪನವರ ಪುತ್ರರಾಗಿ ಜನಿಸಿದರು. ಬಾಲ್ಯದಲ್ಲಿ ಸಂಗೀತ ಶಿಕ್ಷಣವು ಆರಂಭವಾಯಿತು. ನಂತರ ಮೈಸೂರಿಗೆ ಹೋಗಿ ವಿದ್ವಾನ್ ಶಿವರಾಮಯ್ಯನವರಲ್ಲೂ, ಮೈಸೂರು ವಾಸುದೇವಾಚಾರ್ಯರಲ್ಲೂ ಪ್ರೌಢ ಶಿಕ್ಷಣ ಪಡೆದು ಆಚಾರ್ಯರ ಅಚ್ಚುಮೆಚ್ಚಿನ ಶಿಷ್ಯರಾದರು. ಕೃತಿಗಳಿಗೆ ಸ್ವರಸಂಯೋಜನೆ ಮಾಡುವ ಕಲೆಯಲ್ಲಿ ಪರಿಣತರಾಗಿ ೧೯೩೮ರಲ್ಲಿ ವಾಸುದೇವ ಕೀರ್ತನ ಮಂಜರಿ ಎಂಬ ಕೃತಿಗಳ ಗ್ರಂಥವನ್ನು ಪ್ರಕಟಿಸುವುದರಲ್ಲಿ ಗುರುವಿಗೆ ನೆರವಾದರು. ೧೯೪೪ರಲ್ಲಿ ಮೈಸೂರು ಆಸ್ಥಾನ ವಿದ್ವಾಂಸರಾಗಿ ನೇಮಕವಾದರು. ಮೈಸೂರಿನ ಸಂಗೀತ ಕಲಾಭಿವರ್ಧಿನಿ ಸಭೆಯು ಮೈಸೂರು ಸದಾಶಿವರಾಯರ ಕೃತಿಗಳ ಗ್ರಂಥವನ್ನು ಪ್ರಕಟಿಸುವುದರಲ್ಲಿ ನೆರವಾದರು. ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ತಜ್ಞರ ಸಮಿತಿಯ ಸದಸ್ಯರಾಗಿದ್ದರು. ರಾಜ್ಯದ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸರ್ಕಾರದ ಪ್ರಶಸ್ತಿಯನ್ನು ಪಡೆದರು. ೧೯೬೩ರಲ್ಲಿ ಗಾನಕಲಾಸಿಂಧು, ೧೯೬೭ರಲ್ಲಿ ಸಂಗೀತ ವಿದ್ಯಾವಾರಿಧಿ, ಸಂಗೀತಕಲಾರತ್ನ ಇತ್ಯಾದಿ ಬಿರುದುಗಳೆಲ್ಲಾ ಲಭಿಸಿವೆ. ಇವರು ಕೆಲವು ಕಾಲ ಮೈಸೂರಿನ ಶಾರದಾ ವಿಲಾಸ ಹೈಸ್ಕೂಲಿನಲ್ಲಿ ಪಂಡಿತರಾಗಿದ್ದರು. ದಾಸಕೂಟದ ಹರಿದಾಸರ ಕೃತಿಗಳನ್ನು ಸ್ವರಪಡಿಸಿ ಹರಿದಾಸಕೀರ್ತನ ಸುಧಾಸಾಗರ ಎಂಬ ಮೂರು ಸಂಪುಟಗಳ ಗ್ರಂಥ ಮಾಲೆಯನ್ನು, ಪಲ್ಲವಿಗಳನ್ನು ಕುರಿತು ಒಂದು ಗ್ರಂಥವನ್ನೂ ಪ್ರಕಟಿಸಿದ್ದಾರೆ. ಮೈಸೂರು ಜಯಚಾಮರಾಜ ಒಡೆಯರ ೪೪ ಕೃತಿಗಳನ್ನು ಸ್ವರಪಡಿಸುವುದರಲ್ಲಿ ನೆರವಾಗಿದ್ದಾರೆ. ಹಲವು ಸ್ವಂತ ಕನ್ನಡದ ರಚನೆಗಳನ್ನು ಮಾಡಿದ್ದಾರೆ. ಗಾಯನದಲ್ಲಿ ಸಂಪ್ರದಾಯಬದ್ಧತೆ, ನಾದಪುಷ್ಟಿ ಮತ್ತು ಗಾಂಭೀರ್ಯವಿರುವ ಹಿರಿಯ ಘನವಿದ್ವಾಂಸರು.

**ಚೆನ್ನಮ್ಮ, ಜಿ** (೧೯೧೩)—ಇವರು ಕರ್ಣಾಟಕದ ಒಬ್ಬ ಹಿರಿಯ ಸಂಗೀತ ವಿದುಷಿ. ಜಿ. ಎಂ. ಗುರುಬಸವಯ್ಯನವರ ಪುತ್ರಿಯಾಗಿ ತುಮಕೂರಿನಲ್ಲಿ ಜನಿಸಿದರು. ಬಾಲ್ಯದಲ್ಲೇ ಅಂಕುರಿಸಿದ್ದ ಸಂಗೀತದ ಅಭಿರುಚಿಯನ್ನು ಬೆಳೆಸಿಕೊಂಡು ೧೯೩೦ರ ವೇಳೆಗೆ ಬೆಂಗಳೂರಿಗೆ ಬಂದು ಸಂಗೀತ ಕಲಾನಿಧಿ ಟೈಗರ್ ವರದಾಚಾರ್ಯರ ಸಹೋದರ ವೀಣಾ ಕೃಷ್ಣಮಾಚಾರ್ಯರ ಶಿಷ್ಯೆಯಾದರು. ೧೯೩೭ ರಿಂದ ೧೯೩೯ರ ವರೆಗೆ ಚಿದಂಬರದ ಅಣ್ಣಾಮಲೆ ವಿಶ್ವವಿದ್ಯಾನಿಲಯದಲ್ಲಿ ಪೊನ್ನಯ್ಯ ಪಿಳ್ಳೆಯವರಲ್ಲಿ ಶಿಕ್ಷಣ ಪಡೆದರು ನಂತರ ಬೊಂಬಾಯಿನ ದಕ್ಷಿಣ ಭಾರತ ಸಂಗೀತ ಅಕಾಡೆಮಿಯಲ್ಲಿ ಕರ್ಣಾಟಕ ಸಂಗೀತದ ನಿರ್ದೇಶಕರಾಗಿದ್ದರು. ೧೯೪೦ರಲ್ಲಿ ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಸಂಗೀತದ ಅಧ್ಯಾಪಕಿಯಾಗಿ ೧೯೭೯ರ ವರೆಗೆ ಸೇವೆ ಸಲ್ಲಿಸಿದರು. ೧೯೪೩ರಲ್ಲಿ ಮದ್ರಾಸಿನಲ್ಲಿ ನಡೆದ ಅಖಿಲ ಭಾರತ ತಮಿಳು ಸಮ್ಮೇಳನದಲ್ಲಿ ವೀಣಾ ಕೃಷ್ಣಮಾಚಾರ್ಯರ ಕೃತಿಗಳನ್ನು ಹಾಡಿ ಬಹುಮಾನ ಪಡೆದರು ೧೯೩೬ ರಿಂದ ಮೈಸೂರು ರಾಜ್ಯದ ಸಲಹಾಸಮಿತಿ, ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳ, ಅಧ್ಯಯನ ಮಂಡಲಿ ಸದಸ್ಯರಾಗಿ ಸೇವೆ ಸಲ್ಲಿಸಿದರು. ೧೯೪೦ರಲ್ಲಿ ಗಾನ ಮಂದಿರವೆಂಬ ಸಂಗೀತ ವಿದ್ಯಾಲಯವನ್ನು ನಡೆಸಿಕೊಂಡು ಬಂದಿದ್ದಾರೆ. ಇಲ್ಲಿ ಹನ್ನೊಂದು ಮಂದಿ ವಿದ್ಯಾರ್ಥಿನಿಯರಿಗೆ ವೇತನವನ್ನು ಕೊಡುವುದಲ್ಲದೆ ೪೦ ಮಂದಿ ವಿದ್ಯಾರ್ಥಿನಿಯರಿಗೆ ಉಚಿತವಾಗಿ ಶಿಕ್ಷಣ ನೀಡುತ್ತಾರೆ. ಕರ್ಣಾಟಕ ರಾಜ್ಯದಲ್ಲಿ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಮಹಿಳೆಯರಿಗೆ ಸಂಗೀತ ಶಿಕ್ಷಣ ದೊರಕಿಸಿ ಕೊಡುವುದರಲ್ಲಿ ಇವರ ಪಾತ್ರ ಹಿರಿದು. ಇವರ ಹಾಡುಗಾರಿಕೆಯು ಭಾವಪೂರಿತವಾದ ನೆಮ್ಮದಿಯಿಂದ ಕೂಡಿದ ಗಾಯನ.

**ಚೆಯ್ಯೂರು**—ಇದು ತಮಿಳುನಾಡಿನ ಚೆಂಗಲ್ಪೇಟೆ ಜಿಲ್ಲೆಯಲ್ಲಿರುವ ೧೯ನೆ ಶತಮಾನದಲ್ಲಿ ಪ್ರಸಿದ್ಧವಾಗಿದ್ದ ಸಂಗೀತ ಮತ್ತು ನೃತ್ಯಕಲಾ ಕೇಂದ್ರ. ಪುರಾತನ ಕಾಲದ ಕಾಶೀರಾಮೇಶ್ವರದ ತೀರ್ಥಯಾತ್ರೆ ಮಾರ್ಗದಲ್ಲಿ ಚೋಳಮಂಡಲ ತೀರದಲ್ಲಿದೆ. ಇಲ್ಲಿಯ ದೇವಾಲಯವು ಸರ್ವವಾದ್ಯಗಳ ನುಡಿಸುವಿಕೆಗೆ ಪ್ರಸಿದ್ಧವಾಗಿದೆ. ದೇವರನ್ನು ಗೀತ, ವಾದ್ಯ ಮತ್ತು ನೃತ್ಯ ಸೇವೆಯ ಮೂಲಕ ಪೂಜಿಸುತ್ತಾರೆ. ಸರ್ವವಾದ್ಯ ಸೇವೆಯು ಮನೋರಂಜನೆ ಮತ್ತು ಶಿಕ್ಷಣದ ಜೊತೆಗೆ ಭಕ್ತಿಯ ಅನುಭವವನ್ನು ಪಡೆಯಲು ಸಹಕಾರಿಯಾಗಿದೆ

ಇಲ್ಲಿ ಸರ್ವವಾದ್ಯವನ್ನು ಒಂದು ವ್ಯವಸ್ಥಿತವಾದ ಕ್ರಮದಲ್ಲಿ ನುಡಿಸುತ್ತಾರೆ. ಮೊದಲು ವಾದ್ಯಗಳನ್ನು ತನಿಯಾಗಿ ನುಡಿಸಿ ನಂತರ ಒಟ್ಟಿಗೆ ನುಡಿಸುತ್ತಾರೆ. ಈ ವಾದ್ಯ ಸೇವೆಯು ದೇವರಿಗೆ ಷೋಡಶೋಪಚಾರ ಪೂಜೆಯಾದ ನಂತರ ಮೊದಲಾಗುತ್ತದೆ. ಪೂಜಾರಿಯು ಅವತಾರಿಕಾ ಶ್ಲೋಕವನ್ನು ಹೇಳಿದ ನಂತರ ಈ ಕಾರ್ಯಕ್ರಮವು ಆರಂಭವಾಗುತ್ತದೆ. ಸರ್ವವಾದ್ಯ ಮೇಳದಲ್ಲಿ ನುಡಿಸುವ ವಾದ್ಯಗಳೆಂದರೆ—ಬ್ರಹ್ಮತಾಳ, ನಂದಿಕೇಶ್ವರವಾದ್ಯ ಅಥವಾ ಶುದ್ಧಮದ್ದಳೆ, ಟಕೋರವಾದ್ಯ,

ಭೇರಿ, ಮಲ್ಲಾರಿ, ಝುಲ್ಲಾರಿ, ಢಂಕ, ನಗಾರಿ, ಡಮಾರು, ರಾಜವಾದ್ಯ, ಮುರಳಿ, ನಾಗಸ್ವರ, ಮುಖವೀಣಾ, ಭುಜಂಗಸ್ವರ, ತಿರುಚಿನ್ನ, ಶಂಖ, ನವುರಿ, ಬಾಂಕಾ, ವೀಣಾ ಮತ್ತು ಪಿಟೀಲು.

ನೃತ್ತ, ನಾಟ್ಯ, ಭುಜಂಗನಾಟ್ಯ, ವೀಣಾನಾಟ್ಯ ಎಂಬ ಅಂಶಗಳುಳ್ಳ ನಾಟ್ಯ ಸೇವೆಯನ್ನೂ, ಗಾಯನದಲ್ಲಿ ಧ್ಯಾನಶ್ಲೋಕಗಳು, ತೇವಾರಂ ಹಾಡುಗಳು, ತಿರುವಾಚಕಂ, ತಿರುವಿಶೈಪ್ಪಾ, ತಿರುಪ್ಪಲ್ಲಾಂಡ್, ತಿರುಪ್ಪುಗಳ್, ಗೀತ, ವರ್ಣ, ಪದ, ಕೀರ್ತನೆ, ಅಷ್ಟಪದಿ, ಧವಳ, ಪರಣಿ, ವೆಂಬಾ, ಕಲಿತ್ತುರೈ, ಕೊಚ್ಚಗಂ, ಕಲಿಪ್ಪಾ, ತಾಳಿಶೈ, ವಿರುತ್ತಂ. ಅಮ್ಮಾನೈ, ವಣ್ಣಂ, ಉಲಾ, ವೆಣ್ಣಿಲಾ ಕುರವಂಜಿ, ಪ್ರಬಂಧ, ಊಂಜಲ್, ಲಾಲಿ, ಎಚ್ಚರಿಕೆ ಮತ್ತು ಶೋಭನಂ ಮುಂತಾದುವುಗಳನ್ನು ಹಾಡುತ್ತಾರೆ ಇದು ಮೂರು ಗಂಟೆಗಳ ಕಾಲದ ಕಾರ್ಯಕ್ರಮ. ಸಂಗೀತ ಶಿಲ್ಪದ ದೃಷ್ಟಿಯಿಂದ ಈ ಊರಿನ ಕುಮಾರಸ್ವಾಮಿ ದೇವಾಲಯವು ಮುಖ್ಯವಾದುದು. ಒಬ್ಬ ಯಕ್ಷಿ ಅಥವಾ ಕಿನ್ನರಿಯು ಕೈಯಲ್ಲಿ ವೀಣೆ ಹಿಡಿದಿರುವ ಶಿಲ್ಪಾಕೃತಿ ಒಂದು ಇದೆ

**ಚೆಯ್ಯೂರು ಚೆಂಗಲ್ವರಾಯ ಶಾಸ್ತ್ರಿ** (೧೮೧೦–೧೯೦೦)— ತ್ಯಾಗರಾಜರ ನಂತರ ವಾಗ್ಗೇಯಕಾರರಲ್ಲಿ ಶಾಸ್ತ್ರಿಗಳು ಪ್ರತಿಭಾವಂತರಾದ ವಿದ್ವಾಂಸರಾಗಿದ್ದರು. ಇವರು ವೆಲನಾಡು ತೆಲುಗು ಬ್ರಾಹ್ಮಣ ಮಾರುಪೆದ್ದಿ ಮನೆತನದಲ್ಲಿ ತಮಿಳುನಾಡಿನ ಚೆಂಗಲ್ಪೇಟೆ ಜಿಲ್ಲೆಯ ಮರಕಣಂ ತಾಲ್ಲೂಕಿನ ಒಂದು ಗ್ರಾಮದಲ್ಲಿ ೧೮೧೦ರಲ್ಲಿ ಜನಿಸಿದರು ತೆಲುಗು, ಸಂಸ್ಕೃತ, ಸಂಗೀತ ಭರತನಾಟ್ಯ ಶಾಸ್ತ್ರಗಳಲ್ಲಿ ಅದ್ಭುತವಾದ ಪಾಂಡಿತ್ಯವನ್ನು ಪಡೆದರು. ಚೆಯ್ಯೂರಿನಲ್ಲಿ ನೆಲೆಸಿ ಅಲ್ಲೇ ಅರ್ಧಶತಮಾನಕ್ಕಿಂತಲೂ ಹೆಚ್ಚುಕಾಲವಿದ್ದುದರಿಂದ ಇವರಿಗೆ ಚೆಯ್ಯೂರು ಚೆಂಗಲ್ವರಾಯಶಾಸ್ತ್ರಿ ಎಂಬ ಹೆಸರು ಬಂದಿತು. ಚೆಯ್ಯೂರಿನ ಜಮೀನ್ದಾರರು ಇವರ ಪೋಷಕರಾಗಿದ್ದರು. ಚೆಯ್ಯೂರು ಒಂದು ಪ್ರಮುಖ ಸಂಗೀತ ಕಲಾ ಕೇಂದ್ರವಾಯಿತು. ಅನೇಕ ಶಿಷ್ಯರನ್ನು ಸಂಗೀತ ಮತ್ತು ನೃತ್ಯದಲ್ಲಿ ಸಿದ್ಧಗೊಳಿಸಿದರು. ಹಿಂದಿನ ಶತಮಾನದ ಚೆಯ್ಯೂರು ಶಾರದ ಎಂಬ ಪ್ರಸಿದ್ಧ ಕಲಾವಿದೆಯು ಇವರ ಒಬ್ಬ ಪ್ರಮುಖ ಶಿಷ್ಯೆ. ಇವನು ಯಾವುದಾದರೂ ಸಂಸ್ಥಾನದಲ್ಲಿ ಪ್ರದರ್ಶನ ಕೊಡಬೇಕಾಗಿ ಬಂದಾಗಲೆಲ್ಲಾ ಆ ಸಂಸ್ಥಾನಾಧೀಶರ ಗೌರವಾರ್ಥವಾಗಿ ಶಾಸ್ತ್ರಿಗಳು ಒಂದು ನೂತನ ಶಬ್ದವನ್ನು ರಚಿಸಿ ಕೊಡುತ್ತಿದ್ದರು.

ಶಾಸ್ತ್ರಿಗಳು ಚೆಯ್ಯೂರಿನ ಜಗಲಿ ಶಾಲೆಯಲ್ಲಿ ಪಾಠ ಹೇಳಿಕೊಡಲು ಆರಂಭಿಸಿದರು. ಅನೇಕರು ಇವರಲ್ಲಿ ತೆಲುಗು ಮತ್ತು ಸಂಸ್ಕೃತವನ್ನು ಕಲಿತರು. ಶನಿವಾರ ಮತ್ತು ಕೃತ್ತಿಕಾ ನಕ್ಷತ್ರದ ದಿನಗಳು ಭಜನೆ ಮಾಡುತ್ತಿದ್ದರು. ಪ್ರಸಿದ್ಧ ವಾಗ್ಗೇಯ ಕಾರರಾಗಿದ್ದ ಕಾಮಕೋಟಿಶಾಸ್ತ್ರಿ, ಝುಂಝೂಮಾರುತಂ ಸುಬ್ಬಯ್ಯರ್ ಮುಂತಾದ ವಿದ್ವಾಂಸರು ಇವರಲ್ಲಿಗೆ ಬರುತ್ತಿದ್ದರು. ಶಾಸ್ತ್ರಿಗಳು ಗೌರವರ್ಣದ

ಆಜಾನುಬಾಹುವಾದ ತೇಜಸ್ವಿಯಾದ ನೋಡಿದೊಡನೆಯೇ ಮಹಾಪುರುಷನೆಂಬ ಭಾವನೆ ಬರುವ ವ್ಯಕ್ತಿಯಾಗಿದ್ದರು. ಮಹಾನಿಷ್ಠರು ಮತ್ತು ದೈವಭಕ್ತರು. ರಾಜಾಸ್ಥಾನಗಳ ಸನ್ಮಾನಗಳನ್ನು ತುಚ್ಛೀಕರಿಸಿ ನಿರಾಡಂಬರವಾದ ಸಂತುಷ್ಟಾದರ್ಶ ಜೀವನವನ್ನು ನಡೆಸುತ್ತಿದ್ದರು.

ಶಾಸ್ತ್ರಿಗಳು ಸಾವಿರಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಕಂಚಿಕಾಮಾಕ್ಷಿಯ ಸ್ತುತಿರೂಪವಾದ ೩೦೦ ಕೃತಿಗಳನ್ನೂ, ಮಧುರೆ ಮೀನಾಕ್ಷಿಅಮ್ಮನ ಸ್ತುತಿರೂಪವಾಗಿ ೨೪೦ ಕೃತಿಗಳನ್ನೂ, ತಿರುಪತಿ ವೆಂಕಟೇಶ್ವರನ ಸ್ತುತಿರೂಪವಾಗಿ ನೂರಕ್ಕೂ ಹೆಚ್ಚು ಕೃತಿಗಳನ್ನೂ ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಅತ್ಯಂತ ಆಕರ್ಷಕವಾದುದು ಮಧ್ಯಮ ಕಾಲದ ಸಾಹಿತ್ಯ. ಇವರು ತಮ್ಮ ಕೃತಿಗಳನ್ನೇ ಹೆಚ್ಚಾಗಿ ಹಾಡುತ್ತಿದ್ದರು. ಸಾಂಬ ಮೂರ್ತಿಶಾಸ್ತ್ರಿ ಮತ್ತು ಕೃಷ್ಣಮೂರ್ತಿಶಾಸ್ತ್ರಿ ಎಂಬಿಬ್ಬರು ವಿದ್ವಾಂಸರು ಇವರ ಕೃತಿ ಗಳನ್ನು ಹಾಡಿ ಪ್ರಚಾರ ಮಾಡಿದರು. ಕೃತಿಗಳು, ಶಬ್ದಗಳು, ಕೌಸ್ತುಭಗಳಲ್ಲದೆ, ಮುತ್ತುಕುಮಾರಶತಕಂ, ಸುಂದರೇಶ ವಿಲಾಸಂ ಮತ್ತು ವಲ್ಲಿನಾಟಕಂ ಎಂಬ ಎರಡು ಗೇಯ ರೂಪಕಗಳನ್ನು ರಚಿಸಿದ್ದಾರೆ. ಸುಂದರೇಶ ವಿಲಾಸವನ್ನು ಹಲವು ವರ್ಷಗಳ ಕಾಲ ಚೆಯ್ಯೂರು ದೇವಾಲಯದ ಉತ್ಸವ ಕಾಲದಲ್ಲಿ ಆಡುತ್ತಿದ್ದರು ಕಲ್ಯಾಣಿ ರಾಗದ 'ಅವಿರಳಮುಗು ಭಕ್ತಿನಿ' ಎಂಬ ಕೃತಿಯು ಚತುರಶ್ರ ಜಾತಿ ಧ್ರುವತಾಳದಲ್ಲಿ ರಚಿಸಿರುವ ಉತ್ತಮ ಕೃತಿಗೆ ನಿದರ್ಶನ. ದರ್ಬಾರ್‌ರಾಗದ ಎಂತವೇಡಿನಗಾನಿ', ಯದುಕುಲಕಾಂಭೋಜಿ ರಾಗದ 'ಲಲಿತೇ ಮಾಂಪಾಹಿ' ಮುಂತಾದ ಕೃತಿಗಳು ಭಕ್ತಿಯ ಆವೇಶವನ್ನು ಹೊರಚೆಲ್ಲುತ್ತವೆ 'ನೀರುಚಿ ಮರಿಗಿನರಸನ' ಎಂಬ ಬಿಲಹರಿ ರಾಗದ ಕೃತಿಯು ಅದರ ಆಕರ್ಷಕವಾದ ಸಂಗೀತಕ್ಕೆ ನಿದರ್ಶನ. ಶಾಸ್ತ್ರಿಗಳು ಪೂರ್ಣಚಂದ್ರಿಕಾ, ಯಮುನಾ ಕಲ್ಯಾಣಿ, ಗೌಳೀಪಂತು ಮುಂತಾದ ರಾಗಗಳಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ ಇವರ ಕೃತಿಗಳ ಸಾಹಿತ್ಯವು ಸ್ವಾಭಾವಿಕತೆ, ಲಾಲಿತ್ಯ, ಸ್ವರಾಕ್ಷರ, ಪ್ರಾಸ ಮುಂತಾದ ಹಲವು ಸೌಂದರ್ಯವನ್ನೀಯುವ ಅಂಶಗಳಿಂದ ಕೂಡಿವೆ. ಚಿತ್ರ ಕವಿತೆಯಲ್ಲಿ ಇವರು ಅದ್ವಿತೀಯರಾಗಿದ್ದರು. ಇವರು ಅತ್ಯಂತ ಸರಳವಾದ ಕೃತಿಗಳಲ್ಲದೆ ಕಷ್ಟಕರವಾದ, ಪಾಂಡಿತ್ಯಪೂರ್ಣವಾದ ಕೃತಿಗಳನ್ನು ರಚಿಸಿದ್ದಾರೆ. ದೇವಾಲಯದ ಉತ್ಸವಗಳಿಗೆ ಸಂಬಂಧಿಸಿದ ಇವರ ಕೃತಿಗಳನ್ನು ಇಂದಿಗೂ ಚೆಯ್ಯೂರಿನ ದೇವಾಲಯ ದಲ್ಲಿ ಹಾಡುತ್ತಾರೆ. ಮದುವೆ ಹಾಡುಗಳಂತೂ ಇಂದಿಗೂ ಚೆಂಗಲ್ಪೇಟೆ ಜಿಲ್ಲೆಯಲ್ಲಿ ಬಹಳ ಪ್ರಚಾರದಲ್ಲಿದೆ.

ಶಾಸ್ತ್ರಿಗಳು ಸ್ವನಾಮ ಮುದ್ರಕಾರರು. ಗೇಯ ರೂಪಕಗಳಲ್ಲಿರುವ ದರುಗಳಲ್ಲಿ ಮುದ್ರೆಯನ್ನು ಬಳಸಿಲ್ಲ. ಇವರು ತಮ್ಮ ೯೦ನೆ ವಯಸ್ಸಿನಲ್ಲಿ ಕಾಲವಾದರು.

**ಚೇತುಲಾವಳಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಗ ಮ ಪ ನಿ ದ ನಿ ಸ

ಅ: ಸ ನಿ ದ ಪ ಮ ರಿ ಗ ರಿ ಸ

**ಚೇವಾಟಿ**—ಇದು ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಟಕ್ಕ ಭಾಷಾರಾಗದ ಹೆಸರು.

**ಚೈತನ್ಯದೇವ** –(೧೪೮೫–೧೫೩೪) ಬಂಗಾಳದ ನವ ದ್ವೀಪದ ಶ್ರೀಕೃಷ್ಣ ಚೈತನ್ಯ ಅಥವಾ ಗೌರಾಂಗಮಹಾಪ್ರಭು ಭಕ್ತಿ ಚಳುವಳಿಯನ್ನು ಉತ್ತರ ಭಾರತದಲ್ಲಿ ಅದರಲ್ಲೂ ಬಂಗಾಳದಲ್ಲಿ ಹರಡಿದ ಒಬ್ಬ ಮಹಾಭಕ್ತ ನಾಮಕೀರ್ತನ ಪದ್ಧತಿಯನ್ನು ಪ್ರಚಾರಗೊಳಿಸಿದರು. ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಸ್ವರೂಪದಾಮೋದರ, ರಾಯ್‌ರಾಮಾನಂದ, ಮುರಾರಿಗುಪ್ತ ಮುಂತಾದ ವೈಷ್ಣವ ಭಕ್ತರು ಇವರ ಅನುಯಾಯಿಗಳಾಗಿದ್ದರು ಕೀರ್ತನೆಯನ್ನು ನೃತ್ಯದೊಂದಿಗೆ ಶ್ರೀ ಕೃಷ್ಣ ಚೈತನ್ಯರು ಹಾಡುತ್ತಿದ್ದುದರಿಂದ ಇವಕ್ಕೆ ನೃತ್ಯಕೀರ್ತನವೆಂದು ಹೆಸರು.

**ಚೈತಿಗೌಡಿ**—ಸೋಮನಾಥ ವಿರಚಿತ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಮಾಯಾಮಾಳವಗೌಳ ಮೇಳದ ಒಂದು ಜನ್ಯರಾಗ.

**ಚೊಕ್ಕನಾಥನಾಯಕ**—(೧೭೦೧–೧೭೩೧) ಈತನು ಮಧುರೆಯನ್ನು ಆಳುತ್ತಿದ್ದ ದೊರೆ ತಿರುಮಲನಾಯಕನ ಮೊಮ್ಮಗ ಮತ್ತು ಕಲಾಪೋಷಕ. ಇವನ ಆಸ್ಥಾನದಲ್ಲಿ ತೆಲುಗು ಪದಗಳ ಪ್ರಸಿದ್ಧವಾಗ್ಗೇಯಕಾರ ಘನಂ ಶೀನಯ್ಯನವರು ವಿದ್ವಾಂಸರಾಗಿದ್ದರು. ಇವರ ಕೃತಿಗಳಲ್ಲಿ ಮನ್ನಾರುರಂಗ ಎಂಬ ಮುದ್ರೆ ಇದೆ.

**ಚೊಕ್ಕಲಿಂಗಂಪಿಳ್ಳೈ**—ಇವರು ಪಂದನಲ್ಲೂರು ಸಂಪ್ರದಾಯಕ್ಕೆ ಸೇರಿದ ಈಗಿನ ಒಬ್ಬ ಭರತನಾಟ್ಯ ವಿಶಾರದರು. ಹಲವರಿಗೆ ಭರತ ನಾಟ್ಯದಲ್ಲಿ ಶಿಕ್ಷಣ ವನ್ನಿತ್ತಿದ್ದಾರೆ.

**ಚೌಕ**—ರಾಗಾಲಾಪನೆಯನ್ನು ವಿಳಂಬವಾಗಿ ಅಂದರೆ ನಿಧಾನವಾದ ಶೈಲಿಯಲ್ಲಿ ಹಾಡುವುದಕ್ಕೆ ಚೌಕವೆಂದು ಹೆಸರು. ಈ ಬಗೆಯ ರಾಗಾಲಾಪನ ಪದ್ಧತಿಯಲ್ಲಿ ಒಂದು ವಿಶೇಷ ಪ್ರಯೋಗತಂತ್ರವಿದೆ. ಈ ಶೈಲಿಯ ಹಾಡುಗಾರಿಕೆ ಯಲ್ಲಿ ಪ್ರವೀಣರಾಗಿದ್ದ ವಿದ್ವಾಂಸರ ಹೆಸರಿನ ಜೊತೆಗೆ ಚೌಕಂ ಎಂಬ ಪದವನ್ನು ಸೇರಿಸುವುದು ರೂಢಿ. ಉದಾ: ಚೌಕಂ ಶೀನು ಅಯ್ಯರ್. ಘನ, ನಯ, ದೇಶ್ಯ ಎಂಬ ಗಾಯನ ಶೈಲಿಯಲ್ಲಿ ಕೆಲವು ವಿದ್ವಾಂಸರು ಪರಿಣತರಾಗಿದ್ದರು.

**ಚೌಕಕಾಲ**—ಹೀಗೆಂದರೆ ವಿಳಂಬಕಾಲವೆಂದರ್ಥ. ಮುತ್ತುಸ್ವಾಮಿದೀಕ್ಷಿತರ ಕೃತಿಗಳು ಚೌಕಕಾಲದ ಕೃತಿಗಳಿಗೆ ಉದಾಹರಣೆ.

**ಚೌಕವರ್ಣ**—ಪದವರ್ಣಕ್ಕೆ ಚೌಕವರ್ಣವೆಂದೂ ಹೆಸರು. ಈ ಹೆಸರು ವರ್ಣದ ಕಾಲವನ್ನು ಸೂಚಿಸುತ್ತದೆ. ಕೆಲವು ಚೌಕವರ್ಣಗಳಲ್ಲಿ ತಾನವರ್ಣದಂತೆ ಪಲ್ಲವಿ, ಅನುಪಲ್ಲವಿ ಮತ್ತು ಚರಣಕ್ಕೆ ಮಾತ್ರ ಸಾಹಿತ್ಯವಿರುತ್ತದೆ. ಸ್ವರಭಾಗಕ್ಕೆ ಸಾಹಿತ್ಯವಿರುವುದಿಲ್ಲ.

**ಚಾಂಕಾಭೀರು**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಮ ಗ ರಿ ಸ

**ಚೌಕಂಶೀನುಅಯ್ಯರ್**—(೧೯ನೆ ಶ) ಇವರು ತಂಜಾವೂರಿನ ಶರಭೋಜಿ ಮಹಾರಾಜ ಮತ್ತು ಶಿವಾಜಿ ಮಹಾರಾಜನ ಆಸ್ಥಾನ ವಿದ್ವಾಂಸರಾಗಿದ್ದರು. ಚೌಕ ಶೈಲಿಯ ಹಾಡುಗಾರಿಕೆಗೆ ಪ್ರಸಿದ್ಧರಾಗಿದ್ದರು.

**ಚಂಡಿಕ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಚಂಡೀದಾಸ್**—(ಕ್ರಿ.ಶ. ೧೪೦೦) ರಾಧಾ-ಕೃಷ್ಣರ ಪ್ರೇಮ ವಿಷಯವುಳ್ಳ ಅನೇಕ ಭಕ್ತಿಗೀತಗಳನ್ನು ರಚಿಸಿರುವ ಉತ್ತರ ಭಾರತದ ಒಬ್ಬ ಭಕ್ತ ಶ್ರೇಷ್ಠ.

**ಚಂದನಗಂಧಿ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಚಂಧಿಕ**—ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

**ಚಂದ್ರಕಲಾ**—(೧) ಈ ರಾಗವು ೨೨ನೆ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ದ ಪ ಮ ಗ ಮ ಸ

(೨) ಪುರಾತನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ೧೩ ಬಗೆಯ ಹುಡುಕ್ಕ ವಾದ್ಯಗಳಲ್ಲಿ ಇದೊಂದು ಬಗೆ.

**ಚಂದ್ರಕಾಂತ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ. ಇದಕ್ಕೆ ಚಂದ್ರಕಾಂತಿ ಎಂಬ ಹೆಸರುಂಟು.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ಚಂದ್ರಕೌಶಿಕ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ಮ ದ ನಿ ಸ

ಅ : ಸ ದ ಪ ಮ ಗ ಸ

**ಚಂದ್ರಗಾಂಧಾರ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ. ಇದೊಂದು ಸ್ವರಾಂತರ ಔಡವರಾಗ.

ಆ : ಸ ರಿ ಗ ಮ ಸ

ಅ : ಸ ನಿ ಮ ಗ ರಿ ಸ

**ಚಂದ್ರಗಾಂಧಾರಿ**—ಅರಭಟ್ಟನಾವಲರ್ ವಿರಚಿತ ಭರತ ಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಚಂದ್ರಚೂಡ**—ಈ ರಾಗವು ೨೯ನೆ ಮೇಳಕರ್ತ ಶಂಕರಾಭರಣದ ಒಂದು ಜನ್ಯರಾಗ

ಆ : ಸ ಗ ಮ ಪ ದ ನಿ ಸ

ಅ : ಸ ನಿ ದ ಪ ಮ ಗ ಸ

**ಚಂದ್ರಚೂಡತಾಂಡವ**—ಚಿದಂಬರದ ದೇವರಾದ ನಟರಾಜನು ಚಂದ್ರ ಚೂಡ ಚಕ್ರವರ್ತಿಗಾಗಿ ಆಡಿದ ನೃತ್ಯ. ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುತ್ತುರೈಪ್ಪೂಂಡಿಯ ದೇವಾಲಯದಲ್ಲಿ ಈ ನೃತ್ಯದ ಒಂದು ಶಿಲ್ಪವಿದೆ.

**ಚಂದ್ರಜ್ಯೋತಿ**—ಈ ರಾಗವು ೪೧ನೆ ಮೇಳಕರ್ತ ಪಾವನಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ದ ಸ

ಅ : ಸ ದ ಪ ಮ ಗ ರಿ ಸ

ಉಪಾಂಗರಾಗ. ಪ್ರತಿಮಧ್ಯಮ ಮತ್ತು ಚತುಶ್ರುತಿ ಧೈವತಗಳು ರಾಗ ಛಾಯಾ ಸ್ವರಗಳು. ಷಡ್ಜವು ಗ್ರಹ, ಅಂಶ ಮತ್ತು ನ್ಯಾಸ. ಸಾರ್ವಕಾಲಿಕ ರಾಗ. ಭಕ್ತಿ ಮತ್ತು ದೀನರಸಗಳಿಗೆ ಸೂಕ್ತವಾದ ರಾಗ, ತ್ಯಾಗರಾಜರ ' ಬಾಗಾಯನಯ್ಯ ' ಮತ್ತು ' ಶಶಿವದನ ' ಎಂಬ ಈ ರಾಗದ ಕೃತಿಗಳು ಪ್ರಸಿದ್ಧವಾಗಿವೆ.

**ಚಂದ್ರಚೂಡಪ್ರಿಯ**—ಈ ರಾಗವು ೬೩ನೆ ಮೇಳಕರ್ತಲತಾಂಗಿಯ ಒಂದು ಜನ್ಯರಾಗ.

ಆ : ಸ ಗ ಮ ಪ ಮ ರಿ ಪ ಸ

ಅ : ಸ ನಿ ದ ಪ ಮ ಗ ರಿ ಸ

**ಚಂದ್ರದೇಶಿಕ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ

ಆ : ಸ ರಿ ಗ ಮ ಪ ಮ ದ ನಿ ಸ

ಅ : ಸ ನಿ ದ ಮ ಗ ಸ

**ಚಂದ್ರಪ್ಪ**—ಚಂದ್ರಪ್ಪನವರ ಪೂರ್ವಿಕರು ಬೆಂಗಳೂರು ಜಿಲ್ಲೆಯ ನೆಲಮಂಗಲದವರು. ಇವರ ತಾತ ಗಮಕಿ ಮಾರಾರಿ ತಿಮ್ಮಯ್ಯ ಶೆಟ್ಟರು. ಪ್ರಾರಂಭದಲ್ಲಿ

ಬೆಂಗಳೂರಿನ ಬಂಗಾರು ನಾದಸ್ವರ ವೆಂಕಟಪ್ಪನವರಲ್ಲಿ ಐದು ವರ್ಷಗಳ ಕಾಲ, ನಂತರ ಬಿ ಎನ್. ಮೂರ್ತಿಯವರಲ್ಲೂ, ಮದ್ರಾಸಿನ ಸುಪ್ರಸಿದ್ಧ ಪಲ್ಲವಿ ವಿದ್ವಾಂಸರಾಗಿದ್ದ ವಿದ್ಯಲ ನರಸಿಂಹಲು ನಾಯ್ಡುರವರಲ್ಲೂ ಶಿಕ್ಷಣ ಪಡೆದು ಅಪರೂಪವಾದ ಕೀರ್ತನೆಗಳು, ತಾಳ ಮತ್ತು ಲಯದ ಅನೇಕ ರಹಸ್ಯಗಳನ್ನು ತಿಳಿದರು. ಮೈಸೂರಿನ ಮೃದಂಗ ವಿದ್ವಾನ್ ವೆಂಕಟೇಶ ದೇವರು ಇವರ ಗಮನತವನ್ನು ತಾಳಾವಧಾನದ ಕಡೆಗೆ ಸೆಳೆದರು.

ಒಂದೇ ಕಾಲದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ತಾಳಗಳನ್ನು ಎಣಿಸುತ್ತಾ ಹಾಡುವುದು ಅವಧಾನ ಪದ್ಧತಿ. ಮೊದಲು ಹಾಡಲು ಪಲ್ಲವಿಯ ಒಟ್ಟು ಅಕ್ಷರ ಕಾಲಕ್ಕೆ ಸಮನಾಗುವ ಕಾಲವುಳ್ಳ ತಾಳಗಳಾಗಬೇಕು ಹೀಗೆ ಸಮನಾದ ಅಕ್ಷರ ಕಾಲವುಳ್ಳ ಎರಡು ತಾಳಗಳನ್ನು ಆರಿಸಿದರೆ ಅವುಗಳ ಅಂಗ ಹಾಗೂ ನಡಿಗೆಯಲ್ಲಿ ವ್ಯತ್ಯಾಸ ಬರುತ್ತದೆ. ತಾಳದ ಆವರ್ತಗಳು ಸಮನಾಗಿ ಕೂಡಿಬರ ಬೇಕಾದಲ್ಲಿ ಒಂದೊಂದು ಕೈಯಲ್ಲೂ ಬೇರೆ ಬೇರೆ ಬಗೆಯ ಲೆಕ್ಕವನ್ನಿಡುತ್ತ ಹೋಗ ಬೇಕು ಹೀಗೆ ಒಂದೇ ಕಾಲದಲ್ಲಿ ಬೇರೆ ಬೇರೆ ಬಗೆಯ ನಾಲ್ಕಾರು ಲೆಕ್ಕಾಚಾರಗಳನ್ನು ಮಾಡುತ್ತ ಹಾಡಬೇಕು. ಈ ಬಗೆಯ ತಾಳಾವಧಾನದಲ್ಲಿ ತಿರುವಯ್ಯಾರ್ ಸುಬ್ರಹ್ಮಣ್ಯ ಅಯ್ಯರ್ ಮತ್ತು ಕುನ್ರಕ್ಕುಡಿ ಕೃಷ್ಣಯ್ಯರ್ ಪ್ರವೀಣರಾಗಿದ್ದರು. ಚಂದ್ರಪ್ಪನವರಿಗೆ ಸೂಳಾದಿ ಸಪ್ತತಾಳಗಳು ಮತ್ತು ಅವುಗಳ ಪ್ರಭೇದಗಳು, ನಂದಿಕೇಶ್ವರ ಮತದ ೧೦೮ ತಾಳಗಳು, ಅಗಸ್ತ್ಯಮತದ ೫೨ ಅಪೂರ್ವತಾಳಗಳು, ಹನುಮನ್ಮತದ ಮರ್ಮತಾಳಗಳು, ಶುಕ್ರಾಚಾರ್ಯ ಮತದ ದಿವ್ಯ ಸಂಕೀರ್ಣ ಮುಂತಾದುವುಗಳಲ್ಲಿ ಸಿದ್ಧಿಯಿದೆ. ಮದ್ರಾಸಿನ ಮ್ಯೂಸಿಕ್ ಅಕಾಡೆಮಿ ಮತ್ತು ಇತರ ಸಂಗೀತ ಸಮ್ಮೇಳನಗಳಲ್ಲಿ ಪಲ್ಲವಿ ವಿನ್ಯಾಸ ಮಾಡಿ ಪ್ರಶಂಸಿತರಾಗಿದ್ದಾರೆ. ಶಾಂತಾರಾವ್‌ರ ನೃತ್ಯ ಪ್ರಕಾರಗಳಿಗೆ ಸಂಗೀತ ಸಂಯೋಜನೆ ಮಾಡಿದ್ದಾರೆ. ಬೆಂಗಳೂರಿನ ಸಾರ್ವಜನಿಕ ಸಭೆಯೊಂದರಲ್ಲಿ ಇವರಿಗೆ ಚಿನ್ನದ ತೋಡಾ ತೊಡಿಸಿ ಪಲ್ಲವಿ ವಿದ್ವಾನ್ ಎಂಬ ಪ್ರಶಸ್ತಿಯಿತ್ತು ಗೌರವಿಸಿದರು.

**ಚಂದ್ರಾಂಶರಾಗ** –(೧) ನಾರದ ವಿರಚಿತ 'ಸಂಗೀತ ಮಕರಂದ'ವೆಂಬ ಗ್ರಂಥದಲ್ಲಿ ರಾಗಗಳನ್ನು ಸೂರ್ಯಾಂಶ ಮತ್ತು ಚಂದ್ರಾಂಶರಾಗಗಳೆಂದು ವರ್ಗೀಕರಣ ಮಾಡಿದೆ.

(೨) ರಾತ್ರಿವೇಳೆಯಲ್ಲಿ ಹಾಡಬಹುದಾದ ಒಂದು ರಾಗ

**ಚಂದ್ರಕಿರಣಿ**–ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ಗ ಮ ಪ ಮ ದ ನಿ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ಚಂದ್ರಪ್ರಭಾ**—ಈ ರಾಗವು ೪೨ನೆ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಚಂದ್ರಪಿರ್ೖೆ**—ಇದು ಅರ್ಧಚಂದ್ರಾಕೃತಿಯ ಮತ್ತು ಗ್ರಾಮ ದೇವತೆಗಳ ಗುಡಿಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಒಂದು ಘನವಾದ್ಯ. ಅರ್ಧಚಂದ್ರಾಕೃತಿಯ ಒಂದು ಬಳೆಗೆ ತೆಳ್ಳಗಿರುವ ಚರ್ಮವನ್ನು ಅಳವಡಿಸಲಾಗಿದೆ. ಇದಕ್ಕೆ ಒಂದು ಹಿಡಿ ಇದೆ. ಈ ವಾದ್ಯವನ್ನು ಮುಂದಲೆಗೆ ಕಟ್ಟಿಕೊಂಡು ಒಂದು ಕಡ್ಡಿಯಿಂದ ಬಾರಿಸುತ್ತಾರೆ

**ಚಂದ್ರಮಂಡಲ**—ತಮಿಳಿನಲ್ಲಿ ಚಂದ್ರಪಿರ್ೖೆ ಎಂಬ ಹೆಸರಿರುವ ಒಂದು ತಾಳವಾದ್ಯಕ್ಕೆ ತೆಲುಗಿನಲ್ಲಿ ಚಂದ್ರಮಂಡಲವೆಂದು ಹೆಸರು ನಾದಸ್ವರಕ್ಕೆ ಇದನ್ನು ತಾಳವಾದ್ಯವಾಗಿ ನುಡಿಸುತ್ತಾರೆ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಕಾಳಹಸ್ತಿ ದೇವಾಲಯದಲ್ಲಿ ಈ ವಾದ್ಯವನ್ನು ನುಡಿಸುವ ವಿದ್ವಾಂಸರಿದ್ದಾರೆ.

**ಚಂದ್ರಮಂಡನಾ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ಪ ಮ ಗ ಮ ರಿ ಸ

**ಚಂದ್ರಮುಖಿ**—ಇದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಮಲ್ಲಾರ ರಾಗದ ಒಂದು ದಾಸೀರಾಗದ ಹೆಸರು

**ಚಂದ್ರರೇಖ**—ತಂಜಾವೂರಿನ ಕೊನೆಯ ನಾಯಕ ವಂಶದ ದೊರೆ ವಿಜಯ ರಾಘವ ನಾಯಕನ (೧೬೩೩–೧೬೭೩) ಆಸ್ಥಾನದಲ್ಲಿದ್ದ ಪ್ರಸಿದ್ಧ ನಾಟ್ಯಕಲಾವಿದೆ. ಚೆಂಗಳ್ವ ಕಾಲಕವಿ ವಿರಚಿತವಾದ 'ರಾಜ್ಯಗೋಪಾಲ ವಿಲಾಸಮು' ಎಂಬ ತೆಲುಗು ಪ್ರಬಂಧದಲ್ಲಿ ಈ ಕಲಾವಿದೆಯ ಹೆಸರು ಹಲವು ಕಡೆ ಬಂದಿದೆ.

**ಚಂದ್ರರೇಖಾ (ಚಂದ್ರರೇಖಿ)**

(೧) ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಮ ಗ ರಿ ಸ

(೨) ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗವು ಇದೇ ಹೆಸರನ್ನು ಹೊಂದಿದೆ

ಆ: ಸ ರಿ ಗ ಪ ನಿ ದ ನಿ ಸ

ಅ: ಸ ದ ಪ ಮ ಗ ರಿ ಸ

**ಚಂದ್ರರೇಖಪ್ರಿಯ**—ಈ ರಾಗವು ೧೪ನೆ ಮೇಳಕರ್ತ ವಕುಳಾಭರಣದ ಒಂದು ರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಚಂದ್ರವದನ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ನಿ ಸ ರಿ ಗ ಮ ಪ ನಿ ಸ
ಅ: ಸ ನಿ ದ ಪ ಮ ಗ ರಿ ಸ

**ಚಂದ್ರವಾನ್**—ಇವರು ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯವರು. ಬೆನಾರಿಸ್ ಶೈಲಿಯ ಬದರೀಪ್ರಸಾದ್ ಮಿಶ್ರ ಎಂಬ ವಿದ್ವಾಂಸರ ಶಿಷ್ಯನಾಗಿ ತಬಲಾ ವಾದನವನ್ನು ಕಲಿತರು. ಭಾರತಾದ್ಯಂತ ಎಲ್ಲಾ ಸಭೆಗಳಲ್ಲಿ ಮತ್ತು ಸಂಗೀತ ಸಮ್ಮೇಳನಗಳಲ್ಲಿ ತಬಲಾ ನುಡಿಸಿ ಪ್ರಸಿದ್ಧರಾಗಿದ್ದಾರೆ. ಈಗ ೨೫ ವರ್ಷಗಳಿಗಿಂತಲೂ ಹೆಚ್ಚುಕಾಲದಿಂದ ಕಲ್ಕತ್ತಾದಲ್ಲಿ ನೆಲೆಸಿ ಅಲ್ಲಿಯ ಆಕಾಶವಾಣಿ ಕೇಂದ್ರದ ಕಲಾವಿದರಾಗಿದ್ದಾರೆ. ಇವರು ಭಾರತದ ಒಬ್ಬ ಸುಪ್ರಸಿದ್ಧ ತಬಲಾ ವಿದ್ವಾಂಸರು

**ಚಂದ್ರಶೇಖರಯ್ಯ ಎ. ಎಸ್.**—(೧೯೦೫) ಚಂದ್ರಶೇಖರಯ್ಯನವರು ಮೈಸೂರಿನಲ್ಲಿ ಜನಿಸಿದರು. ಇವರ ತಂದೆ ವೀಣೆ ಶಾಮಣ್ಣನವರು ವೀಣೆ ಶೇಷಣ್ಣನವರ ಸೋದರಳಿಯ ಮತ್ತು ತಾಯಿ ಭಾಗಮ್ಮನವರು ಸಮಿಾಪದ ಬಂಧು. ಚಂದ್ರಶೇಖರಯ್ಯನವರು ತಮ್ಮ ಎಂಟನೆ ವಯಸ್ಸಿನಲ್ಲಿ ಶೇಷಣ್ಣನವರ ಶಿಷ್ಯರಾಗಿ ೧೨ ವರ್ಷಗಳ ಕಾಲ ಶಿಕ್ಷಣ ಪಡೆದರು. ಅವರ ಸಂಗಡ ನಾನಾ ಕಡೆ ಸಂಚರಿಸಿದರು. ಚಿತ್ರಶಿಲ್ಪಿ ವೆಂಕಟಪ್ಪ, ತಿರುಮಲೆ ರಾಜಮ್ಮ ಮತ್ತು ಭೀಮರಾವ್ ಇವರ ಸಹಪಾಠಿಗಳಾಗಿದ್ದರು. ೧೯೨೭ರಲ್ಲಿ ಮದ್ರಾಸಿಗೆ ಹೋಗಿ ಅಲ್ಲಿ ವಿದ್ವಾಂಸರ ಮೆಚ್ಚುಗೆ ಪಡೆದರು. ೧೯೩೨ರಲ್ಲಿ ಬೆಂಗಳೂರಿಗೆ ಬಂದು ನೆಲೆಸಿದರು. ಭಾರತಾದ್ಯಂತ ಪ್ರವಾಸಮಾಡಿ ಪ್ರಮುಖ ಸ್ಥಳಗಳಲ್ಲಿ ಕಚೇರಿ ಮಾಡಿದ್ದಾರೆ. ಬೊಂಬಾಯಿನ ಸಿತಾರ್ ವಾದಕ ಹಲೀಮ್ ಜಾಫರ್‌ಖಾನರೊಡನೆ ಜುಗಲ್‌ಬಂದಿ ಕಚೇರಿ ಮಾಡಿದ್ದಾರೆ. ಇವರಿಗೆ ವೈಣಿಕ ಪ್ರವೀಣ, ವೀಣಾವಾದನ ಪ್ರವೀಣ ಎಂಬ ಬಿರುದುಗಳಿವೆ ಇವರ ಶಿಷ್ಯರಲ್ಲಿ ವೇಮು ಮುಕುಂದ, ಆರ್. ವಿ ಪ್ರಭಾಕರರಾವ್, ಕೆ. ಎಸ್. ಚೆಂಗಲರಾಯಪ್ಪ ಮುಂತಾದವರು ಪ್ರಸಿದ್ಧರು.

**ಚಂದ್ರಶೇಖರಯ್ಯ ಆರ್.**—(೧೯೧೫) ಮೈಸೂರು ಸಹೋದರರೆಂದು ಹೆಸರಾದ ಸಹೋದರ ಚತುಷ್ಟಯರಲ್ಲಿ ಚಂದ್ರಶೇಖರಯ್ಯನವರು ಹಿರಿಯರು. ಆಸ್ಥಾನ ವಿದ್ವಾಂಸರಾಗಿದ್ದ ಸುಂದರ ಶಾಸ್ತ್ರಿಗಳ ಶಿಷ್ಯೆಯಾಗಿದ್ದ ಇವರ ತಾಯಿ ವರಲಕ್ಷ್ಮಿ ವೈಣಿಕ ಮತ್ತು ಗಾಯಕರಾಗಿದ್ದರು ತಂದೆ ಬಿ. ರಾಮಯ್ಯನವರು ಸಂಗೀತ ವಿದ್ವಾಂಸರಾಗಿದ್ದರು. ಚಿಕ್ಕಂದಿನಲ್ಲೇ ತಾಯಿಯವರಿಂದ ಸಂಗೀತ ಶಿಕ್ಷಣವನ್ನು ಸ್ವಂತ ಪರಿಶ್ರಮದಿಂದ ಅದರಲ್ಲಿ ಪ್ರೌಢಿಮೆಯನ್ನು ಪಡೆದರು. ಸುಮಾರು ೫೦ ವರ್ಷಗಳಿಗಿಂತ ಹೆಚ್ಚು ಕಾಲದಿಂದ ವೇದಿಕೆಯ ವಿದ್ವಾಂಸರಾಗಿ ಭಾರತಾದ್ಯಂತ ಎಲ್ಲಾ ಪ್ರಮುಖ ಸ್ಥಳಗಳಲ್ಲಿ ಕಚೇರಿಗಳಲ್ಲಿ ಹಾಡಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರವಾಸ ಮಾಡಿ ಇಂಗ್ಲೆಂಡ್, ಹಾಲೆಂಡ್, ಬೆಲ್ಜಿಯಂ, ಫ್ರಾನ್ಸ್, ಆಸ್ಟ್ರಿಯಾ,

ಪಶ್ಚಿಮ ಜರ್ಮನಿ ಮತ್ತು ಸ್ವಿಟ್ಸರ್‌ಲೆಂಡ್ ದೇಶಗಳಲ್ಲಿ ಹಲವಾರು ಕಚೇರಿಗಳನ್ನು ನಡೆಸಿದ್ದಾರೆ. ೧೦೮ ಮಹಾ ಮಾರ್ಗತಾಳಗಳು ಮತ್ತು ದೇಶಿತಾಳಗಳಲ್ಲಿ ಪಲ್ಲವಿಗಳನ್ನು ಹಾಡುವುದರಲ್ಲಿ ಪರಿಣತರಾಗಿದ್ದಾರೆ. ವಿದ್ವತ್ಸಭೆಗಳು ಮತ್ತು ಸಮ್ಮೇಳನಗಳಲ್ಲಿ ಪಲ್ಲವಿಗಳನ್ನು ಹಾಡಿ ಮೆಚ್ಚುಗೆ ಪಡೆದಿದ್ದಾರೆ ೧೯೩೮ರಿಂದ ತೆಲುಗು, ಸಂಸ್ಕೃತ ಮತ್ತು ಕನ್ನಡದಲ್ಲಿ ೩೦೦ಕ್ಕೂ ಹೆಚ್ಚಿನ ವರ್ಣ, ಕೃತಿ, ತಿಲ್ಲಾನ, ದೇವರನಾಮ ಇತ್ಯಾದಿ ಗೇಯಪ್ರಕಾರಗಳನ್ನೂ, ತ್ರಿಪುರಸುಂದರೀ ನವಾವರಣ ಕೃತಿಗಳನ್ನೂ ೧೦೮ ಮಹಾಮಾರ್ಗ ತಾಳಗಳಲ್ಲಿ ಪಲ್ಲವಿಗಳನ್ನೂ ರಚಿಸಿ ಹಾಡಿ ಬಳಕೆಗೆ ತಂದು ಈಗಿನ ಪ್ರಮುಖ ವಾಗ್ಗೇಯಕಾರರ ಪಂಕ್ತಿಗೆ ಸೇರಿದ್ದಾರೆ. ೧೯೪೫ರಲ್ಲಿ ವರಲಕ್ಷ್ಮಿ ಅಕಾಡೆಮೀಸ್ ಆಫ್ ಫೈನ್ ಆರ್ಟ್ಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಪ್ರಧಾನಾಚಾರ್ಯರಾಗಿ ಸಾವಿರಾರು ಮಂದಿಗೆ ಸಂಗೀತ ಶಿಕ್ಷಣ ನೀಡುತ್ತ ಬಂದಿದ್ದಾರೆ. ಇದಲ್ಲದೆ ನೂರಾರು ಸಂಘ ಸಂಸ್ಥೆಗಳಲ್ಲಿ ನಾನಾ ವಿಧವಾದ ಸ್ಥಾನಗಳನ್ನು ಅಲಂಕರಿಸಿ ಸೇವೆ ಸಲ್ಲಿಸಿದ್ದಾರೆ ಇವರಿಗೆ ೫೦ಕ್ಕೂ ಮೀರಿ ಬಿರುದುಗಳು ಸನ್ಮಾನಗಳು ಸಂದಿವೆ. ಇವರು ಗಳಿಸಿರುವ ಪ್ರಶಸ್ತಿಗಳಲ್ಲಿ ಸಂಗೀತರತ್ನಾಕರ, ನಾಟ್ಯಶಾಸ್ತ್ರ ಕೋವಿದ ಎಂಬುದು ಮುಖ್ಯವಾದುವು. ಧರ್ಮ, ಕಲೆ, ಸಂಸ್ಕೃತಿಗಳ ಸೇವೆಗೆ ನಾನಾ ಸಂಸ್ಥೆಗಳ ಮೂಲಕ ಸೇವೆ ಸಲ್ಲಿಸುತ್ತಿದ್ದಾರೆ ಜ್ಯೋತಿಷ್ಯಶಾಸ್ತ್ರದ ಅಧ್ಯಯನವು ಇವರ ಒಂದು ಮುಖ್ಯ ಹವ್ಯಾಸವಾಗಿದೆ. ಇಂದಿನ ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಚಂದ್ರಶೇಖರಯ್ಯನವರು ಒಬ್ಬ ಮೈಸೂರಿನ ಹಿರಿಯಕಲಾವಿದರು.

**ಚಂದ್ರಶೇಖರೇಂದ್ರ ಸರಸ್ವತಿ**—ಇವರು ಕಾಂಚಿಕಾಮಕೋಟಿ ಪೀಠದ ಜಗದ್ಗುರುಗಳಾಗಿದ್ದರು (೧೭೪೯–೧೭೮೫ ಕ್ರಿಶ) ಶಿವಾಷ್ಟಪದಿ ಅಥವಾ ಶಿವಗೀತಿ ಮಾಲಾ ಎಂಬ ಪ್ರಸಿದ್ಧ ಕೃತಿಯನ್ನು ರಚಿಸಿದ್ದಾರೆ ಇದನ್ನು ಜಯದೇವ ಕವಿಯ ಗೀತಗೋವಿಂದ ಕಾವ್ಯದ ಮಾದರಿಯಲ್ಲಿ ರಚಿಸಲಾಗಿದೆ. ಶಿವಪಾರ್ವತಿಯರ ವಿಷಯವು ಈ ಕಾವ್ಯದ ವಸ್ತು. ಇದರಲ್ಲಿ ೨೦ ಹಾಡುಗಳಿವೆ. ಇವುಗಳನ್ನು ಕರ್ಣಾಟಕ ಸಂಗೀತದ ರಾಗಗಳು ಮತು ತಾಳಗಳಿಗೆ ಅಳವಡಿಸಲಾಗಿದೆ. ಪ್ರತಿಹಾಡಿನ ಮೇಲೆ ಸೂಚಿಸಿರುವ ಜಯದೇವನ ಅಷ್ಟಪದಿಯಂತೆ ಇವುಗಳನ್ನು ಹಾಡಬೇಕು.

**ಚಂದ್ರಶೇಖರನ್ ಎಂ**—(೧೯೩೭) ಇಂದಿನ ಒಬ್ಬ ಖ್ಯಾತ ಪಿಟೀಲು ವಿದ್ವಾಂಸರಾದ ಚಂದ್ರಶೇಖರನ್ ತಮಿಳುನಾಡಿನ ಮಾಯಾವರಂ (ಮಯೂರಂ) ನಲ್ಲಿ ಜನಿಸಿದರು ಇವರ ತಾಯಿ ಚಾರುಬಾಲ ಸಂಗೀತ ಕಲಾನಿಧಿ ಟಿ ಕೆ ಜಯರಾಮ ಅಯ್ಯರ್‌ರವರ ಶಿಷ್ಯೆ ಮತ್ತು ಒಳ್ಳೆಯ ಪಿಟೀಲು ವಾದಕರು. ಚಂದ್ರಶೇಖರನ್‌ಗೆ ಚಿಕ್ಕಂದಿನಲ್ಲಿ ವಿಪರೀತಜ್ವರ ಬಂದು ಕಣ್ಣುಗಳು ಹೋದುವು. ಪಾಶ್ಚಾತ್ಯ ದೇಶಗಳಿಗೆ ಹೋಗಿ ಚಿಕಿತ್ಸೆ ಮಾಡಿಸಿದರೂ ಪ್ರಯೋಜನವಾಗಲಿಲ್ಲ. ಇವರು ತಮ್ಮ ಏಳನೆಯ ವಯಸ್ಸಿನಲ್ಲಿ ತಮ್ಮ ತಾಯಿಯವರಿಂದ ಪಿಟೀಲು ವಾದನದಲ್ಲಿ ಶಿಕ್ಷಣ ಪಡೆದರು. ೧೧ನೆ ವಯಸ್ಸಿನಲ್ಲಿ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ

ವಾದ್ಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದರು. ೧೯೫೫ರಲ್ಲಿ ಅಕಾಡೆಮಿಯಲ್ಲಿ ಪ್ರಥಮ ಕಚೇರಿಯಲ್ಲಿ ನುಡಿಸಿದರು. ೧೯೭೭ರಲ್ಲಿ ಪಲ್ಲವಿ ಪ್ರದರ್ಶನ ಮಾಡಿ ಟಿ. ಚೌಡಯ್ಯ ಮತ್ತು ರಾಜಮಾಣಿಕ್ಯಂ ಪಿಳ್ಳೆಯವರ ಮೆಚ್ಚುಗೆ ಪಡೆದರು. ೧೯೭೫ರಲ್ಲಿ ಅಮೆರಿಕಕ್ಕೆ ಪ್ರವಾಸ ಹೋಗಿ ನ್ಯೂಯಾರ್ಕಿನ ವಸೀರ್ ಕಾಲೇಜಿನಲ್ಲಿ ಕಚೇರಿ ಮಾಡಿ ವಾದ್ಯ ರತ್ನಾಕರ ಎಂಬ ಬಿರುದನ್ನು ಪಡೆದರು. ಇವರ ವಾದನದಲ್ಲಿ ನಾದಸೌಖ್ಯ, ಗಮಕ ಪೂರಿತವಾದ ಸಂಚಾರಗಳು, ರಾಗದ ಸೊಬಗು, ಪಾಂಡಿತ್ಯ ಪೂರ್ಣವಾದ ಸ್ವರಕಲ್ಪನೆ, ಇಂಪು, ಮೆರುಗು, ಭಾವ ಇವೆಲ್ಲವೂ ಇವೆ. ಹೃದಯ ಸ್ಪರ್ಶಿಯಾದ ಶೈಲಿಗೆ ಇವರು ಖ್ಯಾತರಾಗಿದ್ದಾರೆ. ಇವರಿಗೆ ಗಾಯನದಲ್ಲೂ ಪರಿಶ್ರಮವಿದೆ.

**ಚಂದ್ರಶೇಖರಶಾಸ್ತ್ರಿ**—ಇವರು ಬೆಂಗಳೂರಿನಲ್ಲಿ ವಾಸಿಸುತ್ತಿದ್ದ ವಾಗ್ಗೇಯಕಾರರು. ಬಾಲಚಂದ್ರ ಎಂಬ ಅಂಕಿತವಿರುವ ಹಲವು ಜಾವಳಿಗಳನ್ನು ರಚಿಸಿದ್ದಾರೆ.

**ಚಂದ್ರಶ್ರೀ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗಾ ರಿ ಸ

**ಚಂದ್ರಹಸಿತ**—ಈ ರಾಗ ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಚಂದ್ರ**—ಇದು ಭರತನಾಟ್ಯದ ಒಂದು ನವಗ್ರಹ ಹಸ್ತಮುದ್ರೆ. ಎಡಗೈಯಲ್ಲಿ ಅಲಪದ್ಮ, ಬಲಗೈಯಲ್ಲಿ ಪತಾಕ ಹಸ್ತಗಳನ್ನು ಪ್ರದರ್ಶಿಸುವುದು ಚಂದ್ರಹಸ್ತ.

**ಚಂದ್ರಿಕಾ** (೧) ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಪ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೧೮ನೆ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ಚಂದ್ರಿಕಾಗೌಳ**—(೧) ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ಪ ದ ಸ

ಅ: ಸ ದ ಪ ಮ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಸ

**ಚಂದ್ರಿಕಾಧವಳಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಸ

**ಚಂದ್ರಿಕಾಭೈರವಿ**—೧೮ನೆ ಶತಮಾನದ ಸಂಗೀತಶಾಸ್ತ್ರ ಗ್ರಂಥವಾದ ತಮಿಳಿನ 'ನಾಟ್ಯ ಶಾಸ್ತಿರಂ' ಎಂಬುದರಲ್ಲಿ ಉಕ್ತವಾಗಿರುವ ಒಂದು ರಾಗ.

**ಚಂಪಕಮಾಲಿ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಚಂಪಕಲತಾ**—ಈ ರಾಗವು ೧೯ನೆ ಮೇಳಕರ್ತ ಝಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ಪ ಮ ಗ ಮ ರಿ ಸ

**ಚಂಪಕವಿದಾರಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ನಿ ದ ಮ ಪ ದ ನಿ ದ ಸ

ಅ: ಸ ನಿ ದ ನಿ ಮ ದ ಮ ಗ ರಿ ಗ ಸ

**ಚೆಂಚುಕಾಂಭೋಜಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಮ ಗ ರಿ ಪ ಮ ದ ನಿ ಸ

ಅ: ಸ ನಿ ಪ ನಿ ಮ ಗ ರಿ ಸ

ಉಪಾಂಗರಾಗ. ಸಂಪೂರ್ಣ ಸ್ವರಸ್ಥಾನಗಳೂ, ತಿರುವುಗಳೂ ಅಧಿಕವಾಗಿರುವ ರಾಗ. ಶೃಂಗಾರ ಮತ್ತು ಹಾಸ್ಯರಸ ಪ್ರಧಾನವಾದ ಸಾರ್ವಕಾಲಿಕರಾಗ. ತ್ಯಾಗರಾಜರ 'ವರರಾಗಲಯಜ್ಞುಲು' ಎಂಬ ಈ ರಾಗದ ಕೃತಿಯು ಪ್ರಸಿದ್ಧವಾಗಿದೆ.

**ಚೆಂಬೈ ವೈದ್ಯನಾಥ ಭಾಗವತರು**—(೧೮೯೬–೧೯೭೪) ಚೆಂಬೈ ವೈದ್ಯನಾಥ

ಭಾಗವತರು ಪ್ರಸಿದ್ಧ ಗಾಯಕರಾಗಿ ಸಂಗೀತ ಕ್ಷೇತ್ರದಲ್ಲಿ ವಿರಾಜಿಸಿದರು. ಇವರು ಕೇರಳದ ಪಾಲ್‌ಘಾಟ್ ಜಿಲ್ಲೆಯ ಚೆಂಬೈ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಘೊಂಡಕುಳದಿ ಅನಂತರಾಮ ಭಾಗವತರು ಪ್ರಸಿದ್ಧ ಸಂಗೀತಗಾರರಾಗಿದ್ದರು. ವೈದ್ಯನಾಥರಿಗೆ ತಂದೆಯೇ ಗುರು. ಆರನೆಯ ವಯಸ್ಸಿನಲ್ಲಿ ಇದ್ದಕ್ಕಿದ್ದಂತೆ ಶಾರೀರದ ತೊಂದರೆಯುಂಟಾಯಿತು. ಆದ್ದರಿಂದ ಕಚೇರಿಗಳಲ್ಲಿ ಪಿಟೀಲುವಾದ್ಯವನ್ನು ನುಡಿಸಲು ತೊಡಗಿದರು. ಕೆಲವು ವರ್ಷಗಳ ನಂತರ ಶಾರೀರವು ಸರಿ ಹೋಯಿತು. ತಮ್ಮ ೨೨ನೆ ವಯಸ್ಸಿನಲ್ಲಿ ೧೯೧೮ರಲ್ಲಿ ಮದ್ರಾಸಿನ ಗೋಖಲೆ ಹಾಲಿನಲ್ಲಿ ಪ್ರಥಮ ಕಚೇರಿಯನ್ನು ಮಲೈಕೋಟೆ ಗೋವಿಂದಸ್ವಾಮಿಪಿಳ್ಳೆ, ಅಳಗನಂಬಿ ಮತ್ತು ದಕ್ಷಿಣಾಮೂರ್ತಿಯವರ ಪಕ್ಕವಾದ್ಯದೊಡನೆ ಹಾಡಿ ರಸಿಕರನ್ನು ಮಂತ್ರಮುಗ್ಧರನ್ನಾಗಿ ಮಾಡಿ ಪ್ರಸಿದ್ಧರಾದರು. ೧೯೩೨ರಲ್ಲಿ ತಮ್ಮ ಗ್ರಾಮಾಫೋನ್ ರೆಕಾರ್ಡ್ ಮಾಡಿದರು. ಗೋವಿಂದಸ್ವಾಮಿಪಿಳ್ಳೆ ಮತ್ತು ಅಳಗನಂಬಿಯ ನಂತರ ಮೈಸೂರು ಚೌಡಯ್ಯ ಮತ್ತು ಪಾಲಘಾಟ್ ಮಣಿಅಯ್ಯರ್‌ರವರ ಪಕ್ಕವಾದ್ಯಗಳೊಡನೆ ಅತ್ಯಧಿಕ ಸಂಖ್ಯೆಯಲ್ಲಿ ಕಚೇರಿಗಾಯನ ಮಾಡಿದ್ದಾರೆ. ಚೆಂಬೈಯವರು ತಮ್ಮ ೯ನೆ ವಯಸ್ಸಿನಲ್ಲಿ ಕಚೇರಿ ಗಾಯನವನ್ನು ಆರಂಭಿಸಿ ಕೊನೆಯವರೆಗೂ ಭರ್ಜರಿಯಾಗಿ ಹಾಡುತ್ತಲೇ ಇದ್ದರು. ಮೈಕ್ ಇಲ್ಲದ ಕಾಲದಲ್ಲಿ ಅವರ ಕಂಠಶ್ರೀ ಸಾವಿರಾರು ಜನರಿಗೆ ಕೇಳಿಸುವಂತಿತ್ತು ಮಧ್ಯದಲ್ಲಿ ಕೆಲವು ಕಾಲ ಶಾರೀರದ ತೊಂದರೆ ಒದಗಿದ್ದಾಗ ಗುರುವಾಯೂರು ಅಪ್ಪನ್ ಶ್ರೀಕೃಷ್ಣನನ್ನು ತ್ರಿಕರಣ ಶುದ್ಧಿಯಿಂದ ಪೂಜಿಸಿ ಪುನಃ ಅದೇ ಸೊಗಸಾದ ಶಾರೀರವನ್ನು ಪಡೆದರು. ಕಂಚಿನಕಂಠ, ಮಹತ್ತರ ಸಾಧನೆ, ಶಿಸ್ತು ಮತ್ತು ಸಂಯಮದ ಪರಿಶುದ್ಧವಾದ ಜೀವನ, ದೈವಭಕ್ತಿ ಮತ್ತು ಸಂಪ್ರದಾಯ ಶರಣತೆ ಇವು ಇವರ ಯಶಸ್ಸಿನ ಗುಟ್ಟು. ಇವರ ಗಾಯನದಲ್ಲಿ ಕಾಲಪ್ರಮಾಣ, ಲಯದಬಿಕ್ಕಟ್ಟು, ನಾದದಲ್ಲಿ ಗಾಂಭೀರ್ಯ, ಶ್ರುತಿಶುದ್ಧತೆ ಇವುಗಳು ಎದ್ದು ಕಾಣುತ್ತಿದ್ದುವು ಯಾವ ಕಾಲದಲ್ಲಿ ಯಾದರೂ ಲೀಲಾಜಾಲವಾಗಿ ಹಾಡಬಲ್ಲವರಾಗಿದ್ದರು. ಇವರಿಗೆ ರಾಷ್ಟ್ರಪತಿ ಪ್ರಶಸ್ತಿ, ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಸಂಗೀತ ಕಲಾನಿಧಿ ಮುಂತಾದ ಹಲವಾರು ಬಿರುದುಗಳು ಮತ್ತು ಸನ್ಮಾನಗಳು ದೊರಕಿವೆ. ಹಾಸ್ಯಪ್ರಿಯರೂ, ಸರಳ ಜೀವಿಗಳೂ, ಸದಾಚಾರ ಸಂಪನ್ನರೂ ಹಾಗೂ ತರುಣ ವಿದ್ವಾಂಸರನ್ನು ಪ್ರೋತ್ಸಾಹಿಸಿ ಬೆಳಕಿಗೆ ತರುವ ಹಿರಿಯ ಗುಣವುಳ್ಳವರಾಗಿದ್ದರು. ಇವರ ಶಿಷ್ಯರಲ್ಲಿ ಚೆಂಬೈನಾರಾಯಣನ್ ಮತ್ತು ಜೇಸುದಾಸ್ ಪ್ರಮುಖರು.

**ಚೆಂಡ**—ಚೆಂಡ ಅಥವಾ ಚಂಡೆವಾದ್ಯವು ಕೇರಳ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚು ಬಳಕೆಯಲ್ಲಿರುವ ವಾದ್ಯ. ಮೃದಂಗದಂತಿರುವ ದೊಡ್ಡ ವಾದ್ಯ. ಇದರ ಶಬ್ದವು ಬಹಳ ಕರ್ಕಶ ಮತ್ತು ಬಹು ದೂರಕ್ಕೆ ಕೇಳಿಸುತ್ತದೆ ಇದರ ಶಬ್ದ ಕೇಳಿದೊಡನೆ ಜನರು ತಮ್ಮ ಊರಿನ ದೇವಾಲಯದ ಆವರಣದಲ್ಲಿ ಅಂದು ರಾತ್ರಿ ಯಕ್ಷಗಾನ ಅಥವಾ ಕಥಕಳಿ ನಡೆಯುವುದೆಂದು ತಿಳಿಯುತ್ತಾರೆ. ಯಕ್ಷಗಾನ ಅಥವಾ

ಬಯಲಾಟಗಳಲ್ಲಿ ರಾಕ್ಷಸರ ಪಾತ್ರಗಳಿಗೆ ಮೃದಂಗದೊಡನೆ ಘೋರವಾದ ಹಿನ್ನೆಲೆಯ ವಾತಾವರಣವನ್ನು ಈ ವಾದ್ಯವು ಕಲ್ಪಿಸುತ್ತದೆ. ಇದನ್ನು ಕುತ್ತಿಗೆಗೆ ನೇತುಹಾಕಿ ಕೊಂಡು ಕಬ್ಬಿಣದ ಸಲಾಕೆಗಳಿಂದ ಬಡಿಯುತ್ತಾರೆ. ಪರಿಣತರಾಗಿರುವವರು ಬಾರಿಸುವುದು ಆಕರ್ಷಕವಾಗಿರುತ್ತದೆ.

**ಚೆಂಪಟೆ**—ಇದು ಕಥಕಳಿ ಸಂಗೀತದಲ್ಲಿ ಆದಿತಾಳದ ಹೆಸರು.

**ಛ**—ಸದಾಶಿವ, ನಿಶಾಚರ ಎಂಬ ನಾನಾರ್ಥಗಳಿವೆ.

**ಛತ್ರಧರಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

**ಆ:** ಸ ಗ ಮ ಪ ಮ ರಿ ಪ ಸ

**ಅ:** ಸ ನಿ ದ ಪ ಮ ಗ ರಿ ಸ

**ಛಾಪುತಾಳ**—ಇದು ದೇಶೀ ಸಂಗೀತಕ್ಕೆ ಸೇರಿದ ಅತ್ಯಂತ ಪುರಾತನವಾದ ಒಂದು ಕಾಲಕ್ರಿಯೆ. ಈ ತಾಳದಲ್ಲಿ ಅನೇಕ ಜಾನಪದ ಗೀತೆಗಳಿವೆ. ಛಾಪು ತಾಳಗಳು ಲಯ ವಿನ್ಯಾಸದ ವಿಪರ್ಯಯವೆಂದು ಹೇಳಬಹುದು. ಅಂದರೆ ತಾಳಾಕ್ಷರ ಕಾಲವನ್ನು ಸಂಕ್ಷಿಪ್ತ ಕ್ರಿಯೆಗಳೊಂದಿಗೆ ಪ್ರದರ್ಶಿಸುವುದು. ಸಾಧಾರಣವಾಗಿ ಛಾಪುತಾಳಗಳೆಲ್ಲವೂ ಎರಡು ಘಾತಗಳನ್ನು ಹೊಂದಿರುತ್ತವೆ ಛಾಪುತಾಳದಲ್ಲಿ ಮುಖ್ಯವಾಗಿ ನಾಲ್ಕು ವಿಧಗಳಿವೆ.

(೧) **ಮಿಶ್ರಛಾಪು** (೩+೪=೭)—ಇದು ಮೂರು ಅಕ್ಷರ ಕಾಲದ ಒಂದು ಘಾತ,ತರುವಾಯ ನಾಲ್ಕು ಅಕ್ಷರ ಕಾಲದ ಒಂದು ಘಾತವನ್ನು ಹೊಂದಿರುತ್ತದೆ. ಶ್ಯಾಮಾಶಾಸ್ತ್ರಿಗಳ ಕೆಲವು ರಚನೆಗಳಲ್ಲಿ ಮಿಶ್ರಛಾಪುವಿನ ಮೊದಲು ನಾಲ್ಕು ಅಕ್ಷರ ಕಾಲವಿದ್ದು ನಂತರ ಮೂರು ಅಕ್ಷರ ಕಾಲ ಪ್ರಮಾಣವು ಬರುತ್ತದೆ. ಇದಕ್ಕೆ ವಿಲೋಮ ಛಾಪು ಎಂದು ಹೆಸರು.

(೨) **ಖಂಡಛಾಪು** (೨+೩=೫)—ಇದರಲ್ಲಿ ಮೊದಲ ಘಾತವು ಎರಡು ಅಕ್ಷರಕಾಲವನ್ನೂ ಎರಡನೆಯ ಘಾತವು ಮೂರು ಅಕ್ಷರ ಕಾಲವನ್ನೂ ಹೊಂದಿರು ತ್ತದೆ. ಈ ತಾಳದ ಅಕ್ಷರಕಾಲ ಪ್ರಮಾಣವು ಮಿಶ್ರ ಝಂಪೆತಾಳದ ಅರ್ಧದಷ್ಟಿರುವುದ ರಿಂದ ಇದನ್ನು ಅರಝಂಪ ಎಂದು ಕರೆಯುವುದುಂಟು.

(೩) **ತಿಶ್ರಛಾಪು** (೧+೨=೩)—ಇದರ ಮೊದಲ ಘಾತಕ್ಕೆ ಒಂದು ಅಕ್ಷರ ಕಾಲ, ನಂತರ ಎರಡನೆಯ ಘಾತಕ್ಕೆ ಎರಡು ಅಕ್ಷರ ಕಾಲ ಪ್ರಮಾಣವಿರುತ್ತದೆ

(೪) **ಸಂಕೀರ್ಣಛಾಪು** (೪+೫=೯)—ಇದರ ಮೊದಲ ಘಾತಕ್ಕೆ ನಾಲ್ಕು ಅಕ್ಷರ ಕಾಲವೂ, ಎರಡನೆಯ ಘಾತಕ್ಕೆ ಐದು ಅಕ್ಷರ ಕಾಲಪ್ರಮಾಣವೂ ಇರುತ್ತದೆ. ಈ ತಾಳವನ್ನು ಪಲ್ಲವಿಗಳಲ್ಲಿ ಅಪರೂಪವಾಗಿ ಉಪಯೋಗಿಸಿದ್ದಾರೆ. ತ್ಯಾಗರಾಜರು ಮಿಶ್ರಛಾಪು ಮತ್ತು ಖಂಡಛಾಪು ತಾಳಗಳಲ್ಲಿ ಅನೇಕ ಕೃತಿ ಗಳನ್ನು ರಚಿಸಿದ್ದಾರೆ. ಶ್ಯಾಮಾಶಾಸ್ತ್ರಿಗಳ ಕೃತಿಗಳಲ್ಲಿ ಛಾಪುತಾಳದ ವೈವಿಧ್ಯತೆ ಯನ್ನು ಕಾಣಬಹುದು.

ಒಂದು ಕೃತಿಯ ತಾಳವನ್ನು ಛಾಪುತಾಳ ಎಂದು ಹೇಳಿದರೆ ಅದು ಮಿಶ್ರಛಾಪು ತಾಳವೆಂದು ತಿಳಿದುಕೊಳ್ಳಬೇಕು

**ಛಾಯಾಕೌಶಿಕ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಛಾಯಾ**—(೧) ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ ಇದೊಂದು ಉಭಯ ವಕ್ರರಾಗ.

ಆ: ಸ ರಿ ಗ ರಿ ಮ ಪ ನಿ ದ ನಿ ಸ̇

ಅ: ಸ̇ ನಿ ಪ ನಿ ದ ಪ ಮ ಗ ಮ ರಿ ಗ ಸ

(೨) ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

(೩) ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಇದೊಂದು ಚಂದ್ರಾಂಶ ರಾಗ ವೆಂದು ಹೇಳಿದೆ.

(೪) ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ ಇದು ೨೦ ಭಾಷಾಂಗ ರಾಗಗಳಲ್ಲಿ ಒಂದು ರಾಗ.

(೫) ಸಂಗೀತ ನಾರಸಂಗ್ರಹವೆಂಬ ತೆಲುಗು ಗ್ರಂಥವಲ್ಲಿ ಹೇಳಿರುವ ೨೪ ಶ್ರುತಿ ಪದ್ಧತಿಯಲ್ಲಿ ಇದು ೧೭ನೆ ಶ್ರುತಿಯ ಹೆಸರು.

**ಛಾಯಾಗೌಡ**—ನಾರದ ವಿರಚಿತ ಸಂಗೀತಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಪುಲ್ಲಿಂಗ ರಾಗ ಸಂಗೀತ ಸಮಯ ಸಾರವೆಂಬ ಗ್ರಂಥದಲ್ಲಿ ಈ ರಾಗವು ಒಂದು ಉಪಾಂಗ ಸಂಪೂರ್ಣರಾಗವೆಂದು ಹೇಳಿದೆ.

**ಛಾಯಾಗೌರಿ**—ಈ ರಾಗವು ೭ನೆಯ ಮೇಳಕರ್ತ ಸೇನಾವತಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ನಿ ದ ನಿ ಸ̇

ಅ: ಸ̇ ನಿ ದ ಪ ಮ ಗ ಮ ರಿ ಸ

ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಈ ರಾಗವು ಮಾಯಾ ಮಾಳವಗೌಳದ ಜನ್ಯವೆಂದು ಹೇಳಿದೆ.

**ಛಾಯಾಗೌಳ**—(೧) ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ̇

ಅ: ಸ̇ ದ ನಿ ಪ ಮ ಗ ಸ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

(ಅ) ಆ: ಸ ರಿ ಮ ಪ ನಿ ಸ
ಅ: ಸ ನಿ ದ ಪ ಮ ಗ ಸ ರಿ ಸ
(ಆ) ಆ: ಸ ರಿ ಮ ಪ ದ ಪ ಮ ಪ ದ ಸ ನಿ ಸ
ಅ: ಸ ನಿ ದ ದ ಪ ಮ ಗ ಸ ರಿ ಸ

ಮುತ್ತುಸ್ವಾಮಿ ದೀಕ್ಷಿತರು 'ಸರಸ್ವತ್ಯಾ' ಎಂಬ ಕೃತಿಯನ್ನು ಈ ರಾಗದಲ್ಲಿ ರಚಿಸಿದ್ದಾರೆ.

**ಛಾಯಾತರಂಗಿಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿ ರಾಗದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ನಿ ಸ
ಅ: ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ವಕ್ರಷಾಡವ ಸಂಪೂರ್ಣರಾಗ. ಗಾಂಧಾರ ಮತ್ತು ನಿಷಾದವು ರಾಗಛಾಯಾ ಸ್ವರಗಳು. ಮಧ್ಯಮ, ನಿಷಾದಗಳು ಪರಸ್ಪರ ವಾದಿಸಂವಾದಿಗಳು. ಹಾಸ್ಯ ಮತ್ತು ಶೃಂಗಾರ ರಸಗಳಿಗೆ ಸೂಕ್ತವಾದ ರಾಗ. ಸಾರ್ವಕಾಲಿಕರಾಗ. ತ್ಯಾಗರಾಜ ವಿರಚಿತವಾದ 'ಕೃಪಜೂಚುಟಕು ವೇಳರಾ ರಾಮ' ಮತ್ತು 'ಇತರ ದೈವ ಮುಲವಲ' ಮತ್ತು ಮುತ್ತುಸ್ವಾಮಿ ದೀಕ್ಷಿತರು ರಚಿಸಿರುವ 'ಸರಸ್ವತೀ ಛಾಯಾ ತರಂಗಿಣಿ' ಎಂಬ ಕೃತಿಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಛಾಯಾತೊಡ್ಡಿ**—ಪಾರ್ಶ್ವದೇವವಿರಚಿತ ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಛಾಯಾತೋಡಿ**—ಪ್ರಾಚೀನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಈ ರಾಗವನ್ನು ತೋಡಿಯ ಒಂದು ಉಪಾಂಗರಾಗವೆಂದು ಹೇಳಿದೆ.

**ಛಾಯಾನಟ್ಟೆ**—ಪಾರ್ಶ್ವದೇವ ವಿರಚಿತ ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಉಪಾಂಗ ಸಂಪೂರ್ಣ ರಾಗಗಳಲ್ಲಿ ಒಂದು ರಾಗ. ಸಂಗೀತ ರತ್ನಾಕರವೆಂಬ ಗ್ರಂಥದಲ್ಲೂ ಈ ರಾಗವು ಉಕ್ತವಾಗಿದೆ.

**ಛಾಯಾನಾರಾಯಣಿ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ಪ ಮ ಪ ದ ನಿ ಸ
ಅ: ಸ ನಿ ದ ನಿ ಪ ಮ ಗ ರಿ ಸ

**ಛಾಯಾನಾಟಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಪ ಸ
ಅ: ಸ ನಿ ದ ನಿ ಪ ಮ ರಿ ಸ

ಇದೊಂದು ಏಕಸ್ವರ ವಕ್ರರಾಗ. ಔಡವಷಾಡವ ಉಪಾಂಗರಾಗ. ರಿಷಭ,

ಮಧ್ಯಮ ಮತ್ತು ಧೈವತವು ಜೀವ ಸ್ವರಗಳು. ಈ ರಾಗವು ರಾಗತಾಳ ಚಿಂತಾಮಣಿ ಎಂಬ ಗ್ರಂಥದಲ್ಲಿ ಉಕ್ತವಾಗಿದೆ. ಸಾರ್ವಕಾಲಿಕ ರಾಗ. ತ್ಯಾಗರಾಜ ವಿರಚಿತವಾದ 'ಇದಿ ಸಮಯಮುರಾ' ಮತ್ತು ಮುತ್ತುಸ್ವಾಮಿ ದೀಕ್ಷಿತರ 'ಭೋಗ ಛಾಯಾ ನಾಟಕ' ಎಂಬ ಕೃತಿಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಛಾಯಾನಾಟಿ**—ಇದು ನಾರದ ವಿರಚಿತ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಛಾಯಾಚೌಳಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಸ ಪ ದ ನಿ ಸ̇

ಅ: ಸ̇ ನಿ ಪ ದ ಮ ಗ ರಿ ಸ

**ಛಾಯಾಮಾರುವ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ

ಆ: ಸ ಗ ರಿ ಗ ಮ ದ ನಿ ದ ಸ̇

ಅ: ಸ̇ ನಿ ದ ಮ ಗ ರಿ ಸ

**ಛಾಯಾಮಾಳವಿ**—ಈ ರಾಗವು ೭ನೆ ಮೇಳಕರ್ತ ಸೇನಾಪತಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ ದ ಸ̇

ಅ: ಸ̇ ನಿ ದ ಪ ಮ ಗ ಮ ರಿ ಸ

**ಛಾಯಾರಾಗ**—ಒಂದು ವಿಶಿಷ್ಟವಾದ ಸ್ವರಸಮೂಹ ಅಥವಾ ಪ್ರಯೋಗ ದಿಂದ ವ್ಯಕ್ತವಾಗುವ ರಾಗ. ಉದಾ: ಹುಸೇನಿರಾಗ.

**ಛಾಯಾರುದ್ರ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ಮ ದ ನಿ ಸ̇

ಅ: ಸ̇ ದ ನಿ ಪ ಮ ಗ ರಿ ಸ

**ಛಾಯಾಲಗತಾಳ**—ರಾಗಗಳಂತೆಯೇ ತಾಳಗಳನ್ನು ಶುದ್ಧ, ಛಾಯಾಲಗ ಮತ್ತು ಸಂಕೀರ್ಣವೆಂದು ವರ್ಗೀಕರಿಸಲಾಗಿತ್ತು. ಎರಡು ತಾಳಗಳ ಸಮ್ಮಿಳನದಿಂದ ಆಗುವ ತಾಳಕ್ಕೆ ಛಾಯಾಲಗತಾಳವೆಂದು ಹೆಸರು. ಎರಡಕ್ಕೂ ಹೆಚ್ಚು ತಾಳಗಳ ಕಾಲ ಪ್ರಮಾಣಗಳ ಸಮ್ಮಿಳನದಿಂದಾಗುವ ತಾಳವು ಸಂಕೀರ್ಣ ತಾಳ. ಉದಾ: ಸಿಂಹನಂದನ ತಾಳ.

**ಛಾಯಾಲಗರಾಗ**—ರಾಗವಿಸ್ತಾರ ಮಾಡುವಾಗ ಇನ್ನೊಂದು ರಾಗದ ಛಾಯೆಯು ಆಗಾಗ್ಗೆ ಕಂಡು ಬರುವ ರಾಗಕ್ಕೆ ಛಾಯಾಲಗರಾಗವೆಂದು ಹೆಸರು. ಇದನ್ನು ಸಾಲಂಗರಾಗ ಮತ್ತು ಸಾಲಗರಾಗ ಎಂದು ಹೇಳುವುದುಂಟು.

**ಛಾಯಾವತಿ**—(೧) ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಮುತ್ತುಸ್ವಾಮಿ ದೀಕ್ಷಿತರ ಛಾಯಾವತೀಂ ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ (೨) ಇದು ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೧೭ನೆ ಮೇಳಕರ್ತ ರಾಗ.

**ಛಾಯಾವರ್ಧನಿ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಛಾಯಾವೇಳ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ

ಅ: ಸ ದ ನಿ ಪ ಮ ಗ ರಿ ಸ

**ಛಾಯಾವೇಳಾವಳಿ**—ಪುರಾತನ ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಇದನ್ನು ವೇಳಾವಳಿ ರಾಗದ ಒಂದು ಉಪಾಂಗರಾಗವೆಂದು ಹೇಳಿದೆ.

**ಛಾಯಾಸಿಂಧು**—ಈ ರಾಗವು ೧೯ನೆ ಮೇಳಕರ್ತ ಝುಂಕಾರ ಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಛಾಯಾಲಗಸೂಡ**—ಇದೊಂದು ಬಗೆಯ ಪ್ರಬಂಧ. ಪ್ರಬಂಧಗಳನ್ನು ಮಧ್ಯಯುಗದಲ್ಲಿ ಸೂಡ, ಆಲಿಕ್ರಮ ಮತ್ತು ವಿಪ್ರಕೀರ್ಣ ಎಂದು ವರ್ಗೀಕರಣ ಮಾಡಲಾಗಿತ್ತು. ಸೂಡ ಪ್ರಬಂಧಗಳನ್ನು ಶುದ್ಧ ಸೂಡ ಮತ್ತು ಛಾಯಾಲಗ ಅಥವಾ ಸಾಲಗ ಸೂಡ ಎಂಬ ಎರಡು ಬಗೆಗಳಾಗಿ ವರ್ಗೀಕರಣ ಮಾಡಲಾಗಿತ್ತು. ಸಪ್ತ ತಾಳಗಳು ಮತ್ತು ಅವುಗಳ ಪ್ರಭೇದಗಳಲ್ಲಿ ಛಾಯಾಲಗ ಸೂಡಗಳು ರಚಿಸಲ್ಪಟ್ಟಿವೆ. ಸುಮಾರು ೧೮ನೆ ಶತಮಾನದವರೆಗೂ ಪ್ರಬಂಧಗಳು ಕಚೇರಿಗಳಲ್ಲಿನ ಕಾಲದ ಬಹು ಭಾಗವನ್ನು ಆಕ್ರಮಿಸುತ್ತಿದ್ದುವು.

**ಛಾಯಾಸೈಂಧವಿ**—ಈ ರಾಗವು ೧೧ನೆ ಮೇಳಕರ್ತ ಕೋಕಿಲ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಛಾಯಾಶೋಭಿತ**—ಈ ೨೨ನೆ ಮೇಳ ಕರ್ತಖರಹರ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ದ ಮ ರಿ ಗ ರಿ ಸ

**ಛಂದೋಧರೀ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ ಪ ಸ

ಅ: ಸ ನಿ ದ ಮ ಗ ರಿ ಸ

**ಛಂದೋವತಿ**—ಭರತ ಮುನಿಯ ದ್ವಾವಿಂಶತಿ ಶ್ರುತಿ ಪದ್ಧತಿಯಂತೆ ಇದು ನಾಲ್ಕನೆ ಶ್ರುತಿಯ ಹೆಸರು. ಇದು ಷಡ್ಜದ ನಿಯತಶ್ರುತಿ.

**ಜ**—ವಾನರ, ಶೂಲೀ, ಲಂಬೋದರೀ, ದೀರ್ಘಬಾಹು, ನಂದೀ, ಸುರಾಧಿಪ ಇತ್ಯಾದಿ ನಾನಾರ್ಥಗಳಿವೆ.

**ಜಕ್ಕಿ**—ದಕ್ಷಿಣ ಭಾರತದ ದೇವಾಲಯಗಳಲ್ಲಿ ನುಡಿಸುವ ಒಂದು ಬಗೆಯ ಮದ್ದಲೆ. ಇದು ತಮಿಳುನಾಡಿನ ವೃದ್ಧಾಚಲದ ದೇವಾಲಯದಲ್ಲಿದೆ. ಇದನ್ನು ಉತ್ಸವಕಾಲದಲ್ಲಿ ನುಡಿಸುತ್ತಾರೆ.

**ಜಕ್ಕಿನಿದರು**—ಆಂಧ್ರ ಪ್ರದೇಶದಲ್ಲಿರುವ ಪರಂಪರಾಗತವಾಗಿ ನೃತ್ಯ ಮಾಡುವ ಮತ್ತು ಹಾಡುವ ಒಂದು ವರ್ಗದ ಜನರು. ಇವರಿಗೆ ಜಕ್ಕುಲು ಎಂದು ಹೆಸರು. ಇವರ ಹಾಡುಗಳಿಗೆ ಜಕ್ಕಿನಿದರು ಎಂದು ಹೆಸರು.

**ಜ-ಗಣ**—ಲಘು ಗುರು ವರ್ಣಗಳನ್ನು ಮೂರು ಮೂರಾಗಿ ವಿಂಗಡಿಸಿದರೆ ಎಂಟು ವರ್ಣಗಳಾಗುವುವು. ಲಘು ಗುರು ಲಘು ವಿರುವುದು ಜಗಣ. ಉದಾ: ಸುರಾಜ್ಯ ಮದಿರ್ಕೆ.

**ಜಗಝಂಪ**—೧೦೮ ತಾಳಗಳಲ್ಲಿ ಇದು ೮೩ನೆ ತಾಳ. ಇದು ೩¾ ಮಾತ್ರೆಗಳು ಅಥವಾ ೧೩ ಅಕ್ಷರ ಕಾಲವುಳ್ಳ ತಾಳ ಮತ್ತೊಂದು ಮತದ ಪ್ರಕಾರ ಇದು ೩¾ ಮಾತ್ರೆ ಅಥವಾ ೧೫ ಅಕ್ಷರಕಾಲವಿರುವ ತಾಳ.

**ಜಗನ್ಮಣಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ದ ನಿ ಪ ದ ನಿ ಸ

ಅ: ಸ ಪ ಮ ಗ ರಿ ಸ

**ಜಗನ್ಮಾತ**—ಈ ರಾಗವು ೩೦ ನೆ ಮೇಳ ಕರ್ತ ನಾಗಾನಂದಿನಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ಜಗನ್ಮೋಹನ**—ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೩೮ನೆ ಮೇಳದ ಹೆಸರು.

**ಜಗನ್ಮೋಹನಂ**—ಈ ರಾಗವು ೩೮ನೆ ಮೇಳಕರ್ತ ಜಾಲಾರ್ಣವದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಜಗನ್ಮೋಹಿನಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ಪ ಮ ಗಾ ರಿ ಸ

ಉಪಾಂಗರಾಗ. ಗಾಂಧಾರ, ನಿಷಾದಗಳು ರಾಗ ಛಾಯಾ ಸ್ವರಗಳು ಹಾಗೂ ವಾದಿ ಸಂವಾದಿಗಳು. ಗಮಕ ವರಿಕ ರಕ್ತಿರಾಗ. ವೀರರಸ ಪ್ರಧಾನರಾಗ. ತ್ಯಾಗರಾಜರ ಮಾಮವ ಸತತಂ ಮತ್ತು ಶೋಭಿಲ್ಲು ಸಪ್ತಸ್ವರ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಜಗನ್ಮನೋಹರಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಗ ಸ

**ಜಗದಂಬರಿ**—ಈ ರಾಗವು ೫೭ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ

ಆ: ಸ ಗ ಮ ಪ ದ ನಿ

ಅ: ದಾ ಪ ಮ ಪ ಗಾ ರಿ ಸ ನಿ ಸ

**ಜಗದ್ಭರಿ**—ಈ ರಾಗವು ೫೪ನೆ ಮೇಳಕರ್ತ ವಿಶ್ವಂಭರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಜಗದೀಶ್ವರಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಜಗದೇಕಮಲ್ಲ** (೧೧೩೮–೧೧೫೦ ಕ್ರಿಶ)—ಇವನು ಕಲ್ಯಾಣಿಯ ಚಾಳುಕ್ಯ ವಂಶದ ದೊರೆ. ಶಾರ್ಙ್ಗ ದೇವನು ಇವನನ್ನು ಬಹು ಭಕ್ತಿಯಿಂದ ಸ್ತೋತ್ರ ಮಾಡಿದ್ದಾನೆ. ಇವನಿಗೆ ಪ್ರತಾಪ ಚಕ್ರವರ್ತಿ ಎಂಬ ಬಿರುದಿತ್ತು. ಇವನು

ಅಭಿನವ ಗುಪ್ತನ ಅನುಯಾಯಿ. ಗೀತ ಮತ್ತು ನೃತ್ಯ ವಿಷಯಕವಾದ ಸಂಗೀತ ಚೂಡಾಮಣಿ ಎಂಬ ಐದು ಪ್ರಕರಣಗಳಿರುವ ಗ್ರಂಥವನ್ನು ರಚಿಸಿದ್ದಾನೆ. ಇವರಲ್ಲಿ ಸುಮಾರು ೧೬೦೦ ಶ್ಲೋಕಗಳಿವೆ. ಸಂಗೀತ ಚೂಡಾಮಣಿ ಸಾರ ಎಂಬುದು ಇದರ ಸಂಗ್ರಹವಾದ ಗ್ರಂಥ 'ಸಂಗೀತ ಚೂಡಾಮಣಿ'ಯು ತಾಳ ಮತ್ತು ಪ್ರಬಂಧಗಳಿಗೆ ಆಧಾರ ಭೂತವಾದ ಗ್ರಂಥ. ಇದನ್ನು ಪ್ರಮಾಣ ಗ್ರಂಥವಾಗಿ ಪಾರ್ಶ್ವದೇವನು ಸ್ವೀಕರಿಸಿದ್ದಾನೆ. ಮೂಲ ಗ್ರಂಥವು ಮೈಸೂರಿನ ವರಲಕ್ಷ್ಮಿ ಸಂಗೀತ ಅಕಾಡೆಮಿ ಎಂಬ ಸಂಸ್ಥೆಯಲ್ಲಿದೆ.

**ಜಗಾಭರಣ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ

ಆ: ಸ ರಿ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಜಗಾಂಗನ**— ಈ ರಾಗವು ೪೨ನೆ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ

ಅ: ಸ ನಿ ಪ ಮ ರಿ ಗ ಮ ರಿ ಸ

**ಜಟಾಧರಿ**—ಈ ರಾಗವು ೫೨ನೆ ಮೇಳಕರ್ತ ರಾಮ ಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಜಟಪಲ್ಲಿ ಗೋಪಾಲ**—ಜಟಪಲ್ಲವಾರು ಎಂಬ ತೆಲುಗು ಪದಗಳ ವಾಗ್ಗೇಯ ಕಾರ ತನ್ನ ರಚನೆಗಳಲ್ಲಿ ಬಳಸಿರುವ ಅಂಕಿತ.

**ಜಟಿ**—ಇದು ಕಟಪಯಾದಿ ಪದ್ಧತಿಯಂತೆ ಮಿಶ್ರಜಾತಿ ಅಟತಾಳಕ್ಕೆ ಕೊಟ್ಟಿರುವ ಹೆಸರು. ಇದರ ಒಂದಾವರ್ತಕ್ಕೆ ೧೮ ಅಕ್ಷರಕಾಲ.

**ಜತಿ**—ತಕ ತರಿಕಿಟ ನಕ ತದಿಂಕಿಣತೊಂ ಎಂಬ ಮೃದಂಗದ ನುಡಿಕಾರ ಅಥವಾ ಜತಿಗಳು. ಇದಕ್ಕೆ ಸಂಸ್ಕೃತದಲ್ಲಿ ಪಾಟ ಎಂದೂ, ತಮಿಳಿನಲ್ಲಿ ಸೊಲ್ಕಟ್ಟು ಎಂದು ಹೆಸರು.

**ಜತಿಸ್ವರ**—ಇವು ತಾಳದ ಚೌಕಟ್ಟಿನಲ್ಲಿ ಮೃದಂಗದ ಜತಿಗಳನ್ನು ಹೊಂದಿರುವ ರಚನೆಗಳು ಇವಕ್ಕೆ ಪಾಟ ಎಂದೂ ಶೊಲ್ಕಟ್ಟು ಎಂದೂ ಹೆಸರಿವೆ. ಇವು ರಚನೆಯಲ್ಲಿ ಸ್ವರಜತಿಯನ್ನು ಹೋಲುತ್ತವೆ. ಇವುಗಳಲ್ಲಿ ಸಾಹಿತ್ಯವಿರುವುದಿಲ್ಲ. ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳಿರುತ್ತವೆ. ಮೂರರಿಂದ ಐದು ಚರಣಗಳಿದ್ದು ಪ್ರತಿಚರಣಕ್ಕೆ ಬೇರೆ ಬೇರೆ ಧಾತುಗಳಿರುತ್ತವೆ.

ಜತಿಸ್ವರದಲ್ಲಿ ಬರುವ ಮುಕ್ತಾಯ ಸ್ವರಗಳು ಕೆಲವು ಸಲ ಒಂದಾವರ್ತ ಅಥವಾ ಅರ್ಧ ಆವರ್ತ ಜತಿಗಳನ್ನು ಹೊಂದಿರುತ್ತವೆ. ಇಂತಹ ಜತಿಸ್ವರಗಳನ್ನು ಪೊನ್ನಯ್ಯ, ವಡಿವೇಲು ಮತ್ತು ಶಿವಾನಂದಂ ಮುಂತಾದವರು ರಚಿಸಿದ್ದಾರೆ. ಧಾತು ಸಮಗ್ರಯುಕ್ತವಾದ ಈ ರಚನೆಗಳಿಗೆ ಸ್ವರ ಪಲ್ಲವಿಗಳೆಂದು ಹೆಸರು. ಕೆಲವು ಜತಿಸ್ವರಗಳಲ್ಲಿ ಪಲ್ಲವಿ ಅನುಪಲ್ಲವಿಗಳು ಜತಿಗಳಿಂದ ಕೂಡಿದ್ದು ಚರಣಗಳಲ್ಲಿ ಜತಿಗಳು ಮತ್ತು ಸ್ವರಗಳು ಬರುತ್ತವೆ. ಇಂತಹ ರಚನೆಗಳಿಗೆ ಶಬ್ದಪಲ್ಲವಿಗಳೆಂದು ಹೆಸರು. ರಾಗಮಾಲಿಕಾ ಜತಿಸ್ವರಗಳಲ್ಲಿ ಚರಣಗಳು ಬೇರೆ ಬೇರೆ ರಾಗಗಳಲ್ಲಿದ್ದು ಕೊನೆಯ ಆವರ್ತದ ಮುಕ್ತಾಯ ಸ್ವರಗಳು ಪಲ್ಲವಿಯ ರಾಗದಲ್ಲಿ ರಚಿಸಲ್ಪಟ್ಟಿವೆ ಸ್ವಾತಿತಿರುನಾಳರ ಕೆಲವು ಜತಿಸ್ವರಗಳು ರಾಗಮಾಲಿಕಾ ಜತಿ ಸ್ವರಗಳಿಗೆ ಉತ್ತಮ ಉದಾಹರಣೆಗಳು. ಜತಿ ಸ್ವರಗಳನ್ನು ಚೌಕಕಾಲ ಮತ್ತು ಮಧ್ಯಮ ಕಾಲ ಗಳೆರಡರಲ್ಲೂ ಹಾಡಬಹುದು.

**ಜೈತಶ್ರೀ**—ಸೋಮನಾಥನ ರಾಗ ವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ

**ಜನಕ**—ಪುರಾತನ ೧೦೮ ತಾಳಗಳಲ್ಲಿ ೧೦೫ನೆ ತಾಳದ ಹೆಸರು. ಇದರ ಒಂದಾವರ್ತಕ್ಕೆ ೧೨ ಮಾತ್ರೆಗಳು ಅಥವಾ ೪೮ ಅಕ್ಷರಕಾಲ. ಇದರ ಅಂಗಗಳು ನಾಲ್ಕು ಲಘು, ಎರಡು ಗುರು, ಎರಡು ಲಘು ಮತ್ತು ಒಂದು ಗುರು.

**ಜನಕ—ಜನ್ಯ ಪದ್ಧತಿ**—ರಾಗಗಳನ್ನು ಮೂಲರಾಗಗಳು ಮತ್ತು ಅವುಗಳಿಂದ ಹುಟ್ಟಿದರಾಗಗಳೆಂದು ವರ್ಗೀಕರಣ ಮಾಡುವ ವೈಜ್ಞಾನಿಕ ಪದ್ಧತಿಗೆ ಜನಕ-ಜನ್ಯ-ಪದ್ಧತಿ ಎಂದು ಹೆಸರು. ಇದನ್ನು ಅತ್ಯಂತ ಸಮರ್ಪಕವಾದ ತಾರ್ಕಿಕ ತಳಹದಿಯ ಮೇಲೆ ರೂಪಿಸಲಾಗಿದೆ. ಜನಕ ರಾಗಗಳು ಸಂಪೂರ್ಣ ಆರೋಹಣಾವರೋಹಣ ಗಳನ್ನು ಹೊಂದಿವೆ. ಅವುಗಳ ಜನ್ಯರಾಗಗಳಲ್ಲಿ ಮೂಲರಾಗದ ಒಂದೋ, ಎರಡೋ ಸ್ವರಗಳು ಆರೋಹಣ ಅಥವಾ ಅವರೋಹಣದಲ್ಲಿರುವುದಿಲ್ಲ. ಅಥವಾ ಎರಡರಲ್ಲೂ ಇರುವುದಿಲ್ಲ. ಕೆಲವು ಜನ್ಯರಾಗಗಳಾದ ಭಾಷಾಂಗರಾಗಗಳು ಮೂಲರಾಗದಲ್ಲಿಲ್ಲದ ಅನ್ಯ ಸ್ವರಗಳನ್ನು ಹೊಂದಿರುತ್ತವೆ.

**ಜನಕರಾಗ**—ಜನಕ ರಾಗವೆಂದರೆ ಮೂಲರಾಗ. ತಂದೆಯಂತಿರುವರಾಗ. ಇವಕ್ಕೆ ಮೂರು ಲಕ್ಷಣಗಳಿವೆ.

(೧) ಇವು ಸಂಪೂರ್ಣ ಆರೋಹಣಾವರೋಹಣವನ್ನು ಹೊಂದಿರುತ್ತವೆ. (೨) ಇವು ಕ್ರಮ ಸಂಪೂರ್ಣ ಆರೋಹಣ ಅವರೋಹಣವನ್ನು ಹೊಂದಿರುತ್ತವೆ (೩) ಇವುಗಳ ಆರೋಹಣ ಮತ್ತು ಅವರೋಹಣದಲ್ಲಿ ಸ್ವರಗಳ ಕಂಪನಗಳ ಮೌಲ್ಯವು ಒಂದೇ ವಿಧವಾಗಿದೆ.

ಕ್ರಮ ಸಂಪೂರ್ಣಾರೋಹಣಾವರೋಣವಿದ್ದು, ಒಂದೇ ವಿಧವಾದ ಸ್ವರಸ್ಥಾನ ಗಳಿರುವ ಜನ್ಯರಾಗವು ಅದರ ಜನಕ ಮೇಳದಿಂದ ವ್ಯತ್ಯಾಸ ಹೊಂದಿರಬಹುದು

ಆರೋಹಣದಲ್ಲಿ ಸ್ವಲ್ಪ ಹೆಚ್ಚು ಶಬ್ದ ಪರಿಮಿತಿ ಇರುವ ಮತ್ತು ಅವರೋಹಣದಲ್ಲಿ ಸ್ವಲ್ಪ ಕಡಿಮೆ ಶಬ್ದ ಪರಿಮಿತಿಯಿರುವ ಸ್ವರವನ್ನು ಹೊಂದಿದ್ದರೆ ಈ ವ್ಯತ್ಯಾಸ ಉಂಟಾಗುತ್ತದೆ. ಜನಕ ಮೇಳವಾದ ಹನುಮ ತೋಡಿಗೂ ಜನ್ಯರಾಗವಾದ ತೋಡಿಗೂ ಈ ರೀತಿ ವ್ಯತ್ಯಾಸ ಉಂಟಾಗಿದೆ. ಈ ವ್ಯತ್ಯಾಸವು ಬಹುಸೂಕ್ಷ್ಮ. ಜನಕ ಮೇಳಗಳನ್ನು ೧೨ ಸ್ವರಸ್ಥಾನಕ್ಕೆ ಸಂಬಂಧಿಸಿದಂತೆ ವಿವರಿಸಿ, ಅವುಗಳಿಂದುಂಟಾದ ಜನ್ಯರಾಗಗಳನ್ನು ೨೨ ಶ್ರುತಿಗಳಿಗೆ ಸಂಬಂಧಿಸಿದಂತೆ ವಿವರಿಸಲಾಗಿದೆ. ಜನಕರಾಗಗಳಿಗೆ ಮೇಳಕರ್ತರಾಗ, ಮೇಳರಾಗ, ಕರ್ತರಾಗ ಮತ್ತು ಮೇಳ ಎಂಬ ಹೆಸರುಗಳಿವೆ. ೧೨ ಸ್ವರಸ್ಥಾನಗಳಲ್ಲೇ ೧೬ ಸ್ವರಗಳು ರೂಪುಗೊಂಡು ೭೨ ಜನಕ ರಾಗಗಳ ರಚನೆಯಾಗಿದೆ.

**ಜನಾಕರ್ಷಣಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ಪ ಮ ದ ನಿ ಸಂ

ಅ: ಸಂ ನಿ ದ ಪ ಮ ಗ ದ ಮ ಗ ರಿ ಸ

**ಜನತೋಡಿ**—೭೨ ಮೇಳ ಪದ್ಧತಿಯ ೮ನೆಯ ಮೇಳಕ್ಕೆ ಹಿಂದಿನ ಅಪ್ರಸಿದ್ಧವಾದ ಹೆಸರು.

**ಜನನಿ** —ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸಂ

ಅ: ಸಂ ನಿ ದ ಪ ಮ ಗ ರಿ ಗ ಸ

**ಜನಾನಂದಿ**—ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸಂ

ಅ: ಸಂ ದ ಮ ಗ ರಿ ಸ

**ಜನಾನಂದಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಗ ಮ ಪ ನಿ ದ ಪ ನಿ ಸಂ

ಅ: ಸ ನಿ ದ ಪ ಮ ರಿ ಗ ಮ ರಿ ಸ

**ಜನಾಂದೋಳಿಕ**—ಈ ರಾಗವು ೨೨ನೆ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ನಿ ಪ ದ ನಿ ಸ

ಅ: ಸಂ ನಿ ದ ಮ ಗ ರಿ ಗ ಮ ಗ ಸ

**ಜನರಂಜನಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸಂ

ಅ: ಸಂ ದ ಪ ಮ ರಿ ಸ

ಇದು ಉಪಾಂಗರಾಗ. ರಿಷಭ, ಧೈವತ ಮತ್ತು ನಿಷಾದಗಳು ಜೀವ ಸ್ವರಗಳು. ಬಹುರಂಜಕವಾದ ಸಾರ್ವಕಾಲಿಕರಾಗ ಶೃಂಗಾರ ಮತ್ತು ಹಾಸ್ಯರಸ ಪ್ರಧಾನವಾದ ರಾಗ. ಅವರು ರಚಿಸಿರುವ ಸ್ಮರಣೇಸುಖಮು, ವಿಡಜಾಲದುರಾ, ನಾಡಾಡಿನ ಮಾಟ ಮತ್ತು ಮಹಾವೈದ್ಯನಾಥ ಅಯ್ಯರ್‌ರವರ ಪಾಹಿಮಾಂ ಶ್ರೀರಾಜರಾಜೇಶ್ವರಿ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಜನ್ಯರಾಗವರ್ಗೀಕರಣ**—ರಾಗಗಳನ್ನು ಮುಖ್ಯವಾಗಿ ಜನಕ ಮತ್ತು ಜನ್ಯರಾಗಗಳೆಂದು ವರ್ಗೀಕರಿಸಲಾಗಿದೆ ರಾಗಾಂಗವಲ್ಲದ ರಾಗಗಳಲ್ಲಿ ಸಪ್ತಸ್ವರಗಳಲ್ಲಿ ಕೆಲವು ಸ್ವರಗಳು ವರ್ಜ್ಯವಾಗಿರುವುದು, ಕ್ರಮ ಬದ್ಧವಾದ ಆರೋಹಣಾವರೋಹಣವು ಇಲ್ಲದಿರುವುದು ಅನ್ಯಸ್ವರಗಳನ್ನು ಹೊಂದಿರುವುದು ಮುಂತಾದುವುಗಳನ್ನು ಜನ್ಯರಾಗ ಗಳೆಂದೂ, ಉಪಾಂಗ ಮತ್ತು ಭಾಷಾಂಗರಾಗಗಳೆಂದೂ ವರ್ಗೀಕರಿಸಲಾಗಿದೆ. ಒಂದು ರಾಗದ ಒಂದು ಜನಕರಾಗದ ಸ್ವರಗಳನ್ನು ಹೊಂದಿದ್ದರೆ ಅದು ಆ ಮೇಳದ ಜನ್ಯರಾಗ ಉದಾ : ಕೇದಾರ ಗೌಳವು ಹರಿಕಾಂಭೋಜಿಯ ಜನ್ಯವೆಂದರೆ ಅದು ಹರಿಕಾಂಭೋಜಿ ಮೇಳದ ಸ್ವರಗಳನ್ನು ಹೊಂದಿದೆ. ಆದರೆ ಗ ಮತ್ತು ಧ ಆರೋಹಣದಲ್ಲಿ ವರ್ಜ್ಯವಾಗಿರುವುದರಿಂದ ಮೇಳಕ್ಕೂ ಈ ಜನ್ಯಕ್ಕೂ ವ್ಯತ್ಯಾಸವಿದೆ.

ಜನ್ಯರಾಗಗಳನ್ನು ಈ ರೀತಿ ವರ್ಗೀಕರಣ ಮಾಡಬಹುದು.

(೧)




ಈ ರಾಗಗಳು ತಮ್ಮ ಜನಕ ಮೇಳದ ಸಪ್ತ ಸ್ವರಗಳನ್ನು ಸಂಪೂರ್ಣವಾಗಿ ಆರೋಹಣಾವ ರೋಹಣಗಳಲ್ಲಿ ಹೊಂದಿರುವುದಲ್ಲದೆ ಭಾಷಾಂಗ ಅಥವಾ ವಕ್ರ ರಾಗಗಳಾಗಿರುತ್ತವೆ. ಉದಾ : ಭೈರವಿ, ಮಾಂಜಿರಾಗಗಳು.



ಈ ರಾಗಗಳಲ್ಲಿ ಸಪ್ತಸ್ವರಗಳಲ್ಲಿ ಒಂದು ಅಥವಾ ಎರಡು ಸ್ವರಗಳು ಲೋಪವಾಗಿರುತ್ತವೆ. ಇವುಗಳನ್ನು ಔಡವ ಷಾಡವಗಳೆಂದು ಸ್ಥೂಲವಾಗಿ ವಿಂಗಡಿಸಬಹುದು. ವರ್ಜ್ಯರಾಗಗಳು ಔಡವ ಷಾಡವ ಮತ್ತು ಸಂಪೂರ್ಣ ರೀತಿಯ ವಿವಿಧ ಆರೋಹಣಾವರೋಹಣ ಕ್ರಮದಿಂದ ಎಂಟು ಬಗೆಯಾಗಿವೆ.

(೧) **ಷಾಡವಸಂಪೂರ್ಣ**—ಆರೋಹಣದಲ್ಲಿ ಆರು ಸ್ವರಗಳನ್ನೂ ಅವರೋಹಣದಲ್ಲಿ ಸಪ್ತ ಸ್ವರಗಳನ್ನೂ ಹೊಂದಿರುವರಾಗ.

ಉದಾ : ಕಾಂಭೋಜಿ (ಹರಿಕಾಂಭೋಜಿಯ ಜನ್ಯ)
ಆ : ಸ ರಿ ಗ ಮ ಪ ದ ಸ
ಅ : ಸ ನಿ ದ ಪ ಮ ಗ ರಿ ಸ

(೨) **ಔಡವ ಸಂಪೂರ್ಣ**—ಆರೋಹಣಸಲ್ಲಿ ಐದು ಸ್ವರಗಳನ್ನೂ, ಅವರೋಹಣದಲ್ಲಿ ಸಪ್ತ ಸ್ವರಗಳನ್ನೂ ಹೊಂದಿರುವರಾಗ.

ಉದಾ : ಧನ್ಯಾಸಿ (ಹನುಮತೋಡಿಯ ಜನ್ಯ)
ಆ : ಸ ಗ ಮ ಪ ನಿ ಸ
ಅ : ಸ ನಿ ದ ಪ ಮ ಗ ರಿ ಸ

(೩) **ಸಂಪೂರ್ಣಷಾಡವ**—ಆರೋಹಣದಲ್ಲಿ ಸಪ್ತಸ್ವರಗಳಿದ್ದು ಅವರೋಹಣದಲ್ಲಿ ಆರು ಸ್ವರಗಳಿರುವರಾಗ.

ಉದಾ : ಮಾರ್ಗಹಿಂದೋಳ (ನಠಭೈರವಿಯ ಜನ್ಯ)
ಆ : ಸ ರಿ ಗ ಮ ಪ ದ ನಿ ಸ
ಅ : ಸ ನಿ ದ ಪ ಮ ಗ ಸ

(೪) **ಸಂಪೂರ್ಣ ಔಡವ**—ಆರೋಹಣದಲ್ಲಿ ಸಪ್ತ ಸ್ವರಗಳು ಮತ್ತು ಅವರೋಹಣದಲ್ಲಿ ಐದು ಸ್ವರಗಳಿರುವರಾಗ.

ಉದಾ : ಸಾರಮತಿ (ನಠಭೈರವಿಜನ್ಯ)
ಆ : ಸ ರಿ ಗ ಮ ಪ ದ ನಿ ಸ
ಅ : ಸ ನಿ ದ ಮ ಗ ಸ

(೫) **ಷಾಡವ-ಷಾಡವ**—ಆರೋಹಣಾವರೋಹಣಗಳಲ್ಲಿ ಆರು ಸ್ವರಗಳಿಗಿರುವ ರಾಗ.

ಉದಾ : ಶ್ರೀರಂಜನಿ (ಖರಹರಪ್ರಿಯಜನ್ಯ)
ಆ : ಸ ರಿ ಗ ಮ ದ ನಿ ಸ
ಅ : ಸ ನಿ ದ ಮ ಗ ರಿ ಸ

(೬) **ಷಾಡವ-ಔಡವ**—ಆರೋಹಣದಲ್ಲಿ ಆರು ಸ್ವರಗಳೂ, ಅವರೋಹಣದಲ್ಲಿ ಐದು ಸ್ವರಗಳಿರುವ ರಾಗ.

ಉದಾ : ನಾಟಕುರಂಜಿ (ಹರಿಕಾಂಭೋಜಿಯಲ್ಲಿ ಜನ್ಯ)

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

(೭) **ಔಡವ-ಷಾಡವ**—ಆರೋಹಣದಲ್ಲಿ ಐದು ಸ್ವರಗಳೂ, ಅವರೋಹಣದಲ್ಲಿ ಆರು ಸ್ವರಗಳಿರುವರಾಗ.

ಉದಾ: ಮಲಹರಿ (ಮಾಯಾಮಾಳವಗೌಳಜನ್ಯ)

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ಗ ರಿ ಸ

(೮) **ಔಡವ-ಔಡವ**—ಆರೋಹಣಾವರೋಹಣಗಳಲ್ಲಿ ಐದು ಸ್ವರಗಳಿರುವ ರಾಗ.

ಉದಾ: ಶುದ್ಧ ಸಾವೇರಿ (ಹನುಮತೋಡಿಯಲ್ಲಿ ಜನ್ಯ)

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ಗ ರಿ ಸ

(೯) **ಸ್ವರಾಂತರ-ಷಾಡವ**—ಆರೋಹಣದಲ್ಲಿ ನಾಲ್ಕು ಸ್ವರಗಳೂ, ಅವರೋಹಣ ದಲ್ಲಿ ಆರುಸ್ವರಗಳು ಇರುವ ರಾಗ.

ಉದಾ: ನವರಸ ಕನ್ನಡ (ಹರಿಕಾಂಭೋಜಿಯಲ್ಲಿ ಜನ್ಯ)

ಆ: ಸ ಗ ಮ ಪ ಸ

ಅ: ಸ ನಿ ದ ಮ ಗ ರಿ ಸ

ವರ್ಜ್ಯ ರಾಗಗಳನ್ನು ಉಪಾಂಗ ಮತ್ತು ಭಾಷಾಂಗವೆಂದೂ, ವಕ್ರ ಮತ್ತು ವಕ್ರವಲ್ಲದ ರಾಗಗಳೆಂದು ವರ್ಗೀಕರಿಸಬಹುದು.

**ವಕ್ರರಾಗಗಳು**—ಆರೋಹಣ ಅಥವಾ ಅವರೋಹಣ ಅಥವಾ ಇವೆರಡರಲ್ಲೂ ಸ್ವರಗಳು ಕ್ರಮವಾಗಿಲ್ಲದೆ ತಿರುಗು ಮುರುಗಾಗಿದ್ದರೆ ಅಂತಹ ರಾಗಗಳು ವಕ್ರರಾಗಗಳು

(೧) ಆರೋಹಣವು ವಕ್ರವಾಗಿರುವ ರಾಗ

(ಎ) ಉದಾ: ಆನಂದ ಭೈರವಿ (ನಠಭೈರವಿಯ ಜನ್ಯ)

ಆ: ಸ ಗ ರಿ ಗ ಮ ಪ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

(ಬಿ) ಬೇಗಡೆ. (ಧೀರಶಂಕರಾಭರಣ ಜನ್ಯ)

ಆ: ಸ ಗ ರಿ ಗ ಮ ಪ ದ ಪ ಸ

ಅ: ಸ ನಿ ದ ಪ ಮಾ ಗ ರಿ ಸ

(ಸಿ) ಬಹುದಾರಿ (ಹರಿಕಾಂಭೋಜಿ ಜನ್ಯ)

ಆ: ಸ ಗ ಮ ದ ಪ ದ ನಿ ಸ

ಅ: ಸ ನಿ ಪ ಮ ಗ ಸ

(ಡಿ) ಬೇಹಾಗ್ (ಧೀರಶಂಕರಾಭರಣ ಜನ್ಯ)

ಆ : ಸ ಗ ಮ ಪ ನಿ ದ ನಿ ಸ
ಅ : ಸ ನಿ ದ ಪ ಮ ಗಾ ರಿ ಸ

(ಇ) ಛಾಯಾತರಂಗಿಣಿ (ಹರಿಕಾಂಭೋಜಿ ಜನ್ಯ)
ಆ : ಸ ರಿ ಮ ಗ ಮ ಪ ನಿ ಸ
ಅ : ಸ ನಿ ದ ಪ ಮ ಗ ರಿ ಸ

(ಎಫ್) ರವಿಚಂದ್ರಿಕ (ಹರಿಕಾಂಭೋಜಿ ಜನ್ಯ)
ಆ : ಸ ರಿ ಗ ಮ ದ ನಿ ದ ಸ
ಅ : ಸ ನಿ ದ ಮ ಗ ರಿ ಸ

(ಜಿ) ಪೂರ್ವಿಕಲ್ಯಾಣಿ (ಗಮನ ಶ್ರಮ ಜನ್ಯ)
ಆ : ಸ ರಿ ಗ ಮ ಪ ದ ನಿ ಪ ದ ಪ ಸ
ಅ : ಸ ನಿ ದ ಪ ಮ ಗ ರಿ ಸ

(ಎಚ್) ಮುಖಾರಿ (ಖರಹರಪ್ರಿಯ ಜನ್ಯ)
ಆ : ಸ ರಿ ಮ ಪ ದ ನಿ ದ ಸ
ಅ : ಸ ನಿ ದ ಪ ಮ ಗ ರಿ ಸ

(ಐ) ಖಮಾಚ್ (ಹರಿಕಾಂಭೋಜಿ ಜನ್ಯ)
ಆ : ಸ ಮ ಗ ಮ ಪ ದ ನಿ ಸ
ಅ : ಸ ನಿ ದ ಪ ಮ ಗ ರಿ ಸ

**ಅವರೋಹಣ ವಕ್ರರಾಗಗಳು ಉದಾ :—**

(೧) ದರ್ಬಾರ್ (ಖರಹರಪ್ರಿಯಜನ್ಯ)
ಆ : ಸ ರಿ ಮ ಪ ದ ನಿ ಸ
ಅ : ಸ ದ ನಿ ದ ಪ ಮ ರಿ ಗಾ ಗಾ ರಿ ಸ

(೨) ಅಸಾವೇರಿ (ಹನುಮತೋಡಿ ಜನ್ಯ)
ಆ : ಸ ರಿ ಮ ಪ ದ ಸ
ಅ : ಸ ನಿ ಸ ಪ ದ ಮ ಪ ರಿ ಗಾ ರಿ ಸ

(೩) ಅಠಾಣ (ಧೀರಶಂಕರಾಭರಣ ಜನ್ಯ)
ಆ : ಸ ರಿ ಮ ಪ ನಿ ಸ
ಅ : ಸ ನಿ ದಾ ಪ ಮ ಪ ಗಾ ರಿ ಸ

(೪) ಬಲಹಂಸ (ಹರಿಕಾಂಭೋಜಿ ಜನ್ಯ)
ಆ : ಸ ರಿ ಮ ಪ ದ ಸ
ಅ : ಸ ನಿ ದ ಪ ಮ ರಿ ಮ ಗ ಸ

(೫) ದೇವಮನೋಹರಿ (ಖರಹರಪ್ರಿಯ ಜನ್ಯ)

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ರಿ ಸ

(೬) ಸಾರಂಗ (ಮೇಚಕಲ್ಯಾಣಿ ಜನ್ಯ)

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಗ ಮ ರಿ ಸ

(೭) ಶ್ರೀ (ಖರಹರಪ್ರಿಯ ಜನ್ಯ)

ಆ: ಸ ರಿ ಮ ಪ ನಿ ಸ

ಅ: ಸ ನಿ ಪ ದ ನಿ ಪ ಮ ರಿ ಗಾ ರಿ ಸ

(೮) ಸುರಟಿ (ಹರಿಕಾಂಭೋಜಿ ಜನ್ಯ)

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ಪ ರಿ ಸ

(೯) ಹಿಂದೂಸ್ಥಾನಿ ಕಾಫಿ (ಖರಹರ ಪ್ರಿಯ ಜನ್ಯ)

ಆ: ಸ ರಿ ಮ ಪ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

(೧೦) ಹಂಸನಾದ (ನೀತಿಮತಿ ಜನ್ಯ)

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ರಿ ಸ

**ಆರೋಹಣಾವರೋಹಣಗಳೆರಡೂ ವಕ್ರವಾಗಿರುವ ರಾಗಗಳು**

ಉದಾ :—

(೧) ಬಂಗಾಳ (ಧೀರಶಂಕರಾಭರಣ ಜನ್ಯ)

ಆ: ಸ ರಿ ಗ ಮ ಪ ಮ ರಿ ಪ ಸ

ಅ: ಸ ನಿ ಪ ಮ ರಿ ಗ ರಿ ಸ

(೨) ಬಿಂದು ಮಾಲಿನಿ (ಚಕ್ರವಾಕ ಜನ್ಯ)

ಆ: ಸ ಗ ರಿ ಮ ಪ ದ ನಿ ಪ ನಿ ಸ

ಅ: ಸ ಪ ನಿ ದ ಪ ಗಾ ರಿ ಸ

(೩) ಛಾಯಾನಾಟ (ವಾಗಧೀಶ್ವರಿ ಜನ್ಯ)

ಆ: ಸ ರಿ ಗ ಮ ಪ ಮ ಪ ಸ

ಅ: ಸ ನಿ ದ ನಿ ಪ ಮ ರಿ ಸ

(೪) ಹಮೀರ್ ಕಲ್ಯಾಣಿ (ಮೇಚಕಲ್ಯಾಣಿ ಜನ್ಯ)

ಆ: ಸ ರಿ ಗ ಮ ಪ ದ ನಿ ಪ ದ ಸ

ಅ: ಸ ನಿ ದ ಪ ಗ ಮ ಗ ರಿ ಸ

(೫) ಹಿಂದೋಳ ವಸಂತ (ನಠಭೈರವಿ ಜನ್ಯ)

ಆ: ಸ ಗ ಮ ಪ ದ ನಿ ದ ಸ
ಅ: ಸ ನಿ ದ ಪ ಮ ಗ ದ ಮ ಗ ಸ

(೬) ಸುಪೋಷಿಣಿ (ಹರಿಕಾಂಭೋಜಿ ಜನ್ಯ)
ಆ: ಸ ರಿ ಸ ಮ ಪ ನಿ ದ ಸ
ಅ: ಸ ದ ನಿ ಪ ಮ ರಿ ಮ ರಿ ಸ

(೭) ಶಹಾನ (ಹರಿಕಾಂಭೋಜಿ ಜನ್ಯ)
ಆ: ಸ ರಿ ಗ ಮ ಪ ಮ ದಾ ನಿ ಸ
ಅ: ಸ ನಿ ದ ಪ ಮ ಗಾ ಮ ರೀ ಗ ರಿ ಸ

(೮) ರೀತಿಗೌಳ (ನಠಭೈರವಿ ಜನ್ಯ)
ಆ: ಸ ಗ ರಿ ಗ ಮ ನಿ ದ ಮ ಪ ನಿ ಸ
ಅ: ಸ ನಿ ದ ಮ ಗ ಮ ಪ ಮ ಗ ರಿ ಸ

(೯) ನೀಲಾಂಬರಿ (ಧೀರಶಂಕರಾಭರಣ ಜನ
ಆ: ಸ ರಿ ಗ ಮ ಪ ದ ಪ ನಿ ಸ
ಅ: ಸ ನಿ ಪ ಮ ಗ ರಿ ಗ ಸ

(೧೦) ಕಾನಡ (ಖರಹರಪ್ರಿಯ ಜನ್ಯ)
ಆ: ಸ ರಿ ಗ ಮ ಪ ಮ ದಾ ನಿ ಸ
ಅ: ಸ ನಿ ಪ ಮ ಗಾ ಮ ರಿ ಸ

ವಕ್ರರಾಗಗಳನ್ನು ಔಡವ-ಷಾಡವ, ಸಂಪೂರ್ಣ ಮತ್ತು ವರ್ಜ್ಯವಲ್ಲದ ಉಪಾಂಗ, ಭಾಷಾಂಗ ರಾಗಗಳೆಂದು ವರ್ಗೀಕರಿಸ ಬಹುದು. ಇವುಗಳ ಪ್ರಭೇದಗಳಾವುವೆಂದರೆ—

(೧) ಕ್ರಮ ಆರೋಹಣ — ವಕ್ರ ಅವರೋಹಣ
(೨) ವಕ್ರ ಆರೋಹಣ — ಕ್ರಮ ಅವರೋಹಣ
(೩) ಉಭಯ ವಕ್ರ.

ಇವನ್ನು ಪುನಃ ಔಡವಷಾಡವ ಪ್ರಭೇದಗಳೊಡನೆ ಈ ರೀತಿ ಉಂಟಾಗುತ್ತವೆ.

೧. (ಎ) ಕ್ರಮ ಸಂಪೂರ್ಣ — ವಕ್ರ ಸಂಪೂರ್ಣ (ಕರ್ಣಾಟಕ ಬೇಹಾಗ್)
(ಬಿ) ಕ್ರಮಷಾಡವ — ವಕ್ರ ಸಂಪೂರ್ಣ (ದರ್ಬಾರ್)
(ಸಿ) ಕ್ರಮಔಡವ — ವಕ್ರ ಸಂಪೂರ್ಣ (ಅಸಾವೇರಿ)

೨. (ಎ) ವಕ್ರ ಸಂಪೂರ್ಣ — ಕ್ರಮ ಸಂಪೂರ್ಣ (ಕದನ ಕುತೂಹಲ)
(ಬಿ) ವಕ್ರ ಸಂಪೂರ್ಣ — ಕ್ರಮ ಷಾಡವ
(ಸಿ) ವಕ್ರ ಸಂಪೂರ್ಣ — ಕ್ರಮ ಔಡವ (ಜನರಂಜನಿ)

೩. (ಎ) ಕ್ರಮ ಸಂಪೂರ್ಣ — ವಕ್ರ ಷಾಡವ
(ಬಿ) ಕ್ರಮ ಷಾಡವ — ವಕ್ರಷಾಡವ (ದೇವಮನೋಹರಿ)
(ಸಿ) ಕ್ರಮ ಔಡವ — ವಕ್ರ ಷಾಡವ (ಶುದ್ಧ ಬಂಗಾಳ)

೪. (ಎ) ವಕ್ರ ಷಾಡವ — ಕ್ರಮ ಸಂಪೂರ್ಣ (ಮುಖಾರಿ)
(ಬಿ) ವಕ್ರ ಷಾಡವ — ಕ್ರಮ ಷಾಡವ (ವಿಜಯ ಶ್ರೀ)
(ಸಿ) ವಕ್ರ ಷಾಡವ — ಕ್ರಮ ಔಡವ

೫. (ಎ) ಕ್ರಮ ಸಂಪೂರ್ಣ — ವಕ್ರ ಷಾಡವ
(ಬಿ) ಕ್ರಮ ಷಾಡವ — ವಕ್ರ ಷಾಡವ
(ಸಿ) ಕ್ರಮ ಔಡವ — ವಕ್ರ ಷಾಡವ

೬. (ಎ) ವಕ್ರ ಔಡವ — ಕ್ರಮ ಸಂಪೂರ್ಣ (ನಭೋಮಣಿ)
(ಬಿ) ವಕ್ರ ಔಡವ — ಕ್ರಮ ಷಾಡವ (ಕೇದಾರ)
(ಸಿ) ವಕ್ರ ಔತವ — ಕ್ರಮ ಔಡವ (ಕುಂತಲವರಾಳಿ)

ಇವಲ್ಲದೆ ಉಭಯ ವಕ್ರರಾಗಗಳನ್ನು ಈ ರೀತಿ ವರ್ಗೀಕರಿಸಬಹುದು.

೧. (ಎ) ವಕ್ರ ಸಂಪೂರ್ಣ — ವಕ್ರ ಸಂಪೂರ್ಣ (ಸಹಾನ)
(ಬಿ) ವಕ್ರ ಸಂಪೂರ್ಣ — ವಕ್ರಷಾಡವ (ನೀಲಾಂಬರಿ)
(ಸಿ) ವಕ್ರ ಸಂಪೂರ್ಣ — ವಕ್ರ ಔಡವ

೨. (ಎ) ವಕ್ರ ಷಾಡವ — ಕ್ರಮ ಸಂಪೂರ್ಣ (ನಾರಾಯಣ ಗೌಳ)
(ಬಿ) ವಕ್ರ ಷಾಡವ — ವಕ್ರ ಷಾಡವ (ಹಿಂದೋಳ ವಸಂತ)
(ಸಿ) ವಕ್ರ ಷಾಡವ — ವಕ್ರ ಔಡವ

೩. (ಎ) ವಕ್ರ ಔಡವ — ವಕ್ರ ಸಂಪೂರ್ಣ (ದೀಪಕ)
(ಬಿ) ವಕ್ರ ಔಡವ — ವಕ್ರ ಷಾಡವ (ಬಂಗಾಳ)
(ಸಿ) ಉಭಯ ವಕ್ರ ಔಡವ

**(೪) ಉಪಾಂಗ-ಭಾಷಾಂಗ ರಾಗಗಳು**—ಉಪಾಂಗ ರಾಗಗಳು ಜನಕ ರಾಗದ ಸ್ವರಗಳನ್ನು ಹೊಂದಿವೆ ಮತ್ತು ಭಾಷಾಂಗ ರಾಗಗಳು ಜನಕ ರಾಗದ ಸ್ವರಗಳ ಜೊತೆಗೆ ಒಂದು, ಎರಡು ಅಥವಾ ಮೂರು ಅನ್ಯಸ್ವರಗಳನ್ನು ಹೊಂದಿವೆ. ಉದಾ : ಧನ್ಯಾಸಿ ಬಿಲಹರಿ.

ಭಾಷಾಂಗ ರಾಗಗಳಲ್ಲಿ ಮೂರುವಿಧಗಳಿವೆ ಅವು—

(ಎ) ಏಕಾನ್ಯ ಸ್ವರ ಭಾಷಾಂಗರಾಗ (ಮುಖಾರಿ)
(ಬಿ) ದ್ವಿ ಅನ್ಯಸ್ವರ ಭಾಷಾಂಗರಾಗ (ಅಠಾಣ)
(ಸಿ) ತ್ರಿಅನ್ಯಸ್ವರ ಭಾಷಾಂಗರಾಗ (ಆನಂದ ಭೈರವಿ)

**(೫) ನಿಷಾದಾಂತ್ಯ, ಧೈವತಾಂತ್ಯ ಮತ್ತು ಪಂಚಮಾಂತ್ಯರಾಗಗಳು** ಕೆಲವು ಜನ್ಯರಾಗಗಳಲ್ಲಿ ತಾರಸ್ಥಾಯಿ ಸಂಚಾರಗಳು ನಿಷೇಧವಾಗಿದ್ದು ರಾಗವು ಮಂದ್ರ ಮತ್ತು ಸ್ಥಾಯಿಗಳಲ್ಲಿ ಮಾತ್ರ ವ್ಯಾಪಕವಾಗಿರುತ್ತದೆ. ಇದರ ಮೂರು ವಿಧಗಳು—

(ಎ) ನಿಷಾದಾಂತ್ಯ—ನಾದನಾಮಕ್ರಿಯ

(ಆ: ಸ ರಿ ಗ ಮ ಪ ದ ನಿ, ಅ: ನಿ ದ ಪ ಮ ಗ ರಿ ಸ ನಿ)

(ಬಿ) ಧೈವತಾಂತ್ಯ—ಕುರಂಜಿ

(ಆ: ಸ ನಿ ಸ ರಿ ಗ ಮ ಪ ದ ಅ: ದ ಪ ಮ ಗ ರಿ ಸ ನಿ ಸ)

(ಸಿ) ಪಂಚಮಾಂತ್ಯ—ನವರೋಜ್

(ಆ: ಪ ಧ ನಿ ಸ ರಿ ಗ ಮ ಪ—ಮ ಗ ರಿ ಸ ನಿ ಧ ಪ)

ರಾಗಗಳು ಅವುಗಳ ಗುಣವಿಶೇಷಗಳಿಗನುಗುಣವಾಗಿ ೧೨ ಬಗೆಗಳಿವೆ—

(ಎ) ಘನ, ನಯ, ದೇಶ್ಯ
(ಬಿ) ಕರ್ಣಾಟಕ ದೇಶ್ಯ
(ಸಿ) ಶುದ್ಧ, ಛಾಯಾಲಗ, ಸಂಕೀರ್ಣ
(ಡಿ) ಸ್ವಸ್ಥಾನ ವಿಷಾದ
(ಇ) ಕಂಪಿತ ಸ್ವರಗಳ ಆಧಾರ ರಾಗಗಳು
(ಎಫ್) ನ್ಯಾಸ ಸ್ವರಗಳ ಆಧಾರ ರಾಗಗಳು
(ಜಿ) ಗ್ರಹಸ್ವರಗಳ ಆಧಾರ ರಾಗಗಳು
(ಎಚ್) ಜೀವ ಮತ್ತು ಅಂಶ ಸ್ವರಗಳ ಆಧಾರ ರಾಗಗಳು
(ಐ) ಸಂಚಾರ ಸ್ವರಗಳ ಆಧಾರ ರಾಗಗಳು
(ಜೆ) ರಸೋತ್ಪಾದನಾ ರಾಗಗಳು
(ಕೆ) ಗಾನಕಾಲವನ್ನನುಸರಿಸುವ ರಾಗಗಳು
(ಎಲ್) ಮಿಶ್ರ ರಾಗಗಳು

**ಘನ, ನಯ, ದೇಶ್ಯ ರಾಗಗಳು**—ರಾಗದ ಸ್ವರೂಪ ಮತ್ತು ವೈಶಿಷ್ಟ್ಯವು ಘನ ಅಥವಾ ತಾನದ ಶೈಲಿಯ ಆಲಾಪನೆಯಿಂದ ಇದು ವ್ಯಕ್ತವಾಗುತ್ತದೆ
ಉದಾ—ಘನಪಂಚಕಗಳೆಂದು ಹೆಸರಾದ ನಾಟ, ಗೌಳ, ಆರಭಿ, ಶ್ರೀರಾಗ, ವರಾಳಿ. ದ್ವಿತೀಯ ಘನಪಂಚಕಗಳಾದ ಕೇದಾರ, ಸಾರಂಗನಾಟ, ಚೌಳಿ, ನಾರಾಯಣ ಗೌಳ, ರೀತಿಗೌಳ.

ನಯರಾಗಗಳಲ್ಲಿ ರಾಗಭಾವಗಳು ವಿಳಂಬ ಕಾಲದ ಆಲಾಪನೆ ಮತ್ತು ತಾನದ ಹಾಡುವಿಕೆಯಿಂದ ವ್ಯಕ್ತವಾಗುತ್ತವೆ. ಉದಾ: ಭೈರವಿರಾಗ. ಆಲಾಪನೆಯಿಂದಲೇ ವ್ಯಕ್ತವಾಗುವ ರಾಗವು ದೇಶ್ಯರಾಗ. ಉದಾ—ಕಾನಡ.

**ಕರ್ನಾಟಕ ದೇಶ್ಯ**—ಕರ್ಣಾಟಕ ರಾಗಗಳು ದಕ್ಷಿಣ ಭಾರತದ ಸಂಗೀತದಲ್ಲಿ ಮಾತ್ರ ಬಳಕೆಯಲ್ಲಿರುವ ರಾಗಗಳು. ಉದಾ—ಭೈರವಿ, ನೀಲಾಂಬರಿ, ಆನಂದ ಭೈರವಿ, ಷಣ್ಮುಖಪ್ರಿಯ. ದೇಶ್ಯರಾಗಗಳೆಂದರೆ ಕರ್ಣಾಟಕ ಸಂಗೀತದಲ್ಲಿ ರೂಪಾಂತರ ಹೊಂದಿ ಬಳಕೆಯಲ್ಲಿರುವ ಉತ್ತರಾದಿ ಪದ್ಧತಿಯ ರಾಗಗಳು. ಉದಾ—ಬೇಹಾಗ್, ಕಾಪಿ, ದ್ವಿಜಾವಂತಿ, ಜೋನ್‌ಪುರಿ.

**ಶುದ್ಧ, ಛಾಯಾಂಗ ಮತ್ತು ಸಂಕೀರ್ಣ ರಾಗಗಳು**—ಈ ಬಗೆಯ ವರ್ಗೀಕರಣವು ಮತಂಗನಿಂದ ರೂಪಿಸಲ್ಪಟ್ಟಿತು. ಶುದ್ಧ ರಾಗಗಳು ಜನಕರಾಗದ ಸ್ವರಗಳ ನಿರ್ದಿಷ್ಟ ಕ್ರಮವನ್ನನುಸರಿಸಿ ರೂಪಾಂತರ ಹೊಂದಿದ ಜನ್ಯರಾಗಗಳು. ಇವುಗಳಲ್ಲಿ ಇತರರಾಗಗಳ ಛಾಯೆಯಾಗಲೀ, ಅನ್ಯಸ್ವರಗಳಾಗಲೀ ಇರುವುದಿಲ್ಲ. ಉದಾ—ಮಧ್ಯಮಾವತಿ.

ಛಾಯಾಲಗ ಅಥವಾ ಸಾಲಂಕ ಅಥವಾ ಸಾಲಗ ರಾಗಗಳು ಇತರ ರಾಗಗಳ ಛಾಯೆಯನ್ನು ಹೊಂದಿರುತ್ತವೆ. ಉದಾ—ಸೌರಾಷ್ಟ್ರ.
ಸಂಕೀರ್ಣ, ಸಂಕ್ರಮ ಅಥವಾ ಮಿಶ್ರರಾಗಗಳು ಅನ್ಯರಾಗಗಳ ಛಾಯೆಯನ್ನು ಹೊಂದಿರುವುದಲ್ಲದೆ ತಮ್ಮದೇ ಆದ ವಿಶಿಷ್ಟ ಮಾಧುರ್ಯವನ್ನು ಹೊಂದಿವೆ. ಉದಾ—ದ್ವಿಜಾವಂತಿ.

**ಸ್ವಸ್ಥಾನ ವಿಷಾದ ರಾಗ ಮತ್ತು ಗಮಕ ಶ್ರುತಿವಿಷಾದ ರಾಗಗಳು**—ಕೆಲವು ರಾಗಗಳ ಸ್ವರಗಳನ್ನು ಮೂಲ ರೂಪದಲ್ಲಿ ಯಾವ ಸೂಕ್ಷ್ಮ ಗಮಕಗಳನ್ನು ಬಳಸದೆ ಹಾಡಿದರೆ ಆ ರಾಗಗಳ ಸಂಪೂರ್ಣ ಭಾವವ್ಯಕ್ತವಾಗುತ್ತದೆ. ಉದಾ – ಹಂಸಧ್ವನಿ, ಕದನಕುತೂಹಲ. ಇಂತಹವು ಸ್ವಸ್ಥಾನ ವಿಷಾದ ರಾಗಗಳು. ಕೆಲವು ರಾಗಗಳು ಸೂಕ್ಷ್ಮಗಮಕಗಳು ಮತ್ತು ಶ್ರುತಿಗಳ ಬಳಕೆಯಿಂದ ಭಾವ ಪೂರ್ಣವಾಗಿ ಪ್ರಕಾಶಿಸುತ್ತವೆ. ಉದಾ—ತೋಡಿ.

**ಸಂಪೂರ್ಣ ಕಂಪಿತ, ಅರ್ಧಕಂಪಿತರಾಗಗಳು**—ಎಲ್ಲಾ ಸ್ವರಗಳ ಕಂಪಿತ ಗಮಕದಿಂದ ಕೆಲವು ರಾಗಗಳ ಭಾವ ಮತ್ತು ವಿಶಿಷ್ಟತೆ ಪ್ರಕಾಶಗೊಳ್ಳುತ್ತದೆ. ಸಂಪೂರ್ಣ ಕಂಪಿತ ರಾಗಗಳಿಗೆ ಸರ್ವಸ್ವರ ಗಮಕವರಿಕ ರಾಗವೆಂದು ಹೆಸರು. ಕೆಲವು ರಾಗಗಳಲ್ಲಿ ಕೆಲವು ಸ್ವರಗಳಿಗೆ ಮಾತ್ರ ಗಮಕಗಳು ಸಾಧ್ಯ ಮಿಕ್ಕ ಸ್ವರಗಳನ್ನು ಶುದ್ಧವಾಗಿ ಹಾಡಬೇಕು. ಉದಾ—ಕುಂತಲವರಾಳಿ.

**ನ್ಯಾಸಸ್ವರ ಆಧಾರರಾಗಗಳು**—ಕೆಲವು ರಾಗಗಳಲ್ಲಿ ಆರೋಹಣಾವರೋಹಣ ಗಳಲ್ಲಿ ಕೆಲವು ಸ್ವರಗಳನ್ನು ಆಧಾರವಾಗಿಟ್ಟು ಕೊಂಡು ವಿಸ್ತರಿಸಬಹುದು ರಾಗದ ಸ್ವರಗುಚ್ಛಗಳು ಮುಕ್ತಾಯವಾಗುವ ಸ್ವರವು ನ್ಯಾಸಸ್ವರ ಷಡ್ಜವು ಎಲ್ಲಾ ರಾಗಗಳಿಗೆ ನ್ಯಾಸಸ್ವರವಾಗುತ್ತದೆ.

ರಿಷಭನ್ಯಾಸ ಸ್ವರ — ಉದಾ — ಕೇದಾರಗೌಳ
ಗಾಂಧಾರನ್ಯಾಸ ಸ್ವರ — ಉದಾ — ಶಂಕರಾಭರಣ
ಮಧ್ಯಮನ್ಯಾಸ ಸ್ವರ — ಉದಾ — ಕುಂತಲವರಾಳಿ
ಪಂಚಮನ್ಯಾಸ ಸ್ವರ — ಉದಾ — ಷಣ್ಮುಖಪ್ರಿಯ
ಧೈವತನ್ಯಾಸ ಸ್ವರ — ಉದಾ — ಅಠಾಣ
ನಿಷಾದನ್ಯಾಸ ಸ್ವರ — ಉದಾ — ಹಂಸಧ್ವನಿ.

ಕೆಲವು ರಾಗಗಳಲ್ಲಿ ಎಲ್ಲಾ ಸ್ವರಗಳೂ ನ್ಯಾಸ ಸ್ವರಗಳಾಗಬಹುದು ಉದಾ—ಮೋಹನ, ಹಂಸಧ್ವನಿ.
ದೀರ್ಘಾವಧಿಯ ನ್ಯಾಸಸ್ವರಕ್ಕೆ ಪೂರ್ಣನ್ಯಾಸ ಸ್ವರವೆಂದು ಹೆಸರು. ಉದಾ—ಭೈರವಿ ರಾಗದ ಪಂಚಮ.
ಸ್ವಲ್ಪ ಕಾಲಮಾತ್ರ ಆಧಾರವಾಗಬಹುದಾದ ನ್ಯಾಸಸ್ವರವು ಅಲ್ಪನ್ಯಾಸ ಸ್ವರ. ಉದಾ—ಭೈರವಿಯ ಚತುಶ್ರ್ರುತಿ ಧೈವತ.

**ಗ್ರಹಸ್ವರ ಆಧಾರ ರಾಗಗಳು**—ರಾಗದ ಮಾಧುರ್ಯವನ್ನು ಗ್ರಹಿಸಲು ಪ್ರಾರಂಭ ಸ್ವರದಿಂದಲೇ ಸಾಧ್ಯವಿದೆ. ಒಂದೇ ರಾಗಕ್ಕೆ ಹಲವು ಗ್ರಹ ಸ್ವರಗಳಿರಲು ಸಾಧ್ಯ. ಗ್ರಹಸ್ವರದ ಕೆಳಗಿರುವ ಸ್ವರವು ಕೆಲವು ರಾಗಗಳಲ್ಲಿ ನ್ಯಾಸಸ್ವರ ವಾಗಿರುತ್ತದೆ. ಷಡ್ಜವು ಎಲ್ಲಾ ರಾಗಗಳಿಗೆ ಗ್ರಹಸ್ವರವಾಗಿರುತ್ತದೆ.

| | | | | |
|---|---|---|---|---|
| ರಿಷಭ ಗ್ರಹರಾಗ | — | ಉದಾ | — | ಸಹಾನ |
| ಗಾಂಧಾರ ಗ್ರಹರಾಗ | — | ಉದಾ | — | ಹಂಸಧ್ವನಿ |
| ಮಧ್ಯಮ ಗ್ರಹರಾಗ | — | ಉದಾ | — | ಖಮಾಚ್ |
| ಪಂಚಮ ಗ್ರಹರಾಗ | — | ಉದಾ | — | ಷಣ್ಮುಖಪ್ರಿಯ |
| ಧೈವತ ಗ್ರಹರಾಗ | — | ಉದಾ | — | ಹರಿಕಾಂಭೋಜಿ |
| ನಿಷಾದ ಗ್ರಹರಾಗ | — | ಉದಾ | — | ಭೈರವಿ |

**ಜೀವ ಮತ್ತು ಅಂಶಸ್ವರಗಳ ಆಧಾರ ರಾಗಗಳು**—ಅಂಶ ಸ್ವರಗಳು ರಾಗದ ಜೀವ ಸ್ವರ ಮತ್ತು ಛಾಯಾ ಸ್ವರಗಳು ಇವು ರಾಗಕ್ಕೆ ರೂಪವನ್ನು ಕೊಡುವ ಸ್ವರ ಅಂಶ ಸ್ವರಗಳು ದೀರ್ಘತ್ವವನ್ನು ಹೊಂದಿವೆ. ಜೀವ ಸ್ವರಗಳು ದೀರ್ಘಸ್ವರಗಳಾಗಿರ ಬೇಕಿಲ್ಲ. ಉದಾ—ಸಾರಂಗರಾಗದ ಶುದ್ಧ ಮಧ್ಯಮವು ಜೀವಸ್ವರವೇವಿನಾ ನ್ಯಾಸ ಸ್ವರವಲ್ಲ. ಆದ್ದರಿಂದ ಎಲ್ಲಾ ಅಂಶ ಸ್ವರಗಳೂ ಜೀವಸ್ವರಗಳು. ಆದರೆ ಜೀವಸ್ವರ ಗಳೆಲ್ಲವೂ ನ್ಯಾಸಸ್ವರಗಳಲ್ಲ. ರಾಗದ ಛಾಯೆ ಮನೋಜ್ಞವಾಗಿ ಚಿತ್ರಿತವಾಗಬೇಕಾದರೆ ಅಂಶ ಸ್ವರಗಳ ಪುನರಾವರ್ತನೆಯು ರಾಗದ ಸಂಚಾರಗಳಲ್ಲಿ ಆಗಬೇಕು.

**ಸಂಚಾರ ಸ್ವರಗಳ ಆಧಾರ ರಾಗಗಳು**—ಕೆಲವು ರಾಗಗಳಲ್ಲಿ ಆರೋಹಣಾ ವರೋಹಣಗಳಲ್ಲೇ ರಾಗರಂಜಕ ಸಂಚಾರಗಳು ಕಂಡು ಬರುತ್ತವೆ. ಉದಾ—ಹಂಸಧ್ವನಿ. ಕೆಲವು ರಾಗಗಳು ವಿಶೇಷ ಸಂಚಾರದಿಂದ ವ್ಯಕ್ತಗೊಳ್ಳುತ್ತವೆ. ಉದಾ—ಶಂಕರಾಭರಣ. ವಕ್ರ ಸಂಚಾರಗಳು ಮತ್ತು ದಾಟು ಪ್ರಯೋಗಗಳು ಎಲ್ಲಾ ರಾಗಗಳಲ್ಲಿ ಕಂಡುಬರುತ್ತವೆ.

**ರಸೋತ್ಪಾದನಾ ರಾಗಗಳು**—ಸಂಗೀತವು ಮಾಧುರ್ಯದ ಸುಂದರ ಮಾಧ್ಯಮ. ಸಾಹಿತ್ಯನ ರಸೋತ್ಪಾದನೆಯನ್ನು ಬೇರಾವ ಸಾಧನಗಳಿಗಿಂತ ಸಂಗೀತವು ಮಿಗಿಲಾಗಿ ಮಾಡುತ್ತದೆ. ಶೃಂಗಾರ, ವೀರ, ಕರುಣ, ಶಾಂತ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ ಎಂಬ ನವರಸಗಳನ್ನು ಮೋಹನ, ಅಠಾಣ, ಸಾವೇರಿ, ಆರಭಿ ಮುಂತಾದ ರಾಗಗಳು ಪ್ರತಿಪಾದಿಸುತ್ತವೆ.

**ಗಾನಕಾಲವನ್ನನುಸರಿಸುವ ರಾಗಗಳು**—ರಾಗಗಳನ್ನು ಸಾರ್ವಕಾಲಿಕ ರಾಗಗಳು, ಸಂಧ್ಯಾಕಾಲದ ರಾಗಗಳು, ಪೂರ್ವ ಸೂರ್ಯೋದಯ ರಾಗಗಳೆಂಬ ಮೂರು ಬಗೆಗಳಾಗಿ ವಿಂಗಡಿಸಲಾಗಿದೆ.

ಉದಾ : ಸಾರ್ವಕಾಲಿಕರಾಗ — ಶಂಕರಾಭರಣ, ಬಿಲಹರಿ
ಸಂಧ್ಯಾ ಕಾಲದರಾಗ — ಪೂರ್ವಿಕಲ್ಯಾಣಿ, ಕಾನಡ
ಪ್ರಾತಃಕಾಲದ ರಾಗ — ರೇವಗುಪ್ತಿ, ಮಾಯಾಮಾಳವಗೌಳ
ಅಪರಾಹ್ನದರಾಗ — ಮಧ್ಯಮಾವತಿ, ಆಸಾವೇರಿ

**ಮೂರ್ಛನ ಕಾರಕ ಜನ್ಯರಾಗ**—ಗ್ರಹಭೇದದಿಂದ ನೂತವರಾಗಗಳುಂಟಾಗುವ ರಾಗ. ಉದಾ : ಮೋಹನ.
ಕೆಲವು ರಾಗಗಳನ್ನು ಗ್ರಹಭೇದಕ್ಕೆ ಒಳಪಡಿಸಲಾಗುವುದಿಲ್ಲ. ಉದಾ : ವಿಜಯ ಶ್ರೀ. ಇಂತಹ ರಾಗಗಳು ಅಮೂರ್ಛನ ಕಾರಕ ಜನ್ಯರಾಗಗಳು.

**ಮಿತ್ರರಾಗಗಳು**—ರಾಗದ ಹೆಸರಿನ ಅಂತ್ಯದಲ್ಲಿ ಶಬ್ದ ಸಾಮ್ಯವು ಕಂಡು ಬಂದರೆ ಆ ರಾಗಗಳನ್ನು ಮಿತ್ರ ರಾಗಗಳೆಂದು ಹೇಳುವುದು ಪದ್ಧತಿ. ಉದಾ—ಸಿಂಧುರಾಮಕ್ರಿಯ, ಗುಂಡಕ್ರಿಯ ಇತ್ಯಾದಿ ಆದರೆ ಜನಕ—ಜನ್ಯರಾಗಗಳು ಸುವ್ಯಸ್ಥಿತವಾದ ಕ್ರಮಕ್ಕೆ ಒಳಪಟ್ಟ ಮೇಲೆ ಮಿತ್ರರಾಗಗಳೆಂಬದು ರೂಢಿಯಲ್ಲಿಲ್ಲ

**ಜನಾವರಾಳಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ : ಸ ಗ ರಿ ಗ ಮ ದ ನಿ ಪ ಸ
ಅ : ಸ ನಿ ದ ಪ ಮ ಗ ಮ ರಿ ಗ ಮ ರಿ ಸ

**ಜನಸಮ್ಮೋದಿನಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಗ ಪ ದ ನಿ ಸ
ಅ : ಸ ನಿ ದ ಪ ಗ ರಿ ಸ

**ಜಮಿಡಿಕ**—ಇದು ಆಂಧ್ರ ಪ್ರದೇಶದ ಒಂದು ಗ್ರಾಮೀಣ ಅವನದ್ಧವಾದ್ಯ. ೯ ಅಂಗುಲ ಉದ್ದ, ೬ ಅಂಗುಲ ಅಗಲ, ೧/೨ ಅಂಗುಲ ಮಂದವಿರುವ ಹಲಸಿನ ಮರದಿಂದ ಮಾಡಲ್ಪಟ್ಟ ಹೊಳವಿನ ಕೆಳಮುಖದ ಮೇಲೆ ಜಿಂಕೆಯ ಚರ್ಮದ ಮುಚ್ಚಳಿಕೆಯನ್ನು ಕಟ್ಟಿದೆ. ಈ ಚರ್ಮದ ಮಧ್ಯಭಾಗದಲ್ಲಿ ಸಣ್ಣ ರಂಧ್ರವಿದೆ. ಒಂದು ಸಣ್ಣ ಹಿಡಿ ಅಥವಾ ಕಡ್ಡಿಗೆ ೧೫ ಅಂಗುಲವುದ್ದವಿರುವ ನರವನ್ನು ಕಟ್ಟಿದೆ. ಈ ನರವನ್ನು ಒಂದು ನಾಣ್ಯದ ಸಣ್ಣ ರಂಧ್ರದ ಮೂಲಕ ಮತ್ತು ಚರ್ಮದ ರಂಧ್ರದ ಮೂಲಕ ಹಾದು ಹೋಗಿಸಿ, ಅದರ ಮತ್ತೊಂದು ತುದಿಯನ್ನು ಒಂದು ಸಣ್ಣ ಮರದ ತುಂಡಿಗೆ ಕಟ್ಟಿದೆ. ಈ ತುಂಡನ್ನು ಹಿಡಿದು ಕೊಂಡಾಗ ಅದು ಹೊಳವಿನ ಮೇಲ್ಭಾಗದಲ್ಲಿ ನಾಲ್ಕು ಅಂಗುಲ ಮೇಲಕ್ಕೆ ಬರುತ್ತದೆ. ಮರದ ತುಂಡು, ನಾಣ್ಯ

ಎಲ್ಲವೂ ನರದ ಬಿಗಿತದಿಂದ ಒಂದೇ ನೇರದಲ್ಲಿರುತ್ತದೆ. ಈ ವಾದ್ಯವನ್ನು ಹೊಟ್ಟೆ ಮತ್ತು ಎಡಗೈಯ ಮೊಳಕೈ ಮಧ್ಯೆ ಇಟ್ಟು ಕೊಂಡು ನುಡಿಸುತ್ತಾರೆ. ಮರದ ತುಂಡನ್ನು ಎಳೆದು ಎಡಗೈಯಲ್ಲಿ ಹಿಡಿದು ಬಲಗೈ ಬೆರಳಿನಿಂದ ಅದನ್ನು ಮೀಟಿದಾಗ ಆಕರ್ಷಕವಾಗಿ ನುಡಿಯುತ್ತದೆ. ದಾರದ ಬಿಗಿಯನ್ನು ಹೆಚ್ಚು ಕಡಿಮೆ ಮಾಡುತ್ತಾ ನಾನಾ ರೀತಿಯ ನುಡಿಕಾರವನ್ನುಂಟು ಮಾಡಿ ಸಂಗೀತಕ್ಕೆ ತಾಳವಾದ್ಯವನ್ನಾಗಿ ನುಡಿಸುವರು.

**ಜಯ**—(೧) ಕೊಳಲಿನ ಜಾತಿಗೆ ಸೇರಿದ ಒಂದು ವಾದ್ಯ ವಿಶೇಷ (೨) ಪುರಾತನ ೧೦೮ ತಾಳಗಳಲ್ಲಿ ೪೮ನೆ ತಾಳ. ಇದರ ಒಂದಾವರ್ತಕ್ಕೆ ಆರು ಮಾತ್ರೆಗಳು ಅಥವಾ ೨೪ ಅಕ್ಷರ ಕಾಲ. ಇದರ ಅಂಗಗಳು ಒಂದು ಲಘು, ಒಂದು ಗುರು, ಎರಡು ಲಘು, ಎರಡು ದ್ರುತ (೩) ಭಾರತದ ಒಂದು ಮಹಾಕಾವ್ಯವಾದ ಮಹಾಭಾರತದ ಹೆಸರು. ಈ ಹೆಸರು ಪ್ರಾರಂಭದ ಪ್ರಾರ್ಥನಾ ಶ್ಲೋಕದಲ್ಲಿದೆ (ವ್ಯಾಸೋ ಜಯಮುದೀರಯೇತ್). ಇದು ೧೮ ಪರ್ವಗಳನ್ನೂ, ೧೮ ದಿನಗಳ ಯುದ್ಧವನ್ನೂ, ೧೮ ಅಕ್ಷೋಹಿಣಿ ಸೈನ್ಯವನ್ನೂ, ಭಗವದ್ಗೀತೆಯ ೧೮ ಅಧ್ಯಾಯಗಳನ್ನೂ ಸೂಚಿಸುತ್ತದೆ.

**ಜಯಾ**—ಸಂಗೀತ ದಾಮೋದರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಧೈವತದ ಪ್ರಥಮ ಶ್ರುತಿಯ ಹೆಸರು. ಇದು ೨೨ ಶ್ರುತಿಗಳಲ್ಲಿ ೧೮ನೆ ಶ್ರುತಿಯಾಗಿದೆ. ಕಟಪಯಾದಿ ಸೂತ್ರದಂತೆ ಜಯ ಎಂಬ ಪದವು ೧೮ನ್ನು ಸೂಚಿಸುತ್ತದೆ.

**ಜಯ ಜಯವಂತಿ**—ಈ ರಾಗವು ಹಿಂದೂಸ್ಥಾನಿ ಸಂಗೀತ ಪದ್ಧತಿಯ ಒಂದು ರಾಗ. ಕರ್ಣಾಟಕ ಸಂಗೀತದ ದ್ವಿಜಾವಂತಿ ರಾಗಕ್ಕೆ ಸಮನಾದುದು. ಮುತ್ತುಸ್ವಾಮಿ ದೀಕ್ಷಿತರ ' ಚೇತಶ್ರೀ ಬಾಲಕೃಷ್ಣಂ ಭಜರೇ ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ಜಯ ಜಯಂತಿ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಒಂದು ರಾಗ. ಇದು ಮಲ್ಲಾರ ರಾಗದ ಒಂದು ರಾಗಿಣಿ ಎಂದು ಹೇಳಿದೆ

**ಜಯಢಕ್ಕಾ**—ಇದು ಪುರಾತನ ಕಾಲದ ಒಂದು ಮದ್ದಲೆ. ಯುದ್ಧದಲ್ಲಿ ಗೆದ್ದ ಸೈನ್ಯವು ಯುದ್ಧಭೂಮಿಯಲ್ಲಿ ಇದನ್ನು ಬಾರಿಸುತ್ತಿತ್ತು.

**ಜಯತಾಳ**—ತಮಿಳಿನ ಪುರಾತನ ನಿಘಂಟಾದ ಪಿಂಗಳ ನಿಘಂಟು ಮತ್ತು ಭರತ ಶಾಸ್ತಿರಂ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಜಯದೇವ**—ಸುಂದರವೂ ಭಾವ ಪೂರ್ಣವೂ ಜಗದ್ವಿಖ್ಯಾತವೂ ಆದ ಗೀತಗೋವಿಂದ ಸಂಸ್ಕೃತ ಕಾವ್ಯವನ್ನು ರಚಿಸಿದವನು ಕವಿ ಜಯದೇವ. ಈತನ ಜೀವಿತವೇ ಒಂದು ಕಾವ್ಯ. ಅವನ ವಿಚಾರವಾಗಿ ಅನೇಕ ದಂತ ಕತೆಗಳು ಪ್ರಚಾರದಲ್ಲಿವೆ. ಖಚಿತವಾಗಿ ವಿವರಗಳು ದೊರೆಯುವುದಿಲ್ಲ. ಗೀತ ಗೋವಿಂದವು

ಅಷ್ಟಪದಿಯೆಂದು ಬಹು ಪ್ರಸಿದ್ಧ ಇಂದಿಗೂ ಇದನ್ನು ಹಾಡದೆ ಸಂಗೀತ ಕಚೇರಿಯು ಪೂರ್ಣವಾಗುವುದಿಲ್ಲನೆಂಬ ಭಾವನೆಯಿದೆ. ಅಷ್ಟಪದಿಯೆಂದರೆ ಎಂಟು ಪಾದಗಳುಳ್ಳ ಹಾಡು. ಸಾಮಾನ್ಯವಾಗಿ ಅಷ್ಟಪದಿಗಳ ವಿಷಯವು ಶೃಂಗಾರ. ಇದಕ್ಕೆ ಕಾರಣ ವುಂಟು. ಸಪ್ತಪದಿ ಎಂಬುದು ಗೃಹಸ್ಥ ಆಶ್ರಮಕ್ಕೆ ಪೂರ್ವದ ಸಂಸ್ಕಾರ. ನವಪದೀ ಎಂಬುದು ವಾನಪ್ರಸ್ಥಾಶ್ರಮಕ್ಕೆ ಸಂಬಂಧಿಸಿದ್ದು. ಅಷ್ಟಪದಿಯು ಸಾಂಸಾರಿಕ ಜೀವನಕ್ಕೆ ಸಂಬಂಧಿಸಿರುವುದು. ಇದರ ರಸವು ಶೃಂಗಾರವೇ ಆಗಿರುತ್ತದೆ. ಗೀತ ಗೋವಿಂದವು ಶ್ರೀಕೃಷ್ಣ ಪ್ರಣಯ ಕಥಾಮೃತ.

ಜಯದೇವನು ಬಂಗಾಳವನ್ನು ಆಳುತ್ತಿದ್ದ ಸೇನವಂಶದ ಬಲ್ಲಾಳ ಲಕ್ಷ್ಮಣ ಸೇನನ (೧೧೭೦-೧೨೦೦) ಆಸ್ಥಾನ ಕವಿಯಾಗಿದ್ದನು. ಪ್ರಸಿದ್ಧರಾದ ಗೋವರ್ಧನಾ ಚಾರ್ಯ, ಶಾರಣ, ಉಮಾಪತಿ, ಜಯದೇವ ಮತ್ತು ಧೋಯಿ ಎಂಬ ಪಂಚರತ್ನ ಹೆಸರು ರಾಜನ ಅರಮನೆಯ ದ್ವಾರದ ಕಂಬದ ಮೇಲಿರುವ ಶಾಸನದಲ್ಲಿ ಕೆತ್ತಲಾಗಿದೆ. ಜಯದೇವನು ದೇವಕುಟುಂಬದವನು. ಈ ಕುಟುಂಬದವರು ಈಗಲೂ ಒರಿಸ್ಸಾದಲ್ಲಿ ಇದ್ದಾರೆ. ಇವನ ತಂದೆ ಭೋಜದೇವ ಮತ್ತು ತಾಯಿ ರಾಮಾದೇವಿ (ರಮಾದೇವಿ) ಇವನ ಜನ್ಮಸ್ಥಳವು ಕಿಂದುಬಿಲ್ವ (ಬಿಂದು ಬಿಲ್ವ). ಈ ಹೆಸರಿನ ಊರು ಬಂಗಾಳದಲ್ಲೂ ಒರಿಸ್ಸದಲ್ಲೂ ಇವೆ. 'ಭಕ್ತಮಾಲೆ'ಯನ್ನು ಬರೆದ ಚಂದ್ರದತ್ತನು ಒರಿಸ್ಸದ ಜಗನ್ನಾಥ ಪುರಿಯ ಸಮೀಪದಲ್ಲಿರುವ ಕಿಂದು ಬಿಲ್ವವೆಂಬ ಹಳ್ಳಿಯು ಇವನ ಜನ್ಮಸ್ಥಳ ವೆಂದು ಹೇಳಿದ್ದಾನೆ. ಇವನು ಮಿಥಿಲಾನಗರದವನೆಂದೂ ಒಂದು ನಂಬಿಕೆಯುಂಟು. ಇದೇ ಕಾಲದಲ್ಲಿ ಜಯದೇವ ಎಂಬ ಹೆಸರಿನ ಇನ್ನೂ ಇಬ್ಬರು ಕವಿಗಳಿದ್ದರು. ಅವರಲ್ಲಿ ಒಬ್ಬನು ಪ್ರಸನ್ನ ರಾಘವ ಎಂಬ ಸಂಸ್ಕೃತ ನಾಟಕವನ್ನು ರಚಿಸಿದ್ದಾನೆ. ಮತ್ತೊಬ್ಬನು ಶೃಂಗಾರಮಾಧವೀಯಚಂಪೂ ಎಂಬ ಕಾವ್ಯವನ್ನು ರಚಿಸಿದ್ದಾನೆ. ಗೀತ ಗೋವಿಂದದ ಜಯದೇವನಿಗೂ ಮಿಕ್ಕ ಇಬ್ಬರಿಗೂ ಏನೂ ಸಂಬಂಧವಿಲ್ಲವೆನ್ನ ಬಹುದು.

ಜಯದೇವನು ಚಿಕ್ಕಂದಿನಲ್ಲಿ ಪಾಂಡಿತ್ಯವನ್ನುಗಳಿಸಿದನು. ಪರಾಶರನೆಂಬ ಗೆಳೆಯನೊಂದಿಗೆ ಮಥುರಾ, ಬೃಂದಾವನಗಳಿಗೆ ಹೋದನು. ಯಮುನಾನದಿ ತೀರದಲ್ಲಿ ರಾಧಾಕೃಷ್ಣರ ರಾಸಕೇಳಿ ಕಥೆಗಳನ್ನು ಕೇಳಿ ಅವನಲ್ಲಿ ಕೃಷ್ಣ ಭಕ್ತಿ ಉತ್ತೇಜಿತವಾಯಿತು. ಕ್ಷೇತ್ರಾಟನೆ ಮಾಡುತ್ತಾ ಜಗನ್ನಾಥಪುರಿಗೆ ಬಂದು ದೇವರ ದರ್ಶನ ಮಾಡಿ ದೇವಾಲಯದ ಬಳಿ ಮರದ ಕೆಳಗೆ ಮಲಗಿದ್ದಾಗ ದೇವಶರ್ಮನೆಂಬ ಬ್ರಾಹ್ಮಣನು ಬಂದು ಅವನನ್ನು ಎಬ್ಬಿಸಿ ತನ್ನ ಮಗಳನ್ನು ಅವಳಿಗೆ ಕೊಟ್ಟು ಮದುವೆ ಮಾಡುನಂತೆ ತನಗೆ ಹಿಂದಿನ ರಾತ್ರಿ ಸ್ವಪ್ನ ಸೂಚನೆ ಆಯಿತೆಂದು ಹೇಳಿದನು. ಜಯದೇವನು ಇದಕ್ಕೆ ಒಪ್ಪದಿರಲು ಆ ಬ್ರಾಹ್ಮಣನು ಮಗಳನ್ನು ಅವನ ಬಳಿಯೇ ಬಿಟ್ಟು ಹೊರಟುಹೋದನು. ಬೇರೆ ದಾರಿಯಿಲ್ಲದೆ ಜಯದೇವನು ಆಕೆಯನ್ನು ಮದುವೆಯಾದನು. ಹೀಗೆ ದೈವದತ್ತವಾಗಿ ಬಂದ ಅವನ ಹೆಂಡತಿ ಪದ್ಮಾವತಿ ಭಾವುಕಳು, ಭಕ್ತಳು, ನಾಟ್ಯದಲ್ಲಿ ವಿಶೇಷವಾದ ವ್ಯುತ್ಪತ್ತಿಯಿದ್ದವಳು. ಜಯದೇವನು

ಭಕ್ತಿಪರವಶವಾಗಿ ಹಾಡಿದಾಗ ಪದ್ಮಾವತಿಯು ಮೈಮರೆತು ನರ್ತನ ಮಾಡುತ್ತಿದ್ದಳಂತೆ. ಜಯದೇವನು ತನ್ನನ್ನು ಪದ್ಮಾವತೀ ಚರಣ ಚಾರಣ ಚಕ್ರವರ್ತಿ ಎಂದು ವರ್ಣಿಸಿ ಕೊಂಡಿದ್ದಾನೆ. ಕಥಕಂದಿ ಎಂಬ ಗ್ರಾಮದಲ್ಲಿದ್ದಾಗ ಗೀತಗೋವಿಂದವನ್ನು ಬರೆದು ಮುಗಿಸಿದನೆಂದು ಪ್ರತೀತಿ. ಈ ಹಳ್ಳಿಯನ್ನು ಜಯದೇವಪುರವೆನ್ನುತ್ತಾರೆ ಈ ಕಾವ್ಯದಿಂದ ಅವನ ಕೀರ್ತಿಯು ಹರಡಿ ರಾಜಾ ಲಕ್ಷ್ಮಣ ಸೇನನ ಆಸ್ಥಾನಕವಿಯಾಗಿ ಸನ್ಮಾನಿತನಾದನು. ಕಡೆಗಾಲದಲ್ಲಿ ಕೆಂನುಲಿ ಎಂಬ ಹಳ್ಳಿಗೆ ಬಂದು ಪತ್ನಿಯೊಂದಿಗೆ ನಿಶ್ಚಿಂತೆಯಿಂದ ವಾಸಿಸುತ್ತಿದ್ದು ವಿಶ್ರಾಂತಿ ಸುಖವನ್ನನುಭವಿಸಿ ಕಾಲವಾದನು. ಜಯದೇವನು ಗೀತಗೋವಿಂದ ಕಾವ್ಯವಲ್ಲದೆ ಚಂದ್ರಾಲೋಕ, ರತಿಮಂಜರಿ, ತತ್ವಚಿಂತಾಮಣಿ, ಕಾರಕವಾದ ಎಂಬ ಶೃಂಗಾರ ಮತ್ತು ಶಾಸ್ತ್ರಗ್ರಂಥಗಳನ್ನು ರಚಿಸಿದ್ದಾನೆ.

ಗೀತಗೋವಿಂದವು ಜಯದೇವನೇ ಹೇಳಿರುವಂತೆ ಶೃಂಗಾರ ಮಹಾಕಾವ್ಯ. ಇದಕ್ಕೆ ಸೊಗಸಾದ ವ್ಯಾಖ್ಯಾನಗಳನ್ನು ಹಲವರು ಬರೆದಿದ್ದಾರೆ ಇವುಗಳಲ್ಲಿ ರಾಣಾಕುಂಭನ 'ರಸಿಕಪ್ರಿಯಾ' ಎಂಬುದು ಬಹು ಪ್ರಸಿದ್ಧ ಇನ್ನೊಂದು ಆಂಧ್ರದ ಲಕ್ಷ್ಮೀಧರನ ಶ್ರುತಿಹಜನಿ. ಕೃಷ್ಣದತ್ತನ ಶಶಿಲೇಖಾ ಮತ್ತು ಜಗದ್ಧರನ ಸಾರದೀಪಿಕಾ ಮುಂತಾದುವು ಇತರ ವ್ಯಾಖ್ಯಾನಗಳು.

ಜಯದೇವನು ಪವಾಡಪುರುಷ ಎನ್ನಲು ಹಲವು ನಿದರ್ಶನಗಳಿವೆ. ಗೀತ ಗೋವಿಂದವನ್ನು ಬರೆಯಲು ತೊಡಗಿ ೧೦ನೆ ಸರ್ಗದ ೧೯ನೆ ಅಷ್ಟಪದಿಯ ೭ನೆ ಚರಣವನ್ನು ಈ ರೀತಿ ಬರೆದನು :—

"ಸ್ಮರಗರಳ ಖಂಡನಂ ಮಮಶಿರಸಿ ಮಂಡನಂ, ದೇಹಿ ಪದಪಲ್ಲವ ಮುದಾರಂ"

"ಎಲೈ ರಾಧೇ ! ಪ್ರೇಮವೆಂಬ ವಿಷವು ನನ್ನ ತಲೆಗೆ ಹತ್ತಿದೆ ನಿನ್ನ ಗುಲಾಬಿ ಬಣ್ಣದ ಪಾದಗಳನ್ನು ನನ್ನ ತಲೆಯ ಮೇಲಿಡು. ವಿಷವು ಕೆಳಕ್ಕೆ ಇಳಿಯುತ್ತದೆ". ಜಯದೇವನಿಗೆ ಈ ಭಾಗವು ಸರಿಬೀಳಲಿಲ್ಲ. ರಾಧೆಯ ಪಾದಗಳನ್ನು ಕೃಷ್ಣನ ಶಿರಸ್ಸಿನ ಮೇಲಿಡುವುದು ಮಹಾಪರಾಧ ಎಂದು ತಿಳಿದು ಈ ಭಾಗವನ್ನು ಹೊಡೆದು ಹಾಕಿ, ಪತ್ನಿಯ ಕೈಯಲ್ಲಿ ಪುಸ್ತಕವನ್ನಿತ್ತು ಅಭ್ಯಂಜನಕ್ಕೆ ಹೋದನು. ಅವನು ಆ ಕಡೆ ಹೋದ ಕೂಡಲೇ ಈ ಕಡೆ ಜಯದೇವನ ರೂಪದಲ್ಲಿ ಶ್ರೀಕೃಷ್ಣನು ಬಂದನು. ಒಂದು ಹೊಸ ಭಾವನೆ ಹೊಳೆದಿದೆ, ಅದನ್ನು ಬರೆಯ ಬೇಕೆಂದು ಪದ್ಮಾವತಿಯಿಂದ ತನ್ನ ಪುಸ್ತಕವನ್ನು ತೆಗೆದುಕೊಂಡು, ಹೊಡೆದು ಹಾಕಿದ್ದ ಎರಡು ಸಾಲುಗಳನ್ನು ಪುನಃ ಬರೆದು ಹಿಂದುಗಡೆಗೆ ಹೋಗಿ ಅಂತರ್ಧಾನನಾದನು. ಅಂದು ಮಧ್ಯಾಹ್ನ ಬರವಣಿಗೆಯನ್ನು ಮುಂದುವರಿಸಲು ಜಯದೇವನು ಪುಸ್ತಕವನ್ನು ತೆಗೆದುಕೊಂಡು ನೋಡಿದಾಗ ತಾನು ಹೊಡೆದು ಹಾಕಿದ್ದ ಎರಡು ಸಾಲುಗಳು ಪುನಃ ಬರೆಯಲ್ಪಟ್ಟಿರು ವುದನ್ನು ನೋಡಿ ಆಶ್ಚರ್ಯಚಕಿತನಾಗಿ ಪದ್ಮಾವತಿಯನ್ನು ಕೇಳಿದನು. ಅವಳು ನಡೆದ ಸಂಗತಿಯನ್ನು ಹೇಳಿದಳು. ಅದನ್ನು ಕೇಳಿ ಪುಲಕಿತನಾಗಿ ಶ್ರೀಕೃಷ್ಣನೇ ಆ

ಕೆಲಸವನ್ನು ಮಾಡಿದನೆಂದು ಊಹಿಸಿ, ರಾಧಾ ಮಾಧವನನ್ನು ಕಣ್ಣಾರೆ ಕಂಡ ಪದ್ಮಾವತಿಯ ಭಕ್ತಿ ಭಾಗ್ಯವನ್ನು ಹೊಗಳಿದನು. ಈ ಘಟನೆಯನ್ನು ೧೯ನೆ ಅಷ್ಟಪದಿಯ ಕೊನೆಯ ಚರಣದಲ್ಲಿ ತನ್ನನ್ನು 'ಪದ್ಮಾವತೀ ರಮಣ ಜಯ ದೇವಕರಿ' ಎಂದು ಹೇಳಿದ್ದಾನೆ. ಆದ್ದರಿಂದ ಈ ಅಷ್ಟಪದಿಗೆ ದರ್ಶನ ಅಷ್ಟಪದಿ, ಎಂಬ ಹೆಸರುಂಟಾಗಿದೆ.

ಒರಿಸ್ಸದ ದೊರೆಯಾಗಿದ್ದ ಪುರುಷೋತ್ತಮದೇವನಿಗೆ ಜಯದೇವನ ಕೀರ್ತಿಯನ್ನು ಕಂಡು ಅಸೂಯೆ ಉಂಟಾಯಿತು. ಅಭಿನವ ಗೀತಗೋವಿಂದ ಎಂಬ ತತ್ಸದೃಶ ಕಾವ್ಯವೊಂದನ್ನು ರಚಿಸಿ, ಜನರು ಜಯದೇವನ ಅಷ್ಟಪದಿಗೆ ಬದಲು ತನ್ನ ಕಾವ್ಯವನ್ನೇ ಹಾಡಬೇಕೆಂದು ಆಜ್ಞೆ ಮಾಡಿದನು. ಜನರು ರಾಜನ ಕಾವ್ಯವನ್ನು ಕಣ್ಣೆತ್ತಿಕೂಡ ನೋಡದೆ ಜಯದೇವನ ಅಷ್ಟಪದಿಗಳನ್ನೇ ಹಾಡುತ್ತಿದ್ದರು. ಆದ್ದರಿಂದ ಇವೆರಡರಲ್ಲಿ ಯಾವುದು ಉತ್ತಮ ಎಂಬುದನ್ನು ನಿರ್ಧರಿಸಲು, ಎರಡನ್ನೂ ಜಗನ್ನಾಥನ ಸನ್ನಿಧಿಯಲ್ಲಿಟ್ಟು ದೇವರಿಗೆ ಯಾವುದು ಪ್ರೀತಿಯೋ ಅದು ದೇವರ ಕೈಯಲ್ಲಿರುತ್ತದೆ ಎಂದು ಯೋಚಿಸಿ, ಎರಡು ಕಾವ್ಯಗಳ ಪ್ರತಿಗಳನ್ನು ದೇವರ ಸನ್ನಿಧಿಯಲ್ಲಿಟ್ಟು ಬಾಗಿಲು ಹಾಕಿಸಿದನು. ಮಾರನೆಯ ಬೆಳಗ್ಗೆ ದೇವಾಲಯದ ಬಾಗಿಲು ತೆಗೆದಾಗ ಜಯದೇವನ ಕಾವ್ಯವು ದೇವರ ಕೈಯಲ್ಲಿದ್ದು, ರಾಜನ ಕಾವ್ಯವು ನೆಲದ ಮೇಲೆ ಒಂದು ಮೂಲೆಯಲ್ಲಿ ಬಿದ್ದಿರುವುದು ಕಂಡುಬಂದಿತು. ಅಲ್ಲಿಂದ ಮುಂದೆ ರಾಜನು ಜಯದೇವ ಮತ್ತು ಪದ್ಮಾವತಿಯನ್ನು ಅತ್ಯಂತ ಗೌರವದಿಂದ ಕಾಣಲು ತೊಡಗಿದನು. ಅಭಿನವ ಗೀತಗೋವಿಂದವು ಈಗ ಮುದ್ರಿತವಾಗಿದೆ.

ರಾಜಾ ಲಕ್ಷ್ಮಣಸೇನನು ಜಯದೇವ ಮತ್ತು ಪದ್ಮಾವತಿಯನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದನು. ಆದರೆ ರಾಣಿಯು ಪದ್ಮಾವತಿಯ ವಿಚಾರವಾಗಿ ಅಸೂಯೆಗೊಂಡಳು. ಏನಾದರೂ ಒಂದು ಚೇಷ್ಟೆ ಮಾಡಲು ಸಮಯ ನೋಡುತ್ತಿದ್ದಳು ಒಂದು ಸಲ ರಾಜನು ಜಯದೇವನನ್ನು ಕರೆದುಕೊಂಡು ಬೇಟೆಗೆ ಹೋದನು. ಇದೇ ಸರಿಯಾದ ಸಮಯವೆಂದು ಉಪಯೋಗಿಸಿಕೊಂಡು ಜಯದೇವನು ಕಾಡಿನಲ್ಲಿ ದುರಂತಕ್ಕೀಡಾದನೆಂದು ರಾಣಿಯು ತಿಳಿಸಿದಳು. ಈ ಸುದ್ದಿಯನ್ನು ಕೇಳಿದೊಡನೆಯೇ ಪದ್ಮಾವತಿಯು ಮೂರ್ಛಿತಳಾಗಿ ಮೃತಳಾದಳು. ರಾಣಿಗೆ ಇದು ಅನಿರೀಕ್ಷಿತವಾಗಿತ್ತು. ತನ್ನ ಚೇಷ್ಟೆ ವಿಪರೀತಕಿಟ್ಟುಕೊಂಡಿತು ಎಂದು ಭಯಭ್ರಾಂತಳಾದಳು ಸ್ವಲ್ಪ ಸಮಯದ ನಂತರ ಜಯದೇವನೊಡನೆ ಹಿಂತಿರುಗಿದ ರಾಜನು ಈ ಘಟನೆಯನ್ನು ತಿಳಿದು ಕೋಪಾವಿಷ್ಟನಾಗಿ ಕತ್ತಿಯನ್ನು ಹಿರಿದು ರಾಣಿಯನ್ನು ತುಂಡರಿಸಲು ನುಗ್ಗಿದನು. ಜಯದೇವನು ಕೂಡಲೇ ಅವನ ಕೈಯನ್ನು ಹಿಡಿದು ತಡೆದನು ಪದ್ಮಾವತಿಯು ಸುಳ್ಳು ಸುದ್ದಿ ಕೇಳಿ ಮೃತಳಾದಳು. ತಾನು ಜೀವಂತವಾಗಿರುವುದು ನಿಜ. ಅವಳು ಪುನಃ ಜೀವಂತಳಾಗುತ್ತಾಳೆ ಎಂಬುದನ್ನು ಪರೀಕ್ಷಿಸೋಣ ಎಂದು ಹೇಳಿ ೧೯ನೆ ಅಷ್ಟಪದಿಯನ್ನು

ಭಕ್ತಿಯಿಂದ ಹಾಡಿ ಪದ್ಮಾವತಿಯ ಮುಖದ ಮೇಲೆ ತೀರ್ಥವನ್ನು ಪ್ರೋಕ್ಷಿಸಿದನು. ಕೂಡಲೇ ಅವಳು ನಿದ್ರೆಯಿಂದ ಎದ್ದವಳಂತೆ ಎಚ್ಚರಗೊಂಡಳು. ಈ ಘಟನೆಯಿಂದ ೧೯ನೆ ಅಷ್ಟಪದಿಗೆ ಸಂಜೀವಿನಿ ಅಷ್ಟಪದಿ ಎಂಬ ಹೆಸರುಂಟಾಗಿದೆ.

ಜಯದೇವನು ಶ್ರೀಕೃಷ್ಣನ ಪರಮಭಕ್ತನಾಗಿದ್ದನು. ಅವನು ಹೇಳಿರುವ ದಶಾವತಾರಗಳಲ್ಲಿ ಕೃಷ್ಣಾವತಾರವನ್ನು ಕುರಿತು ಹೇಳಿಲ್ಲದಿರುವುದರಿಂದ ಅವನು ಶ್ರೀಕೃಷ್ಣನೇ ಪರಬ್ರಹ್ಮನೆಂದು ತಿಳಿದಿದ್ದನೆನ್ನಬಹುದು. ಬುದ್ಧನು ವಿಷ್ಣುವಿನ ಒಂಭತ್ತನೆ ಅವತಾರವೆಂದು ಹೇಳಿದ್ದಾನೆ.

ಜಯದೇವನ ಜನ್ಮಸ್ಥಳವಾದ ಕೆಂದುಲಿಯಲ್ಲಿ ಪ್ರತಿವರ್ಷವೂ ಅವನ ಸ್ಮರಣಾರ್ಥವಾಗಿ ವಾರ್ಷಿಕೋತ್ಸವವು ನಡೆಯುತ್ತದೆ. ಆ ಸಂದರ್ಭದಲ್ಲಿ ಗೀತ ಗೋವಿಂದವನ್ನು ಸಂಪೂರ್ಣವಾಗಿ ವಾಚನ ಮಾಡುತ್ತಾರೆ. ಒರಿಯಾ ಭಾಷೆಯ ತಾಳೆಗರಿ ಪ್ರತಿಯೊಂದು ಕೆಂದುಬಿಲ್ವದ ಕೊಟೆರ ಕೃಷ್ಣಪಂಡಾಜಿ ಎಂಬುವರ ಬಳಿಯಿದೆ. ಇದರಲ್ಲಿ ಜಯದೇವನು ಶ್ರೀಮುಖ ಸಂವತ್ಸರದ ಮಾರ್ಗಶಿರ ಕೃಷ್ಣಏಕಾದಶಿಯಂದು ಸ್ವರ್ಗಸ್ಥನಾದನೆಂದು ಹೇಳಿದೆ. ಇದು ೧೧೫೩ರ ಡಿಸೆಂಬರ್ ತಿಂಗಳ ೨೮ನೆ ದಿನಾಂಕ ಸೋಮವಾರವೆನ್ನಬಹುದು. ಪುರಿಯ ಜಗನ್ನಾಥ ದೇವಾಲಯದಲ್ಲಿ ಪ್ರತಿಸಂಜೆ ಪೂಜಾನಂತರ ಒಂದೆರಡು ಅಷ್ಟಪದಿಗಳನ್ನು ಹಾಡುತ್ತಾರೆ.

**ಜಯನಾರಾಯಣಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗಾ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ಷಡ್ಜವು ಗ್ರಹಾಂಶನ್ಯಾಸ. ಋಷಭ ಧೈವತಗಳು ಪರಸ್ಪರವಾದಿ ಸಂವಾದಿಗಳು. ಗಾಂಧಾರ ಧೈವತಗಳು ರಾಗ ಛಾಯಾಸ್ವರಗಳು. ದೀನರಸ ಪ್ರಧಾನ ರಾಗ. ಶ್ರೀ ತ್ಯಾಗರಾಜರ ಮನವಿನಿ ವಿನುಮಾ ಎಂಬ ರಚನೆಯು ಈ ರಾಗದ ಸುಂದರವಾದ ಕೃತಿ.

**ಜಯನೃತ್ಯ**—ಇದು ಯುದ್ಧದಲ್ಲಿ ಗೆದ್ದ ಸೈನ್ಯವು ರಾಜಧಾನಿಗೆ ಹಿಂತಿರುಗುವಾಗ ಅದನ್ನು ಸ್ವಾಗತಿಸುವ ನೃತ್ಯ. ತಂಜಾವೂರು ಜಿಲ್ಲೆಯ ತಿರುಕೋಡಿಕಾವಲ್‌ನ ದೇವಾಲಯದ ಗೋಪುರದಲ್ಲಿ ಜಯನೃತ್ಯದ ಸುಂದರವಾದ ಶಿಲ್ಪಗಳಿವೆ ರಥಗಳಲ್ಲಿ ಬರುತ್ತಿರುವ ಸೈನಿಕರು, ಆನೆ ಮತ್ತು ಕುದುರೆ ಸವಾರರು ಸುತ್ತು ಪದಾತಿಗಳ ದೃಶ್ಯ ಶಿಲ್ಪವು ಗೋಡೆಗಳ ಮೇಲೆ ಕಂಡುಬರುತ್ತದೆ. ಸಂಗೀತ ಸಹಿತ ರಾಜಧಾನಿಯ ಬೀದಿಯಲ್ಲಿ ಈ ಸೈನ್ಯವನ್ನು ಸ್ವಾಗತಿಸುವ ದೃಶ್ಯವಿದೆ. ಇದೊಂದು ಅಪರೂಪವಾದ ಶಿಲ್ಪ.

**ಜಯದೇವಪುರ**—ಜಯದೇವ ಕವಿಯು ಗೀತಗೋವಿಂದ ಕಾವ್ಯವನ್ನು ಸಂಪೂರ್ಣವಾಗಿ ರಚಿಸಿದ ಸ್ಥಳ.

**ಜಯದೇವಸೇವೆ**—ಒರಿಸ್ಸಾದ ಪುರಿಯ ಜಗನ್ನಾಥ ದೇವಾಲಯದಲ್ಲಿ ಜಯದೇವನ ಅಷ್ಟಪದಿಗಳನ್ನು ಹಾಡುವ ಸೇವೆ. ಈ ಸೇವೆಯ ಹಕ್ಕು ಕೆಲವು ಒರಿಯಾ ಮನೆತನಗಳಿಗೆ ಸೇರಿದೆ ಗರ್ಭಗುಡಿಯ ಸಮೀಪದಲ್ಲಿ ನಿಂತು ಈ ಅಷ್ಟಪದಿಗಳನ್ನು ಹಾಡುತ್ತಾರೆ. ಅಲ್ಲೇ ಗೋಡೆಗಳ ಮೇಲೆ ಅಷ್ಟಪದಿಗಳನ್ನು ಕೆತ್ತಲಾಗಿದೆ. ಜಯದೇವನು ತನ್ನ ಜೀವಿತ ಕಾಲದಲ್ಲಿ ಅದೇ ಸ್ಥಳದಲ್ಲಿ ಕುಳಿತು ಗೀತಗೋವಿಂದವನ್ನು ಹಾಡುತ್ತಿದ್ದನು ಮತ್ತು ಅದಕ್ಕೆ ನೃತ್ಯಮಂಟಪದಲ್ಲಿ ಪದ್ಮಾವತಿಯು ನೃತ್ಯ ಮಾಡುತ್ತಿದ್ದಳು. ಈ ದೇವಾಲಯದಲ್ಲಿ ಒರಿಯಾದವರು ಮಾತ್ರ ಸೇವೆ ಅರ್ಪಿಸಬಹುದು. ಪದ್ಮಾವತಿಯ ಕಾಲದಿಂದ ಪುರಿಯಲ್ಲಿ ದೇವದಾಸಿ ನೃತ್ಯವು ಆರಂಭವಾಯಿತು. ದಕ್ಷಿಣ ಭಾರತದಲ್ಲಿದ್ದಂತೆ ಪುರಿಯ ದೇವದಾಸಿಯರು ಒಂದು ವಿಶಿಷ್ಟ ಜಾತಿಯಲ್ಲಿಲ್ಲ. ಅವರು ನೃತ್ಯಕಲೆಯಲ್ಲಿ ಪರಿಣತರಾದವರು

**ಜಯಪತ್ರ**—ಇದು ಸ್ಪರ್ಧೆಯಲ್ಲಿ ಸೋತ ಸಂಗೀತ ವಿದ್ವಾಂಸನು ತನ್ನನ್ನು ಜಯಿಸಿದ ವಿದ್ವಾಂಸನಿಗೆ ಬರೆದು ಕೊಡುತ್ತಿದ್ದ. ಇದಕ್ಕೆ ಜಯಪತ್ರಿಕ ಎಂದೂ ಹೆಸರು.

**ಜಯಪ್ರಿಯಮಂಠ**—ಇದು ಒಂದು ಲಘು, ಒಂದು ಗುರು ಮತ್ತು ಲಘು ಇರುವ ತಾಳ

**ಜಯಮ್ಮ ಟಿ.**—ಇವರು ಹಿಂದಿನ ಪೀಳಿಗೆಯ ಅತ್ಯಂತ ಪ್ರಸಿದ್ಧ ವಿದುಷಿ ಯಾಗಿದ್ದ ವೀಣಾಧನಂ ಅವರ ಮೊಮ್ಮಗಳು. ಶುದ್ಧವಾದ ಶೈಲಿ, ಬಹುಸಂಖ್ಯೆಯ ಶುದ್ಧಪಾಠಾಂತರದ ಅಪರೂಪವಾದ ಪದಗಳು, ಕೃತಿಗಳು, ಜಾವಳಿಗಳು ಮುಂತಾದುವುಗಳನ್ನು ತಿಳಿದ ನಿಧಿಯಾಗಿದ್ದಾರೆ. ಹಿಂದಿನ ಭವ್ಯವಾದ ಸಂಗೀತ ಪರಂಪರೆಯ ಪ್ರತಿನಿಧಿ ಇವರು ಮದ್ರಾಸಿನ ಉಪಾಧ್ಯಾಯರ ಸಂಗೀತದ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಮ್ಯೂಸಿಕ್ ಅಕಾಡೆಮಿ ಮುಂತಾದ ಸಂಸ್ಥೆಗಳ ಗೌರವ ಮತ್ತು ಸನ್ಮಾನಗಳನ್ನು ಪಡೆದಿದ್ದಾರೆ. ಇವರ ಗಾಯನದ ಮುಖ್ಯ ಲಕ್ಷಣ ಭಾವಪುಷ್ಟಿ. ಭಾರತದ ಪ್ರಸಿದ್ಧ ಭರತನಾಟ್ಯ ಕಲಾವಿದೆ ಬಾಲಸರಸ್ವತಿ ಯವರು ಇವರ ಪುತ್ರಿ.

**ಜಯಭೇರಿ, ಜಯಭೇರಿಕೆ**—ವಿಜಯೋತ್ಸವಗಳಲ್ಲಿ ಬಾರಿಸುತ್ತಿದ್ದ ನಗಾರಿ.

**ಜಯಮನೋಹರಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಸ

ಅ: ಸ ನಿ ದ ಮ ಗ ರಿ ಸ

ಇದು ಔಡವ ಷಾಡವ ಉಪಾಂಗರಾಗ. ಗಾಂಧಾರ, ಮಧ್ಯಮ ಮತ್ತು ಧೈವತವು ಜೀವಸ್ವರಗಳು. ಮರೀ ಎಂಬ ವಿಶೇಷ ಸಂಚಾರವು ರಾಗಕ್ಕೆ ಸೌಂದರ್ಯ ವನ್ನೀಯುತ್ತದೆ. ಸಾರ್ವಕಾಲಿಕರಾಗ ಮತ್ತು ದೀನರಸ ಪ್ರಧಾನರಾಗ.

ಶ್ರಿ ತ್ಯಾಗರಾಜರು ಈ ರಾಗವನ್ನು ಬೆಳಕಿಗೆ ತಂದರು. ಅವರು ರಚಿಸಿರುವ ನೀ ಭಕ್ತಿಭಾಗ್ಯಸುಧಾ, ಶ್ರೀರಮ್ಯ ಚಿತ್ತಾಲಂಕಾರ ಮತ್ತು ಯಜ್ಞಾದುಲು ಎಂಬುವು ಈ ರಾಗದ ಪ್ರಸಿದ್ಧ ಹಾಗೂ ಶ್ರೇಷ್ಠ ಕೃತಿಗಳು.

**ಜಯಮುಖ**—೧೭ನೆ ಶತಮಾನದ ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಜಯಮೋಹನ**—ಈ ರಾಗವು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಜಯಮಂಗಳ**—ಪುರಾತನ ೧೦೮ ತಾಳಗಳಲ್ಲಿ ೪೫ನೆ ತಾಳ. ಇದರ ಒಂದಾವರ್ತಕ್ಕೆ ೧೨ ಮಾತ್ರೆಗಳು ಅಥವಾ ೧೮ ಅಕ್ಷರಕಾಲ. ಇದರ ಅಂಗಗಳು ಲಘು, ಎರಡು ಗುರು, ಲಘು, ಎರಡು ಗುರು.

**ಜಯಮಂಜರಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ಪ ದ ಪ ಮ ರಿ ಗ ರಿ ಸ

**ಜಯರಾಮಾ (ಜಯರಾಮ)**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಸ

**ಜಯರಾಮ ಅಯ್ಯರ್ ಟಿ. ಕೆ.** (೧೮೯೪ ) ಜಯರಾಮ ಅಯ್ಯರ್ ರವರು ಅವರ ತಂದೆ ವಿಶ್ವನಾಥ ಅಯ್ಯರ್‌ರವರಲ್ಲಿ ಪಿಟೀಲುವಾದನವನ್ನು ಕಲಿತು ವಿದ್ವಾಂಸರಾದರು. ಸರ್ಕಾರದ ಸೇವೆಗೆ ಸೇರಿ ೧೯೨೨ರಲ್ಲಿ ಅದನ್ನು ಬಿಟ್ಟು ಸಂಗೀತವನ್ನೇ ಉದ್ಯೋಗವನ್ನಾಗಿಟ್ಟುಕೊಂಡರು. ಕರ್ಣಾಟಕ ಸಂಗೀತ ಕ್ಷೇತ್ರದ ಪ್ರಸಿದ್ಧ ವಿದ್ವಾಂಸರ ಕಚೇರಿಗಳಿಗೆ ಪಕ್ಕವಾದ್ಯ ನುಡಿಸಿದರು. ತಿರುವನಂತಪುರದ ಸ್ವಾತಿತಿರುನಾಳ್ ಅಕಾಡೆಮಿಯಲ್ಲಿ ಸಂಗೀತದ ಪ್ರಾಧ್ಯಾಪಕರಾಗಿದ್ದು ತರುವಾಯ ತಿರುಚಿಯ ಆಕಾಶವಾಣಿ ಕೇಂದ್ರದ ಕಲಾವಿದರಾಗಿದ್ದು ೧೯೫೦ ರಿಂದ ದೆಹಲಿ ಆಕಾಶವಾಣಿ ಕೇಂದ್ರದ ರಾಷ್ಟ್ರೀಯ ವಾದ್ಯವೃಂದದ ನಿರ್ದೇಶಕರೂ ರಚನಕಾರರೂ ಆದರು. ಉತ್ತರಾದಿ ಮತ್ತು ಪಾಶ್ಚಾತ್ಯ ಸಂಗೀತಗಳ ತುಲನಾತ್ಮಕ ಅಧ್ಯಯನ ಮಾಡಿದರು. ಭಾರತೀಯ ರಾಗಗಳನ್ನು ವಾದ್ಯವೃಂದಕ್ಕೆ ಅಳವಡಿಸುವುದಲ್ಲದೆ ಮತ್ತು ಹೊಸ ರಚನೆಗಳನ್ನು ಮಾಡಿ ಪ್ರಯೋಗ ಮಾಡಿದರು. ಇವುಗಳು ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಪ್ರಸಾರವಾಗಿವೆ. ಇವರ ವಾದನದಲ್ಲಿ ಸಂಪ್ರದಾಯತೆ

ಮತ್ತು ಪರಿಷ್ಕೃತವಾದ ಶೈಲಿ ಪ್ರಮುಖವಾಗಿದ್ದುವು. ೧೯೬೧ರಲ್ಲಿ ಸಂಗೀತ ಕಲಾನಿಧಿ ಪ್ರಶಸ್ತಿಯನ್ನು ಪಡೆದರು.

**ಜಯರಾಮತಾಳ**—ವನಪಾದ ಚೂಡಾಮಣಿ ವಿರಚಿತ ತಾಳ ಸಮುತ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ತಾಳ.

**ಜಯಸಾಕ್ಷಿ**—ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಸೂರ್ಯಾಂಶದ ಒಂದು ರಾಗ.

**ಜಯಸಾಕ್ಷಿಕ**—ನಾರದನ ಸಂಗೀತ ಮಕರಂದವೆಂಬ ಗ್ರಂಥಪಲ್ಲಿ ಉಕ್ತವಾಗಿರುವ ಒಂದು ರಾಗಾಂಗರಾಗ.

**ಜಯಸಾರಂಗ**—ಈ ರಾಗವು ೫೭ನೆ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ದ ಮ ಪ ದ ಮ ಗ ರಿ ಸ

**ಜಯಸಾವೇರಿ**—ಈ ರಾಗವು ೫ನೆ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ ಸ

**ಜಯಸಿಂಧು**—ಈ ರಾಗವು ೨ನೆ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ಪ ನಿ ದ ಮ ಗ ರಿ ಸ

**ಜಯಸಿಂಧುಮಾಳವಿ**—೧೮ನೆಯ ಮೇಳಕರ್ತ ಹಾಟಕಾಂಬರಿ ರಾಗದ ಮತ್ತೊಂದು ಹೆಸರು.

**ಜಲಸುಗಂಧಿ**—ಈ ರಾಗವು ೩೯ನೆ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ಜಯಶ್ರೀ**—(೧) ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನೀ ದ ಸ

ಅ: ಸ ನಿ ದ ಪ ಮ ಗ ರಿ ಸ

(೨) ಪುರಾತನ ೧೦೮ ತಾಳಗಳಲ್ಲಿ ೩೮ನೆ ತಾಳದ ಹೆಸರು. ಇದರ ಒಂದಾವರ್ತಕ್ಕೆ ೮ ಮಾತ್ರೆಗಳು ಅಥವಾ ೩೨ ಅಕ್ಷರಕಾಲ. ಇದರ ಅಂಗಗಳು ಎರಡು ಗುರು, ಎರಡು ಲಘು ಮತ್ತು ಒಂದು ಗುರು.

**ಜಯಶ್ರೀಕಂಠಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಸ

**ಜಯಶ್ರೀ ಭಾಸ್ಕರಮಟ್ಯ**—೧೭ನೆ ಶತಮಾನದ ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ಜಯಶೃಂಗ**—ಹಿಂದಿನ ಕಾಲದಲ್ಲಿ ಯುದ್ಧದಲ್ಲಿ ಗೆದ್ದ ಸೈನ್ಯವು ತನ್ನ ವಿಜಯವನ್ನು ಪ್ರಕಟಿಸಲು ಜಯಶೃಂಗ ಎಂಬ ಕೊಂಬನ್ನು ಯುದ್ಧ ಭೂಮಿಯಲ್ಲಿ ಊದುವ ಪದ್ಧತಿ ಇದ್ದಿತು.

**ಜಯಶುಕ**—ಈ ರಾಗವು ೭೧ನೆ ಮೇಳಕರ್ತ ಕೋಸಲದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ಗ ಮ ರಿ ಸ

**ಜಯಶುದ್ಧಮಾಳವಿ**—ಅಸಂಪೂರ್ಣ ಮೇಳಪದ್ಧತಿಯಲ್ಲಿ ಕಟಪಯಾದಿ ಸಂಜ್ಞಾಸೂಚಕ ಪದಗಳಿರುವ ಮೇಳಗಳಲ್ಲಿ ೧೮ನೆ ಮೇಳದ ಹೆಸರು.

**ಜಯಂತಸೇನ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ಗ ಸ

ಉಪಾಂಗರಾಗ. ಷಡ್ಜವು ಗ್ರಹಾಂಶನ್ಯಾಸ. ಗಾಂಧಾರ, ಧೈವತಗಳು ರಾಗ ಛಾಯಾ ಸ್ವರಗಳು. ಸಾರ್ವಕಾಲಿಕ ರಾಗ. ತಂಜಾವೂರಿನ ದೊರೆ ರಘುನಾಥನಾಯಕನು ಈ ರಾಗವನ್ನು ಸೃಷ್ಟಿಸಿದನೆಂದು ಪ್ರತೀತಿ. ಶ್ರೀ ತ್ಯಾಗರಾಜರ ವಿನತಾ ಸುತವಾಹನ ಶ್ರೀ ಎಂಬುದು ಈ ರಾಗದ ಪ್ರಸಿದ್ಧ ಕೃತಿ.

**ಜಯಂತಶ್ರೀ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಪ ಮ ಗ ಸ

ಉಪಾಂಗರಾಗ. ಗಾಂಧಾರ ಮತ್ತು ಧೈವತಗಳು ವಾದಿಸಂವಾದಿಗಳು ಮತ್ತು ರಾಗಛಾಯಾಸ್ವರಗಳು. ಶಾಂತರಸ ಪ್ರಧಾನ ರಾಗ. ಸಾರ್ವಕಾಲಿಕ ರಾಗ. ಶ್ರೀ ತ್ಯಾಗ ರಾಜರ ಮರುಗೇಲರಾ, ಗರ್ಭಪುರಿಯವರ ನಿನ್ನುನಮ್ಮಿತಿ ವಿನುತ ಪಾಲಿನಿ ಎಂಬ ರಚನೆಗಳು ಈ ರಾಗದ ಪ್ರಸಿದ್ಧ ಕೃತಿಗಳು.

**ಜಯಂತಿ** —ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಕಾಮೋದರಾಗದ ರಾಗಿಣಿಗಳ ಒಂದು ದಾಸಿರಾಗ.

**ಜಯಾನಂದ**—೧೭ನೆ ಶತಮಾನದ ಭರತ ನಾಟ್ಟಿಯ ಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗದ ಹೆಸರು.

**ಜಯಾಭರಣ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ನಿ ಪ ಮ ರಿ ಗ ಮ ರಿ ಸ

**ಜಯಾಭರಣಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ಗ ಮ ಪ ಮ ರಿ ಗ ಮ ಪ ಸ

ಅ: ಸ ನಿ ದ ಪ ಮ ರಿ ಸ

**ಜಯವೇಳಾವಳಿ**—ಈ ರಾಗವು ೪೩ನೆ ಮೇಳಕರ್ತ ಗವಾಂಭೋದಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಜರಶೇಖರ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ನಿ ದ ಮ ಗ ರಿ ಮ ಗ ಸ

**ಜಲತರಂಗ**—ಇದೊಂದು ಪುರಾತನ ವಾದ್ಯ. ಇದರ ವಾದನವು ೬೪ ಕಲೆಗಳಲ್ಲಿ ಒಂದೆಂದು ವಾತ್ಸ್ಯಾಯನನ ಕಾಮಸೂತ್ರದಲ್ಲಿ ಹೇಳಿದೆ. ಇದರ ಪ್ರಾಚೀನ ನಾಮವು ಉದಕವಾದ್ಯ. ಮ್ಯಾಸಿಡೋನಿಯಾದ ಅಲೆಗ್ಸಾಂಡರ್ ಮಹಾಶಯನು ಭಾರತದಿಂದ ಗ್ರೀಸ್ ದೇಶಕ್ಕೆ ಹಿಂತಿರುಗುವಾಗ ಭಾರತೀಯ ಸಂಗೀತಗಾರರ ತಂಡವೊಂದನ್ನು ಕರೆದುಕೊಂಡು ಹೋದನು. ಅವರಲ್ಲಿ ಒಬ್ಬನು ಉದಕವಾದ್ಯವನ್ನು ನುಡಿಸಿ ಎಲ್ಲರ ಪ್ರಶಂಸೆಗೆ ಒಳಗಾದನು. ಪ್ರಾರಂಭದಲ್ಲಿ ಲೋಹದ ಬಟ್ಟಲುಗಳನ್ನು ಉಪಯೋಗಿಸುತ್ತಿದ್ದರು. ೧೧ನೆ ಶತಮಾನದಲ್ಲಿ ಒಳ್ಳೆಯ ನಾದ ಕೊಡುವ ಪಿಂಗಾಣಿ ಬಟ್ಟಲುಗಳನ್ನು ತಯಾರಿಸಿದರು. ಇವುಗಳ ಉಪಯೋಗವು ಕಾಲಾಂತರದಲ್ಲಿ ಬಳಕೆಗೆ ಬಂದಿತು. ಜಲತರಂಗವೆಂದರೆ ಜಲದ ಅಲೆಗಳೆಂದರ್ಥ. ಸಂಗೀತ ನುಡಿಯುವ ತಾಡನ ವಾದ್ಯಗಳಲ್ಲಿ ಇದು ಮೊದಲ ಸ್ಥಾನವನ್ನು ಗಳಿಸಿದೆ. ಪಿಟೀಲು ಮತ್ತು ಮೃದಂಗ ಪಕ್ಕವಾದ್ಯದೊಡನೆ ಈ ವಾದ್ಯದ ಕಚೇರಿಯನ್ನು ಮಾಡುತ್ತಾರೆ.

ಜಲತರಂಗ್ ವಾದಕನ ಮುಂದೆ, ಅರ್ಧ ವರ್ತುಲಾಕಾರದಲ್ಲಿ ಎಡದಿಂದ ಬಲಕ್ಕೆ ತಗ್ಗುಸ್ಥಾಯಿಯಿಂದ ಹೆಚ್ಚು ಸ್ಥಾಯಿಯ ಸ್ವರಗಳವರೆಗೆ, ಏರಿಕೆಯ ಕ್ರಮದಲ್ಲಿ ಸುಸ್ವರಗಳನ್ನು ಕೊಡುವ ಪಿಂಗಾಣಿ ಬಟ್ಟಲುಗಳಿರುತ್ತವೆ. ಸ್ಥಾಯಿಗಳಲ್ಲಿ ಬರುವ ಸ್ವರಸ್ಥಾನಗಳ ಶುದ್ಧಿಗೆ ತಕ್ಕಂತೆ ಬಟ್ಟಲುಗಳಿಗೆ ನೀರನ್ನು ಹಾಕುತ್ತಾನೆ. ಮಂದ್ರ ಸ್ಥಾಯಿ ಸ್ವರಗಳನ್ನು ನುಡಿಯುವ ಬಟ್ಟಲುಗಳು ಗಾತ್ರದಲ್ಲಿ ದೊಡ್ಡದಾಗಿವೆ. ತಾರಸ್ಥಾಯಿಯ ಕಡೆಗೆ ಹೋಗುತ್ತ ಇವು ಚಿಕ್ಕದಾಗಿರುತ್ತವೆ ಎರಡು ಕೈಗಳಲ್ಲಿ ಕಡ್ಡಿಗಳನ್ನು ಹಿಡಿದು ಬಟ್ಟಲುಗಳನ್ನು ತಾಡನ ಮಾಡಿ ನುಡಿಸುತ್ತಾರೆ ಬಟ್ಟಲುಗಳನ್ನು ಮೆದುವಾಗಿರುವ ರತ್ನಗಂಬಳಿ ಅಥವಾ ಮರಳಿನ ಮೇಲೆ ರತ್ನಗಂಬಳಿ ಹಾಸಿ ಬಟ್ಟಲುಗಳನ್ನಿಟ್ಟು ನುಡಿಸುವುದುಂಟು. ಕಚೇರಿಗೆ ನುಡಿಸುವ ಮುನ್ನ ಬಟ್ಟಲುಗಳನ್ನು ಸಿದ್ಧಪಡಿಸಿಕೊಳ್ಳಲು ಬಹು ಸಮಯ ಬೇಕು. ವಾದಕನಿಗೆ ಇದಕ್ಕಾಗಿ ಅಪಾರ ಸ್ವರಜ್ಞಾನವಿರಬೇಕು. ಶ್ರುತಿಮಾಡಿಕೊಂಡ ನಂತರ ನುಡಿಸಬೇಕಾಗಿರುವ ರಾಗ ಮತ್ತು ಕೃತಿಗೆ ತಕ್ಕ ಆಯಾ ಸ್ವರಗಳನ್ನು ಕೊಡುವ ಬಟ್ಟಲುಗಳನ್ನು ಮಂದ್ರ ಮಧ್ಯಮದಿಂದ ತಾರಪಂಚಮದವರೆಗೆ ಮುಂದಿನ ಸಾಲಿನಲ್ಲಿಟ್ಟು ಸಣ್ಣ ಬಿದಿರುಕಡ್ಡಿಗಳಿಂದ ತಾಡಿಸಿ ನುಡಿಸುತ್ತಾರೆ. ಸಂಪೂರ್ಣ ರಾಗವನ್ನು ನುಡಿಸುವಾಗ ಮೊದಲ ಸಾಲಿನಲ್ಲಿ ಹದಿನಾರು ಬಟ್ಟಲುಗಳಿರುತ್ತವೆ. ನೀರನ್ನು ಹೆಚ್ಚಿಸುವುದು ಅಥವಾ ಕಡಿಮೆ ಮಾಡಿಕೊಳ್ಳುವುದರ ಮೂಲಕ ಸ್ವರಸ್ಥಾನಗಳನ್ನು ಶುದ್ಧವಾಗಿ ಅನುಗೊಳಿಸಿಕೊಳ್ಳಲಾಗುವುದು ಬಟ್ಟಲಿನ ಅಂಚು ಮತ್ತು ಒಳಗಿನ ನೀರಿಗೂ ತಾಗುವಂತೆ ಕಡ್ಡಿಯಿಂದ ತಾಡನ ಮಾಡಿದಾಗ ಸ್ವರವು ದೀರ್ಘವಾಗಿ ಕಂಪಿಸಿ ಹೆಚ್ಚು ಕಾಲ ಕೇಳಿಬರುತ್ತದೆ. ಕಂಪಿತ ಗಮಕವನ್ನು ನುಡಿಸುವಾಗ ವಾದಕನು ಬಲಗೈಯ ಕಡ್ಡಿಯಿಂದ ಬಟ್ಟಲ ಅಂಚನ್ನು ತಾಡಿಸಿ, ಎಡಗೈಯಲ್ಲಿ ಹಿಡಿದ ಒಂದು ಮರದ ತುಂಡಿನಿಂದ ನೀರನ್ನು ಮೆಲ್ಲನೆ ಕಲಕುತ್ತಾನೆ ಆಗ ಸ್ವರವು ಬಹಳ ಇಂಪಾಗಿ ಕೇಳಿಬರುತ್ತದೆ ಆಲಾಪನೆಯಲ್ಲಿ ಮಾತ್ರ ಈ ರೀತಿಯ ಕಂಪನವನ್ನು ಕೊಡಲು ಸಾಧ್ಯ. ಅವರೋಹಣ ಕ್ರಮದಲ್ಲಿ ನುಡಿಯುವ ಸ್ವರಗಳನ್ನು ಎಡಗೈಯ ಕಡ್ಡಿಯಿಂದ ಬಲದಿಂದ ಎಡಕ್ಕೆ ಬಟ್ಟಲುಗಳನ್ನು ತಾಡಿಸಿ, ಆರೋಹಣ ಕ್ರಮದಲ್ಲಿ ನುಡಿಯಬೇಕಾದ ಸ್ವರಗಳನ್ನು ಎಡದಿಂದ ಬಲಕ್ಕೆ ತಾಡಿಸುತ್ತ ನುಡಿಸುತ್ತಾರೆ. ಈ ವಾದ್ಯದಲ್ಲಿ ಆಲಾಪನೆಯು ತನ್ನದೇ ಆದ ಮಿತಿಯನ್ನು ಹೊಂದಿದೆ. ವಿಳಂಬ ಕಾಲದ ಕೃತಿಗಳಿಗಿಂತ ಮಧ್ಯಮ ಕಾಲದ ಕೃತಿಗಳು ಇದರಲ್ಲಿ ಬಹಳ ಸೊಗಸಾಗಿ ಇರುತ್ತವೆ.

ಮೈಸೂರಿನ ವೀಣೆ ಶೇಷಣ್ಣ, ಜಲತರಂಗ್ ಸುಬ್ಬಯ್ಯರ್, ಜಲತರಂಗಂ ರಾಮರಾವ್ ರಮಣಯ್ಯ ಚೆಟ್ಟಿಯಾರ್ ಮುಂತಾದವರು ಬಹುಪ್ರಸಿದ್ಧರಾದ ಜಲತರಂಗ್ ವಾದಕರಾಗಿದ್ದರು. ಮೈಸೂರಿನ ಬಿ ದೇವೇಂದ್ರಪ್ಪ, ಮಧುರೈ ಶ್ರೀನಿವಾಸ ಅಯ್ಯಂಗಾರ್ ಈ ವಾದ್ಯದಲ್ಲಿ ಪ್ರವೀಣರಾಗಿದ್ದಾರೆ.

**ಜಲತರಂಗ್ ಆನಯಾಂಪಟ್ಟಿ ಸುಬ್ಬಯ್ಯರ್**—ಸುಬ್ಬಯ್ಯರ್ ತಮಿಳು ನಾಡಿನ ಸೇಲಂ ಜಿಲ್ಲೆಯವರು. ಇವರು ೧೮೮೧ರಲ್ಲಿ ಜನಿಸಿದರು. ರಾಮನಾಡಿನ ಆಸ್ಥಾನ ವಿದ್ವಾಂಸರೂ, ವಾಗ್ಗೇಯಕಾರರೂ ಆಗಿದ್ದ ಕುನ್ನಕ್ಕುಡಿ ಕೃಷ್ಣಯ್ಯರ್ ರವರ ಶಿಷ್ಯರಾಗಿ ಸಂಗೀತವನ್ನು ಕಲಿತರು. ವೀಣೆ ಶೇಷಣ್ಣನವರಲ್ಲಿ ಜಲತರಂಗ್ ವಾದನವನ್ನು ಕಲಿತರು. ತಮ್ಮ ೨೧ನೆ ವಯಸ್ಸಿನಿಂದ ಕಚೇರಿಗಳಲ್ಲಿ ನುಡಿಸಲು ತೊಡಗಿದರು. ಮೈಸೂರು ಆಸ್ಥಾನದ ಮತ್ತು ಕಾಮಕೋಟಿ ಪೀಠದ ಗೌರವಗಳಿಗೆ ಪಾತ್ರರಾಗಿದ್ದು ಜಲತರಂಗವಾದನದ ಪ್ರಮುಖ ವಿದ್ವಾಂಸರಾಗಿದ್ದರು.

**ಜಲಜನಾಭ**—ಸ್ವಾತಿ ತಿರುನಾಳ್ ಮಹಾರಾಜರು ತಮ್ಮ ಕೃತಿಗಳಲ್ಲಿ ಬಳಸಿರುವ ಒಂದು ಪರ್ಯಾಯ ಮುದ್ರೆ.

**ಜಲಜಮುಖಿ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ದ ನಿ ಪ ಮ ರಿ ಗ ಸ

**ಜಲಜವಾಸಿನಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ರಿ ಸ

**ಜಲಾರ್ಣವ**—ಈ ರಾಗವು ೩೮ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ರಾಗಾಂಗರಾಗ. ಷಡ್ಜ, ಶುದ್ಧರಿಷಭ, ಶುದ್ಧಗಾಂಧಾರ, ಪ್ರತಿ ಮಧ್ಯಮ, ಶುದ್ಧ ಧೈವತ ಮತ್ತು ಕೈಶಿಕಿ ನಿಷಾದಗಳು ಈ ರಾಗದ ಸ್ವರಸ್ಥಾನಗಳು. ಷಡ್ಜವು ಗ್ರಹಾಂಶ ನ್ಯಾಸಸ್ವರ. ಕೈಶಿಕ ನಿಷಾದವು ಜೀವ ಮತ್ತು ನ್ಯಾಸಸ್ವರ. ಸಾರ್ವಕಾಲಿಕ ಮತ್ತು ಕರುಣರಸ ಪ್ರಧಾನ ರಾಗ.

**ಜಲಿಕ್ಯೋಮೋನಿಯಂ**—ಮದ್ರಾಸಿನ ಗಿಂಡಿಯ ಎಂಜಿನಿಯರಿಂಗ್ ಕಾಲೇಜಿನ ಪಪ್ಪು ಸುಬ್ಬರಾವ್ ಎಂಬುವರು ಈ ವಾದ್ಯವನ್ನು ರೂಪಿಸಿದರು. ಇದು ಜಲತರಂಗ್ ಮತ್ತು ಹಾರ್ಮೋನಿಯಂ ವಾದ್ಯಗಳನ್ನು ಮೇಳೈಸಿ ಮಾಡಿರುವ ವಾದ್ಯ. ಇದರಲ್ಲಿ ಹಾರ್ಮೋನಿಯಂ ವಾದ್ಯದ ಕೀಗಳನ್ನು ಜಲತರಂಗಿನ ಬಟ್ಟಲುಗಳಿಗೆ ಜೋಡಿಸಲಾಗಿದೆ. ಹಾರ್ಮೋನಿಯಂ ನುಡಿಸುವಾಗ ಆಯಾ ಬಟ್ಟಲುಗಳು ವಿದ್ಯುತ್ ಯಾಂತ್ರಿಕ ಏರ್ಪಾಡಿನಿಂದ ತಾಡನವಾಗುತ್ತವೆ. ತಾಡನ ಮಾಡುವ ಪಾಶ್ಚಾತ್ಯ ವಾದ್ಯಗಳಲ್ಲಿರುವ ಏರ್ಪಾಡಿಗೆ ಇದನ್ನು ಹೋಲಿಸಬಹುದು. ವಾದಕನು ಒಂದು ವಾದ್ಯವನ್ನು ನುಡಿಸಿದರೂ ಎರಡು ವಾದ್ಯಗಳ ನುಡಿಕಾರವು ಇಂಪಾಗಿ ಕೇಳಿಬರುತ್ತದೆ.

ಜಲತರಂಗ್ ಮಾತ್ರ ಕೇಳಿಬರುವಂತೆ ಮಾಡಿಕೊಳ್ಳುವ ಏರ್ಪಾಡನ್ನು ಅಳವಡಿಸ ಲಾಗಿದೆ.

**ಜಲೋದ್ಧತಿ**—ಈ ರಾಗವು ೨೯ನೆ ಮೇಳಕರ್ತ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ̇

ಅ: ಸ̇ ನಿ ದ ನಿ ಪ ಗ ಮ ಗ ರಿ ಸ

**ಜಲೋಧರ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ನಿ ಪ ಗ ಮ ಗ ರಿ ಸ

**ಜವನಿಕ**—ಈ ರಾಗವು ೧೮ನೆ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

**ಜವೋನ್ನತಿ**—ಈ ರಾಗವು ೨೯ನೆ ಮೇಳಕರ್ತ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಪ ಸ̇

ಅ: ಸ̇ ನಿ ಪ ದ ಪ ಮ ಗ ರಿ ಸ

**ಜಾಜಿವಸಂತ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ರಿ ಗ ಸ

**ಜಾಝ್**—ಅಮೆರಿಕ ಸಂಯುಕ್ತ ಸಂಸ್ಥಾನದ ದಕ್ಷಿಣ ರಾಜ್ಯಗಳಲ್ಲಿ ಬೆಳೆಸಲ್ಪಟ್ಟ ಒಂದು ಜನಪ್ರಿಯ ಸಂಗೀತಕ್ಕೆ ಜಾಝ್ ಎಂದು ಹೆಸರು. ಇದು ೧೯ನೆ ಶತಮಾನದ ಕೊನೆಯಲ್ಲಿ ಪ್ರಚಲಿತವಾಯಿತು. ಇದು ಆಫ್ರಿಕದ ಮದ್ದಳೆ ತಾಳಗಳ ಆಧಾರಿತ ವಾಗಿದೆ.

**ಜಾಝ್ ಬ್ಯಾಂಡ್**—ಇದು ಜಾಝ್ ವಾದ್ಯಗೋಷ್ಠಿಯ ಸಂಗೀತ. ಇದರಲ್ಲಿ ಸ್ಯಾಕ್ಸೋಫೋನ್ ಮತ್ತು ಸ್ಲೈಡ್ ಟ್ರೊಂಬೋನ್ ಎಂಬ ವಾದ್ಯಗಳನ್ನು ಹೆಚ್ಚಾಗಿ ನುಡಿಸುತ್ತಾರೆ. ಬಾಲ್‌ರೂಮ್ ನೃತ್ಯಗಳು ಮತ್ತು ಚಲನ ಚಿತ್ರಗಳಲ್ಲಿ ಈ ವಾದ್ಯಗೋಷ್ಠಿಯನ್ನು ಹೆಚ್ಚಾಗಿ ಬಳಸುತ್ತಾರೆ.

**ಜಾತಿ**—(೧) ಶ್ರುತಿಯ ಗುಣವಿಶೇಷಕ್ಕೆ ಜಾತಿ ಎಂದು ಹೆಸರು. ೨೨ ಶ್ರುತಿಗಳಿಗೆ ೫ ಜಾತಿಗಳನ್ನು ಹೇಳಿದೆ. ಅವು ಯಾವುವೆಂದರೆ ದೀಪ್ತ, ಆಯತ, ಕರುಣ, ಮೃದು ಮತ್ತು ಮಧ್ಯ. ಇವು ಶ್ರುತಿಗಳ ಭಾವಗಳನ್ನು ಸೂಚಿಸುತ್ತವೆ.

(೨) ಜಾತಿ ಎಂದರೆ ತಾಳದ ದಶಾಂಗಗಳಲ್ಲಿ ಒಂದು ಅಂಗ ಇದು ಚತುರಶ್ರಜಾತಿ ಲಘು, ತಿಶ್ರಜಾತಿಲಘು, ಮಿಶ್ರಜಾತಿಲಘು, ಖಂಡಜಾತಿ ಲಘು ಮತ್ತು ಸಂಕೀರ್ಣ ಜಾತಿ ಎಂಬ ಐದು ಬಗೆಯ ಲಘುಗಳಿಗೆ ಅನ್ವಯಿಸುತ್ತದೆ.

(೩) ಪುರಾತನ ಕಾಲದಲ್ಲಿ ಜಾತಿ ಎಂದರೆ ರಾಗವೆಂದರ್ಥವಿತ್ತು. ರಾಮಾಯಣದಲ್ಲಿ ಇದು ಉಕ್ತವಾಗಿದೆ ಗ್ರಹ, ಅಂಶ, ತಾರ, ಮಂದ್ರ, ನ್ಯಾಸ, ಅಪನ್ಯಾಸ, ಅಲ್ಪತ್ವ, ಬಹುತ್ವ, ಷಾಡವ ಮತ್ತು ಔಡವ ಎಂಬ ಜಾತಿಯ ಹತ್ತು ಲಕ್ಷಣಗಳನ್ನು ಒಳಗೊಂಡಿದೆ. ಈಗ ರಾಗವನ್ನು ಈ ಲಕ್ಷಣಗಳಿಗನುಸಾರವಾಗಿ ವಿಮರ್ಶೆ ಮಾಡುವಷ್ಟು ಶಾಸ್ತ್ರಜ್ಞಾನವು ಬೆಳೆದಿದೆ. ಪುರಾತನ ಸಂಗೀತ ಪದ್ಧತಿಯಲ್ಲಿ ಏಳು ಶುದ್ಧಜಾತಿಗಳನ್ನು ಹೇಳಿದೆ :— ಷಾಡ್ಜಿ, ನೈಷದಿ, ಧೈವತಿ, ಆರ್ಷೋಭಿ–ಇವು ಷಡ್ಜಗ್ರಾಮಕ್ಕೆ ಸೇರಿವೆ. ಗಾಂಧಾರಿ, ಮಧ್ಯಮ ಮತ್ತು ಪಂಚಮವು ಮಧ್ಯಮ ಗ್ರಾಮಕ್ಕೆ ಸೇರಿವೆ.

**ಜಾತಿಸ್ವರ ಸಾಹಿತ್ಯಗಳು**—ತಮಿಳುನಾಡು ಸರ್ಕಾರದ ಪ್ರಾಚ್ಯಹಸ್ತ ಪ್ರತಿಗಳ ಭಂಡಾರದಲ್ಲಿ ಡಿ. ನಂ. ೨೫೩೭ನೆ ತೆಲುಗು ಹಸ್ತಪ್ರತಿಯಲ್ಲಿ ಪ್ರಸಿದ್ಧ ವಾಗ್ಗೇಯ ಕಾರರಾದ ಮುತ್ತುಸ್ವಾಮಿ ದೀಕ್ಷಿತರು ಕೆಲವು ಜನಪ್ರಿಯವಾದ ಪಾಶ್ಚಾತ್ಯರಾಗ ಗಳಿಗೆ ರಚಿಸಿರುವ ಸಂಸ್ಕೃತ ಸಾಹಿತ್ಯವನ್ನು ಕೊಟ್ಟಿದೆ. ಇವುಗಳಲ್ಲಿ ಅವರ ಗುರುಗುಹ ಎಂಬ ಅಂಕಿತವಿದೆ ಯಾವ ಯಾವ ಇಂಗ್ಲಿಷ್ ಮತ್ತು ಫ್ರೆಂಚ್ ಹಾಡುಗಳಿಗೆ ಸಂಸ್ಕೃತ ಪದಗಳನ್ನು ನೀಡಿದರೋ ಆ ಹಾಡುಗಳ ಹೆಸರನ್ನು ಕೊಡಲಾಗಿದೆ. ಆ ಹಾಡುಗಳಲ್ಲಿ ಕೆಲವು, ಪಾಶ್ಚಾತ್ಯ ಮತ್ತು ಭಾರತೀಯ ಸ್ವರಲಿಪಿ ಸಹಿತ ಇರುವುದರಿಂದ ಅವುಗಳ ಸಂಸ್ಕೃತ ಸಾಹಿತ್ಯವನ್ನು ಹಾಡುವುದು ಸುಲಭ. ಈ ಸಾಹಿತ್ಯವನ್ನು ದೀಕ್ಷಿತರು ೧೮೩೩ಕ್ಕೂ ಹಿಂದೆಯೇ ರಚಿಸಿದರು ಈ ಹಸ್ತಪ್ರತಿಯನ್ನು ಬಹು ಸುಂದರವಾಗಿ ಬರೆದವರು ವಾಲಾಜಪೇಟೆ ವೆಂಕಟರಮಣ ಭಾಗವತರ ಮನೆತನಕ್ಕೆ ಸೇರಿದ ಸಪ್ಪಯ್ಯ ಮತ್ತು ಶೇಷಯ್ಯ ಎಂಬುವರು. ಜಾತಿ ಸ್ವರ ಸಾಹಿತ್ಯವಲ್ಲದೆ ಈ ಹಸ್ತಪ್ರತಿಯಲ್ಲಿ ಕೆಲವು ರಚನೆಗಳಿವೆ. ಅವು :— ಜಾನಕಿರಾಘವಮು, ಆದಿಲಕ್ಷ್ಮಿವಿಲಾಸಮು, ಆನಂದ ಸುಂದರಿ ಚಾತುರ್ಯಲೀಲಾ ವಿಲಾಸಮು, ಸದಾನಂದಯೋಗಿ ಶತಕಮು, ಕಾಳಹಸ್ತಿ ಶತಕಮು, ಮತ್ತು ಶಿವಮುಕುಂದ ಶತಕಮು. ಈ ಹಸ್ತಪ್ರತಿಯಲ್ಲಿ ಹೆಸರಿಸಿರುವ ಬ್ರೌನ್ ಎಂಬ ಆಂಗ್ಲವಿದ್ವಾಂಸನು ತೆಲುಗು ನಿಘಂಟಿನ ಪ್ರಸಿದ್ಧ ಕರ್ತೃ.

ದೀಕ್ಷಿತರು ತಮ್ಮ ಕಿರಿಯ ಸೋದರ ಬಾಲುಸ್ವಾಮಿ ದೀಕ್ಷಿತರಿಂದ ಪಾಶ್ಚಾತ್ಯ ಸಂಗೀತದ ಪರಿಚಯವನ್ನು ಪಡೆದರು. ಬಾಲು ಸ್ವಾಮಿಯು ಮದ್ರಾಸಿನ ಸೇಂಟ್ ಜಾರ್ಜ್ ಕೋಟೆಯ ಬ್ಯಾಂಡ್ ಮಾಸ್ಟರನಿಂದ ಪಾಶ್ಚಾತ್ಯ ರೀತಿಯ ಪಿಟೀಲು ವಾದನವನ್ನು ಕಲಿತು ಅದನ್ನು ಕರ್ಣಾಟಕ ಸಂಗೀತಕ್ಕೆ ಪಕ್ಕವಾದ್ಯವನ್ನಾಗಿ ನುಡಿಸಲು ಅಳವಡಿಸಿಕೊಂಡು, ಈ ವಾದ್ಯದ ಉಪಯೋಗ ಮತ್ತು ಸಾಧ್ಯತೆಯನ್ನು ಪ್ರಪ್ರಥಮವಾಗಿ ತೋರಿಸಿಕೊಟ್ಟರು.

ಈ ಹಸ್ತ ಪ್ರತಿಯಲ್ಲಿರುವ ಲಘುರಚನೆಗಳು ಆ ಕಾಲದಲ್ಲಿ ಪ್ರಚಲಿತವಾಗಿದ್ದುವು. ಇವನ್ನು ಸಂಗೀತಾಭ್ಯಾಸಿಗಳಿಗೆ ಹೇಳಿ ಕೊಡುತ್ತಿದ್ದರು. ಇದರಲ್ಲಿರುವ ಸಂಸ್ಕೃತ ಮತ್ತು ತೆಲುಗು ಸಾಹಿತ್ಯಗಳು ಮತ್ತು ಅವಕ್ಕೆ ಸಂಬಂಧಿಸಿದ ಪಾಶ್ಚಾತ್ಯ ಗೀತಗಳು ಈ ರೀತಿ ಇವೆ—

(೧) ರಾಮಚಂದ್ರಂ ರಾಜೀವಾಕ್ಷ—" Here is a health to all good lasses ", " Let us lead a life of pleasure ".

(೨) ಪೀತವರ್ಣಂ ಭಜೇ ಭೈರವಂ—Taza-ba-Taza

(೩) ಸಕಲಸುರವಿನುತಂ ಶಂಭೋಸ್ವಾಮಿನ್—Quick March

(೪) ಕಾಂಚೀಶಮೇಕಾಮ್ರಂ—Country dance : Songs

(೫) ಸುಬ್ರಹ್ಮಣ್ಯಂ ಸುರಸೇವ್ಯ—British Grenadiers.

(೬) ಶಕ್ತಿ ಸಹಿತ ಗಣಪತಿಂ—Vouloz vous daufer : very good song.

(೭) ವರಶಿವಬಾಲಂ—Castilian Maid.

(೮) ಕಮಲಾಸನವಂದಿತ ಪಾದಾಬ್ಜೆ

(೯) ಸಂತಾನ ಸೌಭಾಗ್ಯ ಲಕ್ಷ್ಮಿಕಳತ್ರಂ.

(೧೦) ಚೈತನ್ಯ ಚಿಂತ ಶ್ರೀ.

(೧೧) ಶೌರಿವಿಧಿನುತೆ—O whistle and I will come to you my lad

(೧೨) ಜಗದೀಶ ಗುರುಗುಹ ಹರಿವಿಧಿ ವಿನುತಂ—Lord Macdonald's Reel,

(೧೩) ವರಮಂಗಳತನು (ತೆಲುಗು)—Marl Brook

(೧೪) ಶ್ರೀರಂಗ ಹರಿಕೃಪಮಯ—Mev Rowe.

(೧೫) ರಾಜ ಶ್ರೀ ವೆಂಕಟರಾಯ ಭೂಪಾಲುನಿ—March.

(೧೬) ಏನುಗನು ಪಟ್ಟು ಕೊಚಿ

(೧೭) ಎದ್ದನು ಪಟ್ಟೆ ಗೊಟ್ಟೆ.

(೧೮) ವಾಸವಸನ್ನುತ ವಾರಿದಗಾತ್ರ.

(೧೯) ಚಕ್ಕನಿಗುರ್ರ.

(೨೦) ರಾರಾಸಾಮಿ.

ಸುಬ್ಬರಾಮ ದೀಕ್ಷಿತರ ಸಂಗೀತ ಸಂಪ್ರದಾಯ ಪ್ರದರ್ಶಿನಿ ಎಂಬ ಗ್ರಂಥದಲ್ಲಿ ನೋಟು ಸ್ವರಮುಲು ಎಂಬ ಹೆಸರಿನಲ್ಲಿ ಈ ಬಗೆಯ ೩೩ ಹಾಡುಗಳನ್ನು ಕೊಟ್ಟಿದ್ದಾರೆ. ಅವು ಕೇಳಲು ಚೆನ್ನಾಗಿವೆ ಮತ್ತು ಗಾಯನಾಭ್ಯಾಸಿಗಳಿಗೆ ಬಹು ಉಪಯುಕ್ತವಾದುದು ಎಂದು ಹೇಳಿದ್ದಾರೆ. ಅವರು ಪಾಶ್ಚಾತ್ಯ ಹಾಡುಗಳನ್ನು ಸೂಚಿಸಿಲ್ಲ.

(೧) ಶಕ್ತಿ ಸಹಿತ ಗಣಪತಿಂ (೨) ಗುರುಗುಹ ಪಂಕಜಮತಿ (೩) ಗುರುಗುಹ ಸರಸಿಜ (೪) ವರಶಿವಬಾಲಂ (೫) ಮುಚುಕುಂದವರದ (೬) ಸೋಮಸ್ಕಂದಂ (೭) ಪಾರ್ವತೀಪತೇ ಸದಾ. (೮) ಚಿಂತಯೇ ಹಂಸದಾ (೯) ಪೀತವರ್ಣಂಭಜೇ (೧೦) ಕಾಂಚೀಶಮೇಕಾಮ್ರಂ (೧೧) ಸಕಲಸುರವಿನುತ (೧೨) ಶ್ರೀ ಶಂಕರ ದೇವ (೧೩) ಸಂತತಂಪಾಹಿಮಾಂ—ಇದನ್ನು ಇಂಗ್ಲೆಂಡಿನ ರಾಷ್ಟ್ರಗೀತೆಯ (God Save the King) ರಾಗಕ್ಕೆ ಅಳವಡಿಸಲಾಗಿದೆ

(೧೪) ಶ್ಯಾಮಲೇ ಮೀನಾಕ್ಷಿ (೧೫) ಕಮಲಾಸನ ವಂದಿತಪಾದಾಬ್ಜೇ.(೧೬) ಸಾಮ ಗಾನಪ್ರಿಯೇ (೧೭) ಹೇ ಮಾಯೇ ಮಾಂಬಾಧಿತುಂಕಾಹಿ (೧೮) ವಂದೇ ಮೀನಾಕ್ಷಿ ತ್ವ ಸರಸಿಜ—ಇದರ ರಾಗವನ್ನು ಈಗಲೂ ಬ್ಯಾಂಡಿನವರು ದಕ್ಷಿಣ ಭಾರತದಲ್ಲಿ ನುಡಿಸುತ್ತಾರೆ.

(೧೯) ಸರದೇವತೆ (೨೦) ಸದಾ ಸಿವ ಜಯೇ ವಿಜಯೇ (೨೧) ಪಾಹಿದುರ್ಗೇ ಭಕ್ತಂ (೨೨) ಮಾಯೆ ಚಿತ್ಕಲೇ (೨೩) ವಾಗ್ದೇವಿ ಮಾಮವ (೨೪) ರಾಮಚಂದ್ರ ರಾಜೀವಾಕ್ಷಂ (೨೫) ರಾಮಜನಾರ್ದನ (೨೬) ದಾಶರಥೇದೀನದಯಾನಿಧೇ (೨೭) ಪಾಹಿಮಾಂ ಜಾನಕಿ (೨೮) ದೀನ ಬಂಧೋದಯಾಸಿಂಧೋ (೨೯) ಪಂಕಜ ಮುಖ ಶಂಕರಹಿತ (೩೦) ವರದರಾಜ ಪಾಹಿ ವಿಭೋ (೩೧) ಸಂತಾನ ಸೌಭಾಗ್ಯ (೩೨) ಜಗದೀಶ ಗುರುಗುಹ (೩೩) ಆಂಜನೇಯಂ ಸದಾಭಾವಯಾಮಿ.

A. M. ಚಿನ್ನಸ್ವಾಮಿ ಮುದಲಿಯಾರರ Oriental Music in European Notation ಎಂಬ ಗ್ರಂಥದಲ್ಲಿ ಮುತ್ತುಸ್ವಾಮಿ ದೀಕ್ಷಿತರ ಶಂಕರಾಭರಣ ರಾಗದಲ್ಲಿ ರಚಿತವಾಗಿರುವ ಆರು ಹಾಡುಗಳನ್ನು ಕೊಡಲಾಗಿದೆ. (೧) ಗುರುಗುಹಪದಪಂಕಜ—ರೂಪಕ (೨) ಪಾಹಿದುರ್ಗೇ ಭಕ್ತಂತೇ—ಆದಿ (೩) ಶಕ್ತಿಸಹಿತ ಗಣಪತಿಂ—ರೂಪಕ (೪) ಕಮಲಾಸನವಂದಿತ—ಆದಿ (೫) ಶ್ಯಾಮಲೇ ಮೀನಾಕ್ಷಿ—ಆದಿ (೬) ಗುರುಮೂರ್ತೇ ಬಹುಕೀರ್ತೇ—ರೂಪಕ.

T. P. ಕೋದಂಡ ರಾಮಯ್ಯರ್‌ರವರ ಭಾಗವತ ಭಜನಪದ್ಧತಿ ಎಂಬ ಭಕ್ತಿ ಗೀತಗಳ ಸಂಕಲನದಲ್ಲಿ ನೋಟ್ ಎಂಬ ಶೀರ್ಷಿಕೆಯಲ್ಲಿ ಕೆಳಗಿನ ಆರು ಹಾಡುಗಳನ್ನು ಸ್ವರಲಿಪಿ ಸಹಿತ ಕೊಡಲಾಗಿದೆ.

(೧) ರಾಮಜನಾರ್ದನ — ಆದಿ — ತಿಶ್ರಗತಿ
(೨) ವರಶಿವಬಾಲಂ — ಆದಿ —
(೩) ಶಕ್ತಿಸಹಿತ — ರೂಪಕ
(೪) ದೀನಬಂಧೋದಯಾಸಿಂಧೋ — ರೂಪಕ
(೫) ರಾಮಚಂದ್ರಂ ರಾಜೀವಾಕ್ಷಂ — ಆದಿ
(೬) ಕಮಲಾಸನವಂದಿತ — ಆದಿ

ಲಘು ಸಂಗೀತದ ದೃಷ್ಟಿಯಿಂದ ಈ ಹಾಡುಗಳು ಎಲ್ಲರಿಗೂ ಉಪಯುಕ್ತವಾದುವು.

ಶಾಸ್ತ್ರೀಯ ಸಂಗೀತದಲ್ಲಿ ದಿಗ್ದಂತಿಯೂ ಮಹಾ ವಾಗ್ಗೇಯ ಕಾರರೂ ಆಗಿದ್ದ ದೀಕ್ಷಿತರು ಈ ಲಘುಗೀತಗಳನ್ನು ರಚಿಸಿರುವುದರಿಂದ ಇವುಗಳಿಗೆ ಒಂದು ಮಹತ್ತಾದ ಸ್ಥಾನವಿದೆ. ನಮ್ಮ ದೇಶದ ಸಾಂಸ್ಕೃತಿಕ ಪರಂಪರೆಯಲ್ಲಿ ಲಘು ಸಂಗೀತವು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ ಇದು ಜಾನಪದ ಮತ್ತು ಶಾಸ್ತ್ರೀಯ ಸಂಗೀತದ ಮಧ್ಯದ ಸ್ಥಾನವನ್ನು ಪಡೆದಿದೆ. ಇದು ಸಕಲ ಜನರಂಜನೀಯವಾದುವು. ವೀಣಾ ಕುಪ್ಪಯ್ಯರ್ ವಿರಚಿತ ಬಿಲಹರಿ ರಾಗದ (ಆದಿ) ಇಂತಚೌಕ ಮತ್ತು ಸ್ವಾತಿ ತಿರುನಾಳ್ ಮಹಾರಾಜರ ಶಂಕರಾಭರಣ ರಾಗದ (ಅಟತಾಳ) ಚಲಮೇಲ ಎಂಬ ವರ್ಣದ ಕೊನೆಯ ಎತ್ತುಗಡೆ ಸ್ವರಗಳನ್ನು ಈ ಸಂಬಂಧದಲ್ಲಿ ಪರಿಶೀಲಿಸಬಹುದು.

**ಜಾನುದ್ವಯ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ನಿ ಸ̇

ಅ : ಸ̇ ದ ಪ ಮ ಗ ರಿ ಸ

**ಜಾರುವಾದ್ಯ**—ಜಾರು ಅಥವಾ ಮರಿಕ ಶೈಲಿಯಲ್ಲಿ ವಾದ್ಯವನ್ನು ನುಡಿಸುವುದು ಜಾರುವಾದ್ಯ. ಬೆರಳುಗಳಿಂದ ಸ್ವರಸ್ಥಾನಗಳನ್ನು ಮುಟ್ಟಿ ಶುದ್ಧ ಸ್ವರಗಳನ್ನು ನುಡಿಸುವ ಪಿಡಿವಾದನ ಶೈಲಿಗೆ ವಿರುದ್ಧವಾದ ಶೈಲಿಯು ಜಾರುಶೈಲಿ. ಇವೆರಡು ಶೈಲಿಗಳು ಪಿಟೀಲು ವಾದನದಲ್ಲಿ ದಕ್ಷಿಣ ಭಾರತದಲ್ಲಿ ರೂಢಿಯಲ್ಲಿವೆ.

**ಜಾಲಪ್ರಬಲ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ. ಇದು ಮಧ್ಯಮಾಂತರಾಗ.

ಆ : ಮ̣ ಪ̣ ಧ̣ ನಿ ಸ ರಿ ಗ ಮ

ಅ : ಮ ಗ ರಿ ಸ ನಿ ಧ̣ ಪ̣ ಮ

**ಜಾಲಿಬಿಂಚಿ ದೊಡ್ಡಬಸವಾರ್ಯಗವಾಯಿ** — ಜಾಲಿಬಿಂಚಿಯವರು ಸುಮಾರು ೫೪ ವರ್ಷಗಳ ಹಿಂದೆ ಬಳ್ಳಾರಿ ಜಿಲ್ಲೆಯ ಜಾಲಿಬಿಂಚಿಯಲ್ಲಿ ಜನಿಸಿದರು. ಇವರ ತಂದೆ ವೀರಭದ್ರಯ್ಯ ಕಲಾಪ್ರೇಮಿಯಾಗಿದ್ದರು. ಪ್ರಾರಂಭದಲ್ಲಿ ಮಡಿವಾಳ ಗಂಗಪ್ಪ ಮತ್ತು ಕೊರೀ ಸುಗರಪ್ಪ ಎಂಬುವರಲ್ಲಿ ಅಭ್ಯಾಸಮಾಡಿ ೧೩ನೆ ವಯಸ್ಸಿನಿಂದ ಪಂಚಾಕ್ಷರೀ ಗವಾಯಿ ಮತ್ತು ಪುಟ್ಟರಾಜ ಗವಾಯಿ ಅವರಲ್ಲಿ ೧೯೪೮ರ ವರಗೆ ಸಂಗೀತ ವಿದ್ಯಾಭ್ಯಾಸ ಮಾಡಿ ವಿದ್ವಾಂಸರಾದರು ಅನೇಕ ಪ್ರಮುಖ ಕೇಂದ್ರಗಳಲ್ಲಿ ಕಚೇರಿ ಗಾಯನಮಾಡಿ ಹೆಸರುವಾಸಿಯಾಗಿದ್ದಾರೆ. ಖ್ಯಾಲ್, ಠುಮರಿ, ದೇವರನಾಮ ಮತ್ತು ವಚನಗಳನ್ನು ಬಹಳ ಭಾವಪೂರ್ಣವಾಗಿ ಹಾಡುತ್ತಾರೆ

**ಜಾಲ್ರ**—ಇದು ಹರಿಕಥಾವಿದ್ವಾಂಸರೂ, ಭಜನಗೋಷ್ಠಿಯವರೂ ತಾಳ ನಿರ್ಣಯಕ್ಕಾಗಿ ಉಪಯೋಗಿಸುವ ವಾದ್ಯ. ಸಮ ಅಳತೆಯ ಎರಡು ಕಂಚಿನ ಬಿಲ್ಲೆಗಳೇ ಈ ವಾದ್ಯ. ಒಂದನ್ನೊಂದು ತಟ್ಟಿದಾಗ ಇವು ಇಂಪಾದನಾದವನ್ನು

ಕೊಡುತ್ತವೆ. ಇವು ಕಂಚಿನ ತಾಳದ ಬಿಲ್ಲೆಗಳು. ಎರಡು ಬಿಲ್ಲೆಗಳ ಹೊರಮೈಯ ಮಧ್ಯಭಾಗವು ಉಬ್ಬಾಗಿದ್ದು ಮಧ್ಯದಲ್ಲಿ ರಂಧ್ರವಿರುತ್ತದೆ. ಈ ರಂಧ್ರದಲ್ಲಿ ವಾದ್ಯವನ್ನು ಬೆರಳುಗಳಿಂದ ಹಿಡಿದು ನುಡಿಸಲು ಅನುಕೂಲವಾಗುವಂತೆ ದಪ್ಪನಾದ ಹತ್ತಿಯ ದಾರವನ್ನು ಗಂಟು ಹಾಕಿರುತ್ತದೆ. ಓಲಗದೊಂದಿಗೆ ಬಳಸುವ ತಾಳದ ಬಿಲ್ಲೆಗಳು ಮಧ್ಯದಲ್ಲಿ ಬಟ್ಟಲಿನಂತಿದ್ದು ಅಂಚಿನಲ್ಲಿ ಚಪ್ಪಟೆಯಾಗಿರುತ್ತದೆ. ನೃತ್ಯಗೋಷ್ಠಿಗಳಲ್ಲಿ ಜಾಲರಾ ಬಳಸುತ್ತಾರೆ. ಮೃದಂಗದೊಡನೆ ತಾಳಜತಿಗಳನ್ನು ಜಾಲ್ರಾದಲ್ಲಿ ಸೋಸಲೆ ರಾಮದಾಸರು ಅಮೋಘವಾಗಿ ನುಡಿಸುತ್ತಿದ್ದರು. ಝುಲ್ಲರಿ ದೊಡ್ಡ ಆಕಾರದ ಜಾಲರಾ. ತಮಿಳುನಾಡಿನ ತಂಜಾವೂರು ಜಿಲ್ಲೆಯ ನಾಗಪಟ್ಟಣದ ಜಾಲ್ರಾ ಗೋಪಾಲಯ್ಯರ್ ಈ ವಾದ್ಯವನ್ನು ನುಡಿಸುವುದರಲ್ಲಿ ಪ್ರವೀಣರಾಗಿದ್ದರು.

**ಜಾವಡ**—ಇದೊಂದು ದೇಶ್ಯಪದ ಮಧ್ಯಯುಗದ ಗೀತಗಳ ಎರಡನೆಯ ಭಾಗವನ್ನು ಸೂಚಿಸುತ್ತದೆ. ರಾಗಾಂಗರಾಗ ಲಕ್ಷಣ ಗೀತಗಳಲ್ಲಿ ಸೂತ್ರಖಂಡದ ಅಥವಾ ಪ್ರಥಮ ಭಾಗದ ನಂತರ ಅಂತರಿಯ ತರುವಾಯಕಂಡು ಬರುವ ವಿಭಾಗ.

**ಜಾವಡಿ**—ಕನ್ನಡದ ಪ್ರೇಮಗೀತೆ. ಇದೊಂದು ಹಾಡಿನ ಪದ್ಧತಿ ಎಂದು ಕನಕದಾಸರು ಮೋಹನ ತರಂಗಿಣಿಯಲ್ಲಿ ಹಾಡಿದ್ದಾರೆ. ಶೃಂಗಾರರಸ ಪ್ರಧಾನವಾದ ಗೀತೆ.

**ಜಾವಳಿ**—ಜಾವಳಿಯು ಕನ್ನಡದಲ್ಲಿ ಹದಿನೈದನೆಯ ಶತಮಾನದಲ್ಲಿ ಈಗಿನ ರೂಪನ್ನು ಪಡೆದು ಕೊಂಡಿತ್ತು. ಇದು ಕನ್ನಡದ ಜಾವಡಿ ಎಂಬ ಲಘುಪ್ರೇಮ ಗೀತದ ರೂಪಾಂತರ. ಇವು ಪದಗಳಂತೆಯೇ ಶೃಂಗಾರ ರಸ ಪ್ರಧಾನವಾದ, ತಿಳಿಯಾದ ಸಾಹಿತ್ಯವುಳ್ಳ ರಚನೆಗಳು. ಪದಗಳ ಸಾಹಿತ್ಯವು ದೈವಿಕ ಪ್ರೇಮದ ವಿಷಯವಾಗಿದೆ. ಜಾವಳಿಯ ಸಾಹಿತ್ಯದ ವಿಷಯವು ಐಹಿಕ. ಜಾವಳಿಯಧಾತು ರಂಜನೀಯವಾಗಿಯೂ ಮಾತು ಭಾವಪೂರ್ಣವಾಗಿರುತ್ತದೆ. ಇವು ಸಾಮಾನ್ಯವಾಗಿ ಮಧ್ಯಮ ಕಾಲದ ರಚನೆಗಳು. ರಂಜಕವಾದ ದೇಶ್ಯರಾಗಗಳಲ್ಲಿ ಮತ್ತು ಆದಿ, ರೂಪಕ ಮತ್ತು ಛಾಪುತಾಳಗಳಲ್ಲಿದ್ದೂ ಅತ್ಯಂತ ಜನಪ್ರಿಯವಾಗಿವೆ. ಇವು ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳಿಂದ ಕೂಡಿವೆ. ಕನ್ನಡ ಮತ್ತು ತೆಲುಗು ಭಾಷೆಗಳೆರಡ ರಲ್ಲೂ ಹಲವು ಜಾವಳಿಗಳಿವೆ. ಇವುಗಳನ್ನು ಹಿಂದೂಸ್ಥಾನಿ ಪದ್ಧತಿಯ ಗಜಲ್‌ಗಳಿಗೆ ಹೋಲಿಸಬಹುದು.

ರಾಗಕ್ಕೆ ವಿಶೇಷ ಮೆರುಗನ್ನು ಕೊಡಲು ಕೆಲವು ರಚನಕಾರರು ಲಕ್ಷಣಶಾಸ್ತ್ರದ ನಿಯಮಗಳನ್ನು ಮೀರಿರುವುದುಂಟು. ಬೇರೊಂದು ರಾಗದ ಛಾಯೆಯನ್ನು ನೀಡುವ ಸ್ವರಸಮೂಹವನ್ನು ಸೇರಿಸಿರುವುದುಂಟು. ಉದಾ : ಮುಖಾರಿರಾಗದ ಏಮಂದುನೇ ಮುದ್ದು ಬಾಲಾಮಣಿ ಎಂಬ ಜಾವಳಿಯ ಚರಣದಲ್ಲಿ ಹಿಂದೂಸ್ಥಾನಿ ಕಾಪಿರಾಗದ ಛಾಯೆಯನ್ನು ಕೊಡುವ ಸ್ವರಸಮೂಹವನ್ನು ಸೇರಿಸಿದೆ. ಇದೇ ರೀತಿ ಖಮಾಜ್‌ರಾಗದ ಅಪದೂರು ಕುಲೊನ್ನೈತಿನೇ ಎಂಬ ಜಾವಳಿಯಲ್ಲಿ ಚರಣದ

ಪ್ರಾರಂಭ ಭಾಗವು ಹಿಂದುಸ್ಥಾನಿ ಬೇಹಾಗ್ ರಾಗದಲ್ಲಿದೆ. ಈ ಬಗೆಯ ಸ್ವಾತಂತ್ರ್ಯಕ್ಕೆ ಜಾವಳಿಯಲ್ಲಿ ಮಾತ್ರ ಅವಕಾಶವುಂಟು.

ಪದಗಳಲ್ಲಿರುವಂತೆ ಜಾವಳಿಗಳಲ್ಲಿ ನಾಯಿಕಾ, ನಾಯಕ ಮತ್ತು ಸಖಿ ಎಂಬ ಮೂರು ಪಾತ್ರಗಳಿವೆ. ಇವು ಸಾಹಿತ್ಯದ ಭಾವವನ್ನು ಅನುಭವಿಸಲು ಯಾರು ಯಾರನ್ನು ಕುರಿತು ಸಂಬೋಧಿಸುತ್ತಾರೆ ಎಂಬುದನ್ನು ತಿಳಿಯುವುದು ಅತ್ಯವಶ್ಯಕ. ಪದಗಳಲ್ಲಿರುವ ಗಂಭೀರವಾದ ನಾಯಿಕಾ-ನಾಯಕ ಭಾವವು ಜಾವಳಿಗಳಲ್ಲಿರುವುದಿಲ್ಲ. ಕೆಲವು ಜಾವಳಿಗಳ ಸಾಹಿತ್ಯವೂ ಗ್ರಾಮ್ಯವಾಗಿದೆ. ಪಾರಿಪೋವಲೇರಾ ಎಂಬ ಬಿಲಹರಿ ರಾಗದ ಜಾವಳಿಯ ಸಾಹಿತ್ಯವು ಸ್ವರಸಾಹಿತ್ಯಾಲಂಕಾರಗಳಿಂದ ಕೂಡಿದೆ. ಜಾವಳಿಗಳಲ್ಲಿ ಚಿಟ್ಟೆಸ್ವರಗಳಿರುವುದಿಲ್ಲ ಆದರೆ ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ಯರು ರಚಿಸಿರುವ ಸುರಟಿರಾಗದ ವೇಗ ನೀವು ವಾನಿರೆಮ್ಮನವೇ ಎಂಬ ಜಾವಳಿಯಲ್ಲಿ ಚಿಟ್ಟೆಸ್ವರವನ್ನು ಅಳವಡಿಸಿದ್ದಾರೆ. ಮಣಿ ಪ್ರವಾಳ ಸಾಹಿತ್ಯವನ್ನು ಹೊಂದಿರುವ ಕೃತಿಗಳಂತೆ ಕರೂರು ಶಿವರಾಮಯ್ಯನವರು ತೆಲುಗು ಭಾಷೆಯೊಡನೆ ಆಂಗ್ಲ ಭಾಷೆಯನ್ನು ಬಳಸಿ ಜಾವಳಿಯೊಂದನ್ನು ರಚಿಸಿದ್ದಾರೆ.

ಜಾವಳಿಗಳು ಕಮಾಚ್, ಬೇಹಾಗ್, ಫರಜು, ಕಾಪಿ, ಜಂಜೂಟಿ, ಹಮೀರ್ ಕಲ್ಯಾಣಿ, ನಾರಂಗ, ಆನಂದ ಭೈರವಿ, ನಾದನಾಮಕ್ರಿಯೆ, ಹುಸೇನಿ, ಬೇಗಡೆ, ಸಿಂಧು ಭೈರವಿ. ಮಾಂಜಿ, ಸುರಟಿ, ದೇಶೀಕಾಪಿ, ಭೈರವಿ, ಕಾನಡಾ, ಮೋಹನ, ಆಹಿರಿ, ಮುಖಾರಿ, ಕೇದಾರ, ದೇಶೀತೋಡಿ, ವಸಂತ. ಯಮುನಾ ಕಲ್ಯಾಣಿ, ಆಭೇರಿ, ದರ್ಬಾರ್, ಪೂರ್ವಿ, ನೀಲಾಂಬರಿ, ಪಂತುವರಾಳಿ, ಅಠಾಣ, ಧನ್ಯಾಸಿ, ಶಹನಾ, ಷಣ್ಮುಖಪ್ರಿಯ, ಸಿಂಹೇಂದ್ರ ಮಧ್ಯಮ, ಕಾಂಭೋಜಿ, ರೇಗುಪ್ತಿ, ಶ್ರೀ, ಬಿಲಹರಿ ಇತ್ಯಾದಿ ರಾಗಗಳಲ್ಲಿವೆ ತೆಲುಗಿನಲ್ಲಿ ಧರ್ಮಪುರಿ ಸುಬ್ಬರಾಯರು ಪಟ್ಟಾಭಿರಾಮಯ್ಯ, ಸ್ವಾತಿತಿರುನಾಳ್ ಮಹಾರಾಜರು, ಚಂದ್ರಶೇಖರಶಾಸ್ತ್ರಿ, ವೆಂಕಟರಾಮಯ್ಯ, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ರಾಮನಾಡ್ ಶ್ರೀನಿವಾಸ ಅಯ್ಯಂಗಾರ್, ವಿದ್ಯಾಲ ನಾರಾಯಣಸ್ವಾಮಿ, ತಚ್ಚೂರು ಶಿಂಗ್ರಾಚಾರ್ಯ ಸಹೋದರರು ದಾಸುಶ್ರೀರಾಮುಲು, ಯಜ್ಞನಾರಾಯಣಶಾಸ್ತ್ರಿ ಮುಂತಾದುವರು ರಚಿಸಿರುವ ಜಾವಳಿಗಳು ಪ್ರಸಿದ್ಧವಾಗಿವೆ.

ಕನ್ನಡದಲ್ಲಿ ಹಲವು ಜಾವಳಿಗಳಿವೆ. ಸುಮಾರು ೧೬-೧೭ನೆ ಶತಮಾನದಲ್ಲಿ ಕನ್ನಡದಲ್ಲಿ ಜಾವಳಿಗಳ ಬಳಕೆ ಪ್ರಾರಂಭವಾಯಿತೆನ್ನಬಹುದು. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವತಃ ವಿದ್ವಾಂಸರಾಗಿದ್ದು ಸಾಹಿತ್ಯ. ಸಂಗೀತ, ನೃತ್ಯ ಕಲಾರಾಧಕರೂ ಪೋಷಕರೂ ಆಗಿದ್ದರು. ಇವರೂ ಇವರ ಅಳಿಯ ಲಿಂಗರಾಜರು ಅನೇಕ ತತ್ವ ಮತ್ತು ಶೃಂಗಾರ ಜಾವಳಿಗಳನ್ನು ರಚಿಸಿದರು. ಶ್ರೀಪಾದರಾಯರು, ವ್ಯಾಸರಾಯರು, ಪುರಂದರದಾಸರು ವಾದಿರಾಜರು ಕನ್ನಡದ ಜಾವಳಿಗಳ ಆದಿಪುರುಷರು. ಇವು ಕೃತಿಯಂತಿದ್ದರೂ ನಿರೂಪಣೆಗಳು ಬೇರೆ. ಕನ್ನಡನಾಡಿನ

ಅನೇಕ ನಾಟ್ಯ ಕಲಾವಿದೆಯರು ಕನ್ನಡದ ಜಾವಳಿಗಳನ್ನು ಹಾಡಿ ಅಭಿನಯಿಸುತ್ತಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರು, ಅಳಿಯ ಲಿಂಗರಾಜಅರಸು, ಲಿಂಗರಾಜರು, ವೆಂಕಟಾದ್ರಿಶ್ಯಾಮರಾಯರು, ಸುರಪುರದ ಆನಂದ ದಾಸರು, ನಂಜುಂಡ ಲಿಂಗಕಲಿ, ಹುಲ್ಲಹಳ್ಳಿ ರಾಮಣ್ಣ, ಮಡಕೇರಿ ಲಿಂಗರಾಜ, ಗಿರಿಭಟ್ಟರ ತಮ್ಮಯ್ಯ, ನಂಜನಗೂಡು ಶ್ರೀಕಂಠಶಾಸ್ತ್ರಿಗಳು, ವೆಂಕಟರಮಣಯ್ಯ (ಮಂಗಳಪುರಿವಾಸ) ಮುಂತಾದ ಹಲವು ಮಹನೀಯರು ಕನ್ನಡದಲ್ಲಿ ಜಾವಳಿಗಳನ್ನು ರಚಿಸಿದ್ದಾರೆ. ಇವುಗಳನ್ನು ಸಂಪಾದಿಸಿ ಬೆಂಗಳೂರಿನ ಶ್ರೀ ಕೆ. ವಿ. ಆಚಾರ್ ಬೆಂಗಳೂರು ವಿಶ್ವವಿದ್ಯಾನಿಲಯದ ವತಿಯಿಂದ ಪ್ರಕಟಿಸಿದ್ದಾರೆ ಕೆಲವು ಜಾವಳಿಗಳ ಉದಾಹರಣೆಗಳನ್ನು ನೋಡಿ :—

(೧) ಕರೆಯೋ ಆತನ ನೀನು । — ರಾಗ-ಕಾನಡ
ಕರೆಯೋ ಆತನ ನೀಗ ॥ ಪ ॥
ಕರೆಯೋ ಆತನ ನೀಗ ।
ಸರಸ ಲೀಲೆಗೆ ಬೇಗ ॥
ಹರುಷದಿ ಬರನೇಕೆ ।
ಮರೆತನೋ ಅವನೆನ್ನ ॥ ಕರೆಯೆ ॥

(೨) ರಂಗನ್ಯಾತಕೆ ಬಾರನೋ ॥ ಪ ॥ ರಾಗ-ಝಂಝೂಟಿ ಮಿ. ಛಾಪು.
ಅಂಗ ನಾಮಣಿ ॥ ॥ ಚ ॥
ರಂಗನ್ಯಾತಕ್ಕೆ ಬಾರನೋ !
ತಿಂಗಳಾಯಿತು ಪೂರ ।
ಬೆಳದಿಂಗಳು ವಿಹೀನವಾಯಿತೇ ।
ಪರಿಪರಿಯಿಂದಲಿ ।
ಪುರಂದರ ವಿಠಲನ ।
ಕರೆತಾರೇ ಬೇಗನೇ ॥

(೩) ಮಾತಾಡ ಬಾರದೇನೋ ಮಾರಮಣನೆ ॥ ಪ ॥ ಕಮಾಚ್-ಮಿ. ಛಾಪು
ಪ್ರೀತಿಗೊಲಿದ ಪ್ರಾಣಕಾಂತೆಯೊಡನೆ ಬಂದು ॥ ಅ. ಪ ॥
ಅಂಗಕ್ಕೆ ಬೆಳ್ದಿಂಗಳ್ ಬಿಸಿಲಾಗಿ ತೋರ್ಪುದು
ಭೃಂಗದ ದನಿಕೇಳಿ ಭೀತಿಯಪ್ಪುದು ಸ್ವಾಮಿ ॥ಚ.೧ ॥
ಮಂದ ಮಾರುತ ಬಂದು ಮರುಳು ಮಾಡಿತೊ ಸ್ವಾಮಿ ।
ಅಂದವುಳ್ಳ ಅಂಗಕಂದಿಕುಂದಿತೊ ಸ್ವಾಮಿ ॥ ೨ ॥
ಕಾಮಶರವುಯನ್ನ ಕಾಯಕೆತಗುಲಿತು ।
ನಾಮಗಿರಿ ನರಬರಿಯೆ ನ್ಯಾಯವೆ ಈಗ ॥ ೩ ॥

**ಜಿತ**—ಇದು ಸ್ಥಾಯಿ ಮಾದರಿಯಲ್ಲಿರುವ ಒಂದು ಪುರಾತನ ಅಲಂಕಾರ. ಇದು ಈ ರೀತಿಯಿದೆ : ಸರಿಗಸ ರಿಮಗರಿ ಗಪಮಗ ಮದಪಮ.

**ಜಿಂಗ್ಲಾ**—ಈ ರಾಗವು ೩೦ನೆ ಮೇಳಕರ್ತ ನಟಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಪ ಸ

ಅ: ಸ ನಿ ದ ಪ ಮ ಗಾ ರಿ ಸ

ಉಪಾಂಗರಾಗ ಷಡ್ಜವು ಗ್ರಹಾಂಶನ್ಯಾಸ. ಧೈವತ ಮತ್ತು ನಿಷಾದಗಳು ರಾಗ ಛಾಯಾಸ್ವರಗಳು. ಸಾರ್ವಕಾಲಿಕರಾಗ. ಶ್ರೀತ್ಯಾಗರಾಜರ ಅನಾಥುಡನುಗಾನು ಎಂಬುದು ಈ ರಾಗದ ಪ್ರಸಿದ್ಧ ಕೃತಿ.

**ಜಿಂಗ್ಲಾ ಭೈರವಿ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ಗ ಮ ಪ ಮ ದ ಸ

ಅ: ಸ ನಿ ದ ಪ ಮ ಗ ಮ ರಿ ಸ

**ಜಿಂದು**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ಮ ಮ ಪ ಮ ದ ಸ

ಅ: ಸ ನಿ ದ ಮ ಪ ಮ ಗ ರಿ ಸ

**ಜೀಮೂತ**—ಇದು ನಾನ್ಯದೇವನು ಹೇಳಿರುವ ಒಂದು ರಾಗ.

**ಜೀವಾ-ಜೀವ-ಜೀವಾಳ-ಜೀವಾಳಿ**—ಇದು ತಂಬೂರಿಯ ಕುದುರೆಯ ಮೇಲೆ ತಂತಿಯ ಕೆಳಗಿರುವ ರೇಷ್ಮೆ, ಉಣ್ಣೆ ಅಥವಾ ಹತ್ತಿಯದಾರ. ಇದು ತುಂಬಿದ ಶ್ರುತಿಯನ್ನು ಕೊಡುತ್ತದೆ. ದಾರವನ್ನು ಸರಿಯಾಗಿ ಕೂರಿಸಿ ತಂತಿಯನ್ನು ಮಿಾಟಿದಾಗ, ತಂತಿಯು ಒಂದು ಕೋನಕ್ಕೆ ಚಲಿಸುತ್ತದೆ. ಇದರಿಂದ ಶ್ರುತಿಯು ಸರಿಯಾಗಿದೆಯೇ ಇಲ್ಲವೇ ಎಂಬುದನ್ನು ಕೇಳಿ ತಿಳಿಯಲು ಅನುಕೂಲ. ಜೀವಾಳವನ್ನು ಸರಿಯಾಗಿ ಕೂರಿಸದಿದ್ದರೆ ತಂತಿಯ ಶಬ್ದವು ದುರ್ಬಲವಾಗಿ ಸಪ್ಪೆಯಾಗಿರುತ್ತದೆ.

**ಜೀವಕ**—ಇದು ಷಡ್ಜಗ್ರಾಮಕ್ಕೆ ಸೇರಿದ ಒಂದು ಬಗೆಯತಾನ. ಇದು ಗ ಮ ಪ ನಿ ಸ ಮಾದರಿಯಲ್ಲಿದೆ.

**ಜೀವಕಲೆ**—ಅಂತರ್ಗತ ಸೌಂದರ್ಯ ಮತ್ತು ಹೃದಯಸ್ಪರ್ಶಿಯಾದ ಗುಣ, ಶಕ್ತಿಗಳಿರುವ ಕಲೆಗಳು. ಸಂಗೀತ ಮತ್ತು ನೃತ್ಯ ಕಲೆಗಳು ಇದಕ್ಕೆ ನಿದರ್ಶನ.

**ಜೀವ ಬ್ರಹ್ಮ ಐಕ್ಯ ಚರಿತ್ರಂ**—ಅರಿಯಲೂರು ಶಠಗೋಪಣಯ್ಯಂಗಾರ್ ವಿರಚಿತ ಒಂದು ತಮಿಳು ಗೇಯ ಚರಿತ್ರೆ. ಇದರಲ್ಲಿ ಹಾಡುಗಳು ಮತ್ತು ಪದ್ಯಗಳಿವೆ.

**ಜೀವನ**—ಇದು ಷಡ್ಜಗ್ರಾಮಕ್ಕೆ ಸೇರಿದ ಒಂದು ವಿಧವಾದತಾನ. ಇದು ಸ ರಿ ಮ ಪ ದ ಮಾದರಿಯಲ್ಲಿದೆ.

**ಜೀವನಾಟಕಂ**—ಹಾಡುಗಳು ಮತ್ತು ಪದ್ಯಗಳಿರುವ ತಮಿಳಿನ ಒಂದು ಗೇಯ ಚರಿತ್ರೆ.

**ಜೀವಪ್ರಬಂಧ**—ಸಂಗೀತ ಮತ್ತು ಸಾಹಿತ್ಯ ಇವೆರಡೂ ಸುಂದರವಾಗಿರುವ

ಸಂಗೀತ ರಚನೆಗಳಿಗೆ ಜೀವ ಪ್ರಬಂಧಗಳೆಂದು ಹೆಸರು. ಇವುಗಳ ಸೌಂದರ್ಯದಿಂದ ಇಂತಹ ರಚನೆಗಳನ್ನು ಶತಮಾನಗಳಿಂದ ಹಾಡುತ್ತ ಬಂದಿದ್ದಾರೆ ತೇವಾರಂ ಹಾಡುಗಳು, ಜಯದೇವನ ಅಷ್ಟಪದಿಗಳು, ಸಂಗೀತದ ತ್ರಿಮೂರ್ತಿಗಳ ಕೃತಿಗಳು ಮತ್ತು ದೇವರನಾಮಗಳು ಜೀವಪ್ರಬಂಧಗಳಾಗಿವೆ

**ಜೀವರತ್ನ ಭೂಷಣಿ**—ಈ ರಾಗವು ೩೮ನೆ ಮೇಳ ಕರ್ತ ಜಲಾರ್ಣವದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಜೀವರಾಗ**--ಹಲವು ಶತಮಾನಗಳಿಂದ ಹಾಡಲ್ಪಡುತ್ತ ಬಂದಿರುವರಾಗ. ಅವುಗಳಲ್ಲಿ ಅಂತರ್ಗತವಾಗಿರುವ ಸೌಂದರ್ಯ ಮತ್ತು ಸೊಗಸು ಇಂತಹ ರಾಗಗಳು ಇನ್ನೂ ಆಕರ್ಷಣೀಯವಾಗಿರಲು ಕಾರಣ. ಉದಾ: ಶಂಕರಾಭರಣ, ನೀಲಾಂಬರಿ, ಕೇದಾರಗೌಳ, ಭೂಪಾಲಿ, ಕಾನಡಾ, ಆರಾಣ ಇತ್ಯಾದಿ.

**ಜೀವರಂಜಿನಿ**—ಈ ರಾಗವು ೨ನೆ ಮೇಳಕರ್ತ ರತ್ನಾಂಗಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಜೀವವಾದ್ಯ**—ಸಂಗೀತದ ಸಕಲ ಸೊಂಪು, ಇಂಪು, ಲಾಲಿತ್ಯಗಳನ್ನು ನುಡಿಸಲು ಸಾಧ್ಯವಿರುವವಾದ್ಯಗಳು ಜೀವವಾದ್ಯಗಳೆ ಕೊಂಡಿವೆಸಿನಿ. ವೀಣೆ, ವೇಣು, ನಾಗಸ್ವರ ಮತ್ತು ಮೃದಂಗವಾದ್ಯಗಳಲ್ಲಿ ಈ ಗುಣಗಳಿರುವುದರಿಂದ ಇವು ಹಲವು ಶತಮಾನಗಳಿಂದ ಪ್ರಮುಖ ವಾದ್ಯಗಳಾಗಿವೆ.

**ಜೀವಂತಿಕ**—(೧) ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

(೨) ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೪೮ನೆ ಮೇಳದ ಹೆಸರು.

**ಜೀವಂತಿನಿ**—ಈ ರಾಗವು ೪೮ನೆ ಮೇಳಕರ್ತ ದಿವ್ಯ ಮಣಿಯ ಒಂದು ಜನ್ಯರಾಗ

ಆ: ಸ [illegible] ದ ನಿ ಸ

ಅ: ಸ ಪ ಮ ಗ ಸ

**ಜೀವಸ್ವರ**—ರಾಗದ ಜೀವದಂತಿರುವ ಸ್ವರಕ್ಕೆ ಜೀವಸ್ವರವೆಂದು ಹೆಸರು. ಇದಕ್ಕೆ ರಾಗ ಛಾಯಾ ಸ್ವರವೆಂದು ಹೆಸರು. ಇದು ರಾಗದ ರೂಪನ್ನು ಪ್ರಕಾಶ ಗೊಳಿಸುತ್ತದೆ. ಜೀವಸ್ವರವುನ್ಯಾಸವಾಗಿರಬಹುದು ಅಥವಾ ಇಲ್ಲದಿರಬಹುದು.

ಕೆಲವು ಭಾಷಾಂಗರಾಗಗಳಲ್ಲಿ ಅನ್ಯಸ್ವರಗಳು ಜೀವಸ್ವರಗಳಾಗಿರುತ್ತವೆ. ಸಾರಂಗ ರಾಗದಲ್ಲಿ ಅನ್ಯಸ್ವರವಾದ ಶುದ್ಧ ಮಧ್ಯಮವು ಜೀವ ಸ್ವರವಾಗಿರುತ್ತದೆ ನ್ಯಾಸಸ್ವರಗಳಾಗಿರುವ ಜೀವಸ್ವರಗಳು ಆ ರಾಗದ ಅಂಶಸ್ವರಗಳಾಗಿರುತ್ತವೆ

**ಜೇಸುದಾಸ್** (೧೯೪೧) — ಜೇಸುದಾಸ್ ಈಗಿನ ಹೆಸರಾಂತ ಸಂಗೀತಗಾರರಲ್ಲಿ ಒಬ್ಬರು. ಕೇರಳದ ಕೊಚ್ಚಿ ಇವರ ಜನ್ಮಸ್ಥಳ ಇವರ ತಂದೆ ಅಗಸ್ಟೈನ್ ಜೋಸೆಫ್ ೧೯೫೦ರ ಕಾಲದಲ್ಲಿ ನಾಟಕಕಾರ ಮತ್ತು ಗಾಯಕರಾಗಿದ್ದರು. ತಂದೆಯಿಂದ ಸ್ಫೂರ್ತಿ ಪಡೆದು ಮ್ಯೂಸಿಕ್ ಅಕಾಡೆಮಿಯ ವಿದ್ಯಾರ್ಥಿಯಾಗಿ ಸಂಗೀತ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಕಲ್ಪಡುಗಲ್ ಎಂಬ ಚಲನ ಚಿತ್ರದಲ್ಲಿ ಹಾಡಿ ಅಲ್ಲಿಂದ ಒಂದೇ ಸಮನಾಗಿ ಕೀರ್ತಿಶಿಖರವೇರುತ್ತಿದ್ದಾರೆ. ಇವರು ಪ್ರಸಿದ್ಧ ಗಾಯಕ ಚೆಂಬೈವೈದ್ಯನಾಥ ಭಾಗವತರ ಶಿಷ್ಯರು. ಮಲಯಾಳಂ, ತಮಿಳು, ತೆಲುಗು ಮತ್ತು ಕನ್ನಡ ಚಲನ ಚಿತ್ರಗಳಲ್ಲಿ ೩೦೦೦ಕ್ಕೂ ಹೆಚ್ಚು ಹಾಡುಗಳನ್ನು ಹಾಡಿದ್ದಾರೆ. ಜೈಜವಾನ್ ಜೈಕಿಸಾನ್ ಎಂಬ ಹಿಂದೀ ಚಿತ್ರದಲ್ಲಿ ಹಾಡಿದ್ದಾರೆ. ಆನಂದ ಮಹಲ್ ಚಿತ್ರದಲ್ಲಿ ಇವರ ವಾದ್ಯವೃಂದದ ಗಾನವಿದೆ. ಹಿನ್ನಲೆ ಗಾಯನಕ್ಕೆ ೧೯೭೨ರಲ್ಲಿ ರಾಷ್ಟ್ರ ಪ್ರಶಸ್ತಿ ದೊರಕಿತು ಇವರು ಹಾರ್ಮೋನಿಯಂ ಮತ್ತು ವೀಣೆಯನ್ನು ನುಡಿಸುವುದರಲ್ಲಿ ಪರಿಣತರು ಪಾಶ್ಚಾತ್ಯ ಸಂಗೀತದಲ್ಲಿ ಇವರಿಗೆ ವಿಶೇಷವಾದ ಪ್ರೀತಿ. ಅನೇಕ ಸಿಂಫೋನಿಗಳನ್ನು ಸಂಗ್ರಹಿಸಿದ್ದಾರೆ ೧೯೭೫ರಲ್ಲಿ ಪದ್ಮಶ್ರೀ ಪ್ರಶಸ್ತಿದೊರಕಿತು ಜರ್ಮನಿ, ಅಮೆರಿಕ, ಇಂಗ್ಲೆಂಡ್, ಮಲೇಷಿಯಾ, ರಷ್ಯ, ಅರೇಬಿಯಾ ಕೊಲ್ಲಿಯ ದೇಶಗಳಲ್ಲೆಲ್ಲಾ ಪ್ರವಾಸ ಮಾಡಿ ಕೀರ್ತಿವಂತರಾಗಿದ್ದಾರೆ. ಕೇರಳದ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದಾರೆ. ಇವರು ಶಬರಿಮಲೆ ಅಯ್ಯಪ್ಪಸ್ವಾಮಿ ಮತ್ತು ಗುರುವಾಯೂರು ಕೃಷ್ಣನ ಭಕ್ತರು. ಇವರಿಗೆ ಉತ್ತಮ ಹಾಗೂ ಇಂಪಾದ ಹಿತಕರವಾದ ಶಾರೀರ ಸಂಪತ್ತು ಮತ್ತು ಮನೋಧರ್ಮವಿದೆ. ಇವರು ಇಂದಿನ ಒಬ್ಬ ಜನಪ್ರಿಯರಾದ ಗಾಯಕರು.

**ಜ್ಯೇಷ್ಠ** — ಇದು ಷಡ್ಜಗ್ರಾಮಕ್ಕೆ ಸೇರಿದ ಒಂದು ತಾನವಿಶೇಷ. ಇದು ನಿ ರಿ ಗ ಮ ದ ಎಂಬ ಮಾದರಿಯಲ್ಲಿದೆ.

**ಪಂಡಿತ್ ವಿ. ಜಿ. ಜೋಗ್** (೧೯೨೨) — ಪಂಡಿತ್ ವಿಷ್ಣು ಗೋವಿಂದ ಜೋಗ್ ಉತ್ತರ ಭಾರತದ ಒಬ್ಬ ವಿಖ್ಯಾತ ಸಂಗೀತ ವಿದ್ವಾಂಸ ಹಾಗೂ ಪಿಟೀಲು ವಾದಕರು. ಇವರ ಜನ್ಮಸ್ಥಳ ಬೊಂಬಾಯಿ. ಪ್ರಾರಂಭದ ಸಂಗೀತ ಶಿಕ್ಷಣವನ್ನು ತಮ್ಮ ಬಂಧು ಎಸ್. ಜಿ. ಅಥಾವಳೆ ಮತ್ತು ಗಣಪತಿರಾವ್ ಪುರೋಹಿತರಲ್ಲೂ, ತರುವಾರ ವಿ. ಶಾಸ್ತ್ರಿಯವರಲ್ಲೂ ಪಡೆದು ಪ್ರೌಢ ಶಿಕ್ಷಣವನ್ನು ಪ್ರಸಿದ್ಧ ಲಕ್ಷ್ಯ ವಿದ್ವಾಂಸ ಮತ್ತು ಗಾಯಕ ಡಾ||. ಎಸ್. ಎನ್. ರತನ್ ಜಂಕರ್‌ರವರಲ್ಲಿ ಪಡೆದರು. ೧೯೪೪ರಲ್ಲಿ ಬೆಹಲ ಶಿಕ್ಷ ಎಂಬ ತಮ್ಮ ಪ್ರಥಮ ಗ್ರಂಥವನ್ನು

ಪ್ರಕಟಿಸಿದರು. ಇದು ಒಂದು ಮುಖ್ಯವಾದ ಶಾಸ್ತ್ರ ಗ್ರಂಥವೆಂದು ಮನ್ನಣೆ ಪಡೆಯಿತು. ಲಕ್ನೋವಿನ ಭಾತ್ಖಂಡೆ ಸಂಗೀತ ವಿಶ್ವವಿದ್ಯಾನಿಲಯವು ಇವರಿಗೆ ಮಾಸ್ಟರ್ ಆಫ್ ಮ್ಯೂಸಿಕ್, ವಾದ್ಯನಿಪುಣ ಎಂಬ ಗೌರವ ಪದವಿಯನ್ನು ನೀಡಿ ಗೌರವಿಸಿತು ಅದೇ ವಿಶ್ವವಿದ್ಯಾಲಯದಲ್ಲಿ ೧೯೩೪ರ ರಿಂದ ಹದಿನೆಂಟು ವರ್ಷಗಳ ಅಧ್ಯಾಪಕರಾಗಿ ಸೇವೆಸಲ್ಲಿಸಿ ೧೯೫೩ರಲ್ಲಿ ಆಕಾಶವಾಣಿಗೆ ಸೇರಿ ಲಕ್ನೋ, ಬೊಂಬಾಯಿ ಮತ್ತು ಕಲ್ಕತ್ತ ಕೇಂದ್ರಗಳ ಸಂಗೀತ ನಿರ್ದೇಶಕರಾಗಿದ್ದಾರೆ. ಇವರ ಪಿಟೀಲು ವಾದನವು ಮಿಂಚಿನಂತೆ ಹೊಳಪುಳ್ಳದು ಲಲಿತವೂ ಮಧುರವೂ ಆಗಿದೆ. ಬಿಸ್ಮಿಲ್ಲಾ ಖಾನರೊಡನೆ ಇವರು ನುಡಿಸಿರುವ ಪಿಟೀಲುವಾದನದ ಎಲ್. ಪಿ. ರೆಕಾರ್ಡು ಗಳಿಗೆ ದೇಶವಿದೇಶಗಳಲ್ಲಿ ಅಪಾರ ಬೇಡಿಕೆಯಿದೆ. ಇವರು ಪಂಡಿತ್ ಓಂಕಾರ್‌ನಾಥ್ ಠಾಕುರ್, ಬಡೇಗುಲಾಂ ಆಲಿಖಾನ್, ಅಮೀರ್‌ಖಾನ್ ಮತ್ತು ಇತರ ಎಲ್ಲಾ ಸಮಕಾಲೀನ ವಿದ್ವಾಂಸರಿಗೆ ಪಕ್ಕವಾದ್ಯ ನುಡಿಸಿದ್ದಾರೆ. ಇವರಿಗೆ ಕರ್ಣಾಟಕ ಸಂಗೀತದಲ್ಲಿ ಪಾಂಡಿತ್ಯವಿದೆ. ೧೯೪೬ರಲ್ಲಿ ಹೀರಾಬಾಯಿ ಬರೋಡೆಕರ್‌ರವರೊಂದಿಗೆ ಪೂರ್ವ ಆಫ್ರಿಕಾದ ದೇಶಗಳಿಗೂ, ಭಾರತ ಸರ್ಕಾರದ ನಿಯೋಗದ ಸದಸ್ಯರಾಗಿ ನೇಪಾಳಕ್ಕೆ ಹೋಗಿ ಕಚೇರಿಗಳಲ್ಲಿ ನುಡಿಸಿದರು. ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಭೇಟಿನೀಡಿದ ಪಿಟೀಲು ವಿದ್ವಾಂಸರಲ್ಲಿ ಇವರೇ ಮೊದಲಿಗರು. ೧೯೬೮ರಲ್ಲಿ ಕ್ಯಾಲಿಫೋರ್ನಿಯಾದ ಆಲಿ ಅಕ್ಬರ್‌ಖಾನರ ಸಂಗೀತ ಕಾಲೇಜಿನ ಅಧ್ಯಾಪಕರಾಗಿ ಗಾಯನ, ಪಿಟೀಲು ಮತ್ತು ಕೊಳಲುವಾದನದಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಿದರು. ೧೯೭೦ರಲ್ಲಿ ಯು. ಕೆ., ಯೂರೋಪ್ ಮತ್ತು ಯು. ಎಸ್. ಎ ಗೆ ಎರಡನೆಯ ಸಲ ಭೇಟಿಕೊಟ್ಟರು. ಇವರು ಪಿಟೀಲು ವಾದ್ಯದ ಮಾಂತ್ರಿಕರು.

**ಜೋಗಿ**—ಈ ರಾಗವು ೧೫ನೆ ಮೇಳಕರ್ತ ಮಾಯಾ ಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ̇

ಅ: ಸ̇ ದ ನಿ ದ ಪ ಮ ರಿ ಮ ಗ ರಿ ಸ

**ಜೋಗಿಭೈರವಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ̇

ಅ: ಸ̇ ದ ಪ ಮ ರಿ ಗ ರಿ ಸ

**ಜೋಗಿಯಾ**—ಇದು ಹಿಂದೂಸ್ಥಾನಿ ಸಂಗೀತ ಪದ್ಧತಿಯ ಭೈರವಿ ಥಾಟ್‌ನ (ಮಾಯಾಮಾಳವ ಗೌಳ ಮೇಳ) ಒಂದು ಜನ್ಯರಾಗ. ಇದು ಕರ್ಣಾಟಕ ಸಂಗೀತದ ಸಾವೇರಿ ರಾಗಕ್ಕೆ ಸಮನಾದ ರಾಗ.

**ಜೋಡಿಗಾಯನ (ದ್ವಂದ್ವ ಗಾಯನ)**—ಇಬ್ಬರು ಗಾಯಕರು ಕೂಡಿ ಹಾಡುವುದಕ್ಕೆ ದ್ವಂದ್ವಗಾಯನವೆಂದು ಹೆಸರು. ದ್ವಂದ್ವ ಗಾಯನದಲ್ಲಿ ಕೃತಿಗಳನ್ನೂ,

ಮಧ್ಯಮಕಾಲದ ಸಂಗತಿಗಳನ್ನು ಕೇಳಲು ಚೆನ್ನಾಗಿರುತ್ತದೆ. ದ್ವಂದ ಗಾಯನದ ಸೊಗಸನ್ನು ತಿಳಿದಿದ್ದ ಶ್ರೀ ತ್ಯಾಗರಾಜರು ತಮ್ಮ ಶಿಷ್ಯರನ್ನು ಸೂಕ್ತವಾದ ರೀತಿಯಲ್ಲಿ ಜೋಡಿಗಳಾಗಿ ಮಾಡಿದ್ದರು. ರಾಮಾಯಣವನ್ನು ಹಾಡಿದ ಲವಕುಶರು ಚರಿತ್ರೆಯ ಪ್ರಥಮ ದ್ವಂದ್ವಗಾಯಕರು. ಮುತ್ತುಸ್ವಾಮಿ ದೀಕ್ಷಿತರ ಸಹೋದರರಾದ ಚಿನ್ನಸ್ವಾಮಿ ಮತ್ತು ಬಾಲುಸ್ವಾಮಿ ದೀಕ್ಷಿತರ ಜೋಡಿಗಾಯನವು ಆ ಕಾಲದಲ್ಲಿ ಬಹಳ ಜನಪ್ರಿಯ ವಾಗಿತ್ತು. ಇತ್ತೀಚಿನ ದಿನಗಳಲ್ಲಿ ದ್ವಂದಗಾಯನಕ್ಕೆ ಹೆಸರಾದವರು ಆಲತ್ತೂರು ಸಹೋದರರು, ಡಿ ಕೆ. ಪಟ್ಟಮ್ಮ ಮತ್ತು ಅವರ ಸಹೋದರ ಡಿ. ಕೆ ಜಯರಾಮನ್, ಬಿ ವಿ. ರಾಮನ್ ಮತ್ತು ಬಿ ವಿ. ಲಕ್ಷ್ಮಣನ್, ಬಳ್ಳಾರಿ ಸಹೋದರರು, ರುದ್ರ ಪಟ್ಟಣಂ ಸಹೋದರರು, ಬೊಂಬಾಯಿ ಸಹೋದರಿಯರು, ರಾಧಾ ಮತ್ತು ಜಯಲಕ್ಷ್ಮಿ, ಜಿ. ಎಸ್. ರಾಜಲಕ್ಷ್ಮಿ ಮತ್ತು ಕಮಲ. ಗಂಗೂಬಾಯಿ ಹಾನಗಲ್ ಮತ್ತು ಕೃಷ್ಣಾ ಹಾನಗಲ್.

**ಜೋಡಿ ತಂಬೂರಿ**—ಕೆಲವು ಸಂಗೀತ ವಿದ್ವಾಂಸರು ಒಂದು ತಂಬೂರಿಗೆ ಬದಲು ಎರಡು ತಂಬೂರಿಗಳನ್ನು ಶ್ರುತಿಗಾಗಿ ಬಳಸುತ್ತಾರೆ. ಹಿಂದೂಸ್ಥಾನಿ ಗಾಯಕರೆಲ್ಲರೂ ಸಾಮಾನ್ಯವಾಗಿ ಎರಡು ತಂಬೂರಿಗಳನ್ನು ಬಳಸುತ್ತಾರೆ. ಒಂದು ತಂಬೂರಿಯನ್ನು ರೂಢಿಯಂತೆ ಅಂದರೆ ಮಂದ್ರ ಪಂಚಮ, ಎರಡು ಮಧ್ಯಸ್ಥಾಯಿ ಷಡ್ಜಗಳು ಮತ್ತು ಮಂದ್ರ ಷಡ್ಜಕ್ಕೆ ಶ್ರುತಿ ಮಾಡುತ್ತಾರೆ. ಮತ್ತೊಂದರಲ್ಲಿ ಸಾರಣಿ ಮತ್ತು ಮಂದರವನ್ನು ಮೊದಲಿನಂತೆ ಶ್ರುತಿಮಾಡಿ, ಪಂಚಮದ ತಂತಿಯನ್ನು ಕಾಕಲಿ ನಿಷಾದಕ್ಕೆ ಶ್ರುತಿಮಾಡುತ್ತಾರೆ. ಎರಡು ತಂಬೂರಿಗಳು ಒಂದೇ ಆಕಾರವಾಗಿದ್ದು ಇಬ್ಬರು ಮೀಟುತ್ತಾರೆ.

**ಜೋಡಣಿ**—ಇದು ಪುರಾತನ ಸಂಗೀತ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ಬಗೆಯ ವಾದ್ಯ ಪ್ರಬಂಧ.

**ಜೋಡಿನಾಟ್ಯ ಅಥವಾ ನಟನ**—ಇಬ್ಬರು ಕಲಾವಿದರಿಂದ ಪ್ರದರ್ಶಿ ಸಲ್ಪಡುವ ನಾಟ್ಯ.

**ಜೋಡಿಮೀಟು**—ವೀಣೆಯ ತಂತಿಯನ್ನು ತೋರುಬೆರಳು ಮಧ್ಯದ ಬೆರಳಿ ನಿಂದ ಮೇಲಕ್ಕೆ ಅಥವಾ ಕೆಳಕ್ಕೆ ಮೀಟುವುದಕ್ಕೆ ಜೋಡಿ ಮೀಟು ಎಂದು ಹೆಸರು. ಹೀಗೆ ಮೀಟುವಾಗ ತಂತಿಗಳನ್ನು ಸೇರಿಸಿ ಮೀಟಿದಾಗ ಕ್ರ, ತ್ರ, ಶ್ರೀ ಎಂಬಂತೆ ಶಬ್ದಗಳುಂಟಾಗುತ್ತವೆ. ಜೋಡಿ ಮೀಟಿಗೆ ಸಮಮೀಟೆಂದು ಹೆಸರು. ಕತ್ತರಿ ಮೀಟಿನಲ್ಲಿ ತೋರುಬೆರಳು ಮತ್ತು ಮಧ್ಯದ ಬೆರಳಿನಿಂದ ಒಂದಾದನಂತರ ಇನ್ನೊಂದ ರಂತೆ ಮೀಟುವುದು.

**ಜೋಡಿವಾದ್ಯ**—ಒಂದೇ ವಿಧವಾದ ಎರಡುವಾದ್ಯಗಳ ಕಚೇರಿಗೆ ಜೋಡಿ ವಾದ್ಯ ಕಚೇರಿ ಎಂದು ಹೆಸರು. ಎರಡು ನಾಗಸ್ವರಗಳು, ಎರಡು ವೀಣೆಗಳು. ಎರಡು ಪಿಟೀಲುಗಳು ಅಥವಾ ಎರಡು ಮೃದಂಗಗಳಿರುವ ಕಚೇರಿ ಇದಕ್ಕೆ ನಿದರ್ಶನ.

**ಜೋತಿರಾಗ**—ಅಸಂಪೂರ್ಣ ಮೇಳಪದ್ಧತಿಯಲ್ಲಿ ೬೮ನೆಯ ಮೇಳದ ಹೆಸರು.

**ಜೋತಿಷ್ಮತಿ**—ಅಸಂಪೂರ್ಣ ಮೇಳಪದ್ಧತಿಯಲ್ಲಿ ೬೮ನೆ ಮೇಳದ ಮೊದಲಿನ ಹೆಸರು.

**ಜೋತಿರಂಜನಿ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ಮ ರಿ ಸ

**ಜ್ಯೋತಿಸ್ವರೂಪಿಣಿ**— ಈ ರಾಗವು ೬೮ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ಈ ರಾಗವು ೧೨ನೆ ರವಿ ಚಕ್ರದ ಎರಡನೆ ಮೇಳ. ರಾಗಾಂಗರಾಗ. ಷಡ್ಜವು ಗ್ರಹಾಂಶನ್ಯಾಸ ಷಟ್‌ಶ್ರುತಿ ರಿಷಭ, ಅಂತರಗಾಂಧಾರ, ಪ್ರತಿಮಧ್ಯಮ, ಶುದ್ಧ ಧೈವತ ಮತ್ತು ಕೈಶಿಕಿ ನಿಷಾದಗಳು ಈ ರಾಗದ ಸ್ವರಸ್ಥಾನಗಳು. ಸಾರ್ವಕಾಲಿಕ ರಾಗ. ಶ್ರೀತ್ಯಾಗರಾಜರು ಪುದುಕೋಟೆ ಅರಮನೆಯಲ್ಲಿ ತಮ್ಮ ಗುರು ಸೊಂಟಿ ವೆಂಕಟರಮಣಯ್ಯ ಮತ್ತು ಇತರ ವಿದ್ವಾಂಸರ ಸಮ್ಮುಖದಲ್ಲಿ ಈ ರಾಗವನ್ನು ಹಾಡಿ ಒಂದು ದೀಪವು ಹತ್ತಿ ಕೊಳ್ಳುವಂತೆ ಮಾಡಿದರೆಂದು ಪುದುಕೋಟೆ ಸಂಸ್ಥಾನದ ದಫ್ತರಿನ ಎರಡನೆ ಸಂಪುಟದ ಪ್ರಥಮ ಭಾಗದಲ್ಲಿ ಹೇಳಿದೆ. ಈ ರಾಗದಲ್ಲಿ ಮಹಾ ವೈದ್ಯನಾಥ ಅಯ್ಯರವರು ಬೃಹತ್ತರಮೇಳ ರಾಗಮಾಲಿಕೆಯಲ್ಲಿ ರಚಿಸಿದ್ದಾರೆ. ಕೋಟೀಶ್ವರ ಅಯ್ಯರ್‌ರವರು ತಮಿಳಿನಲ್ಲೂ, ಬಾಲಮುರಳಿಕೃಷ್ಣರವರು ತೆಲುಗಿನಲ್ಲಿ ಈ ರಾಗದಲ್ಲಿ ಕೃತಿ ರಚಿಸಿದ್ದಾರೆ.

**ಜ್ಯೋತಿಷ್ಮತಿ**—ಈ ರಾಗವು ೬೮ನೆ ಮೇಳಕರ್ತ ಜ್ಯೋತಿಸ್ವರೂಪಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಮ ಪ ಸ

ಅ: ಸ ನಿ ದ ಮ ಪ ಮ ಗ ರಿ ಸ

**ಜ್ಯೋತಿಷ್ಟೋಮ**—ಷಡ್ಜಗ್ರಾಮದ ಒಂದು ಬಗೆಯ ತಾನ. ಇದು ದ ಪ ಮ ರಿ ಸ ಎಂಬ ಮಾದರಿಯಲ್ಲಿದೆ.

**ಜ್ಯೋತ್ಸ್ನಪ್ರಿಯ**—ಈ ರಾಗವು ೫ನೆ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ̇

ಅ: ಸ̇ ನಿ ದ ಗ ರಿ ಸ

**ಜೋನ್ಪುರಿ**—ಇದಕ್ಕೆ ಜಾನ್ಪುರಿ ಎಂದು ಹೆಸರು. ಇದು ಹಿಂದೂಸ್ಥಾನಿ ಸಂಗೀತದ ಒಂದು ರಾಗ. ಇದು ೨೦ನೆ ಮೇಳಕರ್ತ ನಟಭೈರವಿಯ (ಹಿಂದೂಸ್ಥಾನಿ

ಸಂಗೀತದ ಅಸಾವೇರಿಥಾಟ್) ಒಂದು ಜನ್ಯರಾಗ. ಆರೋಹಣದಲ್ಲಿ ಗಾಂಧಾರ ವರ್ಜ್ಯ ಮತ್ತು ಅವರೋಹಣದಲ್ಲಿ ಸಂಪೂರ್ಣ ಧೈವತವು ವಾದಿಸ್ವರ ಮತ್ತು ಗಾಂಧಾರವು ಸಂವಾದಿ ಸ್ವರ. ಈ ರಾಗವನ್ನು ಜಾನ್ ಪುರದ ಸುಲ್ತಾನ್ ಷರ್‌ಕೀರ್ ಸೃಷ್ಟಿಸಿದನೆಂದು ಪ್ರತೀತಿ. ಪುರಂದರದಾಸರ ಹರಿಚಿತ್ತ ಸತ್ಯ ಎಂಬ ಕೃತಿಯೂ, ತಮಿಳಿನ ಸತ್ವಗುಣ ಬೋಧನ್ ಎಂಬ ಕೃತಿಯು ಈ ರಾಗದಲ್ಲಿ ಪ್ರಸಿದ್ಧವಾಗಿವೆ.

**ಜೋಸೀಲಾ**—ಈ ರಾಗವು ೨೦ನೆ ಮೇಳಕರ್ತ ನಟ ಭೈರವಿಯ ಒಂದು ಜನ್ಯರಾಗ

ಆ: ಸ ರಿ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಜೋಶಿವೆಂಕಪ್ಪಾಚಾರ್ಯ** (೧೮೧೫–೧೯೭೫)—ಇವರು ಗದ್ವಾಲಿನಲ್ಲಿ ವಿದ್ಯಾಭ್ಯಾಸಮಾಡಿ ಆನಂದ ದಾಸರ ಶಿಷ್ಯರಾಗಿ ವೆಂಕಟೇಶ ವಿಠಲ ಎಂಬ ಅಂಕಿತ ಪಡೆದು ಪ್ರಸಿದ್ಧರಾದ ಹರಿದಾಸರು. ಶ್ರೀತ್ಯಾಗರಾಜರ ಕೀರ್ತನೆಯ ಶೈಲಿಯಲ್ಲಿ ಬಹಳ ದೇವರ ನಾಮಗಳನ್ನು ರಚಿಸಿದ್ದಾರೆ.

**ಜೋಹಾನ್ ಸೆಬೆಸ್ಟಿಯನ್ ಬಾಕ್** (೧೬೮೫–೧೭೫೦) ಬಾಕ್ ಪಾಶ್ಚಾತ್ಯ ಸಂಗೀತ ಸಾಮ್ರಾಜ್ಯದ ಅದ್ಭುತ ಪವಾಡ ಪುರುಷ ಇವನು ಜರ್ಮನಿಯ ಐಜನಾಕ್ ಎಂಬಲ್ಲಿ, ಸಂಗೀತ ಪ್ರಪಂಚದಲ್ಲಿ ಪ್ರಸಿದ್ಧವಾಗಿದ್ದ ಮನೆತನದ ಜೋಹಾನ್ ಆಂಟ್ರೋಸಿಯನ್ ಬಾಕ್‌ನ ಮಗನಾಗಿ ಜನಿಸಿದನು. ೧೦ನೆಯ ವಯಸ್ಸಿನಲ್ಲಿ ಅಣ್ಣ ಕ್ರಿಸ್ಟೋಫ್‌ನ್‌ನ ಒಡನೆ ಇದ್ದು ಪಿಟೀಲು ಕಲಿಯಲು ಆರಂಭಿಸಿದನು. ೧೫ನೆ ವಯಸ್ಸಿನಲ್ಲಿ ಲೂನೇಬರ್ಗ್ ಚರ್ಚಿನ ಗಾಯಕನಾಗಿ ನಂತರ ಡ್ಯುಸೆಲ್‌ನ ಚಾಪೆಲ್ ನಲ್ಲಿ ಆರ್ಗನ್‌ವಾದಕನಾದನು. ೧೭೧೭ರ ವೇಳೆಗೆ ಅತ್ಯಂತ ಶ್ರೇಷ್ಠ ಆರ್ಗನ್‌ವಾದಕ ನೆಂದು ಪ್ರಸಿದ್ಧನಾದನು. ಹಲವು ವಾದ್ಯಗೋಷ್ಠಿಗಳನ್ನೂ ಕನ್‌ಸರ್ಟೋಗಳನ್ನೂ ವಿವಿಧವಾದ್ಯಗಳಿಗಾಗಿ ರಚನೆಗಳನ್ನು ಸಿದ್ಧಗೊಳಿಸಿದನು. ೧೭೨೩ರಲ್ಲಿ ಲೆಪ್ಸಿಗ್‌ನ ಸೇಂಟ್‌ಥಾಮಸ್ ಚರ್ಚಿನಲ್ಲಿ ನೇಮಕಗೊಂಡನು.

ಬಾಕ್ ರೊಮ್ಯಾಂಟಿಕ್ ಕಾಲದ ಹೋಮೋಫನಿ ಮತ್ತು ಹಾರ್ಮೊನಿ ಪದ್ಧತಿ ಗಳಿಗೆ ಮೇಲ್ಪಂಕ್ತಿಯಾಗಿದ್ದನು ಹಾರ್ಮೋನಿ ಎಂದರೆ ಸಮರಸವಾದ ಏಕಲಯದ ಅನ್ಯೋನ್ಯತೆಯುಳ್ಳ ಒಂದು ಸ್ವರಗಳುಳ್ಳ ಮೇಳ. ಬಾಕ್‌ನ ನಂತರ ಪಾಲಿಫೊನಿಯಿಂದ ಸಂಪೂರ್ಣವಾಗಿ ವಿಕೃತ ಹೊಂದಿದ ಒಂದು ಹೊಸಪದ್ಧತಿಯು ಬೆಳೆಯಿತು ಬಾಕ್ ರೂಪಿಸಿದ್ದ ಬೆಳವಣಿಗೆಯಲ್ಲಿ ಮೊದಲನೆ ಭಾಗದಲ್ಲಿ ಸ್ವರಗಳು ತರ್ಕಬದ್ಧವಾಗಿದ್ದು ಒಂದು ಮೆಲೊಡಿಯನ್ನು ಬೇರೆ ಬೇರೆ ಸ್ಥಾಯಿ ಹಾಗೂ ಸಂದರ್ಭಗಳಲ್ಲಿ ಬಳಸ ಲಾಗುತ್ತದೆ. ಇದು ಬಹುಶಃ ಭಾರತೀಯ ಸಂಗೀತದ ಆಲಾಪ್‌ನಂತೆ ಎರಡನೆಯದು ವಿಚಾರ ಪೂರ್ಣ ಬೆಳವಣಿಗೆ ಇದರಲ್ಲಿ ಪ್ರಾಮುಖ್ಯತೆಯುಳ್ಳ ವಿವಿಧ ಭಾಗಗಳು ಅಥವಾ ಧ್ವನಿಗಳು ಒಂದು ಗಣಿತದ ಪ್ರಕಾರ ನಿಯಮಿತ ಕಾಲದಲ್ಲಿ ಜೋಡಣೆ ಹೊಂದುತ್ತವೆ.

ಇದನ್ನು ಬೋಲ್‌ತಾನ್‌ಗೆ ಹೋಲಿಸಬಹುದು. ಮೂರನೆಯ ಭಾಗವು ಬ್ರಿಲಿಯೆನ್ಸ್. ಇದರಲ್ಲಿ ತ್ವರಿತ ಲಯದಲ್ಲಿ ವಿವಿಧ ಭಾಗಗಳ ಹಾಗೂ ಧ್ವನಿಗಳ ವ್ಯತ್ಯಾಸದಿಂದ ಹಾರ್ಮೊನಿಯಂ ಉತ್ಪತ್ತಿ ಯಾಗುತ್ತದೆ. ಇದನ್ನು ಹಿಂದೂಸ್ಥಾನಿ ಸಂಗೀತದ ತಾನ್‌ಗೆ ಹೋಲಿಸಬಹುದು

ಬಾಕ್‌ನ ಜೀವನದಲ್ಲಿ ಪ್ರಷ್ಯದ ದೊರೆ ಫ್ರೆಡರಿಕ್‌ನಿಂದ ದೊರಕಿದ ಆಹ್ವಾನ ಮತ್ತು ಮನ್ನಣೆ ಮುಖ್ಯವಾದುದು. ಅವನು ಬದುಕಿದ್ದಾಗ ಜನರು ಅವನ ಪ್ರತಿಭೆಗೆ ಮನ್ನಣೆ ಕೊಡಲಿಲ್ಲ. ಅವನ ಮರಣಾನಂತರ ೧೮೫೦ರಲ್ಲಿ ಅವನ ಕೃತಿಗಳ ಸಂಗ್ರಹಕ್ಕಾಗಿ ಬಾಕ್ ಗೆಸೆಲ್ ಶಾಫ್ಟ್ ಎಂಬ ಸಂಸ್ಥೆ ಜನ್ಮತಾಳಿತು. ಅವನು ನಿಧನ ಹೊಂದುವ ಕೆಲವೇ ದಿನಗಳ ಹಿಂದೆ ಬಿಫೋರ್ ದೈ ಥ್ರೋನ್, ವೈಗಾಡ್, ಐ ಸ್ಟ್ಯಾಂಡ್ ಎಂಬ ಕೃತಿಯನ್ನು ರಚಿಸಿದ. ಅವನ ನಿಧನದೊಂದಿಗೆ ಪಾಶ್ಚಾತ್ಯ ಸಂಗೀತದ ಬಾರೋಕ್ ಕಾಲ ಮುಗಿಯಿತು. ಅವನು ಸಂಗೀತದಲ್ಲಿ ಯಾವ ಹೊಸಪದ್ಧತಿಯನ್ನು ಸೃಷ್ಟಿಸದಿದ್ದರೂ, ಹಳೆಯ ಪದ್ಧತಿಗಳಿಗೆ ಹೊಸ ಸಂವೇದನಾ ಸಂಕೇತವನ್ನು ರೂಢಿಸಿದ ಇವನ ಸಮಕಾಲೀನನಾಗಿದ್ದ ಹ್ಯಾಂಡೆಲ್ ನಿಂದ ಅಪೆರಾಗಳ ಸಂಗೀತ ಸಂಯೋಜನೆಗಳು ಆರಂಭವಾದುವು. ಪಿಯಾನೊ ಮತ್ತು ವಯೊಲಿನ್ ಸೊನಾಟಗಳು ಬಾಕ್‌ನ ಗಮನೀಯ ಕೊಡುಗೆಗಳಾಗಿವೆ. ಅವನು ಧ್ಯೇಯಗಳ ಪ್ರತಿಪಾದಕನಾಗಿದ್ದನು ಹಾಗೂ ಅವುಗಳ ಪ್ರತೀಕವಾಗಿದ್ದು ಮುಂದಿನ ಸಂಗೀತದ ಭದ್ರ ಅಡಿಪಾಯವನ್ನು ನಿರ್ಮಿಸಿದನು

**ಜೋಹಿನಿ**—ಇದು ಅರಭಟ್ಟನಾವಲರ್ ವಿರಚಿತ ಭರತಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ

**ಜೋಂಬಡಿ**—ಇದು ದ್ರುತಗಳಿರುವ ಒಂದು ದೇಶಿರಾಗ

**ಜ್ಯಾ (ಜ್ಯಾಕಾರ)**—ಇದು ಕಮಾನುವಾದ್ಯ. ತಂತೀವಾದ್ಯಗಳಲ್ಲಿ ಅತ್ಯಂತ ಪುರಾತನವಾದುದು. ಇದರಿಂದ ಹಾರ್ಪ್ ಮತ್ತು ಪುರಾತನ ಕಾಲದ ತಮಿಳು ದೇಶದ ಯಾಳ್ ವಾದ್ಯವು ರೂಪು ಗೊಂಡಿತು. ಬಿಲ್ಲಿನ ಅಥವಾ ವಾದ್ಯದ ಕಮಾನನ್ನು ಮಾಡುವವನು ಜ್ಯಾಕಾರ.

**ಜ್ಯಾಘೋಷ**—ಇದು ಕಮಾನು ವಾದ್ಯದ ಶಬ್ದ. ತ್ಯಾಗರಾಜರು ರಾಮಬಾಣತ್ರಾಣ ಎಂಬ ಸಾವೇರಿರಾಗದ ಕೃತಿಯಲ್ಲಿ ರಾಮನ ಕೋದಂಡದ ಟಂಕಾರವು ಎಷ್ಟು ಭಯೋತ್ಪಾತಕವಾಗಿತ್ತು ಎಂಬುದನ್ನು ವಿವರಿಸುವಾಗ ಜ್ಯಾಘೋಷ ವೆಂಬ ಪದವನ್ನು ಉಪಯೋಗಿಸಿದ್ದಾರೆ.

**ಜ್ಯಾಯಸೇನಾಪತಿ** (೧೩೪೯)—ಓರಂಗಲ್ ರಾಜಗಣಪತಿದೇವನ ದಂಡ ನಾಯಕನಾಗಿದ್ದ ಜ್ಯಾಯ ಸೇನಾಪತಿ ನೃತ್ತ ರತ್ನಾವಲಿ, ವಾದ್ಯ ರತ್ನಾವಲಿ, ಗೀತ ರತ್ನಾವಲಿ ಎಂಬ ಮೂರು ಕೃತಿ ರತ್ನಗಳನ್ನು ರಚಿಸಿದ್ದಾನೆ. ನೃತ್ಯ ರತ್ನಾವಲಿಯ ಪೂರ್ವಾರ್ಧದಲ್ಲಿ ಮಾರ್ಗನೃತ್ಯ ಮತ್ತು ಉತ್ತರಾರ್ಧದಲ್ಲಿ ದೇಶೀ ನೃತ್ಯಗಳ ವಿಚಾರವಿದೆ.

**ಜಂಗಲ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಧ಼ ನಿ಼ ಸ ರಿ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ಼ ಧ಼

**ಜಂಝೂಟಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ದ ಸ ರಿ ಗ ಮ ಪ ದ ನಿ

ಅ: ದ ಪ ಮ ಗ ರಿ ಸ ನಿ ಧ಼ ಪ

ಇದು ನಿಷಾದಾಂತ್ಯರಾಗ. ಭಾಷಾಂಗರಾಗ. ಮಗರಿಸ ಮತ್ತು ರಿಗರೀ ಎಂಬ ಸ್ವರಸಮೂಹಗಳಲ್ಲಿ ಸಾಧಾರಣ ಗಾಂಧಾರವು ಅನ್ಯ ಸ್ವರವಾಗಿರುತ್ತದೆ. ಧರ್ಮಪುರಿ ಸುಬ್ಬರಾಯರ ಸಖಿಪ್ರಾಣ ಎಂಬ ಜಾವಳಿ, ವೀಣೆ ಶೇಷಣ್ಣನವರ 'ಧಿರನಾತನದಿಂತ ಧಿರನಾ' ಎಂಬ ತಿಲ್ಲಾಣ, ತ್ಯಾಗರಾಜರ ರಾಮ ರಾಮ ಎಂಬ ಕೃತಿ, ಪುರಂದರದಾಸರ ರಾಮ ರಾಮ ರಾಮ ಸೀತಾರಾಮ ಎನ್ನಿರೋ, ಕಲಿಯುಗದಲಿ ಹರಿನಾಮವ ನೆನೆದರೆ ಎಂಬ ದೇವರ ನಾಮಗಳು ಈ ರಾಗದಲ್ಲಿ ಪ್ರಸಿದ್ಧವಾದ ರಚನೆಗಳು

ಸೆಂಜುರುಟ್ಟಿ ಎಂಬ ಹೆಸರಿರುವ ಇದೇ ಆರೋಹಣಾವರೋಹಣಗಳುಳ್ಳ ಮತ್ತೊಂದು ರಾಗವು ಅನ್ಯಸ್ವರವಿಲ್ಲದಿರುವ ಉಪಾಂಗರಾಗ ಪೆಯ್ಯೂರು ಚೆಂಗಲ್ವರಾಯ ಶಾಸ್ತ್ರಿಗಳ "ಇಂತ ತಾಮಸ ಮೇಲನೆ" ಎಂಬ ರಚನೆ ಈ ರಾಗದ ಪ್ರಸಿದ್ಧ ಕೃತಿಗಳು ಇದಕ್ಕೆ ಝುಂಝೂಟಿ ಎಂದೂ ಹೆಸರು

**ಜಂಭೇಟಿ**—ಇದು ನಾನ್ಯದೇವನು ಹೇಳಿರುವ ಒಂದು ಬಗೆಯ ತಾಳ. ಇದರ ಅಂಗಗಳು ಮೂರು ಲಘು, ಎರಡು ದ್ರುತ ಮತ್ತು ಒಂದು ಅನುದ್ರುತ. ಇದರ ಒಂದಾವರ್ತಕ್ಕೆ ನಾಲ್ಕುಕಾಲು ಮಾತ್ರೆಗಳು ಅಥವಾ ೧೭ ಅಕ್ಷರಕಾಲ.

**ಜಂಟಿಸ್ವರ**—ಜಂಟಿಸ್ವರಗಳಿಗೆ ಯುಗ್ಮ ಸ್ವರಗಳೆಂದು ಹೆಸರು. ಎರಡು ಸ್ವರಗಳು ಒಟ್ಟಿಗೆ ಇರುವುದು ಜಂಟಿಸ್ವರ. ಉದಾ: ಸಸ ರಿರಿ ಗಗ ಮಮ. ಇಂತಹ ಸ್ವರಗಳುಳ್ಳ ಅಭ್ಯಾಸಗಳನ್ನು ಸಂಗೀತಾಭ್ಯಾಸಿಗಳು ಮೊದಲು ಚೆನ್ನಾಗಿ ಅಭ್ಯಾಸ ಮಾಡಬೇಕು. ಇವನ್ನು ಮೂರು ಕಾಲಗಳಲ್ಲಿ ಕಲಿಯ ಬೇಕು.

**ಜ್ವಾಲಾಕೇಸರಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ಻

ಅ: ಸ಻ ನಿ ದ ಮ ಗ ರಿ ಸ

**ಜ್ಞಾನಕ್ಕೊವೈ**—ಇದು ತಮಿಳುನಾಡಿನ ಸಿದ್ಧಪುರುಷರು ರಚಿಸಿರುವ ತಾತ್ವಿಕ ಹಾಡುಗಳ ಹೆಸರು.

**ಜ್ಞಾನಕುಮ್ಮಿ**—ಕುಮ್ಮಿ ಶೈಲಿಯ ಒಂದು ಸಂಗೀತ ರಚನೆ.

**ಜ್ಞಾನಚಿಚ್ಚಿಂದು**—ಜಾನಪದ ಶೈಲಿಯಲ್ಲಿ ಗೋಪಾಲಕೃಷ್ಣ ಭಾರತಿಯು ರಚಿಸಿರುವ ಒಂದು ಸಂಗೀತ ರಚನೆ.

**ಜ್ಞಾನತಾಂಡವ**—ನಟರಾಜನ ನವತಾಂಡವ ನೃತ್ಯಗಳಲ್ಲಿ ಒಂದು ಬಗೆಯ ತಾಂಡವ ನೃತ್ಯ ತಮಿಳುನಾಡಿನ ತಿರುತ್ತುರೈ ಪೂಂಡಿಯ ದೇವಾಲಯದಲ್ಲಿ ಈ ಬಗೆಯ ನೃತ್ಯವನ್ನು ತೋರಿಸುವ ನಟರಾಜನ ಒಂದು ಶಿಲ್ಪವಿದೆ

**ಜ್ಞಾನದಾಯಕಿ**—ಈ ರಾಗವು ೪ನೆ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ಜ್ಞಾನಬೋಧಿನಿ**—ಈ ರಾಗವು ೧೦ನೆ ಮೇಳಕರ್ತ ನಟಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ‍ं

ಅ: ಸ‍ं ನಿ ದ ಗ ರಿ ಸ

**ಜ್ಞಾನರತ್ನ ಕುರವಂಜಿ**—ಇದು ೬೩ ಪದ್ಯಗಳಿರುವ ತಮಿಳಿನ ಒಂದು ಚಿಕ್ಕರಚನೆ ಇದರ ವಿಷಯವು ತಾತ್ವಿಕ. ಇದು ಸಿಂಗ ಮತ್ತು ಸಿಂಗಿಯ ಸಂಭಾಷಣಾರೂಪದಲ್ಲಿದೆ

**ಜ್ಞಾನಸ್ವರೂಪಿಣಿ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ‍ं

ಅ: ಸ‍ं ದ ಪ ರಿ ಗ ಸ

**ಝಾ**—ನಾದ, ದೀರ್ಘಬಾಹು, ಝುಂಕಾರೀ ಇತ್ಯಾದಿ ನಾನಾರ್ಥಗಳಿವೆ.

**ಝರ್ಝರ (ಝರ್ಝರಿ)**—ಇದೊಂದು ಬಗೆಯ ಮದ್ದಲೆ.

**ಝಣಾಕಾರಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ‍ं

ಅ: ಸ‍ं ದ ಪ ಮ ರಿ ಗ ರಿ ಸ

**ಝರಮಂಜರಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ

ಆ: ಸ ರಿ ಗ ಮ ದ ನಿ ಸ‍ं

ಅ: ಸ ನಿ ದ ಪ ಮ ರಿ ಮ ಗ ಸ

**ಝರಾಲತ**—ಈ ರಾಗವು ೨೯ನೆ ಮೇಳಕತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಗ ರಿ ಸ

**ಝಾರೀಘ**—ದೇವಾಲಯಗಳ ಸಂಗೀತ ಪೂಜೆಯಲ್ಲಿ ಬಳಸುವ ದೊಡ್ಡ ಕಾಂಸ್ಯತಾಳಗಳು.

**ಝಲ್ಲಕ**—(೧) ಇದು ಪ್ರಾಚೀನವಾದ ೧೦೮ ತಾಳಗಳಲ್ಲಿ ೧೦೪ನೆಯ ತಾಳ. ಇದರ ಅಂಗಗಳು ಒಂದು ಗುರು ಮತ್ತು ಎರಡು ಲಘು. ಇದರ ಒಂದಾವರ್ತಕ್ಕೆ ನಾಲ್ಕು ಮಾತ್ರೆಗಳು ಅಥವಾ ೧೬ ಅಕ್ಷರ ಕಾಲ.

(೨) ಇವು ದೊಡ್ಡ ಕಂಚಿನ ತಾಳಗಳು. ಇವಕ್ಕೆ ಝಲ್ಲಕಿ ಎಂದು ಹೆಸರು.

**ಝಂಕಾರಿ** (೧) ಈ ರಾಗವು ೧೯ನೆ ಮೇಳಕರ್ತ ಝಂಕಾರ ಧ್ವನಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೨೦ನೆ ಮೇಳಕರ್ತ ನಟಭೈರವಿಯ ಒಂದು ಜನ್ಯರಾಗವಾಗಿದೆ.

ಆ: ಸ ಗ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ರಿ ಸ

**ಝಂಕಾರಧ್ವನಿ** ಈ ರಾಗವು ೧೯ನೆ ಮೇಳಕರ್ತರಾಗ. ನಾಲ್ಕನೆ ವೇದ ಚಕ್ರದ ಮೊದಲನೆಯ ರಾಗ. ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಶುದ್ಧಧೈವತ ಮತ್ತು ಶುದ್ಧನಿಷಾದವು ಈ ರಾಗದ ಸ್ವರಸ್ಥಾನಗಳು ಷಡ್ಜವು ಗ್ರಹಾಂಶನ್ಯಾಸ. ಮಧ್ಯಮ ಧೈವತಗಳು ರಾಗಛಾಯಾ ಸ್ವರಗಳು. ಗಾಂಧಾರ ಧೈವತಗಳು ವಾದಿ ಸಂವಾದಿಗಳು ಸಾರ್ವಕಾಲಿಕವಾದ ದೀನರಸ ಪ್ರಧಾನರಾಗ. ಶ್ರೀತ್ಯಾಗರಾಜರ ಫಣಿಪತಿಶಾಯಿ ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ. ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ಈ ರಾಗದಲ್ಲಿ ಒಂದೊಂದು ಕೃತಿಯನ್ನು ರಚಿಸಿದ್ದಾರೆ.

**ಝಂಕಾರಭ್ರಮರಿ**—(೧) ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೧೯ನೆ ಮೇಳದ ಹೆಸರು.

(೨) ಈ ರಾಗವು ೧೯ನೆ ಮೇಳಕರ್ತ ಝಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಝಂಕಾರವಾಣಿ**—ಈ ರಾಗವು ೨೦ನೆ ಮೇಳಕರ್ತ ನಟಭೈರವಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ರಿ ಸ

**ಝಂಕಾರಶೀಲ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಝಂಝಾಟತಾಳ**—೧೭ನೆ ಶತಮಾನದ ತೆಲುಗು ಗ್ರಂಥವಾದ ರಾಗತಾಳ ಚಿಂತಾಮಣಿಯಲ್ಲಿ ಉಕ್ತವಾಗಿರುವ ಒಂದು ತಾಳ.

**ಝಾಂಜ್**—ಇದು ಬ್ರಹ್ಮತಾಳದ ಹೆಸರು. ಎಂಟು ಅಂಗುಲ ವ್ಯಾಸವಿರುವ ಈ ಒಂದು ಜೊತೆ ದೊಡ್ಡತಾಳವಾದ್ಯವನ್ನು ದೇವಾಲಯಗಳಲ್ಲಿ ಬಳಸುತ್ತಾರೆ.

**ಝಂಝಾಮಾರುತಂ ಸುಬ್ಬಯ್ಯರ್**—ಇವರು ೧೯ನೆ ಶತಮಾನದಲ್ಲಿದ್ದ ತಮಿಳುನಾಡಿನ ತಂಜಾವೂರಿನ ಸಂಗೀತ ವಿದ್ವಾಂಸರು. ಇವರು ತ್ರಿಸ್ಥಾಯಿಗಳಲ್ಲಿ ದ್ರುತಗತಿಯಲ್ಲಿ ಬಹು ಸುಲಲಿತವಾಗಿ ಹಾಡುತ್ತಿದ್ದರು. ಇವರನ್ನು ಮೈಸೂರಿನ ರಾಜಾಸ್ಥಾನದಲ್ಲಿ ಸನ್ಮಾನಿಸಿ ಝಂಝಾಮಾರುತಂ ಎಂಬ ಬಿರುದನ್ನು ನೀಡಿ ಗೌರವಿಸಿದರು.

**ಝಂಪಝಾಪು**—ಇದು ಪ್ರಾಚೀನವಾದತಾಳ. ಇದರ ಒಂದಾವರ್ತಕ್ಕೆ ಒಂದುಕಾಲು ಮಾತ್ರೆಗಳು ಅಥವಾ ೫ ಅಕ್ಷರಕಾಲ. ಇದರ ಅಂಗಗಳು ಒಂದು ದ್ರುತ, ಒಂದು ಅನುದ್ರುತ ಮತ್ತು ಒಂದು ದ್ರುತ. ಈ ತಾಳವು ಖಂಡಝಾಪು ಮತ್ತು ತಿಶ್ರರೂಪಕ ಎಂಬ ಹೆಸರಿನಲ್ಲಿ ಬಳಕೆಯಲ್ಲಿದೆ

**ಝಂಪತಾಳ**—ಇದು ಸೂಳಾದಿ ಸಪ್ತ ತಾಳಗಳಲ್ಲಿ ನಾಲ್ಕನೆಯದು. ಇದರ ಅಂಗಗಳು ಒಂದು ಮಿಶ್ರ ಜಾತಿ ಲಘು, ಒಂದು ಅನುದ್ರುತ ಮತ್ತು ಒಂದು ದ್ರುತ. ಇದರ ಒಂದಾವರ್ತಕ್ಕೆ ೧೦ ಅಕ್ಷರ ಕಾಲ ಅಥವಾ ಎರಡುವರೆ ಮಾತ್ರೆಗಳು.

**ಝಾಲಕೇಸರಿ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ದ ಪ ಮ ರಿ ಸ

**ಝಾಲವಮಂಜರಿ**—ಈ ರಾಗವು ೨೨ನೆ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ಪ ದ ಪ ಮ ರಿ ಸ ರಿ ಸ

**ಝಾಲವರಾಳಿ**—ಈ ರಾಗವು ೩೯ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನೀ ಸ

ಅ: ಸ ನಿ ದ ಪ ಮ ಗಾ ರಿ ಸ

ಇದು ಏಳನೆ ಋಷಿಚಕ್ರದ ಮೂರನೆಯರಾಗ. ಇದಕ್ಕೆ ಧಾಲಿವರಾಳಿ ಎಂಬ ಹೆಸರುಂಟು. ರಾಗಾಂಗರಾಗ. ಶುದ್ಧರಿಷಭ, ಶುದ್ಧಗಾಂಧಾರ, ಪ್ರತಿಮಧ್ಯಮ, ಶುದ್ಧಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ಗಾಂಧಾರವು ಈ ರಾಗದ ಸ್ವರಸ್ಥಾನಗಳು. ಗಾಂಧಾರವು ಈ ರಾಗದ ಜೀವ ಮತ್ತು ಛಾಯಾಸ್ವರ. ಷಡ್ಜವು ಗ್ರಹಾಂಶನ್ಯಾಸ. ಸಾರ್ವಕಾಲಿಕ ಮತ್ತು ಭಕ್ತಿರಸ ಪ್ರಧಾನವಾದ ರಾಗ. ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ಈ ರಾಗದಲ್ಲಿ ಕೃತಿಗಳನ್ನು ರಚಿಸಿದ್ದಾರೆ.

**ಝಿಂನಾವಳಿ**—ಈ ರಾಗವು ೩೯ನೆ ಮೇಳಕರ್ತ ಝಾಲವರಾಳಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ದ ನಿ ದ ನಿ

ಅ: ಸ ನಿ ದ ಪ ಮ ಗ ರಿ ಸ

**ಝೊಂಪಟತಾಳ**—ಮಧ್ಯಯುಗದ ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಆದಿತಾಳಕ್ಕೆ ಈ ಹೆಸರನ್ನು ಹೇಳಿದೆ. ಆದಿತಾಳವನ್ನು ತಿರುಗು ಮಾಡಿದರೆ ಝೊಂಪಟತಾಳ ವಾಗುತ್ತದೆ. ಕಥಕಳಿ ಹಾಡುಗಳಲ್ಲಿ ಇವಕ್ಕೆ ಝೆಂಪಟವೆಂದು ಹೆಸರು.

**ಝೊಂಬಕ**—ಕತ್ತಿನ ನರಗಳು ಉಬ್ಬಿಕಾಣುವಂತೆ ಕಷ್ಟಪಟ್ಟು ಹಾಡುವ ಗಾಯಕ. ಇದು ಗಾಯಕನ ದೋಷಗಳಲ್ಲಿ ಒಂದು ವಿಧ.

**ಝೊಮೂರ್**—ಬಂಗಾಳದ ಒಂದು ವಿಧವಾದ ಜನಪದಗೀತೆ.

**ಝೋರ**—ಇದು ಉತ್ತರ ಪ್ರದೇಶದ ಕುಮಾವ್ ಬೆಟ್ಟಗಳ ಪ್ರದೇಶದಲ್ಲಿ ಪ್ರಚಲಿತವಾಗಿರುವ ಒಂದು ಬಗೆಯ ಜನಪದ ನೃತ್ಯ ಇದರಲ್ಲಿ ಎಲ್ಲಾ ಜಾತಿಗಳ ಸ್ತ್ರೀಪುರುಷರು ಭಾಗವಹಿಸುತ್ತಾರೆ ಅವರು ವರ್ತುಲಾಕಾರದಲ್ಲಿ ಕುಣಿಯುತ್ತಾರೆ.

**ಟಿ**—ಕಾಪಾಲೀ, ಪೃಥ್ವೀ, ವೈಷ್ಣವೀ, ವಾರುಣೀ ಇತ್ಯಾದಿ ನಾನಾರ್ಥಗಳಿವೆ.

**ಟಕ್ಕರಾಗ**—ಇದು ಪುರಾತನ ತಮಿಳು ಸಂಗೀತದ ಒಂದು ಪಣ್ (ರಾಗ) ಇದು ಈಗಿನ ಕಾಂಭೋಜಿರಾಗಕ್ಕೆ ಸಮನಾದುದು.

**ಟಕ್ಕಾ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಗ ಗ ಮ ದ ನಿ ಸ

ಅ: ಸ ನಿ ಪ ಮ ಗ ಮ ಪ ರಿ ಗ ಸ

**ಟಾದಿನವ**—ಪೂರ್ವೀಕರು ೭೨ ಮೇಳಕರ್ತ ರಾಗಗಳ ಸಂಖ್ಯೆಯನ್ನು ಕಂಡು ಹಿಡಿಯಲು ಕಟಪಯಾದಿ ಸೂತ್ರವನ್ನು ಬಳಸಿದ್ದಾರೆ. ಈ ಸೂತ್ರವು ವರರುಚಿಯ ಸೂತ್ರ. ಟಾದಿನವ ಎಂದರೆ ಟ ಇಂದ ಒಂಭತ್ತು ಅಕ್ಷರಗಳು—ಟ ಠ ಡ ಢ ಣ ತ ಥ ದ ಧ.

**ಟಿಟ್ಟಿಭಧ್ವನಿ**—ಈ ರಾಗವು ೧೧ನೆ ಮೇಳಕರ್ತ ಕೋಕಿಲ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಟೀಕರಾಗ**—ಈ ರಾಗವು ೯ನೇ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಗ ಸ

**ಟ್ಯೂನಿಂಗ್‌ಫೋರ್ಕ್**—ಇದು ಲೋಹದಿಂದ ಮಾಡಲ್ಪಟ್ಟ ಒಂದು ಸಾಧನ. ಹಾಡಲು ಶ್ರುತಿ ಮಾಡಿಕೊಳ್ಳುವಾಗ ಆಧಾರ ಶ್ರುತಿಯನ್ನು ಇದರಿಂದ ಅವರವರ ಶಾರೀರಕ್ಕೆ, ವಾದ್ಯಕ್ಕೆ ತಕ್ಕಂತೆ ಇಟ್ಟು ಕೊಂಡು ಶ್ರುತಿ ಮಾಡಿಕೊಳ್ಳಬಹುದು.

**ಠ**—ವನಜ, ನಂದನ, ಜಿಹ್ವಾ, ಚಂದ್ರಮಂಡಲ ಎಂಬ ನಾನಾರ್ಥಗಳಿವೆ

**ಠಕ್ಕರಾಗ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಗ ಮ ದ ದ ನಿ ದ ಸಾ

ಅ: ಸ ದ ಮ ಗ ರಿ ಗ ಸ

**ಠಾಯ**—ಇವು ೧೬ನೆ ಶತಮಾನದಲ್ಲಿ ಕನ್ನಡನಾಡಿನಲ್ಲಿ ಪ್ರಾರಂಭವಾಗಿ ೧೮ನೆ ಶತಮಾನದ ಮಧ್ಯದವರೆಗೂ ಬಳಕೆಯಲ್ಲಿದ್ದುವು. ಪುರಂದರದಾಸರು, ತಾನಪ್ಪಾಚಾರ್ಯ ಮತ್ತು ವೆಂಕಟಮಖಿ ಮುಂತಾದವರು ಠಾಯ ರಚನೆಯಲ್ಲಿ ಪ್ರಸಿದ್ಧರಾದವರು. ಸಂಗೀತದ ಚತುರ್ದಂಡಿಗಳಲ್ಲಿ ಇದು ಎರಡನೆಯದು. ಈ ಸಂಗೀತ ರಚನೆಯನ್ನು ಗಾಯನಕ್ಕೂ ವಾದ್ಯಗಳಿಗೂ ಬೇರೆ ಬೇರೆ ರಚಿಸಿದ್ದರು. ಇವುಗಳಲ್ಲಿ ಗಾಯಕ ವಾದಕರು ತಮ್ಮ ಪಾಂಡಿತ್ಯವನ್ನು ತೋರಬಹುದಾಗಿತ್ತು. ಠಾಯುಗಳು ಈಗಿನ ತಾನದ ಹಾಗೆ ತಾಳನಿರ್ಬಂಧವಿಲ್ಲದೆ ವಿವಿಧ ಛಂದೋಲಯ ವಿನ್ಯಾಸವನ್ನು ಪ್ರಧಾನಲಕ್ಷಣವಾಗಿ ಹೊಂದಿದ್ದುವು. ಇವುಗಳನ್ನು ರಾಗಾಲಾಪನೆಗೆ ಮುಂಚೆ ಹಾಡುತ್ತಿದ್ದರು.

**ಡ**—ಕೌಮಾರೀ, ಯೋಗಿನೀ, ಪೃಥಿವೀ ಮುಂತಾದ ಅರ್ಥಗಳಿವೆ.

**ಡಮರು**—ಇದು ನಟರಾಜನು ಕೈಯಲ್ಲಿ ಹಿಡಿದಿರುವ ಪವಿತ್ರವಾದ್ಯ. ಮರದ ತುಂಡನ್ನು ಕೊರೆದು ಇದನ್ನು ತಯಾರಿಸುತ್ತಾರೆ. ಇದಕ್ಕೆ ಎರಡು ತೋಡಿದ ಮುಖಗಳಿದ್ದು ಮಧ್ಯಭಾಗದಲ್ಲಿ ಮರ ಸಂಕುಚಿತವಾಗಿರುತ್ತದೆ. ಎರಡು ಮುಖಗಳಿಗೆ ಕುರಿಯ ಅಥವಾ ಆಡಿನ ಚರ್ಮದ ಮುಚ್ಚಳಿಕೆಗಳನ್ನು ನೂಲಿನ ದಪ್ಪದಾರದಿಂದ ಬಿಗಿಯಲಾಗಿದೆ. ಮಧ್ಯದ ಸಂಕುಚಿತ ಭಾಗದಲ್ಲಿ ಮುಚ್ಚಳಿಕೆಗಳನ್ನು ಬಿಗಿಹಿಡಿದಿರುವ ದಾರಗಳನ್ನೆಲ್ಲಾ ಸೇರುವಂತೆ ಅವುಗಳ ಸುತ್ತಲೂ ಮತ್ತೊಂದು ದಾರವನ್ನು ಸುತ್ತಿ ಮುಚ್ಚಳಿಕೆಯ ದಾರಗಳನ್ನು ಬಿಗಿ ಮಾಡಲಾಗಿದೆ. ಈ ವಾದ್ಯದ ಹೊಳವನ್ನು

ಜೇಡಿಮಣ್ಣಿನಿಂದ ತಯಾರಿಸುವುದುಂಟು. ಮಧ್ಯದ ಸುತ್ತು ದಾರದ ಬದಿಯಲ್ಲಿ ದಪ್ಪನಾಗಿ ಗಂಟುಬಿಗಿದು, ವಾದ್ಯವನ್ನು ಸೊಂಟದಂತಿರುವ ಭಾಗದಲ್ಲಿ ಹಿಡಿದು ಅಲ್ಲಾಡಿಸಿದಾಗ, ಈ ಗಂಟು ಎರಡು ಮುಚ್ಚಳಿಕೆಗಳ ಮೇಲೆ ಬಡಿದು ನಾದವುಂಟು ಮಾಡುತ್ತದೆ. ಇದಕ್ಕೆ ಡಮುರುಕವೆಂದೂ ಹೆಸರಿದೆ.

**ಡಮರುಕಪ್ರಿಯ**—ಈ ರಾಗವು ೩೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ಡಮರುಯತಿ**— ಇದು ತಾಳ ದಶ ಪ್ರಾಣಗಳಿಗೆ ಸೇರಿದ ಒಂದು ಬಗೆಯ ಯತಿ. ಇದಕ್ಕೆ ವೇದಮಧ್ಯಮಯತಿ ಎಂದೂ ಹೆಸರು ಡಮರು ವಾದ್ಯದಲ್ಲಿ ಮಧ್ಯಭಾಗವು ಸೂಕ್ಷ್ಮವಾಗಿಯೂ ಎರಡು ಪಕ್ಕಗಳ ಭಾಗಗಳು ವಿಶಾಲವಾಗಿರುವ ರೀತಿಯಲ್ಲಿರುವ ಯತಿ. ತಾಳದ ಆವರ್ತದಲ್ಲಿ ಮಧ್ಯ ಕಡಿಮೆಯಾಗಿದ್ದು ಎರಡು ಕಡೆಗಳಲ್ಲಿ ಹೆಚ್ಚಾದ ಅಂಗಗಳಿರುತ್ತವೆ. ಇದು ಚಿಕ್ಕ ಮತ್ತು ದೊಡ್ಡ ಅಂಗಗಳ ಮಿಶ್ರಯತಿ.

**ಡವಸಂ**—ಇದೊಂದು ಬಗೆಯ ಅವನದ್ಧವಾದ್ಯ

**ಡಪ್ಪು**—ಇದು ಸುಮಾರು ಎರಡು ಅಡಿ ವ್ಯಾಸವಿರುವ ಗುಂಡಾದ ಒಂದು ತಮಟೆ ಗುಂಡಾಗಿರುವ ಬಳೆಯ ಒಂದು ಮುಖಕ್ಕೆ ಹಸುವಿನ ಚರ್ಮವನ್ನು ಎಳೆದು ಕಟ್ಟಲಾಗಿದೆ.

**ಡಮಾರ**—ಇವು ಕೋನಾಕಾರವಿರುವ ಒಂದು ಜೊತೆ ನಗಾರಿಗಳು. ಮರದ ತುಂಡನ್ನು ಕೊರೆದು ತಯಾರಿಸುತ್ತಾರೆ. ಚರ್ಮವನ್ನು ಬಾಯಿಗೆ ಪಸರಿಸಿ ಚರ್ಮದ ಪಟ್ಟಿಗಳಿಂದ ಎಳೆದು ಕಟ್ಟಿರುತ್ತಾರೆ. ನೇರವಾದ ಒಂದು ಕಡ್ಡಿ ಮತ್ತು ಬಾಗಿರುವ ಮತ್ತೊಂದು ಕಡ್ಡಿಯಿಂದ ಇವುಗಳನ್ನು ಬಾರಿಸುತ್ತಾರೆ. ಇವುಗಳನ್ನು ಒಂದು ಎತ್ತಿನ ಹೆಗಲಿನ ಮೇಲಿಟ್ಟು ಎತ್ತಿನ ಮೇಲೆ ಕುಳಿತವನು ಬಾರಿಸುತ್ತಾನೆ. ಈ ಎತ್ತು ದಕ್ಷಿಣ ಭಾರತದ ದೇವಾಲಯದ ಉತ್ಸವಗಳ ಮುಂಭಾಗದಲ್ಲಿರುತ್ತದೆ.

**ಡಲ್ಸಿಮರ್**—ಇದೊಂದು ತಂತೀವಾದ್ಯ. ತಂತಿಗಳನ್ನು ಒಂದು ಅನುರಣನ ಪೆಟ್ಟಿಗೆಯ ಮೇಲೆ ಕಟ್ಟಿರುತ್ತಾರೆ. ಇವುಗಳನ್ನು ಎರಡು ಸಣ್ಣ ಸುತ್ತಿಗೆಗಳಿಂದ ತಾಡಿಸಿ ನುಡಿಸುತ್ತಿದ್ದರು. ಸ್ವರಮಂಡಲವೆಂಬ ಪುರಾತನ ವಾದ್ಯವು ಇದಕ್ಕೆ ನಿದರ್ಶನ.

**ಡಾಕ್**—ಇದು ಉತ್ತರ ಭಾರತದಲ್ಲಿ ಬಳಕೆಯಲ್ಲಿರುವ ಢೋಲಿನಂತಹ ಒಂದು ದೊಡ್ಡವಾದ್ಯ.

**ಡಾಕ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

**ಡೆಕ್**—ಸಿಲಿಂಡರಿನ ಆಕಾರದ ಹೊಳವು ಇರುವ ಒಂದು ಮದ್ದಳೆ.

**ಡೇ. ಸಿ. ಆರ್**—ಇವರು ಆಂಗ್ಲರು. ಮದ್ರಾಸಿನಲ್ಲಿ ಸೈನ್ಯದ ಕ್ಯಾಪ್ಟನ್ ಹುದ್ದೆಯಲ್ಲಿದ್ದರು. ಇಲ್ಲಿದ್ದ ಕಾಲದಲ್ಲಿ ಸಂಗೀತದ ವಿಷಯದಲ್ಲಿ ಆಸಕ್ತಿವಹಿಸಿ ಅದರ ಅಧ್ಯಯನ ಮಾಡಿ 'ಮ್ಯೂಸಿಕ್ ಅಂಡ್ ಮ್ಯೂಸಿಕ್ ಇನ್‌ಸ್ಟ್ರುಮೆಂಟ್ಸ್ ಆಫ್ ಸದರನ್ ಇಂಡಿಯಾ ಅಂಡ್ ದಿ ಡೆಕನ್' ಎಂಬ ಉತ್ತಮ ಗ್ರಂಥವನ್ನು ಬರೆದು ೧೮೯೧ರಲ್ಲಿ ಪ್ರಕಟಿಸಿದರು. ಈ ಗ್ರಂಥದಲ್ಲಿ ದಕ್ಷಿಣ ಭಾರತೀಯ ಸಂಗೀತದ ಬಗ್ಗೆ ಹಲವು ಅಮೂಲ್ಯ ವಿಷಯಗಳು, ಸಂಗೀತ ವಿದ್ವಾಂಸರು ಮತ್ತು ವಾಗ್ಗೇಯಕಾರರ ಬಗ್ಗೆ ಟಿಪ್ಪಣಿಗಳು, ಸಂಸ್ಕೃತದ ಸಂಗೀತ ಶಾಸ್ತ್ರ ಗ್ರಂಥಗಳ ಪಟ್ಟಿ ಮತ್ತು ವಾದ್ಯಗಳ ಸುಂದರವಾದ ವರ್ಣಚಿತ್ರಗಳಿವೆ

ಡೇಂಗಿ—ದಕ್ಷಿಣ ಭಾರತದ ದೇವಾಲಯಗಳಲ್ಲಿ ಪೂಜಾಸಮಯದಲ್ಲಿ ವಿನಿಯೋಗ ವಾಗುವ ನವಸಂಧಿತಾಳಗಳಲ್ಲಿ ಒಂದು ಬಗೆಯ ತಾಳ.

**ಡೋಕ**—ಈ ರಾಗವು ೧ನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ಡೋಲಕ್**—ಡೋಲಕ್ ವಾದ್ಯವು ಡೋಲಿನಂತೆ ಇದ್ದರೂ ಆಕಾರದಲ್ಲಿ ಅದಕ್ಕಿಂತ ಚಿಕ್ಕದು. ದೊಡ್ಡ ಮರದ ತುಂಡನ್ನು ಕೊರೆದು ಹೊಳವನ್ನು ಮಾಡಿ, ಎರಡು ಮುಖಗಳಿಗೂ ಕುರಿ ಅಥವಾ ಆಡಿನ ಚರ್ಮದ ಮುಚ್ಚಳಿಕೆಯನ್ನು ಅಳವಡಿಸ ಲಾಗಿದೆ. ಇವುಗಳ ಮೇಲೆ ಮೃದಂಗಕ್ಕಿರುವಂತೆ ಕರಣೆಗಳಿಲ್ಲ. ಹೊಳವಿನ ಮಧ್ಯ ಭಾಗದಲ್ಲಿರುವ ಕಬ್ಬಿಣದ ಬಳೆಗಳಿಗೆ, ದಪ್ಪನಾದ ಹತ್ತಿಯ ಹಗ್ಗಗಳಿಂದ ಎರಡು ಮುಖದ ಚರ್ಮದ ಮುಚ್ಚಳಿಕೆಗಳನ್ನು ಬಿಗಿದು ಎಳೆದು ಕಟ್ಟಲಾಗಿದೆ. ಈ ಹಗ್ಗಗಳಿಗೆ ಶ್ರುತಿಯನ್ನು ಸರಿಪಡಿಸಲು ಅನುಕೂಲವಾಗುವಂತೆ ಲೋಹದ ಉಂಗುರ ಗಳನ್ನು ಅಳವಡಿಸಲಾಗಿದೆ ಕೋಲು ಮತ್ತು ಕೈಯಿಂದ ಈ ವಾದ್ಯವನ್ನು ನುಡಿಸಲಾಗುತ್ತದೆ. ಈ ವಾದ್ಯವನ್ನು ಜನಪದ ಗೀತ ನೃತ್ಯ ಮತ್ತು ಜಾತ್ರೆ ಇತ್ಯಾದಿ ಸಮಾರಂಭಗಳಲ್ಲಿ ಉಪಯೋಗಿಸುವರು. ದಕ್ಷಿಣ ಭಾರತದಲ್ಲಿ ಶಾಸ್ತ್ರೀಯ ಸಂಗೀತ ದಲ್ಲೂ ಈ ವಾದ್ಯವನ್ನು ಕೆಲವೊಮ್ಮೆ ನುಡಿಸುತ್ತಾರೆ.

**ಡೋಂಬಕ್ರಿಯಾ**—ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೩೦ ಬಗೆಯ ಭಾಷಾಂಗರಾಗಗಳಲ್ಲಿ ಇದೊಂದುರಾಗ.

**ಡೋಂಬುಳಿ**—ಇದು ಪ್ರಾಚೀನ ಪ್ರಸಿದ್ಧವಾದ ಅಷ್ಟೋತ್ತರ ಶತತಾಳಗಳಲ್ಲಿ ೭೮ನೆ ತಾಳ. ಇದರ ಅಂಗಗಳು ಎರಡು ಲಘುಗಳು ಮತ್ತು ಒಂದು ಅನದ್ರುತ ಮತ್ತು ಇದರ ಒಂದಾವರ್ತಕ್ಕೆ ೯ ಅಕ್ಷರಕಾಲ. ಅಥವಾ ಎರಡುಕಾಲು ಮಾತ್ರೆಗಳು.

ಕೆಲವು ಗ್ರಂಥಗಳಲ್ಲಿ ಇವರ ಅಂಗಗಳು ಮೂರು ಲಘು ಮತ್ತು ಒಂದು ಅನುದ್ರುತವೆಂದು ಹೇಳಿದೆ.

**ಡೌಮ್ಯ**—ಈ ರಾಗವು ೩೬ನೆ ಮೇಳಕರ್ತರಾಗ ವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ಸ

ಅ: ಸ ನಿ ದ ಪ ಮ ಗ ರಿ ಸ

**ಡೌರೇಯಣಿ**—ಈ ರಾಗವು ೫೩ನೆ ಮೇಳಕರ್ತ ಗಮನ ಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಡೌಲಿಕ**—ಈ ರಾಗವು ೧ನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ

ಅ: ಸ ನಿ ದ ಮ ಗ ರಿ ಸ

**ಡಂಕಾ**—ಇವು ಕುದುರೆಯ ಬೆನ್ನಿನ ಮೇಲೆ ಇರಿಸಿ ಹೊಡೆಯುವ ಕೋನಾಕಾರವಾಗಿರುವ ಎರಡು ನಗಾರಿಗಳು. ಇದರ ಮಧ್ಯ ಗುಂಡಾಗಿರುವ ಬಳೆ ಹಾಕಿರುತ್ತಾರೆ. ಕುದುರೆಯ ಮೇಲೆ ಕುಳಿತು ಈ ನಗಾರಿಗಳನ್ನು ಬಾರಿಸುತ್ತಾರೆ. ಕುದುರೆಯನ್ನು ಚೆನ್ನಾಗಿ ಅಲಂಕರಿಸುತ್ತಾರೆ. ದೇವಾಲಯಗಳ ಉತ್ಸವಗಳಲ್ಲಿ ಈ ಕುದುರೆಯು ಮುಂಭಾಗದಲ್ಲಿರುತ್ತದೆ.

**ಡಿಂಡಿಮ**—ಇದು ರಾಮಾಯಣದಲ್ಲಿ ಉಕ್ತವಾಗಿರುವ ಒಂದು ಚಿಕ್ಕಮದ್ದಲೆ. ಇದು ಪರ್ವವಾದ್ಯದ ಗುಂಪಿಗೆ ಸೇರಿದೆ.

**ಢ**—ಪೂರ್ವ, ಅರ್ಧನಾರೀಶ್ವರ, ವಿನಾಯಕ, ವಿಘ್ನೇಶ ಇತ್ಯಾದಿ ನಾನಾರ್ಥಗಳಿವೆ.

**ಢಕ್ಕ**—ಇದು ಎರಡು ಮುಖಗಳಿರುವ ದೊಡ್ಡ ಡೋಲಿನಂತಹ ವಾದ್ಯ. ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಇದು ಉಕ್ತವಾಗಿದೆ.

**ಢಾಲು**—ಇದು ದಶವಿಧ ಗಮಕಗಳಲ್ಲಿ ಒಂದು ವಿಧ–(ನೋಡಿ–ಗಮಕಗಳು)

**ಢೌಲಿ**—ಎರಡು ಮುಖಗಳಿರುವ ಒಂದು ಅವನದ್ಧವಾದ್ಯ

**ಢೇಂಕ**—ದಕ್ಷಿಣ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಪ್ರಚಲಿತವಿರುವ ಒಂದು ಬಗೆಯ ಕಿನ್ನರಿ. ಇದರ ಎರಡು ಕಡೆಗಳಲ್ಲಿ ಅನುರಣನಕ್ಕಾಗಿ ತೆಂಗಿನಕಾಯಿ ಚಿಪ್ಪುಗಳನ್ನು ಅಳವಡಿಸಲಾಗಿದೆ.

**ಢೇಂಕಿಕ**—ಪ್ರಾಚೀನ ಪ್ರಸಿದ್ಧವಾದ ಅಷ್ಟೋತ್ತರ ಶತತಾಳಗಳಲ್ಲಿ ಇದು ೬೦ನೆಯ ತಾಳ. ಇದರ ಅಂಗಗಳು. ಗುರು, ಲಘು ಮತ್ತು ಗುರು. ಇದರ ಒಂದಾವರ್ತಕ್ಕೆ ೫ ಮಾತ್ರೆಗಳು ಅಥವಾ ೨೦ ಅಕ್ಷರ ಕಾಲ. ಈ ತಾಳದ ರಚನೆಯು ರಗಣಕ್ಕೆ ಸಮನಾಗಿದೆ.

**ಢೋರಿಕ**—ಇದು ಹಂಸವಿಲಾಸವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಢೋಲು**—ಇದು ನಾಗಸ್ವರವಾದನದ ಪ್ರಮುಖ ತಾಳ ವಾದ್ಯ. ಇದಕ್ಕೆ ತಮಿಳಿನಲ್ಲಿ ತವಿಲ್ ಎಂದು ಹೆಸರು. ದಕ್ಷಿಣ ಭಾರತದಲ್ಲಿ ಇದನ್ನು ಅದ್ಭುತವಾಗಿ ನುಡಿಸುವ ವಾದಕರಿದ್ದಾರೆ. ದಪ್ಪನಾದ ಮರದ ತುಂಡನ್ನು ಕೊರೆದು ಹೊಳವು ಮಾಡಿ ಅದರ ಎರಡು ಮುಖಗಳಿಗೆ ಎಮ್ಮೆ ಅಥವಾ ಕುರಿಯ ಚರ್ಮವನ್ನು ಬಿಗಿಯಲಾಗಿದೆ ಎರಡು ಮುಖಗಳಿಗೂ ಮೊದಲು ಸೆಣಬು ನಾರಿನಲ್ಲಿ ದಪ್ಪನಾಗಿ ಬಳೆಗಳನ್ನು ಹೊಸೆದು ಸೇರಿಸಿ, ಈ ಬಳೆಗಳಿಗೆ ಚರ್ಮ ಬಿಗಿಯಾಗಿ ಪಸರಿಸಲಾಗಿದೆ. ಬಿಗಿತ ಚೆನ್ನಾಗಿ ನಿಲ್ಲಲು ಸೆಣಬು ನಾರಿನ ಬಳೆಗಳ ಮಧ್ಯೆ ಮಧ್ಯೆ ಚರ್ಮದ ಪಟ್ಟಿಗಳನ್ನು ತೂರಿಸಿ ಬಿಗಿಯಲಾಗಿದೆ. ಇದರ ಸಹಾಯದಿಂದ ವಾದ್ಯವನ್ನು ಬೇಕಾದ ಸ್ವರ ಮಟ್ಟಕ್ಕೆ ಶ್ರುತಿ ಮಾಡಿಕೊಳ್ಳಬಹುದು. ಎಡಮುಖದ ಚರ್ಮವನ್ನು ಸಣ್ಣ ಕೋಲಿನಿಂದಲೂ ಬಲಮುಖದ ಚರ್ಮವನ್ನು ಬಲಹಸ್ತದ ಅಂಗೈ ಮತ್ತು ಬೆರಳುಗಳಿಂದ ನುಡಿಸುತ್ತಾರೆ. ರಣಢೋಲು ಯುದ್ಧದ ವಾದ್ಯ

**ಢೋಲ್ಕಿ**—ದಖನ್ನಿನ ಹೆಂಗಸರು ನುಡಿಸುವ ಒಂದು ಸಣ್ಣ ಢೋಲು.

**ಢಂಕಾ**—ದಕ್ಷಿಣ ಭಾರತದ ದೇವಾಲಯಗಳ ಉತ್ಸವಗಳಲ್ಲಿ ಈ ನಗಾರಿಯನ್ನು ಕುದುರೆಯ ಬೆನ್ನಿನ ಮೇಲಿಟ್ಟು ಕೊಂಡು ಬಾರಿಸುತ್ತಾರೆ.

**ಢಂಕಿ**—ದಕ್ಷಿಣ ಭಾರತದ ದೇವಾಲಯಗಳಲ್ಲಿ ಮುಖವೀಣೆಗೆ ತಾಳವಾದ್ಯವಾಗಿ ಬಳಸುವ ಒಂದು ಅವನದ್ಧವಾದ್ಯ.

**ತ**—ಹರಿ, ಶಕ್ತೀ, ಕಾಮಿನೀ, ವಾರಾಹೀ ಇತ್ಯಾದಿ ನಾನಾರ್ಥಗಳಿವೆ.

**ತಚ್ಚೂರು ಶಿಂಗರಾಚಾರ್ಲು ಸಹೋದರರು**—ಇವರಿಬ್ಬರೂ ಆಂಧ್ರದ ಶ್ರೀವೈಷ್ಣವ ಬ್ರಾಹ್ಮಣರು. ಆನಂದ ಗಜಪತಿ ಮಹಾರಾಜ ವಿಜಯನಗರದಲ್ಲಿ ಆಳುತ್ತಿದ್ದಾಗ ಇದ್ದವರು ಶ್ಯಾಮಾಶಾಸ್ತ್ರಿಗಳ ಪುತ್ರ ಸುಬ್ಬರಾಯ ಶಾಸ್ತ್ರಿಗಳ ದತ್ತು ಪುತ್ರ ಅಣ್ಣಾಸ್ವಾಮಿ ಶಾಸ್ತ್ರಿಗಳ ಶಿಷ್ಯರಾಗಿ ಸಂಗೀತ ವಿದ್ವಾಂಸರಾದರು. ಇವರಿಬ್ಬರೂ ಪ್ರಸಿದ್ಧವಾಗ್ಗೇಯಕಾರರಾಗಿದ್ದೂ ಅನೇಕ ಕೃತಿಗಳನ್ನೂ ಜಾವಳಿಗಳನ್ನೂ ರಚಿಸಿದ್ದಾರೆ ಇದಲ್ಲದೆ ಅನೇಕ ವಾಗ್ಗೇಯಕಾರರ ರಚನೆಗಳನ್ನೂ, ಜಾವಳಿಗಳು, ಸ್ವರಜತಿಗಳು, ವರ್ಣಗಳು ಮತ್ತು ತಮ್ಮ ಕೀರ್ತನೆಗಳನ್ನೂ ಹಲವು ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ. ಗಾಯಕ ಪಾರಿಜಾತಂ, ಗಾಯಕಲೋಚನಂ, ಗಾನೇಂದುಶೇಖರಂ, ಭಾಗವತ ಸಾರಾಮೃತಂ, ಸ್ವರಮಂಜರಿ, ಸಂಗೀತ ಕಲಾನಿಧಿ ಮುಂತಾದ ಗ್ರಂಥಗಳನ್ನು ಪ್ರಕಟಿಸಿ ಸಂಗೀತಕ್ಕೆ ಉತ್ತಮ ಸೇವೆಸಲ್ಲಿಸಿದ್ದಾರೆ. ಇವರ ರಚನೆಗಳಲ್ಲಿ ಸಾಮಿ ನೆಡಬಾಸಿ (ದೇವಮನೋಹರಿ), ಎನ್ನಾಳ್ಳು (ಝಂಝೂಟಿ) ಎಂಬ ಜಾವಳಿಗಳೂ, ದೇವಿ ಮೀನಾಕ್ಷಿ (ಕಲ್ಯಾಣಿ), ಶ್ರೀಶಾರದೆ (ಶಹನಾ) ಪಾವನ ಮಧುರಾನಿಲಯೇ (ಕಲ್ಯಾಣಿ) ಎಂಬ ಕೃತಿಗಳು ಪ್ರಸಿದ್ಧವಾದುವು. ಇವರು

ಪಿಟೀಲು ವಿದ್ವಾಂಸರಾಗಿದ್ದರು. ಹಿರಿಯ ಶಿಂಗರಾಚಾರ್ಲು ಮದ್ರಾಸಿನ ಪಚ್ಚಯಪ್ಪ ಕಾಲೇಜಿನಲ್ಲಿ ತೆಲುಗು ಪಂಡಿತರಾಗಿದ್ದರು.

**ತತವಾದ್ಯಗಳು**—ಸಂಗೀತವಾದ್ಯಗಳನ್ನು ತಂತೀವಾದ್ಯಗಳು ಅಥವಾ ತತವಾದ್ಯಗಳು, ಸುಷಿರವಾದ್ಯಗಳು ಅಥವಾ ಗಾಳಿಯ ಸಹಾಯದಿಂದ ನುಡಿಯುವ ವಾದ್ಯಗಳು ಮತ್ತು ಅವನದ್ಧ ಅಥವಾ ತಾಡನವಾದ್ಯಗಳು ಎಂದರೆ ಮುಚ್ಚಳಿಕೆ ಹೊಂದಿ ಅಥವಾ ಹೊಂದದೆ ತಾಳಗತಿಯನ್ನು ಅನುಸರಿಸಿ ತಾಡನದಿಂದ ನುಡಿಯುವ ವಾದ್ಯಗಳೆಂದು ವರ್ಗೀಕರಣ ಮಾಡಲಾಗಿದೆ ತಂತೀವಾದ್ಯಗಳನ್ನು (೧) ಮಿಾಟಿನಿಂದ ನುಡಿಯುವುವು (೨) ಕಮಾನಿನಿಂದ ನುಡಿಯುವುವು (೩) ಕಡ್ಡಿ ಅಥವಾ ಸುತ್ತಿಗೆ ಯಿಂದ ನುಡಿಯುವುವು ಎಂದು ವರ್ಗೀಕರಿಸಬಹುದು. ಇವುಗಳು ಯಾವುವೆಂದರೆ ಏಕನಾದ ಅಥವಾ ಏಕ್‌ತಾರ್, ತಂಬೂರಿ, ತುಂಕಿನ, ವೀಣೆ, ಸಿತಾರ್, ಕಿನ್ನರಿ, ರುದ್ರವೀಣೆ, ಸ್ವರಬತ್, ಗೋಟುವಾದ್ಯ, ಸ್ವರಮಂಡಲ, ಬಾಲ ಸರಸ್ವತಿ, ದಿಲ್‌ರುಬಾ, ರಬಾಬ್, ಸಾರಂಗಿ, ಪಿಟೀಲು, ಬೀನ್. ಸೂರ್‌ಬಹಾರ್, ಸರೋಡ್, ಇಸರಾಜ್ (ಮಂದ್ರ ಬಹಾರ್), ಸಂತೂರ್.

**ತತ್ಪುರುಷ**—ಶಿವನ ಪಂಚಮುಖಗಳಲ್ಲಿ ಇದೊಂದು ಮುಖ. ಸದ್ಯೋಜಾತ, ತತ್ಪುರುಷ, ಈಶಾನ, ಅಘೋರ, ವಾಮದೇವ ಇವು ಈಶ್ವರನ ಪಂಚಮುಖಗಳು. ತ್ಯಾಗರಾಜರು ತಮ್ಮ ಚಿತ್ತರಂಜನಿ ರಾಗದ 'ನಾದತನುಮನಿಶಂ' ಎಂಬ ಕೃತಿಯಲ್ಲಿ ಸ ರಿ ಗ ಮ ಪ ದ ನಿ ಎಂಬ ವರಸಪ್ತ ಸ್ವರಗಳು (ಸದ್ಯೋಜಾತಾದಿ ಪಂಚವಕ್ತ್ರಜ) ಈಶ್ವರನ ಪಂಚಮುಖಗಳಿಂದ ಹುಟ್ಟಿದುವು ಎಂದಿದ್ದಾರೆ. ಅವಿಕೃತ ಸ್ವರಗಳಾದ ಸ ಮತ್ತು ಪ ಗಳು ಪಾರ್ವತಿಯಿಂದಲೂ, ವಿಕೃತ ಸ್ವರಗಳಾದ ಮಿಕ್ಕ ಐದು ಸ್ವರಗಳು ಶಿವನ ಪಂಚಮುಖಗಳಿಂದ ಹುಟ್ಟಿದುವು ಎಂದು ಇಲ್ಲಿ ತಿಳಿಯಬೇಕು

**ತನುಕೀರ್ತಿ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ

ಆ: ಸ ರಿ ಮ ಪ ನಿ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ತಪಸ್ವಿನಿ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಸ

**ತಪೋಲ್ಲಾಸಿನಿ**—ಈ ರಾಗವು ೧ನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ದ ನಿ ಸ

ಅ: ಸ ದ ಪ ಗ ರಿ ಸ

**ತಬಲ**—ಪ್ರಾಚೀನ ಅರೇಬಿಯಾ ದೇಶದ ಖಂಜರಿಯ ಜಾತಿಗೆ ಸೇರಿದ ಡಫ್ ಎಂಬ ಚರ್ಮ ಅವನದ್ಧ ವಾದ್ಯವು ತಬಲದ ಮೂಲವೆಂದು ಹೇಳಬಹುದು. ಇದರೊಂದಿಗೆ ಒಂದು ಮುಖದಲ್ಲಿ ಚರ್ಮಹೊದಿಸಿದ್ದ ಉದ್ದನಾದ ಇನ್ನೊಂದು ವಾದ್ಯವನ್ನು ಉಪಯೋಗಿಸಿ ಅರೇಬಿಯದ ಹೆಂಗಸರು ತಮ್ಮ ಲಘು ಸಂಗೀತಕ್ಕೆ ಪಕ್ಕವಾದ್ಯವಾಗಿ ಉಪಯೋಗಿಸುತ್ತಿದ್ದರು. ಡಫ್ ಮತ್ತು ತಬಲಾಗಳನ್ನು ಮೊದಲು ನಿರ್ಮಿಸಿದವನು ಅರೇಬಿಯಾದ ಜೂಬಲ್ ಎಂಬುವನ ಮಗ ಟ್ಯೂಬಲ್ ಎಂಬುವನೆಂದು ಹೇಳುತ್ತಾರೆ. ಹಿಂದೆ ಎಲ್ಲಾ ಚರ್ಮವಾದ್ಯಗಳನ್ನೂ ತಬಲ್ ಎಂದು ಕರೆಯುತ್ತಿದ್ದರು. ಉದಾ: ತಬಲ್‌ನಕಡಾ, ತಬಲ್-ಅಲ್-ಮರ್ಕಾದ್, ತಬಲ್‌ಅಲ್-ಮುಖನ್ನಾತ್ ಇತ್ಯಾದಿ.

ಉತ್ತರ ಭಾರತದಲ್ಲಿ ತಬಲಾ ಅತಿಮುಖ್ಯವಾದ ತಾಳವಾದ್ಯ. ಪಖಾವಜ್‌ನ್ನು ಇಬ್ಭಾಗಿಸಿ ಎದ್ದು ನಿಲ್ಲಿಸಲು ತಬಲಾ ವಾದ್ಯದ ಕಲ್ಪನೆಯುಂಟಾಗುತ್ತದೆ. ಎಡಗೈಯಿಂದ ನುಡಿಸಲ್ಪಡುವ ಭಾಗಕ್ಕೆ ಡಗ್ಗಾ ಅಥವಾ ಬಾಯಾ ಎಂದೂ, ಬಲಗೈಯಿಂದ ನುಡಿಸುವ ವಾದ್ಯಕ್ಕೆ ತಬಲಾ ಎಂದೂ ಹೆಸರು. ೧೩ನೆ ಶತಮಾನದಲ್ಲಿದ್ದ ಅಮೀರ್ ಖುಸ್ರೋವಿನ ಮುಖಾಂತರವಾಗಿ ಈ ವಾದ್ಯವು ಪ್ರಚಾರದಲ್ಲಿ ಬಂದಿತು. ಮರದ ದಿಮ್ಮಿಯನ್ನು ಅಳತೆಗೆ ಸರಿಯಾಗಿ ಕೊಯ್ದು, ಎರಡು ಹೋಳುಗಳನ್ನು ಕೊರೆದು, ಈ ಎರಡು ಭಾಗಗಳೂ ಕೊಳಗದ ರೂಪಕ್ಕೆ ತಯಾರಾಗುತ್ತವೆ. ಬಲಗೈಯಿಂದ ನುಡಿಸಲ್ಪಡುವ ಕೊಳಗದ ತೆರೆದ ಬಾಯಿ ಸ್ವಲ್ಪ ಚಿಕ್ಕದಾಗಿದ್ದು ಕುರಿಯ ಚರ್ಮದ ಹೊದಿಕೆ ಹೊಂದುತ್ತದೆ. ಇದರ ಮೇಲೆ ಇನ್ನೂ ಸ್ವಲ್ಪ ದಪ್ಪ ಚರ್ಮದ ಅಂಚುರೆಪ್ಪೆ ಸುತ್ತಲೂ ಇರುತ್ತದೆ. ಮೇಲ್ಭಾಗದ ಸುತ್ತಲೂ ಚರ್ಮದ ಪಟ್ಟಿಗಳಿಂದ ಹೆಣೆದ ಚರ್ಮದ ಬಳೆ ಜೋಡಿಸಿ, ಈ ಚರ್ಮದ ಬಳೆಯ ಸುತ್ತಲೂ ಸುಮಾರು ಎಂಟು ಸ್ಥಳಗಳಲ್ಲಿ ಚರ್ಮದ ಪಟ್ಟಿಗಳು ತೂರಿ ಬರುತ್ತವೆ. ಈ ಪಟ್ಟಿಗಳನ್ನು ಹೊಳವಿನ ಮುಚ್ಚಿದ ಕೆಳಭಾಗಕ್ಕೆ ಅಳವಡಿಸಿದ ಕಬ್ಬಿಣದ ಬಳಕೆಗೆ ಬಿಗಿಯಲಾಗಿದೆ. ಈ ಪಟ್ಟಿಗಳ ಕೆಳಗೆ ಹೊಳವಿನ ಹೊಟ್ಟೆಯ ಮೇಲೆ, ಮರದ ಸಣ್ಣ ಸಣ್ಣ ತುಂಡುಗಳನ್ನು ಸಿಕ್ಕಿಸಲಾಗಿದೆ. ಈ ತುಂಡುಗಳಿಗೆ ಗಟ್ಟೆಗಳೆಂದು ಹೆಸರು. ಇವುಗಳನ್ನು ಮೇಲಕ್ಕೆ ಕೆಳಕ್ಕೆ ಸಣ್ಣ ಸುತ್ತಿಗೆಯಿಂದ ಜರುಗಿಸಿ, ಶ್ರುತಿಯನ್ನು ಸರಿಮಾಡಿಕೊಳ್ಳಲು ಅನುಕೂಲವಾಗಿದೆ. ಹೊಳವಿನ ಮೇಲ್ಭಾಗದ ಚರ್ಮದ ಮುಚ್ಚಳಿಕೆಯ ಸುತ್ತಲೂ ಅಂಚಿನಲ್ಲಿ ಸುಮಾರು ಒಂದು ಕಾಲು ಅಂಗುಲ ಅಗಲವಿರುವ ಭಾಗಕ್ಕೆ ರೆಪ್ಪೆ ಎಂದು ಹೆಸರು ಬೆರಳಿನಿಂದ ಈ ರೆಪ್ಪೆಯ ಮೇಲೆ ನುಡಿಸುವ ಕ್ರಿಯೆಗೆ ಮಿಾಟು ಎಂದು ಹೆಸರು. ಮೇಲ್ಭಾಗದ ಮುಚ್ಚಳಿಕೆಯ ಮಧ್ಯಭಾಗದಲ್ಲಿ ರೆಪ್ಪೆಯಿಂದ ಸುಮಾರು ಮುಕ್ಕಾಲು ಅಂಗುಲಬಿಟ್ಟು ಪೂರ್ಣಚಂದ್ರಾಕಾರದ ಕಪ್ಪು ಕರಣೆ ಹಾಕಿರುತ್ತಾರೆ. ಕೈಯನ್ನು ಈ ಭಾಗದ ಮೇಲೆ ತಾಡಿಸುವ ಕ್ರಿಯೆಗೆ ಥಾಪು ಎಂದು ಹೆಸರು. ಬಿಗಿತ ಬರಲು ಹಾಕುವ ಸುತ್ತು ಚರ್ಮದ ಪಟ್ಟಿಗಳ ಬದಲಾಗಿ ಈಚೆಗೆ ಲೋಹದ

ತಿರುಗಣೆ ಕಂಬಿಗಳನ್ನು ಅಳವಡಿಸುವ ಅಭ್ಯಾಸ ಬಂದಿದೆ ಇವುಗಳ ಸಹಾಯದಿಂದ ಜಾಗ್ರತೆಯಾಗಿ ತಬಲಾವನ್ನು ಶ್ರುತಿಗೂಡಿಸಬಹುದು.

ಬಾಯಾವನ್ನು ಮೊದಲು ಮರದಿಂದ ಮಾಡುತ್ತಿದ್ದರು. ಈಗ ಹಿತ್ತಾಳೆ, ತಾಮ್ರ ಅಥವಾ ಉಕ್ಕು ಇತ್ಯಾದಿ ಧಾತುವಿನಿಂದ ಮಾಡುತ್ತಾರೆ. ಇದಕ್ಕೆ ಚರ್ಮದ ಮುಚ್ಚಳಿಕೆ ಹಾಳಿ ಹಗ್ಗಗಳಿಂದ ಬಿಗಿಯುವ ರೂಢಿಯಾಗಿದೆ. ಮುಚ್ಚಳಿಕೆಯಲ್ಲಿ ಅಂಚಿನ ರೆಪ್ಪೆಯಿಂದ ಒಂದು ಅಂಗುಲ ಬಿಟ್ಟು, ಒಂದು ಪಕ್ಕಕ್ಕೆ ಕರಣೆ ಹಾಕಿದೆ. ಸುಲಭವಾಗಿ ಶ್ರುತಿಗೂಡಿಸಲು, ಬಿಗಿಯುವ ಹತ್ತಿಯ ಹಗ್ಗಗಳಿಗೆ ಉಂಗುರಗಳು ಅಳವಡಿಸಲ್ಪಟ್ಟವೆ

ತಬಲಾವಾದನದ ಕೌಶಲ್ಯವು ಪಖಾವಜ್‌ನ ಪದ್ಧತಿಗಿಂತ ಭಿನ್ನವಾದುದು. ಪಖಾವಜ್‌ನಲ್ಲಿ ಖುಲ್ಲಾ ಬೋಲ್‌ಗಳಿದ್ದರೆ ತಬಲಾದಲ್ಲಿ ಬಂದ್ ಬೋಲ್‌ಗಳಿರುತ್ತವೆ. ಇದಕ್ಕೆ ಕಿನಾರ ಅಥವಾ ಚಾಟಗಳ ಮೇಲೆ ನುಡಿಯುವ ಬೋಲ್‌ಗಳೆಂದು ಹೆಸರು. ಕಾಯದಾ, ಪೇಶಕಾರ್, ಗತ್, ತುಕಡಾ, ಮುಖಡಾ, ಮೊಹರಾ ಇತ್ಯಾದಿ ವಾದನ ವೈವಿಧ್ಯತೆಗಳಿಂದ ತುಂಬಿದ ತಬಲಾ ವಾದನವು ಆಕರ್ಷಕವಾಗಿರುತ್ತದೆ. ದಿಲ್ಲಿಬಾಜ, ಪೂರಬ, ಅಜರಾಡ್, ಪಂಜಾಬಿ, ಬನಾರಸ್ ಎಂಬ ಪರಂಪರಾಗತವಾದ ವಾದನ ಶೈಲಿಗಳು ಕಂಡು ಬರುತ್ತವೆ.

ಅನೋಖಲಾಲ್ ಮಿಶ್ರ, ಅಮಿರಾರ್ ಹುಸೇನ್‌ಖಾನ್, ಅಲ್ಲಾರ್‌ಖಾನ್, ಅಹಮದ್‌ಜಾನ್ ತಿರಕ್ವಾ ಅಬೀದ್ ಹುಸೇನ್‌ಖಾನ್, ಕಂಠೆ ಮಹಾರಾಜ್, ಕರಾಮತ್ತುಲ್ಲಾಖಾನ್, ಕಿಶನ್ ಮಹಾರಾಜ್, ಗಣೇಶ ಚತುರ್ವೇದಿ, ಜೋರಾವರ್ ಸಿಂಹ, ನಥೂಖಾನ್, ನನ್ನೂಸಹಾಯ್, ನನ್ನೇಖಾನ್, ಪ್ರಸನ್ನಕುಮಾರ್ ಮಾಣಿಕ್ಯ, ಬಾಜಾಮಿಶ್ರ, ಬಾಬುರಾವ್ ಗೋಖಲೆ, ಬೀರುಮಿಶ್ರ, ಭೈರವಪ್ರಸಾದ್, ಭೈರವ್ ಸಹಾಯ್, ಮಹಬೂಬ್‌ಖಾನ್ ಮಿರಜ್‌ಕರ್, ಮುನೀರ್‌ಖಾನ್, ಮೌಲವಿರಾಮ್ ಮಿಶ್ರ, ಮೌಲಾಬಖ್ಶ, ರಾಮುಸಹಾಯ್, ಶಾಂತಾ ಪ್ರಸಾದ್‌ಮಿಶ್ರ, ಸಖದೇವ ಸಿಂಹ, ಹಬೀಬುದ್ದೀನ್ ಖಾನ್, ಚತುರ್‌ಲಾಲ್ ಮುಂತಾದವರು ಹೆಸರಾಂತ ತಬಲಾವಾದಕರು.

**ತಬಲಾತರಂಗ್**—ನುಡಿಸಬೇಕಾದ ರಾಗ ಮತ್ತು ರಚನೆಗೆ ಬೇಕಾಗುವಷ್ಟು ಸ್ವರಗಳನ್ನು ಮಾತ್ರ ನುಡಿಯುವ ಸಂಖ್ಯೆಯಲ್ಲಿ ತಬಲಾಗಳನ್ನು ಬೇಕಾದ ಆಧಾರ ಶ್ರುತಿಗೆ ಹೊಂದಿಸಿಕೊಂಡು ನುಡಿಸುತ್ತಾರೆ. ಈ ರೀತಿ ತಬಲಾಗಳ ನುಡಿಕೆಯಿಂದಲೇ ಸಂಗೀತ ರಚನೆ ನುಡಿಸುವುದಕ್ಕೆ 'ತಬಲಾತರಂಗ್' ಎಂದು ಹೆಸರು. ಸ್ವರ ವೈವಿಧ್ಯಕ್ಕೆ ತಕ್ಕಂತೆ ತಬಲಾಗಳು ಗಾತ್ರದಲ್ಲೂ ಕರಣೆಗಳಲ್ಲೂ ವ್ಯತ್ಯಾಸ ಹೊಂದಿರುತ್ತವೆ.

**ತಮಸ್ವಿನಿ**—(೧) ಈ ರಾಗವು ೪ನೆ ಮೇಳಕರ್ತ ವನಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ದ ಪ ಗ ರಿ ಸ

**ತನೋಕ್ರಾಣಿ**—ಈ ರಾಗವು ೩೨ನೆ ಮೇಳಕರ್ತ ರಾಗವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ತರುಣೀಪ್ರಿಯಾ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ದ ಸ

ಅ: ಸ ನಿ ಪ ಮ ರಿ ಸ

**ತರಂಗ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ತರಂಗಲೀಲ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ದ ಮ ನಿ ಸ

ಅ: ಸ ನಿ ಮ ಗ ರಿ ಸ

**ತರಂಗಿಣಿ**—ಈ ರಾಗವು ೨೬ನೆ ಮೇಳಕರ್ತ ಚಾರುಕೇಶಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ದ ಸ

ಅ: ಸ ನಿದ ಪ ಮ ಗ ರಿ ಸ

**ತರಣಿಪ್ರಿಯಾ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ತಲಮುಖ**—ಇದು ಭರತನಾಟ್ಯದ ಒಂದು ವಿಶೇಷ ಹಸ್ತಮುದ್ರೆ. ಚತುರಶ್ರ ಹಸ್ತಗಳನ್ನು ಅಂಗೈಗಳೆದುರಾಗಿ ಇರುವಂತೆ ಅಡ್ಡವಾಗಿ ಹಿಡಿಯುವುದು ತಲಮುಖಹಸ್ತ.

**ತಲ್ಪ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಮ ಗ ಸ

**ತವಿಲ್**—ನಾಗಸ್ವರದ ಪ್ರಮುಖ ತಾಳವಾದ್ಯವಾದ ಢೋಲ್ ವಾದ್ಯಕ್ಕೆ ತಮಿಳಿನಲ್ಲಿ ತವಿಲ್ ಎನ್ನುತ್ತಾರೆ.

**ತಾತಾಚಾರ್ ಟಿ. ಎಸ್.** (೧೯೧೭)—ತಾತಾಚಾರ್ಯರು ಪಾವಗಡದಲ್ಲಿ ಪಿಟೀಲು ವಿದ್ವಾಂಸರಾಗಿದ್ದ ಟಿ. ಶ್ರೀನಿವಾಸಾಚಾರ್ಯರ ಪುತ್ರನಾಗಿ ೧೯೧೭ರಲ್ಲಿ ಜನಿಸಿದರು. ಇವರ ಚಿಕ್ಕಪ್ಪ ಟಿ. ಶೇಷಾಚಾರ್ಯರೂ ಪಿಟೀಲುವಾದಕರಾಗಿದ್ದರು. ತಾತಾಚಾರ್ಯರು ಪಾವಗಡದಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಮಾಡಿ ಬೆಂಗಳೂರಿಗೆ ಬಂದು ಕೋಟೆ ಹೈಸ್ಕೂಲಿನಲ್ಲೂ, ಅನಂತರ ಕಾಲೇಜಿನಲ್ಲಿ ಇಂಟರ್ ಮೀಡಿಯೇಟ್ ಶಿಕ್ಷಣವನ್ನು ಪಡೆದರು. ಬೆಂಗಳೂರು ಗಾಯನ ಸಮಾಜದಲ್ಲಿ ನಡೆಯುತ್ತಿದ್ದ ಸಂಗೀತ ಕಚೇರಿಗಳನ್ನು ಕೇಳಿ ಇವರ ಸಂಗೀತದ ಹಂಬಲ ಬಲವಾಯಿತು. ಮೊದಲು ವೀಣೆ ಕೃಷ್ಣಮಾಚಾರ್ಯರ ಆರ್ಯಗಾನ ವಿದ್ಯಾಲಯದಲ್ಲಿ ಸಂಗೀತ ಶಿಕ್ಷಣ ಪಡೆದು ನಂತರ ೧೯೩೫ರಲ್ಲಿ ಮೈಸೂರಿಗೆ ಹೋಗಿ ರಾಳ್ಲಪಲ್ಲಿ ಅನಂತ ಕೃಷ್ಣಶರ್ಮರ ಶಿಷ್ಯರಾದರು. ೧೯೩೮ರಲ್ಲಿ ಮದ್ರಾಸಿನ ಬಾನುಲಿ ಕೇಂದ್ರದಿಂದ ಪಿಟೀಲು ಕಚೇರಿಗಳನ್ನು ಮಾಡಲಾರಂಭಿಸಿ, ಅಲ್ಲಿಯ ವಿದ್ವಾಂಸರಾಗಿ ನೇಮಕ ಗೊಂಡರು. ಎರಡನೆ ಮಹಾಯುದ್ಧದ ಕಾಲದಲ್ಲಿ ಮದ್ರಾಸನ್ನು ಬಿಟ್ಟು ಮೈಸೂರಿಗೆ ಬಂದು ಡಾ ಗೋಪಾಲಸ್ವಾಮಿಯವರ ಆಕಾಶವಾಣಿಯಲ್ಲಿ ೧೯೪೨ರಲ್ಲಿ ಕಲಾವಿದ ರಾದರು ಇಲ್ಲಿ ಅರಿಯಕುಡಿ, ಮಹಾರಾಜಪುರಂ ವಿಶ್ವನಾಥ ಅಯ್ಯರ್, ಚೆಂಬೈ ಮುಂತಾದ ಹಿರಿಯ ಕಲಾವಿದರೊಡನೆ ಕಲೆಯುವ ಸುಯೋಗದಿಂದ ಸಂಪೂರ್ಣ ಪ್ರಯೋಜನ ಪಡೆದರು ಆಕಾಶವಾಣಿಯ ಕೇಂದ್ರವು ಬೆಂಗಳೂರಿಗೆ ವರ್ಗಾಯಿಸಲ್ಪಟ್ಟ ಮೇಲೆ ಬೆಂಗಳೂರಿನಲ್ಲಿ ನೆಲೆಸಿದರು. ಅಲ್ಲಿಯ ಕಲಾವಿದರಾಗಿ ದೀರ್ಘಕಾಲ ಸೇವೆ ಸಲ್ಲಿಸಿ ವಿಶ್ರಾಂತರಾಗಿದ್ದಾರೆ. ಇವರು ಸರಳರು, ಸಹೃದಯರು. ಉತ್ತಮ ಭಾವಜ್ಞರಾದ ಹಿರಿಯ ಪಿಟೀಲು ವಿದ್ವಾಂಸರಾಗಿದ್ದಾರೆ.

**ತಾನ**—'ತನ್ಯತೇ ವಿಸ್ತಾರ್ಯತೇ ಇತಿತಾನಃ' ತಾನವು ರಾಗಾಲಾಪನೆಯ ಒಂದು ಮುಖ್ಯಭಾಗ. ರಾಗವರ್ಧಿನಿಯ ನಂತರ ಮಧ್ಯಮ ಕಾಲ ಅಥವಾ ತಾನವು ಬಹಳ ಕುತೂಹಲಕಾರಿಯಾದ ಭಾಗ. ಯಾವುದು ಕೆಲವು ಸ್ವರಗಳ ಬೇರೆ ಜೇರೆ ಸಮೂಹಗಳಿಂದ ರಾಗವಿಸ್ತಾರ ಮಾಡಲ್ಪಡುತ್ತದೋ ಅದು ತಾನ ಇದರಲ್ಲಿ ಲಯ ಮತ್ತು ನಾದಗಳೆರಡರ ಸೌಂದರ್ಯವಿದೆ. ಕರ್ಣಾಟಕ ಸಂಗೀತದಲ್ಲಿ ತಾನ ಎಂಬ ಪದವು ತೆನ್ನಾ ಎಂಬ ಪದದಿಂದ ಬಂದಿದೆ ಎಂದು ಕೆಲವರ ಅಭಿಪ್ರಾಯ. ನಮ್ಮಾಳ್ವಾರರು ತಮ್ಮ ತಿರುವಾಯಿ ಮೊಳಿಯನ್ನು ತಿರುಪತಿ ಶ್ರೀನಿವಾಸನ ಮುಂದೆ ತೇನ್ನಾ ತೇನ್ನಾ ಎಂದು ಹಾಡಿ, "ತೇನ್ನಾ ತೇನ್ನಾವೇನವಂಡು ಮುರಲ್ ತಿರುವೇಂಗಡತ್ತು" ಎಂಬ ಸ್ತೋತ್ರವನ್ನು ರಚಿಸಿದರು. ತೇನ್ನಾ ಎಂಬ ಪದವು ಕ್ರಮೇಣ ತಾನಂ ಎಂದಾಯಿತು ಎಂದು ಕೆಲವರ ಅಭಿಪ್ರಾಯ. ಮಂತ್ರ ಶಾಸ್ತ್ರಜ್ಞರ ಪ್ರಕಾರ (ತ + ಅ + ನ + ಅಂ = ತಾನಂ) ಎಂಬುದರಲ್ಲಿ ತಕಾರವು ಶಂಕರವಾಚಕವು, ಅಕಾರವು ಬ್ರಹ್ಮವಾಚಕವು

ನಕಾರವು ವಿಷ್ಣುವಾಚಕವು. ಹೀಗೆ ತಾನ ಎಂಬಲ್ಲಿನ ಅಕ್ಷರಗಳ ಅಭಿಮಾನ ದೇವತೆಗಳಾದ ತ್ರಿಮೂರ್ತಿಗಳು ಅಂಕಾರದ ಬಿಂದುವಿನಲ್ಲಿ ಏಕೀಭವಿಸುವುದರಿಂದ ತಾನಂ ಎಂಬ ಶಬ್ದವು ಪರಬ್ರಹ್ಮವಾಚ್ಯ ಬೀಜ ಮಂತ್ರವೆಂದೂ, ಆ ಮಂತ್ರವನ್ನು ಜಪಿಸಿ ದೈವ ಸಾಕ್ಷಾತ್ಕಾರ ಪಡೆಯುವುದು ತಾನಂ ಶಬ್ದದ ಉಪಯೋಗವೆಂದು ಒಂದು ಅಭಿಪ್ರಾಯವಿದೆ. ರಾಗವನ್ನು ಕೆಲವು ಗೊತ್ತಾದ ಸಂಖ್ಯೆಯ ಸ್ವರ ಸಂಖ್ಯೆಯನ್ನು ಅನುಸರಿಸಿ ಗಣಿತರೀತ್ಯಾ ಅನೇಕ ಸಂಖ್ಯೆಯ ತಾನಗಳಾಗುತ್ತವೆ. ಏಳು ಸ್ವರಗಳನ್ನು ಸೇರಿಸಿದ ಎಲ್ಲಾ ಪ್ರಸ್ತಾರಗಳ ಸಂಖ್ಯೆ [೭ (೭ × ೬ × ೫ × ೪ × ೩ × ೨ × ೧) = ೫೦೪೦, ಆರು ಸ್ವರಗಳಿಗೆ [೬ = ೭೨೦ ಇತ್ಯಾದಿ.

ತಾನಗಳು ಮುಖ್ಯವಾಗಿ ಎರಡು ವಿಧ — ಶುದ್ಧತಾನ ಮತ್ತು ಕೂಟತಾನ. ಐದು ಅಥವಾ ಆರು ಸ್ವರಗಳನ್ನು ಆರೋಹಣ ಕ್ರಮದಲ್ಲಿ ಹಾಡುವುದು ಶುದ್ಧತಾನ. ಸ್ವರಗಳನ್ನು ಬೇರೆ ಬೇರ ಸಂಖ್ಯೆಯಲ್ಲಿ ಹಾಡುವುದು ಕೂಟತಾನ ಇದರಲ್ಲಿ ಸ್ವರಗಳನ್ನು ಅನುಸರಿಸುವ ರೀತಿಗೆ ನಷ್ಟವೆಂದೂ, ಅವುಗಳ ಸಂಖ್ಯಾನುಕ್ರಮಕ್ಕೆ ಉದ್ದಿಷ್ಟವೆಂದೂ ಹೆಸರು. ತಾನಂ ಎಂಬುದು ಅನಂತ ಎಂಬ ಪದದ ಒಂದು ರೂಪವೆಂದು ಹೇಳುತ್ತಾರೆ.

ತಾನವನ್ನು ತ್ರಿಕಾಲವಲ್ಲಿ ಹಾಡುವುದು ಸಂಪ್ರದಾಯ. ಇದರಲ್ಲಿ ದ್ರುತಕಾಲದ ಸಂಚಾರಗಳು ಪ್ರಮುಖವಾಗಿದ್ದು ರಾಗಭಾವವನ್ನು ಹೊರಗೆಡಹಲು ಕೆಲವು ವೇಳೆ ಮಧ್ಯಮ ಮತ್ತು ವಿಳಂಬ ಕಾಲದ ಸಂಚಾರಗಳನ್ನು ಬಳಸುತ್ತಾರೆ. ದ್ರುತಕಾಲದ ತಾನಕ್ಕೆ ಘನಂ ಎಂದು ಹೆಸರು. ತಾನದಲ್ಲಿ ಬರುವ ಸ್ವರ ಶ್ರೇಣಿಗಳನ್ನು ಎಂಟು ವಿಧವಾಗಿ ವರ್ಗೀಕರಿಸಿ ಕೆಲವು ಪ್ರಾಣಿಗಳ ನಡಿಗೆಯ ಗತಿಗಳನ್ನು ಹೋಲುವ ಸ್ವರಸಮೂಹಗಳಿಗೆ ಆ ಪ್ರಾಣಿಗಳ ಹೆಸರುಗಳನ್ನು ಕೊಡಲಾಗಿದೆ. ಇವು ಯಾವುವೆಂದರೆ ಮಾನವತಾನ, ಗಜತಾನ, ಮರ್ಕಟತಾನ, ಮಯೂರತಾನ, ಕುಕ್ಕುಟತಾನ, ಮಂಡೂಕತಾನ ಮತ್ತು ಚಕ್ರತಾನ. ಇವಲ್ಲದೆ ಮಿಶ್ರತಾನ, ಮಾಲಿಕಾತಾನ, ಗಂಭೀರತಾನ ಮತ್ತು ವಿದ್ಯುತ್‌ತಾನಗಳಿವೆ. ಇವು ತಾನದ ಸ್ವರೂಪವನ್ನು ಸೂಚಿಸುತ್ತವೆ ಕಳೆದ ಶತಮಾನದಲ್ಲಿದ್ದ ಸಾತ್ತನೂರು ಪಂಜು ಅಯ್ಯರ್‌ರವರು ಈ ಎಲ್ಲ ಬಗೆಯ ತಾನಗಳನ್ನು ಹಾಡುವುದರಲ್ಲಿ ನಿಸ್ಸೀಮರಾಗಿದ್ದರು.

**ತಾನವರ್ಣ**—ರಾಗ ಮಾಧುರ್ಯ, ಭಾವ ಮತ್ತು ಪಾಂಡಿತ್ಯ, ಪ್ರತಿಭೆಗಳನ್ನು ತೋರಿಸತಕ್ಕ, ತಾನರೂಪದ ಮತ್ತು ತಾನ ಜತಿ ರೂಪದ ಸ್ವರಗಳ ಜೋಡಣೆಯು ಪ್ರಮುಖ ಅಂಗವಾಗಿರುವ ರಚನೆಗೆ ತಾನವರ್ಣವೆಂದು ಹೆಸರು ಇದನ್ನು ಸಂಗೀತ ಕಚೇರಿಯ ಪ್ರಾರಂಭದಲ್ಲಿ ಹಾಡುತ್ತಾರೆ. ಸಾಮಾನ್ಯವಾಗಿ ಇದು ಆದಿತಾಳದಲ್ಲಿಯೂ, ಅಪರೂಪವಾಗಿ ಇತರ ಸುಳಾದಿ ತಾಳಗಳಲ್ಲಿಯೂ ಮಧ್ಯಲಯದಲ್ಲಿ ನಿಬದ್ಧವಾಗಿದ್ದು, ಪ್ರಭು, ಆಶ್ರಯದಾತ ಅಥವಾ ಇಷ್ಟದೇವತೆಯ ಸ್ತುತಿ ಅಥವಾ ಪ್ರಾರ್ಥನೆಯನ್ನು ಒಳಗೊಂಡಿರುತ್ತದೆ. ಇದರಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣ ಎಂಬ

ಭಾಗಗಳಿದ್ದು ಇವುಗಳಿಗೆ ಮಾತ್ರ ಸಾಹಿತ್ಯವಿರುತ್ತದೆ. ಚಿಟ್ಟೆಸ್ವರ ಮತ್ತು ಎತ್ತುಗಡೆ ಸ್ವರಗಳಿಗೆ ಸಾಹಿತ್ಯವಿರುವುದಿಲ್ಲ.

ಹದಿನೆಂಟನೆ ಶತಮಾನದ ಪ್ರಾರಂಭದಲ್ಲೇ ವೀಣೆ ಪೆರುಮಾಳಯ್ಯ, ಪಚ್ಚಿ ಮಿರಿಯಂ ಆದಿಅಪ್ಪಯ್ಯ, ರಾಮಸ್ವಾಮಿ ದೀಕ್ಷಿತರು, ಪಲ್ಲವಿ ಗೋಪಾಲಅಯ್ಯರ್, ಕಾವೇರಿಪಟ್ಟಣಂ ಗೋವಿಂದಸ್ವಾಮಯ್ಯ, ಕೂವನ ಸಾಮಯ್ಯ, ಲಕ್ಷ್ಮೀಕಾಂತ ಮಹಾರಾಜ, ಸೊಂಟಿವೆಂಕಟಸುಬ್ಬಯ್ಯ ಮತ್ತು ಸೊಂಟಿ ವೆಂಕಟರಮಣಯ್ಯ ಮುಂತಾದವರೂ, ತಂಜಾವೂರು ಸಹೋದರ ಚತುಷ್ಟಯರೂ ವರ್ಣಗಳನ್ನು ರಚಿಸಿದರು. ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದವರು ಅನೇಕ ವರ್ಣಗಳನ್ನು ರಚಿಸಿದ್ದಾರೆ ಮಹಾವೈದ್ಯನಾಥ ಅಯ್ಯರ್‌ರವರು ಆದಿತಾಳದಲ್ಲಿ ರಚಿಸಿರುವ ಕಾಂಭೋಜಿರಾಗದ 'ಪಂಕಜಾಕ್ಷಿಪೈ' ಎಂಬ ವರ್ಣವು ಸ್ವರಾಕ್ಷರಗಳಿಂದ ಮತ್ತು ಮೃದಂಗಜತಿಯ ಸ್ವರಸಾಹಿತ್ಯದಿಂದ ಕೂಡಿರುವ ಪ್ರೌಢ ವರ್ಣವಾಗಿದೆ

**ತಾನಪ್ಪಾಚಾರ್ಯ**—'ಚತುರ್ದಂಡಿ ಪ್ರಕಾಶಿಕಾ' ಎಂಬ ಗ್ರಂಥವನ್ನು ರಚಿಸಿರುವ ವೆಂಕಟಮುಖಿಯ ಸಂಗೀತ ಗುರುವಿನ ಹೆಸರು ವೆಂಕಟಮಂತ್ರಿ ಇವನಿಗೆ ತಾನಪ್ಪ ಎಂಬ ಹೆಸರಿದ್ದಿತು ವೆಂಕಟಮುಖಿಯು ಇವನನ್ನು ತಾನಪ್ಪಾಚಾರ್ಯ, ತಾನಪ್ಪಾರ್ಯ, ತಾನಪ್ಪ ಶೇಖರ ಎಂದು ತನ್ನ ಗ್ರಂಥದಲ್ಲಿ ಸ್ತುತಿಸಿದ್ದಾನೆ. ತಾನಪ್ಪಾಚಾರ್ಯನು ಕರ್ಣಾಟಕ ಸಂಗೀತದ ಸುವರ್ಣಯುಗದ ಶುಕ್ರತಾರೆ ಮತ್ತು ಪ್ರಮುಖ ಲಕ್ಷ್ಯಮಾರ್ಗಪ್ರವರ್ತಕ.

**ತಾನರೂಪಿ**—ಈ ರಾಗವು ೬ನೆ ಮೇಳಕರ್ತರಾಗ ಇಂದು ಚಕ್ರದ ಕೊನೆಯರಾಗ. ಪೂರ್ವಾಂಗದ ಸ್ವರಗಳು ಶುದ್ಧ ಉತ್ತರಾಂಗದ ಸ್ವರಗಳು ಷಟ್ ಶ್ರುತಿ ಧೈವತ ಮತ್ತು ಕಾಕಲಿನಿಷಾದ. ಈ ರಾಗವು ಮಹಾವೈದ್ಯನಾಥ ಅಯ್ಯರ್‌ರವರ ಮೇಳರಾಗ ಮಾಲಿಕೆಯಲ್ಲಿ ಕಂಡುಬರುತ್ತದೆ ಇದರಲ್ಲಿ ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ಕೃತಿಗಳನ್ನು ರಚಿಸಿದ್ದಾರೆ

**ತಾನರಂಜನಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ̇

ಅ: ಸ̇ ದ ಪ ಸ ನಿ ಸ ದ ಪ ಮ ಗ ರಿ ಸ

**ತಾನ್‌ಸೇನ್** (ಸು. ೧೫೬೪–೧೬೪೬)—ಹಿಂದೂಸ್ಥಾನೀ ಸಂಗೀತದ ಪ್ರಪಂಚದಲ್ಲಿ ಸಂಗೀತ ಸಾಮ್ರಾಟ್ ತಾನ್‌ಸೇನ್ ಅತ್ಯಂತ ಪ್ರಸಿದ್ಧನಾದ ಗಾಯಕ. ಇವನಷ್ಟು ಗೌರವ ಮತ್ತು ಕೀರ್ತಿಪಡೆದ ಮತ್ತೊಬ್ಬ ಗಾಯಕನು ಇಲ್ಲವೆನ್ನಬಹುದು. ಮೊಗಲ್ ಚಕ್ರವರ್ತಿ ಅಕ್ಬರನ (೧೫೫೬–೧೬೦೫) ಸಾಮಂತರು ಇವನನ್ನು ಗೌರವಿಸಲು ಸ್ಪರ್ಧಿಸುತ್ತಿದ್ದರು. ಇವನಿಗೆ ಅಪಾರಕೀರ್ತಿ ಮತ್ತು ಮನ್ನಣೆ ದೊರಕಲು ಅಕ್ಬರನು ಉದಾರ ಪೋಷಣೆ ಒಂದು ಮುಖ್ಯಕಾರಣ.

ತಾನ್‌ಸೇನನು ಯಾವ ವರ್ಷ ಜನಿಸಿದನು ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಈಗಿನ ಮಧ್ಯ ಪ್ರದೇಶದ ಗ್ವಾಲಿಯರ್ ನಗರದ ಬಳಿ ಇರುವ ಬೇಹಟ್ ಎಂಬ ಗ್ರಾಮದಲ್ಲಿ ಇವನ ಜನನವಾಯಿತು. ಇವನ ನಿಜವಾದ ಹೆಸರು ತನ್ನಾಮಿಶ್ರ, ತ್ರಿಲೋಚನ, ತನುಸುಖ ಮತ್ತು ರಾಮತನು ಮುಂತಾದುವೆಂದು ಹೇಳುತ್ತಾರೆ. ತಾನ್‌ಸೇನ್ ಎಂಬುದು ಅವನ ತಾನಗಳ ವೈಭವವನ್ನು ಮೆಚ್ಚಿ ರಾಜರು ನೀಡಿದ ಬಿರುದು. ಇವನ ತಂದೆ ಗೌಡಬ್ರಾಹ್ಮಣ ವಂಶದ ಮಕರಂದ ಪಾಂಡೇ ಸಂಗೀತ ವಿದ್ವಾಂಸನಾಗಿದ್ದನು. ತಾನ್‌ಸೇನನು ಗ್ವಾಲಿಯರ್‌ನಲ್ಲಿ ತನ್ನ ಬಾಲ್ಯವನ್ನು ಕಳೆದನು. ಆ ನಗರವು ರಾಜಾಮಾನಸಿಂಗ ತೋಮರನ ರಾಜಧಾನಿಯಾಗಿತ್ತು. ಈ ರಾಜನು ಸಂಗೀತಗಾರನೂ, ವಾಗ್ಗೇಯಕಾರನೂ ಆಗಿದ್ದು ಅನೇಕ ಸಂಗೀತಗಾರರಿಗೆ ತನ್ನ ಆಸ್ಥಾನದಲ್ಲಿ ಆಶ್ರಯವನ್ನು ಕೊಟ್ಟಿದ್ದನು. ನಾಯಕ ಬಕ್ಸೂ, ನಾಯಕ ಬೈಜೂ, ನಾಯಕ ಕರ್ಣ ಮತ್ತು ನಾಯಕ ಮಹಮದ್ ಎಂಬುವರು ಇವನ ಆಸ್ಥಾನದ ಪ್ರಸಿದ್ಧ ವಿದ್ವಾಂಸರಾಗಿದ್ದರು. ಬಾಲಕ ತನ್ನಾಮಿಶ್ರನು ನಾಯಕ ಬಕ್ಸೂ ಅಥವಾ ಮಹಮದ್ ಇವರಲ್ಲಿ ಸಂಗೀತ ಕಲಿತಿರಬಹುದು. ೧೫೨೬ ರಾಜಾಮಾನಸಿಂಗನ ಮರಣಾನಂತರ ಗ್ವಾಲಿಯರ್‌ನ ದೊರೆ ವಿಕ್ರಮಾದಿತ್ಯನ ಮಾಂಡಲಿಕನಾಗಬೇಕಾಗಿ, ಗ್ವಾಲಿಯರ್‌ನ ಹಿಂದಿನ ವೈಭವವು ಹಾಳಾಗಿ ಸಂಗೀತಗಾರರು ಬೇರೆ ಬೇರೆ ರಾಜ್ಯಗಳಿಗೆ ತೆರಳಿದರು.

ಸಂಗೀತ ಶಿಕ್ಷಣವನ್ನು ಮುಂದುವರಿಸಲು ತನ್ನಾಮಿಶ್ರನು ಆಗ್ರಾಕ್ಕೆ ಹೋದನು. ಅಲ್ಲಿದ್ದ ಸೂಫೀ ಫಕೀರ ಮಹಮದ್ ಗೌಸನ ಪಾದಕ್ಕೆರಗಿದನು. ಆತನು ಇವನ ಇಚ್ಛೆಯನ್ನು ತಿಳಿದು 'ನಿನ್ನ ಗುರು ಬೃಂದಾವನದಲ್ಲಿದ್ದಾನೆ ಮಥುರಾಕ್ಕೆ ಹೊರಡು' ಎಂದು ಹೇಳಿ ಆಶೀರ್ವದಿಸಿದನು. ಬೃಂದಾವನದ ಸ್ವಾಮಿ ಹರಿದಾಸರು ಭಗವದ್ಭಕ್ತರೂ, ಸಂಗೀತದ ಮಹಾವಿದ್ವಾಂಸರೂ ಆಗಿದ್ದರು. ಮಥುರಾಕ್ಕೆ ಹೋಗಿ ಅವರ ಮೆಚ್ಚಿಗೆಯನ್ನು ಪಡೆದು ಶಿಷ್ಯನಾಗಿ, ನಿಷ್ಠೆಯಿಂದ ಭಕ್ತಿಯಿಂದ ಗುರುಸೇವೆ ಮಾಡಿ ಸಂಗೀತ ಶಿಕ್ಷಣ ಪಡೆದನು. ಹರಿದಾಸ ಸ್ವಾಮಿಯು ಧ್ರುಪದ್ ಶೈಲಿಯ ಗಾಯನ ಸಂಪ್ರದಾಯದವರು. ಅವರಿಂದ ಧ್ರುಪದ ಸಂಗೀತವನ್ನೂ ಕಲಿತುದಲ್ಲದೆ ಗೋಕುಲ ಎಂಬ ಆಶ್ರಮ ಸ್ಥಾನದಲ್ಲಿದ್ದ ಗೋವಿಂದ ಸ್ವಾಮಿಗಳೆಂಬ ಸಂಗೀತ ವಿದ್ವಾಂಸರಲ್ಲಿ ಕೀರ್ತನ ಪದ್ಧತಿಯ ಗಾಯನವನ್ನು ಕಲಿತನು ತರುವಾಯ ಸ್ವಾಮಿಗಳ ಆಶೀರ್ವಾದವನ್ನು ಪಡೆದು ಷೇರ್ ಷಾ ಸೂರಿಯ ಮಗನಾದ ದೌಲತ್‌ಖಾನನ ಆಶ್ರಯದಲ್ಲಿ ಒಂದೆರಡು ವರ್ಷಗಳ ಕಾಲವಿದ್ದು ತರುವಾಯ ಬಾಂಧವಗಡದ ದೊರೆ ರಾಮಚಂದ್ರನ ಆಸ್ಥಾನ ವಿದ್ವಾಂಸನಾದನು. ಅಲ್ಲಿ ಇವನ ತಾನಗಳ ಅನಂತ ವೈವಿಧ್ಯಕ್ಕೆ ಬೆರಗಾಗಿ 'ತಾನಸೇನ' ಎಂಬ ಬಿರುದನ್ನಿತ್ತನು. ಈ ಹೆಸರೇ ಎಲ್ಲೆಡೆಗೂ ಹಬ್ಬಿತು ಮತ್ತು ಇವನ ಕೀರ್ತಿಯು ದೆಹಲಿಗೂ ಮುಟ್ಟಿತು.

ಮೊಗಲ್ ಚಕ್ರವರ್ತಿ ಅಕ್ಬರನಿಗೆ ತನ್ನ ಆಸ್ಥಾನದ ನವರತ್ನಗಳಲ್ಲಿ ಸಂಗೀತದ

ರತ್ನವಾಗಿ ತಾನಸೇನನನ್ನು ನೇಮಿಸಿಕೊಳ್ಳಬೇಕೆಂಬ ಬಯಕೆ ಉಂಟಾಗಿ ರಾಜಾರಾಮಚಂದ್ರನಿಗೆ ಸಂದೇಶವನ್ನು ಕಳುಹಿಸಿದನು. ವಿಧಿಯಿಲ್ಲದೆ ರಾಜನು ತುಂಬು ಹೃದಯದಿಂದ ತಾನಸೇನನನ್ನು ವೈಭವದ ಮೆರವಣಿಗೆಯಲ್ಲಿ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ರಾಜಧಾನಿಯ ಗಡಿದಾಟುವವರೆಗೆ ಸ್ವತಃ ಮೇಣೆಗೆ ಹೆಗಲು ಕೊಟ್ಟು ಬೀಳ್ಕೊಟ್ಟನು. ಇದನ್ನು ತಿಳಿದ ತಾನ್‌ಸೇನನಿಗೆ ಹೃದಯ ತುಂಬಿ ಬಂದು ರಾಜನ ಕಾಲಿಗೆರಗಿ ಇನ್ನು ಮುಂದೆ ರಾಜಾರಾಮಚಂದ್ರನಿಗೆ ಮಾತ್ರ ಬಲಗೈಯಿಂದ ನಮಸ್ಕರಿಸುವುದಾಗಿ ಪ್ರತಿಜ್ಞೆ ಮಾಡಿದನು.

ಅಕ್ಬರನ ಆಸ್ಥಾನ ವಿದ್ವಾಂಸನಾದ ಮೇಲೆ ಇವನ ಕೀರ್ತಿ ಎಲ್ಲೆಡೆ ಹರಡಿತು. ಇವನ ಸಂಗೀತ ಜೀವನಕ್ಕೆ ಸಂಬಂಧಿಸಿದಂತೆ ಪವಾಡ ಸದೃಶವಾದ ಹಲವು ಘಟನೆಗಳು ಪ್ರಚಲಿತವಾಗಿವೆ. ಒಂದು ಅಕ್ಬರನ ಮಗಳಿಗೆ ಶೀತ ಪ್ರಕೋಪದ ಖಾಯಿಲೆ ಉಂಟಾಗಿ ಯಾವ ಔಷಧೋಪಚಾರಗಳಿಗೂ ವಾಸಿಯಾಗಲಿಲ್ಲ. ಅದು ದೀಪಕ್ ರಾಗವನ್ನು ಹಾಡಿದರೆ ಉಂಟಾಗುವ ಉಷ್ಣತೆಯಿಂದ ಮಾತ್ರ ವಾಸಿಯಾಗುವ ಖಾಯಿಲೆ. ಅಕ್ಬರನು ಈ ರಾಗವನ್ನು ಹಾಡಬೇಕೆಂದು ತಾನಸೇನನಿಗೆ ಆಜ್ಞಾಪಿಸಿದನು. ಅವನು ಅದರಿಂದಾಗುವ ಅಪಾಯವನ್ನು ತಿಳಿಸಿ ನಿರಾಕರಿಸಿದನು. ಚಕ್ರವರ್ತಿಯು ಬೇಡಿಕೊಂಡನು. ಆಗ ಹದಿನೈದುದಿನ ಕಾಲಾವಕಾಶವನ್ನು ತೆಗೆದು ಕೊಂಡು ತನ್ನ ಪ್ರತಿಭಾವಂತ ಪುತ್ರಿ ಸರಸ್ವತಿಗೆ ಮೇಘ ಮಲ್ಹಾರ್ ರಾಗವನ್ನು ಕಲಿಸಿ ಕೊಟ್ಟನು. ತಾನು ದೀಪಕ್ ರಾಗವನ್ನು ಹಾಡುವಾಗ ಚಕ್ರವರ್ತಿಯ ದರ್ಬಾರಿನ ಸಮೀಪದಲ್ಲಿ ಗೊತ್ತಾದ ಸ್ಥಳದಲ್ಲಿ ಕುಳಿತು ಗೊತ್ತಾದ ಕಾಲದಲ್ಲಿ ಈ ರಾಗವನ್ನು ಹಾಡಬೇಕೆಂದು ಆದೇಶವಿತ್ತನು.

ಗೊತ್ತಾದ ದಿನ ತಾನ್‌ಸೇನ್ ತುಂಬಿದ ದರ್ಬಾರಿನಲ್ಲಿ ದೀಪಕರಾಗವನ್ನು ಹಾಡಲು ತೊಡಗಿದನು ಸ್ವಲ್ಪಕಾಲದಲ್ಲೇ ಅರಮನೆಯ ದೀಪಗಳೆಲ್ಲ ಝಗ್ಗನೆ ತಾವಾಗಿಯೇ ಹತ್ತಿಕೊಂಡವು. ಮಲಗಿದ್ದ ರಾಜಕುಮಾರಿ ಎದ್ದು ಕುಳಿತಳು. ಆದರೆ ಅದರ ಪರಿಣಾಮವು ಇವನ ದೇಹದ ಮೇಲೆ ಉಂಟಾಗಲು ತೊಡಗಿತು. ಇನ್ನೂ ಮುಂದೆ ಹಾಡಿದರೆ ಅಪಾಯವಾಗುವುದೆಂದು ತಿಳಿಸಿದನು. ಅಕ್ಬರನಿಗೆ ಬಹಳ ದುಃಖವಾಯಿತು. ಅದೇ ಸರಸ್ವತಿಯು ಮೇಘಮಲ್ಹಾರ್ ರಾಗವನ್ನು ಹಾಡಿ ಮಳೆ ಬಂದು ಅವನ ದೇಹವು ತಂಪಾಯಿತು. ಅಕ್ಬರನಿಗೆ ಮಹದಾನಂದ ವಾಗಿ ತಕ್ಷಣವೇ ಅವನಿಗೆ ೨ ಲಕ್ಷ ರೂಪಾಯಿಗಳನ್ನು ಬಹುಮಾನವಾಗಿತ್ತನು.

ಅಕ್ಬರನಿಗೆ ತಾನ್‌ಸೇನನಿಗಿಂತಲೂ ಶ್ರೇಷ್ಠವಾಗಿ ಹಾಡುವ ಹರಿದಾಸಸ್ವಾಮಿಯ ಗಾಯನವನ್ನು ಕೇಳುವ ಹಂಬಲ ಪ್ರಬಲವಾಯಿತು. ಅವರು ಐಶ್ವರ್ಯ, ಅಧಿಕಾರ ಇತ್ಯಾದಿ ಯಾವುದಕ್ಕೂ ಸ್ವಲ್ಪವೂ ಬೆಲೆ ಕೊಡುವುದಿಲ್ಲ ಮತ್ತು ಶ್ರೀ ಕೃಷ್ಣನ ನಾಮ ಸಂಕೀರ್ತನವನ್ನು ಬಿಟ್ಟು ಶಾಹೀದರಬಾರಿಗೆ ಬಂದು ಹಾಡಲು ಖಂಡಿತ ಬರುವುದಿಲ್ಲವೆಂದು ತಿಳಿದನು. ಆಗ ತಾನ್‌ಸೇನ್ ಒಂದು ಉಪಾಯ ಮಾಡಿದನು.

ಬಾದ್‌ಷಹನಿಗೆ ಸಾಮಾನ್ಯ ಸೇವಕನ ಉಡುಪನ್ನು ಹಾಕಿಸಿ ತನ್ನ ಶಿಷ್ಯನನ್ನಾಗಿ ಪರಿವರ್ತಿಸಿ ಅವನ ಮೇಲೆ ತನ್ನ ತಂಬೂರಿಯನ್ನು ಹೊರಿಸಿಕೊಂಡು ಮಥುರಾಕ್ಕೆ ಹೋದನು. ಶ್ರೀಕೃಷ್ಣನ ಮಂದಿರದಲ್ಲಿ ಪೂಜಾನಿರತರಾಗಿದ್ದ ಸ್ವಾಮಿಹರಿದಾಸರು ಹಾಡಲು ಸಮ್ಮತಿಸುವ ಲಕ್ಷಣಗಳೇನೂ ಕಾಣಲಿಲ್ಲ. ಆಗ ತಾನ್‌ಸೇನನು ತಂಬೂರಿಯನ್ನು ಮೀಟಿ ಬೇಕು ಬೇಕೆಂದೇ ಅಪಸ್ವರ ಹಾಡಲು ತೊಡಗಿದನು ಈ ಸಂಗೀತದ ಕೊಲೆಯನ್ನು ತಮ್ಮ ಶಿಷ್ಯನು ಮಾಡುತ್ತಿರುವುದನ್ನು ಸಹಿಸದೆ ಅದನ್ನು ಈ ರೀತಿ ಹಾಡಬೇಕು ಎಂದು ಹೇಳಿ ಹಾಡಲು ತೊಡಗಿದರು. ಇಬ್ಬರೂ ಗಂಟೆಗಳ ಕಾಲ ಕುಳಿತು ಕೇಳಿದರು. ಗಾಯನ ಮುಗಿದ ನಂತರ ಸ್ವಾಮಿ ಹರಿದಾಸರು ತಮ್ಮ ಆಶ್ರಮಕ್ಕೆ ಹೊರಟರು. ಇವರಿಬ್ಬರೂ ದೆಹಲಿಯ ಕಡೆ ಹೊರಟರು. ದಾರಿಯಲ್ಲಿ ಅಕ್ಬರನು ಕೇಳಿದ "ನಿನ್ನ ಗಾಯನಕ್ಕಿಂತ ಎಷ್ಟೋಪಾಲು ಸ್ವಾಮಿಜಿಯ ಗಾಯನ ಮಿಗಿಲಾಗಿರುವುದೇಕೆ?" "ಅದು ಸ್ವಾಭಾವಿಕ. ನಾನು ಹಾಡುವುದು ದಿಲ್ಲಿಯ ಬಾದಶಹನನ್ನು ಮೆಚ್ಚಿಸುವುದಕ್ಕೆ ಅವರು ಹಾಡುವುದು ಇಡೀ ಜಗತ್ತಿನ ಸ್ವಾಮಿಯಾದ ಶ್ರೀಕೃಷ್ಣನನ್ನು ಮೆಚ್ಚಿಸುವುದಕ್ಕೆ. ಆದ್ದರಿಂದ ಅವರ ಗಾಯನವು ಅಷ್ಟು ಶ್ರೇಷ್ಠ" ಎಂದ ತಾನ್‌ಸೇನ್. ಈ ಘಟನೆಯನ್ನು ಕುರಿತು ಅಬುಲ್ ಫಸಲ್ ಎಂಬುವನು ಐನೀ ಅಕಬರೀ ಎಂಬ ಗ್ರಂಥದಲ್ಲಿ ಬರೆದಿಟ್ಟಿದ್ದಾನೆ.

ತಾನ್ ಸೇನನು ಮುಸ್ಲಿಂ ಮತಾವಲಂಬಿಯಾದ ವಿಚಾರವು ವಿವಾದಾಸ್ಪದ ವಾಗಿದೆ. ಅವನು ಜನ್ಮತಃ ಬ್ರಾಹ್ಮಣನಾಗಿದ್ದನು. ಇವನ ಮೊದಲ ಪತ್ನಿ ಹಿಂದೂ ಆಗಿದ್ದಳು. ಇವಳಲ್ಲಿ ಸೂರತ್‌ಸೇನ್, ತರಂಗ್‌ಸೇನ್, ಸಹರತ್ ಸೇನ್ ಮತ್ತು ಸರಸ್ವತಿ ಎಂಬ ಮಗಳನ್ನು ಪಡೆದನು. ಇವನ ಎರಡನೆಯ ಪತ್ನಿ ಮುಸ್ಲಿಂ ಆಗಿದ್ದಳು. ಇವಳಲ್ಲಿ ಬಿಲಾಸ್‌ಖಾನ್ ಎಂಬ ಒಬ್ಬ ಮಗನನ್ನು ಪಡೆದನು. ತನ್ನ ಮಕ್ಕಳಿಗೆ ಧ್ರುವಪದಗಾಯನ ಮತ್ತು ರಬಾಬ್ ವಾದ್ಯವನ್ನು ನುಡಿಸುವುದನ್ನು ಕಲಿಸಿದನು ಇದೊಂದು ಪುರಾತನ ವಾದ್ಯ. ಇದನ್ನು ಜನಪ್ರಿಯಗೊಳಿಸಿದನು. ಪುತ್ರಿ ಸರಸ್ವತಿಗೆ ರುದ್ರವೀಣೆಯನ್ನು ಕಲಿಸಿ ಅವಳನ್ನು ಆಗಿನ ಖ್ಯಾತ ವೈಣಿಕ ಮಿಶ್ರಸಿಂಗ್‌ಗೆ ಕೊಟ್ಟು ವಿವಾಹ ಮಾಡಿದನು ತಾನ್‌ಸೇನನಿಗೆ ದುರ್ಗಾ ಎಂಬ ಮತ್ತೊಬ್ಬ ಪುತ್ರಿ ಇದ್ದಳೆಂದು ಕೆಲವರು ಹೇಳುತ್ತಾರೆ. ಇವಳನ್ನು ಖ್ಯಾತ ಸಂಗೀತ ಗಾರ ಸುಜನ್‌ದಾಸ್ ಎಂಬುವನು ವಿವಾಹವಾಗಿದ್ದನು. ಪ್ರಸಿದ್ಧ ಗಾಯಕ ಫಯಾಜ್‌ಖಾನರು ಈ ಸಂತತಿಗೆ ಸೇರಿದವರು.

ತಾನ್‌ಸೇನನು ಅಪೂರ್ವ ಗಾಯಕನಾಗಿದ್ದುದಲ್ಲದೆ, ಸಂಗೀತ ಶಾಸ್ತ್ರಜ್ಞ ಮತ್ತು ವಾಗ್ಗೇಯಕಾರನಾಗಿದ್ದನು. ಇವನು ರಚಿಸಿದ ಧ್ರುವಪದಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇವುಗಳ ಸ್ವನಾಮ ಮುದ್ರೆಯಿದೆ. ಇವನ ಗಾಯನ ಶೈಲಿಗೆ ಗೌಡಬಾನೀ ಅಥವಾ ಗೌರ್‌ಹರ್ ಬಾನೀ ಎಂದು ಹೆಸರು. ಈ ಶೈಲಿಯ ಗಾಯನ ದಲ್ಲಿ ಇವನು ಅದ್ವಿತೀಯನಾಗಿದ್ದನು. ಇವನು ರಚಿಸಿದ ಧಮಾರ್‌ಗಳೂ ಮತ್ತು

ಸೃಷ್ಟಿಸಿದ ದರ್ಬಾರಿಕಾನಡ, ಮಿಯಾ ಮಲ್ಹಾರ್, ತಾನ್‌ಸೇನ್‌ಕಿತೋಡಿ ಮತ್ತು ಮಿಯಾಕಾ ಸಾರಂಗ್ ಎಂಬ ರಾಗಗಳು ಇಂದಿಗೂ ಜನಪ್ರಿಯವಾಗಿವೆ. ಇವಲ್ಲದೆ ಸಂಗೀತ್‌ಸಾರ್ ಮತ್ತು ರಾಗಮಾಲಾ ಎಂಬ ಗ್ರಂಥಗಳನ್ನು ರಚಿಸಿದನೆಂದು ಹೇಳುತ್ತಾರೆ. ಇವನ ವಂಶದ ಬಿಲಾಸಖಾನ್ ನಿರ್ಮಿಸಿದ ಬಿಲಾಸಖಾನೀ ತೋಡಿ ಎಂಬ ರಾಗ ಇಂದಿಗೂ ಬಹುಜನರಂಜಕವಾಗಿದೆ. ಇವನ ವಂಶದವನಾದ ಸದಾರಂಗ ಎಂಬುವನು ಖಯಾಲ ಗಾಯನಕ್ಕೆ ಮೂರ್ತ ಸ್ವರೂಪ ಕೊಟ್ಟು ಅದನ್ನು ಜನಪ್ರಿಯವಾಗಿಸಿದನು.

ತಾನ್‌ಸೇನನು ೧೬೧೦ರಲ್ಲಿ ಆಗ್ರಾದಲ್ಲಿ ಕಾಲವಾದನು. ಅವನ ದೇಹವನ್ನು ಗ್ವಾಲಿಯರಿಗೆ ತಂದು ಫಕೀರ್ ಮಹಮದ್‌ಗೌಸ್ ಸಮಾಧಿಯ ಸಮೀಪದಲ್ಲಿ ಅಂತ್ಯಕ್ರಿಯೆ ಮಾಡಲಾಯಿತು. ಅವನ ಸಮಾಧಿಯ ಮೇಲೆ ಭವ್ಯವಾದ ಸ್ಮಾರಕ ಮಂದಿರವನ್ನು ಕಟ್ಟಿದ್ದಾರೆ. ಇದು ಮೊಗಲರ ಶೈಲಿಯ ವಾಸ್ತುಶಿಲ್ಪಕ್ಕೆ ಉತ್ತಮ ಮಾದರಿಯಾಗಿದೆ ಇದರ ಬಳಿಯಿರುವ ಒಂದು ಪುರಾತನವಾದ ಹುಣಿಸೆಮರದ ಚಿಗುರನ್ನು ತಿಂದರೆ ಸಂಗೀತಗಾರರ ಶಾರೀರವು ಉತ್ತಮವಾಗಿ ಅವರು ಕಲಾ ಪರಿಣತಿಯನ್ನು ಪಡೆಯುವರೆಂಬ ನಂಬಿಕೆಯಿದೆ ಹಿಂದೂಸ್ಥಾನೀ ಸಂಗೀತಗಾರರಿಗೆ ತಾನ್‌ಸೇನನ ಸಮಾಧಿಯು ಒಂದು ಪವಿತ್ರ ಯಾತ್ರಾಸ್ಥಳವಾಗಿದೆ. ಈಗ ಪ್ರತಿ ವರ್ಷವೂ ಇಲ್ಲಿ ತಾನ್‌ಸೇನ್ ಉರುಸ್ ಎಂಬ ಜಾತ್ರೆ ನಡೆದು ದೇಶದ ನಾನಾ ಕಡೆಗಳಿಂದ ಗಾಯಕರು ಮತ್ತು ವಾದ್ಯವಾದಕರು ಯಾವ ಭೇದಭಾವವಿಲ್ಲದೆ ಭಾಗವಹಿಸಿ, ಹಾಡಿ, ವಾದ್ಯಗಳನ್ನು ನುಡಿಸಿ ತನ್ಮೂಲಕ ಸಂಗೀತ ಸಾಮ್ರಾಟನಿಗೆ ತಮ್ಮ ಭಕ್ತಿಯ ಅಂಜಲಿಯನ್ನು ಸಮರ್ಪಿಸುತ್ತಾರೆ. ತಾನ್‌ಸೇನನನ್ನು ಕುರಿತು ಅವನ ಸಮಕಾಲೀನರಾಗಿದ್ದ ಸೂರ್‌ದಾಸ್ (ಅಥವ ಕವಿಗಂಗ) ಈ ರೀತಿ ಉದ್ಗರಿಸಿದ್ದಾರೆ. "ಸೃಷ್ಟಿಕರ್ತನು ಶೇಷನಿಗೆ ಕಿವಿಗಳನ್ನು ಕೊಟ್ಟಿಲ್ಲ. ಅದಕ್ಕೆ ನಾವು ಕೃತಜ್ಞರಾಗಿರಬೇಕು. ಏಕೆಂದರೆ ತಾನ್‌ಸೇನನ ತಾನ್‌ಗಳನ್ನು ಕೇಳಿ ಶೇಷನು ಆನಂದದಿಂದ ತಲೆ ತೂಗಿದ್ದರೆ ಇಡೀ ಭೂಲೋಕ ಮತ್ತು ಮೇರುಪರ್ವತ ಉರುಳಿ ಹೋಗುತ್ತಿದ್ದುವು."

**ತಾಮಸುರಂಜಿನಿ**—ಈ ರಾಗವು ೧೨ನೆಯ ಮೇಳಕರ್ತ ರೂಪವತಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ತಾಮಲಕಿ**—ಈ ರಾಗವು ೨೯ನೆಯ ಮೇಳಕರ್ತ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ತಾಮ್ರರಂಜನಿ**—ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ‍ಂ

ಅ: ಸ‍ಂ ನಿ ದ ಪ ಮ ಗ ಮ ಸ

**ತಾಮ್ರಚೂಡ**—ಇದು ಭರತನಾಟ್ಯದ ಅಸಂಯುತ ಹಸ್ತಗಳಲ್ಲಿ ಒಂದು ಬಗೆಯ ಹಸ್ತಮುದ್ರೆ. ಮುಕುಳಹಸ್ತದಲ್ಲಿನ ತರ್ಜನೀಬೆರಳನ್ನು ಬಗ್ಗಿಸಿ ಹಿಡಿಯುವುದೇ ತಾಮ್ರಚೂಡ ಹಸ್ತಲಕ್ಷಣ. ಕೋಳಿ, ಬಕ, ಕಾಗೆ, ಒಂಟೆ, ಕರು ಮುಂತಾದ ಪ್ರಾಣಿಗಳನ್ನೂ ಲೇಖನವನ್ನೂ ಸೂಚಿಸಲು ಈ ಹಸ್ತವಿನಿಯೋಗ ವಾಗುವುದು

**ತಾರವ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ‍ಂ

ಅ: ಸ‍ಂ ನಿ ದ ಮ ಗ ಸ

**ತಾರಾಕರ್ಮಗಳು**—ತಾರಕ ಅಥವಾ ಕಣ್ಣಾಲಿಗಳ ಚಲನೆಯೇ ತಾರಾಕರ್ಮ. ಇದರಲ್ಲಿ ಒಂಬತ್ತು ವಿಧ. ಅವು ಭ್ರಮಣ, ವಲನ, ಪಾತನ, ಚಲನ, ಸಂಪ್ರವೇಶನ, ವಿವರ್ತನ, ಸಮುದ್ವೃತ, ನಿಷ್ಕ್ರಾಮ ಮತ್ತು ಪ್ರಾಕೃತ.

**ತಾರಂಜಿತ**—ಈ ರಾಗವು ೫೯ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಗ ಪ ದ ನಿ ಸ‍ಂ

ಅ: ಸ‍ಂ ನಿ ದ ಪ ಗ ರಿ ಸ

**ತಾಳ**—ಶಕಾರ ಶ್ಶಂಕರಪ್ರೋಕ್ತೋ ಲಕಾರಶ್ಶಕ್ತಿರುಚ್ಯತೇ ।
ಶಿವಶಕ್ತಿ ಸಮಾಯೋಗಾತ್ತಾಳ ಇತ್ಯಭಿಧೀಯತೇ ॥

ತಕಾರಕ್ಕೆ ಶಂಕರನು ಅಧಿದೇವತೆ, ಲಕಾರಕ್ಕೆ ಪಾರ್ವತಿಯು ಅಧಿದೇವತೆ. ಇವರಿಬ್ಬರ ಸಂಯೋಗದಿಂದ ತಾಳ ಎಂಬ ಪದವುಂಟಾಗಿದೆ. ಪಾರ್ವತಿಯ ಎಡಹಸ್ತ, ಶಂಕರನ ಬಲಹಸ್ತ ಇವುಗಳ ಸಂಯೋಗ, ವಿಯೋಗದಿಂದ ತಾಳವೆಂಬ ಶಬ್ದವು ಹುಟ್ಟಿತೆಂದು ಪೂರ್ವಾಚಾರ್ಯರು ಹೇಳಿದ್ದಾರೆ. ಗೌರೀ ಮತ್ತು ಹರನ ನೃತ್ಯದಿಂದ ತಾಳ ಉಂಟಾಯಿತು. ಹರನ ನೃತ್ಯವು ತಾಂಡವ ಮತ್ತು ಗೌರಿಯ ನೃತ್ಯವು ಲಾಸ್ಯ. ತಾಂಡವ ಎಂಬ ನಾಮಪದದ ಪ್ರಥಮಾಕ್ಷರ ತಾ ಮತ್ತು ಲಾಸ್ಯದ ಪ್ರಥಮಾಕ್ಷರ ಲ ಎಂಬುವು ಸೇರಿ ತಾಳ ಎಂಬ ಪದವಾಗಿದೆ. ತಾಳ ಎಂಬ ಪದ ತಲಪ್ರತಿಷ್ಠಾಯಾಂ ಎಂಬ ಧಾತುವಿನಿಂದ ಘ ಞ ಎಂಬ ಪ್ರತ್ಯಯ ಸೇರಿ ತಾಳ ಎಂಬ ಶಬ್ದ ನಿಷ್ಪತ್ತಿ ಯಾಗುತ್ತದೆ.

ಹಾಡುವಾಗ ಗೀತೆ ಅಥವಾ ಕೀರ್ತನೆಯ ಕಾಲಪ್ರಮಾಣವನ್ನು ಕೈಯಿಂದಲಾಗಲೀ, ತಾಳಯಂತ್ರಗಳಿಂದಲಾಗಲಿ ಹೊಡೆದು ತೋರಿಸುವುದಕ್ಕೆ ತಾಳವೆಂದು ಹೆಸರು. ಶ್ರುತಿರ್ಮಾತಾಲಯಃಪಿತಾ ಎಂಬಂತೆ ಲಯವು ಸಂಗೀತಕ್ಕೆ ಪಿತೃ ಸಮಾನವಾದುದು. ತಾಳವು ಎರಡು ವಿಧ (೧) ಮಾರ್ಗತಾಳ (೨) ದೇಶೀತಾಳ. ಮಾರ್ಗತಾಳಗಳು ಈಶ್ವರ ಪ್ರಣೀತವಾದುವೆಂದು ಹೇಳಿದೆ. ಇವುಗಳಲ್ಲಿ ಶುದ್ಧ, ಸಾಲಗ ಮತ್ತು ಸಂಕೀರ್ಣ ಎಂಬ ಭೇದಗಳಿವೆ. ಮಾರ್ಗತಾಳಗಳಾವುವೆಂದರೆ ಪರಮೇಶ್ವರನು ತಾಂಡವನೃತ್ಯ ಮಾಡಿದ ಕಾಲದಲ್ಲಿ ಅವನ ಪಂಚಮುಖಗಳಿಂದ ಐದು ತಾಳಗಳು ಉದ್ಭವವಾದುವೆಂದು 'ಸಂಗೀತ ರತ್ನಾಕರ'ದಲ್ಲಿ ಉಕ್ತವಾಗಿದೆ. ಚಚ್ಚತ್ಪುಟ, ಚಾಚತ್ಪುಟ, ಷಟ್ಪಿತಾ ಪುತ್ರಿಕ, ಸಂಪದ್ವೇಷ್ಟಕ ಮತ್ತು ಉದ್ಘಟ್ಟ ಎಂಬುವೇ ಆ ತಾಳಗಳು. ಇತರ ತಾಳಗಳಿಗೆ ದೇಶೀತಾಳಗಳೆಂದು ಹೆಸರು. ಇವುಗಳಲ್ಲಿ ಅತಿಪ್ರಾಚೀನವಾದುದು ಅಷ್ಟೋತ್ತರ ಶತಾದಿತಾಳಗಳು. ಕರ್ಣಾಟಕ ಸಂಗೀತದಲ್ಲಿ ಪ್ರಧಾನವಾದ ತಾಳಗಳು ಸೂಳಾದಿಸಪ್ತತಾಳಗಳಾದ ಧ್ರುವ, ಮಠ್ಯ, ರೂಪಕ, ಝಂಪ, ತ್ರಿಪುಟ, ಅಟ ಮತ್ತು ಏಕತಾಳ. ಇವುಗಳ ಜಾತಿ ಭೇದಗಳಿಂದ ೩೫ ತಾಳಗಳೂ ಮತ್ತು ಪಂಚಗತಿ ಭೇದಗಳಿಂದ ೧೭೫ ತಾಳಗಳುಂಟಾಗಿವೆ.

**ತಾಳ ದಶಪ್ರಾಣಗಳು** – ತಾಳಗಳ ಮೂಲಗತಿಯನ್ನು ವಿಭಜಿಸಿದಾಗ ತಾಳಕ್ಕೆ ಹತ್ತು ವಿಧವಾದ ಅವಯವಗಳು ಕಂಡುಬರುತ್ತವೆ. ಇವಕ್ಕೆ ತಾಳದಶ ಪ್ರಾಣಗಳೆಂದು ಹೆಸರು. ಇವು ಯಾವುವೆಂದರೆ

ಕಾಲೋಮಾರ್ಗಃ ಕ್ರಿಯಾಂಗಾನಿ ಗ್ರಹಜಾತಿಃ ಕಳಾಲಯಃ ।
ಯತಿಃಪ್ರಸ್ತಾರಕಂ ಚೇತಿ ತಾಳ ತಾಳಪ್ರಾಣ ದಶಃ ಸ್ಮೃತಃ ॥

ಕಾಲ, ಮಾರ್ಗ, ಕ್ರಿಯಾ, ಅಂಗ, ಗ್ರಹ, ಜಾತಿ, ಕಳಾ, ಲಯ, ಯತಿ ಮತ್ತು ಪ್ರಸ್ತಾರ ಎಂಬುವು ತಾಳ ದಶಪ್ರಾಣಗಳು. ಇವುಗಳಲ್ಲಿ ಮೊದಲ ಐದು ಭಾಗಗಳಿಗೆ ಮಹಾಪ್ರಾಣಗಳೆಂದೂ, ಉಳಿದವುಗಳನ್ನು ಉಪಪ್ರಾಣಗಳೆಂದೂ. ಭಾವಿಸಲಾಗಿದೆ.

**ತಾಳ್ಳಪಾಕಂ ಅಣ್ಣಮಾಚಾರ್ಯ** (೧೪೨೪–೧೫೦೩)—ಅಣ್ಣಮಾಚಾರ್ಯರು ಪ್ರಸಿದ್ಧ ತೆಲುಗು ವಾಗ್ಗೇಯಕಾರರು. ಭಜನ ಪದ್ಧತಿಯನ್ನು ಬೆಳೆಸಿದವರಲ್ಲಿ ಪ್ರಮುಖರು. ಇವರ ಪುತ್ರ ಪೆದ್ದ ತಿರುಮಲೈ ಅಯ್ಯಂಗಾರ್ ಮತ್ತು ಪೌತ್ರ ಚಿನ್ನ ತಿರುಮಲೈ ಅಯ್ಯಂಗಾರ್ ಈ ಮೂವರಿಗೂ ತಾಳ್ಳಪಾಕಂ ವಾಗ್ಗೇಯಕಾರರೆಂದು ಹೆಸರು ಅಣ್ಣಮಾಚಾರ್ಯರು ಆಂಧ್ರದ ಕಡಪ ಜಿಲ್ಲೆಯ ತಾಳ್ಳಪಾಕಂ ಗ್ರಾಮದಲ್ಲಿ ತೆಲುಗು ನಂದವರೀಕ ಬ್ರಾಹ್ಮಣ ದಂಪತಿಗಳಾದ ನಾರಾಯಣಸೂರಿ ಮತ್ತು ಲಕ್ಕಮ್ಮ ಎಂಬುವರ ಪುತ್ರನಾಗಿ ಜನ್ಮವೆತ್ತಿದರು. ಜೀವನದ ತಾರುಣ್ಯದಲ್ಲೇ ಸ್ವಗ್ರಾಮವನ್ನು ಬಿಟ್ಟು ತಿರುಪತಿಗೆ ಹೋಗಿ ನೆಲೆಸಿದರು. ಅಲ್ಲಿ ವಿಷ್ಣುಸ್ವಾಮಿ ಎಂಬ ಬ್ರಾಹ್ಮಣನಿಂದ ವೈಷ್ಣವ ದೀಕ್ಷೆಯನ್ನೂ, ತರುವಾಯ

ಅಹೋಬಿಲಹ ಶ್ರೀಮಠದ ಮೂಲ ಪುರುಷರಾದ ಶ್ರೀಶಠಗೋಪ ಯತೀಂದ್ರರಲ್ಲಿ ಶ್ರೀರಾಮಾನುಜಸಿದ್ಧಾಂತ ರಹಸ್ಯಗಳ ಉಪದೇಶವನ್ನು ಪಡೆದರು. ಆದ್ದರಿಂದ ಇವರ ವಂಶಸ್ಥರು ಶ್ರೀವೈಷ್ಣವ ಸಂಪ್ರದಾಯದವರಾಗಿದ್ದಾರೆ. ಅಣ್ಣಮಾಚಾರ್ಯರು ಶ್ರೀ ವೈಷ್ಣವ ಸಂಪ್ರದಾಯದ ನಾರಾಯಿರ ದಿವ್ಯ ಪ್ರಬಂಧಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದಿದ್ದರು. ಇವರನ್ನು ಅಣ್ಣಮಾರ್ಯ, ಅಣ್ಣಮಯ್ಯ, ಅಣ್ಣಮಯ್ಯಾಂಗಾರ್ ಎಂದು ಕರೆಯುವುದುಂಟು. ಇವರಿಗೆ ಚಿಕ್ಕಂದಿನಿಂದಲೂ ಸಾಹಿತ್ಯ ಮತ್ತು ಸಂಗೀತದಲ್ಲಿ ಅಪಾರ ಅಭಿರುಚಿಯಿತ್ತು. ತಿರುಪತಿಯ ವೆಂಕಟೇಶ್ವರನಲ್ಲಿ ಅಸಾಧಾರಣ ಭಕ್ತಿ ಬೇರೂರಿ ವೆಂಕಟೇಶನ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿ ಹಾಡಿ ನಲಿದರು. ಇವರಿಗೆ ಪದಕವಿತಾ ಮಾರ್ಗದರ್ಶಿ, ಸಂಕೀರ್ತನಾಚಾರ್ಯ, ದ್ರಾವಿಡಾಗಮ ಸಾರ್ವಭೌಮ ಎಂಬ ಬಿರುದುಗಳಿದ್ದುವೆಂದು ತಿಳಿದು ಬರುತ್ತದೆ. ಟಂಗಟೂರಿನ ರಾಜನ ಗೌರವಕ್ಕೆ ಪಾತ್ರರಾಗಿದ್ದರು.

ಅಣ್ಣಮಾಚಾರ್ಯರು ವೆಂಕಟೇಶ್ವರನನ್ನು ಭಕ್ತಿಯಿಂದ ಸ್ತುತಿಸಿ, ಆವನ ಶೃಂಗಾರ ವಿಭೂತಿಯನ್ನು ಕೊಂಡಾಡುವುದರಲ್ಲಿ ತನ್ನ ಜೀವಮಾನವನ್ನು ಕಳೆದರು. ಇವರ ರಚನೆಗಳ ಸಂಕಲನಗಳು ನಾಲ್ಕು ಇವೆ. ೧. ಅಧ್ಯಾತ್ಮ ಸಂಕೀರ್ತನಲು ೨. ಶೃಂಗಾರ ಸಂಕೀರ್ತನಮು ೩. ಶೃಂಗಾರ ಮಂಜರಿ ೪. ವೆಂಕಟಾಚಲ ಮಹಾತ್ಮೆ. ಇವರ ಕೀರ್ತನಗಳನ್ನು ತಾಮ್ರ ಪತ್ರಗಳಲ್ಲಿ ಬರೆಸಿ ತಿರುಪತಿ ದೇವಾಲಯದಲ್ಲೂ ಮತ್ತು ಅಹೋಬಲದ ನೃಸಿಂಹ ದೇವಾಲಯದಲ್ಲೂ ಇವರ ಮಗನು ಇಡಿಸಿದನು. ಇವುಗಳಲ್ಲಿ ಕೃತಿಗಳ ರಾಗಗಳನ್ನು ಮಾತ್ರ ಸೂಚಿಸಲಾಗಿದೆ. ತಾಳವನ್ನು ಗುರುತು ಮಾಡಿಲ್ಲ. ಈ ತಾಮ್ರ ಪತ್ರಗಳು ತಿರುಪತಿ ದೇವಾಲಯದಲ್ಲಿ ಸಿಕ್ಕಿವೆ. ಇವುಗಳಲ್ಲಿ ಅಣ್ಣಮಾಚಾರ್ಯರ ಕೀರ್ತನೆಗಳು ೧೨೦೦೦ಕ್ಕೂ ಮೇಲ್ಪಟ್ಟು ಇವೆ. ಇವರ ಮೊಮ್ಮಗ ಪ್ರಸಿದ್ಧ ಕವಿ ಚಿನ್ನತಿರುವೆಂಕಟನಾಥನು ಹೇಳಿರುವಂತೆ ಇವರ ಕೃತಿಗಳು ಒಟ್ಟು ೩೨೦೦೦ ಎಂದು ತಿಳಿದು ಬರುತ್ತದೆ. 'ಅಧ್ಯಾತ್ಮ ಸಂಕೀರ್ತನಮು' ಎಂಬುದರ ವಿಷಯ ಭಕ್ತಿಯನ್ನು ಬೆಳೆಸಿಕೊಳ್ಳುವುದು ಮತ್ತು ವೆಂಕಟೇಶ್ವರಸ್ವಾಮಿಯನ್ನು ಕೊಂಡಾಡುವುದು. ಶೃಂಗಾರ ಸಂಕೀರ್ತನಮು ಎಂಬ ದರಲ್ಲಿ ಅಣ್ಣಮಯ್ಯನವರು ನಾಯಿಕಾ ಮತ್ತು ವೆಂಕಟೇಶ್ವರನು ನಾಯಕ. ಇದು ನಾಯಕ-ನಾಯಕೀ ಭಾವದಿಂದ ತುಂಬಿದೆ. ಮೂರನೆಯ ಕೃತಿಯ ವಿಷಯವು ವೆಂಕಟೇಶ್ವರನಲ್ಲಿ ಒಬ್ಬ ತರುಣಿಯ ನಿಷ್ಕಲ್ಮಷವಾದ ಪ್ರೇಮ ಮತ್ತು ಅವಳ ಸಖಿಯರ ಮಧ್ಯಸ್ಥಿಕೆಯಿಂದ ಆ ಪ್ರೇಮವು ಸಫಲವಾಗುತ್ತದೆ. ಈಗ ದೊರೆತಿರುವ ಕೀರ್ತನೆಗಳಲ್ಲಿ ಸುಮಾರು ೧೦೦ಲಕ್ಕೆ ಮೈಸೂರಿನ ಮಹಾರಾಜಾ ಕಾಲೇಜಿನ ತೆಲುಗು ಪ್ರಾಧ್ಯಾಪಕರೂ, ಸುಪ್ರಸಿದ್ಧಸಾಹಿತಿ ಹಾಗೂ ಸಂಗೀತ ವಿದ್ವಾಂಸರಾಗಿದ್ದ 'ಗಾನಕಲಾ ಸಿಂಧು' ರಾಳ್ಳಪಳ್ಳಿ ಅನಂತ ಕೃಷ್ಣಶರ್ಮರಿಂದ ತಿರುಪತಿ ದೇವಾಲಯವು ಸ್ವರಸಂಯೋಜನೆ ಮಾಡಿಸಿ ಪ್ರಕಟಿಸಿದೆ. ಅಣ್ಣಮಾಚಾರ್ಯರ

'ಸಂಕೀರ್ತನ ಲಕ್ಷಣ' ಎಂಬ ಸಂಸ್ಕೃತ ಗ್ರಂಥವನ್ನು ಅವರ ಮೊಮ್ಮಗ ಚಿನ್ನ ತಿರುಮಲಾರ್ಯನು ತೆಲುಗಿಗೆ ಅನುವಾದಿಸಿರುವನೆಂದು ತಿಳಿದು ಬಂದಿದೆ

**ತಾಳಮಾಲಿಕಾ**—ಇದು ವಿವಿಧ ತಾಳಗಳಲ್ಲಿ ಹಲವು ಭಾಗಗಳನ್ನು ಹೊಂದಿರುವ ಸಂಗೀತ ರಚನಾ ವಿಶೇಷ. ಇಡೀ ರಚನೆಯು ಒಂದೇ ರಾಗದಲ್ಲಿರುತ್ತದೆ. ರಾಗಮಾಲಿಕೆಯಲ್ಲಿ ಅನೇಕ ರಾಗಗಳು ಇರುವ ಹಾಗೆ ತಾಳ ಮಾಲಿಕೆಯಲ್ಲಿರುವ ವಿವಿಧ ತಾಳಗಳಿಗೆ ಸ್ವಾಭಾವಿಕ ಸಂಬಂಧವಿರುತ್ತದೆ. ಸಾಹಿತ್ಯದಲ್ಲಿ ತಾಳಮುದ್ರೆ ಇರುತ್ತದೆ. ತಿರುವೋಟ್ರಿಯೂರು ತ್ಯಾಗಯ್ಯರ್‌ರವರು ಪಲ್ಲವಿಗಳನ್ನು ತಾಳಮಾಲಿಕೆಯಲ್ಲಿ ಹಾಡಿ ಶ್ರೋತೃಗಳನ್ನು ಆನಂದಪಡಿಸುತ್ತಿದ್ದರು. ಸುಳಾದಿಗಳು ಕನ್ನಡದ ತಾಳ ಮಾಲಿಕೆಗಳು. ಪುರಂದರದಾಸರಾದಿಯಾಗಿ ಹಲವು ಹರಿದಾಸರು ಸುಳಾದಿಗಳನ್ನು ರಚಿಸಿದ್ದಾರೆ. ಪಂಚತಾಳೇಶ್ವರ ಎಂಬುದು ಐದು ತಾಳಗಳಲ್ಲಿರುವ ಒಂದು ತಾಳಮಾಲಿಕಾ.

**ತಾಳಮುದ್ರೆ**—ತಾಳಮಾಲಿಕೆಯ ಒಂದೊಂದು ವಿಭಾಗದಲ್ಲೂ ಆಯಾ ತಾಳದ ಹೆಸರನ್ನು ಸೂಚಿಸುವ ಸಾಹಿತ್ಯ ಭಾಗವಿರುತ್ತದೆ. ಇದಕ್ಕೆ ತಾಳಮುದ್ರೆ ಎಂದು ಹೆಸರು.

**ತಾರಾವಳಿ ಜಾತಿ ಪ್ರಬಂಧ**—ಪ್ರಬಂಧಗಳು ಪುರಾತನ ಸಂಗೀತ ರಚನಾ ವಿಶೇಷಗಳು. ಅಂಗಗಳ ಸಂಖ್ಯೆಯನ್ನು ಅನುಸರಿಸಿ ಇವನ್ನು ಐದು ಬಗೆಗಳಾಗಿ ವರ್ಗೀಕರಿಸಿದ್ದರು. ತಾರಾವಳಿ ಜಾತಿ ಪ್ರಬಂಧವು ಐದು ಅಂಗಗಳನ್ನುಳ್ಳ ಪ್ರಬಂಧ.

**ತಾಳವಾದ್ಯಗಳು**—ಅವನದ್ಧ ವಾದ್ಯಗಳು ಅಥವಾ ತಾಳವಾದ್ಯಗಳು ಅನೇಕ ವಾಗಿವೆ ಇವು ಪ್ರಹಾರ ಅಥವಾ ಘಾತದಿಂದ ಧ್ವನಿ ಹುಟ್ಟುವ ವಾದ್ಯಗಳು. ಇವು ಗಳಲ್ಲಿ ನಗಾರಿ, ಭೇರಿ ಮುಂತಾದುವನ್ನು ಅರಮನೆ, ದೇವಾಲಯ ಮತ್ತು ಯುದ್ಧ ಭೂಮಿಯಲ್ಲಿ ಉಪಯೋಗಿಸುತ್ತಿದ್ದರು. ಸರ್ಕಾರದವರು ತಮ್ಮ ಆಜ್ಞೆಗಳನ್ನು ವಿಶೇಷ ಪ್ರಚಾರ ಮಾಡಲು ಡಂಗೂರ, ಪರೈ ಮುಂತಾದುವನ್ನು ಬಾರಿಸುವ ಪದ್ಧತಿ ಈಗಲೂ ಹಳ್ಳಿಗಳ ಕಡೆ ವಿಶೇಷವಾಗಿದೆ. ಕೆಲವು ವಾದ್ಯಗಳು ಕಾಲಮಿತಿಯನ್ನವಲಂಬಿಸಿ ಬಾರಿಸತಕ್ಕವು. ಕೆಲವು ಲೋಹದಿಂದ ಮಾಡಲ್ಪಟ್ಟವೆ. ಬ್ರಹ್ಮತಾಳವೇ ಮೊದಲಾದ ದೊಡ್ಡ ತಾಳ ವಾದ್ಯಗಳನ್ನು ದೇವಾಲಯಗಳ ಉತ್ಸವಾದಿಗಳಲ್ಲೂ, ಬ್ಯಾಂಡ್‌ಗಳಲ್ಲೂ ಉಪಯೋಗಿಸುತ್ತಾರೆ. ಮರದಿಂದ ಅಥವಾ ದಂತದಿಂದ ಮಾಡಿದ ಚಿಟಿಕೆಗಳು ನಮ್ಮ ದೇಶದ ಎಲ್ಲಾ ಕಡೆಗಳಲ್ಲಿ ಬಳಕೆಯಲ್ಲಿವೆ. ತಾಳವಾದ್ಯಗಳನ್ನು ಈ ರೀತಿ ವರ್ಗೀಕರಿಸಬಹುದು.

(೧) ಕೈಗಳಿಂದ ನುಡಿಸಲ್ಪಡುವ ಪಕ್ಕವಾದ್ಯಗಳು ಉದಾ : ಮೃದಂಗ, ತಬಲ, ಪಖಾವಜ್, ಡೋಲಕ್, ಘಟ, ಖಂಜೀರ, ಝಲ್ಲರಿ.

(೨) ಕಡ್ಡಿಗಳಿಂದ ಬಾರಿಸಲ್ಪಡುವ ವಾದ್ಯಗಳು—ನಗಾರಿ, ಭೇರಿ, ಜಾಗಟೆ.

(೩) ಕೈ ಮತ್ತು ಕೋಲಿನಿಂದ ನುಡಿಸಲ್ಪಡುವ ವಾದ್ಯ—ತವಿಲ್ ಅಥವಾ ಡೋಲು, ಮದ್ದಲೆ

(೪) ಇತರ ಸಹಾಯವಿಲ್ಲದೆ ಬಾರಿಸುವಂತಹ ವಾದ್ಯಗಳು—ಡಮರು, ಬುಡುಬುಡಿಕೆ

**ತಾಳಷಡಂಗಗಳು ಮತ್ತು ಕ್ರಿಯೆಗಳು**—ಒಂದು ತಾಳದ ಆವರ್ತ ಗಳಲ್ಲಿರುವ ಅವಯವಗಳಿಗೆ ಅಂಗ ಎಂದು ಹೆಸರು. ಅಂಗವು ಆರು ವಿಧ. ಇದಕ್ಕೆ ಷಡಂಗಗಳೆಂದು ಹೆಸರು ಇವು ಯಾವುವೆಂದರೆ ಅನುದ್ರುತ, ದ್ರುತ, ಲಘು, ಗುರು, ಪ್ಲುತ ಮತ್ತು ಕಾಕಪಾದ.

(೧) **ಅನುದ್ರುತ**—ಇದನ್ನು ಧ್ರುವಕ ಎಂಬ ಸಶಬ್ದ ಕ್ರಿಯೆಯಂತೆ ಬಳಸ ಬೇಕು ಇದು ಎಡ ಅಂಗೈ ಮೇಲೆ ಬಲಗೈಯಿಂದ ಹೊಡೆಯುವಿಕೆ ಇದೇ ಅನುದ್ರುತ ಕ್ರಿಯೆ ಅಥವಾ ಒಂದು ಏಟು ಹಾಕುವಿಕೆ.

(೨) **ದ್ರುತ**—ಇದು ಧ್ರುವಕ ಎಂಬ ಸಶಬ್ದ ಕ್ರಿಯೆಯಿಂದಲೂ ವಿಸರ್ಜಿತ ಎಂಬ ನಿಶ್ಶಬ್ದ ಕ್ರಿಯೆಯಿಂದಲೂ ಮಾಡುವ ಕೆಲಸ. ಅಂದರೆ ಏಟು ಹಾಕಿ ಕೈ ಬೀಸುವಿಕೆ

(೩) **ಲಘು**—ಒಂದು ಅಕ್ಷರ ಕಾಲವನ್ನು ಒಂದು ಏಟು ಹಾಕುವುದರಿಂದ ಮತ್ತು ಇತರ ಅಕ್ಷರಗಳನ್ನು ಬೆರಳುಗಳಿಂದ ಎಣಿಸುವ ಸಶಬ್ದ ಮತ್ತು ನಿಶ್ಶಬ್ದ ಕ್ರಿಯೆ.

(೪) **ಗುರು**—ಒಂದು ತಾಳವನ್ನು ಹಾಕಿ ೭ ಬೆರಳುಗಳನ್ನು ಎಣಿಸುವುದು. ಇದನ್ನು ೮ ಅಕ್ಷರದ ಲಘುವೆನ್ನಬಹುದು.

(೫) **ಪ್ಲುತ**—ಎಡಗೈಯನ್ನು ಬಲಗೈಯಿಂದ ತಟ್ಟಿ, ಮೂರು ಬೆರಳುಗಳನ್ನು ಮಡಿಸಿ, ನಂತರ ನಾಲ್ಕು ಅಕ್ಷರಕಾಲ ಬಲಗೈಯಿಂದ ಎಡಗೈಯನ್ನು ಸುತ್ತಿ, ಹಾಗೆಯೇ ನಾಲ್ಕು ಅಕ್ಷರಕಾಲ ಬಲಗೈಯನ್ನು ಕೆಳಗೆ ಬಿಡುವುದು.

(೬) **ಕಾಕಪಾದ**—ನಾಲ್ಕು ಅಕ್ಷರ ಕಾಲ ಬಲಗೈಯನ್ನು ಎಡಕ್ಕೆ ತರುವುದು. ಇದಕ್ಕೆ ಸರ್ಪಿಣಿ ಎಂದು ಹೆಸರು. ನಂತರ ಅದೇ ಕೈಯನ್ನು ಬಲಕ್ಕೆ ತರುವುದು ಇದು ನಾಲ್ಕು ಅಕ್ಷರಕಾಲದ ಕ್ರಿಯೆ. ಇದಕ್ಕೆ ಕೃಷ್ಣ ಎಂದು ಹೆಸರು. ನಂತರ ನಾಲ್ಕು ಅಕ್ಷರ ಕಾಲ ಅದೇ ಕೈಯನ್ನು ಮೇಲಕ್ಕೆ ಎತ್ತುವುದು ಇದಕ್ಕೆ ಪತಾಕ ವೆಂದು ಹೆಸರು. ತರುವಾಯ ನಾಲ್ಕು ಅಕ್ಷರಕಾಲ ಅದೇ ಕೈಯನ್ನು ಕೆಳಕ್ಕೆ ತೋರಿ ಸುವುದು. ಇದಕ್ಕೆ ಪತಿತ ಎಂದು ಹೆಸರು. ಅಂಗಗಳನ್ನು ಅಂಕಕರಣದಲ್ಲಿ ಸೂಚಿಸಲು ಸಂಕೇತಗಳಿವೆ.

| ಸಂಖ್ಯೆ | ಅಂಗಗಳ ಹೆಸರು | ಸಂಕೇತಗಳು | ಅಕ್ಷರ ಕಾಲ |
|---|---|---|---|
| 1 | ಅನುದ್ರುತ | ◡ | 1 |
| 2 | ದ್ರುತ | o | 2 |
| 3 | ಲಘು | 1 | 4 |
| 4 | ಗುರು | 8 | 8 |
| 5 | ಪ್ಲುತ | 8̍ | 12 |
| 6 | ಕಾಕಪಾದ | 卐 | 16 |

ಷಡಂಗಗಳು ಪುನಃ ಷೋಡಶಾಂಗಗಳೆಂದು 16 ಬಗೆಯಾಗುತ್ತವೆ. ಅವು ಕ್ರಮವಾಗಿ ಅನುದ್ರುತ, ಪ್ರುತ, ದ್ರುತವಿರಾಮ, ಲಘು, ಲಘುವಿರಾಮ, ಲಘುದ್ರುತ, ಲಘುದ್ರುತವಿರಾಮ, ಗುರು, ಗುರುವಿರಾಮ, ಗುರುದ್ರುತ, ಗುರುದ್ರುತವಿರಾಮ, ಪ್ಲುತ, ಪ್ಲುತವಿರಾಮ, ಪ್ಲುತದ್ರುತ, ಪ್ಲುತದ್ರುತವಿರಾಮ ಮತ್ತು ಕಾಕಪಾದ.

**ತ್ಯಾಗರಾಜರು** (೧೭೬೭–೧೮೪೭)—ಕರ್ಣಾಟಕ ಸಂಗೀತದ ಇತಿಹಾಸದಲ್ಲಿ ತ್ಯಾಗರಾಜರ ಸ್ಥಾನವು ವಿಶಿಷ್ಟವಾದುದು. ಇವರ ಪ್ರತಿಭೆ, ಔನ್ನತ್ಯ, ಆಧ್ಯಾತ್ಮಿಕ ಸಂಪತ್ತು ಅಸಾಧಾರಣವಾದುದು. ಇವರು ಕರ್ಣಾಟಕ ಸಂಗೀತದ ಮೇಲೆ ಬಹಳ ಪ್ರಭಾವ ಬೀರಿ ನಾದೋಪಾಸನೆಯಿಂದ ಪರಬ್ರಹ್ಮನನ್ನು ಕಂಡ ನಾದಯೋಗಿ.

**ಬಾಲ್ಯ ಮತ್ತು ವಿದ್ಯಾಭ್ಯಾಸ**—ತ್ಯಾಗರಾಜರು ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುವಾರೂರಿನಲ್ಲಿ ಜನಿಸಿದರು. ಇವರು ತೆಲುಗು ಮುಲುಕನಾಡು ಪಂಗಡದ ಭಾರದ್ವಾಜ ಗೋತ್ರದ ಮನೆತನಕ್ಕೆ ಸೇರಿದ ಬ್ರಾಹ್ಮಣರು. ಇವರ ಪೂರ್ವಜರು ಆಂಧ್ರದ ಕರ್ನೂಲು ಜಿಲ್ಲೆಯ ಕಾಕರ್ಲ ಎಂಬ ಗ್ರಾಮದವರಾದ್ದರಿಂದ ಇವರು ಕಾಕರ್ಲ ವಂಶದವರು. ತ್ಯಾಗರಾಜರ ತಂದೆ ರಾಮಬ್ರಹ್ಮ ಮತ್ತು ಸೀತಮ್ಮ. ತ್ಯಾಗರಾಜರ ಪಿತಾಮಹ ಗಿರಿರಾಜಬ್ರಹ್ಮ (ಗಿರಿರಾಜಕವಿ) ತಂಜಾವೂರಿನ ಷಾಹಜೀ

ಮಹಾರಾಜನ (೧೭೮೪–೧೭೮೦) ಆಸ್ಥಾನ ವಿದ್ವಾಂಸರಾಗಿದ್ದು ಹಲವು ಯಕ್ಷಗಾನಗಳನ್ನೂ, ಹಾಡುಗಳನ್ನೂ ರಚಿಸಿದರು. ತ್ಯಾಗರಾಜರ ಮಾತಾಮಹರಾದ ವೀಣಾ ಕಾಳಹಸ್ತಿ ಅಯ್ಯರ್ ತಂಜಾವೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ರಾಮಬ್ರಹ್ಮರ ಮೂವರು ಪುತ್ರರಲ್ಲಿ ಹಿರಿಯವರು ಪಂಚಾಪಕೇಶ ಅಥವಾ ಜಲ್ಪೇಶನ್, ಎರಡನೆಯವರು ರಾಮನಾಥನ್ ಮತ್ತು ಕಿರಿಯವರು ತ್ಯಾಗರಾಜರು. ರಾಮನಾದನ್ ತಾರುಣ್ಯದಲ್ಲೇ ತೀರಿಕೊಂಡರು. ಜಲ್ಪೇಶನ್ ಕೆಲವು ಲೇಖಕರು ಚಿತ್ರಿಸಿರುವಷ್ಟು ಕೆಟ್ಟವರಾಗಿರಲಿಲ್ಲ. ಅವರಿಗೆ ತ್ಯಾಗರಾಜರ ಧ್ಯೇಯಗಳು ಹಿಡಿಸಲಿಲ್ಲ. ತ್ಯಾಗರಾಜರು ರಾಜರು ನೀಡಿದ ವರಮಾನವನ್ನು ನಿರಾಕರಿಸಿ 'ನಿಧಿಚಾಲ ಸುಖಮಾ' ಎಂಬ ಕೃತಿಯಲ್ಲಿರುವ ಭಾವನೆಯನ್ನು ತಿಳಿದು 'ನಿನ್ನ ರಾಮಭಜನೆಯಿಂದ ಹೊಟ್ಟೆ ತುಂಬುತ್ತದೆಯೇ' ಎಂದರು. ತ್ಯಾಗರಾಜರ ತಾಯಿ ಚೆನ್ನಾಗಿ ಹಾಡುತ್ತಿದ್ದರು. ಅವರಿಗೆ ಪುರಂದರದಾಸರ ಅನೇಕ ಕೀರ್ತನೆಗಳು ತಿಳಿದಿತ್ತು.

**ತುಳಜಾಜಿ ಮಹಾರಾಜನು**(೧೭೬೫–೧೭೮೭)—ರಾಮಬ್ರಹ್ಮರ ಪಾಂಡಿತ್ಯ ಮತ್ತು ಭಕ್ತಿಯನ್ನು ಮೆಚ್ಚಿಕೊಂಡು ರಾಮನವಮಿ ಉತ್ಸವದ ಕಾಲದಲ್ಲಿ ತನ್ನ ಆಸ್ಥಾನದಲ್ಲಿ ರಾಮಾಯಣದ ಪ್ರವಚನ ಮಾಡಲು ಪ್ರಾರ್ಥಿಸಿದನು. ಇಂತಹ ಸಂದರ್ಭಗಳಲ್ಲಿ ತಂದೆಯೊಡನೆ ತ್ಯಾಗರಾಜರೂ ಹೋಗುತ್ತಿದ್ದರು. ಮತ್ತು ಶ್ಲೋಕಗಳನ್ನು ಓದುತ್ತಿದ್ದರು. ರಾಮಬ್ರಹ್ಮ ಅವನ್ನು ಕುರಿತು ಪ್ರವಚನ ಮಾಡುತ್ತಿದ್ದರು. ಹೀಗೆ ಬಾಲ್ಯದಲ್ಲೇ ಈ ಮಹಾಕಾವ್ಯದ ಹಿರಿಮೆ ಮತ್ತು ವಿಷಯವನ್ನು ಪರಿಚಯ ಮಾಡಿಕೊಂಡರು. ತುಳಜಾಜಿಯು ರಾಮಬ್ರಹ್ಮರಿಗೆ ಪಶುಪತಿ ಕೋವಿಲ್ ಎಂಬಲ್ಲಿ ಸ್ವಲ್ಪ ಜಮೀನನ್ನೂ, ತಿರುವೈಯ್ಯಾರಿನಲ್ಲಿ ಒಂದು ಮನೆಯನ್ನೂ ಕೊಟ್ಟನು.

ರಾಮಬ್ರಹ್ಮರು ಕಾಲವಾದ ಮೇಲೆ ತಿರುವೈಯ್ಯಾರಿನ ತಿರುಮಂಜಿನ ಬೀದಿಯಲ್ಲಿರುವ ಈ ಮನೆಯನ್ನು ಭಾಗ ಮಾಡಲಾಯಿತು. ಉತ್ತರದ ಭಾಗವು ತ್ಯಾಗರಾಜರಿಗೆ ಕೊಡುತ್ತಿದ್ದ ಹಿಂನೆ, ಕೌರ್ಯಗಳನ್ನು ನೋಡಿದ್ದ ಅಲ್ಲಿಯ ತಹಶೀಲ್ದಾರನ ಮಧ್ಯಸ್ಥಿಕೆಯಿಂದ ಮನೆಯು ವಿಭಾಗವಾಗಿ ಇಬ್ಬರು ಸಹೋದರರಿಗೂ ಒಳ್ಳೆಯದಾಯಿತು. ತ್ಯಾಗರಾಜರ ಪಾಲಿಗೆ ಏಕ ಪೀಠ ವಿಗ್ರಹವು ಬಂದಿತು. ತನ್ನ ಹಿರಿಯ ಸಹೋದರನಿಂದ ತಾವು ಪಟ್ಟಕಷ್ಟವನ್ನು 'ಅನ್ಯಾಯಮು ಸೇಯಕುರ' ಮತ್ತು 'ಆದಯ ಶ್ರೀ ರಘುವ' ಎಂಬ ಕೃತಿಗಳಲ್ಲಿ ಸೂಚಿಸಿದ್ದಾರೆ. ವಿಭಾಗವಾದ ನಂತರ ಜಲ್ಪೇಶನ್ ತಾನು ಮಾಡಿದ ತಪ್ಪುಗಳಿಗೆ ಪಶ್ಚಾತ್ತಾಪಪಟ್ಟರು.

ಇವರ ಮೊಮ್ಮಗ ರಾಮುಡು ಭಾಗವತರು ದಕ್ಷಿಣ ಭಾಗದಲ್ಲಿ ವಾಸವಾಗಿದ್ದರು. ವಾಲಾಜ ಪೇಟೆ ವೆಂಕಟರಮಣ ಭಾಗವತರು ಕೊಟ್ಟ ಮತ್ತು 'ನನುಪಾಲಿಂಪ' ಎಂಬ ಕೃತಿಗೆ ಕಾರಣವಾದ ಕೋದಂಡರಾಮಸ್ವಾಮಿಯ ಚಿತ್ರವು ಇಲ್ಲಿದೆ. ತ್ಯಾಗರಾಜರ ಮನೆಯಲ್ಲಿ ಅವರ ಪುತ್ರಿ ಮತ್ತು ಮೊಮ್ಮಗ ಅನೇಕ ವರ್ಷಗಳ ಕಾಲ ವಾಸಿಸುತ್ತಿದ್ದರು. ನಂತರ ಈ ಮನೆಯನ್ನು ಮಾರಿಬಿಟ್ಟರು. ತ್ಯಾಗಬ್ರಹ್ಮ

ಆರಾಧನ ಮಹೋತ್ಸವ ಸಭೆಯು ಈ ಮನೆಯನ್ನು ಪಡೆದು ಅದು ಈಗ ಒಂದು ಯಾತ್ರಾಸ್ಥಳವಾಗಿದೆ. ಈ ಮನೆಯನ್ನು ಕೊಂಡುಕೊಂಡವರು ಆಗಾಗ್ಗೆ ಉಂಛ ವೃತ್ತಿಯ ಉಡುಪಿನಲ್ಲಿ ತ್ಯಾಗರಾಜರ ರೂಪನ್ನು ಕಾಣುತ್ತಿದ್ದರು ಮತ್ತು ಗಂಟಾನಾದ ವನ್ನು ಕೇಳುತ್ತಿದ್ದರೆಂದು ತಿಳಿದು ಬರುತ್ತದೆ.

ರಾಮಬ್ರಹ್ಮರು ತಿರುವಾರೂರನ್ನು ಬಿಟ್ಟು ೧೭೭೪ರಲ್ಲಿ ತಿರುವೈಯ್ಯಾರಿಗೆ ಬಂದು ನೆಲೆಸಿದರು. ತ್ಯಾಗರಾಜರಿಗೆ ಎಂಟನೆಯ ವಯಸ್ಸಿನಲ್ಲಿ ಉಪನಯನವೂ, ಹದಿನೆಂಟನೆಯ ವಯಸ್ಸಿನಲ್ಲಿ ವಿವಾಹವೂ ಆಯಿತು. ಇವರ ಪ್ರಥಮ ಪತ್ನಿ ಪಾರ್ವತಮ್ಮ ಐದು ವರ್ಷಗಳ ಕಾಲ ಸಂಸಾರ ಜೀವನ ನಡೆಸಿ ಕಾಲವಾದರು. ಅವರ ಇಚ್ಛೆಯಂತೆ ಅವರ ತಂಗಿ ಕಮಲಮ್ಮನನ್ನು ನಂತರ ವಿವಾಹವಾದರು. ಇವರಿಗೆ ಸೀತಾಲಕ್ಷ್ಮಿ ಎಂಬ ಪುತ್ರಿಯ ಜನನವಾಯಿತು ಇವರನ್ನು ಅಖಿಲಾಂಡ ಪುರದ ಕುಪ್ಪಸ್ವಾಮಯ್ಯ ಎಂಬುವರಿಗೆ ಕೊಟ್ಟು ವಿವಾಹವಾಯಿತು. ಇವರ ಪುತ್ರ ಪಂಚಾಪಕೇಶಯ್ಯ ಉತ್ತಮ ಗಾಯಕರಾಗಿದ್ದರು. ಇವರು ಚಿಕ್ಕವಯಸ್ಸಿನಲ್ಲೇ ತೀರಿಕೊಂಡರು. ಇವರ ಪತ್ನಿ ಗುರುವಮ್ಮ ಎಂಬುವರು ತಮ್ಮ ಕೊನೆಯ ದಿನಗಳಲ್ಲಿ ತಂಜಾವೂರಿನಲ್ಲಿ ತಂದೆಯ ಮನೆಯಲ್ಲಿ ಕಳೆದು ೨೦ನೆ ಶತಮಾನದ ಆದಿ ಭಾಗದಲ್ಲಿ ತೀರಿಕೊಂಡರು. ತ್ಯಾಗರಾಜರ ನೇರ ಸಂತತಿಯವರು ಯಾರೂ ಇಲ್ಲ.

ತ್ಯಾಗರಾಜರನ್ನು ಅವರ ತಂದೆ ತಾಯಿಯು ಬಹಳ ಅಕ್ಕರೆಯಿಂದ ಸಾಕಿ ಬೆಳೆಸಿದರು. ಮೊದಲು ತಂದೆಯಲ್ಲಿ ವಿದ್ಯಾಭ್ಯಾಸ ಮಾಡಿ ನಂತರ ತಿರುವೈಯ್ಯಾರಿನ ಸಂಸ್ಕೃತ ಪಾಠಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಚಿಕ್ಕಂದಿನಲ್ಲೇ ಇವರ ಕವಿತಾಶಕ್ತಿ ಬೆಳಕಿಗೆ ಬಂದಿತು. ತಂದೆಯು ನಡೆಸುತ್ತಿದ್ದ ಭಜನೆಯಲ್ಲಿ ವಿಜಯ ಗೋಪಾಲ ಮತ್ತು ಇತರರ ದಿವ್ಯನಾಮಕೀರ್ತನೆಗಳ ಪರಿಚಯವಾಯಿತು. ಮಗನ ಸಂಗೀತ ಪ್ರೇಮವನ್ನು ಕಂಡ ತಂದೆ ಇವರನ್ನು ಸೊಂಟಿ ವೆಂಕಟರಮಣಯ್ಯ ನವರಲ್ಲಿ ಸಂಗೀತ ಶಿಕ್ಷಣ ಪಡೆಯುವ ಏರ್ಪಾಡು ಮಾಡಿದರು ತ್ಯಾಗರಾಜರ ಅವರಲ್ಲಿ ಒಂದು ವರ್ಷ ಕಾಲ ಶಿಕ್ಷಣ ಪಡೆದರು. ಶಿಷ್ಯನ ಪ್ರತಿಭೆಯನ್ನು ತಿಳಿದು ಆಶೀರ್ವದಿಸಿ ಸಂಗೀತ ಪ್ರಪಂಚಕ್ಕೆ ಪ್ರವೇಶಿಸುವಂತೆ ಮಾಡಿದರು. ತಂದೆಯ ಬಳಿ ತೆಲುಗು ಮತ್ತು ಸಂಸ್ಕೃತವನ್ನು ಕಲಿತು ಪಾಂಡಿತ್ಯಗಳಿಸಿದರು. ಆಗ ದೊರಕುತ್ತಿದ್ದ ಸಂಗೀತ ಶಾಸ್ತ್ರದ ಎಲ್ಲಾ ಗ್ರಂಥಗಳನ್ನು ಅಧ್ಯಯನ ಮಾಡಿದರು. ವಿದುಲಕು (ಮಾಯಾಮಾಳವಗೌಳ) ಮತ್ತು ಸಂಗೀತ ಜ್ಞಾನಮು (ಧನ್ಯಾಸಿ) ಎಂಬ ಕೃತಿಗಳಲ್ಲಿ ಸಂಗೀತ ಶಾಸ್ತ್ರಜ್ಞರ ಹೆಸರನ್ನು ಸೂಚಿಸಿದ್ದಾರೆ. ಶಾಸ್ತ್ರಜ್ಞಾನ ಮತ್ತು ಪ್ರತಿಭೆಯಿಂದ ಇವರಿಗೆ ಅನೇಕ ನೂತನ ರಾಗಗಳನ್ನು ಸೃಷ್ಟಿಸಲು ಸಾಧ್ಯವಾಯಿತು. ಕರ್ಣಾಟಕ ಸಂಗೀತವು ಸರಿಯಾದ ಮಾರ್ಗದಲ್ಲಿ ವಿಕಾಸಗೊಳ್ಳಲು ತಳಹದಿ ಹಾಕಿದರು.

ತ್ಯಾಗರಾಜರು ಬೆಳಕಿಗೆ ಬಂದ ಕಾಲದಲ್ಲಿ ತಂಜಾವೂರು ಜಿಲ್ಲೆಯು ಪ್ರತಿಭಾವಂತ ರಾದ ಸಂಗೀತ ವಿದ್ವಾಂಸರ ಬೀಡಾಗಿತ್ತು. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲಕ್ಷಣಕಾರರು,

ಸಂಗೀತಗಾರರು ಮತ್ತು ವಾಗ್ಗೇಯಕಾರರಿದ್ದರು. ಸುಮಾರು ಮೂರು ಶತಮಾನಗಳ ಕಾಲ (೧೬೦೦-೧೯೦೦) ತಂಜಾವೂರು ಒಂದು ಪ್ರಮುಖ ಸಂಗೀತ ಕಲಾ ಕೇಂದ್ರ ವಾಗಿತ್ತು. ತ್ಯಾಗರಾಜರ ಕಾಲದಲ್ಲಿ ತಂಜಾವೂರು ಆಸ್ಥಾನದಲ್ಲಿ ೩೬೦ ಸಂಗೀತ ವಿದ್ವಾಂಸರಿದ್ದರು. ಸಂಗೀತ ಮಹಲ್‌ನಲ್ಲಿ ರಾಜನ ಮುಂದೆ ಹಾಡಲು ಪ್ರತಿಯೊಬ್ಬರಿಗೂ ವರ್ಷದಲ್ಲಿ ಒಂದು ದಿನ ಮಾತ್ರ ಅವಕಾಶ ದೊರಕುತ್ತಿತ್ತು. ಪ್ರತಿಯೊಬ್ಬರೂ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಪ್ರಯತ್ನಿಸುತ್ತಿದ್ದರು. ಕೆಲವರು ಕೆಲವು ರಾಗಗಳನ್ನು ಹಾಡುವುದರಲ್ಲಿ ಪ್ರಸಿದ್ಧರಾಗಿದ್ದರು ತೋಡಿ ಸೀತಾ ರಾಮಯ್ಯ, ಆರಾಣ ಅಪ್ಪಯ್ಯ, ಶಂಕರಾಭರಣಂ ನರಸಯ್ಯ ಮುಂತಾದವರು ಪ್ರಸಿದ್ಧರು.

ಸರಳ ಜೀವನ, ಉನ್ನತ ಧ್ಯೇಯಗಳು, ಚಿಂತನೆ, ಮಾನವ ಕೋಟಿಯ ಸೇವೆ ಮುಂತಾದುವುಗಳಿಂದ ಪ್ರೇರಿತರಾದ ತ್ಯಾಗರಾಜರು ಅತ್ಯಂತ ಸರಳವಾದ ಜೀವನವನ್ನು ನಡೆಸುತ್ತಿದ್ದರು. ಪಿತ್ರಾರ್ಜಿತವಾದ ಮನೆಯ ಒಂದು ಭಾಗ ಮತ್ತು ಸ್ವಲ್ಪ ಜಮೀನಿನ ವಿನಹ ಇವರಿಗೆ ಇನ್ನಾವ ಆಸ್ತಿಯೂ ಇರಲಿಲ್ಲ. ಉಂಛವೃತ್ತಿಯ ಮೂಲಕ ತನ್ನ ಕುಟುಂಬವನ್ನೂ, ಅನೇಕ ಶಿಷ್ಯರನ್ನೂ ಪೋಷಿಸುತ್ತಿದ್ದರು. ಇದಲ್ಲದೆ ಅನೇಕ ಸಂಗೀತಗಾರರು, ಪಂಡಿತರು, ಭಾಗವತರೂ ಅತಿಥಿಗಳಾಗಿ ಬರುತ್ತಿದ್ದರು. ವಾರಕ್ಕೆ ಒಂದು ದಿನ ಮಾತ್ರ ಉಂಛ ವೃತ್ತಿಗೆ ಹೋಗುತ್ತಿದ್ದರು. ನೆರೆಹೊರೆಯ ಸ್ಥಳಗಳಿಗೆ ಆಹ್ವಾನೆಯ ಮೇರೆಗೆ ಉಂಛ ವೃತ್ತಿ ಭಜನೆಗಳಿಗಾಗಿ ಹೋಗುತ್ತಿದ್ದರು. 'ಎನ್ನಾಳ್ಳು ತಿರಿಗೇದಿ' ಎಂಬ ಮೊಳವ ಶ್ರೀ ರಾಗದ ಕೃತಿಯಲ್ಲಿ ಇದನ್ನು ಸೂಚಿಸಿದ್ದಾರೆ. ಇವರ ಮಧ್ಯ ವಯಸ್ಸಿನಲ್ಲಿ ಅತ್ಯಂತ ಶ್ರೇಷ್ಠ ವಾಗ್ಗೇಯಕಾರ ಮತ್ತು ಗಾಯಕನೆಂಬ ಕೀರ್ತಿ ದೇಶದ ಮೂಲೆ ಮೂಲೆಗಳಿಗೆ ಹರಡಿತು. ರಸಿಕರು ಮತ್ತು ಖ್ಯಾತ ವಿದ್ವಾಂಸರು ದೂರದ ಪ್ರದೇಶಗಳಿಂದ ಇವರ ಸಂದರ್ಶನ ಪಡೆಯುತ್ತಿದ್ದರು. ತನ್ನ ಕೀರ್ತಿಯು ಎಲ್ಲೆಲ್ಲೂ ಹರಡುವಂತೆ ಮಾಡಿದ ಶ್ರೀ ರಾಮನನ್ನು 'ದಾಶರಥೇ ! ನೀ ಋಣಮು' ಎಂಬ ತೋಡಿರಾಗದ ಕೃತಿಯಲ್ಲಿ ಕೊಂಡಾಡಿದ್ದಾರೆ. ಅವರಿಗೆ ತಮ್ಮ ಕೃತಿಗಳು ಉತ್ತಮ ವಾದವು ಮತ್ತು ತಮ್ಮ ಮೂಲಕ ದೇವರು ತಿಳಿಸಿದನೆಂದು ತಿಳಿದಿತ್ತು

ತ್ಯಾಗರಾಜರು ತಮ್ಮ ಸಂಗೀತ ಜೀವನವನ್ನು ಆರಂಭಿಸಿದಾಗ ಕೆಲವು ಕುತೂಹಲಕರವಾದ ಘಟನೆಗಳು ನಡೆದುವು ಅವರ 18ನೆ ವಯಸ್ಸಿನಲ್ಲಿ ಹರಿದಾಸ ಅಥವಾ ರಾಮಕೃಷ್ಣ ಯತೀಂದ್ರರೆಂಬುವರು ಕಾಂಚೀಪುರದಿಂದ ಬಂದು ರಾಮ ತಾರಕ ಮಂತ್ರ ವನ್ನು ಉಪದೇಶಿಸಿ ಅದನ್ನು 96 ಕೋಟಿ ಸಲ ಜಪ ಮಾಡಬೇಕೆಂದು ಹೇಳಿದರು. ತ್ಯಾಗರಾಜರು ರಾಮನಾಮ ಜಪವನ್ನು ಸರಾಸರಿ ದಿನವೊಂದಕ್ಕೆ 125000 ದಷ್ಟು ಜಪಿಸಿ 21 ವರ್ಷಗಳಲ್ಲಿ ಪೂರ್ಣಗೊಳಿಸಿದರು. ಈ ಕಾಲದಲ್ಲಿ ಹಲವು ಸಲ ಶ್ರೀ ರಾಮನು ಇವರಿಗೆ ದರ್ಶನವಿತ್ತು ಅನುಗ್ರಹಿಸಿದನು. ಏಲನೀ ದಯರಾದು (ಆಠಾಣ) ಮತ್ತು ಕನುಗೊಂಟಿನಿ (ಬಿಲಹರಿ) ಮುಂತಾದ ಕೃತಿಗಳನ್ನು ಇಂತಹ

ಸಂದರ್ಭದಲ್ಲಿ ರಚಿಸಿದರು. 'ನೌಕಾಚರಿತ್ರ'ದ ಪ್ರಾರ್ಥನಾ ಖಂಡ ಪದ್ಯದಲ್ಲಿ ರಾಮ ಕೃಷ್ಣಯತೀಂದ್ರರಿಗೆ ತಮ್ಮ ಗೌರವವನ್ನು ಸಲ್ಲಿಸಿದ್ದಾರೆ.

ಒಂದು ದಿನ ಬೆಳಿಗ್ಗೆ ಒಬ್ಬ ಸನ್ಯಾಸಿಯು ತ್ಯಾಗರಾಜರ ಮನೆಗೆ ಬಂದು ಅವರ ಸಂಗೀತವನ್ನು ಕೇಳಿ, ಕೆಲವು ಸಂಗೀತ ಶಾಸ್ತ್ರ ಗ್ರಂಥಗಳನ್ನು ಇಟ್ಟು ಕಾವೇರಿಗೆ ಹೋಗಿ ಸ್ನಾನ ಮಾಡಿ ಭಿಕ್ಷಕ್ಕೆ ಬರುವುದಾಗಿ ಹೋದರು ತ್ಯಾಗರಾಜರು ಆ ದಿನವೆಲ್ಲಾ ಉಪವಾಸವಿದ್ದು ಕಾದರು. ಆ ಸನ್ಯಾಸಿಯ ಸುಳಿವೇ ಇಲ್ಲ. ಅಂದು ರಾತ್ರಿ ಸ್ವಪ್ನದಲ್ಲಿ ಅವರಿಗೆ ಆ ಸನ್ಯಾಸಿಯು ದರ್ಶನವಿತ್ತು ತಾನು ನಾರದನೆಂದೂ, ಕೆಲವು ಸಂಗೀತ ಗ್ರಂಥಗಳನ್ನು ಕೊಡಲು ತಾನು ಬಂದಿದ್ದುದಾಗಿ ಹೇಳಿದಂತಾಯಿತು. ತ್ಯಾಗರಾಜರು ಎಚ್ಚರಗೊಂಡು ಗ್ರಂಥಗಳ ಕಟ್ಟನ್ನು ಬಿಚ್ಚಿ ನೋಡಿದಾಗ ಅದರಲ್ಲಿ ಸ್ವರಾರ್ಣವ ಮತ್ತು ನಾರದೀಯಂ ಎಂಬ ಗ್ರಂಥಗಳಿದ್ದುವು. ತ್ಯಾಗರಾಜರು ಕಷ್ಟದಲ್ಲಿದ್ದಾಗಲೆಲ್ಲ ಸನ್ಯಾಸಿಯ ದರ್ಶನದಿಂದ ಮಾರ್ಗದರ್ಶನ ಪಡೆದಿರುವುದು ಗಮನಾರ್ಹ

ತ್ಯಾಗರಾಜರು ನೋಡಲು ತೇಜಸ್ವಿಯೂ ಸೌಮ್ಯವಾದ ಮುಖವುಳ್ಳ ಸ್ಫೂರ್ತಿಯನ್ನೀಯುವ ಗೌರವರ್ಣದ ವ್ಯಕ್ತಿಯಾಗಿದ್ದರು. ಅವರು ಸುಮಾರು 5 ಅಡಿ 9 ಅಂಗುಲ ಎತ್ತರವಿದ್ದರು. ಕಂಠದಲ್ಲಿ ಯಾವಾಗಲೂ ತುಳಸಿ ಮಾಲೆ ಧರಿಸಿದ್ದರು. ಉಂಛ ವೃತ್ತಿಯ ಉಡುಪಿನಲ್ಲಿ ಅವರ ದರ್ಶನ ಪಡೆಯುವುದು ಒಂದು ಅನುಭವವಾಗಿರುತ್ತಿತ್ತು. ಅತ್ಯಂತ ಸರಳರೂ, ವಿನಯ ಸಂಪನ್ನರಾಗಿದ್ದೂ ಎಲ್ಲರಿಗೂ ಸುಲಭ ಪ್ರಾಪ್ತರಾಗಿದ್ದರು.

**ಕೆಲವು ಕುತೂಹಲಕರ ಘಟನೆಗಳು**—ಅನೇಕ ಅಪರೂಪ ರಾಗಗಳಲ್ಲಿ ವಿದ್ವತ್ಪೂರ್ಣವಾದ ಹಲವಾರು ಕೃತಿಗಳನ್ನು ರಚಿಸಿರುವ ತ್ಯಾಗರಾಜರು ಆನಂದ ಭೈರವಿ ರಾಗದಲ್ಲಿ ಸರಳವಾದ ಮೂರು ಕೃತಿಗಳನ್ನು ಮಾತ್ರ ಏಕೆ ರಚಿಸಿದಾರೆ ಎಂಬ ಪ್ರಶ್ನೆಗೆ ಉತ್ತರವನ್ನು ಒಂದು ಘಟನೆಯಿಂದ ತಿಳಿಯಬಹುದು ತಿರಿಭುವನಂ ಸ್ವಾಮಿನಾಥ ಅಯ್ಯರ್ ಎಂಬ ಪ್ರತಿಭಾವಂತ ಗಾಯಕ ಮತ್ತು ನಟ ತ್ಯಾಗರಾಜರ ಒಬ್ಬ ಸಮಕಾಲೀನರಾಗಿದ್ದರು. ತೋಡಿ ಸೀತಾರಾಮಯ್ಯ ಮುಂತಾದವರಂತೆ ಅವರು ಆನಂದ ಭೈರವಿರಾಗವನ್ನು ಹಾಡುವುದರಲ್ಲಿ ಅದ್ವಿತೀಯ ಪ್ರಸಿದ್ಧರಾಗಿದ್ದರು.

**ಆನಂದ ಭೈರವಿ ಘಟನೆ**--ಒಂದು ಸಲ ಇವರ ಬೊಮ್ಮಲಾಟದ ತಂಡವು ತಿರುವೈಯ್ಯಾರಿಗೆ ಬಂದು ಅನೇಕ ರಾತ್ರಿ ತಮ್ಮ ಆಟದ ಪ್ರದರ್ಶನ ಮಾಡಿತು. ತ್ಯಾಗರಾಜರ ಶಿಷ್ಯರು ಈ ಆಟವನ್ನು ನೋಡಿ ಅಯ್ಯರ್‌ರವರ ಆನಂಧ ಭೈರವಿ ರಾಗಕ್ಕೆ ಮಾರು ಹೋಗಿ ತಮ್ಮ ಗುರುವಿಗೆ ತಿಳಿಸಿದರು. ಒಂದು ರಾತ್ರಿ ಯಾರಿಗೂ ತಿಳಿಯದಂತೆ ಆಟವನ್ನು ನೋಡಲು ಹೋದರು. ಅಯ್ಯರ್‌ರವರ ಹಾಡುಗಾರಿಕೆಯಿಂದ ಬಹಳ ಸಂತೋಷಪಟ್ಟರು. ಆಟವು ಮುಗಿದ ಕೂಡಲೇ ಅವರನ್ನು ಅಭಿನಂದಿಸಲು ಹೊರಟರು. ಮಹಾವಾಗ್ಗೇಯಕಾರರು ತಮ್ಮ ಮಧ್ಯೆ ಇರುವುದನ್ನು ತಿಳಿದ ಜನರು ಇವರಿಗೆ ದಾರಿ ಬಿಟ್ಟರು. ತ್ಯಾಗರಾಜರು ತಮ್ಮ ಕಡೆಗೆ ಬರುವುದನ್ನು ನೋಡಿ,

ರಂಗಸ್ಥಳದಿಂದ ಕೂಡಲೇ ಬಂದು ಅವರ ಪಾದಕ್ಕೆರಗಿ 'ತಾವು ಇಲ್ಲಿ ಬಂದಿರುವಾಗ ರಾಗಾಲಾಪನೆ ಮಾಡಲು ಪ್ರಯತ್ನಿಸಿದ್ದನ್ನು ಕ್ಷಮಿಸಬೇಕು' ಎಂದರು. 'ನೀವು ಆನಂದ ಭೈರವಿ ರಾಗಾಲಾಪನೆ ಮಾಡುವುದರಲ್ಲಿ ಪ್ರತಿಭಾವಂತರು ಎಂದು ನನ್ನ ಶಿಷ್ಯರು ತಿಳಿಸಿದರು. ನಾನೇ ಕೇಳಲು ಬಂದೆ. ನಿಮ್ಮ ಹಾಡುಗಾರಿಕೆಯಿಂದ ಬಹಳ ಸಂತೋಷವಾಗಿದೆ' ಎಂದರು ತ್ಯಾಗರಾಜರು. ಆಗ ಅಯ್ಯರ್‌ರವರು ತ್ಯಾಗರಾಜರನ್ನು ಒಂದು ವರ ನೀಡಬೇಕೆಂದು ಪ್ರಾರ್ಥಿಸಿದರು. ಅವರು ತಥಾಸ್ತು ಎಂದ ಕೂಡಲೇ 'ತಾವು ಇನ್ನು ಮುಂದೆ ಈ ರಾಗದಲ್ಲಿ ಕೃತಿಗಳನ್ನು ರಚಿಸಬಾರದು. ಮುಂದಿನ ಜನಾಂಗದವರು ಏಕೆ ಹೀಗೆ ಮಾಡಿದ್ದಾರೆ ಎಂದು ಕೇಳಿದಾಗ ಈ ಘಟನೆಯು ಜ್ಞಾಪಕಕ್ಕೆ ಬಂದು ನನ್ನ ಹೆಸರು ಎಂದೆಂದಿಗೂ ನಿಲ್ಲುತ್ತದೆ' ಎಂದು ಅಯ್ಯರ್ ಕೇಳಿದರು. ತ್ಯಾಗರಾಜರು ಆ ನಟನ ಬುದ್ಧಿವಂತಿಕೆಗೆ ನಕ್ಕು ಒಪ್ಪಿದರು. ಅಂತೆಯೇ ಅವರು ಈ ರಾಗದಲ್ಲಿ ಕೃತಿಗಳನ್ನು ರಚಿಸಲಿಲ್ಲ ಮತ್ತು ಮುಂಚೆಯೇ ರಚಿಸಿದ್ದ ಕೃತಿಗಳನ್ನು ಶಿಷ್ಯರಿಗೆ ಹೇಳಿಕೊಡಲಿಲ್ಲ. 'ರಾಮ ರಾಮ ನೀವರಮು' ಎಂಬ ದಿವ್ಯನಾಮ ಕೀರ್ತನೆ, ಕ್ಷೀರಸಾಗರ ವಿಹಾರ ಎಂಬ ಉತ್ಸವ ಸಂಪ್ರದಾಯ ಕೀರ್ತನೆ ಮತ್ತು ನೀಕೇ ತೆಲಿಯಕ ಎಂಬ ಕೃತಿ ಅವರ ಶಿಷ್ಯರಿಂದ ನಮಗೆ ಬಂದಿವೆ.

**ನೀದಯಚೇ**—ತ್ಯಾಗರಾಜರ ಭಜನೆಗಳಿಗೆ ಬರುತ್ತಿದ್ದ ಒಬ್ಬ ವ್ಯಕ್ತಿಯು ಒಂದು ಸಲ ಅವರನ್ನು ಒಂದು ಹಾಡನ್ನು ಹೇಳಿಕೊಡಬೇಕೆಂದು ಕೇಳಿದನು. ಅವನಿಂದ ಒಂದು ಹಾಡನ್ನು ಹೇಳಿಸಿ ಅವನ ಕಂಠದ ಇತಿ ಮಿತಿಯನ್ನು ತಿಳಿದು ಯದುಕುಲ ಕಾಂಭೋಜಿರಾಗದಲ್ಲಿ ಸರಳವಾದ ನೀ ದಯ ಚೇ ಎಂಬ ಕೃತಿಯನ್ನು ರಚಿಸಿ ಹೇಳಿಕೊಟ್ಟರು.

**ಪ್ರಾರ್ಥನೆಯ ಫಲ**—ವಾಲಾಜ ಪೇಟೆ ವೆಂಕಟರಮಣ ಭಾಗವತರು (೧೭೮೧–೧೮೭೪) ತ್ಯಾಗರಾಜರ ಒಬ್ಬ ಪ್ರಮುಖ ಶಿಷ್ಯರಾಗಿದ್ದರು. ಇವರನ್ನು ತ್ಯಾಗರಾಜರ ಬಾಸ್ವೆಲ್ ಎನ್ನಬಹುದು. ಪ್ರಾರಂಭದಲ್ಲಿ ಭಾಗವತರು ಇತರ ಶಿಷ್ಯರಂತೆ ಸಂಗೀತದಲ್ಲಿ ಮುಂದುವರಿಯುತ್ತಿರಲಿಲ್ಲ. ಇದನ್ನು ಕಂಡ ಗುರುವಿಗೆ ಸಂಕಟವಾಯಿತು. ಶಿಷ್ಯನಿಗೆ ಸಂಗೀತ ಜ್ಞಾನವನ್ನು ಕರುಣಿಸಬೇಕೆಂದು ಭಗವಂತನಲ್ಲಿ ಮೊರೆಯಿಟ್ಟರು. ಮಾರನೆಯ ದಿನದಿಂದಲೇ ಭಾಗವತರು ಎಲ್ಲರೂ ಆಶ್ಚರ್ಯ ಪಡುವಂತೆ ತಮ್ಮ ಕಲಿಕೆಯಲ್ಲಿ ಪ್ರಗತಿಪಡೆದು ತ್ಯಾಗರಾಜರ ಪ್ರಸಿದ್ಧ ಶಿಷ್ಯರಾದರು. ಇವರು ತ್ಯಾಗರಾಜರೊಡನೆ ೨೬ ವರ್ಷಗಳಿಗಿಂತ ಹೆಚ್ಚುಕಾಲ ನಿಕಟ ಸಂಪರ್ಕ ಪಡೆದಿದ್ದು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಅವರ ಕೃತಿಗಳನ್ನು ಕಲಿತವರಾದರು.

**ವೀಣಾಕುಪ್ಪಯ್ಯರ್ ಮತ್ತು ತ್ಯಾಗರಾಜರ ವೀಣೆ**—ಕುಪ್ಪಯ್ಯರ್ ತ್ಯಾಗರಾಜರಲ್ಲಿ ಶಿಷ್ಯವೃತ್ತಿಗೆ ಬಂದಾಗ ತಾನು ವೈಣಿಕನೆಂದು ಅವರಿಗೆ ತಿಳಿಸಲಿಲ್ಲ ತನ್ನ ಗುರುವಿನ ವೀಣೆಯನ್ನು ನುಡಿಸಬೇಕೆಂಬ ಬಯಕೆ ಅವರಿಗೆ ಪ್ರಬಲವಾಯಿತು

ಒಂದು ದಿನ ತ್ಯಾಗರಾಜರು ಮತ್ತು ಇತರ ಶಿಷ್ಯರೂ ಕಾರ್ಯಾರ್ಥವಾಗಿ ಎಲ್ಲೋ ಹೋಗಿದ್ದಾಗ, ಇಂತಹ ಸಮಯವನ್ನೇ ಎದುರು ನೋಡುತ್ತಿದ್ದ ಕುಪ್ಪಯ್ಯರ್ ಗುರುವಿನ ವೀಣೆಯನ್ನು ತೆಗೆದುಕೊಂಡು ಅದನ್ನು ಅದ್ಭುತವಾಗಿ ನುಡಿಸುವುದರಲ್ಲಿ ತಲ್ಲೀನರಾದರು. ಈ ವಾದನದಿಂದ ಆಕರ್ಷಿತರಾದ ಗುರು ಪತ್ನಿಯು ಅಡಿಗೆ ಮನೆಯಿಂದ ಬಂದು ನೋಡಿ ಅಯ್ಯರ್‌ರವರಿಗೆ ತಿಳಿಯದಂತೆ ಮರೆಯಲ್ಲಿ ನಿಂತು ಕೇಳುತ್ತಿದ್ದರು. ಸ್ವಲ್ಪ ಹೊತ್ತಾದ ನಂತರ ಮನೆಗೆ ಬಂದ ತ್ಯಾಗರಾಜರು ಸೊಗಸಾದ ವೀಣಾವಾದನವನ್ನು ಕೇಳಿ ಯಾರಿರಬಹುದೆಂದು ಆಶ್ಚರ್ಯ ಪಡುತ್ತಾ ಹಾಗೆಯೇ ಜಗಲಿಯಲ್ಲಿ ಕುಳಿತು ಕೇಳತೊಡಗಿದರು. ಕುತೂಹಲವು ಹೆಚ್ಚಾಯಿತು. ಒಳಗೆ ಹೋದರು. ಗುರುವನ್ನು ನೋಡಿದ ಕೂಡಲೇ ಕುಪ್ಪಯ್ಯರ್ ಎದ್ದು ಸಾಷ್ಟಾಂಗ ಪ್ರಣಾಮ ಮಾಡಿ ಅವರ ಅಪ್ಪಣೆಯಿಲ್ಲದೆ ನುಡಿಸಿದ್ದಕ್ಕಾಗಿ ಕ್ಷಮೆ ಬೇಡಿದರು. ತ್ಯಾಗರಾಜರು ಅವರ ವೀಣಾವಾದನವನ್ನು ಮೆಚ್ಚಿಕೊಂಡು ಸಂತೋಷ ವ್ಯಕ್ತ ಪಡಿಸಿದರು. ಈ ಘಟನೆಯು ಅವರ ಹೃದಯ ವೈಶಾಲ್ಯವನ್ನು ತೋರಿಸುತ್ತದೆ.

**"ದಾರಿನಿ ತೆಲುಸು ಕೊಂಟಿ"**—ಒಂದು ಸಲ ಆಗಿನ ಪ್ರಸಿದ್ಧ ನಾಗಸ್ವರ ವಿದ್ವಾಂಸರಾಗಿದ್ದ ದಾಸರಿ ಎಂಬುವರು ತಿರುವೈಯ್ಯಾರಿನ ದೇವಾಲಯದ ಉತ್ಸವಕ್ಕೆ ನುಡಿಸಲು ಬಂದರು. ಉತ್ಸವವು ತ್ಯಾಗರಾಜರ ಮನೆಯ ಸಮೀಪಕ್ಕೆ ಬಂದಿತು. ದಾಸರಿಯು ಶುದ್ಧಸಾವೇರಿ ರಾಗಾಲಾಪನೆಯನ್ನು ನುಡಿಸಿ ತ್ಯಾಗರಾಜ ವಿರಚಿತ ದಾರಿನಿ ತೆಲುಸು ಕೊಂಟಿ ಎಂಬ ಕೃತಿಯನ್ನು ಅದರ ಹೊಳೆಯುವ ಸಂಗತಿಗಳೊಡನೆ ಅದ್ಭುತವಾಗಿ ನುಡಿಸಿದರು. ಆ ನಿಶ್ಶಬ್ದ ರಾತ್ರಿಯಲ್ಲಿ ಮನೆಯಿಂದಲೇ ಕೇಳುತ್ತಿದ್ದ ತ್ಯಾಗರಾಜರು ಬಹಳ ಸಂತೋಷಪಟ್ಟು ದಾಸರಿಯನ್ನು ಕಂಡು ಅಭಿನಂದಿಸಿದರು.

**ಜ್ಯೋತಿ ಸ್ವರೂಪಿಣಿ ರಾಗದ ಘಟನೆ:** ಒಂದು ಸಲ ತ್ಯಾಗರಾಜರು ತಮ್ಮ ಗುರು ಸೊಂಟಿ ವೆಂಕಟರಮಣದಾಸರ ಸಂಗಡ ಪುದುಕೋಟೆಯ ರಾಜಾಸ್ಥಾನಕ್ಕೆ ಹೋಗಿದ್ದರು. ಆಗ ವಿಜಯರಘುನಾಥ ತೊಂಡೈಮಾನ್ ಈ ಸಂಸ್ಥಾನದ ರಾಜ ನಾಗಿದ್ದನು. ಇವನು ವಿದ್ವಾಂಸನೂ, ಸಂಗೀತಗಾರನೂ ಆಗಿದ್ದು ನೂರಾರು ಸಂಸ್ಕೃತ ಮತ್ತು ತೆಲುಗು ವಿದ್ವಾಂಸರು ಮತ್ತು ಸಂಗೀತ ವಿದ್ವಾಂಸರ ಪೋಷಕನಾಗಿದ್ದನು ಆಸ್ಥಾನದಲ್ಲಿ ನೆರೆದಿದ್ದ ಸಂಗೀತ ವಿದ್ವಾಂಸರಿಗೆ ಒಂದು ವಿಚಿತ್ರವಾದ ಸವಾಲನ್ನು ಹಾಕಿ ದನು. ಅವರ ಮುಂದೆ ದರ್ಬಾರು ಮಂಟಪದ ಮಧ್ಯದಲ್ಲಿ ಒಂದು ದೀಪವನ್ನು ಇಟ್ಟು ಅದನ್ನು ತಮ್ಮ ಗಾಯನದಿಂದ ಮಾತ್ರ ಹತ್ತಿಕೊಳ್ಳುವಂತೆ ಮಾಡಬೇಕೆಂದು ಹೇಳಿ ದನು. ಗುರುವಿನಿಂದ ಪ್ರೋತ್ಸಾಹಿಸಲ್ಪಟ್ಟ ತ್ಯಾಗರಾಜರು ಜ್ಯೋತಿ ಸ್ವರೂಪಿಣಿ ರಾಗ ವನ್ನು ಹಾಡಿದಾಗ ದೀಪವು ಹತ್ತಿಕೊಂಡು ಆ ರಾಗದ ಏರಿಳಿತಕ್ಕೆ ತಕ್ಕಂತೆ ಅದರ ಪ್ರಕಾಶವು ಹೆಚ್ಚು ಕಡಿಮೆಯಾಗುತ್ತಿದ್ದುದನ್ನು ಕಂಡು ಎಲ್ಲರೂ ಆಶ್ಚರ್ಯ ಚಕಿತ ರಾದರು. ಈ ವಿಚಾರವು ಪುದುಕೋಟೆಗೆ ಜೆಟಿಯರ್‌ನಲ್ಲಿ ಹೇಳಲಾಗಿದೆ. (ಸಂಪುಟ ೨, ಪುಟ ೮೨೦)

**ತ್ಯಾಗರಾಜರನ್ನು ಭೇಟಿ ಮಾಡಿದ ಕೆಲವು ಪ್ರಸಿದ್ಧ ವ್ಯಕ್ತಿಗಳು**— ಆಗಿನ ಅನೇಕ ಪ್ರಸಿದ್ಧ ಕವಿಗಳು, ವಾಗ್ಗೇಯಕಾರರು, ಸಂಗೀತಗಾರರು, ಸನ್ಯಾಸಿಗಳು, ಶ್ರೀಮಂತರು ಮತ್ತು ರಾಜರು ಮಹಾಪುರುಷರಾದ ತ್ಯಾಗರಾಜರನ್ನು ಸಂದರ್ಶಿಸಲು ಬಂದು ಅವರ ಅತಿಥಿಗಳಾಗಿರುತ್ತಿದರು.

ತೂಮು ನರಸಿಂಹದಾಸರು ತೆಲುಗು ಮತ್ತು ಸಂಸ್ಕೃತದಲ್ಲಿ ಭಕ್ತಿಗೀತೆಗಳನ್ನು ರಚಿಸಿದ ಪ್ರಮುಖ ವಾಗ್ಗೇಯಕಾರರಾಗಿದ್ದರು. ಈ ಹಾಡುಗಳನ್ನು ಭಜನೆಗಳಲ್ಲಿ ಹೆಚ್ಚಾಗಿ ಹಾಡುತ್ತಾರೆ. ಇವರು ಆಂಧ್ರದ ಗುಂಟೂರಿನಲ್ಲಿ ವಾಸಿಸುತ್ತಿದ್ದರು. ರಾಮೇಶ್ವರಕ್ಕೆ ತೀರ್ಥಯಾತ್ರೆ ಹೋಗುತ್ತಾ ತಿರುವೈಯ್ಯಾರಿಗೆ ಬಂದು ೧೮೨೧ ರಲ್ಲಿ ತ್ಯಾಗರಾಜರನ್ನು ಸಂದರ್ಶಿಸಿ ಅವರ ಗಾಯನವನ್ನು ಕೇಳಿ ಆನಂದಭರಿತರಾಗಿ ಅವರು ಭೂಲೋಕದ ನಾರದರೆಂದು ಪ್ರಶಂಸಿಸಿ ತಮ್ಮ ಅನುಭವವನ್ನು ಕುರಿತು ಒಂದು ಸೀಸ ಪದ್ಯವನ್ನೂ, ಎರಡು ತೆಲುಗು ಪದ್ಯಗಳನ್ನು ರಚಿಸಿದರು. ಕೆಲವು ದಿನಗಳು ತ್ಯಾಗರಾಜರ ಸಂಗಡವಿದ್ದು ತಮ್ಮ ತೀರ್ಥಯಾತ್ರೆಯನ್ನು ಮುಗಿಸಿ ಗುಂಟೂರಿಗೆ ಹಿಂತಿರುಗಿದರು.

**ಗೋಪೀನಾಥಭಟ್ಟಾಚಾರ್ಯ**—ಇವರು ವಾರಣಾಸಿಯ ಪ್ರಸಿದ್ಧ ಹಿಂದೂಸ್ಥಾನಿ ಸಂಗೀತ ವಿದ್ವಾಂಸರಾಗಿದ್ದರು. ರಾಮೇಶ್ವರಕ್ಕೆ ತೀರ್ಥಯಾತ್ರೆ ಹೊರಟು ತಂಜಾವೂರಿಗೆ ಬಂದು ನಂತರ ತಿರುವೈಯ್ಯಾರಿಗೆ ಹೋಗಿ ತ್ಯಾಗರಾಜರ ಸಂದರ್ಶನ ಮಾಡಿ ಅವರ ಬಹು ದಿನದ ಆಸೆ ಅಂದು ಪೂರೈಸಿತೆಂದು ಹೇಳಿದರು. ಇದನ್ನು ಕೇಳಿದ ತ್ಯಾಗರಾಜರು ತೋಡಿ ರಾಗದ ದಾಶರಥೇ ನೀ ಋಣಮು ಎಂಬ ಕೃತಿಯನ್ನು ಹಾಡಿ ತಮ್ಮ ಕೀರ್ತಿಯು ಎಲ್ಲೆಲ್ಲೂ ಹರಡಿರುವುದಕ್ಕಾಗಿ ಶ್ರೀ ರಾಮನಿಗೆ ತಮ್ಮ ಕೃತಜ್ಞತೆಯನ್ನು ಸಲ್ಲಿಸಿದರು. ಭಕ್ತಿಯಿಂದ ತಕ್ಷಣವೇ ತ್ಯಾಗರಾಜರ ಕೃತಿ ರಚಿಸಿ ಹಾಡಿದ ಆ ಗಾಯನ ಮಾಧುರ್ಯದಿಂದ ಭಟ್ಟಾಚಾರ್ಯರಿಗೆ ರೋಮಾಂಚನವಾಯಿತು. ಕೆಲವು ದಿನಗಳು ಅವರ ಅತಿಥಿಯಾಗಿದ್ದು ನಂತರ ತಮ್ಮ ತೀರ್ಥಯಾತ್ರೆಯನ್ನು ಮುಂದುವರಿಸಿದರು.

**ಗೋಪಾಲ ಕೃಷ್ಣ ಭಾರತಿ**—ಗೋಪಾಲ ಕೃಷ್ಣ ಭಾರತಿಯು ತಮಿಳಿನಲ್ಲಿ ಅನೇಕ ಹಾಡುಗಳನ್ನು ರಚಿಸಿ 'ನಂದನಾರ್ ಚರಿತ್ರಂ'ನ್ನು ರಚಿಸುವ ಮೊದಲೇ ಪ್ರಸಿದ್ಧರಾಗಿದ್ದರು. ಸರಳವಾದ ಭಾಷೆ ಮತ್ತು ಉತ್ತಮ ಸಂಗೀತವಿರುವ ಇವರ ಹಾಡುಗಳು ತಮಿಳು ನಾಡಿನಲ್ಲಿ ಎಲ್ಲರ ಬಾಯಲ್ಲೂ ಇತ್ತು 'ನಂದನಾರ್ ಚರಿತ್ರಂ' 1851 ರಲ್ಲಿ ಪ್ರಕಟವಾಯಿತು. ಭಾರತಿಯುವರಿಗೆ ತ್ಯಾಗರಾಜರನ್ನು ಸಂದರ್ಶಿಸಿ ಅವರ ಆಶೀರ್ವಾದವನ್ನು ಪಡೆಯಬೇಕೆಂಬ ಹಂಬಲ ಪ್ರಬಲವಾಗಿತ್ತು. ಒಂದು ಸಲ ತಿರುವೈಯ್ಯಾರಿಗೆ ಹೋಗಿ ಅವರನ್ನು ಭೇಟಿ ಮಾಡಿದರು. ಅವರು ಮಾಯಾವರದವರೆಂದು ತಿಳಿದ ತ್ಯಾಗರಾಜರು 'ಒಳ್ಳೆಯ ತಮಿಳು ಹಾಡುಗಳನ್ನು ರಚಿಸಿರುವ ಗೋಪಾಲ ಕೃಷ್ಣ ಭಾರತಿಯುವರು ನಿಮಗೆ ಗೊತ್ತೇ? ಎಂದು ಕೇಳಿದರು. ಇಂತಹ ಪ್ರಶಂಸೆಗೆ

ಸಿದ್ಧರಾಗಿಲ್ಲದ ಭಾರತಿಯವರು ತಾನೇ ಆ ಭಾರತಿ ಎಂದು ಪರಿಚಯ ಹೇಳಿಕೊಂಡಾಗ ತ್ಯಾಗರಾಜರಿಗೆ ಮಹದಾನಂದವಾಯಿತು.

ಭಾರತಿಯವರು ನೋಡಲು ಆಕರ್ಷಕವಾದ ವ್ಯಕ್ತಿಯಾಗಿರಲಿಲ್ಲ. ತ್ಯಾಗರಾಜರಿಗೆ ಅವರು ಯಾರೆಂದು ಊಹಿಸಲು ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ತ್ಯಾಗರಾಜರ ಶಿಷ್ಯರು ಆ ಭೋಗಿಯ ಒಂದು ಕೃತಿಯನ್ನು ಹಾಡುತ್ತಿದ್ದರು. ಅದಾದ ನಂತರ ಯಾವುದಾದರೂ ಕೃತಿಯನ್ನು ಆ ರಾಗದಲ್ಲಿ ರಚಿಸಿದ್ದಾರೆಯೇ ಎಂದು ಭಾರತಿಯನ್ನು ತ್ಯಾಗರಾಜರು ಕೇಳಿದರು. ಅದಕ್ಕೆ ಅವರು ಉತ್ತರ ಕೊಡದೆ ಸುಮ್ಮನಿದ್ದೂ ಅದೇ ರಾತ್ರಿ ಈಗ ಪ್ರಚಲಿತವಿರುವ ಸಭಾಪತಿಕ್ಕು ವೇರು ದೈವಂ ಎಂಬ ಕೃತಿಯನ್ನು ರಚಿಸಿ ಮೂರನೆಯ ದಿನ ತ್ಯಾಗರಾಜರ ಮುಂದೆ ಹಾಡಿದರು. ತ್ಯಾಗರಾಜರು ಅವರ ಪ್ರತಿಭೆ ಮೆಚ್ಚಿ ಆಶೀರ್ವದಿಸಿದರು ಇಲ್ಲಿಂದ ಮುಂದೆ ಭಾರತಿಯವರು ಅನೇಕ ಕೃತಿಗಳನ್ನು ತಮಿಳಿನಲ್ಲಿ ರಚಿಸಿದರು. ತ್ಯಾಗರಾಜರ ಮನೆಯಲ್ಲಿದ್ದ ಆಧ್ಯಾತ್ಮಿಕ ವಾತಾವರಣ ಮತ್ತು ಅವರ ನಡವಳಿಕೆಯಿಂದ ಭಾರತಿಯವರಿಗೆ ಬಹಳ ಮೆಚ್ಚಿಗೆಯಾಯಿತು.

**ಸ್ವಾತಿ ತಿರುನಾಳರ ಪ್ರತಿನಿಧಿ ವಡಿವೇಲು**—ತಿರುವಾಂಕೂರಿನ ಮಹಾರಾಜ ಸ್ವಾತಿ ತಿರುನಾಳರು ತ್ಯಾಗರಾಜರ ಶಿಷ್ಯರಾದ ಕನ್ನಯ್ಯ ಭಾಗವತರಿಂದ ಅವರ ಅನೇಕ ಕೃತಿಗಳನ್ನು ಕೇಳಿದ್ದರು. ಈ ಪ್ರಸಿದ್ಧ ವಾಗ್ಗೇಯಕಾರರನ್ನು ಭೇಟಿ ಮಾಡಬೇಕೆಂಬ ಬಯಕೆ ಉಂಟಾಯಿತು. ಶ್ರೇಷ್ಠ ಗಾಯಕ ಹಾಗೂ ಪಿಟೀಲು ವಿದ್ವಾಂಸ ಮತ್ತು ಆಸ್ಥಾನ ವಿದ್ವಾಂಸರಾಗಿದ್ದ ವಡಿವೇಲುವನ್ನು ತ್ಯಾಗರಾಜರನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳಲು ತಿರುವೈಯ್ಯಾರಿಗೆ ಕಳುಹಿಸಿದರು. ವಡಿವೇಲು ವೀಣಾಕುಪ್ಪಯ್ಯರ ಸ್ನೇಹಿತರಾಗಿದ್ದರು ಮತ್ತು ತ್ಯಾಗರಾಜರನ್ನು ನೋಡಿದ್ದರೇ ವಿನಹ ನೇರವಾದ ಪರಿಚಯವಿರಲಿಲ್ಲ.

ವಡಿವೇಲು ತಿರುವೈಯ್ಯಾರಿಗೆ ಹೋಗಿ ತ್ಯಾಗರಾಜರ ಮನೆಯ ಎದುರು ಸಾಲಿನಲ್ಲಿ ಕಾವೇರಿಗೆ ಸಮೀಪದಲ್ಲಿದ್ದ ಒಂದು ಮನೆಯಲ್ಲಿ ಬಿಡಾರ ಮಾಡಿದರು. ಸ್ನಾನ ಸಂಧ್ಯಾವಂದನೆಗಳಿಗಾಗಿ ಕಾವೇರಿಗೆ ತ್ಯಾಗರಾಜರು ಇದೇ ಮನೆಯ ಸಮೀಪದಲ್ಲಿ ಹೋಗಬೇಕಾಗಿತ್ತು. ಪ್ರತಿದಿನ ಸಂಜೆ ಅವರು ಕಾವೇರಿಗೆ ಹೋಗುವ ಸಮಯಕ್ಕೆ ಸರಿಯಾಗಿ ವಡಿವೇಲು ಅವರ ಗಮನ ಸೆಳೆಯಲು ಹಾಡುತ್ತಿದ್ದರು. ಮೊದಲನೆಯ ದಿನ ತ್ಯಾಗರಾಜರು ಹೋಗುತ್ತಿದ್ದಾಗ ಗಾಯನವನ್ನು ಕೇಳಿ ಸ್ವಲ್ಪ ಹೊತ್ತು ಆ ಮನೆಯ ಮುಂದೆ ನಿಂತು ನಂತರ ಮನೆಗೆ ಬಂದರು. ಎರಡನೆಯ ದಿನ ಅದೇ ರೀತಿ ಇನ್ನೂ ಸ್ವಲ್ಪ ಹೆಚ್ಚು ಕಾಲ ನಿಂತು ಕೇಳಿ ಗಾಯಕನು ಪ್ರತಿಭಾಶಾಲಿ ಎಂದು ತೀರ್ಮಾನಿಸಿದರು. ಮೂರನೆಯ ದಿನ ಅವರ ಕುತೂಹಲವು ಹೆಚ್ಚಾಯಿತು. ಆ ಮನೆಯ ಒಳಕ್ಕೆ ಹೋಗಿ ಅಷ್ಟು ಚೆನ್ನಾಗಿ ಹಾಡುವ ವ್ಯಕ್ತಿ ಯಾರೆಂದು ತಿಳಿಯಬೇಕೆಂದು ಇಚ್ಛಿಸಿ ಒಳಕ್ಕೆ ಹೋದರು. ಅವರು ಬರುತ್ತಿದ್ದುದನ್ನು ನೋಡಿದ ವಡಿವೇಲು ಕೂಡಲೇ ಎದ್ದು ನಿಂತು ನಮಸ್ಕರಿಸಿ "ಇದು ನನಗೆ ಸುದಿನ. ತಾವು ಹೇಳಿ ಕಳುಹಿಸಿದ್ದರೆ ನಾನು ತಮ್ಮ ಮನೆಗೆ

ಬಂದು ಹಾಡುತ್ತಿದ್ದೆ. ತಾವು ಇಲ್ಲಿಯವರೆಗೆ ಬಂದು ನನ್ನನ್ನು ಗೌರವಿಸಿದ್ದೀರಿ" ಎಂದರು. ತ್ಯಾಗರಾಜರು ವಡಿವೇಲುವಿನ ಗಾಯನವನ್ನು ಮುಕ್ತಕಂಠದಿಂದ ಪ್ರಶಂಸಿಸಿ ತಮ್ಮ ಮನೆಗೆ ಬಂದು ಹಾಡಬೇಕೆಂದು ಆಹ್ವಾನಿಸಿದರು. ಅಂತೆಯೇ ವಡಿವೇಲು ಅವರ ಮನೆಗೆ ಹೋಗಿ ಸ್ವಾತಿತಿರುನಾಳರ ಹಲವು ರಚನೆಗಳನ್ನು ಹಾಡಿ ತ್ಯಾಗರಾಜರ ಮೆಚ್ಚಿಗೆ ಪಡೆದರು ಮತ್ತೊಂದು ದಿನ ಅದ್ಭುತವಾಗಿ ಹಾಡಿದ್ದನ್ನು ಕೇಳಿ ಮಹದಾನಂದ ಪರವಶರಾಗಿ ಅವರ ಇಚ್ಛೆ ಏನು ಬೇಕಾದರೂ ಕೇಳಬಹುದೆಂದರು. ಇಂತಹ ಸಮಯಕ್ಕಾಗಿ ಕಾಯುತ್ತಿದ್ದ ವಡಿವೇಲು ನಮ್ರತೆಯಿಂದ ಮಹಾರಾಜರ ಇಚ್ಛೆಯನ್ನು ತಿಳಿಯಪಡಿಸಿದಾಗ ತ್ಯಾಗರಾಜರು ಸ್ವಲ್ಪ ಹೊತ್ತು ಮೌನವಾಗಿದ್ದು "ನಾನು ಅವರನ್ನು ಖಂಡಿತ ಭೇಟಿ ಮಾಡುತ್ತೇನೆ ಆದರೆ ಈ ಲೋಕದಲ್ಲಲ್ಲ ಅವರ ಉಪಾಸನಾ ಮೂರ್ತಿಯಾದ ಪದ್ಮನಾಭನೂ ನನ್ನ ಉಪಾಸನಾ ಮೂರ್ತಿಯೂ ಒಂದೇ" ಎಂದರು. ವಡಿವೇಲು ಸ್ವಲ್ಪ ಕಾಲಾನಂತರ ತಿರುವಾಂಕೂರಿಗೆ ಹಿಂತಿರುಗಿ ಮಹಾರಾಜರಿಗೆ ತನ್ನ ರಾಯಭಾರದ ವಿಫಲತೆಯನ್ನು ಕುರಿತು ವರದಿ ಮಾಡಿದನು.

**ಗೋವಿಂದ ಮಾರಾರ್** (೧೭೯೮–೧೮೪೩)—ಗೋವಿಂದ ಮಾರಾರ್ ತಿರುವಾಂಕೂರಿನ ರಾಮಮಂಗಲವೆಂಬ ಗ್ರಾಮದವರು. ೧೯ನೆ ಶತಮಾನದ ಆದಿಭಾಗದ ಒಬ್ಬ ಶ್ರೇಷ್ಠಗಾಯಕರಾಗಿದ್ದರು. ಇವರಿಗೆ ರಮೆಜಾತಿ ಶಾರೀರವಿತ್ತು. ಪಲ್ಲವಿಗಳನ್ನು ಷಟ್ಕಾಲದಲ್ಲಿ ಹಾಡುತ್ತಿದ್ದರು. ಆದ್ದರಿಂದ ಇವರಿಗೆ ಷಟ್ಕಾಲ ಗೋವಿಂದ ಮಾರಾರ್ ಅಥವಾ ಗೋವಿಂದದಾಸ ಎಂಬ ಹೆಸರಿತ್ತು. ಷಟ್ಕಾಲ ಎಂಬ ಬಿರುದನ್ನು ಪಡೆದಿರುವವರು ಸೇಲಂನ ಷಟ್ಕಾಲ ನರಸಯ್ಯ ಮತ್ತು ವಿಜಯನಗರದ ಷಟ್ಕಾಲ ಚಕ್ರವರ್ತಿ ವೀಣಾವೆಂಕಟರಮಣದಾಸರು ಕರ್ಣಾಟಕದ ಸಂಗೀತದ ಇತಿಹಾಸದಲ್ಲಿ ಪ್ರಸಿದ್ಧರು.

ಮಾರಾರರು ತಮ್ಮ ವೃದ್ಧಾಪ್ಯದಲ್ಲಿ ಕಾಶೀಯಾತ್ರೆಗಾಗಿ ಹೊರಟು ತಿರುವನಂತಪುರಕ್ಕೆ ಬಂದು ಮಹಾರಾಜರ ಅತಿಥಿಗಳಾದರು. ನಂತರ ೧೮೪೩ರಲ್ಲಿ ತ್ಯಾಗರಾಜರನ್ನು ಸಂದರ್ಶಿಸಲು ತಿರುವೈಯ್ಯಾರಿಗೆ ಹೋದರು. ಮಂದ್ರವೊಂದನ್ನು ಉಳಿದು ಮಿಕ್ಕ ಎರಡೆರಡು ತಂತಿಗಳಿರುವ ಏಳುತಂತಿಗಳ ತಂಬೂರಿಯನ್ನು ಬಳಸುತ್ತಿದ್ದರು. ಇದನ್ನು ಮೀಟುತ್ತಾ ಬಲಗಾಲಿನ ಎರಡು ಬೆರಳುಗಳಿಂದ ಖಂಜರವನ್ನು ನಿಲ್ಲಿಸಿಕೊಂಡು ಎಡಗೈಯಿಂದ ನುಡಿಸುತ್ತಾ ಹಾಡುತ್ತಿದ್ದರು. ಇವರು ತ್ಯಾಗರಾಜರ ಮನೆಗೆ ಬಂದ ದಿನವು ಏಕಾದಶಿಯಾದ್ದರಿಂದ ಭಜನೆ ನಡೆಯುತ್ತಿತ್ತು. ಇವರು ಭಕ್ತರಗೋಷ್ಠಿಯಲ್ಲಿ ಕುಳಿತರು. ಭಜನೆಯ ಪೂರ್ವಭಾಗವಾದ ನಂತರ ಮುಖ್ಯ ಅತಿಥಿಗಳನ್ನು ಹಾಡಲು ಆಹ್ವಾನಿಸುವುದು ಸಂಪ್ರದಾಯ. ಅಂತೆಯೇ ಮಾರಾರರನ್ನು ಆಹ್ವಾನಿಸಿದಾಗ ಅವರು ತಮ್ಮ ವಿಶೇಷ ತಂಬೂರಿಯನ್ನು ಶ್ರುತಿಮಾಡಿ ಜಯದೇವನ ಚಂದನ ಚರ್ಚಿತ ಎಂಬ ನಾಲ್ಕನೇ ಅಷ್ಟಪದಿಯನ್ನು ಪಂತುವರಾಳಿ ರಾಗದಲ್ಲಿ ಹಾಡಲು ತೊಡಗಿದರು. ಮೊದಲು ಅತಿ ಅತಿ ವಿಳಂಬಿತದಲ್ಲಿ ನಂತರ ಅತಿ, ವಿಳಂಬಿತ, ಮಧ್ಯಮಕಾಲ, ದ್ರುತ

ಕಾಲ ಮತ್ತು ಅತಿದ್ರುತ ಕಾಲದಲ್ಲಿ ಹಾಡಿ ಅಚ್ಚರಿಗೊಳಿಸಿದರು. ಇವರ ಲಯ ಸಂಪತ್ತನ್ನು ಕಂಡು ತ್ಯಾಗರಾಜರಿಗೆ ಆಶ್ಚರ್ಯ ಉಂಟಾಯಿತು. ಇವರಿಗೆ ಗೌರವ ಸೂಚಿಸುವ ಸಲುವಾಗಿ ಹಿಂದೆಯೇ ರಚಿಸಲಾಗಿದ್ದ ಶ್ರೀರಾಗದ ' ಎಂದರೋ ಮಹಾನು ಭಾವುಲು ' ಎಂಬ ಕೃತಿಯನ್ನು ಶಿಷ್ಯರಿಂದ ಹಾಡಿಸಿದರು. ಮಾರಾರರು ಹಾಡಿದಾಗ ವಾಲಾಜ ಪೇಟೆ ಕೃಷ್ಣಸ್ವಾಮಿ ಭಾಗವತರು ಕಿನ್ನರಿಯನ್ನು ನುಡಿಸಿದರು ಕೆಲವು ದಿನಗಳ ಕಾಲ ತ್ಯಾಗರಾಜರ ಅತಿಥಿಗಳಾಗಿದ್ದು ನಂತರ ತಮ್ಮ ತೀರ್ಥಯಾತ್ರೆಯನ್ನು ಮುಂದುವರಿಸಿದ ಮಾರಾರರು ಪಂಡರಾಪುರದಲ್ಲಿ ೧೮೪೩ರಲ್ಲಿ ಕಾಲವಾದರು.

**ಕಾಂಚೀಪುರ, ತಿರುಪತಿ ಮತ್ತು ಇತರ ಸ್ಥಳಗಳಿಗೆ ತ್ಯಾಗರಾಜರ ತೀರ್ಥಯಾತ್ರೆ**—ತ್ಯಾಗರಾಜರ ತಂದೆ ರಾಮಬ್ರಹ್ಮ ಮತ್ತು ಕಾಂಚೀಪುರದ ಸ್ವಾಮಿ ಉಪನಿಷತ್ ಬ್ರಹ್ಮ ಸಹಪಾಠಿಗಳೂ ಸ್ನೇಹಿತರೂ ಆಗಿದ್ದರು. ಉಪನಿಷತ್ ಬ್ರಹ್ಮರು ೧೮೪೩ರಲ್ಲಿ ತ್ಯಾಗರಾಜರನ್ನು ಕಾಂಚೀಪುರಕ್ಕೆ ಆಹ್ವಾನಿಸಿದರು. ಅವರ ಆಹ್ವಾನದಂತೆ ಶಿಷ್ಯಸಮೇತರಾಗಿ ತ್ಯಾಗರಾಜರು ಕಾಂಚೀಪುರಕ್ಕೆ ಪ್ರಯಾಣ ಬೆಳೆಸಿದರು ಅಲ್ಲಿ ಸ್ವಾಮಿಗಳ ಅತಿಥಿಗಳಾಗಿ ಕೆಲವು ದಿನಗಳು ಇದ್ದು ಭಜನೆಗಳನ್ನು ನಡೆಸಿದರು. ಅಲ್ಲಿಗೆ ಬಂದಿದ್ದ ಪ್ರತಿಯೊಬ್ಬರು ಅವರ ಭಕ್ತಿಯುತವಾದ ಸಂಗೀತವನ್ನು ಕೇಳಿ ತಮ್ಮ ಜನ್ಮಪಾವನವಾಯಿತೆಂದು ಭಾವಿಸಿದರು. ಆಗ ವರದರಾಜಸ್ವಾಮಿಯ ಉತ್ಸವದ ಕಾಲ. ವರದರಾಜಸ್ವಾಮಿಯನ್ನು ಕುರಿತು ವರದರಾಜ ನಿನುಕೋರಿ (ಸ್ವರಭೂಷಣಿ), ವರದ ನವನೀ ತಾಳ (ರಾಗಪಂಜರಂ) ಎಂಬ ಎರಡು ಕೃತಿಗಳನ್ನೂ, ಕಾಮಾಕ್ಷಿ ಅಮ್ಮ ನವರ ಸನ್ನಿಧಿಯನ್ನು ಸಂದರ್ಶಿಸಿ ವಿನಯಕುನಿವಲೆನು ಎಂಬ ಮಧ್ಯಮಾವತಿಯ ಕೃತಿ ಯನ್ನು ಹಾಡಿದರು.

**ವಾಲಾಜಪೇಟೆ**—ಕಾಂಚೀಪುರದಿಂದ ವಾಲಾಜಪೇಟೆಗೆ ಹೋಗಿ ಅಲ್ಲಿ ೧೨ ದಿನಗಳ ಕಾಲವಿದ್ದು ವೆಂಕಟರಮಣ ಭಾಗವತರ ಭಜನ ಮಂದಿರದಲ್ಲಿ ಭಜನೆಗಳನ್ನು ನಡೆಸಿದರು. ಕೊನೆಯದಿನ ಶಿಷ್ಯರು ಇವರನ್ನು ವೈಭವದ ಮೆರವಣಿಗೆ ಮಾಡಿದರು. ವೆಂಕಟರಮಣ ಭಾಗವತರ ಶಿಷ್ಯ ಮೈಸೂರು ಸದಾಶಿವರಾಯರು ಈ ಸಂದರ್ಭದಲ್ಲಿದ್ದು ತೋಡಿರಾಗದ ತ್ಯಾಗರಾಜಸ್ವಾಮಿ ವೆಡಲಿನ ಎಂಬ ಉತ್ತಮ ಕೃತಿಯನ್ನು ರಚಿಸಿ ಈ ಘಟನೆಯನ್ನು ಅಮರಗೊಳಿಸಿದ್ದಾರೆ.

**ತಿರುಪತಿ**—ವಾಲಾಜಪೇಟೆಯಿಂದ ತ್ಯಾಗರಾಜರು ತಿರುಪತಿಗೆ ಹೋದರು. ಆ ಕಾಲದಲ್ಲಿ ಬೆಟ್ಟದ ಮೇಲಕ್ಕೆ ಹೋಗಲು ಏಳು ಮೈಲಿ ದೂರ ನಡೆಯಬೇಕಾಗಿತ್ತು. ಬೆಳಗ್ಗೆ ಹೊರಟು ತಿರುಮಲೆಯನ್ನು ತಲುಪಿದಾಗ ಸುಮಾರು ಹನ್ನೊಂದು ಗಂಟೆ ಸಮಯ. ಸಪ್ತಗಿರೀಶನ ದರ್ಶನವನ್ನು ಪಡೆಯಲು ಕಾತುರರಾಗಿದ್ದ ತ್ಯಾಗರಾಜರು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ದೇವಾಲಯಕ್ಕೆ ಹೋದಾಗ ಸ್ವಾಮಿಯ ಸನ್ನಿಧಿಯ ಮುಂದೆ ತೆರೆ ಹಾಕಿತ್ತು. ಅದನ್ನು ನೋಡಿ ಬಹಳ ದುಃಖದಿಂದ ಗೌಳೀ

ಪಂತು ರಾಗದಲ್ಲಿ ತೆರತೀಯಗರಾದ ಎಂಬ ಕೃತಿಯನ್ನು ಭಾವಾವೇಶದಿಂದ ಹಾಡಿದರು. ಹಾಡು ಮುಗಿದ ಕೂಡಲೇ ಆ ತೆರೆಯು ತಾನಾಗಿಯೇ ಕಡಿದು ಬಿದ್ದು ದೇವರ ದರ್ಶನ ವಾಯಿತು. ಭಕ್ತಿಭಾವದಿಂದ ಪುಳಕಿತರಾಗಿ ತಕ್ಷಣವೇ ಮಧ್ಯಮಾವತಿ ರಾಗದಲ್ಲಿ ವೆಂಕಟೇಶನಿನ್ನು ಸೇವಿಂಪ ಎಂಬ ಕೃತಿಯನ್ನು ಹಾಡಿದರು. ಈ ವೇಳೆಗೆ ಅಲ್ಲಿ ನೆರೆದಿದ್ದ ಭಕ್ತರು ಈ ಆಶ್ಚರ್ಯಕರ ಘಟನೆಯನ್ನು ನೋಡಿದರು. ಮಹಾಭಕ್ತ ಮತ್ತು ವಾಗ್ಗೇಯಕಾರರಾದ ತ್ಯಾಗರಾಜರು ಇವರೇ ಎಂಬುದನ್ನು ಅಧಿಕಾರಿಗಳೂ, ಅರ್ಚಕರೂ ತಿಳಿದು ಅವರಿಗೆ ದೇವಾಲಯದ ಗೌರವಗಳನ್ನು ನೀಡಿದರು. ವೆಂಕಟೇಶ್ವರನ ಸ್ತುತಿ ರೂಪವಾದ ತ್ಯಾಗರಾಜರ ಮತ್ತೊಂದು ಕೃತಿ ಕಲ್ಯಾಣಿ ರಾಗದ 'ತರವಮಾ ನೀ ಮಹಿಮ ಪೊಗಡ' ಎಂಬುದು. ಈ ಮೂರು ಕೃತಿಗಳಲ್ಲಿ ತಿರುಪತಿ ಅಥವಾ ನಾಗಾಚಲ ಎಂಬ ಕ್ಷೇತ್ರಮುದ್ರೆ ಇದೆ.

**ಪುತ್ತೂರು**—ತಿರುಪತಿಯಿಂದ ಹಿಂತಿರುಗುತ್ತಾ ಮದ್ರಾಸ್-ಬೊಂಬಾಯಿ ಮಾರ್ಗದಲ್ಲಿರುವ ಪುತ್ತೂರಿಗೆ ಬಂದರು. ಅಲ್ಲಿಯ ದೇವಾಲಯದ ಮುಂದೆ ಒಂದು ಗುಂಪು ಸೇರಿತ್ತು. ಒಬ್ಬ ಸ್ತ್ರೀ ತನ್ನ ಪತಿಯ ಮೃತದೇಹವನ್ನು ನೋಡಿ ಗೋಳಾಡು ತ್ತಿದ್ದಳು. ಮರಣ ಹೊಂದಿದ್ದ ಯಾತ್ರಿಕ ಹಿಂದಿನ ರಾತ್ರಿ ಆ ಊರಿಗೆ ಬಂದು ನಿಲ್ಲಲು ಎಲ್ಲೂ ಸ್ಥಳವಿಲ್ಲದೆ ದೇವಾಲಯದಲ್ಲಿ ನಿಲ್ಲಲು ಉದ್ದೇಶಿಸಿ ಹಾಕಿದ್ದ ಬಾಗಿಲನ್ನು ತೆರೆಯಲು ಪ್ರಾಕಾರದ ಗೋಡೆಯನ್ನು ಹತ್ತಿ ಒಳಕ್ಕೆ ಹೋಗಲು ಪ್ರಯತ್ನಿಸಿ ಆಕಸ್ಮಿಕ ವಾಗಿ ಬಾವಿಗೆ ಬಿದ್ದು ಮರಣ ಹೊಂದಿದ ವಿಷಯವನ್ನು ತಿಳಿದರು. ಅವರ ಮನಸ್ಸು ಸಂಕಟದಿಂದ ತುಂಬಿತು. ಶಿಷ್ಯರನ್ನು ಕೂಗಿ ಬಿಲಹರಿ ರಾಗದ ನಾ ಜೀವಾಧಾರ ಎಂಬ ಕೃತಿಯನ್ನು ಹಾಡಲು ಹೇಳಿದರು. ನಂತರ ತುಳಸೀದಲದಿಂದ ತೀರ್ಥವನ್ನು ಆ ದೇಹದ ಮೇಲೆ ಪ್ರೋಕ್ಷಿಸಿದರು. ಆ ವ್ಯಕ್ತಿ ಶೇಷಯ್ಯ ಎದ್ದು ತ್ಯಾಗರಾಜರಿಗೆ ದೀರ್ಘದಂಡ ಪ್ರಣಾಮ ಮಾಡಿ ಆಶೀರ್ವಾದ ಪಡೆದು ತನ್ನ ಪ್ರಯಾಣವನ್ನು ಮುಂದುವರಿಸಿದನು. ಪ್ರಾತಃಕಾಲದ ರಾಗವಾದ ಬಿಲಹರಿಯು ಜೀವ ಕೊಡು ವಂತಹುದು. ನಾ ಜೀವಾಧಾರ ಎಂಬ ಕೃತಿಯು ಈ ರಾಗದ ಸಾರವನ್ನು ಹೊಂದಿದೆ.

**ಷೋಲಿಂಗರ್**—ಮುಂದೆ ಪ್ರಯಾಣ ಮಾಡುತ್ತಾ ಷೋಲಿಂಗರ್ ಎಂಬ ಊರಿಗೆ ಬಂದಾಗ ಅಲ್ಲಿಯ ಲಕ್ಷ್ಮೀನರಸಿಂಹಸ್ವಾಮಿಯನ್ನು ಕುರಿತು ಬಿಲಹರಿ ರಾಗದಲ್ಲಿ ನರಸಿಂಹ ನನು ಬ್ರೋವವೇ (ಛಾಪು) ಮತ್ತು ಫಲಮಂಜರಿ ರಾಗದಲ್ಲಿ ನರಸಿಂಹ ಮಾಂಪಾಹಿ (ದೇಶಾದಿ) ಎಂಬ ಕೃತಿಗಳನ್ನೂ ಆಂಜನೇಯಸ್ವಾಮಿಯನ್ನು ಕುರಿತು ಷಡ್ವಿಧಮಾರ್ಗಿಣಿ ರಾಗದಲ್ಲಿ ಪಾಹಿರಾಮದೂತ (ರೂಪಕ) ಎಂಬ ಕೃತಿಯನ್ನು ಹಾಡಿದರು

ಕಾಳಹಸ್ತಿಯ ಸಮೀಪದಲ್ಲಿ ಹರಿಯುವ ಸ್ವರ್ಣಮುಖಿ ನದಿಯ ತೀರದಲ್ಲಿರುವ ವಿಷ್ಣು ಸ್ಥಳದ ದೇವರನ್ನು ಕುರಿತು ಬಿಲಹರಿ ರಾಗದಲ್ಲಿ ನೀವೇಗಾನಿ (ಛಾಪು) ಎಂಬ ಕೃತಿಯನ್ನು ಹಾಡಿದರು.

**ಮದ್ರಾಸ್**—ತ್ಯಾಗರಾಜರು ಉಪನಿಷತ್ ಬ್ರಹ್ಮರ ಸಲಹೆಯಂತೆ ಕೋವೂರು ಸುಂದರೇಶ ಮುದಲಿಯಾರ್ ಮತ್ತು ಶಿಷ್ಯ ಕುಪ್ಪಯ್ಯರ್‌ರವರ ಆಹ್ವಾನವನ್ನು ಮನ್ನಿಸಿ ಮದ್ರಾಸಿಗೆ ಬಂದು ಮುದಲಿಯಾರರ ಅತಿಥಿಗಳಾಗಿ ಸ್ವಲ್ಪಕಾಲ ಇದ್ದರು. ಈ ಕಾಲ ದಲ್ಲಿ ಎಂಟು ದಿನಗಳ ಕಾಲ ದೇವಗಾಂಧಾರಿ ರಾಗವನ್ನು ಹಾಡಿದರು. ಮೊದಲ ಆರು ದಿನಗಳಲ್ಲಿ ಆಲಾಪನೆಯ ಪ್ರತಿ ಹಂತದ ಕೊನೆಯಲ್ಲಿ ತಮ್ಮ ಒಂದೊಂದು ಆ ರಾಗದ ಕೃತಿಯನ್ನು ಹಾಡಿ, ಅದೇ ರಾಗದಲ್ಲಿ ಏಳು ಮತ್ತು ಎಂಟನೆಯ ದಿನ ಪಲ್ಲವಿ, ನೆರವಲ್ ಮತ್ತು ಕಲ್ಪನಾ ಸ್ವರಗಳನ್ನು ಹಾಡಿದರು. ಇದು ಸಂಗೀತ ವಿದ್ವಾಂಸ ರಿಗೂ, ರಸಿಕರಿಗೂ ಕರ್ಣರಸಾಯನವಾಗಿತ್ತು. ಇದೇ ಕಾಲದಲ್ಲಿ ತಿರುವಲ್ಲಿಕ್ಕೇಣಿ ಯಲ್ಲಿರುವ ಪಾರ್ಥಸಾರಥಿಸ್ವಾಮಿ ಸನ್ನಿಧಿಗೆ ಹೋಗಿ ತೋಡಿರಾಗದ ಸಾರಿ ವೆಡಲಿನ ಪಾರ್ಥಸಾರಥಿನಿ ಗನರೇ (ಝಂಪ) ಎಂಬ ಕೃತಿಯನ್ನು ಹಾಡಿದರು.

**ಕೋವೂರು**—ಮದ್ರಾಸಿನಿಂದ ಪಶ್ಚಿಮಕ್ಕೆ ೧೪ ಮೈಲಿ ದೂರದಲ್ಲಿರುವ ಸುಂದರ ಗ್ರಾಮವಾದ ಕೋವೂರಿಗೆ ಹೋಗಿ ಅಲ್ಲಿಯ ಸುಂದರೇಶ್ವರ ಸ್ವಾಮಿಯ ದೇವಾಲಯವನ್ನು ಸಂದರ್ಶಿಸಿ ಕೋವೂರು ಪಂಚರತ್ನವೆಂದು ಪ್ರಸಿದ್ಧವಾಗಿರುವ ಐದು ಕೃತಿಗಳನ್ನು ಹಾಡಿದರು. ಅವು ಯಾವುವೆಂದರೆ :

| | |
|---|---|
| ಶಂಭೋ ಮಹಾದೇವ | — ಪಂತುವರಾಳಿ |
| ಈ ವಸುಧಾ ನೀ ವಂಟಿ | — ಸಹಾನಾ |
| ಕೋರಿ ಸೇವಿಂಪರಾರೆ | — ಖರಹರಪ್ರಿಯ |
| ನಮ್ಮಿ ವಚ್ಚಿನ | — ಕಲ್ಯಾಣಿ |
| ಸುಂದರೇಶ್ವರುನಿ | — ಶಂಕರಾಭರಣ |

ಪಂತುವರಾಳಿ ಮತ್ತು ಶಂಕರಾಭರಣ ರಾಗದ ಕೃತಿಗಳಲ್ಲಿ 'ಗೋಪುರ' ಎಂಬ ಕ್ಷೇತ್ರ ಮುದ್ರೆಯೂ, ಇತರ ಕೃತಿಗಳಲ್ಲಿ 'ಕೋವೂರು ಸುಂದರೇಶ' ಎಂಬ ಕ್ಷೇತ್ರಮುದ್ರೆಯೂ ಇದೆ. ಪಂತುವರಾಳಿ ರಾಗವು ಶಿವನಿಗೆ ಪ್ರಿಯವಾದ ರಾಗ. ಈ ರಾಗದ ಹಾಡು ಕೈಲಾಸದ ಚಿತ್ರವನ್ನು ಕೊಡುತ್ತದೆ. ಇಂತಹ ವರ್ಣನೆಯು ಆದಿಶಂಕರಾಚಾರ್ಯರ 'ಸೌಂದರ್ಯಲಹರಿ'ಯಲ್ಲಿದೆ. ಕೋರಿ ಸೇವಿಂಪ ಎಂಬ ಕೃತಿಯು ತಾನದ ಶೈಲಿ ಯಲ್ಲಿದೆ. ಸುಂದರೇಶ್ವರುನಿ ಎಂಬ ಕೃತಿಯಲ್ಲಿ ಯಮಕ ಪ್ರಯೋಗವಿದೆ.

**ತಿರುವೊಟ್ಟಿಯೂರು**—ವೀಣಾ ಕುಪ್ಪಯ್ಯರ್‌ರವರ ಪ್ರಾರ್ಥನೆಯಂತೆ ಮದ್ರಾಸಿನಿಂದ ಆರು ಮೈಲಿ ದೂರದಲ್ಲಿರುವ ಅವರ ಊರಿಗೆ ಭೇಟಿ ಇತ್ತರು. ಈ ಸ್ಥಳವು ಆದಿಶಂಕರಾಚಾರ್ಯ, ತಿರುಜ್ಞಾನ ಸಂಬಂಧರ್, ಅಪ್ಪರ್, ಸುಂದರಮೂರ್ತಿ ಮತ್ತು ಪಟ್ಟಿನತ್ತಾರ್‌ರವರ ಭೇಟಿಯಿಂದ ಪವಿತ್ರವಾದ ಕ್ಷೇತ್ರ. ತ್ಯಾಗರಾಜರು ಇಲ್ಲಿಯ ತ್ರಿಪುರಸುಂದರಿ ಅಮ್ಮನ ದೇವಾಲಯಕ್ಕೆ ಬಂದಾಗ ಅಲ್ಲಿಯ ಸಾನ್ನಿಧ್ಯದಿಂದ ಆನಂದಪುಳಕಿತರಾಗಿ ತಿರುವೊಟ್ಟಿಯೂರು ಪಂಚರತ್ನವೆಂದು ಪ್ರಸಿದ್ಧವಾಗಿರುವ ಐದು ಕೃತಿಗಳನ್ನು ಹಾಡಿದರು. ಅವು :

| | | |
|---|---|---|
| ಸುಂದರಿ ನೀ ದಿವ್ಯ — | ಕಲ್ಯಾಣಿ — | ಆದಿ |
| ಸುಂದರಿ ನನ್ನಿಂದರಿಲೋ — | ಬೇಗಡೆ — | ರೂಪಕ |
| ದಾರಿನಿ ತೆಲುಸುಕೊಂಟಿ — | ಶುದ್ಧಸಾವೇರಿ — | ಆದಿ |
| ಸುಂದರಿ ನಿನು ವರ್ಣಿಂಪ — | ಆರಭಿ — | ಛಾಪು |
| ಕನ್ನ ತಲ್ಲಿ — | ಶುದ್ಧಸಾವೇರಿ — | ಆದಿ |

ಇವುಗಳಲ್ಲಿ ಶುದ್ಧಸಾವೇರಿ ರಾಗದ ಕೃತಿಯು ದೊಡ್ಡದು. ಇದರ ಪಲ್ಲವಿಯಲ್ಲಿ ೧೬ ಸಂಗತಿಗಳು, ಅನುಪಲ್ಲವಿ ಮತ್ತು ಚರಣದಲ್ಲಿ ಎಂಟು ಎಂಟು ಸಂಗತಿಗಳಿವೆ ಪ್ರತಿ ಚರಣದಲ್ಲಿ ಸುಂದರವಾದ ಮಧ್ಯಮ ಕಾಲ ಸಾಹಿತ್ಯವಿದೆ. ಕೆಲವು ಸಂಗತಿಗಳು ತಾನದ ಶೈಲಿಯಲ್ಲಿವೆ. ಇವು ಪುರಾತನ ಕಾಲದ ಅಲಂಕಾರಗಳನ್ನು ಸ್ಮರಣೆಗೆ ತರುತ್ತವೆ

**ಕಳ್ಳರ ಘಟನೆ**—ಕೋವೂರಿಗೆ ಭೇಟಿಯಿತ್ತ ನಂತರ ತ್ಯಾಗರಾಜರು ಶಿಷ್ಯ ರೊಡನೆ ತಿರುವೈಯ್ಯಾರಿಗೆ ಪ್ರಯಾಣ ಬೆಳೆಸಿದರು. ಅವರಲ್ಲಿ ಪರಮ ಭಕ್ತಿಯಿಟ್ಟಿದ್ದ ಕೋವೂರು ಸುಂದರೇಶ ಮುದಲಿಯಾರರು ಅವರಿಗೆ ತಿಳಿಯದಂತೆ ಪಲ್ಲಕ್ಕಿಯಲ್ಲಿ ೧೦೦೦ ಚಿನ್ನದ ನಾಣ್ಯವಿರುವ ಚೀಲವನ್ನು ಇರಿಸಿ ಆ ಹಣವನ್ನು ರಾಮನವಮಿ, ಶ್ರೀಜಯಂತಿ ಮತ್ತು ವೈಕುಂಠ ಏಕಾದಶಿ ಹಬ್ಬಗಳಲ್ಲಿ ವಿನಿಯೋಗಿಸಬೇಕೆಂದು ಶಿಷ್ಯ ರಿಗೆ ತಿಳಿಸಿದರು. ಶಿಷ್ಯರು ಆದ್ದರಿಂದ ಸುಮ್ಮನೆ ಒಪ್ಪಿಕೊಂಡರು. ತಂಡವು ಪ್ರಯಾಣ ಮಾಡುತ್ತಾ ಒಂದು ರಾತ್ರಿ ಕಾಡಿನ ಮೂಲಕ ಹೋಗುತ್ತಿತ್ತು. ಆ ಸ್ಥಳವು ಕವಣೆ ಕಲ್ಲು ಹೊಡೆಯುವುದರಲ್ಲಿ ನಿಪುಣರಾದ ನಾಗಲಾಪುರದ ಕಳ್ಳರ ಕಾಟಕ್ಕೆ ಪ್ರಸಿದ್ಧವಾಗಿತ್ತು. ಕಳ್ಳರು ತ್ಯಾಗರಾಜರ ತಂಡವನ್ನು ಮುತ್ತಿದರು. ವಿಷಯವು ತ್ಯಾಗರಾಜರಿಗೆ ತಿಳಿಯಿತು. ಕದಿಯಲು ನಮ್ಮಲ್ಲಿ ಏನಿದೆ ಎಂದರು. ಚಿನ್ನದ ನಾಣ್ಯಗಳ ಚೀಲವಿರುವುದನ್ನು ತಿಳಿದು ಅದನ್ನು ಕಳ್ಳರಿಗೆ ಎಸೆದು ಬಿಡಿ ಎಂದರು. ಅದು ದೇವರ ಹಣ, ಉತ್ಸವಗಳಿಗಾಗಿ ವಿನಿಯೋಗವಾಗಬೇಕಾದ್ದು ಎಂದು ಹೇಳಿದಾಗ, ದೇವರ ಹಣವನ್ನು ಅವನೇ ಕಾಪಾಡಿಕೊಳ್ಳಲಿ ಎಂದು ಧ್ಯಾನಾಸಕ್ತರಾಗಿ ದರ್ಬಾರ್ ರಾಗದಲ್ಲಿ 'ಮುಂದುವೆನಕ' ಎಂಬ ಕೃತಿಯನ್ನು ಹಾಡಿದರು.

ಅಗ್ರತಃ ಪೃಷ್ಠತಶ್ಚೈವ ಪಾರ್ಶ್ವತಶ್ಚ ಮಹಾಬಲೌ ।
ಆಕರ್ಣ ಪೂರ್ಣ ಧನ್ವಾನೌ ರಕ್ಷ್ಯೇತಂ ರಾಮಲಕ್ಷ್ಮಣೌ ॥

ಈ ರಾಗದ ಪಲ್ಲವಿಯು ಈ ಶ್ಲೋಕವನ್ನು ನೆನಪಿಗೆ ತರುತ್ತದೆ. ಓ ರಾಮ, ಮುರ ಮತ್ತು ಖರ ಹರನೇ, ಲಕ್ಷ್ಮಣನ ಸಹಿತ ಬೇಗ ಬಂದು ಕಾಪಾಡು ಎಂದು ಕೃತಿಯ ಪ್ರಾರ್ಥನೆ. ಕೂಡಲೇ ಇಬ್ಬರು ತರುಣರು ಕಾಣಿಸಿಕೊಂಡು ಕಳ್ಳರ ಮೇಲೆ ಶರವರ್ಷ ಕರೆದರು. ಕಳ್ಳರು ಭೀತರಾಗಿ ಓಡಿಹೋದರು. ತರುಣರು ಪಲ್ಲಕ್ಕಿಯ ಸಮೀಪಕ್ಕೆ ಬಂದು ಕಳ್ಳರ ಭಯ ಹೋಯಿತು ಎಂದು ಹೇಳಿ ಅದೃಶ್ಯರಾದರು. ಪ್ರಯಾಣವನ್ನು ಮುಂದುವರಿಸಿ ಬೆಳಗಿನ ವೇಳೆ ಒಂದು ಹಳ್ಳಿಯನ್ನು ತಲುಪಿ ಅಲ್ಲಿಯ ಛತ್ರದಲ್ಲಿ ಎಲ್ಲರೂ

ತಂಗಿದರು. ಕಳ್ಳರು ಭೀತರಾಗಿ ತಂಡವನ್ನು ದೂರದಿಂದ ಅನುಸರಿಸುತ್ತಾ ಬಂದು ಬೆಳಗ್ಗೆ ತ್ಯಾಗರಾಜರಿಗೆ ಅಡ್ಡ ಬಿದ್ದು ಬಾಣದ ಮಳೆ ಸುರಿಸಿದ ಆ ತರುಣರು ಯಾರು ಎಂದು ಕೇಳಿದರು. ಅವರು ರಾಮಲಕ್ಷ್ಮಣರೇ ಇರಬೇಕೆಂದು ಗ್ರಹಿಸಿ ಆನಂದ ಪರವಶರಾಗಿ ಸಾರಂಗರಾಗದಲ್ಲಿ (ಆದಿ) ಎಂತ ಭಾಗ್ಯವೋ ಎಂಬ ಕೃತಿಯನ್ನು ಹಾಡಿ, ಕಳ್ಳರ ಭಾಗ್ಯವನ್ನು ಪ್ರಶಂಸಿಸಿ ಅವರಿಗೆ ರಾಮನಾಮ ಉಪದೇಶವಿತ್ತು, ಅವರು ಒಳ್ಳೆಯ ಜನರಾಗುವಂತೆ ಮಾಡಿದರು.

**ಕೊನೆಯ ದಿನಗಳು**—೧೮೪೫ರಲ್ಲಿ ತ್ಯಾಗರಾಜರ ಪತ್ನಿಯು ಕಾಲವಶರಾದರು. ತ್ಯಾಗರಾಜರಿಗೆ ಅವರು ಸಿದ್ಧಿ ಪಡೆದ ಹಿಂದಿನ ದಶಮಿಯ ರಾತ್ರಿ ಒಂದು ಸುಂದರಸ್ವಪ್ನವಾಯಿತು. ಅದರ ವಿಷಯವನ್ನು ಸಹಾನಾರಾಗದ 'ಗಿರಿಪೈನೆಲ' ಎಂಬ ಕೃತಿಯಲ್ಲಿ ಅಮರಗೊಳಿಸಿದ್ದಾರೆ. ಆ ಸ್ವಪ್ನದಲ್ಲಿ ಶ್ರೀರಾಮಚಂದ್ರನು ದರ್ಶನವಿತ್ತು ಇನ್ನು ಹತ್ತುದಿನಗಳಲ್ಲಿ ಅವರನ್ನು ತನ್ನ ಸಾನ್ನಿಧ್ಯಕ್ಕೆ ಕರೆದುಕೊಳ್ಳುವುದಾಗಿ ಮಾತು ಕೊಟ್ಟನು. ಮಾರನೆಯ ದಿನವಾದ ಪುಷ್ಯಶುದ್ಧ ಏಕಾದಶಿ ರಾತ್ರಿ ಭಜನಾನಂತರ ಅಲ್ಲಿದ್ದವರನ್ನು ಕುರಿತು "ಬರುವ ಪುಷ್ಯ ಬಹುಳ ಪಂಚಮಿಯ ದಿನ ಒಂದು ಅದ್ಭುತವು ನಡೆಯುತ್ತದೆ. ಅಂದು ಎಲ್ಲರೂ ಕೃಪೆ ಮಾಡಿ ಬರಬೇಕು" ಎಂದು ವಿನಂತಿ ಮಾಡಿಕೊಂಡರು. ಚತುರ್ಥಿಯ ದಿನ ಪರಮಹಂಸ ಬ್ರಹ್ಮಾನಂದೇಂದ್ರಸ್ವಾಮಿಗಳಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ನಾದಬ್ರಹ್ಮಾನಂದ ಸ್ವಾಮಿಗಳಾದರು. ನಂತರ ಅಲ್ಲಿದ್ದವರಿಗೆ "ನಾಳೆ ಬೆಳಗ್ಗೆ ಹನ್ನೊಂದು ಗಂಟೆಗೆ ಶ್ರೀರಾಮನು ನನ್ನನ್ನು ಕರೆದೊಯ್ಯುತ್ತಾನೆ. ಈಗಿನಿಂದ ಒಂದೇ ಸಮನಾಗಿ ಭಜನೆ ಮಾಡಿ" ಎಂದರು. ಈ ಸುದ್ದಿಯು ಬಹು ಬೇಗ ಹರಡಿ, ಮಾರನೆಯ ಬೆಳಗ್ಗೆ ದೊಡ್ಡ ಜನಸಂದಣಿ ಸೇರಿತು. ತ್ಯಾಗರಾಜರು ಎತ್ತರವಾದ ಪೀಠದ ಮೇಲೆ ಕುಳಿತರು. ಅವರ ಶಿಷ್ಯರಲ್ಲಿ ಉಮಯಾಳ್ಪುರಂ ಕೃಷ್ಣಭಾಗವತರು ಮತ್ತು ಸುಂದರಭಾಗವತರು, ಕಾಂಚಿ ವೆಂಕಟಾದ್ರಿಸ್ವಾಮಿ, ವಾಲಾಜಪೇಟೆ ಕೃಷ್ಣಸ್ವಾಮಿ ಭಾಗವತರು, ತಿಲ್ಲೈಸ್ಥಾನಂ ರಾಮಯ್ಯಂಗಾರ್, ಅಯ್ಯಾಭಾಗವತರೂ, ತಹಸೀಲ್ದಾರ್ ಶ್ಯಾಮರಾಯರು ಹಾಜರಿದ್ದರು. ಆ ದಿನ ಬೆಳಗ್ಗೆ ತ್ಯಾಗರಾಜರು ವಾಗಧೀಶ್ವರಿರಾಗದ (ಆದಿ) ಪರಮಾತ್ಮುಡು ಮತ್ತು ಮನೋಹರಿರಾಗದ (ರೂಪಕ) ಪರಿತಾಪಮು ಎಂಬ ಕೃತಿಗಳನ್ನು ರಚಿಸಿ ಹಾಡಿದರು. ಸಮಯವು ಸಮೀಪಿಸಿತು. ಅವರು ಯೋಗ ಸಮಾಧಿಯಲ್ಲಿ ಕುಳಿತರು. ಎಲ್ಲೆಲ್ಲೂ ಮೌನ ಆವರಿಸಿತು. ಹೇಳಿದ್ದ ವೇಳೆಗೆ ಸರಿಯಾಗಿ ಒಂದು ನಾದವು ಅವರ ಶಿರಸ್ಸಿನಿಂದ ಹೊರಟಿತು. ಕೂಡಲೇ ಒಂದು ದಿವ್ಯಜ್ಯೋತಿಯು ಹೊರಟು ಎಲ್ಲರೂ ನೋಡುತ್ತಿದ್ದಂತೆ ಮೇಲಕ್ಕೆ ಉತ್ತರಕ್ಕೆ ಹೋಗಿ ಅದೃಶ್ಯವಾಯಿತು. ನಂತರ ಅವರ ದೇಹವನ್ನು ಸಕಲಗೌರವ ಮತ್ತು ಸಂಗೀತದೊಡನೆ ಕಾವೇರಿಯ ತೀರಕ್ಕೆ ತೆಗೆದುಕೊಂಡು ಹೋಗಿ ಅವರ ಇಚ್ಛೆಯಂತೆ ಗುರು ಸೊಂಟಿ ವೆಂಕಟರಮಣಯ್ಯನವರ ಸಮಾಧಿಯ ಪಕ್ಕದಲ್ಲಿ ಸಮಾಧಿ ಮಾಡಲಾಯಿತು.

**ಸಮಾಧಿ ಉತ್ಸವ**—ತಿರುವೈಯ್ಯಾರ್ ಎಂದರೆ ಐದು ನದಿಗಳು ಎಂದರ್ಥ. ವೆನ್ನಾರ್, ವೆಟ್ಟಾರ್, ಕುಡಮುರುಟ್ಟಿ, ಕಾವೇರಿ ಮತ್ತು ಕೋಲರೂನ್ ನದಿಗಳು ಒಂದಕ್ಕೊಂದು ಸಮಾನಾಂತರವಾಗಿ ಸುಮಾರು ಆರು ಮೈಲಿ ದೂರದ ಪ್ರದೇಶದಲ್ಲಿ ಹರಿಯುತ್ತವೆ ಏಪ್ರಿಲ್ ತಿಂಗಳಲ್ಲಿ ನಡೆಯುವ ಸಪ್ತಸ್ಥಾನ ಉತ್ಸವ ಮತ್ತು ಜನವರಿ ಯಲ್ಲಿ ನಡೆಯುವ ತ್ಯಾಗರಾಜ ಉತ್ಸವಗಳಿಗೆ ಈ ಸ್ಥಳವು ಪ್ರಸಿದ್ಧವಾಗಿದೆ. ಪ್ರತಿ ವರ್ಷವೂ ಈ ಉತ್ಸವಗಳಿಗೆ ಸಾವಿರಾರು ಮಂದಿ ಯಾತ್ರಿಕರೂ, ಭಕ್ತರೂ ಬರುತ್ತಾರೆ.

ತ್ಯಾಗರಾಜರ ಸಮಾಧಿಯ ಮೇಲೆ ಒಂದು ಬೃಂದಾವನವನ್ನು ಕಟ್ಟಲಾಯಿತು. ತಾವು ಸಿದ್ಧಿ ಪಡೆದ ನಂತರ ಅರವತ್ತು ವರ್ಷಗಳಾದ ಮೇಲೆ ತಮ್ಮ ಹೆಸರು ಎಲ್ಲೆಲ್ಲೂ ಹರಡುವುದೆಂದು ತ್ಯಾಗರಾಜರು ಹೇಳುತ್ತಿದ್ದರು. ಅವರು ಸಿದ್ಧಿ ಪಡೆದ ನಂತರ ಪ್ರತಿ ವರ್ಷ ಪುಷ್ಯ ಬಹುಳ ಪಂಚಮಿಯ ದಿನ ಅವರ ಉಮಯಾಳ್ಪುರಂ ಶಿಷ್ಯರು ಮತ್ತು ಇತರರು ಅವರ ಸಮಾಧಿಯನ್ನು ಪೂಜಿಸಿ, ನಂತರ ಮನೆಗೆ ಬಂದು ಆರಾಧನೆಯನ್ನು ಮಾಡುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಅವರು ಉದ್ವೇಗಭರಿತರಾಗಿ ಕಣ್ಣೀರು ಸುರಿಸುತ್ತಾ ಹಾಡಲು ಸಾಧ್ಯವಾಗದಷ್ಟು ದುಃಖಪಡುತ್ತಿದ್ದರೆಂದು ತಿಳಿದುಬರುತ್ತದೆ. ೧೯೦೭ ರಿಂದ ಆರಾಧನೋತ್ಸವದ ನೂತನ ಅಧ್ಯಾಯ ಆರಂಭವಾಯಿತು. ತಿಲ್ಲೈಸ್ಥಾನಂ ಪಂಜು ಭಾಗವತರು, ನರಸಿಂಹ ಭಾಗವತರು ಪ್ರಸಿದ್ಧ ಪಿಟೀಲುವಾದಕ ತಿರುಚಿ ಗೋವಿಂದಸ್ವಾಮಿ ಪಿಳ್ಳೆಯವರೊಡನೆ ಸೇರಿಕೊಂಡು ಉತ್ಸವವನ್ನು ವಿಜೃಂಭಣೆ ಯಿಂದ ನಡೆಸಲು ಮೊದಲು ಮಾಡಿದರು. ಬೆಂಗಳೂರು ನಾಗರತ್ನಮ್ಮನವರು ತಮ್ಮ ಸರ್ವಸ್ವವನ್ನೂ ವಿನಿಯೋಗಿಸಿ ಸಮಾಧಿಯ ಮೇಲೆ ೧೯೨೫ ಸುಂದರವಾದ ದೇವಾಲಯ ವನ್ನು ಕಟ್ಟಿಸಿ ಅಮರಕೀರ್ತಿಯನ್ನು ಗಳಿಸಿದರು. ಅಲ್ಲಿಂದ ಮುಂದೆ ಇದು ಅಭಿವೃದ್ಧಿ ಯಾಗುತ್ತ ಬಂದಿದೆ.

ಈ ದೇವಾಲಯವನ್ನು ಕಟ್ಟುವ ಕೆಲಸದ ಮೇಲ್ವಿಚಾರಣೆಯು ತಿರುವೊಟ್ಟಿ ಯೂರು ಎಸ್. ಎ. ರಾಮಸ್ವಾಮಿ ಅಯ್ಯರ್‌ರವರ ಪಾಲಿಗೆ ಬಂದಿತು. ಸಮಾಧಿಯ ಸುತ್ತಲೂ ಕಟ್ಟಡದ ಅಡಿಪಾಯ ಹಾಕಲು ತೋಡುತ್ತಿದ್ದಾಗ ಒಂದು ಕುತೂಹಲಕರ ವಾದ ಘಟನೆ ನಡೆಯಿತು. ಸಮಾಧಿಯ ಸುತ್ತಲೂ ಎಷ್ಟು ದೂರದವರೆಗೆ ತೋಡ ಬಹುದೆಂಬುದನ್ನು ನಿರ್ಧರಿಸಲು ಅವರಿಗೆ ಸ್ಥಳದವರಿಂದ ಯಾವ ವಿಧವಾದ ಸಲಹೆ ದೊರಕಲಿಲ್ಲ ತಾವೇ ಧೈರ್ಯಮಾಡಿ ಕೆಲಸಗಾರರಿಗೆ ತೋಡುವಂತೆ ಹೇಳಿದರು. ಅವರು ಸ್ವಲ್ಪ ಆಳವಾಗಿ ತೋಡಿದ ನಂತರ ಆ ಸ್ಥಳದಿಂದ ಸಾಂಬ್ರಾಣಿ ವಾಸನೆ ಹೊರಟಿತು. ಇನ್ನು ಹೆಚ್ಚು ಆಳ ತೋಡಬಾರದೆಂದು ಯೋಚಿಸಿ ಅಸ್ತಿಭಾರವನ್ನು ಹಾಕಿಸಿ ಕಟ್ಟಡದ ನಿರ್ಮಾಣವನ್ನು ಆರಂಭಿಸಿದರು. ದಿವಂಗತ ಸೂಲಮಂಗಲಂ ವೈದ್ಯನಾಥ ಭಾಗವತರು ತಮ್ಮ ಒಬ್ಬ ಮಿತ್ರರೊಡನೆ ಒಂದು ಸಂಜೆ ಸಮಾಧಿಯ ಸಮೀಪದಲ್ಲಿ ಕಾವೇರಿಯಲ್ಲಿ ಸಂಧ್ಯಾವಂದನೆ ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ರಾಮ

ರಾಮ ಎಂಬ ಶಬ್ದ ಕೇಳಿಸಿತು. ಯಾವ ಕಡೆ ನೋಡಿದರೂ ಯಾರೂ ಕಾಣಿಸಲಿಲ್ಲ. ಸಮಾಧಿಯಿಂದಲೇ ಆ ಶಬ್ದವು ಹೊರಟಿರಬೇಕೆಂದು ತಿಳಿದರು.

ತ್ಯಾಗಬ್ರಹ್ಮ ಆರಾಧನ ಮಹೋತ್ಸವ ಸಭೆಯು ೧೯೪೦ ರಿಂದ ವಾರ್ಷಿಕ ಉತ್ಸವವನ್ನು ತಿರುವೈಯ್ಯಾರಿನಲ್ಲಿ ವಿಜೃಂಭಣೆಯಿಂದ ಆಚರಿಸುತ್ತಿದೆ ಇಂದು ಇದು ರಾಷ್ಟ್ರೀಯ ಉತ್ಸವವಾಗಿದೆ. ಸಮಾಧಿಯು ಸಾವಿರಾರು ಸಂಗೀತಗಾರರಿಗೆ ಸ್ಫೂರ್ತಿಯ ಕೇಂದ್ರ. ಸಂಗೀತ ಪ್ರಿಯರು ಮತ್ತು ಭಕ್ತರು ಅವರ ಜೀವಮಾನದಲ್ಲಿ ಒಂದು ಸಲವಾದರೂ ಇಲ್ಲಿಗೆ ಹೋಗಿ ದರ್ಶನ ಪಡೆದು ಜನ್ಮಪಾವನಮಾಡಿಕೊಳ್ಳಬೇಕೆಂಬ ಪವಿತ್ರ ಕ್ಷೇತ್ರ.

ತ್ಯಾಗರಾಜರು ಸಂಗೀತ ಸಿದ್ಧಾಂತಿಯಾಗಿದ್ದರು. ಅವರ ಕೃತಿಗಳು ಭಾವ, ರಾಗ ಮತ್ತು ತಾಳಗಳ ತ್ರಿವೇಣಿ ಸಂಗಮ. ಅವುಗಳಲ್ಲಿ ಸಂಗೀತ ಭಾವ, ಸಾಹಿತ್ಯ ಭಾವ ಮತ್ತು ಭಕ್ತಿ ಭಾವಗಳು ಸಂಪೂರ್ಣವಾಗಿ ತುಂಬಿವೆ. ಅವರು ಸಂಸ್ಕೃತ, ತೆಲುಗು, ತಮಿಳು, ಹಿಂದೀ, ಮರಾಠಿ ಭಾಷೆಗಳಲ್ಲಿ ಪರಿಣತರಾಗಿದ್ದರು. ಆಗಂತುಕರು ಬಂದಾಗ ಅವರೊಂದಿಗೆ ಅವರವರ ಮಾತೃಭಾಷೆಯಲ್ಲಿ ಸಂಭಾಷಿಸುತ್ತಿದ್ದರು. ನಾದ ವಿದ್ಯಾಮರ್ಮವನ್ನರಿತು, ಸಮಕಾಲೀನರಿಗೆ ಸ್ಫೂರ್ತಿಯ ಕೇಂದ್ರವಾಗಿದ್ದು, ಭೂಲೋಕದ ನಾರದರೆನಿಸಿಕೊಂಡು, ಮುಂದಿನ ಪೀಳಿಗೆಗಳ ಕಲಾವಿದರಿಗೆ ಸಂಗೀತದ ಕಂಪನ್ನು ಬೀರಿ, ಕರ್ಣಾಟಕ ಸಂಗೀತ ಸೌಧವನ್ನು ರತ್ನಮಯವಾಗಿ ಬೆಳಗಿಸಿದ ಮಹಾಪುರುಷರಾಗಿದ್ದಾರೆ.

**ಕರ್ಣಾಟಕ ಸಂಗೀತಕ್ಕೆ ತ್ಯಾಗರಾಜರ ಕೊಡುಗೆ**—ಕರ್ಣಾಟಕ ಸಂಗೀತಕ್ಕೆ ತ್ಯಾಗರಾಜರ ಕೊಡುಗೆ ಅಮೂಲ್ಯ ಹಾಗೂ ಅಪಾರವಾದುದು. ಪುರಂದರದಾಸರಿಂದ ಸುವ್ಯವಸ್ಥೆಗೊಳಿಸಲ್ಪಟ್ಟ ಕರ್ಣಾಟಕ ಸಂಗೀತವು ತನ್ನ ಕೀರ್ತಿ ಶಿಖರವನ್ನು ಮುಟ್ಟುವಂತೆ ಮಾಡಿದ ಮಹಾಸಾಧನೆಗೆ ಇವರು ಬಹುಮಟ್ಟಿಗೆ ಕಾರಣ. ಇತರರ ಕೃತಿಗಳಿಗಿಂತ ಇವರ ಕೃತಿಗಳು ಹೆಚ್ಚು ಜನಪ್ರಿಯವಾಗಿವೆ

ಇವರ ಕೃತಿಗಳು ಅತ್ಯಂತ ಮನೋರಂಜಕವಾದುವು. ಪಂಡಿತ ಪಾಮರರಾದಿಯಾಗಿ ಎಲ್ಲರೂ ಇವುಗಳನ್ನು ಅನುಭವಿಸಿ ಆನಂದ ಪಡೆಯಲು ಸಾಧ್ಯ. ಇವುಗಳಲ್ಲಿ ಉತ್ತಮ ಸಂಗೀತ, ಸಾಹಿತ್ಯ ಮತ್ತು ಭಕ್ತಿ ಎಂಬ ಗುಣತ್ರಯಗಳಿವೆ. ಪ್ರತಿಯೊಂದರಲ್ಲೂ ಸಂಗೀತವು ಸ್ವಾಭಾವಿಕವಾಗಿ ವಿಕಾಸಗೊಳ್ಳುತ್ತದೆ. ಇವುಗಳಲ್ಲಿ ನೇರವಾದ ಮತ್ತು ಗಮಕವಿರುವ ಸ್ವರಗಳ ಸಮತೋಲನವಿದೆ ತ್ಯಾಗರಾಜರು ಇವುಗಳಲ್ಲಿ ರಾಗ ಸೌಂದರ್ಯದ ವಿವಿಧ ಸ್ವರೂಪಗಳನ್ನೂ, ಭಾವವನ್ನೂ ತೋರಿಸಿಕೊಟ್ಟಿದ್ದಾರೆ. ಇವುಗಳಲ್ಲಿ ಸಂಗತಿಗಳು ವೈವಿಧ್ಯತೆ ಮತ್ತು ರಂಜಕತ್ವವನ್ನು ಹೊಂದಿವೆ. ಸಂಗೀತ ರಚನೆಗಳಲ್ಲಿರಬೇಕಾದ ಸಕಲ ವಿಧವಾದ ಅಲಂಕಾರಗಳು ಅಂದರೆ ಮಧ್ಯಮಕಾಲ ಸಾಹಿತ್ಯ, ಸಂಗತಿಗಳು, ಅಂತ್ಯಪ್ರಾಸ, ಅನುಪ್ರಾಸ, ಶಬ್ದಾಲಂಕಾರ, ಯಮಕ, ರಾಗ ಮುದ್ರೆ, ಕ್ಷೇತ್ರ ಮುದ್ರೆ ಮುಂತಾದುವೆಲ್ಲವೂ ಕಂಡುಬರುತ್ತವೆ. ಅತ್ಯಧಿಕ ಸಂಖ್ಯೆ

ಯಲ್ಲಿ ಕೃತಿರಚನೆ ಮಾಡಿರುವುದು ಇವರ ಪ್ರತಿಭೆಯ ಪ್ರತೀಕ. ಇವರ ಘನರಾಗ ಪಂಚರತ್ನಗಳು ಅತ್ಯಂತ ಶ್ರೇಷ್ಠವಾದುವು. ನಾದ ರಚನೆಯು ಇವರ ಕೈಯಲ್ಲಿ ಔನ್ನತ್ಯವನ್ನು ಪಡೆಯಿತು. ಕೃತಿಗಳ ಸಾಹಿತ್ಯವು ಶಿಷ್ಟ ವ್ಯಾವಹಾರಿಕ ಭಾಷೆಯಲ್ಲಿದೆ. ಉಪನಿಷತ್ತುಗಳ ಹಲವು ತತ್ವಗಳನ್ನು, ಉತ್ತಮ ಭಾವನೆಗಳನ್ನು ಸರಳ ಸುಂದರವಾಗಿ ಹೇಳಿದ್ದಾರೆ. ಕೃತಿಗಳು ಬಹುವಾಗಿ ಮಧ್ಯಮ ಕಾಲದಲ್ಲಿವೆ. ಸಂಗೀತದ ಶೈಲಿಯು ಸುಂದರ, ಲಲಿತ ಹಾಗೂ ಜೀವಂತವಾಗಿದ್ದು ಹೃದಯಸ್ಪರ್ಶಿಯಾಗಿದೆ. ರಾಮಭಕ್ತಿ ಮತ್ತು ನಾದೋಪಾಸನೆ ಇವರ ಸಂಗೀತದ ಪ್ರಮುಖ ಅಂಶಗಳು

**ಕೃತಿಗಳು ನಮಗೆ ಬಂದ ರೀತಿ**—ತ್ಯಾಗರಾಜರು ಸುಮಾರು ೨೧೧ ರಾಗಗಳಲ್ಲಿ ಕೃತಿಗಳನ್ನು ರಚಿಸಿದರು. ೨೪,೦೦೦ ಕೃತಿಗಳನ್ನು ರಚಿಸಿದರೆಂದು ಪ್ರತೀತಿ ಇದ್ದರೂ ನಮಗೆ ದೊರಕಿರುವುದು ೧೦೦೦ ಕ್ಕಿಂತ ಸ್ವಲ್ಪ ಹೆಚ್ಚಾಗಿವೆ. ಇನ್ನೂ ಹಲವು ಬೆಳಕಿಗೆ ಬರಬೇಕಾಗಿದೆ. ಭಕ್ತಿಯ ರಸಾವೇಶ ಉಂಟಾದಾಗ ಕೃತಿಗಳನ್ನು ಹಾಡುತ್ತಿದ್ದರು. ಆಶುಕವಿತೆ ಅವರಿಗೆ ಕರತಲಾಮಲಕವಾಗಿತ್ತು. ಏಕಾದಶಿ ಮತ್ತು ಇತರ ವಿಶೇಷ ದಿನಗಳಲ್ಲಿ ಇಂತಹ ಸಂದರ್ಭಗಳು ಒದಗುತ್ತಿದ್ದುವು ಗುರು ಹಾಡಿದ ಕೃತಿಗಳನ್ನು ಶಿಷ್ಯರು ತಾಳಪತ್ರದ ಮೇಲೆ ಬರೆದುಕೊಳ್ಳುತ್ತಿದ್ದರು ಒಬ್ಬ ಶಿಷ್ಯನು ಪಲ್ಲವಿಗೆ ಗಮನಕೊಟ್ಟು ಅದನ್ನು ಸ್ವರಸಹಿತ ಬರೆದು ಕಾವೇರಿ ತೀರಕ್ಕೆ ಹೋಗಿ ಚೆನ್ನಾಗಿ ಮನದಟ್ಟುಮಾಡಿಕೊಳ್ಳುತ್ತಿದ್ದನು. ಮತ್ತೊಬ್ಬನು ಅನುಪಲ್ಲವಿಯನ್ನೂ, ಮೂರನೆಯವನು ಚರಣವನ್ನೂ, ತೆಲುಗು ಮತ್ತು ಸಂಸ್ಕೃತದಲ್ಲಿ ಪರಿಣತನಾದ ಮತ್ತೊಬ್ಬನು ಸಾಹಿತ್ಯವನ್ನು ಮಾತ್ರ ಬರೆದಿಟ್ಟುಕೊಂಡು ಮಾರನೆಯ ದಿನ ನಾಲ್ಕು ಶಿಷ್ಯರೂ ಸೇರಿ ಕೃತಿಯನ್ನು ಪೂರ್ತಿಯಾಗಿ ಕಲಿತು ಗುರುವಿನ ಮುಂದೆ ಹಾಡುತ್ತಿದ್ದರು. ಹೀಗೆ ನಾಲ್ಕು ನಾಲ್ಕು ಶಿಷ್ಯರ ತಂಡಗಳು ಬೇರೆಬೇರೆ ಕೃತಿಯನ್ನು ಪಾಠ ಮಾಡಿ ಒಪ್ಪಿಸುತ್ತಿದ್ದರು ತ್ಯಾಗರಾಜರ ಕೃತಿಗಳು ನಮಗೆ ಬಂದ ರೀತಿಯಿದು.

**ಕೃತಿ ಮತ್ತು ಸಂಗತಿ**—ಕೃತಿ ಎಂಬ ಈಗಿನ ಸಂಗೀತ ರಚನಾ ವಿಶೇಷವನ್ನು ಪರಿಪಕ್ವಗೊಳಿಸಿದ ಕೀರ್ತಿ ತ್ಯಾಗರಾಜರಿಗೆ ಸಲ್ಲುತ್ತದೆ. ೧೬ನೆ ಶತಮಾನದಲ್ಲೇ ಪುರಂದರದಾಸರು ವಾಸುದೇವನ ನಾಮಾವಳಿಯು ಮತ್ತು ಸತತ ಗಣನಾಥ ಎಂಬ ದೇವರ ನಾಮಗಳಲ್ಲಿ ಕೃತಿ ಎಂಬ ಸಂಗೀತ ರಚನೆಯನ್ನೂ ಕೀರ್ತನೆ ಎಂಬ ಶಬ್ದವನ್ನೂ ಮೊದಲ ಬಾರಿ ಬಳಸಿದ್ದಾರೆ.

ಸುಸ್ವರಂ ಸುರಸಂ ಚೈವ ಸುರಾಗಂ ಮಧುರಾಕ್ಷರಮ್ ।
ಸಾಲಂಕಾರಂ ಸುಪ್ರಮಾಣಂ ಷಡ್ವರ್ಯಂ ಗೀತಲಕ್ಷಣಮ್ ॥

ತ್ಯಾಗರಾಜರು ಈ ಆರು ಲಕ್ಷಣಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಕೃತಿಗಳನ್ನು ರಚಿಸಿದರು. ಸೊಗಸುಗಾ ಮೃದಂಗತಾಳಮು ಎಂಬ ಕೃತಿಯಲ್ಲಿ, ಕೃತಿ ಎಂಬ ಪದವನ್ನು ಮೊದಲ ಬಾರಿ ಬಳಸಿದ್ದಾರೆ. ' ಯತಿ ವಿಶ್ರಮ ಸದ್ಭಕ್ತಿ ವಿರತಿ ದ್ರಾಕ್ಷಾರಸ ನವರಸಯುತ ಕೃತಿ ಚೇ ' ಎಂದಿದ್ದಾರೆ.

ಕೃತಿಗಳಿಗೆ ಸಂಗತಿಗಳನ್ನು ಸೂಕ್ತವಾಗಿ ಅಳವಡಿಸಿರುವುದು ಅವರ ಮತ್ತೊಂದು ಅಮೂಲ್ಯ ಕೊಡುಗೆ. ಇದು ಅವರು ಸಾಧಿಸಿದ ಕ್ರಾಂತಿಕಾರಕ ಮತ್ತು ಪ್ರತಿಭಾನ್ವಿತ ಸುಧಾರಣೆ. ಇದರಿಂದ ಕರ್ಣಾಟಕ ಸಂಗೀತವು ಸ್ತೋತ್ರರೂಪದಿಂದ ಕಲೆಯ ಔನ್ನತ್ಯವನ್ನು ಪಡೆಯಿತು. ಸಂಗತಿಗಳ ಸಂಯೋಜನೆಯಿಂದ ಸಂಗೀತವು ಮನ ಮೋಹಕ ಹಾಗೂ ಆನಂದದಾಯಕವಾಯಿತು. ಬೇಸರಹೋಗಿ ಕುತೂಹಲವು ಆವಿರ್ಭಾವವಾಯಿತು ಮಾನವನಿಗೆ ಬದಲಾವಣೆಯಿಂದ ಮೋಹ ಪ್ರಬಲವಾಗಿದೆ ಎಂಬುದನ್ನರಿತು ಸಂಗತಿಗಳ ಸಂಯೋಜನೆಯಿಂದ ಸಾಹಿತ್ಯಭಾವ ಮತ್ತು ರಸಭಾವ ಗಳು ಪ್ರಕಾಶಗೊಳ್ಳುವಂತಹ ಬದಲಾವಣೆಯಿಂದ ಸಂಗೀತವನ್ನು ರಮ್ಯಗೊಳಿ ಸಿದರು.

ಪೂರ್ವದಲ್ಲಿ ಸಂಗತಿಗೆ ಪ್ರಯೋಗ ಅಥವಾ ಗಮಕಾಲಪ್ತಿ ಎಂಬ ಹೆಸರಿತ್ತು. ಸಂಗತಿಗಳು ಕೃತಿಗೆ ಸೌಂದರ್ಯ ನೀಡುವ ಮುಖ್ಯಾಂಶಗಳು. ಇವು ತರಂಗಗಳಿದ್ದಂತೆ ರಾಗದ ತರಂಗಗಳು. ಪ್ರತಿಯೊಂದು ಸಂಗತಿಯೂ ಒಂದು ಅಲೆ ಅಥವಾ ಮೆಟ್ಟಲಿ ನಂತಿದ್ದು ಒಂದು ಇನ್ನೊಂದರ ಮುಂದುವರಿದ ರೂಪವಾಗಿರುತ್ತದೆ. ರಾಗ ಭಾವ ಮತ್ತು ಸಾಹಿತ್ಯ ಭಾವಗಳೆರಡೂ ಮಿಳಿತವಾಗಿ, ರಾಗಭಾವದ ವಿವಿಧ ಸ್ವರೂಪಗಳು ಮತ್ತು ಸಾಹಿತ್ಯದಲ್ಲಿ ಅಂತರ್ಗತವಾಗಿರುವ ವಿಶೇಷಾರ್ಥಗಳು ಸಂಗತಿಗಳಿಂದ ಪ್ರಕಾಶಕ್ಕೆ ಬರುತ್ತವೆ. ಇವು ತಾಳದ ಚೌಕಟ್ಟಿನಲ್ಲಿ ಬರುವ ವಿವಿಧ ತರಂಗಗಳು. ಇವುಗಳಲ್ಲಿ ರಾಗಭಾವ ಸಂಗತಿಗಳು ಮತ್ತು ಸಾಹಿತ್ಯಭಾವ ಸಂಗತಿಗಳೆಂದು ಎರಡು ವಿಧ. ತೋಡಿರಾಗದ ಕೊಲುವ ಮರಗದಾ ಎಂಬ ಕೃತಿಯ ಲಲಿತಕು ಸೀತಕು ಎಂಬುದರ ಸಂಗತಿಗಳು ರಾಗಭಾವ ಸಂಗತಿಗಳಿಗೆ ನಿದರ್ಶನ. ಮಾರುಬಲ್ಕ (ಶ್ರೀರಂಜನಿ) ಎಂಬ ಕೃತಿಯ ಪಲ್ಲವಿಯ ಸಂಗತಿಗಳು ಸಾಹಿತ್ಯಭಾವ ಸಂಗತಿಗಳಿಗೆ ನಿದರ್ಶನ. ಸಂಗತಿಗಳು ಒಂದರಿಂದ ಇನ್ನೊಂದು ವಿಕಾಸಗೊಂಡು ಮುಂದುವರಿದು ಕೊನೆಯ ಸಂಗತಿಯು ರಾಗದ ಸೌಂದರ್ಯದ ಪರಮಾವಧಿ ಸ್ವರೂಪವನ್ನು ಹೊಂದಿರುತ್ತದೆ. ಸಾಹಿತ್ಯಭಾವ ಸಂಗತಿಗಳನ್ನು ಸಂಗೀತಶಾಸ್ತ್ರಕ್ಕೆ ಅನುಗುಣವಾಗಿ ಬಳಸಿರುವ ವಾಗ್ಗೇಯಕಾರರೆಂದರೆ ತ್ಯಾಗರಾಜರೊಬ್ಬರೇ. ಅವರ ಕೃತಿಗಳಲ್ಲಿ ಸಮಕಾಲ ಸಂಗತಿ ಗಳು, ಮಧ್ಯಮಕಾಲ ಸಂಗತಿಗಳು ಮತ್ತು ದ್ರುತಕಾಲ ಸಂಗತಿಗಳಿವೆ. ಸುಲಭ ವಾದುವೂ ಕಷ್ಟಕರವಾದುವೂ ಇವೆ. ಇವುಗಳನ್ನು ಹಾಡಲು ಉತ್ತಮವಾದ ರವೆ ಜಾತಿ ಶಾರೀರವಿರಬೇಕು. ತ್ಯಾಗರಾಜರ ಸಂಗೀತದ ಸುಧಾರಣೆಗೆ ಚಕ್ಕನಿರಾಜ ಮಾರ್ಗಮು ಎಂಬ ಕೃತಿಯ ಪಲ್ಲವಿ (ಖರಹರಪ್ರಿಯ), ಮಾಜಾನಕಿ ಚೆಡಪಟ್ಟಿಕ (ಕಾಂಭೋಜಿ), ಶ್ರೀರಘುವರ (ಭೈರವಿ), ಜೇಸಿನದೆಲ್ಲ ಮರಚಿತವೋ (ತೋಡಿ), ದಾರಿನಿ ತೆಲುಸುಕೊಂಟಿ (ಶುದ್ಧಸಾವೇರಿ) ಮುಂತಾದ ಕೃತಿಗಳು ನಿದರ್ಶನ. ಈ ಸುಧಾರಣೆ ಒಂದೇ ಸಂಗೀತ ಕ್ಷೇತ್ರದಲ್ಲಿ ತ್ಯಾಗರಾಜರಿಗೆ ಅತ್ಯುನ್ನತ ಸ್ಥಾನ ದೊರಕಿಸಿದೆ.

**ಸಾಹಿತ್ಯ**—ತ್ಯಾಗರಾಜರ ಕೃತಿಗಳ ಸಾಹಿತ್ಯವು ಸಂಗೀತ ರಚನೆಯ ಮಾದರಿಯ 'ಮಾತು' ಆಗಿದೆ. ಸುಲಭ, ಸರಳವಾದ, ಮನೋಜ್ಞವಾದ ಭಾಷೆ, ಲಲಿತವಾದ ಪದಬಂಧ, ಸ್ವಾಭಾವಿಕತೆ ಮುಂತಾದುವುಗಳಿಂದ ಅವರ ಕೃತಿಗಳು ಆಕರ್ಷಣೀಯವಾಗಿವೆ ಉನ್ನತ ಧ್ಯೇಯಗಳು, ಸತ್ಯಸಂಗತಿಗಳು, ಭಾವನೆಗಳು, ಉಪಮಾನಗಳು ಇವೆಲ್ಲವೂ ಇವೆ ಉಪನಿಷತ್ತುಗಳ ತತ್ವಗಳನ್ನು ಸರಳಶೈಲಿಯಲ್ಲಿ ಸಾಮಾನ್ಯರಿಗೆ ಅರ್ಥವಾಗುವಂತೆ ಹೇಳಿದ್ದಾರೆ. ಆದ್ದರಿಂದ ಅವರ ಕೃತಿಗಳಿಗೆ ತ್ಯಾಗಬ್ರಹ್ಮೋಪನಿಷತ್ ಎಂದು ಹೆಸರು. ಮಾನವನ ಪ್ರತಿ ಸಮಸ್ಯೆಗಳಿಗೂ ಅವರ ಕೃತಿಗಳಲ್ಲಿ ಉತ್ತರವಿದೆ. ಇವುಗಳಲ್ಲಿ ಒಂದು ಕ್ರಮಬದ್ಧತೆ ಕಂಡುಬರುತ್ತದೆ. ಪಲ್ಲವಿಯು ಒಂದು ವಿಷಯದ ಸೂತ್ರದಂತಿದ್ದು, ಅನುಪಲ್ಲವಿಯು ಅದರ ಆವೃತ್ತಿಯಾಗಿ, ಚರಣವು ಆ ವಿಷಯದ ಭಾಷ್ಯದಂತಿದೆ. ಉದಾ : ಪ್ರತಾಪವರಾಳಿರಾಗದ ವಿನನಾಸಕೊನಿಯುನ್ನಾನುರ ಎಂಬ ಕೃತಿಯ ಪಲ್ಲವಿಯಲ್ಲಿ " ಓ ರಾಮ, ನಾನು ನಿನ್ನನ್ನು ಕೇಳುವ ಆಸೆಯುಳ್ಳವನಾಗಿದ್ದೇನೆ " ಅನುಪಲ್ಲವಿಯಲ್ಲಿ " ನಿನ್ನ ಇಂಪಾದ ಮಾತುಗಳನ್ನು ಕೇಳುವ ಆಸೆಯುಳ್ಳವನಾಗಿದ್ದೇನೆ " ಎಂದೂ, ಆ ಮಾತುಗಳು ಯಾವುವು ಎಂಬುದನ್ನು ಚರಣದಲ್ಲಿ ವಿವರಿಸಿದ್ದಾರೆ. ಇವರ ಕೃತಿಗಳು ರಾಮಾಯಣಕ್ಕೆ ಸಂಬಂಧಿಸಿದ್ದು ಶ್ರೀರಾಮನೇ ಪರಬ್ರಹ್ಮ ಎಂಬ ಅರ್ಥವನ್ನು ಪ್ರತಿಪಾದಿಸಿದ್ದಾರೆ.

ಕರ್ಣಾಟಕ ಸಂಗೀತದಲ್ಲಿ ಮಧ್ಯಮಕಾಲದ ಪ್ರಾಮುಖ್ಯತೆಯನ್ನು ಬೆಳಕಿಗೆ ತಂದವರಲ್ಲಿ ತ್ಯಾಗರಾಜರು ಮೊದಲಿಗರು. ಇವರು ವಿಳಂಬ ಮತ್ತು ಮಧ್ಯಮಕಾಲ ಇವೆರಡರಲ್ಲೂ ಕೃತಿಗಳನ್ನು ರಚಿಸಿದ್ದಾರೆ. ವಿಳಂಬಕಾಲದ ಕೃತಿಗಳು ರಾಜಗಾಂಭೀರ್ಯದ ನಿಧಾನದ ಸಂಗೀತದಿಂದ ತುಂಬಿವೆ ಮತ್ತು ಹೃದಯಂಗಮವಾಗಿವೆ. ಉದಾ : ಓ ರಂಗಶಾಯಿ, ಮೇರು ಸಮಾನ. ಕ್ಷೀರಸಾಗರಶಯನ ಆದರೆ ಇವರ ಮಧ್ಯಮ ಕಾಲದ ಕೃತಿಗಳು ಗಾಯಕರಿಗೂ ಶ್ರೋತೃಗಳಿಗೂ ಅಚ್ಚುಮೆಚ್ಚು.

ತ್ಯಾಗರಾಜರ ಶೈಲಿಯು ಸರಳ ಸುಂದರವಾದುದು. ಪಂಡಿತ ಪಾಮರ ರಂಜಕವಾದ ಇವರ ಕೃತಿಗಳ ಸಾಹಿತ್ಯವು ಸರಳವಾಗಿದ್ದು ರಸಭಾವವು ಕೆನೆಯಂತೆ ತೇಲುತ್ತಿರುತ್ತದೆ. ರಾಗದ ವೈಶಿಷ್ಟ್ಯವನ್ನು ನಾವು ಕಷ್ಟಪಟ್ಟು ಹುಡುಕಬೇಕಾಗಿಲ್ಲ. ಸಾಹಿತ್ಯದ ಜೋಡಣೆಯಲ್ಲಿ ನಾದದ ತಿಂತಿಣಿ ಇದೆ. ಎಲ್ಲ ಕೃತಿಗಳೂ ಶುದ್ಧ ಸಂಗೀತದ ಭಾಷೆಯಾಗಿವೆ. ಅಕ್ಷರ ಜೋಡಣೆಯಲ್ಲಿ ಗತಿ ಒಂದು ಲೀವಿಯನ್ನು ಹೊಂದಿ, ಕುಂಟದೆ, ಎಡರದೆ, ತೊಡರದೆ ಸಾಹಿತ್ಯ ಅಥವಾ ಸ್ವರಗಳು ಮನಮೋಹಕವಾಗಿ ಓಡುತ್ತವೆ. ಮಾತು ಸ್ವಲ್ಪವಿದ್ದು ಗಮಕ ಮತ್ತು ರಾಗಭಾವದ ಪುಷ್ಟಿಗೆ ಅಪಾರ ಅವಕಾಶವಿದೆ. ರಸಭಾವದ ದೃಷ್ಟಿಯಿಂದ ಇವರ ಕೃತಿಗಳನ್ನು ದ್ರಾಕ್ಷಾರಸಕ್ಕೆ ಹೋಲಿಸಬಹುದು. ಹರಿಕಾಂಭೋಜಿರಾಗ ಎವರಿಮಾಟ, ಸಾಮರಾಗದ ಶಾಂತಾಮುಲೇಕ, ತೋಡಿರಾಗದ ಕೊಲುವ ಮರಗದ, ಶಂಕರಾಭರಣ ರಾಗದ ಸಹಜಗುಣರಾಮ, ಖರಹರಪ್ರಿಯ ರಾಗದ ಚಕ್ಕನಿರಾಜ ಮಾರ್ಗಮು ಇವರ ಶೈಲಿಗೆ ಉತ್ತಮ ನಿದರ್ಶನ.

ಇವರ ಅನೇಕ ಕೃತಿಗಳಲ್ಲಿ ಸಂಗೀತ ಕಲೆಗೆ ಸಂಬಂಧಿಸಿದ ಹಲವು ಅಂಶಗಳಿವೆ. ಸಂಗೀತ ವಿಮರ್ಶೆ, ಇದನ್ನು ಸಾಧಕ ಮಾಡುವ ಉತ್ತಮ ವಿಧಾನ, ಸಂಗೀತವೇ ಒಂದು ಯೋಗ ಸಿದ್ಧಿ, ಮೋಕ್ಷಕ್ಕೆ ಸಾಧನ ಎಂಬ ವಿಚಾರಗಳಿವೆ. ನಿದ್ರೆಯನ್ನು ನಿರಾಕರಿಸಿ, ಮುದ್ದಾಗಿ ತಂಬೂರಿಯನ್ನು ಹಿಡಿದು, ಶುದ್ಧವಾದ ಮನಸ್ಸಿನಿಂದ, ಶುದ್ಧವಾದ ಸ್ವರದಿಂದ ವೇಳೆ ತಪ್ಪದೆ ಧ್ಯಾನಿಸಬೇಕು ಪರಿಶುದ್ಧವಾದ ನಡವಳಿಕೆ, ಸ್ವರ ಶುದ್ಧಿ, ಸಂಪ್ರದಾಯ ಶ್ರದ್ಧೆ ಇವು ಸಂಗೀತಕಲೆಗೆ ಆಧಾರಭೂತವಾದುವೆಂದು ಸಂಗೀತ ಸಾಧಕರಿಗೆ ಆದೇಶ ನೀಡಿದ್ದಾರೆ. ಇದಲ್ಲದೆ ನಾದೋಪಾಸನೆ ಏಕೆ ಮಾಡಬೇಕು? ಏಕೆಂದರೆ ಶ್ರೀರಾಮನೇ ಸಂಗೀತ. ಸಂಗೀತವೇ ಶ್ರೀರಾಮ. ನಾದವೇ ಪರಮಾತ್ಮ ಸ್ವರೂಪ.

ಭಾಗವತ ಸಂಪ್ರದಾಯದ ಭಕ್ತಿಚಳುವಳಿಯು ಸಂಗೀತದ ಮೂಲಕ ಭಕ್ತಿಯನ್ನು ದೇಶಾದ್ಯಂತ ಜನಪ್ರಿಯಗೊಳಿಸಿ ಸಮಾಜವನ್ನು ಪುನರುಜ್ಜೀವನಗೊಳಿಸಿದರು. ತ್ಯಾಗರಾಜರ ಹಂಬಲ ಮಾನವ ಸಭ್ಯನಾಗಬೇಕು, ಭಕ್ತನಾಗಬೇಕು, ಮುಕ್ತನಾಗಬೇಕು ಎಂಬುದು. ಇವರ ಕೃತಿಗಳು ಭವಾಟವಿಯಲ್ಲಿ ಬಳಲುವವನ ಮನಸ್ಸಿಗಂತೂ ಸಂಜೀವನಿಯಂತಿವೆ. ಇವರು ಸಂಗೀತ ಸಿದ್ಧಾಂತಿಗಳು, ಸಂಗೀತ ಸ್ಮೃತಿಕಾರರು, ಮಿಗಿಲಾಗಿ ಸಮಾಜೋದ್ಧಾರಕರು. ಜನಗಳಲ್ಲಿದ್ದ ಡಂಭಾಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸಿ ಖಂಡಿಸಿದ್ದಾರೆ. ಇವರ ಟೀಕೆಯಲ್ಲಿ ಸಹೃದಯತೆಯಿದೆ ಇದು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ. ನಾದರಸವೆಂಬ ಅಮೃತವು ಯೋಗ, ಯಾಗ, ತ್ಯಾಗ, ಭೋಗಗಳನ್ನು ನೀಡುವುದರಿಂದ ರಾಗರಸಪಾನ ಮಾಡಬೇಕು. ನಾದೋಪಾಸನೆಯಿಂದ ಬ್ರಹ್ಮಾನಂದವನ್ನು ಪಡೆಯಬೇಕು ಎಂಬುದು ಇವರ ಆದೇಶ ತ್ಯಾಗರಾಜರ ತ್ಯಾಗವು "ತ್ಯಾಗೇನೈಕೇ ಅಮೃತತ್ವಮಾನಸುಃ" ಎಂಬಂತೆ. ಐಹಿಕವಾದುವುಗಳನ್ನು ನಿರಾಕರಿಸಿ ಶ್ರೀರಾಮಚಂದ್ರನಲ್ಲಿ ಶರಣಾಗತಿ ಮಾಡಿ, ತಮ್ಮ ಜೀವನದಲ್ಲಿ ಅನುಸರಿಸಿ ತಮ್ಮ ಕಲಾಕೃತಿಗಳ ಮೂಲಕ ಲೋಕಕ್ಕೆ ಸಾರಿದ್ದಾರೆ. ಇವರು ನಾದ ಯೋಗಿ ಹಾಗೂ ಕರ್ಮಯೋಗಿ.

**ತಿಟ್ಟೆ ಕೃಷ್ಣಯ್ಯಂಗಾರ್**—ಕೃಷ್ಣಯ್ಯಂಗಾರ್ಯರು ಸಂಗೀತ ವಿದ್ವಾಂಸರ ಮನೆತನಕ್ಕೆ ಸೇರಿದವರು. ಇವರ ತಾತ ರಂಗಾಚಾರ್ಯರು ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿಟ್ಟೆ ಗ್ರಾಮದವರು. ತ್ಯಾಗರಾಜರ ಶಿಷ್ಯ ತಿಲ್ಲೈಸ್ಥಾನಂ ರಾಮಯ್ಯಂಗಾರ್ಯರ ಶಿಷ್ಯರಾಗಿದ್ದು ಮುಮ್ಮಡಿ ಕೃಷ್ಣರಾಜಒಡೆಯರ ಕಾಲದಲ್ಲಿ ಮೈಸೂರಿಗೆ ಬಂದು ನೆಲೆಸಿದರು. ಇವರಿಗೆ ತ್ಯಾಗರಾಜರ ಗಾಯನವನ್ನು ಕೇಳುವ ಸುಯೋಗ ದೊರಕಿತ್ತು. ಇವರ ಮಕ್ಕಳಾದ ನಾರಾಯಣ ಅಯ್ಯಂಗಾರ್ಯರು ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದರು. ಕೃಷ್ಣಯ್ಯಂಗಾರ್ಯರು ೧೯೦೨ರಲ್ಲಿ ಮೈಸೂರಿನಲ್ಲಿ ಜನಿಸಿದರು. ತಂದೆಯವರಲ್ಲಿ ಸಂಗೀತ ಶಿಕ್ಷಣ ಪಡೆದರು. ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ ಇವರ ಮಾರ್ಗದರ್ಶನವೂ

ದೊರಕಿತು. ತಮ್ಮ ೧೬ನೆ ವಯಸ್ಸಿನಲ್ಲಿ ತಿರುವೈಯ್ಯಾರಿನ ತ್ಯಾಗರಾಜ ಆರಾಧನೋತ್ಸವದಲ್ಲಿ ಪಾಪಾ ವೆಂಕಟರಾಮಯ್ಯ ಮತ್ತು ತಂಜಾವೂರು ವೈದ್ಯನಾಥ ಅಯ್ಯರ್‌ರವರ ಪಕ್ಕವಾದ್ಯಗಳೊಡನೆ ಒಂದು ಗಂಟೆ ಕಾಲ ಹಾಡಿದರು. ೧೯೩೪ರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾದರು ಮತ್ತು ಬೆಳಗಾಂ ಕಾಂಗ್ರೆಸ್ಸಿನಲ್ಲಿ ಮೈಸೂರು ವಿದ್ವತ್‌ಗೋಷ್ಠಿಯೊಡನೆ ಭಾಗವಹಿಸಿದರು ಮತ್ತು ಮಹಾತ್ಮ ಗಾಂಧೀಜಿಯವರ ಪ್ರಶಂಸೆ ಪಡೆದರು. ೧೯೪೬ರಲ್ಲಿ ಜಯಚಾಮರಾಜ ಒಡೆಯರು ಇವರಿಗೆ ಗಾನವಿಶಾರದ ಎಂಬ ಬಿರುದನ್ನಿತ್ತು ಗೌರವಿಸಿದರು. ೧೯೬೫ರಲ್ಲಿ ರಾಜ್ಯದ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ೧೯೬೬ರಲ್ಲಿ ಮೈಸೂರಿನ ಬಿಡಾರಂ ಪ್ರಸನ್ನ ಸೀತಾರಾಮ ಮಂದಿರ ದಲ್ಲಿ ನಡೆದ ಸಂಗೀತ ಸಮ್ಮೇಳನದಲ್ಲಿ 'ಗಾನಕಲಾಸಿಂಧು' ಎಂಬ ಬಿರುದು, ಗೌರವ ಸಂದಿತು. ಇವರು ದಕ್ಷಿಣ ಭಾರತದಲ್ಲೆಲ್ಲಾ ಅನೇಕ ಸ್ಥಳಗಳಲ್ಲಿ ಕಚೇರಿ ಗಾಯನ ಮಾಡಿದ್ದಾರೆ. ಸಂಪ್ರದಾಯಬದ್ಧವಾದ, ಸತ್ವಪೂರ್ಣವಾದ ಹಾಡುಗಾರಿಕೆ ಇವರದು.

**ತಿನ್ನಿಯಂ ವೆಂಕಟರಾಮಯ್ಯರ್**—ಇವರು ತಮಿಳುನಾಡಿನ ತಿರುಚಿ ಜಿಲ್ಲೆಯ ತಿನ್ನಿಯಂ ಎಂಬಲ್ಲಿ ವೇದಾಧ್ಯಯನ ಮತ್ತು ತಮಿಳು ಪಾಂಡಿತ್ಯಕ್ಕೆ ಹೆಸರಾಗಿದ್ದ ಮನೆತನಕ್ಕೆ ಸೇರಿದ ವೈದ್ಯನಾಥಶಾಸ್ತ್ರಿಗಳ ಮಗನಾಗಿ ೧೯೦೦ರಲ್ಲಿ ಜನಿಸಿ ದರು. ಸೇತುರಾಮಯ್ಯರ್‌ರವರಲ್ಲಿ ಮೃದಂಗವಾದನ ಮತ್ತು ಗಾಯನದಲ್ಲಿ ಪ್ರಾರಂಭದಲ್ಲಿ ಶಿಕ್ಷಣ ಪಡೆದರು. ತಿರುವೈಯ್ಯಾರ್ ಸುಬ್ರಹ್ಮಣ್ಯ ಅಯ್ಯರ್‌ರವರಲ್ಲಿ ಉನ್ನತ ಶಿಕ್ಷಣವನ್ನು ಪಡೆದು ೧೯೧೩ರಲ್ಲಿ ತಮ್ಮ ಕಚೇರಿ ಮಾಡಿದರು. ಇವರು ಅನೇಕ ಗಾಯಕರನ್ನೂ, ಮೃದಂಗ ವಿದ್ವಾಂಸರನ್ನೂ ಸಿದ್ಧಗೊಳಿಸಿದ್ದಾರೆ.

**ತಿರುಕ್ಕೋಡಿಕ್ಕಾವಲ್ ಕೃಷ್ಣಯ್ಯರ್** (೧೮೫೭–೧೯೧೩)—ಕರ್ಣಾಟಕ ಸಂಗೀತ ಕಚೇರಿಗಳಲ್ಲಿ ಪಿಟೀಲು ಒಂದು ಮುಖ್ಯ ಪಕ್ಕವಾದ್ಯವಾಗಿರಲು ತೊಡಗಿದ್ದು ಸುಮಾರು ೧೮೦೦ ರಿಂದ ಎನ್ನಬಹುದು. ಇದು ಸಂಗೀತದ ಇತಿಹಾಸದಲ್ಲಿ ಒಂದು ಮುಖ್ಯ ಘಟನೆ. ಈ ವಾದ್ಯದ ನಾದಪುಷ್ಟಿ, ಕಮಾನಿನ ಸಹಾಯದಿಂದ ಸ್ವರಗಳನ್ನು ದೀರ್ಘವಾಗಿ ನುಡಿಸುವ ಸೌಲಭ್ಯ, ಹಗುರವಾಗಿರುವಿಕೆ ಮುಂತಾದ ಗುಣಗಳಿಂದ ಇದು ಸಂಗೀತ ಕಚೇರಿಗಳ ಒಂದು ಮುಖ್ಯ ಪಕ್ಕವಾದ್ಯವಾಗಿದೆ. ಬಾಲುಸ್ವಾಮಿದೀಕ್ಷಿತ ರಿಂದ (೧೭೮೬–೧೮೫೯) ಮೊದಲಾಗಿ ಹಲವು ಉತ್ಸಾಹಿ ವಿದ್ವಾಂಸರು ಈ ವಾದ್ಯವನ್ನು ಬಹು ತಾಳ್ಮೆಯಿಂದ ಸಾಧಕ ಮಾಡಿದರು. ಕರ್ಣಾಟಕ ಸಂಗೀತದ ಹಿರಿಮೆಗೆ ತಕ್ಕಂತೆ ಇದನ್ನು ನುಡಿಸುವ ತಂತ್ರ ಮತ್ತು ನೈಪುಣ್ಯವು ಕ್ರಮೇಣ ರೂಪುಗೊಂಡುವು. ಹಿಂದಿನ ತಲೆಮಾರಿನ ಪಿಟೀಲು ವಾದಕರಲ್ಲಿ ಕೃಷ್ಣಯ್ಯರ್‌ರವರ ಸ್ಥಾನ ಹಿರಿದಾದುದು.

ಕೃಷ್ಣಯ್ಯರ್ ತಮಿಳುನಾಡಿನ ತಂಜಾವೂರು ಜಿಲ್ಲೆಯ ಮರುತ್ತುರೈ ಎಂಬ ಗ್ರಾಮದಲ್ಲಿ ೧೮೫೭ರಲ್ಲಿ ಜನಿಸಿದರು. ಇವರ ತಂದೆ ಕುಪ್ಪುಸ್ವಾಮಿ ಭಾಗವತರು ಹರಿ ಕಥಾ ಕಾಲಕ್ಷೇಪದಲ್ಲಿ ಪ್ರಸಿದ್ಧರಾಗಿದ್ದು ತಮಿಳು, ಮರಾಠಿ, ಸಂಸ್ಕೃತ, ತೆಲುಗು ಮತ್ತು

ಕನ್ನಡ ಭಾಷೆಗಳಲ್ಲಿ ಪ್ರವೀಣರಾಗಿದ್ದರು. ಕೃಷ್ಣಯ್ಯರ್ ಸಂಗೀತ ಶಿಕ್ಷಣವನ್ನು ತಮ್ಮ ತಂದೆಯವರಿಂದ ಪಡೆದು, ತಾನ ವರ್ಣಗಳ ವಾಗ್ಗೇಯಕಾರರಾಗಿದ್ದ ಕೊತ್ತವಾಶಲ್ ವೆಂಕಟರಾಮಯ್ಯರಲ್ಲಿ ಮುಂದುವರಿಸಿದರು. ಶಾರೀರ ಸೌಖ್ಯವಿಲ್ಲದ್ದರಿಂದ ಅವರ ಸಲಹೆಯಂತೆ ಸಾತ್ತನೂರು ಪಂಚನದ ಅಯ್ಯರ್‌ರವರಲ್ಲಿ ಪಿಟೀಲುವಾದನವನ್ನು ಕಲಿಯಲು ತೊಡಗಿ, ನಂತರ ಆಗಿನ ಖ್ಯಾತ ವಿದ್ವಾಂಸರಾಗಿದ್ದ ಪಿಟೀಲು ಸುಬ್ಬರಾಯರಲ್ಲಿ ಉನ್ನತ ಶಿಕ್ಷಣ ಪಡೆದು ಸಾಧಕ ಮಾಡಿ ಪ್ರವೀಣರಾದರು.

ಕೃಷ್ಣಯ್ಯರ್ ಆಜಾನುಬಾಹುವಾದ ವ್ಯಕ್ತಿ. ಸ್ವರೂಪ ವಕ್ರ ಮತ್ತು ಸ್ವಭಾವವೂ ವಿಚಿತ್ರ. ಪ್ರತಿ ರಾತ್ರಿ ಎಂಟು ಗಂಟೆಗಳ ಕಾಲ ಸಾಧಕ ಮಾಡುತ್ತಿದ್ದರು. ಎಷ್ಟೇ ಕಚೇರಿಗಳ ಕಾರ್ಯಕ್ರಮವಿದ್ದರೂ ರಾತ್ರಿ ಮೂರರಿಂದ ಏಳರವರೆಗೆ ಅಭ್ಯಾಸ ಮಾಡುವುದನ್ನು ಬಿಡುತ್ತಿರಲಿಲ್ಲ. ಕಮಾನಿನ ಒಂದು ಎಳೆತದಲ್ಲಿ ೪, ೮, ೧೬, ೩೨, ೬೪ ಸ್ವರಗಳನ್ನು ನುಡಿಸುವುದನ್ನು, ಒಂದೇ ತಂತಿಯಲ್ಲಿ ಸ್ವರಗಳನ್ನೂ ವನಜಾಕ್ಷಿ, ವಿರಿಬೋಣಿ, ಸರಸೂಡ, ಇಂತಚಲಮು ಎಂಬ ವರ್ಣಗಳನ್ನು ದಿನವೂ ಅಭ್ಯಸಿಸುತ್ತಿದ್ದರು. ಮಾಯಾವರಂ ವೀಣಾ ವೈದ್ಯನಾಥ ಅಯ್ಯರ್‌ರವರಿಂದ ಅನೇಕ ಕೃತಿಗಳನ್ನು ಕಲಿತು ತಮ್ಮ ಜ್ಞಾನಭಂಡಾರವನ್ನು ಹೆಚ್ಚಿಸಿಕೊಂಡರು.

ಪಕ್ಕವಾದ್ಯ ನುಡಿಸುವುದರಲ್ಲಿ ಇವರು ಅದ್ವಿತೀಯರಾಗಿದ್ದರು. ಮಹಾವೈದ್ಯನಾಥ ಅಯ್ಯರ್, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ಶರಭಶಾಸ್ತ್ರಿಗಳು ಮುಂತಾದ ಹಿರಿಯ ವಿದ್ವಾಂಸರು ಇವರ ಪಕ್ಕವಾದ್ಯವನ್ನು ಅಪೇಕ್ಷಿಸುತ್ತಿದ್ದರು. ಇವರ ತನಿ ಕಚೇರಿಗಳಲ್ಲಿ ಇವರ ಪ್ರತಿಭೆ ಪ್ರಕಟವಾಗುತ್ತಿತ್ತು. ತನಿ ಕಚೇರಿಯು ರೂಢಿಗೆ ಬಂದು ಗಾಯನಕ್ಕೆ ಸಮಾನವಾದ ಸ್ಥಾನವನ್ನು ಪಡೆಯಿತು. ಕೀರ್ತನೆಗಳನ್ನು ಹಾಡುತ್ತಿರುವ ಹಾಗೆ ಕೇಳಿಬರುವಂತೆ ನುಡಿಸುತ್ತಿದ್ದರು. ತ್ಯಾಗರಾಜರ ಕೃತಿಗಳನ್ನು ನುಡಿಸುವುದರಲ್ಲಿ ತಮ್ಮ ಕೌಶಲ್ಯವನ್ನು ತೋರಿಸುತ್ತಿದ್ದರು. ಶುದ್ಧವಾದ ನಾದ, ಅಸಾಧಾರಣ ಲಯಜ್ಞಾನ, ಅಪಾರ ಮನೋಧರ್ಮ ಇವರ ಪ್ರತಿಭೆಯ ಹೆಗ್ಗುರುತುಗಳಾಗಿದ್ದುವು. ಇವರು ಪ್ರವೇಶಿಸದ ಸದಸ್ಸಿರಲಿಲ್ಲ. ಇವರನ್ನು ಆದರಿಸದ ಸಂಸ್ಥಾನವಿರಲಿಲ್ಲ. ಇವರು ಮೈಸೂರು ಆಸ್ಥಾನದ ಗೌರವಕ್ಕೆ ಪಾತ್ರರಾಗಿದ್ದರು. ತಿರುವಾಡುತ್ತುರೈ ಮಠದ ಪ್ರಮುಖ ವಿದ್ವಾಂಸರಾಗಿದ್ದರು. ತಮ್ಮ ಹಳ್ಳಿಯಾದ ತಿರುಕ್ಕೋಡಿಕಾವಲ್‌ನಲ್ಲಿ ನ್ಯಾಯಾಧೀಶರಾಗಿದ್ದರು. ಇವರ ಹಿರಿಯ ಮಗ ರಾಮಯ್ಯರ್, ಕುಂಭಕೋಣಂ ರಾಜಮಾಣಿಕ್ಯಂ ಪಿಳ್ಳೆಯ ಗುರು ರಾಮಸ್ವಾಮಿ ಅಯ್ಯರ್, ಶೆಮ್ಮಂಗುಡಿ ನಾರಾಯಣ ಸ್ವಾಮಿ ಅಯ್ಯರ್ ಮುಂತಾದವರು ಇವರ ಶಿಷ್ಯರಾಗಿದ್ದರು.

**ತ್ಯಾಗರಾಜರ ಶಿಷ್ಯರು ಮತ್ತು ಶಿಷ್ಯ ಪರಂಪರೆ**—ಭಾರತೀಯ ಸಂಗೀತದ ಇತಿಹಾಸದಲ್ಲಿ ಇತರ ವಾಗ್ಗೇಯಕಾರರಿಗಿಂತ ಹೆಚ್ಚು ಸಂಖ್ಯೆಯಲ್ಲಿ ತ್ಯಾಗರಾಜರಿಗೆ ಶಿಷ್ಯರಿದ್ದರು. ಈ ಶಿಷ್ಯರೂ ಮತ್ತು ಪರಂಪರೆಯವರೂ ಪ್ರಸಿದ್ಧ ವಾಗ್ಗೇಯಕಾರರೂ, ಸಂಗೀತಗಾರರೂ ಆಗಿದ್ದರು. ತ್ಯಾಗರಾಜರ ಶಿಷ್ಯರಲ್ಲಿ ಹಲವರು ಮೊದಲೇ

ಪಲ್ಲವಿ ವಿದ್ವಾಂಸರೂ, ವೈಣಿಕರೂ ಆಗಿದ್ದುದಲ್ಲದೆ ತೆಲುಗು ಮತ್ತು ಸಂಸ್ಕೃತ ವಿದ್ವಾಂಸರಾಗಿದ್ದರು. ಗುರುವಿನ ದೈವಿಕ ಪ್ರತಿಭೆ ಮತ್ತು ವ್ಯಕ್ತಿತ್ವವನ್ನು ಅರಿತು ಪೂಜ್ಯಭಾವನೆಯಿಂದ ಅವರ ಸೇವೆ ಮಾಡಿ ಶ್ರದ್ಧಾಭಕ್ತಿಗಳಿಂದ ಅವರ ರಚನೆಗಳನ್ನು ಕಲಿಯುತ್ತಿದ್ದರು. ಕೆಲವರು ದಿವ್ಯನಾಮ ಕೀರ್ತನೆಗಳಲ್ಲಿ ಪರಿಣತರಾಗಿದ್ದರು. ವೀಣಾ ಕುಪ್ಪಯ್ಯರ್, ವೆಂಕಟರಮಣ ಭಾಗವತರೇ ಮುಂತಾದವರು ಹೆಚ್ಚು ಕಾಲ ಶಿಷ್ಯರಾಗಿ ಸೇವೆ ಮಾಡಿದರು. ವಾಲಾಜಪೇಟೆ ವೆಂಕಟರಮಣ ಭಾಗವತರು ತೆಲುಗು ಮತ್ತು ಸಂಸ್ಕೃತ ವಿದ್ವಾಂಸರಾಗಿದ್ದು ತ್ಯಾಗರಾಜರ ಬಾಸ್ವೆಲ್ ಆಗಿದ್ದರು.

ತ್ಯಾಗರಾಜರು ತಮ್ಮ ಶಿಷ್ಯರನ್ನು ಅವರ ಶಾರೀರ ಮತ್ತು ಗುಣ ಇತ್ಯಾದಿಗಳಿಗೆ ತಕ್ಕಂತೆ ಎರಡು ಎರಡು ಶಿಷ್ಯರನ್ನು ಜೊತೆಯನ್ನಾಗಿ ಮಾಡಿ ಒಂದೊಂದು ಜೊತೆಗೆ ೨೦೦ರಷ್ಟು ಕೃತಿಗಳನ್ನು ಹೇಳಿಕೊಟ್ಟರು ಬುದ್ಧಿವಂತರಾದ ಶಿಷ್ಯರು ಇನ್ನೂ ಹೆಚ್ಚು ಕೃತಿಗಳನ್ನು ಕಲಿಯುತ್ತಿದ್ದರು. ವಾಲಾಜಪೇಟೆ ಮತ್ತು ಉಮಯಾಳ್ಪುರಂ ಶಿಷ್ಯರು ಹೆಚ್ಚು ಸಂಖ್ಯೆಯಲ್ಲಿ ಕೃತಿಗಳನ್ನು ಕಲಿತರು.

ಉತ್ತಮ ಸ್ವರಜ್ಞಾನವಿಲ್ಲದವರು ಶಿಷ್ಯರಾಗಿ ಬಂದಾಗ ತ್ಯಾಗರಾಜರು ಅವರಿಗೆ ಮೊದಲು ದಿವ್ಯನಾಮ ಕೀರ್ತನೆಗಳನ್ನು ಕಲಿಸಿ ನಂತರ ಇತರ ಕೃತಿಗಳನ್ನು ಕಲಿಸುತ್ತಿದ್ದರು. ಈಶಮನೋಹರಿ ರಾಗದ 'ಶ್ರೀಜಾನಕಿ ಮನೋಹರ' ಎಂಬ ಕೃತಿಯನ್ನು ತಪ್ಪದೆ ಕಲಿಸುತ್ತಿದ್ದರು. ಇದೇ ಪದ್ಧತಿಯನ್ನು ಅವರ ಶಿಷ್ಯರಾದ ಉಮಯಾಳ್ಪುರಂ ಸಹೋದರರು ಅನುಸರಿಸಿದರು. ತ್ಯಾಗರಾಜರು ಪ್ರತಿದಿನವೂ ಒಂದು ಅಥವಾ ಎರಡು ಕೃತಿಗಳನ್ನು ರಚಿಸುತ್ತಿದ್ದರು. ಏಕಾದಶಿ ದಿನಗಳಲ್ಲಿ ಅನೇಕ ಕೀರ್ತನೆಗಳು ರಚನೆಯಾಗುತ್ತಿದ್ದುವು. ಅವರ ಶಿಷ್ಯರಲ್ಲಿ ತಂಜಾವೂರು ರಾಮರಾವ್ ಅವರ ಆಪ್ತ ಕಾರ್ಯದರ್ಶಿಯಂತೆ ಸೇವೆ ಮಾಡುತ್ತಿದ್ದರು. ಇತರರಿಗಿಂತ ಗುರುವಿನಲ್ಲಿ ಇವರಿಗೆ ಹೆಚ್ಚು ಸಲಿಗೆಯಿತ್ತು. ಇವರು ತ್ಯಾಗರಾಜರಿಗಿಂತ ಎರಡು ವರ್ಷ ಚಿಕ್ಕವರಾಗಿದ್ದರು. ದೈಹಿಕ ಶ್ರಮವುಳ್ಳ ಕೆಲಸಗಳನ್ನು 'ಗಣಪತಿ' ಎನ್ನಿಸಿಕೊಂಡಿದ್ದ ವಾಲಾಜಪೇಟೆ ವೆಂಕಟರಮಣ ಭಾಗವತರು ಮಾಡುತ್ತಿದ್ದರು. ಗುರುವನ್ನು ಎಲ್ಲರೂ 'ಅಯ್ಯರ್‌ವಾಳ್' ಎಂದು ಹೇಳುತ್ತಿದ್ದರು

ತ್ಯಾಗರಾಜರ ಮೂವತ್ತು ಪ್ರಮುಖ ಶಿಷ್ಯರಲ್ಲಿ ವಾಲಾಜಪೇಟೆ ವೆಂಕಟರಮಣ ಭಾಗವತರು ಮತ್ತು ಅವರ ಪ್ರತಿಭಾವಂತ ಪುತ್ರ ಕೃಷ್ಣಸ್ವಾಮಿ ಭಾಗವತರು ಸಂಗೀತ ಪ್ರಪಂಚಕ್ಕೆ ಮಹದುಪಕಾರ ಮಾಡಿದ್ದಾರೆ. ವೆಂಕಟರಮಣ ಭಾಗವತರು ಸಂಸ್ಕೃತ ಮತ್ತು ತೆಲುಗಿನಲ್ಲಿ ವಿದ್ವಾಂಸರಾಗಿದ್ದರು. ಗುರುವಿನ ರಚನೆಗಳನ್ನೂ, ಗೇಯನಾಟಕಗಳನ್ನೂ ಎಚ್ಚರಿಕೆಯಿಂದ ಬರೆದಿಟ್ಟುಕೊಂಡರು. ಇವರಿಬ್ಬರೂ ತ್ಯಾಗರಾಜರ ಜೀವನ ಚರಿತ್ರೆಯನ್ನು ಕುರಿತು ವಿವರವಾಗಿ ಬರೆದಿಟ್ಟರು. ವೆಂಕಟರಮಣ ಭಾಗವತರು ೨೬ ವರ್ಷಗಳ ಕಾಲ ಗುರುವಿನ ಸಂಗಡವಿದ್ದರು. ಇವರ ಪುತ್ರರಾದ ಕೃಷ್ಣಸ್ವಾಮಿ ಭಾಗವತರು ಹಲವು ಕೃತಿಗಳನ್ನೂ ಸ್ವರಜತಿಗಳನ್ನೂ ರಚಿಸಿದ್ದಾರೆ. ಇವರು

ಪ್ರತಿದಿನವೂ ಊಟ ಮಾಡುವ ಮೊದಲು ತ್ಯಾಗರಾಜರ ಹತ್ತು ಕೃತಿಗಳನ್ನು ಹಾಡುತ್ತಿದ್ದರು. ಈ ರೀತಿ ಒಂದು ವರ್ಷದಲ್ಲಿ ೩೬೦೦ ಕೃತಿಗಳನ್ನು ಹಾಡಿ ಕಾಪಾಡಿಕೊಂಡು ಬಂದರು.

## ಮುಖ್ಯ ಶಿಷ್ಯ ಪರಂಪರೆ




ಮಾನಂಬುಚಾವಡಿ ವೆಂಕಟಸುಬ್ಬಯ್ಯರ್
ಮಹಾ ವೈದ್ಯನಾಥ ಅಯ್ಯರ್
ಪಟ್ಣಂ ಸುಬ್ರಹ್ಮಣ್ಯ ಅಯ್ಯರ್
ಶರಭಶಾಸ್ತ್ರಿ
ಫಿಡಲ್ ವೆಂಕೋಬರಾವ್
ಪಂಚಾಪ ಕೇಶಯ್ಯ (ತ್ಯಾಗರಾಜರ ಮೊಮ್ಮಗ)
ಶಿವರಾಮ ಅಯ್ಯರ್
ವೀಣಾ ಧರ್ಮ ದೀಕ್ಷಿತುಲು
ಸುಸರ್ಲ ದಕ್ಷಿಣಾ ಮೂರ್ತಿಶಾಸ್ತ್ರಿ
ರಾಮನಾಡ್ ಶ್ರೀನಿವಾಸಯ್ಯಂಗಾರ್
ಮೈಸೂರು ವಾಸುದೇವಾಚಾರ್ಯ
ಅರಿಯಕುಡಿ ರಾಮನುಜ ಅಯ್ಯಂಗಾರ್


ವಾಲಾಜಪೇಟೆ ವೆಂಕಟರಮಣ ಭಾಗವತರು
ಮೈಸೂರು ಸದಾಶಿವರಾವ್
ಬೆಂಗಳೂರು ಮುನಿಸ್ವಾಮಪ್ಪ
ವೀಣೆ ಶೇಷಣ್ಣ
ಬೆಂಗಳೂರು ನಾಗರತ್ನಮ್ಮ
ಸ್ವರಮೂರ್ತಿ ವಿ.ಎನ್. ರಾವ್
ಚಂದ್ರಶೇಖರಯ್ಯ


ವಾಲಾಜಪೇಟೆ ಕೃಷ್ಣಸ್ವಾಮಿ ಭಾಗವತರು
ತಿರುವೊಟ್ಟಿಯೂರು ಎಸ್.ಎ. ರಾಮಸ್ವಾಮಿ ಅಯ್ಯರ್
ತ್ಯಾಗರಾಜರು
ಉಮಯಾಳ್ಪುರಂ ಸಹೋದರರು
ಗೋವಿಂದ ಶಿರ್ವ
ತಂಜಾವೂರು ರಾಮರಾವ್
ತಿಲ್ಲೈಸ್ಥಾನಂ ರಾಮಯ್ಯಂಗಾರ್
ಕನ್ನಯ್ಯ ಭಾಗವತರು
ಎಸ್.ಎ. ರಾಮಸ್ವಾಮಿ ಅಯ್ಯರ್
ವೆಂಗು ಭಾಗವತರು
ಸಾಮಿಭಾಗವತರು
ತಿಲ್ಲೈಸ್ಥಾನಂ ಪಂಜು ಭಾಗವತರು ಮತ್ತು ನರಸಿಂಹ ಭಾಗವತರು


ತ್ಯಾಗರಾಜರು
ಅಯ್ಯಾ ಭಾಗವತರು
ನೇಯ್ಯಾರಪಟ್ಟಿ ಸುಬ್ಬಯ್ಯರ್
ನೇಮಂ ಸುಬ್ಬ ಅಯ್ಯರ್
ನಂಗವರಂ ನೀಲಕಂಠ ಅಯ್ಯರ್
ನಂಗವರಂ ನೀಲಕಂಠ ಅಯ್ಯರ್
ಸುಬ್ಬರಾಮ ಭಾಗವತರು
ಪಲ್ಲವಿ ಶೇಷಯ್ಯರ್ (ಸುಬ್ಬಯ್ಯರ್‌ರ ಪುತ್ರ)
ಅಂದನೂರು ಸುಬ್ಬಯ್ಯರ್
ಮಣತ್ತಟ್ಟೈ ವೈದ್ಯನಾಥ ಅಯ್ಯರ್ (ದೊರೆಸ್ವಾಮಿ ಅಯ್ಯರವರ ತಂದೆ)
ಚಿಂತನಪಲ್ಲಿ ವೆಂಕಟರಾವ್
ಮಣತ್ತಟ್ಟೈ ದೊರೆಸ್ವಾಮಿ ಅಯ್ಯರ್


ತ್ಯಾಗರಾಜ
ಗಣೇಶಯ್ಯಗಾರು
ಸೋಜಿರಿ ಸೀತಾರಾಮಯ್ಯ
ಲಾಲ್ಗುಡಿ ರಾಮಯ್ಯರ್
ಚಿತ್ತೂರು ರಾಧಾಕೃಷ್ಣ ಅಯ್ಯರ್
ಸೇವುನಾ ವೆಂಕಟಾಚಲಪತಿ ಭಾಗವತರು
ಅಮೃತಲಿಂಗಂ ಪಿಳ್ಳೈ
ತ್ಯಾಗರಾಜ
ವಾಲಾಜಪೇಟೆ ಪೊಟ್ಟಜೋಸ್ಯರ್
ಕುಂಭಕೋಣಂ ಆರಾಪಮುದ ಅಯ್ಯಂಗಾರ್
ಇವರಿಬ್ಬರೂ ಮಂತ್ರ ಮತ್ತು ಜ್ಯೋತಿಷ್ಯಶಾಸ್ತ್ರದಲ್ಲಿ ಶಿಷ್ಯರು.

**ತಿರುವೊಟ್ರಿಯೂರು ತ್ಯಾಗಯ್ಯರ್** (೧೯ನೆ ಶ)—ತ್ಯಾಗಯ್ಯರ್‌ರವರು ಶ್ರೀತ್ಯಾಗರಾಜರ ಮುಖ್ಯಶಿಷ್ಯರಾಗಿದ್ದ ವೀಣಾ ಕುಪ್ಪಯ್ಯರ್‌ರವರ ಮಗ. ತಂದೆಯಂತೆಯೇ ಪ್ರತಿಭಾಶಾಲಿ ಮತ್ತು ವಾಗ್ಗೇಯಕಾರ ೧೦೮ ರಾಗಗಳಲ್ಲಿ ಕೃತಿಗಳನ್ನು ರಚಿಸಿ ಸಂಕೀರ್ತನ ರತ್ನಾವಳಿ ಎಂಬ ಗ್ರಂಥವನ್ನು ರಚಿಸಿದ್ದಾರೆ. ತಂದೆ ಕುಪ್ಪಯ್ಯರ್‌ರವರ ರಚನೆಗಳನ್ನು ಸೇರಿಸಿ ಪಲ್ಲವಿ ಸ್ವರಕಲ್ಪವಲ್ಲಿ ಎಂಬ ಗ್ರಂಥವನ್ನು ಪ್ರಕಟಿಸಿದರು. ಗೋಪಾಲದಾಸ ಎಂಬ ಅಂಕಿತದಲ್ಲಿ ಅನೇಕ ವರ್ಣಮತ್ತು ಕೃತಿಗಳನ್ನು ರಚಿಸಿದ್ದಾರೆ. ಇವು ಪ್ರಖ್ಯಾತವಾಗಿವೆ.

**ತಿರುವೊಟ್ರಿಯೂರು ಪಂಚರತ್ನಂ**—ಶ್ರೀತ್ಯಾಗರಾಜರು (೧೭೬೭–೧೮೪೭) ಮದ್ರಾಸಿನಲ್ಲಿದ್ದಾಗ ಅಲ್ಲಿಂದ ಆರು ಮೈಲಿ ದೂರದಲ್ಲಿರುವ ತಿರುವೊಟ್ರಿಯೂರಿಗೆ ಭೇಟಿ ಇತ್ತರು. ಇದು ಅವರ ಪ್ರಮುಖ ಶಿಷ್ಯ ವೀಣಾ ಕುಪ್ಪಯ್ಯರ್‌ರವರ ಊರು. ಆ ಊರಿನ ತ್ರಿಪುರ ಸುಂದರಿ ದೇವಿಯ ಸನ್ನಿಧಿಯನ್ನು ಸಂದರ್ಶಿಸಿದಾಗ ಆನಂದ ಪುಳಕಿತರಾಗಿ ಐದು ಕೃತಿಗಳನ್ನು ಹಾಡಿದರು. ಇವು :—

ಸುಂದರಿ ನೀ ದಿವ್ಯರೂಪಮು — ಕಲ್ಯಾಣಿ — ಆದಿ
ಸುಂದರಿ ನನ್ನಿಂದರಿಲೋ — ಬೇಗಡೆ — ರೂಪಕ
ದಾರಿನಿ ತೆಲುಸುಕೊಂಟಿ — ಶುದ್ಧಸಾವೇರಿ — ಆದಿ
ಸುಂದರಿ ನಿನು ವರ್ಣಿಂಪ — ಆರಭಿ — ಝಾಪು
ತನ್ನ ತಲ್ಲಿ — ಸಾವೇರಿ — ಆದಿ

ಇವುಗಳಲ್ಲಿ ಶುದ್ಧಸಾವೇರಿ ರಾಗದ ಕೃತಿಯು ದೊಡ್ಡದು. ಇದರ ಪಲ್ಲವಿಯಲ್ಲಿ ೧೬ ಸಂಗತಿಗಳೂ, ಅನುಪಲ್ಲವಿ ಮತ್ತು ಚರಣದಲ್ಲಿ ಎಂಟು ಎಂಟು ಸಂಗತಿಗಳಿವೆ. ಪ್ರತಿ ಚರಣದಲ್ಲಿ ಸುಂದರವಾದ ಮಧ್ಯಮ ಕಾಲ ಸಾಹಿತ್ಯವಿದೆ. ಕೆಲವು ಸಂಗತಿಗಳು ತಾನದ ಶೈಲಿಯಲ್ಲಿವೆ. ಮತ್ತು ಇವು ಪುರಾತನ ಕಾಲದ ಅಲಂಕಾರಗಳನ್ನು ಸ್ಮರಣೆಗೆ ತರುತ್ತವೆ. ಈ ಐದು ಕೃತಿಗಳ ಸಮುದಾಯಕ್ಕೆ ತಿರುವೊಟ್ರಿಯೂರು ಪಂಚರತ್ನವೆಂದು ಹೆಸರು.

**ತಿರುಪ್ಪಾವೈ**—ಗೋದಾದೇವಿ ಎಂಬ ಶ್ರೀ ಆಂಡಾಳ್ ಹಾಡಿರುವ ೩೦ ಇಂಪಾದ ಪದ್ಯಗಳ ಮಾಲೆಗೆ ತಿರುಪ್ಪಾವೈ ಎಂದು ಹೆಸರು. ತಿರು ಎಂದರೆ ದಿವ್ಯವಾದದ್ದು ಪ್ಪಾವೈ ಎಂದರೆ ಕನ್ಯೆ ಅಥವಾ ವ್ರತ ಎಂದರ್ಥ. ಪೆರಿಯಾಳ್ವಾರರ ಸಾಕುಮಗಳಾದ ದಿವ್ಯಕನ್ಯೆಯಾದ ಆಂಡಾಳ್ ನಡೆಸಿದ ದಿವ್ಯವಾದ ವ್ರತವನ್ನು ಕುರಿತದ್ದು 'ತಿರುಪ್ಪಾವೈ' ದಿವ್ಯ ಪ್ರಬಂಧ. ಈ ಪ್ರಬಂಧದ ಪ್ರತಿ ಪದ್ಯವೂ ಎಂಬಾವಾಯ್ (ಎಂದರೆ ಎಮ್ ಪಾವೈ ಆಯ್)-ನಮ್ಮ ವ್ರತ ಸಿದ್ಧಿಯಾಗುತ್ತದೆ ಎಂಬ ಭರವಸೆಯಿಂದ ಮುಗಿಯುತ್ತದೆ. ಸಕಲ ಉಪನಿಷತ್ ಸಾರ ಎಂದು ಈ ತಿರುಪ್ಪಾವೈ ಪ್ರಸಿದ್ಧವಾಗಿದೆ. ಈ ಪ್ರಬಂಧವು ತೊಲ್‌ಪಾವೈ ಅಥವಾ ಪುರಾತನ ವ್ರತ ಎಂದು ಕರೆಯಲ್ಪಟ್ಟಿದೆ. ಗೋದಾದೇವಿ ರಂಗನಾಥನನ್ನೇ ಮದುವೆಯಾಗ

ಬೇಕೆಂದು ನಿಶ್ಚಯಿಸಿ ಚಿಂತಿಸುತ್ತಿದ್ದಳು. ಆಗ ಹಿರಿಯರು ಹಿಂದೆ ಗೋಕುಲದ ಗೋಪಿಯರು ಕೃಷ್ಣನನ್ನು ಪಡೆಯುವುದಕ್ಕಾಗಿ ವ್ರತ ನಡೆಸಿ ಕೃತಾರ್ಥರಾದರು. ಆ ವ್ರತವನ್ನು ಮಾರ್ಗಶೀರ್ಷ ಮಾಸದಲ್ಲಿ ನಡೆಸುವಂತೆ ಹೇಳಿದರು ಅದರಂತೆ ಆಂಡಾಳ್ ಶ್ರೀವಿಲ್ಲಿ ಪುತ್ತೂರನ್ನು ನಂದಗೋಕುಲವೆಂದೂ, ತಮ್ಮ ಊರಿನ ಕನ್ಯೆಯರನ್ನು ಗೋಪಬಾಲಿಕೆಯರೆಂದೂ, ತಾನೂ ಒಬ್ಬ ಗೋಪಿಯೆಂದೂ, ಶ್ರೀರಂಗನಾಥನನ್ನೇ ಶ್ರೀಕೃಷ್ಣನೆಂದೂ ಭಾವಿಸಿಕೊಂಡಳು ತನ್ನ ಮನಸ್ಸಿನ ಶುಭವಾದ ಅಭಿಸಂಧಿಯನ್ನು ತಿರುಪ್ಪಾವೈ ಪದ್ಯಗಳ ಮೂಲಕ ಲೋಕಕ್ಕೆ ಶ್ರುತ ಪಡಿಸಿದಳು. ತನ್ನ ಪುರುಷಾರ್ಥವನ್ನು ತಾನು ಪಡೆದಳು ಈ ದೇವಿಯನ್ನು ನಂಬಿದವರು ತಾವೂ ಅದೇ ದಾರಿಯನ್ನು ಅವಲಂಬಿಸುತ್ತಾರೆ ಒಂದೊಂದು ದಿನಕ್ಕೆ ಒಂದೊಂದು ಪದ್ಯವನ್ನು ಅನುಕ್ರಮವಾಗಿ ಅನುಸಂಧಾನ ಮಾಡಿ, ತಿಂಗಳು ಮುಗಿದ ಕೂಡಲೇ (ಮಾರ್ಗಶೀರ್ಷಮಾಸ ಡಿಸೆಂಬರ್—ಜನವರಿ) ಶಾತ್ತು ಮುರೈ ಎಂಬ ಮಂಗಳವನ್ನು ಹೇಳುತ್ತಾರೆ. ಈ ಪದ್ಯಗಳನು ಸಂಗೀತಕ್ಕೆ ಅಳವಡಿಸಿ ಹಾಡಿದವರು ಅರಿಯಕುಡಿ ರಾಮಾನುಜ ಅಯ್ಯಂಗಾರ್. ಸಂಗೀತ ಕಚೇರಿಗಳಲ್ಲಿ ಒಂದು ಪದ್ಯವನ್ನು ಹಾಡುವುದು ಪದ್ಧತಿಯಾಗಿದೆ.

**ತಿರುಪ್ಪುಗಳ್**—ವಿಜಯನಗರದ ಪ್ರೌಢದೇವರಾಯನ (೧೪೨೨–೧೪೪೬) ಸಮಕಾಲಿನರಾಗಿದ್ದ ತಮಿಳು ಸಂತಕವಿ ಅರುಣಗಿರಿನಾಥರು ಸುಬ್ರಹ್ಮಣ್ಯನ ಭಕ್ತ ನಾಗಿದ್ದು, ಶೈವನಾಯನಾರರಂತೆ ಸುಬ್ರಹ್ಮಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಭಕ್ತಿಗೀತೆ ಗಳನ್ನು ಹಾಡಿದರು. ಇವುಗಳಿಗೆ ತಿರುಪ್ಪುಗಳ್ ಎಂದು ಹೆಸರು. ಅರುಣಗಿರಿ ನಾಥರು ಹಲವು ತಿರುಪ್ಪುಗಳ್‌ಗಳಲ್ಲಿ ಪ್ರೌಢದೇವರಾಯನ ಹೆಸರನ್ನು ಹೇಳಿದ್ದಾರೆ. ಈ ಭಕ್ತಿಗೀತೆಗಳು ೧೦೦೦ ಕ್ಕಿಂತ ಹೆಚ್ಚು ಇವೆ ಇವುಗಳನ್ನು 'ಛಂದವಿರುತ್ತಂ'ನಲ್ಲಿ ರಚಿಸಲಾಗಿದೆ. ತಿರುಮಳಿಶೈ ಆಳ್ವಾರರ 'ತಿರುಚ್ಚಂದ ವಿರುತ್ತಂ' ಎಂಬ ೧೨೦ ಪದ್ಯ ಗಳಿರುವ ರಚನೆಯು ಇದಕ್ಕೆ ಉತ್ತಮ ನಿದರ್ಶನ ತಿರುಪ್ಪುಗಳ್, ಗೀತೆಗಳು, ಕವಿತೆ, ಭಕ್ತಿ, ತತ್ವ, ತಾಳ ಇವುಗಳ ಸಂಗಮವಾಗಿವೆ. ನಮ್ಮ ಸಂಗೀತದಲ್ಲಿರುವ ಅನೇಕ ತಾಳಗಳಿಗೆ ಇವು ಲಕ್ಷ್ಯಗಳಾಗಿವೆ. ಈ ಹಾಡುಗಳಲ್ಲಿ ಕೆಲವು ೩೫ ತಾಳಪದ್ಧತಿ, ೧೦೮ ತಾಳ ಪದ್ಧತಿ, ೫೨ ತಾಳ ಪದ್ಧತಿ ಮತ್ತು ನವಸಂಧಿ ತಾಳಗಳಲ್ಲಿ ಬರುತ್ತವೆ. ಈ ಪದ್ಧತಿಗಳಲ್ಲಿಲ್ಲದ ಹಲವು ತಾಳಗಳಿರುವ ತಿರುಪ್ಪುಗಳ್‌ಗಳಿವೆ. ಅರುಣಗಿರಿನಾಥರೇ 'ಭೂತವೇತಾಳ ವಗುಪ್ಪು' ಎಂಬ ಹಾಡಿನಲ್ಲಿ ಕೆಲವು ತಾಳಗಳನ್ನೂ ಮತ್ತು ಕೆಲವು ರಾಗಗಳನ್ನೂ ಹೆಸರಿಸಿದ್ದಾರೆ. ಇದರಿಂದ ಆ ಕಾಲದಲ್ಲಿ ಪ್ರಚಲಿತವಾಗಿದ್ದ ರಾಗಗಳು ಮತ್ತು ಪಣ್‌ಗಳನ್ನು ತಿಳಿಯಬಹುದು. ಅವರು ಹೇಳಿರುವ ೧೫ ರಾಗಗಳು ಮತ್ತು ಪಣ್‌ಗಳು ಯಾವುವೆಂದರೆ: ೧. ವರಾಳಿ ೨. ಶಿಖಂಡಿಕೈ ೩. ಶಿಕಾಮರಂ (ನಾದನಾಮಕ್ರಿಯ) ೪. ವಿಪಂಚಿಕೈ ೫. ಗೌಡ್ ಅಥವಾ ಗೌಡಿ ೬. ಭೈರವಿ ೭. ಲಲಿತ ೮. ಕೈಶಿಕಂ ೯. ಗೌಳಿ ಅಥವಾ ಗೌಳ ೧೦. ಮಲಹರಿ

೧೧. ಭೌಳಿ ೧೨. ವರಾಡಿ ೧೩. ಪಟ ಮಂಜರಿ (ಫಲಮಂಜರಿ) ೧೪ ಧನಾಸಿ (ಧನ್ಯಾಸಿ) ೧೫. ಪಂಚಮಿ (ಅಹಿರಿ) ೧೬. ದೇಶಿ ೧೭. ರಂಜಿ (ಕುರಿಂಜಿ) ಇವುಗಳಲ್ಲದೆ 'ಇಂದೋಲಂ', ಗೌಡಿ ಮತ್ತು ಶ್ರೀರಾಗವನ್ನು ಹೆಸರಿಸಿದೆ ಯಾಳ್, ಕೊಳಲು, ಕೊಂಬು, ಉಡುಕ್ಕೈಲ್, ತವಿಲ್, ಡೋಲ್, ಭೇರಿಗೈ, ವೇಣ್‌ಕೊಂಬು ಮುಂತಾದ ವಾದ್ಯಗಳನ್ನು ಹೆಸರಿಸಲಾಗಿದೆ

ತಿರುಪ್ಪುಗಳ್ ಹಾಡುಗಳು ತಾಳಬದ್ಧವಾಗಿರುವುದಲ್ಲದೆ ಅನುಪ್ರಾಸಾದಿ ಶಬ್ದಾಲಂಕಾರಗಳಿಂದ ಕೂಡಿವೆ. ಇವುಗಳಲ್ಲಿ ಅನ್ಯದೈವಗಳ ಸ್ತುತಿಗಳಿವೆ. ಸಂಗೀತ ಕಚೇರಿಗಳಲ್ಲಿ ಒಂದೆರಡು ತಿರುಪ್ಪುಗಳ್‌ಗಳನ್ನು ಹಾಡುವುದು ರೂಢಿಯಲ್ಲಿದೆ. ತಮಿಳು ನಾಡು ಮತ್ತು ದೆಹಲಿಯಲ್ಲಿ ತಿರುಪ್ಪುಗಳ್ ಭಜನ ಮಂಡಲಿಗಳಿವೆ.

**ತಿರುಚ್ಚೂರು ವಿ. ರಾಮಚಂದ್ರನ್** (೧೯೪೦) — ರಾಮಚಂದ್ರನ್ ಕೊಚ್ಚಿ ಸಂಸ್ಥಾನದ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿ ನಿವೃತ್ತರಾಗಿದ್ದ ವಿ. ಬಿ. ವೈದ್ಯನಾಥ ಅಯ್ಯರ್‌ರವರ ಪುತ್ರನಾಗಿ ೧೯೪೦ರಲ್ಲಿ ಕೇರಳದ ತಿರುಚೂರಿನಲ್ಲಿ ಜನಿಸಿದರು ನಾಲ್ಕನೆಯ ವಯಸ್ಸಿನಲ್ಲಿ ಸ್ವಲ್ಪ ಹಾಡಲು ತೊಡಗಿ ಪ್ರಾರಂಭದಲ್ಲಿ ವರ್ಕಳ ಸುಬ್ರಹ್ಮಣ್ಯ ಭಾಗವತರಲ್ಲೂ, ನಂತರ ತಿರುಪುನಿತ್ತುರೈ ಆರ್. ಕೃಷ್ಣಯ್ಯರ್ ರವರಲ್ಲೂ ಸಂಗೀತ ಶಿಕ್ಷಣ ಪಡೆದು ತರುವಾಯ ೧೯೬೧ರಲ್ಲಿ ಮದ್ರಾಸಿಗೆ ಹೋಗಿ ಜಿ ಎನ್. ಬಿ. ರವರ ಶಿಷ್ಯರಾಗಿ ನಾಲ್ಕೂವರೆ ವರ್ಷಗಳ ಕಾಲ ಉನ್ನತ ಶಿಕ್ಷಣ ಪಡೆದು ಅವರ ಸಂಗಡ ಭಾರತಾದ್ಯಂತ ಪ್ರವಾಸ ಮಾಡಿ ಹಾಡಿದರು ೧೯೬೫ರಲ್ಲಿ ಕೇಂದ್ರ ಸರ್ಕಾರದ ವಿದ್ಯಾರ್ಥಿವೇತನವನ್ನು ಪಡೆದರು. ೧೯೬೩ ಲ್ಲಿ ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ ಸಂಗೀತೋತ್ಸವದಲ್ಲಿ ಅತ್ಯುತ್ತಮ ಜ್ಯೂನಿಯರ್ ಸಂಗೀತ ಗಾರರೆಂದು, ೧೯೭೭ರಲ್ಲಿ ಅದೇ ಅಕಾಡೆಮಿ ಉತ್ಸವದಲ್ಲಿ ಬಹುಮಾನಗಳನ್ನು ಪಡೆದರು. ಇವರ ಗಾಯನವು ಜಿ. ಎನ್. ಬಿ. ರವರ ಹಾಡುಗಾರಿಕೆಯಂತಿದೆ. ರಾಗಾಲಾಪನೆಯಲ್ಲಿ ಗುರುವಿನಂತೆ ಬಿರ್ಕಾಗಳು, ಕೃತಿಗಳ ಹಾಡಿಕೆಯಲ್ಲಿ ಅದೇ ಓಟ, ಲಯದ ಮೇಲಿನ ಹತೋಟಿ, ಉತ್ತಮವಾದ ತುಂಬಿದ ಶಾರೀರ ಇವೆಲ್ಲವೂ ಇವೆ. ಇವರು ಬಿ ಎಸ್‌ಸಿ ಪದವೀಧರರು. ನಾರಾಯಣೀಯಂ–ಎಂಬ ರಚನೆಯನ್ನು ಹತ್ತು ಎಲ್. ಪಿ ರೆಕಾರ್ಡುಗಳಲ್ಲಿ ಹಾಡಿದ್ದಾರೆ. ಎಂ. ಎಲ್. ವಸಂತ ಕುಮಾರಿಯವರ ಶಿಷ್ಯೆ ಚಾರುಮತಿಯವರನ್ನು ವಿವಾಹವಾಗಿದ್ದಾರೆ ಇವರಿಬ್ಬರೂ ಹೆಸರಾಂತ ಗಾಯಕರು.

**ತಿರುವಾಂಕೂರು** — ಬಹಳ ಹಿಂದಿನಿಂದಲೂ ತಿರುವಾಂಕೂರು ದಕ್ಷಿಣ ಭಾರತದ ಒಂದು ಪ್ರಮುಖ ಸಂಗೀತ ಕಲಾಕೇಂದ್ರವಾಗಿದ್ದು ಅಲ್ಲಿಯ ಜನತೆಯ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಮೇಲೆ ಪ್ರಭಾವಬೀರಿತ್ತು. ಅಲ್ಲಿಯ ರಾಜರು ಇದಕ್ಕೆ ಬಹುವಾಗಿ ಉತ್ತೇಜನವಿತ್ತರು. ಪ್ರಾರಂಭದಲ್ಲಿ ತಿರುವಾಂಕೂರು ಚೇರರಾಜ್ಯದ ಒಂದು ಭಾಗವಾಗಿತ್ತು. ಅದರ ಕೆಲವು ಭಾಗಗಳು ಚೋಳ ಮತ್ತು

ಪಾಂಡ್ಯರ ಪ್ರಭಾವಕ್ಕೆ ಒಳಗಾದುವು. ಪುರಾತನ ತಮಿಳು ಗ್ರಂಥಗಳಲ್ಲಿ ಉಕ್ತವಾಗಿರುವ ಮತ್ತು ಈಗ ಚಾಲತಿಯಲ್ಲಿಲ್ಲದಿರುವ ಇಂದೋಳಂ, ಪಾಡಿ, ಕಾನಕ್ಕುರಂಜಿ ಮುಂತಾದ ರಾಗಗಳು ಇಲ್ಲಿ ಪ್ರಚಲಿತವಾಗಿದ್ದುವು. ತಿರುವಾಂಕೂರಿನ ಸಂಗೀತದಲ್ಲಿ ಕಂಡು ಬರುವ ಮುಖ್ಯ ಲಕ್ಷಣವೆಂದರೆ ಅದರ ವೈವಿಧ್ಯತೆ.

೧. **ಜನಪದ ಗೀತೆಗಳು**—ಇವುಗಳಲ್ಲಿ ಕೆಲವು ಪುರಾತನವಾದುವು ತೋಟ್ಟಂ ಪಾಟ್ಟು, ಪುಳ್ಳೊಂಪ್ಪಾಟ್ಟು, ಪಾನಪ್ಪಾಟ್ಟು, ವಳ್ಳೋಂಪ್ಪಾಟ್ಟು, ವೇಲ‌ಪಾಟ್, ಸರ್ಪಪ್ಪಾಟ್ಟು, ಭದ್ರಕಾಳಿಪಾಟ್ಟು, ವಂಚಿಪ್ಪಾಟ್, ತಿರುವಾಧಿರಂಪಾಟ್ಟು, ಷಾಷ್ಟಾಂಪಾಟ್ಟು. ಈ ಹಾಡುಗಳಲ್ಲಿ ತಾಳವು ಮುಖ್ಯ. ಇವುಗಳನ್ನು ಹಾಡುತ್ತಾ ತಾಳ ಬದ್ಧವಾಗಿ ಹೆಜ್ಜೆ ಹಾಕುತ್ತಾ ನೃತ್ಯ ಮಾಡುತ್ತಿದ್ದರು.

೨ **ಪಶುಪಾಲಕರ ಹಾಡುಗಳು**—ಇವು ಬಹುನಯವಾದುವು ಮತ್ತು ಇಂಪಾದುವು.

೩. **ಭಕ್ತಿಗೀತೆಗಳು**—ಭಕ್ತಿಗೀತೆಗಳನ್ನು ಕಾಪಾಡಿ ಬೆಳೆಸಿದ ಕೇಂದ್ರಗಳು ದೇವಾಲಯಗಳು ಶ್ರೀ ವೈಷ್ಣವರಿಗೆ ಪವಿತ್ರವಾದ ದೇವಾಲಯಗಳಲ್ಲಿ ಹನ್ನೊಂದು ದೇವಾಲಯಗಳು ತಿರುವಾಂಕೂರಿನ ತೃಪ್ಪಧಿಸಾರಂ, ತಿರುವತ್ತಾರ್. ತ್ರಿವೇಂದ್ರಂ, ಚೆಂಗನೂರು, ಆರನ್ಮುಲ, ತಿರುಪ್ಪುಲಿಯೂರು, ತಿರುವಣ್ ವಣ್ಣೂರು, ತಿರುವಳ್ಳ, ತೃಕ್ಕಟಿಥಾನಂ, ತೃಕ್ಕಾಕ್ಕರಾ, ತಿರುಮೂಳಿಕ್ಕುರಂ ಎಂಬಲ್ಲಿವೆ. ಶೈವನಾಯನ್ಮಾರರಾದ ತಿರುಜ್ಞಾನ ಸಂಬಂಧರ್, ಅಪ್ಪರ್, ಸುಂದರಮೂರ್ತಿ ಇವರು ರಚಿಸಿದ ಭಕ್ತಿಗೀತೆಗಳಾದ ತೇವಾರಂ, ತಿರುವಾಚಕಂ ಮತ್ತು ಶ್ರೀವೈಷ್ಣವ ಆಳ್ವಾರರ ನಾಲಾಯಿರ ಪ್ರಬಂಧಗಳು ಪುರಾತನ ಭಕ್ತಿಗೀತೆಗಳು. ಇವುಗಳಲ್ಲಿ ಭಕ್ತಿರಸ, ತಾಳಬದ್ಧತೆ, ಉಚಿತವಾದ ಸಾಹಿತ್ಯ, ನಯ ಮತ್ತು ಲಾವಣ್ಯಗಳು ಪ್ರಮುಖ. ಇವುಗಳನ್ನು ಸ್ವರಗಳ ಏರು ಮತ್ತು ಇಳಿತಗಳನ್ನು ಅನುಸರಿಸಿ ವಿಳಂಬದಲ್ಲಿ ಹಾಡುತ್ತಿದ್ದುದರಿಂದ ಸೋಪಾನ ಶೈಲಿಯ ಗಾನ ಬೆಳೆಯಿತು. ಪುರಾತನ ಕಾಲದ ತಿರುವಾಂಕೂರಿನ ಸಂಗೀತದ ಬಗ್ಗೆ ಶಿಲಪ್ಪದಿಕಾರಂ ಎಂಬ ಗ್ರಂಥದ ಮೂರನೆಯ ಅಧ್ಯಾಯನಲ್ಲಿ ಸಂಪೂರ್ಣ ಚಿತ್ರವಿದೆ ಈ ರಾಜ್ಯದಲ್ಲಿ ಸಂಗೀತಕ್ಕೆ ಇಶೈ ಎಂಬ ಹೆಸರಿತ್ತು. ಇಲ್ಲಿಯು ಪುರಾತನ ಸಂಗೀತದಲ್ಲಿ ಎರಡು ವಿಭಾಗಗಳಿದ್ದುವು. ಪಣ್ ಎಂಬುದು ೭ ಸ್ವರಗಳುಳ್ಳ ಸಂಪೂರ್ಣರಾಗ ಅಥವಾ ಮೇಳಕರ್ತರಾಗ. ಇದರ ಸ್ವರಗಳಿಗೆ ಕುರಳ್, ತುಟ್ಟಂ, ಕೈಕಿಳ್ಳೈ, ಉಳ್ಳೈ, ಇಳಿ, ವಿಳರಿ, ತಾರಂ ಎಂಬ ಹೆಸರಿತ್ತು ಪಣ್‌ಗೆ ಜನಕರಾಗವೆಂದೂ ಹೆಸರು. ಯಾಪ್ಪಿಲಕ್ಕಣಂ ಎಂಬ ಒಂದು ಪುರಾತನ ತಮಿಳು ಗ್ರಂಥವು ೧೧೬೧೧ ರಾಗಗಳನ್ನು ಕುರಿತು ವಿವರಿಸುತ್ತದೆ. ಇವು ಪಣ್ ಮತ್ತು ತಿರಾನ್‌ಗಳ ಸಮ್ಮಿಳನದಿಂದ ಉಂಟಾದುವು. ಪಣ್‌ಗಳಲ್ಲಿ ಐದು ಮುಖ್ಯವಾದುವು. ಅವು—ಕುರಿಂಚಿ, ಪಾಲೈ, ಮುಲ್ಲೈ, ಮಾರುತಂ ಮತ್ತು ನೈತಳ್ ಇದು ತಿರುವಾಂಕೂರಿನ ಪುರಾತನ ಸಂಗೀತವಾಗಿತ್ತು.

ಗೀತಗೋವಿಂದದ ಪ್ರಭಾವದಿಂದ ೧೪ ಮತ್ತು ೧೫ನೆ ಶತಮಾನಗಳಲ್ಲಿ ಇಲ್ಲಿಯ ಸಂಗೀತದಲ್ಲಿ ಮಹತ್ತರವಾದ ಬದಲಾವಣೆಯುಂಟಾಯಿತು. ಇದರ ಸಾಹಿತ್ಯ ಮತ್ತು ಶಬ್ದ ಲಾವಣ್ಯವು ಇಲ್ಲಿಯ ಸಂಗೀತಕ್ಕೆ ಮಾದರಿಯಾಯಿತು. ಪದಗಳು ರೂಢಿಗೆ ಬಂದವು. ಕಥಕಳಿಯ ಜನಕನೆನಿಸಿಕೊಂಡ ಕೊಟ್ಟಾರಕ್ಕರದ ರಾಜಾ ವೀರಕೇರಳ ವರ್ಮನು (೧೭ನೆ ಶ) ಈ ಬಗೆಯ ರಚನೆಯ ಆದ್ಯ ಕರ್ತನು. ಇವನು ಗೀತ ಗೋವಿಂದವನ್ನು ಮಾದರಿಯಾಗಿಟ್ಟುಕೊಂಡು ಪದಗಳನ್ನು ರಚಿಸಿದನು. ಕಥಕಳಿಯ ಹಾಡುಗಳನ್ನು ಬಹುವಾಗಿ ರಚಿಸಿದವನು ಕಾರ್ತಿಕ ತಿರುನಾಳ್ ಮಹಾರಾಜ (೧೭೫೮–೧೭೯೮). ಇವನು ಪ್ರತಿಭಾಶಾಲಿಯಾದ ಶಾಸ್ತ್ರಜ್ಞ ಮತ್ತು ಲಲಿತ ಕಲೆಗಳ ವಿದ್ವಾಂಸನಾಗಿದ್ದನು. ಸ್ವಲ್ಪ ಮಟ್ಟಿಗೆ ಪ್ರಾಸವಿರುವ ಸರಳವಾದ ರಚನೆ ಗಳಿಗೆ ಇವನ ಕೃತಿಗಳು ಮಾದರಿಯಾದುವು. ಇವನು ರಾಜಸೂಯಂ, ಸುಭದ್ರಾ ಹರಣಂ, ಬಕವಧಂ, ಗಂಧರ್ವವಿಜಯಂ, ಪಾಂಚಾಲೀ ಸ್ವಯಂವರಂ, ಕಲ್ಯಾಣ ಸೌಗಂಧಿಕಂ ಮುಂತಾದುವುಗಳನ್ನು ರಚಿಸಿದನು.

ಇವನ ಸೋದರಳಿಯ ಅಶ್ವಥಿತಿರುನಾಳ್ ಆಗಿನ ಕಾಲದ ಅತ್ಯಂತ ಪ್ರಮುಖ ವಾಗ್ಗೇಯಕಾರನಾಗಿದ್ದನು. ಕೃತಿ ರಚನೆಯಲ್ಲಿ ಇವನು ಅತ್ಯಂತ ಪ್ರತಿಭಾಶಾಲಿ ಯಾಗಿದ್ದನು. ಅಂಬರೀಷ ಚರಿತ್ರಂ, ಪೂತನಾ ಮೋಕ್ಷಂ, ರುಕ್ಮಿಣೀ ಸ್ವಯಂವರಂ, ಪೌಂಡ್ರಕವಧಂ, ರುಕ್ಮಿಣೀ ಪರಿಣಯ ನಾಟಕಂ, ಶ್ರೀ ಪಂಚೇಶನ್ತ ಪ್ರಬಂಧ ಎಂಬುವು ಇವನ ಪ್ರಮುಖ ಕೃತಿಗಳು. ಕಾರ್ತಿಕ ತಿರುನಾಳ್ ರಾಜನ ಆಸ್ಥಾನದಲ್ಲಿದ್ದ ಉಣ್ಣಾಯಿ ವಾರಿಯರ್ (೧೭೩೫–೧೭೮೫) ಎಂಬುವನು ಮತ್ತೊಬ್ಬ ಪ್ರಸಿದ್ಧ ವಾಗ್ಗೇಯಕಾರ. ಇವನು ನಳಚರಿತಂ ಎಂಬುದನ್ನು ರಚಿಸಿದ್ದಾನೆ. ಇವನ ರಚನೆಗಳು ಕೇರಳದ ಪ್ರತಿಯೊಂದು ಮನೆಯಲ್ಲಿ ಈಗಲೂ ಜನಪ್ರಿಯವಾಗಿವೆ. ವಿಳಂಬ ನಡೆ, ರಾಗವೈವಿಧ್ಯತೆ, ಜನಪದರಾಗಗಳ ಪ್ರಭಾವ, ಸಾಹಿತ್ಯ ರಚನೆಯಲ್ಲಿ ಸ್ವತಂತ್ರ ಮನೋಭಾವನೆ ಮುಂತಾದುವು ಈ ರಚನೆಗಳಲ್ಲಿ ಕಂಡು ಬರುತ್ತವೆ. ಇವನ ಪ್ರಭಾವದಿಂದ ಉಂಟಾದ ಸಂಗೀತಾಭಿರುಚಿಯು ಅರ್ಧಶತಮಾನಕ್ಕಿಂತ ಹೆಚ್ಚು ಕಾಲ ಮುಂದುವರಿಯಿತು.

ಸ್ವಾತಿ ತಿರುನಾಳ್ ರಾಮವರ್ಮ ಮಹಾರಾಜರ ಕಾಲವನ್ನು ತಿರುವಾಂಕೂರಿನ ಸಂಗೀತದ ಸುವರ್ಣಯುಗವೆನ್ನಬಹುದು. ಇವರು ತ್ಯಾಗರಾಜರ ಸಮಕಾಲೀನರು. ಈ ದೊರೆಯ ಆಸ್ಥಾನದಲ್ಲಿ ಪಾಲ್‌ಘಾಟ್ ಮತ್ತು ತಂಜಾವೂರಿನ ಅನೇಕ ಪ್ರತಿಭಾ ವಂತರಾದ ಸಂಗೀತ ವಿದ್ವಾಂಸರಿದ್ದರು. ಅವರಲ್ಲಿ ಒಬ್ಬ ಪ್ರಸಿದ್ಧನಾದ ಕಲಾವಿದ ಇರಯಿಮನ್ ಥಂಪಿ (೧೭೮೩–೧೮೫೮). ದಕ್ಷಯಾಗಂ, ಕೀಚಕವಧಂ ಉತ್ತರಾ ಸ್ವಯಂವರಂ, ಸುಭದ್ರಾಹರಣಂ, ರಾಸಕ್ರೀಡಪಾಟ್, ನವರಾತ್ರಿ ಪ್ರಬಂಧಂ, ಮುರಜಪಪಾನ ಎಂಬುವು ಇವನ ಕೃತಿಗಳು. ಇವುಗಳಲ್ಲಿ ಪದಲಾಲಿತ್ಯ, ವೈವಿಧ್ಯತೆ,

ಇಂಪಾದ ಸಂಗೀತ, ಕಳಂಕವಿಲ್ಲದ ರಚನಾಕೌಶಲ್ಯ ಇವು ಪ್ರಮುಖವಾಗಿ ಕಂಡು ಬರುತ್ತವೆ.

ಸ್ವಾತಿ ತಿರುನಾಳರು (೧೮೧೩–೧೮೪೭) ಎಲ್ಲ ವಿಧವಾದ ರಚನೆಯ ಸಮಸ್ಯೆಯನ್ನು ತೆಗೆದುಕೊಂಡು ಪ್ರತಿಯೊಂದು ಬಗೆಯಲ್ಲಿ ಕೃತಿಗಳನ್ನು ರಚಿಸಿದರು. ಸೋಪಾನಗಾನ ಶೈಲಿಯನ್ನು ಮಾರ್ಪಡಿಸಿ ನೂತನ ಯುಗವನ್ನು ಆರಂಭಿಸಿದರು. ಸ್ವರಜತಿ, ವರ್ಣ, ಕೀರ್ತನ, ಪದ, ತಿಲ್ಲಾಣ, ದ್ರುಪದ್, ಥಪ್ಪ ಮುಂತಾದುವೆಲ್ಲವನ್ನೂ ರಚಿಸಿದ್ದಾರೆ. ಇವರ ಮುಖ್ಯ ರಚನೆಗಳು—(೧) ನವರಾತ್ರಿ ಕೀರ್ತನಂ, ನವರಾತ್ರಿಮಾಲಾ. (ಇವು ನವರಾತ್ರಿಯ ಒಂಭತ್ತು ದಿನಗಳೂ ಹಾಡುವ ಭಕ್ತಿ ಕೀರ್ತನೆಗಳು)

(೨) ಗಾನ ಕೃತಿಗಳು—ಇವು ೮ ಘನರಾಗಗಳಲ್ಲಿವೆ.

(೩) ಮಧ್ಯಮ ಕಾಲದ ಕೃತಿಗಳು.

(೪) ರಾಗಮಾಲಿಕೆಗಳು.

(೫) ವರ್ಣಗಳು—ಸರಸಿಜನಾಭ, ಚಲಮೇಲ ಎಂಬುವು ಅತ್ಯಂತ ಪ್ರಸಿದ್ಧವಾಗಿವೆ.

(೬) ಪದಗಳು—ಇವು ಅಭಿನಯಕ್ಕೆ ಯೋಗ್ಯವಾದುವು.

(೭) ತಿಲ್ಲಾಣಗಳು.

(೮) ದ್ರುಪದ್

(೯) ಥಪ್ಪ

(೧೦) ಪ್ರಬಂಧಗಳು—ಅಜಾಮಿಳ ಮೋಕ್ಷ, ಕುಚೇಲೋಪಾಖ್ಯಾನಂ—ಇವು ಸಂಸ್ಕೃತ, ತಮಿಳು, ತೆಲುಗು, ಮಲಯಾಳಿ, ಹಿಂದೀ ಮತ್ತು ಮರಾಠಿ ಭಾಷೆಯಲ್ಲಿವೆ.

ಸ್ವಾತಿ ತಿರುನಾಳರ ಆಸ್ಥಾನದಲ್ಲಿ ವಡಿವೇಲು, ಶಿವಾನಂದಂ, ಚಿನ್ನಯ್ಯ ಮತ್ತು ಪೊನ್ನಯ್ಯ ಎಂಬ ನಾಲ್ಕು ಸಹೋದರರು ಪ್ರಸಿದ್ಧ ವಿದ್ವಾಂಸರಾಗಿದ್ದರು. ಪೊನ್ನಯ್ಯನವರು ಸ್ವರಜತಿ, ಪದಗಳು ಮತ್ತು ವರ್ಣಗಳನ್ನು ರಚಿಸಿದರು. ಇದೇ ಕಾಲದಲ್ಲಿದ್ದ ಗೋವಿಂದ ಮಾರಾರ್, ಮಾಲಿಯಕ್ಕಲ್ ಕೃಷ್ಣಮಾರಾರ್ ಮುಂತಾದವರು ರಾಜರ ಉದಾರ ಪೋಷಣೆಯಲ್ಲಿದ್ದರು. ಸ್ವಾತಿ ತಿರುನಾಳರ ನಂತರ ಆಳಿದ ಉತ್ತರಂ ತಿರುನಾಳ್ ಮಾರ್ತಾಂಡವರ್ಮ (೧೮೪೭–೧೮೬೦), ಆಯಿಲಂ ತಿರುನಾಳ್ ರಾಮವರ್ಮ (೧೮೬೦–೧೮೮೦) ಸಂಗೀತ ಪ್ರಿಯರಾಗಿದ್ದರು. ಪರಮೇಶ್ವರ ಭಾಗವತರು ಮತ್ತು ರಾಘವ ಅಯ್ಯರ್, ವೀಣಾ ಕಲ್ಯಾಣ ಕೃಷ್ಣಯ್ಯರ್, ಪಿಟೀಲು ಮಹದೇವ ಭಾಗವತರು, ಸೋಮುಸಿ ಭಾಗವತರು ಮತ್ತು ಸೇತುರಾಮರಾವ್ ಇವರ ಆಸ್ಥಾನ ವಿದ್ವಾಂಸರಾಗಿದ್ದರು. ಇವರ ಕಾಲದಲ್ಲಿ ಮಹಾವೈದ್ಯನಾಥ ಅಯ್ಯರ್ ಮತ್ತು ರಾಘವ ಅಯ್ಯರ್‌ರವರಿಗೆ ಸಂಗೀತ ಸ್ಪರ್ಧೆ ನಡೆಯಿತು. ಸ್ವಾತಿ ತಿರುನಾಳರ ಕೃತಿಗಳು ಇಂದು ಭಾರತಾದ್ಯಂತ ಪ್ರಚಾರದಲ್ಲಿವೆ. ೧೯ ಮತ್ತು ೨೦ನೆ

ಶತಮಾನದಲ್ಲಿ ತಿರುವಾಂಕೂರಿನ ಆಸ್ಥಾನದ ಗೌರವವನ್ನು ಪಡೆದಿದ್ದ ಕೆಲವು ಪ್ರಸಿದ್ಧ ವಿದ್ವಾಂಸರು ಶಿವರಾಮ ಗುರುದಾಸ (ಕ್ಷೀರಾಬ್ಧಿಶಾಸ್ತ್ರಿ), ಪರಮೇಶ್ವರ ಭಾಗವತರು, ಮೇರುಸ್ವಾಮಿ, ಕೊಯಮತ್ತೂರು ರಾಘವ ಅಯ್ಯರ್, ಕುಂಜರಿರಾಜ, ರಘುಪತಿ ಭಾಗವತರು, ಲಕ್ಷ್ಮಣ ಗೋಸಾಯಿ, ಕಲ್ಯಾಣ ಕೃಷ್ಣಯ್ಯರ್, ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್, ಆಲತ್ತೂರು ಸಹೋದರರು.

**ತಿರುವಾಸನಲ್ಲೂರು ನಾರಾಯಣಸ್ವಾಮಿ ಅಯ್ಯರ್**—ಇವರು ತಲ ನಾಯರ್‌ನ ಪಲ್ಲವಿ ಸೋಮು ಭಾಗವತರ ಶಿಷ್ಯರು. ೧೯ನೆ ಶತಮಾನದ ಪ್ರಖ್ಯಾತ ಸಂಗೀತ ವಿದ್ವಾಂಸರು.

**ತಿರುವೈಯ್ಯಾರ್**—ತಿರುವೈಯ್ಯಾರ್ ಎಂದರೆ ಐದು ನದಿಗಳೆಂದು ಅರ್ಥ. ವೆನ್ನಾರ್, ವೆಟ್ಟಾರ್, ಕುಡಮುರುಟ್ಟಿ, ಕಾವೇರಿ ಮತ್ತು ಕೋಲರೂನ್ ನದಿಗಳು ಒಂದಕ್ಕೊಂದು ಸಮಾನಾಂತರವಾಗಿ ೬ ಮೈಲಿ ದೂರದ ಪ್ರದೇಶದಲ್ಲಿ ತಮಿಳುನಾಡಿನ ತಂಜಾವೂರು ಜಿಲ್ಲೆಯ ಈ ಸ್ಥಳದಲ್ಲಿ ಹರಿಯುತ್ತವೆ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಸಪ್ತಸ್ಥಾನ ಉತ್ಸವ ಮತ್ತು ಜನವರಿ ತಿಂಗಳಲ್ಲಿ ನಡೆಯುವ ತ್ಯಾಗರಾಜ ಉತ್ಸವಗಳಿಗೆ ತಿರುವೈಯ್ಯಾರ್ ಪ್ರಸಿದ್ಧವಾಗಿದೆ. ಪ್ರತಿ ವರ್ಷವೂ ಈ ಊರಿಗೆ ಸುಮಾರು ೫೦ ೦೦೦ ಮಂದಿ ಯಾತ್ರಿಕರು ಬರುತ್ತಾರೆ.

ಶ್ರೀತ್ಯಾಗರಾಜರು ಸಿದ್ಧಿಯನ್ನು ಪಡೆದ ನಂತರ ಅವರ ದೇಹವನ್ನು ಸಕಲ ವಿಧವಾದ ಧಾರ್ಮಿಕ ಮತ್ತು ಸಂಗೀತ ಗೌರವ ಸಹಿತ ಘಟ್ಟಕ್ಕೆ ತೆಗೆದುಕೊಂಡು ಹೋಗಿ ಮಹಾಭಿಷೇಕವೇ ಮುಂತಾದ ವಿಧಿಗಳನ್ನು ಕಟ್ಟುನಿಟ್ಟಿನಿಂದ ಅನುಸರಿಸಿ ಸಮಾಧಿ ಮಾಡಿದರು. ಆ ಸ್ಥಳದಲ್ಲಿ ಒಂದು ಬೃಂದಾವನವನ್ನು ಕಟ್ಟಿದರು. ತಮ್ಮ ಮರಣಾನಂತರ ೬೦ ವರ್ಷಗಳಾದ ಮೇಲೆ ತಮ್ಮ ಹೆಸರು ಎಲ್ಲೆಲ್ಲೂ ಹರಡುವುದೆಂದು ಜೀವಿತರಾಗಿದ್ದಾಗಲೇ ತ್ಯಾಗರಾಜರು ಹೇಳುತ್ತಿದ್ದರು. ಸಿದ್ಧಿ ಪಡೆದ ಕಾಲದಿಂದ ಪ್ರತಿವರ್ಷವೂ ಅವರ ಉಮಯಾಳ್ಪುರಂ ಶಿಷ್ಯರು ಮತ್ತು ಇತರರು ಪುಷ್ಯ ಬಹುಳ ಪಂಚಮಿಯ ದಿನ ಅವರ ಸಮಾಧಿಯನ್ನು ಪೂಜಿಸಿ ನಂತರ ಮನೆಗೆ ಬಂದು ಆರಾಧನೆಯನ್ನು ನಡೆಸುತ್ತಿದ್ದರು. ೧೯೦೭ರ ನಂತರ ಆರಾಧನೋತ್ಸವದ ನೂತನ ಅಧ್ಯಾಯ ಆರಂಭವಾಯಿತು. ತಿಲ್ಲೈಸ್ಥಾನಂ ನರಸಿಂಹ ಭಾಗವತರು ಮತ್ತು ಪಂಜು ಭಾಗವತರು ಪ್ರಸಿದ್ಧ ಪಿಟೀಲು ವಿದ್ವಾಂಸ ತಿರುಚಿ ಗೋವಿಂದಸ್ವಾಮಿ ಪಿಳ್ಳೆಯವರೊಡನೆ ಸೇರಿಕೊಂಡು ಉತ್ಸವವನ್ನು ವಿಜೃಂಭಣೆಯಿಂದ ನಡೆಸಲು ಮೊದಲು ಮಾಡಿದರು. ಬೆಂಗಳೂರು ನಾಗರತ್ನಮ್ಮನವರು ತಮ್ಮ ಸರ್ವಸ್ವವನ್ನೂ ವಿನಿಯೋಗಿಸಿ ತ್ಯಾಗರಾಜರ ಸಮಾಧಿಯ ಮೇಲೆ ದೇವಾಲಯವನ್ನು ನಿರ್ಮಿಸಿ ಅಮರ ಕೀರ್ತಿಯನ್ನು ಗಳಿಸಿದರು. ಈ ದೇವಾಲಯವು ೧೯೨೫ರಲ್ಲಿ ನಿರ್ಮಾಣವಾಯಿತು. ಅಲ್ಲಿಂದ ಮುಂದೆ ಇದು ಅಭಿವೃದ್ಧಿಯಾಗುತ್ತ ಬಂದಿದೆ.

ಈ ದೇವಾಲಯವನ್ನು ಕಟ್ಟುವ ಕೆಲಸದ ಮೇಲ್ವಿಚಾರಣೆಯು ತಿರುವೊಟ್ರಿಯೂರು ಎಸ್. ಎ. ರಾಮಸ್ವಾಮಿ ಅಯ್ಯರ ಪಾಲಿಗೆ ಬಂದಿತು. ಸಮಾಧಿಯ ಸುತ್ತಲೂ ಕಟ್ಟಡದ ಅಡಿಪಾಯ ಹಾಕಲು ತೋಡುತ್ತಿದ್ದಾಗ ಒಂದು ಕುತೂಹಲಕರವಾದ ಘಟನೆ ನಡೆಯಿತು. ಸಮಾಧಿಯ ಸುತ್ತಲೂ ಎಷ್ಟು ದೂರದವರೆಗೆ ತೋಡಬಹುದೆಂಬುದನ್ನು ನಿರ್ಧರಿಸಲು ಅವರಿಗೆ ಸ್ಥಳದವರಿಂದ ಯಾವ ವಿಧವಾದ ಸಲಹೆಯೂ ದೊರಕಲಿಲ್ಲ. ತಾನೇ ಧೈರ್ಯ ಮಾಡಿ, ಕೆಲಸಗಾರರಿಗೆ ತೋಡುವಂತೆ ಹೇಳಿದರು ಆ ಸ್ಥಳವನ್ನು ತೋಡುತ್ತಿದ್ದಾಗ ಅಲ್ಲಿಂದ ಸಾಂಬ್ರಾಣಿಯ ವಾಸನೆ ಹೊರಟಿತು ಇನ್ನು ಹೆಚ್ಚು ಆಳವಾಗಿ ತೋಡಬಾರದೆಂದು ತಿಳಿದು ಅಸ್ತಿಭಾರವನ್ನು ಹಾಕಿಸಿ ಕಟ್ಟಡದ ನಿರ್ಮಾಣವನ್ನು ಆರಂಭಿಸಿದರು. ದಿವಂಗತ ಸೂಲಮಂಗಲಂ ವೈದ್ಯನಾಥ ಭಾಗವತರು ತಮ್ಮ ಮಿತ್ರರೊಡನೆ ಒಂದು ಸಂಜೆ ಸಮಾಧಿಯ ಸಮೀಪದಲ್ಲಿ ಕಾವೇರಿಯಲ್ಲಿ ಸಂಧ್ಯಾವಂದನೆಯನ್ನು ಮಾಡುತ್ತಿದ್ದರು. ಇದ್ದಕ್ಕಿದ್ದಂತೆ ರಾಮರಾಮ ಎಂಬ ಶಬ್ದ ಕೇಳಿಸಿತು. ಯಾವ ಕಡೆ ನೋಡಿದರೂ ಯಾರೊಬ್ಬರೂ ಕಾಣಿಸಲಿಲ್ಲ. ಸಮಾಧಿಯಿಂದಲೇ ಆ ಶಬ್ದ ಬಂದಿತೆಂದು ಅವರು ತಿಳಿದರು

ತ್ಯಾಗರಾಜರ ಆರಾಧನೋತ್ಸವವು ಇಂದು ರಾಷ್ಟ್ರೀಯ ಉತ್ಸವವಾಗಿದೆ. ಅವರ ಸಮಾಧಿಯು ಅತ್ಯಂತ ಪವಿತ್ರವಾದ ಯಾತ್ರಾಸ್ಥಳವಾಗಿದೆ. ಸಂಗೀತಗಾರರ ಸ್ಫೂರ್ತಿಯ ಕೇಂದ್ರ. ಸಂಗೀತಪ್ರಿಯರು ಮತ್ತು ಭಕ್ತರು ಅವರ ಜೀವಮಾನದಲ್ಲಿ ಒಂದು ಸಲವಾದರೂ ಇಲ್ಲಿಗೆ ಹೋಗಿ ಜನ್ಮಪಾವನ ಮಾಡಿಕೊಳ್ಳಬಹುದಾದ ಪವಿತ್ರ ಕ್ಷೇತ್ರ.

**ತಿರುವಾಲಿ ಶ್ರೀನಿವಾಸಾಚಾರ್ಯ** — ಶ್ರೀನಿವಾಸಾಚಾರ್ಯರು ೧೯೨೦ರಲ್ಲಿ ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲ್ಲೂಕಿನ ದಾರನಾಯಕನ ಪಾಳ್ಯದಲ್ಲಿ ಜನಿಸಿದರು. ಇವರ ತಂದೆ ಶ್ರೀನಿವಾಸ ರಂಗಾಚಾರ್ಯರು ವೇದಾಧ್ಯಯನ ಸಂಪನ್ನರು ಮತ್ತು ತಾತ ಸಂಗೀತ ಬಲ್ಲವರಾಗಿದ್ದರು. ಆರೇಳು ವರ್ಷಗಳು ವಯಸ್ಸಾಗಿದ್ದಾಗ ಆಗ ತಾನೇ ಪ್ರಚಲಿತವಾಗುತ್ತಿದ್ದ ಗ್ರಾಮಾಫೋನ್ ರೆಕಾರ್ಡ್‌ಗಳನ್ನು ಕೇಳಿ ಹಾಗೆಯೇ ಹಾಡುವುದನ್ನು ಕಲಿತ ಶ್ರೀನಿವಾಸಾಚಾರ್ಯರು ಮಿಡಲ್ ಸ್ಕೂಲ್ ವಿದ್ಯಾಭ್ಯಾಸದ ನಂತರ ಬೆಂಗಳೂರಿನ ಸಂಸ್ಕೃತ ಕಾಲೇಜಿಗೆ ಸೇರಿದರು. ೧೯೩೬ರ ವೇಳೆಗೆ ಎಲ್. ಎಸ್. ನಾರಾಯಣಸ್ವಾಮಿ ಭಾಗವತರ ಗುರುಕುಲವನ್ನು ಸೇರಿ ಸತತವಾಗಿ ೧೨ ವರ್ಷಗಳ ಸಂಗೀತ ಶಿಕ್ಷಣವನ್ನು ಪಡೆದರು ಮೊದಲು ಗುರುವಿನ ಸಂಗಡ ಹಾಡುತ್ತಿದ್ದು ನಂತರ ಸ್ವತಂತ್ರವಾಗಿ ಕಚೇರಿಗಾಯನ ಮಾಡಲು ತೊಡಗಿದರು. ೧೯೪೭ರಲ್ಲಿ ಗದ್ವಾಲಿನ ಆಸ್ಥಾನ ವಿದ್ವಾಂಸರಾಗಿದ್ದರು. ೧೯೫೧ರಲ್ಲಿ ಚೌಡಯ್ಯನವರ ಅಯ್ಯನಾರ್ ಕಲಾಶಾಲೆಯಲ್ಲಿ ಒಂದು ವರ್ಷ ಕೆಲಸ ಮಾಡಿ ನಂತರ ನಾರಾಯಣಸ್ವಾಮಿ ಭಾಗವತರ ವಿಜಯ ಸಂಗೀತ ಕಾಲೇಜಿನಲ್ಲಿ ಕೆಲಸ ಮಾಡಿದರು.

ಇವರು ಹಲವಾರು ಕಚೇರಿಗಾಯನವನ್ನು ಹೆಸರಾಂತ ಪಕ್ಕವಾದ್ಯ ವಿದ್ವಾಂಸರೊಡನೆ ಮಾಡಿದ್ದಾರೆ. ನೂರಾರು ಶಿಷ್ಯರಿಗೆ ವಿದ್ಯಾದಾನ ಮಾಡಿದ್ದಾರೆ.

**ತಿರುಮರುಗಳ್ ನಟೇಶಪಿಳ್ಳೈ** (೧೯ನೆ ಶ)—ತಮಿಳುನಾಡಿನ ತಂಜಾವೂರು ಜಿಲ್ಲೆಯು ಅನೇಕ ಶ್ರೇಷ್ಠ ನಾಗಸ್ವರ ವಿದ್ವಾಂಸರ ಜನ್ಮಭೂಮಿ ಇದೇ ಜಿಲ್ಲೆಯ ತಿರುಮರುಗಳ್‌ನಲ್ಲಿ ಒಂದು ಸುಪ್ರಸಿದ್ಧ ದೇವಾಲಯವಿದೆ. ನಾಗಸ್ವರ ವಿದ್ವಾಂಸರ ಮನೆತನಕ್ಕೆ ಸೇರಿದ ನಟೇಶಪಿಳ್ಳೈಯವರು ಬಹಳ ಬೇಗ ನಾಗಸ್ವರ ವಾದನ ಕಲೆಯನ್ನು ಕರಗತ ಮಾಡಿಕೊಂಡರು. ಇವರು ಪ್ರಖ್ಯಾತ ವೇಣುವಾದಕರಾದ ಶರಭ ಶಾಸ್ತ್ರಿಗಳ ಸಮಕಾಲೀನರು. ಇವರು ನಾಗಸ್ವರ ವಾದನದ ಎಷ್ಟೋ ರಹಸ್ಯಗಳನ್ನು ಬಿಡಿಸಿದರು. ಕಾನಡಾ, ಅಠಾಣ ಮತ್ತು ಸಹಾನ ರಾಗಗಳನ್ನು ಬಹು ಸೊಗಸಾಗಿ ನುಡಿಸುತ್ತಿದ್ದರು. ಮದ್ರಾಸಿನ ಚೆನ್ನಕೇಶವ ಪೆರುಮಾಳ್ ದೇವಾಲಯದ ಒಂದು ಉತ್ಸವದಲ್ಲಿ ಸೆಂಪನ್ನಾರ್ ಕೋಯಿಲ್ ರಾಮಸ್ವಾಮಿಯವರ ಜೊತೆಗೆ ನುಡಿಸಿದ ಸೊಗಸಿಗೆ ಮೆಚ್ಚಿ ಇಬ್ಬರಿಗೂ ಚಿನ್ನದ ನಾಗಸ್ವರಗಳನ್ನು ಒಂದು ಸಭೆಯಲ್ಲಿ ಕೊಟ್ಟು ಗೌರವಿಸಿದರು. ಆಗಿನ ಕಾಲದಲ್ಲಿ ನಟೇಶನ್ ಮತ್ತು ಚಿನ್ನಪಕ್ಕಿರಿ ಇವರಿಬ್ಬರನ್ನೂ ನಾಗಸ್ವರದ ಎರಡು ಕಣ್ಣುಗಳೆಂದು ಭಾವಿಸಿದ್ದರು ಶರಭಶಾಸ್ತ್ರಿಯವರು ಪಿಳ್ಳೈಯವರ ವಾದನವನ್ನು ಬಹಳ ಮೆಚ್ಚಿಕೊಂಡಿದ್ದರು. ಬಹಳ ಚಿಕ್ಕವಯಸ್ಸಿನಲ್ಲೇ ಕೀರ್ತಿಶಿಖರ ವನ್ನು ಮುಟ್ಟಿದ ಪಿಳ್ಳೈಯವರು ೩೮ನೇ ವಯಸ್ಸಿನಲ್ಲೇ ಕಾಲವಶರಾದರು.

**ತಿರಸ್ಕರಣಿ**—ಈ ರಾಗವು ೧೯ನೆ ಮೇಳಕರ್ತ ಝಂಕಾರ ಧ್ವನಿಯ ಒಂದು ಜನ್ಯರಾಗ

ಆ : ಸ ರಿ ಗ ದ ನಿ ಸ̇

ಅ : ಸ̇ ನಿ ದ ಗ ರಿ ಸ

**ತಿರವನ್**—ಪುರಾತನ ತಮಿಳು ಸಂಗೀತದ ಒಂದು ಔಡವರಾಗ

**ತಿರಿಪ**—ಇದೊಂದು ಬಗೆಯ ಗಮಕ–ನೋಡಿ–ಗಮಕ.

**ತಿರಟ್ಟಿರವನ್**—ಪುರಾತನ ತಮಿಳು ಸಂಗೀತದ ಒಂದು ಸ್ವರಾಂತರ ರಾಗ.

**ತಿರುಪಯಣಂ ಪಂಚಾಪಗೇಶ ಶಾಸ್ತ್ರಿ** (೧೮೬೮–೧೯೩೪)—ಪಂಚಾಪಗೇಶ ಶಾಸ್ತ್ರಿಗಳು ಪಂಡಿತ ಲಕ್ಷ್ಮಣಾಚಾರ್ಯರಂತೆ ಪೌರಾಣಿಕರಾಗಿ ತಮ್ಮ ಜೀವನವನ್ನು ಆರಂಭಿಸಿದರು. ಇವರ ಸಂಗೀತದ ಅಭಿರುಚಿ, ಪ್ರವಚನ ಪ್ರತಿಭೆ, ಉತ್ತಮ ಅಭಿರುಚಿಗಳು ಸೇಲಂ ಗೋದಾವರಿ ಎಂಬ ನಾಟ್ಯ ಕಲಾವಿದೆಯ ಮನಸ್ಸಿನ ಮೇಲೆ ಬಹಳ ಪರಿಣಾಮ ಉಂಟುಮಾಡಿತು. ಇದಲ್ಲದೆ ಪುರಾಣ ಶಾಸ್ತ್ರಗಳಲ್ಲಿ ಅಪಾರ ಪಾಂಡಿತ್ಯವಿತ್ತು. ಪ್ರವಚನವನ್ನು ಬಿಟ್ಟು ಶಾಸ್ತ್ರಿಗಳು ಪ್ರಸಿದ್ಧ ಭಾಗವತರಾದರು. ಪ್ರತಿಯೊಂದು ವಿಷಯವನ್ನೂ ಅಪಾರ ಎಚ್ಚರಿಕೆಯಿಂದ ಪೂರ್ವಸಿದ್ಧತೆ ಮಾಡಿ ಕೊಳ್ಳುತ್ತಿದ್ದರು. ಮದ್ರಾಸಿನಲ್ಲಿ ರಾಮಾಯಣದ ಹರಿಕಥೆಯನ್ನು ಪ್ರಾರಂಭಿಸಿದರು. ನಿರೂಪಣೆಗಳನ್ನು ತಾವೇ ರಚಿಸಿಕೊಳ್ಳುತ್ತಿದ್ದರು. ಸಮಯ ಪ್ರಜ್ಞೆ, ಹಾಸ್ಯ, ಕಥನ

ಚಾತುರ್ಯ, ಸೊಗಸಾದ ಅಭಿರುಚಿಯುಳ್ಳ ಬಟ್ಟೆ, ನಡವಳಿಕೆ ಇತ್ಯಾದಿಗಳಿಗೆ ಪ್ರಸಿದ್ಧ ರಾಗಿದ್ದ ಶಾಸ್ತ್ರಿಗಳು ಕೃಷ್ಣ ಭಾಗವತರಂತೆ ಅವರ ಕಾಲದ ಹರಿಕಥಾ ವಿದ್ವಾಂಸರಲ್ಲಿ ಅಗ್ರಗಣ್ಯರಾಗಿದ್ದರು.

**ತಿರುವೀಯಿಮಯಾಳ್ಳೈ ಸಹೋದರರು**—ಬಹು ಕಾಲದವರೆಗೆ ನಾಗಸ್ವರ ವಿದ್ವಾಂಸರು ರಾಗ ಮತ್ತು ಪಲ್ಲವಿ ನುಡಿಸುವ ಸಂಪ್ರದಾಯವನ್ನು ಅನುಸರಿಸುತ್ತಿದ್ದರು. ಈ ಶತಮಾನದ ಪೂರ್ವಾರ್ಧದವರೆಗೆ ಯಾವ ವೇಳೆಗೆ ಯಾವ ರಾಗವನ್ನು ನುಡಿಸ ಬೇಕೆಂಬ ಸಂಪ್ರದಾಯವನ್ನು ಅನುಸರಿಸುತ್ತಿದ್ದರು. ಈಗ ಇದು ಕೇವಲ ಗ್ರಂಥಸ್ಥ ವಾಗಿದೆ. ತಿರುಪ್ಪಾಂಬಲಪುರಂ ನಟರಾಜ ಸುಂದರಂ ಸಹೋದರರು ಉಮಯಾಳ್ಪುರಂ ಸಹೋದರರಿಂದ ತ್ಯಾಗರಾಜರ ಕೃತಿಗಳನ್ನು ಕಲಿತು ಅವುಗಳನ್ನು ನುಡಿಸುವುದರಲ್ಲಿ ಆದ್ಯರೆನಿಸಿಕೊಂಡರು. ನಾಗೂರು ಸುಬ್ಬಯ್ಯ ಎಂಬ ಹಿರಿಯ ವಿದ್ವಾಂಸರು ಶಿವಸುಬ್ರಹ್ಮಣ್ಯಂ ಮತ್ತು ನಟರಾಜ ಸುಂದರಂ-ಎಂಬ ತರುಣ ಸಹೋದರರನ್ನು ತಮ್ಮ ಪೋಷಣೆಗೆ ತೆಗೆದುಕೊಂಡು ನಾಗಸ್ವರ ವಾದನದಲ್ಲಿ ಕ್ರಾಂತಿ ಉಂಟು ಮಾಡಿದರು. ನೀಡಾಮಂಗಲಂ ಮೀನಾಕ್ಷಿಸುಂದರಂ ಈ ಸಹೋದರರಿಗೆ ಲಯ ಮತ್ತು ಸ್ವರಪ್ರಸ್ತಾರದಲ್ಲಿ ಉತ್ತಮ ಶಿಕ್ಷಣವಿತ್ತರು. ಮಾಧುರ್ಯ, ಅಚ್ಚುಕಟ್ಟು, ಹಿತ ಮಿತವಾದ ನಿರೂಪಣೆಗೆ ಈ ಸಹೋದರರ ನಾಗಸ್ವರ ವಾದನವು ಪ್ರಸಿದ್ಧವಾಗಿತ್ತು.

**ತಿಲಕಪ್ರಕಾಶಿನಿ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ತಿಲ್ಲಾನ**—ಇದು ಕೈವಾಡ ಎಂಬ ಹೆಸರಿನಲ್ಲಿ ಸಾವಿರಾರು ವರ್ಷಗಳಿಗಿಂತಲೂ ಹಿಂದಿನಿಂದ ಪ್ರಸಿದ್ಧಿ ಪಡೆದಿರುವ ಪ್ರಬಂಧ. ಇದರ ಅಪಭ್ರಂಶ ರೂಪವು ಕೈಪಾಟ. ಕೈಪಾಟವೆಂದರೆ ಅವನದ್ಧ ವಾದ್ಯಗಳಿಂದ ಉದ್ಭವಿಸುವ ಪಾಟಾಕ್ಷರಗಳು. ತಿಲ್ಲಾನವು ತಿರಿತಿಲ್ಲಾನ ಎಂಬ ದೇಶ್ಯ ಪ್ರಬಂಧದಿಂದ ಸ್ಫೂರ್ತಿಗೊಂಡು ಜನ್ಮತಾಳಿತು ಎಂದೂ, ಇದರಲ್ಲಿ ತಿ, ಲ್ಲಾ, ನ ಎಂಬ ಅಕ್ಷರಗಳು ಪ್ರಯುಕ್ತವಾಗಿರುವುದರಿಂದ ಈ ಹೆಸರು ಬಂದಿತೆಂದೂ, ತರಾನ ಎಂಬ ಹಿಂದೂಸ್ಥಾನಿ ಪದ್ಧತಿಯ ರಚನೆಯನ್ನು ಅನುಸರಿಸಿ ಬಂದಿತೆಂದೂ ವಿವಿಧ ಅಭಿಪ್ರಾಯಗಳಿವೆ. ಇದು ೧೮ನೆ ಶತಮಾನದಲ್ಲಿ ತಂಜಾವೂರಿನ ಪ್ರತಾಪಸಿಂಹ ಮಹಾರಾಜನ ಆಸ್ಥಾನ ವಿದ್ವಾಂಸನಾಗಿದ್ದ ವೀರಭದ್ರಯ್ಯನಿಂದ ಪ್ರಥಮವಾಗಿ ರಚಿಸಲ್ಪಟ್ಟು, ತಂಜಾವೂರು ಸಹೋದರ ಚತುಷ್ಟಯರಿಂದ ಭರತನಾಟ್ಯ ಕಚೇರಿಯ ಅಂಗವಾಗಿ ಪ್ರಚಾರಕ್ಕೆ ಬಂದಿತೆಂದು ಹೇಳಬಹುದು.

ತಿಲ್ಲಾನವು ಕೃತಿಯಂತೆಯೆ ಪಲ್ಲವಿ, ಅನುಪಲ್ಲವಿ, ಚರಣಗಳೆಂಬ ಮೂರು ಖಂಡಗಳುಳ್ಳ ಪ್ರಬಂಧ. ಪಲ್ಲವಿ ಮತ್ತು ಅನುಪಲ್ಲವಿಗಳಲ್ಲಿ ಹಸ್ತಪಾಟಗಳಿಂದ ಆದ ಜತಿಗಳು ನಾನಾ ರೀತಿಯಲ್ಲಿ ಅಡಕವಾಗಿರುತ್ತದೆ. ಚರಣದಲ್ಲಿ ಇಂತಹ ಜತಿಗಳೊಡನೆ

ಸ್ವರಸಮೂಹಗಳೂ ಮಾತೂ ಮಿಶ್ರಿತವಾಗಿರುತ್ತವೆ. 'ಮಾತು' ಬಹು ಮಿತವಾಗಿದ್ದು ಪ್ರಭುಸ್ತುತಿಯನ್ನೂ, ದೇವತಾಸ್ತುತಿಯನ್ನೂ, ವಾಗ್ಗೇಯಕಾರ ಮುದ್ರೆಯನ್ನೂ ಒಳಗೊಂಡಿರುತ್ತದೆ. ಶೃಂಗಾರರಸ ಪ್ರಧಾನವಾಗಿರುವುದುಂಟು. ತಿಲ್ಲಾನವು ಮುಖ್ಯವಾಗಿ ನೃತ್ಯಭಾಗಕ್ಕೆ ಅಳವಡಿಸಲಾದ ರಚನೆ. ಜತಿಗಳ ಛಂದೋಲಯ ವಿನ್ಯಾಸದ ಸೌಂದರ್ಯವನ್ನೂ, ತನ್ಮೂಲಕ ಶುದ್ಧ ಗೇಯರಸವನ್ನೂ ತೋರಿಸಲು ರಚಿಸಿರುವ ಪ್ರಬಂಧ. ಇದೊಂದು ಉತ್ಸಾಹದಿಂದ ಕೂಡಿದ ರಚನೆ ಸಂಗೀತ ಕಚೇರಿಗಳಲ್ಲಿ ತಿಲ್ಲಾನವನ್ನು ಹಾಡುವ ವಾಡಿಕೆಯಿದೆ.

ಮೈಸೂರು ಸದಾಶಿವರಾವ್, ಸ್ವಾತಿತಿರುನಾಳ್ ಮಹಾರಾಜ, ಕೃಷ್ಣಸ್ವಾಮಯ್ಯ, ಪೊನ್ನಯ್ಯ, ಮೇಳತ್ತೂರು ವೀರಭದ್ರಯ್ಯ, ಮಹಾವೈದ್ಯನಾಥ ಅಯ್ಯರ್, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ರಾಮನಾಡ್ ಶ್ರೀನಿವಾಸ ಅಯ್ಯಂಗಾರ್, ವೀಣೆ ಶೇಷಣ್ಣ, ಮೈಸೂರು ಚಿಕ್ಕರಾಮಪ್ಪ, ವೀಣೆವೆಂಕಟಗಿರಿಯಪ್ಪ, ಮುತ್ತಯ್ಯ ಭಾಗವತರು, ಪಲ್ಲವಿ ಶೇಷಯ್ಯರ್, ಕುನ್ನಕ್ಕುಡಿ ಕೃಷ್ಣಯ್ಯರ್, ಟಿ. ಕೆ. ರಂಗಾಚಾರಿ, ಬಾಲಮುರಳಿಕೃಷ್ಣ, ಲಾಲ್ಗುಡಿ ಜಯರಾಮನ್ ಮುಂತಾದವರು ತಿಲ್ಲಾನಗಳನ್ನು ರಚಿಸಿದ್ದಾರೆ. ಮಹಾವೈದ್ಯನಾಥ ಅಯ್ಯರ್ ರಚಿಸಿರುವ ಸಿಂಹನಂದನ ತಾಳದಲ್ಲಿರುವ ಕಾನಡಾರಾಗದ ಗೌರೀನಾಯಕ ಎಂಬ ತಿಲ್ಲಾನವು ಅತ್ಯಂತ ಪ್ರಸಿದ್ಧವಾದ ಪ್ರೌಢರೀತಿಯ ತಿಲ್ಲಾನ. ಈ ತಿಲ್ಲಾನವು ೧೨೮ ಅಕ್ಷರ ಕಾಲ ಪ್ರಮಾಣವಿರುವ ಸಿಂಹನಂದನ ತಾಳದ ಎರಡೇ ಆವರ್ತಗಳಲ್ಲಿ ರಚಿತವಾಗಿದ್ದು ಒಂದನೆಯ ಆವರ್ತದಲ್ಲಿ ಮಾತು ಮತ್ತು ಎರಡನೆ ಆವರ್ತದಲ್ಲಿ ಜತಿಗಳನ್ನೂ ಒಳಗೊಂಡಿದೆ. ಪಲ್ಲವಿ ಶೇಷಯ್ಯರ್‌ರವರ ವಸಂತರಾಗದ ಝಂ ಝಂ ತರಿತ ಝಂ ಎಂಬ ತಿಲ್ಲಾನದಲ್ಲಿ ಸುಂದರವಾದ ಸಂಗತಿಗಳಿವೆ.

**ತಿಲ್ಲಾನದರು** — ತಿಲ್ಲಾನವು ದರುವಿನ 'ಮಾತು'ನ್ನು ಒಳಗೊಂಡಿದ್ದರೆ ಅಂತಹದು ತಿಲ್ಲಾನದರು ಎಂಬ ರಚನೆಯಾಗುತ್ತದೆ. ಇದರ ಸಾಹಿತ್ಯದಲ್ಲಿ ಗಾದೆಗಳೂ ಕಂಡು ಬಂದಿವೆ. ಇದಕ್ಕೆ 'ಮಿಶ್ರಸಂಬಂಧ' ಎಂದು ಹೆಸರು. ಇದರ ಗಾನ ಕ್ರಮವು ತಿಲ್ಲಾನದಂತೆಯೇ ಇರುತ್ತದೆ. ಕೃಷ್ಣಸ್ವಾಮಿ ಅಯ್ಯರ್ ಎನ್ನುವವರು ರಚಿಸಿರುವ 'ನಾದಿರ್‌ದಾನಿ ತೊಂತಿರ್‌ದಾನಿ' ಎಂಬ ಸುರಟಿರಾಗದ ತಿಲ್ಲಾನದರು ಬಹು ಪ್ರಸಿದ್ಧವಾಗಿದೆ.

**ತಿಲ್ಲೈಸ್ಥಾನಂ ರಾಮಯ್ಯಂಗಾರ್** — ಇವರು ತ್ಯಾಗರಾಜರ ಒಬ್ಬ ಪ್ರಮುಖ ಶಿಷ್ಯರು. ತಮ್ಮ ಗುರುವಿನಂತೆ ಭಜನೆಗಳನ್ನು ನಡೆಸುತ್ತಾ ಯಾವಾಗಲೂ ಭಕ್ತಿಯಿಂದ ಹಾಡುವುದರಲ್ಲಿ ತಲ್ಲೀನರಾಗಿರುತ್ತಿದ್ದರು. ತಿಲ್ಲೈಸ್ಥಾನಂ ಪಂಜು ಭಾಗವತರು ಮತ್ತು ನರಸಿಂಹ ಭಾಗವತರು ಇವರ ಪ್ರಮುಖ ಶಿಷ್ಯರು.

**ತೀವ್ರ** — ಷಡ್ಜದ ಪ್ರಥಮ ಶ್ರುತಿಯ ಹೆಸರು.

**ತೀವ್ರತಮಮಧ್ಯಮ** — ವರಾಳಿರಾಗದ ಮಧ್ಯಮದ ಹೆಸರು.

**ತೀರ್ಥನಾರಾಯಣ**—ಕೃಷ್ಣ ಲೀಲಾತರಂಗಿಣಿಯ ಕರ್ತೃವಾದ ಸ್ವಾಮಿ ನಾರಾಯಣ ತೀರ್ಥರನ್ನು ಹೀಗೆ ಹೇಳುವುದುಂಟು (ನೋಡಿ: ಸ್ವಾಮಿನಾರಾಯಣ ತೀರ್ಥ)

**ತೀವ್ರವಾಹಿನಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧ ಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ̇
ಅ: ಸ̇ ನಿ ದ ಪ ಮ ಗ ರಿ ಗ ಮ ರಿ ಸ

**ತುಕಾರಾಮ್** (೧೫೬೮–೧೬೫೦)—ಸಂತ ತುಕಾರಾಮ್ ಮಹಾರಾಷ್ಟ್ರದ ಪ್ರಸಿದ್ಧ ಹರಿದಾಸರು. ಜ್ಞಾನದೇವ ಮತ್ತು ಇತರ ಸಂತರಂತೆಯೇ ಇವರು ಜನ್ಮತಃ ಸಂತರು. ಶೂದ್ರ ಕುಟುಂಬ ಒಂದರಲ್ಲಿ ಜನಿಸಿ, ಬಡತನ, ಕಷ್ಟ ಇತ್ಯಾದಿಗಳೆಲ್ಲವನ್ನೂ ಅನುಭವಿಸಿದರು. ಇವರ ಜೀವನವು ಮಾನವನು ದೈವತ್ವವನ್ನು ಪಡೆದ ಸಿದ್ಧಿಯ ಪತೀಕ. ಸ್ವಪ್ನದಲ್ಲಿ ಇವರಿಗಿಂತ ೩೦೦ ವರ್ಷಗಳ ಹಿಂದೆ ಇದ್ದ ಶ್ರೀಕೃಷ್ಣ ಚೈತನ್ಯರಿಂದ ರಾಮ ಕೃಷ್ಣ ಹರಿ ಮಂತ್ರದ ಉಪದೇಶವನ್ನು ಪಡೆದರು. ಭಕ್ತಿಮಾರ್ಗದಲ್ಲಿ ಮುಂದುವರಿದು ಪಂಡರಪುರ ವಿಠಲನ ಭಕ್ತನಾಗಿ ಸಾಕ್ಷಾತ್ಕಾರ ಪಡೆದರು. ಸಮಾಜೋದ್ಧಾರಕ್ಕೆ ಕಂಕಣ ಕಟ್ಟಿ ನಿಂತರು. ಭಗವನ್ನಾಮ ಸಂಕೀರ್ತನವನ್ನು ಮನೆಮನೆಗೆ ಸಾರಿದರು. ತಮ್ಮ ಭೋಧನೆಗಳನ್ನು ಅಭಂಗಗಳ ಮೂಲಕ ಹಾಡಿದರು ಅಂತರಂಗಶುದ್ಧಿಯನ್ನು ಬೋಧಿಸಿ, ಬಹಿರಾಡಂಬರ, ಕರ್ಮಗಳನ್ನು ಖಂಡಿಸಿದರು. ಇವರ ಅಭಂಗಗಳು ಬಹಳ ಜನಪ್ರಿಯವಾಗಿವೆ. ಸಂಗೀತ ಕಚೇರಿಗಳಲ್ಲಿ ಒಂದೊಂದು ಅಭಂಗವನ್ನು ಹಾಡುವ ರೂಢಿಯಿದೆ.

**ತುಣ್ತುಣಿ**—ಈ ವಾದ್ಯವನ್ನು ತತ್ವಗಾನ ಮಾಡುವ ಬೈರಾಗಿಗಳೂ ಭಿಕ್ಷುಕರೂ, ಜಾನಪದ ಗೀತೆಗಳನ್ನು ಹಾಡುವವರು ಏಕನಾದದಂತೆ ಶ್ರುತಿವಾದ್ಯವಾಗಿ ಉಪಯೋಗಿಸುತ್ತಾರೆ. ಕೊಳವೆಯಾಕಾರದಲ್ಲಿ ಮರವನ್ನು ಕೊರೆದು ಹೊಳವಿನ ಒಂದು ಮುಖಕ್ಕೆ ಚರ್ಮದ ಮುಚ್ಚಳಿಕೆ ಹಾಕಿ, ಈ ಮುಚ್ಚಳಿಕೆಯ ಕೇಂದ್ರದಲ್ಲಿ ಒಂದು ಸಣ್ಣ ರಂಧ್ರ ಮಾಡಲಾಗಿರುತ್ತದೆ. ಈ ರಂಧ್ರದ ಹೊರಭಾಗದಲ್ಲಿ ಮುಚ್ಚಳಿಕೆಯ ಮೇಲೆ ಒಂದು ರಂಧ್ರವಿರುವ ಲೋಹದ ತಗಡನ್ನು ಅಂಟಿಸಲಾಗಿದೆ. ಈ ಎರಡು ರಂಧ್ರಗಳೂ ಏಕಕೇಂದ್ರೀಯವಾಗಿರುತ್ತವೆ. ಹೊಳವಿನ ಹೊರಮೈಗೆ ಒಂದು ತುಂಡು ಬಿದಿರು ಸೇರಿಸಲ್ಪಟ್ಟು, ಈ ತುಂಡಿನ ಬಿಡಿ ತುದಿಯಲ್ಲಿ ಒಂದು ಬಿರಡೆಯನ್ನು ಅಳವಡಿಸಲಾಗಿದೆ. ಮುಚ್ಚಳಿಕೆಯ ಹೊರಭಾಗದಲ್ಲಿ ನಾಣ್ಯದ ಅಥವಾ ಲೋಹದ ತುಂಡಿನ ಹೊರಗೆ ಒಂದು ಮೊಳೆ ಅಥವಾ ಮರದ ಸಣ್ಣ ತುಂಡಿಗೆ ಉಕ್ಕಿನತಂತಿ ಬಿಗಿಯಲ್ಪಟ್ಟು, ತಂತಿ, ಲೋಹದ ತಗಡು ಮತ್ತು ಮುಚ್ಚಳಿಕೆಯ ರಂಧ್ರಗಳಲ್ಲಿ ತೂರಿ ಬಂದು ಬಿದಿರು ಕೋಲಿನ ತುದಿಯಲ್ಲಿರುವ ಬಿರಡೆಗೆ ಕಟ್ಟಲ್ಪಟ್ಟಿದೆ. ಬಿರಡೆಯನ್ನು

ತಿರುಗಿಸಿ ಬೇಕಾದ ಆಧಾರ ಷಡ್ಜಶ್ರುತಿಗೆ ನಿಲ್ಲಿಸಿ, ತಂತಿಯನ್ನು ಕೈಯ ಮಧ್ಯದ ಬೆರಳಿನಿಂದ ಮೀಟಿದಾಗ ಸೊಗಸಾದ ನಾದ ಕೇಳಿಬರುತ್ತದೆ

**ತುಣೀರಧಾರಿಣಿ**—ಈ ರಾಗವು ೧೭ನೆಯ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ

ಅ: ಸ ನಿ ದ ಮ ರಿ ಸ

**ತೂಮು ನರಸಿಂಹದಾಸರು** (೧೭೯೦)—ಇವರು ತೆಲುಗಿನಲ್ಲಿ ಅನೇಕ ಭಕ್ತಿಗೀತೆಗಳನ್ನು ರಚಿಸಿರುವ ಪ್ರಸಿದ್ಧ ವಾಗ್ಗೇಯಕಾರರು ಇವರ ತಂದೆ ತುಮು ಅಪ್ಪಯ್ಯ ಮಂತ್ರಿ ಮತ್ತು ತಾಯಿ ವೆಂಕಮಾಂಬಾ. ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಯ ಮಂಗಳಗಿರಿ ನರಸಿಂಹದೇವರಿಗೆ ಪ್ರಾರ್ಥನೆ ಸಲ್ಲಿಸಿದ ಫಲವಾಗಿ ಜನಿಸಿದ ಮಗನಿಗೆ ನರಸಿಂಹ ಎಂಬ ಹೆಸರಿಟ್ಟರು ನರಸಿಂಹದಾಸರು ಗುಂಟೂರಿನಲ್ಲಿ ವಾಸಿಸುತ್ತಿದ್ದರು. ಚಿಕ್ಕಂದಿನಲ್ಲಿ ಸಂಸ್ಕೃತ, ತೆಲುಗು ಮತ್ತು ಸಂಗೀತದಲ್ಲಿ ವಿದ್ವತ್ತನ್ನು ಸಂಪಾದಿಸಿದರು. ನಂತರ ಭದ್ರಾಚಲಕ್ಕೆ ಹೋಗಿ ಅಲ್ಲಿಯ ಶ್ರೀರಾಮನನ್ನು ಸ್ತುತಿಸಿ ಕೆಲವು ಕೀರ್ತನೆಗಳನ್ನು ರಚಿಸಿದರು. ನಂತರ ಭಾರತಾದ್ಯಂತ ಕ್ಷೇತ್ರಾಟನೆ ಮಾಡಿದರು ತ್ಯಾಗರಾಜರ ಕೀರ್ತಿಯನ್ನು ಕೇಳಿ ೧೮೨೧ ತಿರುವೈಯ್ಯಾರಿಗೆ ಹೋಗಿ ಅಲ್ಲಿ ಮೂರು ತಿಂಗಳ ಕಾಲವಿದ್ದು ತ್ಯಾಗರಾಜರು ನಡೆಸುತ್ತಿದ್ದ ಭಜನೆಗಳನ್ನು ತಪ್ಪದೆ ಕೇಳುತ್ತಿದ್ದರು. ಅಲ್ಲಿ ಭಕ್ತಿಮಯವಾದ ಸನ್ನಿವೇಶ ಮತ್ತು ಉತ್ತಮ ಸಂಗೀತದಿಂದ ಪ್ರಭಾವಿತರಾದರು ತಮ್ಮ ಅನುಭವವನ್ನು ಒಂದು ಸೀಸ ಪದ್ಯ ಮತ್ತು ಇನ್ನೊಂದು ಕವನದಲ್ಲಿ ವ್ಯಕ್ತಗೊಳಿಸಿದ್ದಾರೆ. "ನಾನು ಆನಂದ ಸಂಕೀರ್ತನಾವಳಿಯನ್ನು ಕೇಳಿದೆ. ಅದರ ಭಾವಶುದ್ಧಿ ಮತ್ತು ಶುದ್ಧ ಭಕ್ತಿಯಿಂದ ಪ್ರಭಾವಿತನಾದೆ. ವಿನಯ, ಸತ್ಸಂಪತ್ತು, ವಿವೇಕ ಮತ್ತು ರಾಮಭಕ್ತಿಯ ವೈಭವವನ್ನು ಕಂಡೆ. ಬ್ರಹ್ಮನಿಗೂ ಸಾಧ್ಯವಿಲ್ಲದ ಅನುಭವವನ್ನು ಪಡೆದೆ: ಈ ಪ್ರಪಂಚದಲ್ಲಿ ತ್ಯಾಗರಾಜರು ಸದ್ಗುಣ ಪುಂಜರೆಂಬುದನ್ನು ಕಂಡುಕೊಂಡೆ, ಬ್ರಹ್ಮಾನಂದವೆಂಬ ವಾರಿಧಿಯಲ್ಲಿ ಈಜ ಬೇಕೆನಿಸಿತು." ಎಂದೂ ಮತ್ತೊಂದು ಪದ್ಯದಲ್ಲಿ "ರಾಮ ಭಕ್ತಿಯಲ್ಲಿ ತ್ಯಾಗರಾಜರಿಗೆ ಸರಿ ಸಮಾನರಾದ ಬೇರೊಬ್ಬರನ್ನು ಹೆಸರಿಸಲು ಈ ಪ್ರಪಂಚದಲ್ಲಿ ಸಾಧ್ಯವೇ? ತ್ಯಾಗರಾಜರು ಪ್ರೇಮದಿಂದ ರಾಮಾ ಎಂದೊಡನೆ ತ್ಯಾಗರಾಜ, ಇದೋ ಇಲ್ಲಿದ್ದೇನೆ, ನಿನಗೇನು ಬೇಕು ಎಂದು ರಾಮನು ಬರುತ್ತಿದ್ದನು" ಎಂದು ವರ್ಣಿಸಿದ್ದಾರೆ.

ನರಸಿಂಹದಾಸರು ಭದ್ರಾಚಲಕ್ಕೆ ಮತ್ತೊಂದು ಸಲ ಹೋಗಿ, ದೇವಾಲಯದ ಜೀರ್ಣೋದ್ಧಾರ ಮಾಡಿ, ಅನೇಕ ಆಭರಣಗಳನ್ನು ದೇವರಿಗೆ ಸಮರ್ಪಿಸಿದರು. ವರದ ರಾಮದಾಸರೆಂಬ ಶ್ರೀಮಂತರು ತಮ್ಮ ಸರ್ವಸ್ವವನ್ನೂ ದಾಸರಿಗೆ ಸಮರ್ಪಿಸಿದರು. ಇದರಿಂದ ದೇವಾಲಯದ ಜೀರ್ಣೋದ್ಧಾರವು ಸುಗಮವಾಯಿತು. ಇವರು ರಚಿಸಿರುವ ಭಜನ ಜೇಸೆ ವಿಧಮು ತೆಲಿಯಂದಿ (ಸೌರಾಷ್ಟ್ರ) ಮತ್ತು ಪೊರೆ ಮಾ ಇಂಟ್ಲಕು

(ಆಹಿರಿ) ಎಂಬ ಕೀರ್ತನೆಗಳನ್ನು ಭಜನೆಗಳಲ್ಲಿ ಹೆಚ್ಚಾಗಿ ಹಾಡುತ್ತಾರೆ. ದಾಸರು ತಮ್ಮ ಕ್ಷೇತ್ರಾಟನೆಯಲ್ಲಿ ಕೃಷ್ಣಾ ಜಿಲ್ಲೆಯ ಅಲ್ಲೂರು ಎಂಬಲ್ಲಿಗೆ ಬಂದರು. ಅಲ್ಲಿ ತರುಣ ಅಲ್ಲೂರಿ ವೆಂಕಟಾದ್ರಿ ಸ್ವಾಮಿಯ (೧೮೦೭–೧೮೭೭) ಭಕ್ತಿಯನ್ನು ಮೆಚ್ಚಿ ತಮ ತಂಬೂರಿ ಮತ್ತು ಕರತಾಳಗಳನ್ನು ಅವನಿಗೆ ಕೊಟ್ಟರು. ನರಸಿಂಹದಾಸರು ಸ್ವನಾಮ ಮುದ್ರಕಾರರು. ಇವರ ಕೆಲವು ರಚನೆಗಳಲ್ಲಿ ನರಸಿಂಹದಾಸ ಎಂದೂ, ಕೆಲವುಗಳಲ್ಲಿ ತುಮು ನರಸಿಂಹದಾಸ ಎಂಬ ಮುದ್ರೆಗಳಿವೆ.

**ತುರಂಗಲೀಲ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ನಿ ಸ̇

ಅ: ಸ̇ ನಿ ದ ಮ ಪ ಮ ರಿ ಗ ಸ

**ತುರಂಗಿಣೀ** – ಇದು ಭರತ ನಾಟ್ಯದ ಹತ್ತು ಬಗೆಯ ಗತಿಭೇದಗಳಲ್ಲಿ ಒಂದು ಬಗೆ. ಬಲಗಾಲನ್ನು ಮೇಲಕ್ಕೆತ್ತಿ ಹಾರುತ್ತಾ ಎಡಗೈಯಲ್ಲಿ ಶಿಖರಹಸ್ತವನ್ನೂ ಬಲಗೈಯಲ್ಲಿ ಪತಾಕಹಸ್ತವನ್ನೂ ತೋರಿಸುವುದು ತುರಂಗಿಣೀ ಗತಿ.

**ತುಳಜಾಜಿ ಮಹಾರಾಜ** (೧೭೬೫–೧೭೮೫)—ತಂಜಾವೂರಿನ ಮರಾಠ ದೊರೆ ತುಳಜಾಜಿ ಕರ್ಣಾಟಕ ಸಂಗೀತವನ್ನು ಕುರಿತು ಸಂಗೀತ ಸಾರಾಮೃತ ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಇವನ ಪಾಂಡಿತ್ಯ ಪ್ರತಿಭೆಗಳು ಬಹುಮುಖವಾದುವು. ಸಂಗೀತ, ನಾಟ್ಯ, ವೈದ್ಯ, ಜ್ಯೋತಿಷ್ಯ, ಧರ್ಮಶಾಸ್ತ್ರ, ಮಂತ್ರಶಾಸ್ತ್ರ, ರಾಜನೀತಿ ಮುಂತಾದ ಶಾಸ್ತ್ರಗಳಲ್ಲಿ ವಿದ್ವಾಂಸನಾಗಿದ್ದನು. ಸಂಗೀತ ಸಾರಾಮೃತ ವಲ್ಲದೆ, ಧನ್ವಂತರಿ ವಿಲಾಸ, ಧನ್ವಂತರಿ ಸಾರನಿಧಿ ಎಂಬ ವೈದ್ಯಶಾಸ್ತ್ರ ಗ್ರಂಥಗಳನ್ನೂ, ಇನಕುಲ ರಾಜತೇಜೋನಿಧಿ ಮತ್ತು ವಾಕ್ಯಾಮೃತವೆಂಬ ಜ್ಯೋತಿಷ್ಯ ಶಾಸ್ತ್ರ ಗ್ರಂಥಗಳನ್ನೂ, ಆಧಿ ಧರ್ಮಸಾರಸಂಗ್ರಹವೆಂಬ ಧರ್ಮಶಾಸ್ತ್ರ ಗ್ರಂಥವನ್ನೂ, ರಾಜಧರ್ಮ ಸಾರಸಂಗ್ರಹ ಮತ್ತು ಮಂತ್ರಶಾಸ್ತ್ರ ಸಂಗ್ರಹವೆಂಬ ಗ್ರಂಥವನ್ನೂ ರಚಿಸಿದ್ದಾನೆ. ಇವಲ್ಲದೆ ರಾಮಧ್ಯಾನ ಪದ್ಧತಿ ಎಂಬ ಗೇಯ ಶ್ಲೋಕ ಮಾಲಿಕೆ, ಬಹುಲಾಕಥಾ ಎಂಬ ಮರಾಠಿ ಚೂರ್ಣಿಕೆ, ಪದಗಳು, ಶಂಕರಾಭರಣ ರಾಗದಲ್ಲಿ ಹಿಂದೂಸ್ಥಾನಿ ಶೈಲಿಯ ಒಂದು ಖ್ಯಾಲ್, ಶಿವಕಾಮಸುಂದರೀ ಪರಿಣಯವೆಂಬ ಯಕ್ಷಗಾನ ರಚಿಸಿದ್ದಾನೆ. ತುಳಜೇಂದ್ರ ವೀಣೆಯನ್ನು ರಚಿಸಿ ಆಧುನಿಕ ವೀಣೆಯ ಆದ್ಯಾಚಾರ್ಯನಾದನು ಇವನ ರಾಣಿ ಅಮ್ಮನೀಬಾಯಿಯೂ ಸಹ ವೀಣಾವಾದನ ಕುಶಲರಾಗಿದ್ದರು.

**ತುಳಸೀದಾಸರು** (೧೫೧೧–೧೬೨೩)—ಭಕ್ತ ಕವಿ ತುಳಸೀದಾಸರು ಸರವರಿಯಾ ಪಂಗಡಕ್ಕೆ ಸೇರಿದ ಆತ್ಮಾರಾಮಶುಕ್ಲ ಮತ್ತು ಹುಲಸಿ ಎಂಬ ದಂಪತಿಗಳ ಪುತ್ರನಾಗಿ ಜನಿಸಿದರು ಇವರ ಜನ್ಮದ ವಿಷಯದಲ್ಲಿ ಒಂದು ಕತೆಯಿದೆ. ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಈ ಮಗುವಿಗೆ ಹುಟ್ಟುವಾಗಲೇ ಹಲ್ಲು, ತಲೆಕೂದಲು ಇದ್ದವು.

ಸಾಮಾನ್ಯ ಮಕ್ಕಳಂತೆ ಅಳದೆ ಮಗುವು ರಾಮನಾಮವನ್ನು ಉಚ್ಚರಿಸಿತು. ಇದನ್ನು ಅಪಶಕುನವೆಂದು ಭಾವಿಸಿದ ತಂದೆತಾಯಿ ಮಗುವನ್ನು ತ್ಯಜಿಸಿಬಿಟ್ಟರು. ಮಗ ವನ್ನು ಕೆಲವು ಕಾಲ ಮುನಿಯಾ ಎಂಬ ದಾಸಿ ಸಾಕಿದಳು. ಅವಳ ಮರಣಾನಂತರ ಕಾಶಿಗೆ ಹೋಗಿ ಬಾಬಾನರಹರಿದಾಸರ ಆಶ್ರಯದಲ್ಲಿದ್ದು ವಿದ್ಯಾಭ್ಯಾಸವನ್ನು ಆರಂಭಿಸಿ, ನಂತರ ಆಗಿನ ಪ್ರಸಿದ್ಧ ಪಂಡಿತರಾಗಿದ್ದ ಶೇಷ ಸನಾತನರ ಶಿಷ್ಯನಾಗಿ ವೇದ, ವೇದಾಂತ, ಪುರಾಣ, ಶಾಸ್ತ್ರ, ಕಾವ್ಯಗಳ ಅಧ್ಯಯನ ಮಾಡಿ ಪಂಡಿತನಾಗಿ ಬಳಿಕ ತಮ್ಮ ಊರಿಗೆ ತೆರಳಿ ದೀನಬಂಧು ಪಾಠಕರ ಮಗಳಾದ ರತ್ನಾವಳಿಯನ್ನು ವಿವಾಹವಾದರು. ಇವರಿಗೆ ಪತ್ನಿಯೆಂದರೆ ಪಂಚಪ್ರಾಣ ಇವರ ಗೃಹಸ್ಥ ಜೀವನ ಹೆಚ್ಚು ಕಾಲ ನಡೆಯಲಿಲ್ಲ. ತೌರುಮನೆಗೆ ಹೋದ ಪತ್ನಿಯನ್ನು ಬಿಟ್ಟಿರಲಾರದೆ ಮಧ್ಯರಾತ್ರಿಯಲ್ಲಿ ಮಳೆಯಲ್ಲಿ ನೆನೆದುಕೊಂಡು ಮಾವನ ಮನೆಗೆ ಹೋದರು ಪತ್ನಿಯು ನಾಚಿಕೆಯಿಂದ ಈ ನನ್ನ ಶರೀರವನ್ನು ಪ್ರೀತಿಸುವ ಬದಲು ನೀವು ಶ್ರೀರಾಮನನ್ನು ಪ್ರೀತಿಸಿದ್ದರೆ ಭವಭೀತಿಯಿಂದ ಪಾರಾಗುತ್ತಿದ್ದಿರಿ ಎಂದು ಹೇಳಿದಳು. ಈ ಮಾತು ಅವರ ಮನಸ್ಸಿಗೆ ನಾಟಿ, ವೈರಾಗ್ಯ ಉಂಟಾಗಿ ತಕ್ಷಣವೇ ಕಾಶಿಗೆ ಹೋಗಿ ವಿರಕ್ತರಾದರು ಎಂಬ ಕತೆ ಪ್ರಚಲಿತವಾಗಿದೆ ಅಲ್ಲಿಂದ ಅಯೋಧ್ಯೆ, ಬೃಂದಾವನ, ಪುರಿ, ರಾಮೇಶ್ವರ, ದ್ವಾರಕಾ, ಬದರಿ ಕ್ಷೇತ್ರ ಗಳನ್ನು ಸಂದರ್ಶಿಸಿ ಅನಂತರ ಕೆಲವು ಕಾಲ ಕಾಶಿ ಮತ್ತು ಅಯೋಧ್ಯೆಯಲ್ಲಿದ್ದು ಭಕ್ತಿ ಮತ್ತು ಕಾವ್ಯರಚನೆಯಲ್ಲಿ ನಿರತರಾದರು ಆಂಜನೇಯನ ದರ್ಶನವನ್ನು ಪಡೆದು ಅವನ ಮೂಲಕ ಮೂರುಸಲ ಶ್ರೀರಾಮನ ದರ್ಶನ ಪಡೆದರು. ಇವರ ೧೨೫ ವರ್ಷಗಳ ಕಾಲದ ಜೀವಮಾನದಲ್ಲಿ ಕಬೀರ್, ರಾಯ್‌ದಾಸ್ ಮುಂತಾದವರ ಸತ್ಸಂಗವನ್ನು ಪಡೆದಿದ್ದರು. ಇವರ ಮೊದಲಿನ ಹೆಸರು ರಾಮಬೋಲಾ.

ತುಳಸೀದಾಸರು ೩೭ ಕೃತಿಗಳನ್ನು ರಚಿಸಿದರೆಂದು ಪ್ರತೀತಿ. ಇವುಗಳಲ್ಲಿ ದೋಹಾವಳೀ, ಗೀತಾವಳೀ, ಕೃಷ್ಣ ಗೀತಾವಳೀ, ಜಾನಕೀಮಂಗಳ್, ವಿನಯಪತ್ರಿಕಾ ಮುಂತಾದುವು ಪ್ರಸಿದ್ಧವಾದುವು. ಎಲ್ಲದಕ್ಕಿಂತ ಗೋಸ್ವಾಮಿ ತುಳಸೀದಾಸ್ ರಾಮಾಯಣವೆಂದು ಪ್ರಸಿದ್ಧವಾಗಿರುವ ರಾಮಚರಿತಮಾನಸವು ಅತ್ಯಂತ ಪ್ರಸಿದ್ಧ ವಾದುದು ಇದೊಂದು ಮಹಾಕಾವ್ಯ ತುಳಸೀದಾಸರು ಪ್ರಥಮತಃ ಭಕ್ತರು, ಅನಂತರ ಕವಿ. ಅವರ ಆರಾಧ್ಯದೇವರು ಶ್ರೀರಾಮ. ರಾಮನೇ ಪರಮಾತ್ಮ. ತುಳಸೀದಾಸರ ಪದ್ಯಗಳನ್ನು ನಾವು ಸಂಗೀತಕಚೇರಿಯಲ್ಲಿ ಕೇಳಬಹುದು.

**ತೂರ್ಯ**—ಮಹಾಕಾವ್ಯವಾದ ರಾಮಾಯಣದ ಕಾಲದಲ್ಲಿ ವಾದ್ಯ ಸಮೂಹಕ್ಕೆ ತೂರ್ಯ ಎಂಬ ಸಾಮಾನ್ಯ ಸಂಜ್ಞೆ ಇದ್ದಿತು ಅದರಲ್ಲಿ ಶಂಖ, ದುಂದುಭಿ, ಸುಘೋಷ ಮತ್ತು ವಿವಿಧ ವೇಣುವಾದ್ಯಗಳು ಸಮಾವೇಶಗೊಂಡಿದ್ದುವು. ರಾವಣನ ಅಂತಃಪುರದಲ್ಲಿಯ ಸಂಗೀತ ಸಾಮಗ್ರಿಗಳ ವಿವರಣೆಯಲ್ಲಿ ವೀಣಾ, ವಿಪಂಚಿ, ಮೃದಂಗ, ಮಡ್ಡುಕ, ಪಟಹ, ಪಣವ, ಡಿಂಡಿಮ ಮತ್ತು ಆಡಂಬರ ಎಂಬ ವಾದ್ಯ

ಗಳ ಉಲ್ಲೇಖವಿದೆ (ಸುಂದರಕಾಂಡ ೧೦. ೩೭-೪೫). ಪಾಣಿನಿಯ ಅನೇಕ ಸೂತ್ರಗಳಲ್ಲಿ ವೃಂದವಾದನಕ್ಕೆ ತೂರ್ಯ ಶಬ್ದವನ್ನು ಪ್ರಯೋಗಿಸಲಾಗಿದೆ. ತೂರ್ಯದಲ್ಲಿ ವೀಣಾವಾದ್ಯಕ್ಕೆ ಪ್ರಮುಖ ಸ್ಥಾನವಿದೆ.

**ತೂಲಿಕ್ಕ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಗ ಸ ರಿ ಗ ಪ ದ ನಿ ಸೆ

ಅ: ಸ ನಿ ದ ಪ ಗ ರಿ ಸ

**ತೇಜೋವತಿ**—ಈ ರಾಗವು ೭೨ನೆ ಮೇಳಕರ್ತ ಋಷಭಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ತೇಪ್ಪೆರು ಮಾಲ್ನಲ್ಲೂರು ಕೃಷ್ಣಭಾಗವತರು**—ಇವರು ತಮಿಳುನಾಡಿನ ಘನಂ ಕೃಷ್ಣಯ್ಯರ್‌ರವರ ಪ್ರಸಿದ್ಧ ಶಿಷ್ಯ ಮತ್ತು ಗಾಯಕರಾಗಿದ್ದರು

**ತೇವಾರಂ**—ಪ್ರಸಿದ್ಧ ಶೈವನಾಯನ್ಮಾರರಾದ ತಿರುಜ್ಞಾನ ಸಂಬಂಧರ್, ಅಪ್ಪರ್ (ತಿರುನಾವಕ್ಕರಸು) ಮತ್ತು ಸುಂದರಮೂರ್ತಿನಾಯನಾರರ ಪವಿತ್ರ ಭಕ್ತಿಗೀತೆಗಳಿಗೆ ತೇವಾರಂ ಎಂದು ಹೆಸರು. ಮೊದಲಿನ ಇಬ್ಬರು ನಾಯನಾರರು ಕ್ರಿ. ಶ. ೭ನೆ ಶತಮಾನದಲ್ಲೂ, ಕೊನೆಯವರು ೯ನೆ ಶತಮಾನದಲ್ಲೂ ಇದ್ದರು. ಈ ಭಕ್ತಿಗೀತೆಗಳು ತಮಿಳಿನ ಪವಿತ್ರ ಸಂಗೀತದಸಾರವಾಗಿವೆ. ೧೨೦೦ ವರ್ಷಗಳ ಹಿಂದೆ ಇದ್ದ ಸಂಗೀತವನ್ನು ಇವು ಪ್ರತಿಬಿಂಬಿಸುತ್ತವೆ. ಆ ಕಾಲದಲ್ಲಿ ಭಾರತಾದ್ಯಂತ ಒಂದೇ ವಿಧವಾದ ಸಂಗೀತ ಪದ್ಧತಿ ಇದ್ದಿತು ತಿರುಜ್ಞಾನಸಂಬಂಧರ್ ತಮ್ಮ ಮೂರನೆಯ ವಯಸ್ಸಿನಲ್ಲೇ ಗೀತವನ್ನು ಹಾಡಲು ತೊಡಗಿದರು

ತೇವಾರಂ ಗೀತೆಗಳು ದೇಶಿ ಸಂಗೀತದ ಉತ್ತಮ ನಿದರ್ಶನಗಳಾಗಿವೆ. ಪಣ್ ಎಂದರೆ ರಾಗ. ತೇವಾರಕಾರರು ಆಗ ಪ್ರಚಲಿತವಿದ್ದ ಪಣ್‌ಗಳಲ್ಲಿ ಹಾಡಿದರು. ಪಣ್‌ಗಳಿಗೆ ತಮ್ಮದೇ ಆದ ಆರೋಹಣ-ಅವರೋಹಣ, ವರ್ಜ್ಯ-ವರ್ಜಕ್ರಮ, ಜೀವ ಸ್ವರಗಳು, ನ್ಯಾಸಸ್ವರಗಳು, ರಕ್ತಿಪ್ರಯೋಗಗಳು, ದಾಟು ಪ್ರಯೋಗಗಳು, ವಿಶಿಷ್ಟ ಶ್ರುತಿಗಳು ಮತ್ತು ಗಮಕಗಳು, ರಾಗಗಳು ಪ್ರಾರಂಭವಾಗುವ ಸೂಕ್ತವಾದ ಸ್ವರಗಳು ಮುಂತಾದುವುಗಳಿದ್ದುವು ಪಣ್‌ಗಳಿಂದ ಔಡವ-ಷಾಡವ ಸಂಪೂರ್ಣ, ಶುದ್ಧ-ಛಾಯಾಲಗ-ಸಂಕೀರ್ಣ, ಉಪಾಂಗ-ಭಾಷಾಂಗ ಮುಂತಾದ ವರ್ಗೀಕರಣಕ್ಕೆ ದಾರಿಯಾಯಿತು. ಪಣ್‌ಗಳನ್ನು (೧) ಪಹಲ್ ಪಣ್— ಬೆಳಗಿನ ಹಾಡುಗಳು (೨) ಇರುವ ಪಣ್ ರಾತ್ರಿ ಕಾಲದ ಹಾಡುಗಳು ಮತ್ತು (೩) ಪೊದುಪ್ಪಣ್— ಸಾರ್ವಕಾಲಿಕ ರಾಗಗಳೆಂದು ವರ್ಗೀಕರಿಸಲಾಗಿತ್ತು. ತೇವಾರಂನ ಪಣ್‌ಗಳಲ್ಲಿ ಉತ್ತಮ ಭಾಷಾಂಗ ರಾಗಗಳು ದೊರಕುತ್ತವೆ. ಪಣ್ ಕೌಶಿಕಂ (ಭೈರವಿ),

ವಿಯುಗಕ್ಕುರಿಂಜಿ (ಸೌರಾಷ್ಟ್ರ) ಮತ್ತು ಮೇಘರಾಗಕುರಿಂಜಿ (ನೀಲಾಂಬರಿ) ಮುಂತಾದುವು ಇದಕ್ಕೆ ಉದಾಹರಣೆಗಳು. ಚಾರಿತ್ರಿಕವಾಗಿ ತೇವಾರಂ ಪಣ್‌ಗಳು ಪುರಾತನ ರಾಗಗಳು. ನಿಷಾದಾಂತ್ಯ ಮತ್ತು ಪಂಚಮಾಂತ್ಯ ರಾಗಗಳು ಜನಪದ ಸಂಗೀತಕ್ಕೆ ಸೇರಿದ ರಾಗಗಳು. ಈ ವರ್ಗಕ್ಕೆ ಸೇರಿದ ನಾದನಾಮಕ್ರಿಯ ಮತ್ತು ನವರೋಜ್ ತೇವಾರಂ ಪಣ್‌ಗಳಲ್ಲಿ ಕಂಡುಬರುತ್ತವೆ.

ಪುರಾತನ ತಮಿಳು ಸಂಗೀತದ ಶುದ್ಧಮೇಳವು ಹರಿಕಾಂಭೋಜಿ ಮೇಳವಾಗಿತ್ತು. ಆದ್ದರಿಂದ ತೇವಾರಂ ಗೀತಗಳು ಹೆಚ್ಚಾಗಿ ಹರಿಕಾಂಭೋಜಿ ಅಥವಾ ಶಂಕರಾಭರಣ ಮೇಳದ ಜನ್ಯರಾಗಗಳಲ್ಲಿವೆ. ಯಾಳ್ ವಾದ್ಯವನ್ನು ಶುದ್ಧಮೇಳ ಹರಿಕಾಂಭೋಜಿಗೆ ಶ್ರುತಿ ಮಾಡುತ್ತಿದ್ದರು. ಅವಶ್ಯವಿದ್ದಲ್ಲಿ ಮಧ್ಯಮ ಅಥವಾ ಪಂಚಮದ ತಂತಿಯನ್ನು ಆಧಾರ ಸ್ವರವನ್ನಾಗಿಸಿಕೊಂಡು ನುಡಿಸುತ್ತಿದ್ದರು. ತೇವಾರದ ಪಣ್‌ಗಳೆಲ್ಲವೂ ಜೀವ ರಾಗಗಳು. ಈ ಗೀತೆಗಳ ಸಾಹಿತ್ಯದಲ್ಲಿ ದ್ವಿತೀಯಾಕ್ಷರ ಪ್ರಾಸವಿದೆ ಸ್ವರಲಿಪಿ ಇಲ್ಲದಿದ್ದ ಆ ಕಾಲದಲ್ಲಿ ತೇವಾರಂಗಳನ್ನು ಗುರುವಿನಿಂದ ಶಿಷ್ಯರು ಭಾವಸಹಿತ ಸರಿಯಾಗಿ ಕಲಿತು ಪರಂಪರೆಯಿಂದ ನಮಗೆ ಬಂದಿವೆ ತೇವಾರಂಗಳನ್ನು ಹಾಡಲು ದೇವಾಲಯಗಳಲ್ಲಿ ದತ್ತಿಗಳಿದ್ದುವು. ಆದ್ದರಿಂದ ಇವುಗಳನ್ನು ಹಾಡುವ ವ್ಯಕ್ತಿಯುಳ್ಳ ಒದುವರ್ ಎಂಬ ವರ್ಗವೇ ಬೆಳೆದು ಬಂದಿತು ಇವನ್ನು ಸ್ತ್ರೀಯರೂ ಪುರುಷರೂ ಎಲ್ಲಾ ಮುಖ್ಯ ದೇವಾಲಯಗಳಲ್ಲಿ ಹಾಡುವ ರೂಢಿ ಬೆಳೆಯಿತು. ತೇವಾರಂಗಳ ಹಿಂದಿನ ಸಂಗೀತವನ್ನು ಸ್ವಲ್ಪವೂ ಕೆಡಿಸದೆ, ಬದಲಾಯಿಸದೆ ಕಾಪಾಡಿಕೊಂಡು ಬಂದರು. ಯಾರಾದರೂ ಒದುವರ್ ಬದಲಾಯಿಸಿದರೆ ಅವರು ತನ್ನ ಕೆಲಸವನ್ನು ಕಳೆದುಕೊಳ್ಳುವ ಸಂಭವವಿತ್ತು. ಮಧ್ಯಯುಗದಲ್ಲಿ ತೇವಾರಂ ಭಜನೆಗಳು ಮತ್ತು ಕಚೇರಿಗಳು ಉತ್ಸವಗಳ ಅವಿಭಾಜ್ಯ ಅಂಗವಾಗಿದ್ದುವು ನವಸಂಧಿ ಪೂಜೆಗಳಲ್ಲಿ ಯಾವ ಪಣ್‌ಗಳನ್ನು ಹಾಡಬೇಕು ಎಂಬುದನ್ನು ವಿಧಿಸಲಾಗಿದ್ದುದರಿಂದ ಒದುವರ್‌ಗಳು ಅಂತಹ ಸಂದರ್ಭಗಳಲ್ಲಿ ಆಯಾ ಸ್ಥಳಕ್ಕೆ ಸಂಬಂಧಿಸಿದ ತೇವಾರಂಗಳನ್ನು ಗೊತ್ತಾದ ಪಣ್‌ಗಳಲ್ಲಿ ಹಾಡುತ್ತಿದ್ದರು. ಪುರಾತನ ಪಣ್‌ಗಳಿಗೆ ಸರಿಸಮನಾದ ಆಧುನಿಕ ರಾಗಗಳು ಈ ರೀತಿ ಇವೆ :

| ಪಣ್ | ರಾಗ |
|---|---|
| ಪಂಚಮಂ | ಆಹಿರಿ |
| ಶಿಕಮರಂ | ನಾದನಾಮಕ್ರಿಯ |
| ಪುರನಿರ್ಮೈ | ಭೂಪಾಳಿ |
| ವಿಯಗಕ್ಕುರಂಜಿ | ಸೌರಾಷ್ಟ್ರ |
| ಕೌಶಿಕಂ | ಭೈರವಿ |
| ಶಂತುರುಟ್ಟಿ | ಮಧ್ಯಮಾವತಿ |
| ಗಾಂಧಾರ ಪಂಚಮಂ | ಕೇದಾರಗೌಳ |

| | |
|---|---|
| ಅಂಡಲಿಕ್ಕುರುಂಜಿ | ಸಾಮ |
| ಟಕ್ಕೇಶಿ | ಕಾಂಭೋಜಿ |
| ಶೆವ್ವಾಯಿ | ಯದುಕುಲ ಕಾಂಭೋಜಿ |
| ಪಯಂಪಂಜುರಂ | ಶಂಕರಾಭರಣಂ |
| ಕೊಲ್ಲಿ | ನವರೋಜ್ |
| ಮೇಗರಾಗ ಕುರಿಂಜಿ | ನೀಲಾಂಬರಿ |
| ನಟ್ಟಪಾಡೈ | ನಾಟ |
| ಸಾದರಿ | ಪಂತುವರಾಳಿ |

**ತೇನಕ**—ಹಿಂದಿನ ಕಾಲದ ಒಂದು ಬಗೆಯ ಹಾಡಾದ ಪ್ರಬಂಧದ ಒಂದು ಅಂಗ.

**ತೊಡೆ**—ಭರತನಾಟ್ಯದಲ್ಲಿ ತೊಡೆಯ ವಿವಿಧ ಚಲನಾಕ್ರಿಯೆಗಳು ಐದು ವಿಧವಾಗಿವೆ ಅವು –ಹಿಮ್ಮಡಿಗಳ ಸ್ಪಂದನದಿಂದ ಕ್ಷಣಕ್ಷಣಕ್ಕೂ ನಡುಗುತ್ತಿರುವ ತೊಡೆಗಳು ಕಂಪನ ನಡೆಯುತ್ತಿರುವಾಗ ಮೊಳಕಾಲು ತೊಡೆಯವರೆಗೂ ಬಂದರೆ ಅದು ವಲನ ಚೇಷ್ಟಾರಹಿತವಾದ ತೊಡೆಯು ಸ್ತಂಭನ. ತೊಡೆಗಳ ಮಧ್ಯಕ್ಕೆ ತಗಲುವಂತೆ ಮೊಳಕಾಲನ್ನು ಬಗ್ಗಿಸಿ ತಿರುಗಿಸುತ್ತಿದ್ದರೆ ಅದು ಉದ್ವರ್ತನ, ನಡೆಯುವಾಗ ಹಿಮ್ಮಡಿಗಳು ತೊಡೆಗೆ ತಗಲುತ್ತಿರುವಾಗ ಉಂಟಾಗುವ ವಿಭೇದವು ವಿವರ್ತನ.

**ತೋಡಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ತೋಮರಧಾರಿಣಿ**—ಈ ರಾಗವು ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ತಂಜಾವೂರು ಕೃಷ್ಣಭಾಗವತರು** (೧೮೪೧–೧೯೦೩)—ಹರಿಕಥಾ ಕಾಲಕ್ಷೇಪವು ಉನ್ನತ ಮಟ್ಟವನ್ನು ಮುಟ್ಟಲು ಬಹುಮಟ್ಟಿಗೆ ತಂಜಾವೂರು ಕೃಷ್ಣ ಭಾಗವತರು ಕಾರಣರು. ಇವರು ದಕ್ಷಿಣ ಭಾರತದ ಕಥಾಕಾಲಕ್ಷೇಪದ ಜನಕನೆಂದು ಪ್ರಸಿದ್ಧರಾಗಿದ್ದಾರೆ. ಪದಗಳಿಗೆ ಕ್ಷೇತ್ರಜ್ಞ, ತಾನವರ್ಣಕ್ಕೆ ಆದಿ ಅಪ್ಪಯ್ಯ, ಸ್ವರ ಜತಿಗೆ ಶ್ಯಾಮಾಶಾಸ್ತ್ರಿ, ಕೃತಿಗಳಿಗೆ ತ್ಯಾಗರಾಜರಿದ್ದಂತೆ ಹರಿಕಥೆಗೆ ಕೃಷ್ಣಭಾಗವತರು ಸೀಮಾಪುರುಷರು.

ತಂಜಾವೂರಿನ ಮರಾಠ ದೊರೆಗಳ ಕಾಲದಲ್ಲಿ ಮಹಾರಾಷ್ಟ್ರದಿಂದ ಹರಿದಾಸರೂ ಮತ್ತು ಭಾವರೆಂಬುವರು ಹಲವು ಮಂದಿ ಬರುತ್ತಿದ್ದರು. ಇವರೆಲ್ಲರೂ ಸಮರ್ಥ

ರಾಮದಾಸ್, ತುಕಾರಾಂ, ನಾಮದೇವ್, ಏಕನಾಥ ಮುಂತಾದ ಸಂತರ ಭಕ್ತಿ ಪಂಥದ ಪ್ರಚಾರಕರೂ ವಿದ್ವಾಂಸರೂ ಆಗಿದ್ದರು. ಇವರ ಕಥಾಶ್ರವಣದಲ್ಲಿ ದಿಂಡಿ, ಓವಿ, ಅಭಂಗ, ಲಾವಣಿ, ಧ್ರುಪದ್ ಮತ್ತು ತುಮ್ರಿಗಳನ್ನೂ ವಿವಿಧ ರೀತಿಯ ಸಂಗೀತ ರಚನೆಗಳನ್ನೂ ಕಲಾತ್ಮಕವಾಗಿ ಆಕರ್ಷಕವಾಗಿ ಬಳಸುತ್ತಿದ್ದರು. ಇವರ ಕಥಾ ಕಾಲಕ್ಷೇಪ ತಂತ್ರವು ತಂಜಾವೂರಿನ ವಿದ್ಯಾವಂತ ಸಮಾಜದ ಮೇಲೆ ಅಪಾರ ಪರಿಣಾಮ ಬೀರಿತು. ತಂಜಾವೂರಿನ ನಿವೃತ್ತ ಮಂತ್ರಿಯೂ ವಿದ್ವಾಂಸರೂ ಕಲಾಪೋಷಕರೂ ಆಗಿದ್ದ ಪೆರಿಯಸ್ವಾಮಿಶಾಸ್ತ್ರಿ ಅಥವಾ ಪೆರಿಯಣ್ಣ ಎಂಬುವರು ಮಹಾರಾಷ್ಟ್ರ ಪದ್ಧತಿಯ ಹರಿಕಥಾ ಕೌಶಲ್ಯದ ಮುಖ್ಯಾಂಶಗಳನ್ನು ಅಳವಡಿಸಿ ದಕ್ಷಿಣದ ಶೈಲಿಯನ್ನು ರೂಪಿಸಬೇಕೆಂಬ ಹಂಬಲವುಳ್ಳವರಾಗಿದ್ದರು. ದಿನವೂ ಹರಿ ಕಥೆಗೆ ಬರುತ್ತಿದ್ದ ಹದಿನಾಲ್ಕು ವರ್ಷದ ಬಾಲಕ ಕೃಷ್ಣ ಭಾಗವತರ ಮೇಲೆ ಅವರ ದೃಷ್ಟಿ ಬಿದ್ದಿತು ಬಾಲಕನನ್ನು ತನ್ನ ಆಶ್ರಯಕ್ಕೆ ತೆಗೆದುಕೊಂಡು ಅವನಿಗೆ ಸಂಗೀತ, ನೃತ್ಯ ತಮಿಳು, ಸಂಸ್ಕೃತ, ತೆಲುಗು, ಕನ್ನಡ, ಮರಾಠಿ ಮತ್ತು ಹಿಂದಿ ಇದಲ್ಲದೆ ವ್ಯಾಯಾಮದಲ್ಲಿ ಆರು ವರ್ಷಗಳ ಕಾಲ ಶಿಕ್ಷಣ ಕೊಡಿಸಿದರು ಸಂಗೀತವನ್ನೂ ತ್ಯಾಗರಾಜರ ಕೃತಿಗಳನ್ನೂ ತ್ಯಾಗರಾಜರ ಶಿಷ್ಯರಾದ ತಿಲ್ಲೈಸ್ಥಾನಂ ರಾಮಯ್ಯಂಗಾರ್ಯ ರಲ್ಲಿ ಕಲಿತರು. ೧೮೭೧ ರಲ್ಲಿ ತಮಿಳಿನಲ್ಲಿ ಇವರು ನಡೆಸಿದ ಪ್ರಥಮ ಕಥಾಕಾಲಕ್ಷೇಪ ರಾಧಾ ಕಲ್ಯಾಣಂ. ಈ ರೀತಿ ಕಥಾಕಾಲಕ್ಷೇಪದಲ್ಲಿ ಕ್ರಾಂತಿ ಪ್ರಾರಂಭವಾಯಿತು.

ಕೃಷ್ಣ ಭಾಗವತರು ಉತ್ತರ ಮತ್ತು ದಕ್ಷಿಣದ ಶೈಲಿಗಳನ್ನು ತಮ್ಮ ಕಥಾಕಾಲ ಕ್ಷೇಪದಲ್ಲಿ ಸಮ್ಮಿಳನಗೊಳಿಸಿದರು. ಇವುಗಳಲ್ಲಿ ಭಾವ ಮತ್ತು ರಸ ತುಂಬಿರುತ್ತಿತ್ತು. ಆದ್ದರಿಂದ ಶ್ರೋತೃಗಳಿಗೆ ಕಥಾಲೋಕದಲ್ಲಿ ವಿಹರಿಸುತ್ತಿರುವಂತೆ ಅನುಭವವಾಗುತ್ತಿತ್ತು. ತತ್ಕಾರಣ ಪಂಡಿತಪಾಮರರಿಗೆ ಆಕರ್ಷಣೀಯವಾಗಿತ್ತು. ಕಥೆಯಲ್ಲಿ ಬರುವ ಘಟನೆಯನ್ನು ಬಳಸಿಕೊಂಡು ಜತಿಗಳಿಗೆ ನರ್ತನ ಮಾಡುತ್ತಿದ್ದರು. ಇವರ ಸಂಗೀತ ದಲ್ಲಿ ಶ್ರುತಿ ಶುದ್ಧತೆ ಎದ್ದು ಕಾಣುತ್ತಿತ್ತು. ಕಾಲಿನ ಗೆಜ್ಜೆಗಳ ಕಿಣಿಕಿಣಿಯು ಶ್ರುತಿಗೆ ಸರಿಯಾಗಿರುತ್ತಿತ್ತು. ತಾಳವೂ ಸಹ ಆಧಾರ ಶ್ರುತಿಗೆ ಸರಿಯಾಗಿರುತ್ತಿತ್ತು. ಆದ್ದರಿಂದ ಇವರ ಗಾಯನಕ್ಕೆ ಮಾರುಹೋಗಿ ಮಹಾವೈದ್ಯನಾಥ ಅಯ್ಯರ್ ಮುಂತಾದ ಹಿರಿಯ ವಿದ್ವಾಂಸರು ಪ್ರಶಂಸೆ ಮಾಡಿದರು ಆಗಿನ ಕಾಲದಲ್ಲಿ ಎಲ್ಲೆಲ್ಲೂ ಇವರ ಕಥಾ ಕಾಲಕ್ಷೇಪಕ್ಕೆ ಬೇಡಿಕೆಯಿತ್ತು. ಇವರಿಗೆ ಸಂದ ಗೌರವ, ಸನ್ಮಾನಗಳೂ ಅಪಾರ. ತಂಜಾವೂರು ಪಂಚಾಪಕೇಶ ಭಾಗವತರು ಮತ್ತು ಮರುದಪ್ಪ ಇವರ ಸಹಗಾಯಕ ರಾಗಿದ್ದರು. ಕೃಷ್ಣಭಾಗವತರು ತೇಜಸ್ವಿ ಹಾಗೂ ಆಕರ್ಷಕ ವ್ಯಕ್ತಿಯಾಗಿದ್ದರು.

**ತಂಜಾವೂರು ಸೋದರ ಚತುಷ್ಟಯ** — ಚಿನ್ನಯ್ಯ, ಪೊನ್ನಯ್ಯ, ವಡಿವೇಲು ಮತ್ತು ಶಿವಾನಂದಂ ಎಂಬ ನಾಲ್ವರು ಸಹೋದರರು ಪ್ರಸಿದ್ಧ ಸಂಗೀತ ವಿದ್ವಾಂಸರೂ, ನಾಟ್ಯಾಚಾರ್ಯರೂ ಆಗಿದ್ದರು. ತಂಜಾವೂರಿನ ದೇವಾಲಯದಲ್ಲಿ ಸಂಗೀತ ಮತ್ತು ನಾಟ್ಯವಿದ್ವಾಂಸರಾಗಿದ್ದರು ಮತ್ತು ಮುತ್ತುಸ್ವಾಮಿದೀಕ್ಷಿತರ ಶಿಷ್ಯ

ರಾಗಿದ್ದರು. ಚಿನ್ನಯ್ಯನವರು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದರು. ಪೊನ್ನಯ್ಯ ಮತ್ತು ಶಿವಾನಂದಂ ತಂಜಾವೂರಿನ ಶರಭೋಜಿ ಮಹಾರಾಜನ ಆಸ್ಥಾನದಲ್ಲೂ, ವಡಿವೇಲು ತಿರುವಾಂಕೂರಿನ ಸ್ವಾತಿ ತಿರುನಾಳ್ ಮಹಾರಾಜರ ಆಸ್ಥಾನದಲ್ಲೂ ವಿದ್ವಾಂಸರಾಗಿದ್ದರು. ಇವರು ವಾಗ್ಗೇಯ ಕಾರರಾಗಿದ್ದರು ೧೮ ಮತ್ತು ೧೯ನೆ ಶತಮಾನಗಳಲ್ಲಿ ಮೈಸೂರು, ತಂಜಾವೂರು ಮತ್ತು ತಿರುವನಂತಪುರವು ಸಂಗೀತ ಮತ್ತು ನಾಟ್ಯಕಲಾಕೇಂದ್ರಗಳಾಗಿದ್ದುವು.

**ತಂಬೂರಿ** —ತಂಬೂರಿಯು ಸಂಗೀತ ಕಚೇರಿಯ ಮುಖ್ಯವಾದ ಶ್ರುತಿವಾದ್ಯ. ಟೊಳ್ಳಾಗಿರುವ ಕೊಡದ ಚೂಪಾದ ಭಾಗಕ್ಕೆ ಟೊಳ್ಳಾದ ದಂಡಿಯನ್ನು ಬಿಗಿಯಾಗಿ ಮರದ ಮೊಳೆಗಳಿಂದ ಸೇರಿಸಲಾಗಿದೆ. ಕೊಡದ ಮತ್ತು ದಂಡಿಯ ಮೇಲ್ಭಾಗವನ್ನು ಕರೀಮರದ ಪಟ್ಟಿಯಿಂದ ಮುಚ್ಚುವುದುಂಟು. ದಂಡಿಗೆ ನೇರವಾಗಿ, ಕೊಡ ಅಥವಾ ಕಾಯಿ, ಅದಕ್ಕೆ ಸೇರಿದಂತೆ ಹೊರಭಾಗಕ್ಕೆ ಒಂದು ಜಗುಲಿ ಅಥವಾ ಗಡ್ಡ ಹೊಂದಿರುತ್ತದೆ. ಇದರಲ್ಲಿ ಸಮದೂರದಲ್ಲಿ ನಾಲ್ಕು ರಂಧ್ರಗಳಿರುತ್ತವೆ. ದಂಡಿಯ ಬಿಡಿ ಭಾಗದ ತುದಿಯಿಂದ ಸುಮಾರು ಎಂಟು ಅಂಗುಲ ದೂರದಲ್ಲಿ, ದಂಡಿಯ ಪಟ್ಟಿಯ ಅಡ್ಡಗಲವಲ್ಲಿ ಕೊಂಬಿನ ಅಥವಾ ದಂತದ ಮೇರು ಹೂಳಲ್ಪಟ್ಟಿರುತ್ತದೆ ಇದರಲ್ಲೂ ಸಮದೂರದಲ್ಲಿ ನಾಲ್ಕು ರಂಧ್ರಗಳಿರುತ್ತವೆ. ಈ ಮೇರುವಿನ ಆಚೆ ದಂಡಿಯ ಬಿಡಿ ಭಾಗದ ಪಕ್ಕಗಳಲ್ಲಿ ಎರಡು ಬಿರಡೆಗಳೂ, ಮೇಲ್ಭಾಗದಲ್ಲಿ ಎರಡು ಬಿರಡೆಗಳು ಇರುತ್ತವೆ. ಎದೆಹಲಗೆಯ ಕೇಂದ್ರಭಾಗವಲ್ಲಿ ಸೇತುವೆಯ ಆಕಾರದ ಸಣ್ಣ 'ಕುದುರೆ' ಇರುತ್ತದೆ. ಇದು ದಂತ ಅಥವಾ ಕೊಂಬಿನಿಂದ ಮಾಡಿರಬಹುದು. ಕಾಯಿಯ ಗಡ್ಡ ನಾಲ್ಕು ರಂಧ್ರಗಳಲ್ಲಿ ನಾಲ್ಕು ತಂತಿಗಳನ್ನು ಕಟ್ಟಿ ಕ್ರಮವಾಗಿ ನಾಲ್ಕು ಮಣಿಗಳ ರಂಧ್ರಗಳಲ್ಲಿ ತೂರಿಬಂದು ಕುದುರೆಯ ಮೇಲಿನ ನಾಲ್ಕು 'ಗಾಡಿ'ಗಳಲ್ಲಿ ತೂರಿಬಂದು ಹಾಗೆಯೇ ಮೇರುವಿನ ನಾಲ್ಕು ರಂಧ್ರಗಳಲ್ಲಿ ತೂರಿಸಿ ಕ್ರಮವಾಗಿ ನಾಲ್ಕು ಬಿರಡೆಗಳಿಗೆ ಕಟ್ಟಲಾಗಿದೆ. ಈ ನಾಲ್ಕು ತಂತಿಗಳು ಕ್ರಮವಾಗಿ ಬಲದಿಂದ ಎಡಕ್ಕೆ ಪಂಚಮ, ಸಾರಣೆ, ಅನುಸಾರಣೆ ಮತ್ತು ಮಂದ್ರ ಎಂದು ಕರೆಯಲ್ಪಡುತ್ತವೆ. ಪಂಚಮ ಮತ್ತು ಸಾರಣೆಯ ಹಾಗೂ ಅನುಸಾರಣೆಯ ತಂತಿಗಳು ಉಕ್ಕಿನವು. ಮಂದ್ರದ ತಂತಿ ಹಿತ್ತಾಳೆಯದು.

ಶಾರೀರಕ್ಕೆ ಅಥವಾ ಸಂಗೀತ ನುಡಿಸುವ ವಾದ್ಯಕ್ಕೆ ಬೇಕಾಗುವ ಆಧಾರ ಷಡ್ಜಕ್ಕೆ ಸಾರಣೆ, ಅನುಸಾರಣೆ ಮತ್ತು ಮಂದ್ರದ ತಂತಿಗಳನ್ನು ಶುದ್ಧವಾಗಿ ಒಂದೇ ಸ್ವರವನ್ನು ಕೊಡುವಂತೆ ಆಯಾ ಬಿರಡೆಗಳನ್ನು ತಿರುಗಿಸಬೇಕು ಈ ಆಧಾರಷಡ್ಜಕ್ಕೆ ತಗ್ಗಿನ ಮಂದ್ರಸ್ಥಾಯಿ ಪಂಚಮ ಸ್ವರಕ್ಕೆ ಸರಿಯಾಗಿ ಪಂಚಮ ತಂತಿಯನ್ನು ಶ್ರುತಿಗೊಳಿಸಬೇಕು ಮಂದ್ರ, ಸಾರಣೆ ಮತ್ತು ಅನುಸಾರಣೆ ತಂತಿಗಳಲ್ಲಿ ಯಾವುದೊಂದನ್ನು ಮೀಟಿದರೂ ಉಳಿದ ಎರಡು ತಂತಿಗಳೂ ಸ್ನೇಹದಿಂದ ಅಥವಾ ಅನುರಣನೆಯಿಂದ ತಮ್ಮಷ್ಟಕ್ಕೆ ತಾವೇ ಆಧಾರಷಡ್ಜ ಧ್ವನಿ ಮಾಡಿದರೆ ಆಗ ಶುದ್ಧವಾದ ಶ್ರುತಿ

ಗೂಡಿತೆಂದು ನಿರ್ಧರವಾಗುತ್ತದೆ. ಹೀಗೆ ಶ್ರುತಿ ಮಾಡಿದ ನಂತರ ಕುದುರೆಯ ಮೇಲೆ ಹಾದುಹೋಗಿರುವ ತಂತಿಗಳ ಕೆಳಗೆ, ನಾಲ್ಕು ಚೂರು ಹತ್ತಿಯ, ರೇಷ್ಮೆ ಅಥವಾ ಉಣ್ಣೆ ದಾರಗಳನ್ನು ಸೇರಿಸಿ ಒಂದೊಂದು ದಾರವನ್ನೂ ಮುಂದಕ್ಕೂ ಹಿಂದಕ್ಕೂ ಜರುಗಿಸುತ್ತಾ ಆಯಾ ತಂತಿ ಮೀಟಿದರೆ, ಒಂದು ಸ್ಥಾನದಲ್ಲಿ ಒಂದೊಂದು ತಂತಿಯೂ ಜೀರುಗೂಡಿ ವರ್ಧಿಸಿದ ನಾದದಿಂದ ಧ್ವನಿ ಮಾಡುತ್ತದೆ ಇದಕ್ಕೆ ಜೀವಾಳ ಕಟ್ಟುವುದು ಎಂದು ಹೆಸರು.

ತಂಬೂರಿಯ ಪುರಾತನ ಹೆಸರು ಬ್ರಹ್ಮವೀಣೆ ಹಿಂದೆ ಇದರ ಕೊಡವು ಒಂದು ಪೆಟ್ಟಿಗೆ ಆಕಾರದಲ್ಲಿತ್ತು. ಪುರಾಣಗಳಲ್ಲಿ ತುಂಬುರುವು ತಂಬೂರಿನಾದಲೋಲ. ಅವನೇ ಈ ವಾದ್ಯವನ್ನು ಆವಿಷ್ಕರಿಸಿದನು. ಮೊಗಲರ ಕಾಲದಲ್ಲಿ ಅಂದರೆ ತಾನ್ ಸೇನನ ಕಾಲದಲ್ಲಿ ಪೆಟ್ಟಿಗೆಗೆ ಬದಲು ಸೋರೆಕಾಯನ್ನು ಅಳವಡಿಸಲಾಯಿತು. ತಂ ಬ್ರೂಹಿ–ಅವನನ್ನು ಹೇಳು ಅಂದರೆ ದೇವರನ್ನು ಕುರಿತು ಹೇಳು ಎಂಬ ಅರ್ಥ ಕೊಡುವ ಪದದಿಂದ ತಂಬೂರಿ ಎಂಬ ಹೆಸರು ಬಂದಿತು ಎಂದು ಹೇಳುತ್ತಾರೆ. ಇದಕ್ಕೆ ತಂಬೂರಾ, ತಾನಪುರಾ ಎಂಬ ಹೆಸರುಗಳೂ ಇವೆ ಕೊಡಕ್ಕೆ ತುಂಬಾ ಎನ್ನುವರು. ಅದರ ಮೇಲೆ ಮರದ ತೆಳುವಾದ ಪಟ್ಟಿ ಕೂಡಿಸಿರುವುದಕ್ಕೆ ತಬಲಿ ಎನ್ನುವರು.

ಉತ್ತರ ಭಾರತದಲ್ಲಿಯ ತಾನ್‌ಪುರಾದ ತುಂಬಾವನ್ನು ಮಾಟವಾದ ಸೋರೆ ಕಾಯಿಗಳಿಂದ ಮಾಡುತ್ತಾರೆ. ಬೊಂಬಾಯಿ ಮತ್ತು ಮಿರಜ್‌ನಲ್ಲಿ ಇಂತಹ ತಂಬೂರಿಗಳು ಪ್ರಸಿದ್ಧ. ಇದು ಮೂರುವರೆ ಅಡಿಗಳಿಂದ ಐದು ಅಡಿ ಉದ್ದವಿರುತ್ತದೆ. ದಕ್ಷಿಣದ ತಂಬೂರಿಗಳನ್ನು ಹಲಸಿನ ಮರದಿಂದ ಮಾಡುತ್ತಾರೆ ಮಾಟವಾದ ಕೊಡಗಳನ್ನು ತಯಾರಿಸಿ ಕೆತ್ತನೆಯ ಕೆಲಸವುಳ್ಳ ದಂತದ ಪಟ್ಟಿಗಳಿಂದ ಅಲಂಕರಿಸುತ್ತಾರೆ ಮೈಸೂರು, ತಂಜಾವೂರು ಮತ್ತು ತಿರುವನಂತಪುರವು ಇಂತಹ ತಂಬೂರಿಗಳಿಗೆ ಪ್ರಸಿದ್ಧ

**ತಂತೀವಾದ್ಯಗಳು**—ತತ ಅಥವಾ ತಂತೀವಾದ್ಯಗಳನ್ನು ಮೂರು ವಿಧವಾಗಿ ವಿಂಗಡಣೆ ಮಾಡಲಾಗಿದೆ

(೧) ತಂತಿಗಳನ್ನು ಮೀಟುವುದರಿಂದ ನಾದೋತ್ಪತ್ತಿಯಾಗುವ ವಾದ್ಯಗಳು. ಉದಾ. ವೀಣೆ, ರುದ್ರವೀಣೆ, ಸಿತಾರ್, ಸ್ವರಬತ್, ಸಾರೋಡ್, ನಂದುನಿ, ಗಿಟಾರ್. ಶ್ರುತಿವಾದ್ಯಗಳಾದ ಏಕ್‌ತಾರ್ ಮತ್ತು ತಂಬೂರಿ ಈ ಗುಂಪಿಗೆ ಸೇರಿವೆ.

(೨) ಕಮಾನಿನಿಂದ ನುಡಿಯುವ ವಾದ್ಯಗಳು. ಉದಾ. ಪಿಟೀಲು, ಸಾರಂಗಿ, ದಿಲ್ರುಬ, ಬಾಲಸರಸ್ವತಿ ಮತ್ತು ಎಸ್ರಾಜ್ ಕಮಾನು ಅಥವಾ ಬೇರೆ ಉಜ್ಜುವ ವಸ್ತುಗಳಿಂದ ತಂತಿಗಳು ಕಂಪಿಸಲ್ಪಟ್ಟು ಧ್ವನಿಕೊಡುವ ವಾದ್ಯಗಳು ಎರಡು ಬಗೆ.

(a) ಗೋಟುವಾದ್ಯದಂತೆ ಒಂದು ಮರದ ತುಂಡಿನಿಂದ ನುಡಿಸಲ್ಪಡುವ ವಾದ್ಯಗಳು. ಉದಾ. ಬಾಲಕೋಕಿಲ, ಬುಲ್‌ಬುಲ್ ತರಂಗ್.

(b) ವೀಣೆ, ಸಿತಾರ್, ದಿಲ್ರುಬಗಳಂತೆ ಮೆಟ್ಟಿಲುಗಳ ಮೇಲೆ ನುಡಿಸುವಂತಹವು.

(೩) ಸುತ್ತಿಗೆ, ಕೊಡತಿ ಅಥವಾ ಎರಡು ಕಡ್ಡಿಗಳ ಸಹಾಯದಿಂದ ಧ್ವನಿ ಉತ್ಪತ್ತಿಯಾಗುವುದು. ಉದಾ : ಪಿಯಾನೋ, ಸ್ವರಮಂಡಲ.

**ತಂಜಾವೂರಿನ ನಾಯಕ ದೊರೆಗಳು—**

ಶೇವಪ್ಪನಾಯಕ (ಕ್ರಿ. ಶ. ೧೫೩೦–೧೫೭೨)
ಅಚ್ಯುತಪ್ಪನಾಯಕ (ಕ್ರಿ. ಶ. ೧೫೭೨–೧೬೧೪)
ರಘುನಾಥನಾಯಕ (ಕ್ರಿ. ಶ. ೧೬೧೪–೧೬೩೪)
ವಿಜಯರಾಘವನಾಯಕ (ಕ್ರಿ. ಶ. ೧೬೩೪–೧೬೭೩)

**ಮರಾಠ ದೊರೆಗಳು—**

ಏಕೋಜಿ (ಕ್ರಿ. ಶ. ೧೬೭೬–೧೬೮೩)
ಷಾಹಜಿ (ಕ್ರಿ ಶ. ೧೬೮೪–೧೭೧೦)
ಸರ್ಫೋಜಿ (ಕ್ರಿ. ಶ. ೧೭೧೧–೧೭೨೮)
ತುಕ್ಕೋಜಿ (ತುಳಜಾಜಿ) (ಕ್ರಿ. ಶ. ೧೭೨೯–೧೭೩೫)
ಬುವಾಸಾಹೇಬ್ (ಕ್ರಿ. ಶ. ೧೭೩೫–೧೭೩೬)
ಪ್ರತಾಪಸಿಂಹ (ಕ್ರಿ. ಶ. ೧೭೪೧–೧೭೬೪)
ತುಳಜಾಜಿ II (ಕ್ರಿ. ಶ. ೧೭೬೫–೧೭೮೭)
ಅಮರಸಿಂಹ ಮಹಾರಾಜ (ಕ್ರಿ. ಶ. ೧೭೮೭–೧೭೯೮)
ಶರಭೋಜಿ (ಕ್ರಿ. ಶ. ೧೭೯೮–೧೮೩೨)
ಶಿವಾಜಿ (ಕ್ರಿ. ಶ. ೧೮೩೩–೧೮೫೫)

**ತಂತ್ರೀಲೀಲ**—ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ.

ಆ: ಸ ರಿ ಗ ಪ ಮ ದ ನಿ ಸ

ಅ: ಸ ನಿ ದ ಪ ಗ ರಿ ಸ

**ತುಂಗನಾಗ**—ಈ ರಾಗವು ೨೬ನೆ ಮೇಳಕರ್ತ ಚಾರುಕೇಶಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ಗ ರಿ ಮ ಗ ಸ

**ತುಂಬಾಕಿನಾರ**—ಕಾಶ್ಮೀರದಲ್ಲಿ ಈ ವಾದ್ಯವು ಪ್ರಚಲಿತವಾಗಿದೆ. ನೀರು ತುಂಬುವ ಉದ್ದವಾದ ಹೂಜಿಯ ತಳವನ್ನು ತೆಗೆದು ಅದಕ್ಕೆ ಚರ್ಮವನ್ನು ಬಿಗಿಯಲಾಗಿದೆ. ವಾದ್ಯವನ್ನು ಎಡ ಬಗಲಲ್ಲಿ ಹಿಡಿದು ಬಲಗೈಯಿಂದ ಬಾರಿಸುವರು. ವಾದಕರು ನೆಲದ ಮೇಲೆ ಕುಳಿತು ಎಡತೊಡೆಯ ಹತ್ತಿರ ವಾದ್ಯವನ್ನಿರಿಸಿ ಎರಡು ಕೈಯಿಂದ ಬಾರಿಸುವರು. ಕಾಶ್ಮೀರಿ ಜನಪದ ಗೀತಗಳಿಗೆ

ರಬಾಬ್, ಸಾರ್ಙ್ಗಿ, ಢೋಲಕ್, ಘಟಾ ಇತ್ಯಾದಿ ವಾದ್ಯಗಳೊಂದಿಗೆ ಇದನ್ನು ಬಾರಿಸಲಾಗುವುದು.

**ತುಂಬುರು**—ಪುರಾಣಗಳಲ್ಲಿ ಉಕ್ತವಾಗಿರುವ ಗಾಯಕ.

**ತಾಂಡವನೃತ್ಯ**—ತಾಂಡವವು ಸಂಹಾರ ರೂಪವಾದುದು ಮತ್ತು ಶಿವಪರವಾದುದೆಂದು ಶಂಕರಾಚಾರ್ಯರು ಸ್ಪಷ್ಟಪಡಿಸಿದ್ದಾರೆ. ಭರತಾಚಾರ್ಯನ ಸ್ನೇಹಿತನಾದ ತಂಡು ಎಂಬ ಋಷಿಗೆ ಪರಮೇಶ್ವರನು ಕಲಿಸಿದ ನಾಟ್ಯಕ್ಕೆ 'ತಾಂಡವ' ಎಂದು ಹೆಸರು ಬಂದಿತೆಂದು ಕೆಲವರ ಅಭಿಪ್ರಾಯ. ತಾಂಡವ ನೃತ್ಯದಲ್ಲಿ ಆನಂದ, ಸಂಧ್ಯಾ, ತ್ರಿಪುರ ಸಂಹಾರ, ಶೃಂಗಾರ, ಉಮಾ, ಗೌರೀ, ಕಾಳಿಕಾ, ಯಮ, ಉಗ್ರ, ಭೂತ, ಭುಜಂಗ, ಪ್ರಳಯ, ಊರ್ಧ್ವ, ಶುದ್ಧ ಮತ್ತು ಮುನಿತಾಂಡವವೆಂಬ ಹದಿನೈದು ವಿಧಗಳಿವೆ (ವಿವರಗಳಿಗೆ ನೋಡಿ ನಟರಾಜ).

**ತಾಂಡವಪ್ರಿಯ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ಸ

ಅ: ಸ ಪ ಮ ಗ ರಿ ಸ

**ತಾಂಡವೋಲ್ಲಾಸಿನಿ**—ಈ ರಾಗವು ೩೫ನೆ ಈ ಮೇಳಕರ್ತ ಶೂಲಿನಿಯ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ತಾಂಡವ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಗ ಸ

**ತ್ರ್ಯಂಬಕಪ್ರಿಯ**—ಈ ರಾಗವು ೩ನೆ ಮೇಳಕರ್ತ ಗಾನಮೂರ್ತಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ಸ

ಅ: ಸ ನಿ ಸ ದ ಪ ಮ ಗ ರಿ ಸ

**ತ್ರಿಕಾಲ**—ಕಾಲ ಪ್ರಮಾಣಕ್ಕೆ ಲಯ ಎಂದು ಹೆಸರು. ಇದರಲ್ಲಿ ವಿಳಂಬಿತ, ಮಧ್ಯ, ದ್ರುತ ಎಂಬ ಮೂರು ಕಾಲಗಳಿವೆ.

**ತ್ರಿಕೋಣಕಂಬಿ**—ನಾಟಕಗಳಲ್ಲೂ, ನೃತ್ಯಗಳಲ್ಲೂ ವಾದ್ಯಗೋಷ್ಠಿಗಳಲ್ಲೂ ತಾಳನಿರ್ಣಯಕ್ಕಾಗಿ ಉಪಯೋಗಿಸುವ ವಾದ್ಯ. ಉಕ್ಕಿನ ಸಲಾಕಯನ್ನು ತ್ರಿಕೋಣಾಕಾರಕ್ಕೆ ಬಗ್ಗಿಸಿ ಮಾಡಿರುತ್ತಾರೆ. ಬೇಕಾದ ಆಧಾರಶ್ರುತಿಗೆ ತಕ್ಕಂತೆ ಈ ತ್ರಿಕೋಣದ ಅಳತೆಯು ವ್ಯತ್ಯಾಸ ಹೊಂದುತ್ತದೆ. ವಾದ್ಯಕ್ಕೆ ಒಂದು ದಾರವನ್ನು

ಕಟ್ಟಿ ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿ ಒಂದು ಬಿದಿರು ಕಡ್ಡಿಯ ತಾಡನದಿಂದ ತಾಳಗತಿ ತೋರಿಸುತ್ತಾರೆ. ಕೇಳಲು ಇಂಪಾಗಿರುತ್ತದೆ.

**ತ್ರಿಗತ** – ಮತಂಗನು ಹೇಳಿರುವ ನವತಾಳಗಳಲ್ಲಿ ಒಂದು ತಾಳ.

**ತೃತೀಯಕಾಲ**—ಮೂರನೆಯ ಕಾಲ ಅಂದರೆ ದ್ರುತಕಾಲ. ಇದನ್ನು ಸ್ವರಸಮೂಹದ ಮೇಲು ಎರಡು ಗೀಟು ಹಾಕಿ ಸೂಚಿಸಿರುತ್ತದೆ ಉದಾ : ಸ ಸ ಸ ಸ

**ತ್ರಿನೇತ್ರಪ್ರಿಯ**—ಈ ರಾಗವು ೧೬ನೆಯ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ̇

ಅ: ಸ̇ ನಿ ದ ಗ ರಿ ಸ

**ತ್ರಿದಶರಂಜನಿ**—ಈ ರಾಗವು ೧೩ನೆ ಮೇಳಕರ್ತ ಗಾಯಕ ಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ̇

ಅ: ಸ̇ ನಿ ದ ಗ ರಿ ಸ

**ತ್ರಿಪಡಗ** –ಈ ರಾಗವು ೧೯ನೆ ಮೇಳಕರ್ತ ಝಂಕಾರ ಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ̇

ಅ: ಸ ನಿ ದ ಮ ರಿ ಸ

**ತ್ರಿಪತಾಕಹಸ್ತ**—ಇದು ಭರತ ನಾಟ್ಯದ ಅಸಂಯುತ ಹಸ್ತ ಮುದ್ರೆಗಳಲ್ಲಿ ಒಂದು ಬಗೆಯ ಮುದ್ರೆ. ಪತಾಕ ಹಸ್ತದಲ್ಲಿನ ನಾಲ್ಕನೆಯ ಬೆರಳನು ಮಡಿಚ್ಚಿ ಹಿಡಿಯುವುದು ತ್ರಿಪತಾಕಹಸ್ತ. ಕಿರೀಟ, ವೃಕ್ಷ, ವಜ್ರಾಯುಧ, ಇಂದ್ರ, ಕೇತಕಿ ಪುಷ್ಪ, ದೀಪ, ಅಗ್ನಿಜ್ವಾಲೆಯ ವಿಜೃಂಭಣೆ, ಕೆನ್ನೆಗಳು, ಪತ್ರಲೇಖನ, ಬಾಣ, ಪರಿವರ್ತನೆ, ಸ್ತ್ರೀಪುರುಷ ಸಂಯೋಗಗಳನ್ನು ಸೂಚಿಸಲು ಈ ಹಸ್ತಲಕ್ಷಣವನ್ನು ವಿನಿಯೋಗಿಸಲಾಗುವುದು.

**ತ್ರಿಪುಟತಾಳ**—ಇದು ಸುಳಾದಿ ಸಪ್ತತಾಳಗಳಲ್ಲಿ ಐದನೆಯ ತಾಳ. ಇದರ ಅಂಗಗಳು ಒಂದು ತಿಶ್ರ ಲಘು, ಎರಡು ದ್ರುತ. ಇದರ ಒಂದಾವರ್ತಕ್ಕೆ ಏಳು ಅಕ್ಷರ ಕಾಲ. ಇದಕ್ಕೆ ತಿಶ್ರ ಜಾತಿ ತ್ರಿಪುಟತಾಳವೆಂದು ಹೆಸರು

**ತ್ರಿಪುಚ್ಛ**—ದಶವಿಧ ಗಮಕಗಳಲ್ಲಿ ಒಂದು ಬಗೆಯ ಗಮಕ. ಅಂದರೆ ಮೂರು ಸ್ವರಗಳ ಸಮೂಹವನ್ನು ಉಪಯೋಗಿಸುವುದು ಉದಾ : ಸಸಸ, ರಿರಿರಿ, ಗಗಗ ಇತ್ಯಾದಿ. ಭೈರವಿ ಅಟತಾಳದ ವರ್ಣದಲ್ಲಿ ಮೊದಲ ಎತ್ತುಗಡೆ ಸ್ವರ. ಪಪಪ, ದದದ, ನಿನಿನಿ, ಸಸರಿ ಇತ್ಯಾದಿ.

**ತ್ರಿಭಂಗ**—ಭರತನಾಟ್ಯದ ನಾಲ್ಕು ಭಾವಭಂಗಿಗಳಲ್ಲಿ ಒಂದು ವಿಧ. ದೇಹವು ತ್ರಿಕೋನಾಕಾರವನ್ನು ಸೂಚಿಸುವಿಕೆ. ನಿಂತ ನಿಲುವಿನಲ್ಲಿ ತ್ರಿಕೋನವನ್ನು ತೋರು

ವಂತಹುದು. ಶ್ರೀಕೃಷ್ಣನ ಅಷ್ಟೋತ್ತರದಲ್ಲಿ ತ್ರಿಭಂಗ ಮಧುರಾಕೃತಿಯೇ ನಮಃ ಎಂಬುದನ್ನು ಇಲ್ಲಿ ಸ್ಮರಿಸಬಹುದು.

**ತ್ರಿಮೂರ್ತಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ತ್ರಿಮೂರ್ತಿಪ್ರಿಯ**—ಈ ರಾಗವು ೯ನೆ ಮೇಳಕರ್ತ ಧೇನುಕದ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ತ್ರಿಲೋಚನಪ್ರಿಯ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ತ್ರಿವೇಣಿ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ರಿ ಮ.ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ತ್ರಿಶೂಲ**—ಇದು ಭರತನಾಟ್ಯದ ಒಂದು ಅಸಂಯುತ ಹಸ್ತಮುದ್ರೆ. ಹೆಬ್ಬೆರಳು ಮತ್ತು ಕಿರುಬೆರಳನ್ನು ಬಗ್ಗಿಸಿ ಉಳಿದ ಮೂರನ್ನು ಚಾಚಿ ಹಿಡಿಯುವುದು ತ್ರಿಶೂಲ ಹಸ್ತ. ಬಿಲ್ವಪತ್ರೆ, ಮೂರು ಎಂಬ ಸಂಖ್ಯೆ ಇವುಗಳಲ್ಲಿ ಈ ಹಸ್ತ ವಿನಿಯೋಗ ಹೇಳಲಾಗಿದೆ.

**ತ್ರಿಅನ್ಯಸ್ವರ ಭಾಷಾಂಗರಾಗ** – ಮೂರು ಸ್ವರಗಳು ಅನ್ಯಸ್ವರಗಳಾಗಿರುವ ಭಾಷಾಂಗರಾಗ

ಉದಾ: ಹಿಂದೂಸ್ಥಾನಿಕಾಪಿ, ಆನಂದ ಭೈರವಿ

**ತ್ರಿಸ್ವರ ವಕ್ರರಾಗ** – ಅವರೋಹಣದಲ್ಲಿ ಮೂರು ಸ್ವರಗಳು ವಕ್ರವಾಗಿವೆ.

ಉದಾ: ಶ್ರೀರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ಪ ದ ನಿ ಪ ಮ ರಿ ಗ ರಿ ಸ

**ತಿಶ್ರಛಾಪು**—ಮೊದಲ ಘಾತಕ್ಕೆ ಒಂದು ಅಕ್ಷರ, ಎರಡನೆಯದಕ್ಕೆ ಎರಡು ಅಕ್ಷರ ಕಾಲವಿರುವ ಛಾಪುತಾಳ.

**ತಿಶ್ರಲಘು**—ಮೂರು ಅಕ್ಷರ ಕಾಲದ ಲಘು.

**ತ್ರಿಶ್ರುತಿ ಪಂಚಮ**—ವರಾಳಿರಾಗದ ಮಧ್ಯಮದ ಹೆಸರು.

**ತ್ರಿಶ್ರುತಿ ರಿಷಭ**—ಸಾಮಗಾನದ ರಿಷಭ

**ಥ** - ಬೆಟ್ಟ, ಭಯ, ರಕ್ಷಣೆ, ಮಂಗಳ ಮುಂತಾದ ಅರ್ಥಗಳಿವೆ

**ಥಾಟ್**—ಥಾಟ್ ಎಂದರೆ ಹಿಂದೂಸ್ಥಾನೀ ಸಂಗೀತ ಪದ್ಧತಿಯ ಜನಕ ರಾಗ. ಪಂಡಿತ ವಿಷ್ಣುನಾರಾಯಣ ಭಾತ್ಖಂಡೆಯವರು ತಮ್ಮ 'ಶ್ರೀ ಮಲ್ಲಕ್ಷ್ಯ ಸಂಗೀತಮ್' ಎಂಬ ಸಂಸ್ಕೃತದಲ್ಲಿ ಈ ಪದ್ಧತಿಯನ್ನು ಸಂಯೋಜಿಸಿದ್ದಾರೆ. ಥಾಟ್ ಎಂದರೆ ಮೇಳವೆಂದು ಹೆಸರು. ಹಿಂದೂಸ್ಥಾನಿ ಪದ್ಧತಿಯಲ್ಲಿ ಭಾತ್ಖಂಡೆಯವರು ಕೇವಲ ಹತ್ತು ಥಾಟ್‌ಗಳನ್ನು ಹೇಳಿದ್ದಾರೆ. ಅವು ಇಂದಿಗೂ ಆ ಪದ್ಧತಿಯಲ್ಲಿ ಮಾನ್ಯತೆ ಪಡೆದಿವೆ. ಅವು ಯಾವುವೆಂದರೆ :

(೧) ಕಲ್ಯಾಣ ಥಾಟ್ (ಮೇಚಕಲ್ಯಾಣಿ ೬೫ನೆ ಮೇಲ)
(೨) ಬಿಲಾವಲ್ ಥಾಟ್ (ಧೀರಶಂಕರಾಭರಣ ೨೯ನೆ ಮೇಲ)
(೩) ಖಮಾಜ್ ಥಾಟ್ (ಹರಿಕಾಂಭೋಜಿ ೨೮ನೆ ಮೇಲ)
(೪) ಭೈರವ್ ಥಾಟ್ (ಮಾಯಾಮಾಳವಗೌಳ ೧೫ನೆ ಮೇಲ)
(೫) ಪೂರ್ವಿ ಥಾಟ್ (ಕಾಮವರ್ಧಿನಿ ೫೧ನೆ ಮೇಲ)
(೬) ಮಾರವಾ ಥಾಟ್ (ಗಮನಶ್ರಮ ೫೩ನೆ ಮೇಲ)
(೭) ಕಾಫಿ ಥಾಟ್ (ಖರಹರಪ್ರಿಯ ೨೨ನೆ ಮೇಲ)
(೮) ಆಸಾವೇರಿ ಥಾಟ್ (ನಠಭೈರವಿ ೨೦ನೆ ಮೇಲ)
(೯) ಭೈರವಿ ಥಾಟ್ (ಹನುಮತೋಡಿ ೮ನೆ ಮೇಲ)
(೧೦) ತೋಡಿ ಥಾಟ್ (ಶುಭಪಂತುವರಾಳಿ ೪೫ನೆ ಮೇಲ)

**ದ**—(೧) ಬೆಟ್ಟ, ದಾನ ಮಾಡುವವನು, ಪತ್ನಿ, ಪಾನ, ವೈರಾಗ್ಯ, ನೋಡುವುದು, ಕಾಪಾಡುವುದು, ಮಾಗ, ಕರಗಿಸುವ, ಶುದ್ಧವಾದ, ಕ್ಷಮೆ, ರಕ್ಷಣೆ, ಶುದ್ಧ ಮಾಡುವುದು, ಕತ್ತರಿಸುವುದು ಇತ್ಯಾದಿ ಅರ್ಥಗಳಿವೆ.

(೨) ಸ್ವರಸಪ್ತಕದಲ್ಲಿ ಆರನೆಯ ಸ್ವರ. ಇದಕ್ಕೆ ಧೈವತವೆಂದು ಹೆಸರು.

**ದತ್ತಾ**—ಹದಿಮೂರು ಬಗೆಯ ಹುಡುಕ್ಕ ವಾದ್ಯಗಳಲ್ಲಿ ಇದೊಂದು ಬಗೆಯ ವಾದ್ಯ

**ದತ್ತಾತ್ರೇಯ ಸದಾಶಿವರಾವ್ ಗರುಡ್**—ಸುಮಾರು ೬೬ ವರ್ಷ ವಯಸ್ಕರಾದ ಡಿ ಎಸ್. ಗರುಡ್‌ರವರು ಮಹಾನಟ ಗರುಡ್ ಸದಾಶಿವರಾಯರ ಪುತ್ರನಾಗಿ ಜನಿಸಿ ಕರ್ಣಾಟಕ ಸಂಗೀತ, ಹಿಂದೂಸ್ಥಾನಿ ಗಾಯನ ತಬಲ ವಾದನದಲ್ಲಿ ಉನ್ನತ ಸ್ಥಾನವನ್ನು ಅಲಂಕರಿಸಿರುವ ಖ್ಯಾತ ಕಲಾವಿದರು. ಇವರ ಜನ್ಮಸ್ಥಳ ಉತ್ತರ ಕರ್ಣಾಟಕದ ಕೊಪ್ಪಳದ ಸಮೀಪದ ಕೌಲೂರು ಎಂಬ ಗ್ರಾಮದ ಒಂದು ವೈದಿಕ ಮನೆತನದಲ್ಲಿ ಜನಿಸಿದರು. ಇವರ ತಂದೆ ಮತ್ತು ತಾತನವರಿಗೆ ನಾಟಕ ಮತ್ತು ಸಂಗೀತದಲ್ಲಿ ತೀರ ಆಸಕ್ತಿ. ತಂದೆಯವರ ದತ್ತಾತ್ರೇಯ ನಾಟಕ ಮಂಡಲಿಯಲ್ಲಿದ್ದ ಸಂಗೀತ ಮತ್ತು ಭಾಷೆಯ ಮಾಸ್ಟರುಗಳಿಂದ ಸಂಗೀತವನ್ನು ಕಲಿಯತೊಡಗಿ,

ನಂತರ ಘನಶ್ಯಾಮ ಬಾಡ್ಕರ್ ಎಂಬ ಖ್ಯಾತ ತಬಲ್‌ಜಿಯವರಿಂದ ತಬಲಾವಾದನವನ್ನು ಕಲಿಯಲು ಆರಂಭಿಸಿ, ತರುವಾಯ ರಘುನಾಥರಾವ್ ಎಂಬುವರಲ್ಲಿ ಮುಂದುವರಿಸಿದರು. ಬೊಂಬಾಯಿನಲ್ಲಿ ಸ್ವಲ್ಪಕಾಲವಿದ್ದು ಈಗ ಸುಮಾರು ೩೫ ವರ್ಷಗಳಿಂದ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಹಿರಿಯ ಹಿಂದೂಸ್ಥಾನಿ ಕಲಾಕಾರರಿಗೆಲ್ಲಾ ತಬಲಾ ನುಡಿಸಿದ್ದಾರೆ. ಅನೇಕ ಶಿಷ್ಯರಿಗೆ ವಿದ್ಯಾದಾನ ಮಾಡುತ್ತಿದ್ದಾರೆ. ಇವರು ಒಬ್ಬ ಅಪರೂಪ ಕಲಾತಪಸ್ವಿ ಇವರ ಶಿಷ್ಯರಲ್ಲಿ ಗುರುದತ್‌ಕಾಮತ್ ಮತ್ತು ಗುರುದಾಸ್ ಮುಡ್ಯಾರ್ ಎಂಬುವರು ಪ್ರಮುಖರು.

**ದತ್ತಿಲ** (ಸು. ಕ್ರಿ. ಪೂ. ೪ ಶ.)—ದತ್ತಿಲನು ಒಬ್ಬ ಭರತ ಪುತ್ರನೆಂದೂ, ಅವನಿಗೆ ಸಂಗೀತದ ಲಕ್ಷ್ಯ ಮತ್ತು ಲಕ್ಷಣಗಳನ್ನು ತಾನು ಬೋಧಿಸಿದೆನೆಂದೂ ಭರತನು ತನ್ನ ನಾಟ್ಯಶಾಸ್ತ್ರದಲ್ಲಿ ಹೇಳಿದ್ದಾನೆ. ಇವನಿಗೆ ದಂತಿಲ ಎಂಬ ಹೆಸರೂ ಇದೆ ದತ್ತಿಲನ ಹೆಸರು ಕೋಹಲ ಹೆಸರಿನೊಡನೆ ಬರುತ್ತದೆ. ದತ್ತಿಲನು ಒಬ್ಬ ಅತ್ಯಂತ ಹಿಂದಿನ ಶಾಸ್ತ್ರಕಾರ. ಅಭಿನವಗುಪ್ತನು ಅನೇಕ ಕಡೆ ಇವನ ಗ್ರಂಥದಿಂದ ಉದ್ಧರಿಸಿದ್ದಾನೆ. ಇವನನ್ನು ದತ್ತಿಲಾಚಾರ್ಯ ಎಂದು ಹೆಸರಿಸಲಾಗಿದೆ ಇವನು ದತ್ತಿಲಂ ಎಂಬ ಗ್ರಂಥವನ್ನು ಬರೆದಿದ್ದಾನೆ. ತಿರುವನಂತಪುರದ ಗ್ರಂಥ ಮಾಲೆಯಲ್ಲಿ ಪ್ರಕಟಿಸಲಾಗಿರುವ ಈ ಗ್ರಂಥವು ಮೂಲ ಬೃಹದ್ಗ್ರಂಥದ ಸಾರಾಂಶವೆನ್ನಬಹುದು. ಸಂಗೀತಕ್ಕೆ ಸಂಬಂಧಿಸಿದ ಶ್ರುತಿ, ತಾಳ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಇದೊಂದು ಪ್ರಾಚೀನ ಆಧಾರ ಗ್ರಂಥ ಇದರಲ್ಲಿ ನಾರದನ ಗ್ರಂಥದಿಂದ ಹಲವು ವಿಷಯಗಳನ್ನು ಉದ್ಧರಿಸಲಾಗಿದೆ. ಮತಂಗ, ಪಾರ್ಶ್ವದೇವ, ರಘುನಾಥಭೂಪ ಮುಂತಾದ ಲಕ್ಷಣಕಾರರು ದತ್ತಿಲನ ಗ್ರಂಥದಿಂದ ಉದ್ಧರಿಸಿದ್ದಾರೆ.

**ದತ್ತಿಲ ಕೋಹಲೀಯಂ**—ಇದು ದತ್ತಿಲನು ಕೋಹಲನೊಂದಿಗೆ ಸೇರಿಕೊಂಡು ರಚಿಸಿದ ಸಂಗೀತಶಾಸ್ತ್ರಗ್ರಂಥವೆಂಬ ಪ್ರತೀತಿಯಿದೆ. ಆದರೆ ಈ ಗ್ರಂಥವು ದತ್ತಿಲನ ಕಾಲದ ನಂತರ ರಚಿಸಲ್ಪಟ್ಟ ಒಂದು ಸಾಮಾನ್ಯ ಗ್ರಂಥ.

**ದತ್ತಿಲಂ**—ಇದು ದತ್ತಿಲ ಅಥವಾ ದತ್ತಿಲಾಚಾರ್ಯ ವಿರಚಿತ ಒಂದು ಚಿಕ್ಕ ಸಂಗೀತ ಶಾಸ್ತ್ರಗ್ರಂಥ. ಇದು ಬೃಹತ್ತಾದ ಮೂಲಗ್ರಂಥದ ಸಂಗ್ರಹವಿರಬೇಕು. ಈ ಗ್ರಂಥದಲ್ಲಿ ಗಾಂಧರ್ವ ಶಾಸ್ತ್ರದ ಸಾರವನ್ನು ಸಂಕ್ಷೇಪವಾಗಿ ತಿಳಿಸುವೆನೆಂದು ಪ್ರಾರಂಭಿಸಿದ್ದಾನೆ ಇದರಲ್ಲಿ ೨೪೩ ಶ್ಲೋಕಗಳಿವೆ. ೨೨ ಶ್ರುತಿಗಳು, ಷಡ್ಜಗ್ರಾಮ, ಮಧ್ಯಮಗ್ರಾಮ, ವಾದಿ, ಸಂವಾದಿ, ಅನುವಾದಿ, ವಿವಾದಿ ಸ್ವರಗಳು, ಸಗ್ರಾಮ ಮತ್ತು ಮಗ್ರಾಮದ ಮೂರ್ಛನಗಳ ಹೆಸರು, ತಾನಗಳು, ಸ್ವರಸಾಧಾರಣ, ಜಾತಿ ಸಾಧಾರಣ, ೧೮ ಜಾತಿಗಳು (೭ ಶುದ್ಧ ಮತ್ತು ೧೧ ವಿಕೃತ), ಜಾತಿಯ ೧೦ ಲಕ್ಷಣಗಳು, ನಾಲ್ಕು ಬಗೆಯ ವರ್ಣಗಳು (ಆರೋಹಿ, ಅವರೋಹಿ, ಸ್ಥಾಯಿ, ಸಂಚಾರಿ), ಅಲಂಕಾರಗಳು, ಗ್ರಹ, ಲಯ, ಯತಿ ಮುಂತಾದ ಕೆಲವು ತಾಳದಶ ಪ್ರಾಣಗಳನ್ನು ಕುರಿತು ಹೇಳಿದೆ. ಇದು ಕ್ರಿ ಶ ೨ನೆ ಶತಮಾನದ ಗ್ರಂಥವೆಂದು ಒಂದು ಅಭಿಪ್ರಾಯವಿದೆ.

**ದತ್ತಿಲಾದಿ ಮಹರ್ಷಿ ಪ್ರೋಕ್ತತಾಳ ಪ್ರಸಾರಲಕ್ಷಣ ಸಂಗ್ರಹಂ**—ಇದು ತಾಳವನ್ನು ಕುರಿತು ಸಂಸ್ಕೃತ ಭಾಷೆಯಲ್ಲಿರುವ ಒಂದು ಗ್ರಂಥ ಇದರಲ್ಲಿ ತಾಳ ನಿಷ್ಪತ್ತಿ ಲಕ್ಷಣಂ, ತಾಳದಶಪ್ರಾಣಲಕ್ಷಣಂ, ತಾಳಪ್ರಸ್ತಾರಂ, ಪಾತಾಳಶ್ರೇಣಿ ಮತ್ತು ಅರ್ಥಲಕ್ಷಣಂ ಎಂಬ ಅಧ್ಯಾಯಗಳಿವೆ.

**ದರ್ದುರ**—ಇಂದೊಂದು ಸಂಗೀತವಾದ್ಯದ ಹೆಸರು.

**ದರ್ದುರ ಪ್ಲವ**—ಕಪ್ಪೆ ನೆಗೆತದ ಆಟ ಇದನ್ನು ತಾಳಬದ್ಧವಾಗಿ ಆಡುತ್ತಾರೆ.

**ದರ್ಪಣ**—ಇದು ಪ್ರಾಚೀನ ಪ್ರಸಿದ್ಧವಾದ ಅಷ್ಟೋತ್ತರ ಶತತಾಳಗಳಲ್ಲಿ ಒಂದು ತಾಳ. ಇದರ ಅಂಗಗಳು ಎರಡು ದ್ರುತ ಮತ್ತು ಒಂದು ಗುರು. ಇದರ ಒಂದಾವರ್ತಕ್ಕೆ ಮೂರು ಮಾತ್ರೆಗಳು ಅಥವಾ ೧೨ ಅಕ್ಷರ ಕಾಲ.

**ದರ್ಪಮಂಜರಿ**—ಈ ರಾಗವು ೫೩ನೆ ಮೇಳಕರ್ತ ಗಮನ ಶ್ರಮದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಸ

**ದರ್ಬಾರ್**—ಈ ರಾಗವು ೨೨ನೆ ಮೇಳಕರ್ತ ಖರಹರ ಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನೀ ದ ಪ ಮ ರಿ ಗ ಗಾ ರಿ ಸ

ಉಪಾಂಗರಾಗ. ಚತುಶ್ರುತಿರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಚತುಶ್ರುತಿ ಧೈವತ ಮತ್ತು ಕೈಶಿಕಿ ನಿಷಾದವು ಇದರ ಸ್ವರಸ್ಥಾನಗಳು ಗಾಂಧಾರ, ನಿಷಾದಗಳು ರಾಗಛಾಯಾ ಸ್ವರಗಳು. ಅವರೋಹಣ ಸಂಚಾರಗಳಲ್ಲಿ ದೀರ್ಘವಾಗಿ ನುಡಿಯುವ ನಿಷಾದ ಮತ್ತು ಗಾಂಧಾರ ಸ್ವರಗಳು ರಾಗದ ಸ್ವರೂಪವನ್ನು ಚಿತ್ರಿಸುತ್ತವೆ ಗಮಕವರಿಕ ರಕ್ತಿರಾಗ. ತ್ರಿಸ್ಥಾಯಿರಾಗ ಗೇಯನಾಟಕಗಳಲ್ಲಿ ಮತ್ತು ಗೀತರೂಪಕಗಳಲ್ಲಿ ವೀರರಸ ಪ್ರಚೋದನೆಗಾಗಿ ಹೆಚ್ಚು ಉಪಯುಕ್ತವಾದ ರಾಗ. ಪಂಚಮವು ಅಂಶಸ್ವರ ಸಾರ್ವಕಾಲಿಕರಾಗ ಈ ರಾಗದ ರಚನೆಗಳು ಸಾಮಾನ್ಯವಾಗಿ ರಿಷಭ, ಪಂಚಮ ಮತ್ತು ಧೈವತ ಸ್ವರಗಳಲ್ಲಿ ಪ್ರಾರಂಭವಾಗುತ್ತವೆ. ಇದು ನಾಯಕಿ ರಾಗಕ್ಕೆ ಸಮೀಪದ ರಾಗ. ನಾಯಕಿರಾಗಕ್ಕೆ ಬರುವ ನೀದಪಮ ರಿಗಾರಿಸ, ಮಪದಪಸಾ ಮುಂತಾದ ಸಂಚಾರಗಳಿಂದ ಇವೆರಡು ರಾಗಗಳ ವ್ಯತ್ಯಾಸವನ್ನು ತಿಳಿಯಬಹುದು. ಪ್ರಾಚೀನ ಗ್ರಂಥಗಳಲ್ಲಿ ಇದಕ್ಕೆ ದರಬಾರು ಎಂಬ ಹೆಸರಿದೆ. ದರ್ಬಾರ್ ಸೀತಾರಾಮಯ್ಯನವರು ಈ ರಾಗವನ್ನು ಹಾಡುವುದರಲ್ಲಿ ಪ್ರಸಿದ್ಧ ರಾಗಿದ್ದರು. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು:—

| | | | |
|---|---|---|---|
| ವರ್ಣ: | ಚಲಮೇಲ | —ಆದಿ — | ತಿರುವೊಟ್ರಿಯೂರುತ್ಯಾಗಯ್ಯರ್ |
| ಕೃತಿ: | ಯೋಚನ | —ಆದಿ — | ತ್ಯಾಗರಾಜ |

ಮುಂದುವೆನಕ —ಆದಿ — ತ್ಯಾಗರಾಜ
ನಾರದಗುರು —ಆದಿ — ತ್ಯಾಗರಾಜ
ನಿತ್ಯರೂಪ —ಆದಿ — ತ್ಯಾಗರಾಜ
ರಾಮಾಭಿರಾಮ —ಛಾಪು — ತ್ಯಾಗರಾಜ
ಎಂದುಂಡಿ —ಛಾಪು — ತ್ಯಾಗರಾಜ
ಮೀನನಯನ —ರೂಪಕ— ಸುಬ್ಬರಾಯಶಾಸ್ತ್ರಿ
ಎಂತವೇಡಿನಗಾನಿ —ಛಾಪು — ಚೆಂಗಲ್ವರಾಯಶಾಸ್ತ್ರಿ
ರಾಘವೇಂದ್ರಗುರು —ಆದಿ — ವೈ ಸೂರುವಾಸುದೇವಾಚಾರ್ಯ
ಸ್ಮರಮಾನಸ —ರೂಪಕ— ಸ್ವಾತಿತಿರುನಾಳ್ ಮಹಾರಾಜ
ಜ್ವಲಜಹೇ —ಆದಿ — ಮುತ್ತಯ್ಯ ಭಾಗವತರು
ಇನಿ ಮೇಲಾಯುಲುಂ—ತ್ರಿಪುಟ— ರಾಮಸ್ವಾಮಿಶಿವನ್

**ದರ್ಬಾರಿಕಾನಡ**— ಇದು ಹಿಂದೂಸ್ಥಾನಿ ಸಂಗೀತದ ಒಂದು ರಾಗ. ಇದು ಹಿಂದೂಸ್ಥಾನಿ ಪದ್ಧತಿಯಂತೆ ಅಸಾವರಿಥಾಟ್‌ನ ಒಂದು ರಾಗ. ಇದೊಂದು ಅತ್ಯಂತ ಜನಪ್ರಿಯ ರಾಗ. ಇದನ್ನು ತಾನ್‌ಸೇನನು ಸೃಷ್ಟಿಸಿದನೆಂದು ಪ್ರತೀತಿ. ಅಕಬರ್ ಚಕ್ರವರ್ತಿಯ ಆಸ್ಥಾನದಲ್ಲಿ ಮೇಲಿಂದ ಮೇಲೆ ದರಬಾರಿನಲ್ಲಿ ಹಾಡು ತ್ತಿದ್ದುದರಿಂದ ಇದಕ್ಕೆ ದರ್ಬಾರಿಕಾನಡಾ ಎಂಬ ಹೆಸರು ಬಂದಿತು. ಹಿಂದೂಸ್ಥಾನಿ ಸಂಗೀತದ ಪ್ರಕಾರ ಈ ರಾಗದ ಆರೋಹಣಾವರೋಹಣಗಳು ಹೀಗಿವೆ—

ಆ: ಸ ರಿ ಗ ಮ ಪ ದ ನಿ ಸಂ। ಅ: ಸಂ ನಿ ದ ಪ ಮ ಗ ರಿ ಸ
2 3 1 1 2 2 1 1 3

ಕರ್ಣಾಟಕ ಸಂಗೀತ ರೀತ್ಯಾ ಇದರ ಆರೋಹಣಾವರೋಹಣಗಳು ಈ ರೀತಿ ಇವೆ.

ಆ: ನಿ ಸ ರಿ ಗ ರಿ ಸ ಮ ಪ ದಾ ನಿ ಸಂ।
2 2 2 1 1 2

ಅ: ಸ ದಾ ನಿ ಪ ಮ ಪ ಗಾ ಮ ರಿ ಸ ॥
1 2 1 2 1 2

ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

ತಿಲ್ಲಾನ — ದಾನಿ ಉದನಿತ — ಆದಿ — ವೀಣೆ ಶೇಷಣ್ಣ
ಕೃತಿ — ಗಿರಿಧರ ಬೃಜಧರ —ತ್ರಿತಾಳ್— ಸೂರದಾಸ್

**ದರ್ಭಕಲೂ**—ಈ ರಾಗವು ೨೩ನೆ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಗ ಪ ದ ನಿ ಸಂ
ಅ: ಸಂ ನಿ ದ ಮ ಗ ರಿ ಸ

**ದಶಪ್ರಾಣಗಳು**—ತಾಳಗಳ ಮೂಲಗತಿಯನ್ನು ವಿಭಜಿಸಿದಾಗ ತಾಳಕ್ಕೆ ಹತ್ತು ವಿಧವಾದ ಅವಯವಗಳು ಕಂಡುಬರುತ್ತವೆ. ಇವಕ್ಕೆ ತಾಳದಶಪ್ರಾಣಗಳೆಂದು

ಹೆಸರು. ಇವು ಕಾಲ, ಮಾರ್ಗ, ಕ್ರಿಯ, ಅಂಗ, ಗ್ರಹ, ಜಾತಿ, ಕಳಾ, ಲಯ, ಯತಿ ಮತ್ತು ಪ್ರಸ್ತಾರ. ಇವುಗಳಲ್ಲಿ ಮೊದಲ ಐದು ಭಾಗಗಳನ್ನು ಮಹಾಪ್ರಾಣಗಳೆಂದೂ, ಉಳಿದವುಗಳನ್ನು ಉಪಪ್ರಾಣಗಳೆಂದೂ ಪರಿಗಣಿಸಲಾಗಿದೆ (ವಿವರಗಳಿಗೆ ನೋಡಿ—ತಾಳದಶಪ್ರಾಣಗಳು).

**ದಶವಿಧ ಗಮಕಗಳು** — ಭಾರತೀಯ ಸಂಗೀತದಲ್ಲಿ ಹತ್ತು ಬಗೆಯ ಗಮಕಗಳು ಬಳಕೆಯಲ್ಲಿವೆ.

ಆರೋಹ ಮವರೋಹಂಚ ಢಾಲುಸ್ಫುರಿತ ಕಂಪಿತಾಃ !
ಆಹತ ಪ್ರತ್ಯಾಹತಶ್ಚ ತ್ರಿಪುಶ್ಛಾಂದೋಳ ಮೂರ್ಛನಾಃ ||— ಕೋಹಲ.

ಇವು ಯಾವುವೆಂದರೆ ಆರೋಹ, ಅವರೋಹ, ಢಾಲು, ಸ್ಫುರಿತ, ಕಂಪಿತ, ಆಹತ, ಪ್ರತ್ಯಾಹತ, ತ್ರಿಪುಚ್ಛ, ಆಂದೋಳ, ಮೂರ್ಛನ.

೧. **ಆರೋಹ**—ಇದು ಸುಂದರವಾದ ರೀತಿಯಲ್ಲಿ ಆರೋಹಣ ಕ್ರಮದಲ್ಲಿರುವ ಗಮಕ. ಉದಾ : ಸ ರಿ ಗ ಮ ಪ ದ ನಿ ಇತ್ಯಾದಿ.

೨. **ಅವರೋಹ**—ಇದು ಅವರೋಹಣ ಕ್ರಮದಲ್ಲಿರುವ ಗಮಕ. ಉದಾ :— ಸ ನಿ ದ ಪ ಮ ಗ ರಿ ಇತ್ಯಾದಿ.

೩. **ಢಾಲು**—ಒಂದು ಸ್ವರಸ್ಥಾನದಿಂದ ಆರಂಭಿಸಿ ಅದರ ಮೇಲಿನ ಸ್ವರವನ್ನು ರಾಗಭಾವಕ್ಕೆ ತಕ್ಕಂತೆ ಕಂಪಿಸಿ ನುಡಿಸುವುದು ಷಡ್ಜದಿಂದ ಪಂಚಮವನ್ನೋ ಅಥವಾ ಮಧ್ಯಮವನ್ನೋ ಅಥವಾ ಗಾಂಧಾರ, ರಿಷಭವನ್ನೋ ಮುಟ್ಟುವುದು. ಉದಾ : ಸಪ, ಸಮ, ಸಗ, ಸರಿ, ಸಸ

೪ **ಸ್ಫುರಿತ**—ಸಸ, ರಿರಿ, ಮುಂತಾದ ಜಂಟಿ ಸ್ವರಗಳನ್ನು ಹಿಂದಿನ ಸ್ವರಗಳೊಡನೆ ಕಂಪಿಸಿ ಮೇಲಿನ ಸ್ವರಗಳ ಛಾಯೆ ಬರುವಂತೆ ಮಾಡುವುದು.

೫. **ಕಂಪಿತ**—ಸ್ವರವನ್ನು ಒಂದಕ್ಷರ ಕಾಲದಷ್ಟು ಕಂಪಿಸಿ ಅದರ ಮೇಲಿನ ಸ್ವರದ ಛಾಯೆಯು ಬರುವಂತೆ ಮಾಡುವುದು.

೬. **ಆಹತ**—ಸರಿ, ರಿಗ, ಗಮ, ಮಪ, ಪದ, ದನಿ, ನಿಸ ಈ ರೀತಿಯಲ್ಲಿ ಸ್ವರಗಳನ್ನು ಉಪಯೋಗಿಸುವುದು

೭. **ಪ್ರತ್ಯಾಹತ**—ಸನಿ, ನಿದ, ದಪ, ಪಪ — ಇದು ಆಹತದ ಗಮಕದ ವಿರುದ್ಧವಾದ ರೀತಿಯ ಗಮಕ.

೮. **ತ್ರಿಪುಚ್ಛ**—ಸಸಸ, ರಿರಿರಿ, ಗಗಗ, ಮಮಮ, ಪಪಪ ಎಂಬಂತೆ ಮೂರು ಸ್ವರಗಳ ಸಮೂಹವನ್ನು ಉಪಯೋಗಿಸುವುದು.

೯. **ಆಂದೋಳ**—ಇಲ್ಲಿ ಸ್ವರಗಳನ್ನು ಉಪಯೋಗಿಸುವ ರೀತಿಯು ಉಯ್ಯಾಲೆಯಲ್ಲಿ ತೂಗಾಡಿದಂತಿರುತ್ತದೆ.

ಉದಾ : ಸ ರಿ ಸ ಪಾ ಪ, ರಿ ಗ ರಿ ಮಾ ಮ ಇತ್ಯಾದಿ.

೧೦. **ಮೂರ್ಛನ**—ರಾಗಭಾವಕ್ಕೆ ತಕ್ಕಂತೆ ಷಡ್ಜದಿಂದ ಕ್ರಮವಾಗಿ ಆರೋಹಣಕ್ರಮದಲ್ಲಿ ಮುಂದುವರಿಸಿ ದೀರ್ಘನಿಷಾದದಲ್ಲಿ ಮುಕ್ತಾಯ ಮಾಡಿ ತರುವಾಯ ರಿಷಭದಿಂದ ತೊಡಗಿ ದೀರ್ಘ ಷಡ್ಜದಲ್ಲಿ ಮುಕ್ತಾಯಗೊಳಿಸುವುದು.

ಉದಾ : ಭೈರವಿರಾಗ—ಸ ರಿ ಗ ಮ ಪ ದ ನೀ — ರಿ ಗ ಮ ಪ ದ ನಿ ಸಾ,
ಗ ಮ ಪ ದ ನಿ ಸ ರೀ — ಮ ಪ ದ ನಿ ಸ ರಿ ಗಾ

ಇತ್ಯಾದಿ (ಇತರ ವಿವರಗಳಿಗೆ ನೋಡಿ—ಗಮಕ).

**ದಶಾವತಾರ**—(೧) ಕನ್ನಡದ ಒಂದು ಯಕ್ಷಗಾನ.

**ದಶಾವತಾರ ಅಷ್ಟಪದಿ**—ಇದು ಜಯದೇವ ಕವಿಯ ಗೀತಗೋವಿಂದ ಕಾವ್ಯದ ಪ್ರಥಮ ಅಷ್ಟಪದಿ. ಇದರ ಪ್ರತಿಶ್ಲೋಕವು ವಿಷ್ಣುವಿನ ಒಂದೊಂದು ಅವತಾರದ ವಿಚಾರವನ್ನೊಳಗೊಂಡಿದೆ

**ದಶಾವತಾರ ದಿವ್ಯನಾಮಕೀರ್ತನೆ** — ಶ್ರೀತ್ಯಾಗರಾಜರು ರಚಿಸಿರುವ ಭೂಪಾಲರಾಗದ ದೀನಜನಾವನ ಎಂಬ ಕೃತಿಯು ವಿಷ್ಣುವಿನ ದಶಾವತಾರವನ್ನು ಕುರಿತು ಹೇಳುತ್ತದೆ. ಜಯದೇವ, ಪುರಂದರದಾಸರು ಮತ್ತು ತ್ಯಾಗರಾಜರು ಬುದ್ಧನನ್ನು ವಿಷ್ಣುವಿನ ಒಂದು ಅವತಾರವೆಂದು ಪರಿಗಣಿಸಿರುವುದನ್ನು ಇಲ್ಲಿ ನೆನೆಯಬಹುದು.

**ದಶಾವತಾರ ರಾಗಮಾಲಿಕಾ**— ತಿರುವಾಂಕೂರಿನ ಸ್ವಾತಿತಿರುನಾಳ್ ಮಹಾರಾಜರು ರಚಿಸಿರುವ 'ಕಮಲಜಾಸ್ಯ' ಎಂಬ ಹತ್ತು ರಾಗಗಳಲ್ಲಿರುವ ರಚನೆಯು ಪ್ರಸಿದ್ಧವಾದ ದಶಾವತಾರ ರಾಗಮಾಲಿಕೆ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಭಾರ್ಗವರಾಮ, ರಾಮ, ಬಲರಾಮ, ಕೃಷ್ಣ ಮತ್ತು ಕಲ್ಕ್ಯವತಾರಗಳನ್ನು ಕುರಿತು ಇದನ್ನು ರಚಿಸಲಾಗಿದೆ. ಇದು ಮೋಹನ, ಬಿಲಹರಿ, ಧನ್ಯಾಸಿ, ಸಾರಂಗ, ಮಧ್ಯಮಾವತಿ, ಅಠಾಣ, ನಾಟಕುರಂಜಿ, ದರ್ಬಾರ್, ಆನಂದಭೈರವಿ ಮತ್ತು ಸೌರಾಷ್ಟ್ರ ರಾಗಗಳಲ್ಲಿದೆ.

**ದರ್ಶನ ಅಷ್ಟಪದಿ**—ಜಯದೇವ ಕವಿಯ ಗೀತಗೋವಿಂದ ಕಾವ್ಯದ ೧೯ನೆ ಅಷ್ಟಪದಿಗೆ ದರ್ಶನ ಅಷ್ಟಪದಿ ಎಂದು ಹೆಸರು. ಇದಕ್ಕೆ ಈ ಹೆಸರು ಬರಲು ಕಾರಣ ಒಂದು ಕತೆಯಿಂದ ತಿಳಿದು ಬರುತ್ತದೆ ಜಯದೇವನು ಪೂರ್ತಿಮಾಡದೆ ಬಿಟ್ಟು ಹೋಗಿದ್ದ ಶ್ಲೋಕವನ್ನು ಶ್ರೀಕೃಷ್ಣನು ಜಯದೇವನರೂಪದಲ್ಲಿ ಬಂದು, ಪದ್ಮಾವತಿಯಿಂದ ಆ ಹಸ್ತಪ್ರತಿಯನ್ನು ತೆಗೆದುಕೊಂಡು ಆ ಎರಡು ಸಾಲುಗಳನ್ನು ಬರೆದು ಹೋದನು. ಇದಕ್ಕೆ ಗರುಡಪದಾಷ್ಟಪದಿ ಎಂಬ ಹೆಸರು ಇದೆ.

**ದಯಾರಂಜನಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ದ ಸ
ಅ : ಸ ನಿ ದ ಮ ಗ ರಿ ಸ

**ದಯಾವತೀ**—ಭರತ ಮತ್ತು ಶಾರ್ಙ್ಗದೇವನ ಶ್ರುತಿ ಪದ್ಧತಿಯಂತೆ ಇದು ಋಷಭದ ಪ್ರಥಮ ಶ್ರುತಿಯ ಹೆಸರು.

**ದಯಾಶ್ಯಾನಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ನಿ ಸ

ಅ: ಸ ನಿ ದ ಮ ಗ ರಿ ಸ

**ದರಾರ್ದರಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ದರು**—ಇದೊಂದು ವಿಶೇಷವಾದ ಸಂಗೀತ ರಚನೆ. ನೃತ್ಯ ರೂಪಕ ಮತ್ತು ಗೇಯರೂಪಕಗಳಲ್ಲಿ ಬರುವ ಕಥಾವಸ್ತುವುಳ್ಳ ಹಾಡು. ದರು ಎಂಬ ಹೆಸರು ಧ್ರುವಾ ಎಂಬ ಪದದ ಅಪಭ್ರಂಶ. ಇದರ ವಸ್ತುವು ಪೋಷಕನ ಸ್ತುತಿ, ಪ್ರಣಯ, ಚಾರಿತ್ರಿಕ ಅಥವಾ ಪೌರಾಣಿಕ ಪ್ರಸಂಗಗಳಿಗೆ ಸಂಬಂಧಿಸಿದ ವಿಷಯವಾಗಿರಬಹುದು. ಇದರಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಮೂರು ಅಥವಾ ಐದು ಚರಣಗಳಿರುತ್ತವೆ ಕೆಲವು ದರುಗಳಲ್ಲಿ ಅನುಪಲ್ಲವಿ ಇರುವುದಿಲ್ಲ. ಚರಣದ ಕೊನೆಯಲ್ಲಿ ಮುಕ್ತಾಯಸ್ವರ ಅಥವಾ ಪಾಟಾಕ್ಷರ ಇರುತ್ತದೆ.

ದರುವಿನ ಸಾಹಿತ್ಯದ ವಿಷಯವನ್ನನುಸರಿಸಿ ಹಲವು ಬಗೆಗಳನ್ನಾಗಿ ವರ್ಗೀಕರಿಸಬಹುದು.

೧. **ಪಾತ್ರಪ್ರವೇಶದರು**—ಈ ಹಾಡು ರಂಗವನ್ನು ಪ್ರವೇಶಿಸುವ ಪಾತ್ರ ಪರಿಚಯ ಮಾಡಿಕೊಡುತ್ತದೆ. ಪಾತ್ರಧಾರಿಯು ತನ್ನ ನಾಟ್ಯಕೌಶಲ್ಯವನ್ನು ಪ್ರದರ್ಶಿಸಲು ಇದು ಒಳ್ಳೆಯ ಅವಕಾಶವೀಯುತ್ತದೆ.

೨. **ಸ್ವಗತದರು**—ಇದು ವಿಳಂಬ ಕಾಲದಲ್ಲಿರುತ್ತದೆ. ಪಾತ್ರಧಾರಿಯು ತನ್ನ ಆಲೋಚನೆಯನ್ನು ಈ ಹಾಡಿನ ಮೂಲಕ ಪ್ರಕಟಗೊಳಿಸುತ್ತಾನೆ.

೩. **ವರ್ಣನದರು**—ಇದು ನಾಟಕಕ್ಕೆ ಸಂಬಂಧಿಸಿದ ವಿಷಯವನ್ನು ವರ್ಣಿಸುವ ಹಾಡು. ವ್ಯಕ್ತಿ, ವಿಷಯ ಅಥವಾ ಘಟನೆಗಳ ವರ್ಣನೆಯಿರುತ್ತದೆ.

೪. **ಕೋಲಾಟದರು**—ಪಾತ್ರಧಾರಿಗಳು ಕೋಲಾಟವಾಡುತ್ತ ಈ ದರುವನ್ನು ಹಾಡುವರು.

೫ **ಸಂವಾದದರು**—ಸಂಭಾಷಣೆಯ ರೂಪದಲ್ಲಿ ಕಥೆಯು ಮುಂದುವರಿಯುವ ದರು. ಇದರಲ್ಲಿ ಹಾಡು ನೃತ್ಯಗಳೆರಡೂ ಇರುತ್ತವೆ.

೬. **ಉತ್ತರಪ್ರತ್ಯುತ್ತರದರು**—ಇದರಲ್ಲಿ ಎರಡು ಪಾತ್ರಗಳು ಚುರುಕಾದ ವಾಕ್ಯಖಂಡವನ್ನು ಹಾಡಿ ನರ್ತಿಸಿ ಕಥೆಯನ್ನು ಮುಂದುವರೆಸುತ್ತವೆ.

ದರುವಿನ ಪ್ರಾರಂಭದಲ್ಲಿರುವ ನೃತ್ತಕ್ಕೆ ಮುಖಜತಿ ಎಂದು ಹೆಸರು. ದರುವಿನ ಬೇರೆ ಬೇರೆ ಖಂಡಗಳನ್ನು ಹಾಡಿ ಮುಗಿಸುವ ನೃತ್ತಕ್ಕೆ ಮಕುಟಜತಿ ಎಂದು ಹೆಸರು. ಮುಕ್ತಾಯದಲ್ಲಿರುವ ನೃತ್ತಕ್ಕೆ ಅಂತ್ಯಜತಿ ಎಂದು ಹೆಸರು.

ಮೇಳತ್ತೂರು ವೆಂಕಟರಾಮಶಾಸ್ತ್ರಿ, ಶಾಹಜಿ, ರಾಮಸ್ವಾಮಿ ದೀಕ್ಷಿತರು, ನಾರಾಯಣತೀರ್ಥ, ಸ್ವಾತಿತಿರುನಾಳ್ ಮಹಾರಾಜ, ಬಾಲುಸ್ವಾಮಿ ದೀಕ್ಷಿತರು, ಸುಬ್ಬರಾಮ ದೀಕ್ಷಿತರು, ಮುತ್ತಯ್ಯ ಭಾಗವತರು ಸೊಗಸಾದ ದರುಗಳನ್ನು ರಚಿಸಿದ್ದಾರೆ.

**ದರುಬಾರ**—ಚತುರ್ದಂಡಿ ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ದೇಶೀರಾಗ

**ದವಡೆತಾನ**—ಹಲ್ಲು ಕಚ್ಚಿಕೊಂಡು ಬಾಯಿ ತುದಿಯಲ್ಲಿ ಹಾಡುವ ತಾನ. ಇದು ತುಂಬುಕಂಠದ ತಾನವಲ್ಲ. ನಾಭಿತಾನವು ಅತ್ಯಂತ ಗಂಭೀರವಾಗಿದ್ದು, ಮನಮುಟ್ಟುವಂತಿರುತ್ತದೆ.

**ದವಳೆಶಂಖ** — ನಾಗಸ್ವರ ಕಚೇರಿಯಲ್ಲಿ ತಾಳಕ್ಕಾಗಿ ಬಳಸಲಾಗುವ ಶಂಖವಾದ್ಯ.

**ದವಂಡೆ** – ಇದು ಉಡುಕ್ಕೆಗಿಂತ ದೊಡ್ಡದಾಗಿರುವ ಡಮರುವಿನ ಆಕಾರದಲ್ಲಿರುವ ವಾದ್ಯ. ಇದನ್ನು ಮರದಿಂದ ತಯಾರಿಸುತ್ತಾರೆ. ಇದರ ಎರಡು ಮುಖಗಳಿಗೆ ಮಂದವಾಗಿರುವ ಚರ್ಮವನ್ನು ಅಳವಡಿಸಿದೆ. ಕಡ್ಡಿಯಿಂದ ಇದನ್ನು ಬಾರಿಸಿ ನುಡಿಸುತ್ತಾರೆ. ಇದನ್ನು ಮಾರಿಗುಡಿಗಳಲ್ಲಿ ಹೆಚ್ಚಾಗಿ ಬಳಸುವರು.

**ದವ್ವಿ**—ಈ ರಾಗವು ೧೫ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ

ಅ: ಸ ನಿ ಮ ಗ ರಿ ಸ

**ದಂಡ** (೧) ರುದ್ರವೀಣೆಯ ಕಾಂಡ. ಅನುರಣನಕ್ಕಾಗಿ ಎರಡು ಸೋರೆ ಬುರುಡೆಗಳನ್ನು ಈ ಕಾಂಡಕ್ಕೆ ಸೇರಿಸಲಾಗಿದೆ. ಒಂದನ್ನು ಕಾಂಡದ ಎಡಗಡೆ ಕೊನೆಯಲ್ಲೂ ಮತ್ತೊಂದನ್ನು ಬಲಗಡೆ ಕೊನೆಯಲ್ಲೂ ಅಳವಡಿಸಲಾಗಿದೆ.

(೨) ಕೊಳಲಿನ ರಂಧ್ರಗಳನ್ನು ಕೊರೆದಿರುವ ಬಿದಿನ ಅಥವಾ ಬೇರೆ ವಸ್ತುವಿನ ಕೊಳವೆ

**ದಂಡಕ** – ಇದೊಂದು ಸಾಹಿತ್ಯರಚನಾ ವಿಶೇಷ ನಿಯತವಾದ ಗಣಗಳಿಂದ ಕೂಡಿ, ಪಾದವಿಭಾಗವಿಲ್ಲದೆ ದಂಡಾಕಾರವಾಗಿರುವ ಶಬ್ದ ರಚನಾ ವಿಶೇಷವು ದಂಡಕ. ಉದಾ : ಕಾಳಿದಾಸನ ಶ್ಯಾಮಲಾದಂಡಕ.

**ದಂಡ ಪರಿಮಾಣ**—ಕೊಳಲಿನ ಉದ್ದದ ಪ್ರಮಾಣಕ್ಕೆ ದಂಡ ಪರಿಮಾಣವೆಂದು ಹೆಸರು. ದಕ್ಷಿಣಭಾರತದ ಕಚೇರಿ ಕೊಳಲು ೧೪ ಅಂಗುಲ ಉದ್ದವಿರುತ್ತದೆ.

**ದಂಡರಾಸ್**—ಕೋಲಾಟಕ್ಕೆ ದಂಡರಾಸವೆಂದು ಹೆಸರು. ಇದೊಂದು ಜಾನಪದ ನೃತ್ಯ. ಒಳ್ಳೆಯ ಉಡುಪನ್ನು ಧರಿಸಿರುವ ಬಾಲಕಿಯರು ದಸರಾ,

ಪೊಂಗಲ್ ಮುಂತಾದ ಹಬ್ಬಗಳಲ್ಲಿ ಕೋಲಾಟವಾಡುತ್ತಾರೆ. ಹಳದಿ ಮತ್ತು ಕೆಂಪು ಬಣ್ಣ ಎರಡು ಅಡಿ ಉದ್ದವಿರುವ ಎರಡು ಕೋಲುಗಳನ್ನು ಹಿಡಿದು ಮುಂದಕ್ಕೆ ಮತ್ತು ಪಕ್ಕಕ್ಕೆ ಕುಣಿಯುತ್ತಾ, ಒಂದು ಸಲ ತಮ್ಮ ಕೈಗಳಲ್ಲಿರುವ ಕೋಲುಗಳನ್ನೂ ಮತ್ತೊಂದು ಸಲ ಎದುರಿನಲ್ಲಿರುವ ಬಾಲಕಿಯರ ಕೋಲನ್ನೂ ಹೊಡೆದು ಹಾಡುತ್ತಾರೆ. ರಾಮೇಶ್ವರ, ಆವಡಿಯಾರ್ ಕೋವಿಲ್, ಪೇರೂರು, ಲೇಪಾಕ್ಷಿ, ತಾಡಪತ್ರಿ ದೇವಾಲಯುಗಳಲ್ಲಿ ಕೋಲಾಟದ ಸುಂದರವಾದ ಶಿಲ್ಪಗಳಿವೆ ಹಗ್ಗಗಳನ್ನು ಜಡೆಯಂತೆ ಹೆಣೆಯುವ ಕೋಲಾಟಕ್ಕೆ ವೇಣಿದಂಡರಾಸವೆಂದು ಹೆಸರು. ಭಜನೆಗಳಲ್ಲಿ ವಯಸ್ಕರೂ ಕೋಲಾಟವಾಡುತ್ತಾರೆ.

**ದಂಡಾಯುಧಪಾಣಿ ಪಿಳ್ಳೈ**—ಇವರು ದಕ್ಷಿಣಭಾರತದ ಒಬ್ಬ ಪ್ರಸಿದ್ಧ ನಾಟ್ಯಕಲಾವಿದರು. ಅನೇಕ ಶಿಷ್ಯರನ್ನು ತಯಾರುಮಾಡಿದ್ದಾರೆ ಚಿತ್ರಂಬಲ ಕುರವಂಜಿ ಎಂಬ ತಮಿಳು ನೃತ್ಯನಾಟಕವನ್ನು ರಚಿಸಿದ್ದಾರೆ.

**ದಂಡಹಸ್ತ**—ಪುರಾತನ ಗ್ರಂಥಗಳಲ್ಲಿ ಉಕ್ತವಾಗಿರುವ ೧೨ ಪಟಹ ವಾದ್ಯಗಳಲ್ಲಿ ಒಂದು ಬಗೆಯ ವಾದ್ಯ.

**ದಂಡಿ**—ವೀಣೆ, ಗೋಟುವಾದ್ಯ, ತಂಬೂರಿ ಮುಂತಾದ ತಂತೀವಾದ್ಯಗಳ ಉದ್ದವಾದ ಮರದ ಕಾಂಡಕ್ಕೆ ದಂಡಿ ಎಂದು ಹೆಸರು. ಇದು ಟೊಳ್ಳಾಗಿರುತ್ತದೆ. ದೋಣಿ ಪಟ್ಟಿಯ ಮೇಲ್ಭಾಗವನ್ನು ಅದರ ಅಗಲಕ್ಕೆ ಸರಿಯಾದ ಒಂದು ಮರದ ಪಟ್ಟಿಯಿಂದ ಮುಚ್ಚಿರುತ್ತಾರೆ ದಂಡಿಯು ಕೊಡವನ್ನೂ ಅನುರಣನದ ಭಾಗವನ್ನೂ ಸೇರಿಸುತ್ತದೆ. ಅನುರಣನಕ್ಕೆ ಸೋರೆ ಬುರುಡೆಯನ್ನು ಹಾಕಿದಾಗ ದಂಡಿಯು ಮರದ್ದಾಗಿರುತ್ತದೆ. ಏಕದಂಡಿ ವೀಣೆಯಲ್ಲಿ ದಂಡಿ ಮತ್ತು ಕೊಡವನ್ನು ಒಂದೇ ಮರದಲ್ಲಿ ಕೊರೆಯಲಾಗಿದೆ.

**ದಂಡಿಹಲಗೆ**—ವೀಣೆ, ತಂಬೂರಿ, ಗೋಟುವಾದ್ಯದ ದಂಡಿಯ ಮೇಲ್ಭಾಗದಲ್ಲಿ ಮುಚ್ಚಲಾಗಿರುವ ಮರದ ಹಲಗೆಯ ಪಟ್ಟಿ.

**ದಂಡಿವಸಂತ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಸ

ಅ: ಸ ದ ನಿ ದ ಪ ಮ ಗ ಮ ರಿ ಸ

**ದಂಭೋಳಿ**--ಈ ರಾಗವು ೫೧ನೆಯ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ

ಅ: ಸ ನಿ ಮ ಗ ರಿ ಸ

**ದಕ್ಷಯಾಗಂ**—ಇರಯಿಮನ್ ತಂಪಿ ರಚಿಸಿರುವ ಒಂದು ಕಥಕಳಿ ಗೇಯ ನಾಟಕ.

**ದಕ್ಷಿಣ**—ಇದು ತಾಳದಶ ಪ್ರಾಣಗಳಿಗೆ ಸಂಬಂಧಿಸಿದ ಷಣ್ಮಾರ್ಗಗಳಲ್ಲಿ ಮೊದಲನೆಯದು. ಪ್ರತಿ ತಾಳಾಕ್ಷರಕ್ಕೆ ೮ ಮಾತ್ರೆಗಳು ಅಥವಾ ೩೨ ಅಕ್ಷರ ಕಾಲಗಳಾಗುತ್ತವೆ

**ದಕ್ಷಿಣಗುರ್ಜರಿ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಗುರ್ಜರಿರಾಗದ ಒಂದು ಉಪಾಂಗರಾಗ

**ದಕ್ಷಿಣಾಮೂರ್ತಿ ಪಿಳ್ಳೈ** (೧೮೭೫–೧೯೩೭) —ಇವರು ಪುದುಕೋಟೆಯ ಮಾನ್ಪುಂಡಿಯಾ ಪಿಳ್ಳೆಯ ಒಬ್ಬ ಪ್ರಮುಖ ಶಿಷ್ಯರು ಮತ್ತು ಈ ಶತಮಾನದ ಪೂರ್ವಾರ್ಧದ ಪ್ರಸಿದ್ಧ ಖಂಜಿರ ಮತ್ತು ಮೃದಂಗ ವಿದ್ವಾಂಸರು. ತಂಜಾವೂರು ಕೃಷ್ಣ ಭಾಗವತರು, ತಂಜಾವೂರು ಪಕ್ಕಿರಿ ಮತ್ತು ನಾರಾಯಣಸ್ವಾಮಿ ಅಪ್ಪ ಮುಂತಾದವರಿಂದ ಪ್ರಭಾವಿತರಾಗಿದ್ದರು. ಖಂಜಿರ ವಾದ್ಯವನ್ನು ನುಡಿಸುವುದರಲ್ಲಿ ಅತ್ಯಂತ ಪ್ರವೀಣರಾಗಿದ್ದರು. ಅಪಾರವಾದ ಲಯಜ್ಞಾನ, ಉತ್ತಮ ಮನೋಧರ್ಮವುಳ್ಳವರಾಗಿದ್ದರು. ಇವರ ತನಿ ವಾದನವು ಕೇಳಲು ಆಪ್ಯಾಯಮಾನವಾಗಿರುತ್ತಿತ್ತು. ತಮ್ಮ ವಾದನ ವೈಖರಿಯಿಂದ ಸಭಿಕರನ್ನು ಬೆರಗುಗೊಳಿಸುತ್ತಿದ್ದರು. ಧಾರ್ಮಿಕ ಪ್ರವೃತ್ತಿಯುಳ್ಳವರಾಗಿದ್ದುದಲ್ಲದೆ ಮುರುಗನ ಪರಮಭಕ್ತರಾಗಿದ್ದು ಚಿನ್ಮಯಾನಂದ ಗುರು ಎಂಬ ಹೆಸರಿನ ಸನ್ಯಾಸಿಗಳಾದರು. ಇವರ ಶಿಷ್ಯವರ್ಗದವರು ತಂಜಾವೂರು ರಾಮದಾಸರು, ಪಾಲ್ಘಾಟ್ ಮಣಿಅಯ್ಯರ್, ದೇವಕೋಟೆ ಸುಂದರರಾಜ ಅಯ್ಯಂಗಾರ್ ಮುಂತಾದವರು.

**ದಕ್ಷಿಣಾಮೂರ್ತಿ ಶಾಸ್ತ್ರಿ** (೧೯ನೆ ಶ.)—ಇವರು ತ್ಯಾಗರಾಜರ ನಂತರ ಇದ್ದ ಒಬ್ಬ ಪ್ರಸಿದ್ಧ ವಾಗ್ಗೇಯಕಾರರು. ಮುಲಿಕಿನಾಡು ತೆಲುಗು ಬ್ರಾಹ್ಮಣರು ಮತ್ತು ತಮಿಳುನಾಡಿನ ಕರೂರಿನವರು. ಇವರು ಬಂಧು ಮತ್ತು ಪಿಟೀಲು ವಿದ್ವಾಂಸರಾಗಿದ್ದ ಕರೂರು ಚಿನ್ನದೇವುಡು ಎಂಬುವರೊಡನೆ ಸೇರಿ ಅನೇಕ ಸರಳವಾದ ತೆಲುಗು ಕೃತಿಗಳನ್ನು ರಚಿಸಿದರು. ಹಲವು ಕೃತಿಗಳ ಧಾತುವನ್ನು ದೇವುಡು ಅಯ್ಯನವರು ರಚಿಸಿದರು ಮತ್ತು ಅವುಗಳ ಮಾತು ಶಾಸ್ತ್ರಿಗಳದು. ಇವರ ಮುದ್ರೆ ಗರ್ಭಪುರಿ. ಈ ಕೃತಿಗಳು ಗರ್ಭಪುರಿ ಕೃತಿಗಳೆಂದು ಪ್ರಸಿದ್ಧವಾಗಿವೆ.

**ದಾಟಿಕ ಪಂಚಕ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನಕರಾಗ.

ಆ: ಸ ಗ ರಿ ಗ ಮ ಪ ಮ ದ ನಿ ಪ ಸ

ಅ: ಸ ನಿ ದ ಪ ಮ ಗ ರಿ ಸ

**ದಾಟಿಬಲ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಗ ರಿ ಸ

**ದಾಟಿವರಾಂಜಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಪ ಸ

ಅ: ಸ ನಿ ಪ ಮ ರಿ ಸ

**ದಾಟುಪ್ರಯೋಗ**—ದಾಟು ಸ್ವರಸಮೂಹಗಳ ಪ್ರಯೋಗಗಳಿಗೆ ದಾಟು ಪ್ರಯೋಗವೆಂದು ಹೆಸರು. ಇವು ರಾಗದ ವಿಶೇಷ ಸ್ವರೂಪವನ್ನು ಪ್ರಕಾಶ ಗೊಳಿಸುತ್ತವೆ. ತಾನವರ್ಣಗಳು ಮತ್ತು ಕಟಿಕಗಳಲ್ಲಿ ಇವುಗಳನ್ನು ಅಳವಡಿಸ ಲಾಗಿದೆ

**ದಾಟುಸ್ವರ**—ಒಂದು ಸ್ವರದಿಂದ ದೂರವಿರುವ ಮತ್ತೊಂದು ಸ್ವರಕ್ಕೆ ದಾಟು ಸ್ವರವೆಂದು ಹೆಸರು. ಇವುಗಳ ಮಧ್ಯೆ ಬೇರೆ ಸ್ವರಗಳಿರುವುದಿಲ್ಲ. ದ ಗ ರಿ ಸ ದ ಪ ಎಂಬ ಮೋಹನರಾಗದ ಸ್ವರ ಸಮೂಹದಲ್ಲಿ ಗಾಂಧಾರ ಸ್ವರವು ಅದರ ಹಿಂದಿನ ಸ್ವರಕ್ಕೆ ಸಂಬಂಧಿಸಿದಂತೆ ದಾಟು ಸ್ವರವಾಗಿದೆ. ಧೈವತದಿಂದ ಗಾಂಧಾರಕ್ಕೆ ಒಂದು ನೆಗೆತದಂತಿದೆ. ದಾಟು ಸ್ವರವು ಅದರ ಹಿಂದಿನ ಸ್ವರದೊಂದಿಗೆ ಸಂವಾದಿ ಅಥವ ಅನುವಾದಿ ಸಂಬಂಧವನ್ನು ಹೊಂದಿರುತ್ತದೆ.

**ದಾಟುಸ್ವರವರಿಸೆ** ಇವು ಗಾಯನ ಮತ್ತು ವಾದ್ಯವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾದ ದಾಟುಸ್ವರಗಳ ಅಭ್ಯಾಸಗಳು. ಇವುಗಳ ಅಭ್ಯಾಸದಿಂದ ಸ್ವರಜ್ಞಾನವು ಹೆಚ್ಚುತ್ತದೆ. ವಾದ್ಯಾಭ್ಯಾಸದಲ್ಲಿ ತಂತಿಗಳನ್ನು ನುಡಿ ಸುವ ಬೆರಳುಗಳ ಕುಶಲತೆ ಹೆಚ್ಚುತ್ತದೆ

**ದಾಡಿಯುಮನ್**—ಈ ರಾಗವು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ದಾದ್ರಾ**—ಇದು ಹಿಂದೂಸ್ಥಾನಿ ಸಂಗೀತದ ಒಂದು ತಾಳದ ಹೆಸರು. ಇದರ ಒಂದಾವರ್ತಕ್ಕೆ ೬ ಅಕ್ಷರಗಳು ಇದು ಕರ್ಣಾಟಕ ಸಂಗೀತದ ರೂಪಕತಾಳವನ್ನು ಹೋಲುತ್ತದೆ. ಇದರ ಅಂಗ ೧ ಲಘು ೧ ಧ್ರುತ.

**ದಾನವಮಂಜರಿ** ಈ ರಾಗವು ೪೬ನೆ ಮೇಳಕರ್ತ ಷಡ್ವಿಧಮಾರ್ಗಿಣಿಯ ಒಂದು ಜನ್ಯರಾಗ

ಆ: ಸ ಗ ಮ ದ ನಿ ಪ ದ ನಿ ಸ

ಅ: ಸ ನಿ ದ ಮ ಗ ರಿ ಸ

**ದಾನರಾಕ್ಷಸ**—ಈ ರಾಗವು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಮ ಗ ಪ ನಿ ಸ

ಅ: ಸ ನಿ ದ ಗ ರಿ ಸ

**ದಾಮ್ಯ (ಧೌಮ್ಯ)**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ದಾರಕ ವಸಂತ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ನಿ ಸ

ಅ: ಸ ನಿ ಪ ದ ಮ ಗ ರಿ ಸ

**ದಾರಾಸುರಂ** ಈ ಸ್ಥಳವು ತಮಿಳುನಾಡಿನ ಕುಂಭಕೋಣದಿಂದ ಎರಡು ಮೈಲಿ ದೂರದಲ್ಲಿದೆ. ಇಮ್ಮಡಿ ರಾಜರಾಜಚೋಳನು (೧೧೪೬–೧೧೭೩) ನಿರ್ಮಿಸಿದ ಭವ್ಯವಾದ ದೇವಾಲಯ ಒಂದಿದೆ. ಇದರ ಮಹಾದ್ವಾರದ ಬಳಿಯಿರುವ ಬಲಿಪೀಠದ ದಕ್ಷಿಣಕ್ಕೆ ಕೆತ್ತನೆಯಿಂದ ಕೂಡಿದ ಶಿಲೆಯ ಮೆಟ್ಟಲುಗಳಿವೆ. ಪ್ರತಿ ಕಲ್ಲನ್ನು ಮುಟ್ಟಿ ದರೆ ಸಂಗೀತದ ಒಂದೊಂದು ಸ್ವರದ ಶಬ್ದವು ಬರುತ್ತದೆ.

**ದಾರಿ**—ಅರಭಟ್ಟನಾವಲರ್ ವಿರಚಿತ 'ನಾಟ್ಟಿಯ ಶಾಸ್ತಿರಂ' ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದಾರುವೀಣಾ**—ಮರದಿಂದ ಮಾಡಿರುವ ವೀಣೆ.

**ದಾಸಕೂಟ**—ವ್ಯಾಸರಾಯಸ್ವಾಮಿಗಳು (೧೪೪೭–೧೫೩೯) ವ್ಯಾಸಕೂಟ ದಿಂದ ವಿದ್ವಾಂಸವರ್ಗವನ್ನೂ, ದೀಕ್ಷಾಬದ್ಧ ಯತಿಗಳ ಗುಂಪನ್ನು ಬೆಳೆಸಿದಂತೆ ದಾಸಕೂಟದಿಂದ ದೀಕ್ಷಾಬದ್ಧ ದಾಸರ ಗುಂಪನ್ನು ಕಟ್ಟಿ ಕನ್ನಡ ಸಾಹಿತ್ಯಕ್ಕೆ, ಕರ್ಣಾಟಕ ಸಂಗೀತಕ್ಕೆ ಒಂದು ಹೊಸ ತಿರುವು ಕೊಟ್ಟುದಲ್ಲದೆ ಹರಿಭಕ್ತಿ ಮಾರ್ಗ ವನ್ನೂ, ಲೋಕನೀತಿಯನ್ನೂ ಮನೆಮನೆಗೆ ಮುಟ್ಟುವಂತೆ ಮಾಡಿದರು. ಪುರಂದರ ದಾಸರು, ಕನಕದಾಸರು ಮುಂತಾದವರೆಲ್ಲರೂ ಈ ಹರಿದಾಸರ ಕೂಟಕ್ಕೆ ಸೇರಿದವರು

**ದಾಸರಪದಗಳು**—ಕರ್ಣಾಟಕದ ಹರಿದಾಸರಿಂದ ವಿರಚಿತವಾದ ಭಕ್ತಿಗೀತೆ ಗಳನ್ನು ದಾಸರ ಪದಗಳು, ದೇವರನಾಮಗಳು ಎಂದು ಹೇಳುವ ರೂಢಿಯಿದೆ.

**ದಾಸರಾಗ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ಒಂದು ವರ್ಗದ ರಾಗ.

**ದಾಸರಿ**—ಇವರು ಕರ್ಣಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಶ್ಯಾಮಾಶಾಸ್ತ್ರಿಗಳ ಶಿಷ್ಯರು. ಇವರು ಶ್ರೇಷ್ಠ ವಿದ್ವಾಂಸರಾಗಿದ್ದು ನಾಗಸ್ವರವನ್ನು ಅದ್ಭುತವಾಗಿ ನುಡಿಸುತ್ತಿದ್ದರು. ಇವರು ೧೯ನೆ ಶತಮಾನದ ಪ್ರಥಮಾರ್ಧದಲ್ಲಿದ್ದರು. ಇವರ ಸಂಗೀತವನ್ನು ತ್ಯಾಗರಾಜರು ಬಹಳ ಮೆಚ್ಚಿಕೊಂಡಿದ್ದರು. ಒಂದು ಸಲ ತಿರುವೈಯ್ಯಾರಿನ ದೇವಾಲಯದ ಉತ್ಸವದಲ್ಲಿ ದಾಸರಿ ನಾಗಸ್ವರವನ್ನು ನುಡಿಸು ತ್ತಿದ್ದರು. ಉತ್ಸವವು ದಕ್ಷಿಣ ಮಡಬೀದಿಗೆ ಬಂದಿತು. ತಿರುಮಂಜಿನ ಬೀದಿಯ

ಸೇರುವ ಜಾಗದಲ್ಲಿ ಪದ್ಧತಿಯಂತೆ ದಾಸರಿಯು ನಿಂತು ಶುದ್ಧಸಾವೇರಿ ರಾಗದ ಆಲಾಪನೆಯನ್ನು ಬಹಳ ಸೊಗಸಾಗಿ ನುಡಿಸಿ ತ್ಯಾಗರಾಜರ ದಾರಿನಿ ತೆಲುಸು ಕೊಂಟಿ ಎಂಬ ಕೃತಿಯನ್ನು ಹೃದಯಂಗಮವಾಗಿ ನುಡಿಸಿದರು. ಅಲ್ಲಿ ನೇರಿದ್ದ ಸಾವಿರಾರು ಜನರು ಆ ದಿವ್ಯವಾದ ಸಂಗೀತದಿಂದ ಮಹದಾನಂದ ಹೊಂದಿದರು. ರಾತ್ರಿಯ ನೀರವತೆಯು ಸಂಗೀತಕ್ಕೆ ವಿಶೇಷ ಮೆರುಗು ನೀಡಿತು ತಮ್ಮ ಮನೆಯಿಂದ ತ್ಯಾಗರಾಜರು ಈ ಸಂಗೀತವನ್ನು ಕೇಳಿ ಬಹುವಾಗಿ ಮೆಚ್ಚಿಕೊಂಡು ನೇರವಾಗಿ ದಾಸರಿಯ ಬಳಿ ಹೋಗಿ ತಮ್ಮ ಮೆಚ್ಚಿಗೆಯನ್ನು ವ್ಯಕ್ತಗೊಳಿಸಿದರು ಮಹಾವ್ಯಕ್ತಿಗಳಾದ ತ್ಯಾಗರಾಜರ ನೇರಪ್ರಶಂಸೆಯಿಂದ ದಾಸರಿಯ ಹೃದಯ ತುಂಬಿ ಬಂದು ಅವರ ಆಶೀರ್ವಾದ ಬೇಡಿದರು ಈ ಘಟನೆ ನಡೆದಾಗ ತ್ಯಾಗರಾಜರಿಗೆ ಎಪ್ಪತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಾಗಿತ್ತು.

(೨) ದಾಸಯ್ಯ ಎಂದು ಕರೆಯಲ್ಪಡಲಾಗುವವರು ವಿಷ್ಣುಭಕ್ತರು. ತಲೆಗೆ ಸುತ್ತಿದ ಶಿಂಬಿ ಅಥವಾ ಪೇಟ, ಶಂಖ, ಜಾಗಟೆ, ಕೈಯಲ್ಲಿ ಉದ್ದವಾಗಿರುವ ಕಬ್ಬಿಣದ ದೀಪ. ಹೆಗಲಿಗೆ ತಾಮ್ರ ಅಥವಾ ಹಿತ್ತಾಳೆಯ ಭವನಾಶಿ, ಹಣೆಯಲ್ಲಿ ನಾಮ ಇವು ದಾಸಯ್ಯನ ಲಕ್ಷಣಗಳು ಇವರು ಕತ್ತಿನಲ್ಲಿ ಹನುಮಂತನ ಚಿಕ್ಕ ಪ್ರತಿಮೆಯೊಂದನ್ನು ಧರಿಸಿರುತ್ತಾರೆ ಕೆಲವು ದಾಸಯ್ಯಗಳು ಹುಲಿಚರ್ಮವನ್ನು ಸುತ್ತಿಕೊಳ್ಳುತ್ತಾರೆ ಹಿಂದೂಗಳಲ್ಲಿ ಕೆಲವು ವರ್ಗದವರು ತಮ್ಮ ಧಾರ್ಮಿಕ ಕರ್ಮಗಳನ್ನು ನಡೆಸಲು ದಾಸಯ್ಯಗಳನ್ನು ನೇಮಿಸಿಕೊಳ್ಳುತ್ತಾರೆ. ಧನುರ್ಮಾಸದ ಮುಂಜಾನೆ, ಶನಿವಾರದ ಮುಂಜಾನೆಗಳಲ್ಲಿ ದಾಸಯ್ಯನನ್ನು ಬೀದಿಗಳಲ್ಲಿ ನೋಡಬಹುದು ಇವರು ಭಕ್ತಿಪದಗಳನ್ನೋ ಅಥವಾ ಕಥಾವಸ್ತುವುಳ್ಳ ಹಾಡುಗಳನ್ನೋ ಹಾಡುತ್ತ ಹೋಗುತ್ತಾರೆ.

**ದಾಸಿ** ಹಿಂದೆ ದೇವಾಲಯಗಳಲ್ಲಿ ದೇವರ ಮುಂದೆ ನೃತ್ಯಸೇವೆ ಮಾಡಲು ಗೊತ್ತು ಮಾಡಲ್ಪಟ್ಟ ದೇವದಾಸಿಯರಿದ್ದರು. ಇವರು ನೃತ್ಯ, ಸಂಗೀತ, ಶುದ್ಧ ಜೀವನ ಮತ್ತು ಭಕ್ತಿಗೆ ಪ್ರಸಿದ್ಧರಾಗಿದ್ದರು.

**ದಾಸಿಆಟ**—ಭರತನಾಟ್ಯದ ಹೆಸರು.

**ದಾಸುಮುಖಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಮ ಗ ಮ ಪ ದ ನಿ ಸ̇

ಅ : ಸ̇ ದ ಪ ಮ ಗ ರಿ ಸ

**ದ್ರಾವತಿ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದ್ರಾವಿಡಗಾನ ಸಾರ್ವಭೌಮ**—ಇದು ಪ್ರಸಿದ್ಧ ವಾಗ್ಗೇಯಕಾರರಾಗಿದ್ದ ತಿರುಪತಿಯ ತಾಳ್ಳಪಾಕಂ ಅಣ್ಣಮಾಚಾರ್ಯರ ಒಂದು ಬಿರುದು.

**ದ್ರಾವಿಡಗುರ್ಜರಿ**—ಪಾರ್ಶ್ವದೇವನ ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಉಪಾಂಗ ಸಂಪೂರ್ಣರಾಗಗಳಲ್ಲಿ ಒಂದು ರಾಗ ಸಂಗೀತರತ್ನಾಕರ ವೆಂಬ ಗ್ರಂಥದಲ್ಲೂ ಇದು ಉಕ್ತವಾಗಿದೆ

**ದ್ರಾವಿಡಶಿಶು**—ಆದಿಶಂಕರಾಚಾರ್ಯರು ತಮ್ಮ 'ಸೌಂದರ್ಯಲಹರಿ'ಯ ೭೫ನೆ ಶ್ಲೋಕದಲ್ಲಿ ಸೂಚಿಸಿರುವ ದ್ರವಿಡಶಿಶು ಯಾರೆಂಬುದನ್ನು ಕುರಿತು ವಿದ್ವಾಂಸ ರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ವ್ಯಾಖ್ಯಾನಕಾರರ ಪ್ರಕಾರ ಇದು ಶಂಕರ ಭಗವತ್ಪಾದರನ್ನೇ ಸೂಚಿಸುತ್ತದೆ ಇತರರ ಪ್ರಕಾರ ಇದು ತಿರುಜ್ಞಾನಸಂಬಂಧರ್ ರನ್ನು ಸೂಚಿಸುತ್ತದೆ ಇವರು ನಾಲ್ಕು ಪ್ರಸಿದ್ಧ ತಮಿಳು ಶೈವನಾಯನಾರರಲ್ಲಿ ಒಬ್ಬರು. ಅಪ್ಪರ್, ಸುಂದರಮೂರ್ತಿ ಮತ್ತು ಮಾಣಿಕ್ಯವಾಚಕರ್ ಇತರ ಮೂವರು ನಾಯನಾರರು. ಇವರೆಲ್ಲರ ಭಕ್ತಿಗೀತಗಳಿಗೆ ತೇವಾರಂ ಎಂದು ಹೆಸರು ಜ್ಞಾನ ಸಂಬಂಧರ್‌ರವರು ಆದಿಶಂಕರಾಚಾರ್ಯರ ಸಮಕಾಲೀನರಾಗಿದ್ದರೆಂದು ಹೇಳಬಹುದು.

**ದ್ರಾವಿಡಗೌಡ**—ಪಾರ್ಶ್ವದೇವನ ಸಂಗೀತ ಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಉಪಾಂಗ ಸಂಪೂರ್ಣರಾಗಗಳಲ್ಲಿ ಒಂದು ರಾಗ. ಸಂಗೀತರತ್ನಾಕರ ಮತ್ತು ಸಂಗೀತಸುಧಾ ಎಂಬ ಗ್ರಂಥಗಳಲ್ಲೂ ಉಕ್ತವಾಗಿದೆ. ಇದು ಮಾಯಾ ಮಾಳವಗೌಳ ರಾಗವನ್ನು ಹೋಲುತ್ತದೆ.

**ದ್ರಾವಿಡಪದ**—ತಮಿಳು ಭಾಷೆಯಲ್ಲಿರುವ ಒಂದು ಪದ.

**ದ್ರಾವಿಡವರಾಳಿ**—ಪಾರ್ಶ್ವದೇವನ ಸಂಗೀತಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಉಪಾಂಗ ಸಂಪೂರ್ಣ ರಾಗಗಳಲ್ಲಿ ಒಂದು ರಾಗ.

**ದ್ರಾವಿಡಸಂಗೀತ**—ಪುರಾತನ ಕಾಲದಲ್ಲಿ ತಮಿಳು ದೇಶದಲ್ಲಿ ಪ್ರಚಲಿತ ವಾಗಿದ್ದ ಸಂಗೀತ ಪದ್ಧತಿಗೆ ದ್ರಾವಿಡ ಸಂಗೀತವೆಂದು ಹೆಸರು. ಈ ಪದ್ಧತಿಯ ಶುದ್ಧ ಮೇಳವು ಈಗಿನ ಹರಿಕಾಂಭೋಜಿರಾಗವಾಗಿದೆ. ಪುರಾತನ ತಮಿಳರಿಗೆ ಹಲವು ಮೇಳ ಗಳು ಮತ್ತು ಜನ್ಯರಾಗಗಳು ತಿಳಿದಿತ್ತು. ಗ್ರಹಭೇದದಿಂದ ನೂತನ ರಾಗಗಳನ್ನು ಸೃಷ್ಟಿಸುವುದನ್ನು ತಿಳಿದಿದ್ದರು. ಸಪ್ತಸ್ವರಗಳಿಗೆ ಕುರಳ್, ತುಟ್ಟಂ, ಕೈಕ್ಕಿಟ್ಟೈ, ಉಳೈ, ಇಳಿ, ವಿಳರಿ ಮತ್ತು ತಾರಂ ಎಂಬ ಹೆಸರಿದ್ದುವು. ಯಾಳ್‌ವಾದ್ಯವು ಕಚೇರಿಯ ಮುಖ್ಯ ವಾದ್ಯವಾಗಿತ್ತು. ಕೊಳಲು ಮತ್ತು ಮೃದಂಗವು ಪಕ್ಕವಾದ್ಯ ಗಳಾಗಿದ್ದುವು. ಅವರ ಉತ್ತಮ ಸಂಗೀತಜ್ಞಾನದ ವಿಚಾರವಾಗಿ ಪುರಾತನ ತಮಿಳು ಸಾಹಿತ್ಯದಲ್ಲಿ ಹಲವು ಆಧಾರಗಳಿವೆ. ಆಗಿನ ಸಂಗೀತದ ಉತ್ತಮಾಂಶಗಳು ಈಗಿನ ಸಂಗೀತ ಪದ್ಧತಿಯಲ್ಲಿ ಸೇರಿಹೋಗಿವೆ.

**ದ್ರಾವಿಡಿ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದ್ರಾವಿಡಿಭಾಷಾ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದಾಕ್ಷಿಣಾತ್ಯ**—ಅದೇ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಭಿನ್ನ ಷಡ್ಜ ಭಾಷಾರಾಗ.

**ದಾಕ್ಷಿಣಾತ್ಯಭಾಷಾ**—ಅದೇ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

೧. **ದಾಕ್ಷಾಯಿಣಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ರಿ ಗ ಮ ನಿ ದ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

೨ ಇದೇ ಹೆಸರಿನ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಜನ್ಯವಾಗಿದೆ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಪ ರಿ ಸ

೩. ದಕ್ಷಬ್ರಹ್ಮನಿಂದ ಸ್ವಾಯಂಭುವ ಮನು ಪುತ್ರಿಯಾದ ಪ್ರಸೂತಿಯಲ್ಲಿ ಜನಿಸಿದವಳು. ಈಕೆ ಶಿವನನ್ನು ಮದುವೆಯಾಗಿದ್ದಳು. ಒಂದು ಸಲ ದಕ್ಷನು ವಾಜಪೇಯ ಯಾಗವನ್ನು ಮಾಡಿದಾಗ ದಾಕ್ಷಾಯಿಣಿ ಶಿವನಿಗೆ ಇಷ್ಟವಿಲ್ಲದಿದ್ದರೂ ಯಾಗಕ್ಕೆ ಹೋದಳು ಶಿವದ್ವೇಷಿಯಾದ ಆತನು ಆಕೆಯನ್ನು ಪುರಸ್ಕರಿಸಲಿಲ್ಲ. ಶಿವನಿಗೆ ಹವಿರ್ಭಾಗವನ್ನು ಕೊಡಲಿಲ್ಲ ಆಗ ಕುಪಿತಳಾದ ದಾಕ್ಷಾಯಿಣಿ ಸಮಾಧಿ ಜನ್ಯವಾದ ಯೋಗಾಗ್ನಿಯಿಂದ ಪ್ರಾಣ ಬಿಟ್ಟಳು. ಹಿಮವಂತನಿಂದ ಮೇನೆಯಲ್ಲಿ ಜನಿಸಿ ಪಾರ್ವತಿಯಾದಳು.

**ದ್ರಾಕ್ಷಾರಸ**—ರಸವೆಂದರೆ ಸಾರ, ರುಚಿ ಸಂಗೀತ ರಚನೆಗಳ ರಸಗಳು ದ್ರಾಕ್ಷಾರಸ, ನಾಳಿಕೇರರಸ ಮತ್ತು ಕದಳೀರಸವೆಂಬ ಮೂರು ಬಗೆಗಳಿಗೆ ಸೇರಿವೆ. ಕವಿ ಅಥವಾ ವಾಗ್ಗೇಯಕಾರನ ಕೃತಿಗಳಲ್ಲಿರುವ ಶೈಲಿ ಮತ್ತು ರಸಭಾವವನ್ನು ಅನುಸರಿಸಿ ಈ ಬಗೆಯ ವರ್ಗೀಕರಣ ಮಾಡಿದ್ದಾರೆ ತ್ಯಾಗರಾಜರ ಕೃತಿಗಳು ದ್ರಾಕ್ಷಾರಸಕ್ಕೆ ಉತ್ತಮ ನಿದರ್ಶನ. ದ್ರಾಕ್ಷಿಯ ಸಿಹಿ ನಾಲಿಗೆಗೆ ತಕ್ಷಣ ಗೋಚರಿಸುವಂತೆ ತ್ಯಾಗರಾಜರ ಕೃತಿಗಳನ್ನು ಕೇಳಿದ ಕೂಡಲೇ ಆನಂದಾನುಭವವಾಗುತ್ತದೆ. ಇವರ ಕೃತಿಗಳು ಸಿಪ್ಪೆ ಇಲ್ಲದ ಹಣ್ಣುಗಳಂತೆ ಸಂಪೂರ್ಣ ರಸಭರಿತವಾಗಿವೆ ಇವುಗಳಲ್ಲಿ ರಾಗಭಾವವು ತುಂಬಿರುತ್ತವೆ. ಇಂತಹ ಕೃತಿಗಳು ಎಲ್ಲರಿಗೂ ರಂಜಕವಾಗಿರುತ್ತವೆ.

**ದ್ವಾದಶಚಕ್ರಗಳು** ೭೨ ಮೇಳಕರ್ತ ಪದ್ಧತಿಯಲ್ಲಿ ರಾಗಗಳನ್ನು ೧೨ ಗುಂಪುಗಳು ಅಥವಾ ಚಕ್ರಗಳಿಗೆ ಸೇರಿದಂತೆ ವ್ಯವಸ್ಥೆಗೊಳಿಸಲಾಗಿದೆ ಪ್ರತಿಯೊಂದು ಚಕ್ರದಲ್ಲಿ ೬ ಮೇಳಗಳಿವೆ. ೧೨ ಚಕ್ರಗಳು ಯಾವುವೆಂದರೆ—ಇಂದು, ನೇತ್ರ, ಅಗ್ನಿ, ವೇದ, ಬಾಣ, ಋತು, ಋಷಿ, ವಸು, ಬ್ರಹ್ಮ, ದಿಶಿ, ರುದ್ರ ಮತ್ತು ಆದಿತ್ಯ

**ದ್ವಾದಶ ಮುದ್ರೆಗಳು**—ಮುದ್ರೆ ಅಥವಾ ಅಂಕಿತವು ವಾಗ್ಗೇಯಕಾರನ ವಿಶಿಷ್ಟ ಗುರುತು. ವಾಗ್ಗೇಯಕಾರನು ತನ್ನ ಹೆಸರು, ಇಷ್ಟದೇವತೆಯ ನಾಮಾವಳಿ

ಗಳು, ರಚನೆಗಳ ರಾಗಗಳ ಹೆಸರು, ತಾನು ಸಂದರ್ಶಿಸಿದ ಕ್ಷೇತ್ರಗಳ ಹೆಸರು, ತನ್ನ ಗುರುವಿನ ಹೆಸರು ಇವುಗಳಲ್ಲಿ ಯಾವುದಾದರೂ ಒಂದನ್ನು ಕೃತಿಯ ಸಾಹಿತ್ಯದಲ್ಲಿ ಚಮತ್ಕಾರವಾಗಿ ಅರ್ಥಭಾವಪೂರ್ಣವಾಗಿ ಸೇರಿಸಿರುತ್ತಾನೆ. ಮುದ್ರೆಯನ್ನು ಸೇರಿಸಲೇ ಬೇಕೆಂಬ ನಿಯಮವಿಲ್ಲ ಮುದ್ರೆಗಳ ಬಳಕೆಯು ಮಹಾಕಾವ್ಯಗಳ ಕಾಲದಿಂದಲೂ ರೂಢಿಯಲ್ಲಿದೆ. ಭಗವದ್ಗೀತೆಯ ಪ್ರತಿ ಅಧ್ಯಾಯದ ಸಮಾಪ್ತಿಯಲ್ಲಿ ಆ ಅಧ್ಯಾಯದ ವಿಷಯಸೂಚಕವಾದ ಮುದ್ರೆಯಿದೆ. ಜಯದೇವನ ಗೀತಗೋವಿಂದ, ನಾರಾಯಣ ತೀರ್ಥರ ಕೃಷ್ಣಲೀಲಾತರಂಗಿಣಿ ಮುಂತಾದುವಲ್ಲಿ ಕಾವ್ಯನಾಮಗಳನ್ನು ಮುದ್ರೆಗಳಾಗಿ ಬಳಸಲಾಗಿದೆ ಮುದ್ರೆಗಳಿಂದ ವಾಗ್ಗೇಯಕಾರನ ಹೆಸರು, ಪೋಷಕನಾಗಿದ್ದ ರಾಜನ ಹೆಸರು, ಕೃತಿಯ ರಾಗದ ಹೆಸರು ಮುಂತಾದುವನ್ನು ತಿಳಿಯಬಹುದು. ಮುದ್ರೆಗಳನ್ನು ಹನ್ನೆರಡು ಭಾಗಗಳಾಗಿ ವಿಂಗಡಿಸಬಹುದು.

೧. **ವಾಗ್ಗೇಯಕಾರಮುದ್ರೆ**— ವಾಗ್ಗೇಯಕಾರನು ತನ್ನ ಹೆಸರನ್ನು ಕೃತಿಯಲ್ಲಿ ಮುದ್ರೆಯನ್ನಾಗಿ ಬಳಸಿರುತ್ತಾನೆ ಇದು ಎರಡು ವಿಧ.

(a) **ಸ್ವನಾಮಮುದ್ರೆ**—ತ್ಯಾಗರಾಜ, ಜಯದೇವ, ನಾರಾಯಣತೀರ್ಥ, ಶ್ಯಾಮಾಶಾಸ್ತ್ರಿ, ರಾಮನಾಡ್, ಶ್ರೀನಿವಾಸ ಅಯ್ಯಂಗಾರ್, ಮೈಸೂರುವಾಸುದೇವಾಚಾರ್ಯ, ಮೈಸೂರು ಸದಾಶಿವರಾಯರು ಮತ್ತು ಇತ್ತೀಚಿನ ಕೆಲವು ವಾಗ್ಗೇಯಕಾರರು ತಮ್ಮ ನಾಮಧೇಯಗಳನ್ನು ಅಂಕಿತವನ್ನಾಗಿ ಬಳಸಿದ್ದಾರೆ.

(b) **ಇತರನಾಮಮುದ್ರೆ**—ವಾಗ್ಗೇಯಕಾರರು ತಮ್ಮ ಗುರುವಿನ ಹೆಸರನ್ನೋ, ಪೋಷಕರ ಹೆಸರನ್ನೋ, ತಮ್ಮ ಹೆಸರಿನ ಒಂದು ಪರ್ಯಾಯ ನಾಮವನ್ನೋ ಅಂಕಿತವಾಗಿ ಬಳಸಿದ್ದಾರೆ. ಮುತ್ತುಸ್ವಾಮಿದೀಕ್ಷಿತರು 'ಗುರುಗುಹ' ಎಂಬ ಅಂಕಿತವನ್ನೂ, ಸುಬ್ಬರಾಯ ಶಾಸ್ತ್ರಿಗಳು 'ಕುಮಾರ' ಎಂಬ ಅಂಕಿತವನ್ನೂ, ಪಟ್ಣಂ ಸುಬ್ರಹ್ಮಣ್ಯಅಯ್ಯರ್ ವೆಂಕಟೇಶ ಎಂಬ ಅಂಕಿತವನ್ನು ಬಳಸಿರುವುದು ಇದಕ್ಕೆ ನಿದರ್ಶನ.

೨. **ರಾಗಮುದ್ರೆ**—ಕೃತಿಗಳ ರಾಗಗಳ ಹೆಸರು ಅನೇಕ ರಚನೆಗಳಲ್ಲಿ ಕಂಡು ಬರುತ್ತದೆ. ಕೆಲವು ವೇಳೆ ರಾಗಮಾಲಿಕೆಗಳಲ್ಲಿರುವಂತೆ ರಾಗಗಳ ಹೆಸರುಗಳನ್ನು ಉದ್ದೇಶಪೂರ್ವಕವಾಗಿ ಸಾಹಿತ್ಯದಲ್ಲಿ ಸೇರಿಸಿರುವುದುಂಟು. ರಾಗ ತಾಳ ಮಾಲಿಕೆಗಳು ಮತ್ತು ಲಕ್ಷಣ ಗೀತೆಗಳಲ್ಲಿ ಮತ್ತು ರಾಗಮಾಲಿಕೆಗಳಲ್ಲಿ ರಾಗ ಮುದ್ರೆಗಳು ಒಂದು ಕಡ್ಡಾಯವಾದ ಅಂಗ. ಮುತ್ತುಸ್ವಾಮಿ ದೀಕ್ಷಿತರ ಕೃತಿಗಳಲ್ಲೂ, ಜಿ. ಎನ್. ಬಿ ರವರ ಕೆಲವು ಕೃತಿಗಳಲ್ಲೂ ಮಹಾವೈದ್ಯನಾಥ ಅಯ್ಯರ್‌ರವರ ಬಹತ್ತರ ಮೇಳರಾಗ ಮಾಲಿಕಾ ಮತ್ತು ಕೋಟೇಶ್ವರ ಅಯ್ಯರ್‌ರವರ ೭೨ ರಾಗಗಳ ರಾಗ ಮಾಲಿಕೆಯಲ್ಲಿ ೭೨ ರಾಗಗಳ ಹೆಸರುಗಳು ಬಂದಿರುವುದು ರಾಗ ಮುದ್ರೆಗೆ ನಿದರ್ಶನಗಳು. ಇವು ಕೃತಿಯ ಸಾಹಿತ್ಯದೊಡನೆ ಅರ್ಥಭಾವಕ್ಕನುಗುಣವಾಗಿ ಕೆಲವು ರಾಗಗಳ ಹೆಸರುಗಳನ್ನು ಸೂಚಿಸುವುದನ್ನು ಮುತ್ತುಸ್ವಾಮಿ ದೀಕ್ಷಿತರ ಹಲವು

ಕೃತಿಗಳಲ್ಲಿ ಕಾಣಬಹುದು. ರಾಗಮುದ್ರೆಗಳು ಕೃತಿಯ ಪಲ್ಲವಿ, ಅನುಪಲ್ಲವಿ ಅಥವಾ ಚರಣದಲ್ಲಿ ಬರುತ್ತವೆ.

೩. **ತಾಳಮುದ್ರೆ**—ಕೃತಿಯ ಸಾಹಿತ್ಯದಲ್ಲಿ ತಾಳದ ಹೆಸರನ್ನು ಸೂಚಿಸಿರುವುದು ತಾಳಮುದ್ರೆ. ಇವು ತಾಳಮಾಲಿಕೆಗಳಲ್ಲಿ ಅಗತ್ಯವಾಗಿ ಇರಬೇಕಾದ ಅಂಗ. ರಾಗತಾಳಮಾಲಿಕೆಗಳಲ್ಲಿಯೂ ಸಹ ತಾಳಮುದ್ರೆಗಳಿವೆ ಪೈದಾಲ ಗುರುಮೂರ್ತಿ ಶಾಸ್ತ್ರಿಗಳ ಸಪ್ತತಾಳ ಕೃತಿಗಳು ಮತ್ತು ರಾಮಸ್ವಾಮಿ ದೀಕ್ಷಿತರ ಅಷ್ಟೋತ್ತರ ಶತರಾಗ ತಾಳ ಮಾಲಿಕೆಯಲ್ಲೂ ತಾಳಮುದ್ರೆಗಳನ್ನು ಕಾಣಬಹುದು.

೪. **ಆಚಾರ್ಯಮುದ್ರೆ** ವಾಗ್ಗೇಯಕಾರರು ತಮ್ಮ ರಚನೆಗಳಲ್ಲಿ ತಮ್ಮ ಗುರುವಿನ ಹೆಸರನ್ನು ಸಾಹಿತ್ಯದಲ್ಲಿ ಸೇರಿಸಿ ಅವರಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿರುತ್ತಾರೆ. ಪೈದಾಲ ಗುರುಮೂರ್ತಿಶಾಸ್ತ್ರಿಗಳು ಸಪ್ತತಾಳಗೀತದಲ್ಲಿ 'ಗಾನವಿದ್ಯಾ ದುರಂಧರ ವೆಂಕಟಸುಬ್ಬಯ್ಯಗುರೋ' ಎಂದು ಅವರ ಗುರುವಿನ ಹೆಸರನ್ನು ಸೂಚಿಸಿದ್ದಾರೆ. ಪೊನ್ನಯ್ಯಪಿಳ್ಳೆಯವರು 'ಮಾಯಾತೀತ ಸ್ವರೂಪಿಣಿ' ಎಂಬ ಕೃತಿಯಲ್ಲಿ 'ಮಾ ಗುರುಗುಹ ನಾಮಿಕೆ ನೀ ದಾಸುಡೈತಿ' ಎಂದು ತಮ್ಮ ಗುರುವಾದ ದೀಕ್ಷಿತರನ್ನು ಸೂಚಿಸಿದ್ದಾರೆ.

೫. **ರಾಜಮುದ್ರೆ**—ತಮ್ಮ ಆಶ್ರಯದಾತರೂ ಪೋಷಕರೂ ಆದ ರಾಜರ ಹೆಸರುಗಳನ್ನು ಕೆಲವು ವಾಗ್ಗೇಯಕಾರರು ಸಾಹಿತ್ಯದೊಡನೆ ಸೇರಿಸಿರುತ್ತಾರೆ. ರಾಜಮುದ್ರೆಯು ರಾಜಾಶ್ರಯವನ್ನೂ, ರಾಜರನ್ನೂ ಪರೋಕ್ಷವಾಗಿ ಸ್ತುತಿಸುವ ಸಂಕೇತ. ಘನಂ ಶೀನಯ್ಯನವರ ಕ್ಷೇತ್ರಜ್ಞರ ಪದಗಳು, ಮುತ್ತುಸ್ವಾಮಿ ದೀಕ್ಷಿತರ ಚತುರ್ದಶ ರಾಗಮಾಲಿಕೆ, ಪಲ್ಲವಿ ಗೋಪಾಲ ಅಯ್ಯರ್‌ರವರ ವರ್ಣ, ವೀಣೆ ಶೇಷಣ್ಣನವರ ತಿಲ್ಲಾಣ ಮುಂತಾದುವುಗಳಲ್ಲಿ ರಾಜಮುದ್ರೆಯನ್ನು ಬಳಸಿರುವುದನ್ನು ಕಾಣಬಹುದು. ರಾಮಸ್ವಾಮಿ ದೀಕ್ಷಿತರ ಕೃತಿಗಳಲ್ಲಿ ಕಂಡುಬರುವ 'ವೆಂಕಟಕೃಷ್ಣ' ಎಂಬ ಅಂಕಿತವು ಇದೇ ರೀತಿಯದು. ಪಲ್ಲವಿ ಗೋಪಾಲಯ್ಯರ್ ಕನಕಾಂಗಿ ಎಂಬ ತಾನವರ್ಣದಲ್ಲಿ ಶರಭೋಜಿ ಮಹಾರಾಜರ ಹೆಸರನ್ನೂ, ಮೈಸೂರು ಸದಾಶಿವರಾಯರು 'ಏ ಮಗುವ ಬೋಧಿಂ ಚರ' ಎಂಬ ಪದ ವರ್ಣದಲ್ಲಿ ಕೃಷ್ಣರಾಜ ಒಡೆಯರ ಹೆಸರನ್ನೂ, ವೀಣೆ ಶೇಷಣ್ಣನವರು ತಮ್ಮ ತಿಲ್ಲಾನ ಒಂದರಲ್ಲಿ 'ಶ್ರೀಕೃಷ್ಣರಾಜೇಂದ್ರ' ಎಂಬ ಹೆಸರನ್ನೂ ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ಯರು ತಮ್ಮ ತಿಲ್ಲಾನ ಒಂದರಲ್ಲಿ 'ಶ್ರೀಚಾಮರಾಜೇಂದ್ರ' ಎಂಬ ಹೆಸರನ್ನೂ ಬಳಸಿದ್ದಾರೆ.

೬. **ವಂಶಮುದ್ರೆ**—ವಾಗ್ಗೇಯಕಾರರು ತಮ್ಮ ಗೋತ್ರ, ವಂಶ, ತಂದೆ ತಾಯಿಯ ಹೆಸರನ್ನು ತಮ್ಮ ರಚನೆಗಳಲ್ಲಿ ಸೂಚಿಸಿರುತ್ತಾರೆ. ವಾಲಾಜಪೇಟೆ ವೆಂಕಟರಮಣ ಭಾಗವತರು ತ್ಯಾಗರಾಜರನ್ನು ಕುರಿತು ರಚಿಸಿರುವ ಮಂಗಳಾಷ್ಟಕದಲ್ಲಿ ತಮ್ಮ ಗುರುವಿನ ವಂಶವನ್ನು 'ಕಾಕರ್ಲವಂಶ'ವೆಂದು ಸೂಚಿಸಿದ್ದಾರೆ. ಬಂಗಾಳ ರಾಗದ 'ಗಿರಿರಾಜಸುತ' ಎಂಬ ಕೃತಿಯಲ್ಲಿ ತ್ಯಾಗರಾಜರು ತಾವು ಗಿರಿರಾಜ ಕವಿಯ

ಮೊಮ್ಮಗನೆಂದು ಸೂಚಿಸಿದ್ದಾರೆ. ದೊರಕುನಾಇಟುವಂಟಿಸೇವ ಎಂಬ ಕೃತಿಯಲ್ಲಿ ತಾವು ರಾಮಬ್ರಹ್ಮರ ಮಗನೆಂದೂ, ವಸಂತರಾಗದ 'ಸೀತಮ್ಮ ಮಾಯಮ್ಮ' ಎಂಬ ಕೃತಿಯಲ್ಲಿ ತಮ್ಮ ತಂದೆ ತಾಯಿಯ ಹೆಸರನ್ನು ಸೂಚಿಸಿದ್ದಾರೆ.

೭. **ಪ್ರಬಂಧ ಮುದ್ರೆ**—ರಚನೆಯ ಹೆಸರನ್ನು ಸಾಹಿತ್ಯದಲ್ಲಿ ಸೂಚಿಸಿರುವ ಅಂಕಿತಕ್ಕೆ ಪ್ರಬಂಧ ಮುದ್ರೆ ಎಂದು ಹೆಸರು. ಅನೇಕ ತಿಲ್ಲಾನಗಳಲ್ಲಿ ತತ್ಕಾರ ಮತ್ತು ಜಾತಿಗಳೊಡನೆ 'ತಿಲ್ಲಾನ' ಎಂಬ ಪದವನ್ನು ಸೇರಿಸಿರುವುದುಂಟು. ಪಲ್ಲವಿ ಶೇಷಯ್ಯರ್ ವಿರಚಿತ ಧನ್ಯಾಸಿರಾಗದ ತಿಲ್ಲಾನದಲ್ಲಿ 'ತಿಲ್ಲಾನ' ಎಂದು ರಚನೆಯ ಜಾತಿಯನ್ನು ಸೂಚಿಸಿದೆ ತ್ಯಾಗರಾಜರ ಶತರಾಗ ರತ್ನಮಾಲಿಕೆಯ ರೀತಿ ಗೌಳರಾಗದ 'ರಾಗರತ್ನ ಮಾಲಿಕಚೆ' ಎಂಬ ಕೃತಿಯಲ್ಲಿ ಮತ್ತು ಮುಖಾರಿ ರಾಗದ 'ಏಲಾವತಾರ' ಎಂಬ ಕೃತಿಯಲ್ಲಿ ಪ್ರಬಂಧ ಮುದ್ರೆ ಇದೆ.

೮. **ನಾಯಕ ಮುದ್ರೆ**—ಪದಗಳಲ್ಲಿ ನಾಯಕ ಮುದ್ರೆಯ ಪ್ರಯೋಗವು ಹೆಚ್ಚಾಗಿ ಕಂಡುಬರುತ್ತದೆ ಪದಗಳು ಸಾಮಾನ್ಯವಾಗಿ ನಾಯಕಿ ಮತ್ತು ನಾಯಕನ ಸಂಬೋಧನಾ ರೂಪದಲ್ಲಿರುತ್ತದೆ. ಕ್ಷೇತ್ರಜ್ಞರ ಪದಗಳಲ್ಲಿ ಮುವ್ವ ಗೋಪಾಲ ಎಂದೂ, ಮೂವ್ವಲೂರ್ ಸಭಾಪತಿ ಅಯ್ಯರ್ ವಿರಚಿತ ರಚನೆಗಳಲ್ಲಿ ರಾಜಗೋಪಾಲ ಎಂದೂ, ಘನಂಶೀನಯ್ಯನವರ ಪದಗಳಲ್ಲಿ ಮನ್ನಾರುರಂಗ ಎಂದೂ, ಸಾರಂಗಪಾಣಿಯವರ ರಚನೆಗಳಲ್ಲಿ ವೇಣುಗೋಪಾಲ ಎಂದೂ, ವೈದೀಶ್ವರನ್ ಕೋಯಿಲ್ ಸುಬ್ಬರಾಮ ಅಯ್ಯರ ರಚನೆಗಳಲ್ಲಿ 'ಮುದ್ದುಕುಮಾರ' ಎಂಬ ನಾಯಕ ಮುದ್ರೆ ಕಂಡು ಬರುತ್ತದೆ.

೯. **ಸ್ಥಳಮುದ್ರೆ ಅಥವಾ ಕ್ಷೇತ್ರಮುದ್ರೆ** — ತಾವು ಸಂದರ್ಶಿಸಿದ ಸ್ಥಳಗಳ ಹೆಸರನ್ನೋ ಅಥವಾ ಅಲ್ಲಿಯ ದೇವತೆಗಳ ಹೆಸರನ್ನೋ ವಾಗ್ಗೇಯಕಾರರು ತಮ್ಮ ರಚನೆಯ ಸಾಹಿತ್ಯದಲ್ಲಿ ಸೇರಿಸಿರುತ್ತಾರೆ. ಇದಕ್ಕೆ ಕ್ಷೇತ್ರಮುದ್ರೆ ಅಥವಾ ಸ್ಥಳಮುದ್ರೆ ಎಂದು ಹೆಸರು. ಇವು ಕೈವಾರ ಪ್ರಬಂಧಗಳಲ್ಲಿ, ತಿರುವಾಚಕಂ ಮತ್ತು ತಿರುಪ್ಪುಗಳ್ ಮತ್ತು ಕೆಲವು ದೇವರನಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ತ್ಯಾಗರಾಜರ ಕೋವೂರು ಪಂಚರತ್ನ, ತಿರುವೊಟ್ರಿಯೂರ್ ಪಂಚರತ್ನ, ಮುತ್ತು ಸ್ವಾಮಿ ದೀಕ್ಷಿತರ ಪಂಚಲಿಂಗ ಸ್ಥಳ ಕೃತಿಗಳು, ಶ್ಯಾಮಾಶಾಸ್ತ್ರಿಗಳ ನವರತ್ನ ಮಾಲಿಕಾ ಕೃತಿಗಳು, ವೀಣಾಕುಪ್ಪಯ್ಯರ್‌ರವರ ಕಾಳ ಹಸ್ತೀಶ ಪಂಚರತ್ನ ಕೃತಿಗಳಲ್ಲಿ ಇಂತಹ ಮುದ್ರೆಗಳು ಕಂಡುಬರುತ್ತವೆ.

೧೦. **ಬಿರುದು ಮುದ್ರೆ**—ಅನೇಕ ವಾಗ್ಗೇಯಕಾರರು ತಮ್ಮ ಒಂದು ಬಿರುದನ್ನೋ ಅಥವಾ ಪೋಷಕರ ಬಿರುದನ್ನೋ ಅಂಕಿತವಾಗಿ ಬಳಸಿರುವುದು ಬಿರುದು ಮುದ್ರೆ.

೧೧. **ಲಕ್ಷಣಗ್ರಂಥಮುದ್ರೆ**— ವಾಗ್ಗೇಯಕಾರರು ತಾವು ಅಧ್ಯಯನ ಮಾಡಿದ ಅಥವಾ ಶ್ರೇಷ್ಠವೆನಿಸಿದ ಲಕ್ಷಣ ಗ್ರಂಥಗಳ ಹೆಸರನ್ನು ತಮ್ಮ ಕೃತಿಗಳಲ್ಲಿ

ಸೂಚಿಸಿರುವುದಕ್ಕೆ ಲಕ್ಷಣಗ್ರಂಥಮುದ್ರೆ ಎಂದು ಹೆಸರು. ತ್ಯಾಗರಾಜರು ಶಂಕರಾಭರಣ ರಾಗದ 'ಸ್ವರರಾಗ ಸುಧಾ' ಎಂಬ ಕೃತಿಯಲ್ಲಿ 'ಸ್ವರಾರ್ಣವ' ಎಂಬ ಗ್ರಂಥದ ಹೆಸರನ್ನು ಬಳಸಿರುವುದು ಇದಕ್ಕೆ ನಿದರ್ಶನ

೧೨ **ಇತರ ಮುದ್ರೆಗಳು**—ಮೇಲಿನ ಮುದ್ರೆಗಳಲ್ಲದೆ ಸಂವತ್ಸರ ಮುದ್ರೆಗಳನ್ನು ಬಳಸಿರುವುದು ಕಂಡುಬರುತ್ತದೆ. ತಮಿಳಿನ 'ಶರಭೇಂದ್ರ ಭೂಪಾಲ ಕುರವಂಜಿ ನಾಟಕಂ' ಎಂಬ ನೃತ್ಯ ರೂಪಕದಲ್ಲಿ ಶರಭೋಜಿ ಮಹಾರಾಜರ ಜೀವಿತ ಕಾಲದ ಮುಖ್ಯವಾದ ಕೆಲವು ಸಂವತ್ಸರಗಳ ಹೆಸರುಗಳನ್ನು ಚಮತ್ಕಾರವಾಗಿ ಬಳಸಲಾಗಿದೆ. ಕೆಲವು ರಚನೆಗಳಲ್ಲಿ ಅವುಗಳ ಛಂದಸ್ಸಿನ ಹೆಸರನ್ನು ಸೂಚಿಸಲಾಗಿದೆ. ಇದಕ್ಕೆ ಛಂದಸ್ಸು ಮುದ್ರೆ ಎಂದು ಹೆಸರು. ಇವುಗಳಲ್ಲದೆ ನವವಿಧ ಭಕ್ತಿಗಳ ಹೆಸರಿನ ಮುದ್ರೆ, ಚಕ್ರಮುದ್ರೆ ಮುಂತಾದುವುಗಳನ್ನು ಬಳಸಿರುವುದುಂಟು.

ದ್ವಾದಶ ಮುದ್ರೆಗಳಲ್ಲಿ ವಾಗ್ಗೇಯಕಾರರ ಮುದ್ರೆಯು ಬಹು ಮುಖ್ಯವಾದುದು. ಇವು ಸಾಮಾನ್ಯವಾಗಿ ಕೃತಿಯ ಚರಣಗಳಲ್ಲಿ ಇಲ್ಲವೇ ಪಲ್ಲವಿ ಅಥವಾ ಅನುಪಲ್ಲವಿಯಲ್ಲಿ ಕಂಡುಬರುತ್ತದೆ ಹಲವು ಚರಣಗಳಿರುವ ಕೃತಿಗಳ ಅಭೋಗಚರಣ ಅಥವಾ ಕೊನೆಯ ಚರಣದಲ್ಲಿ ವಾಗ್ಗೇಯಕಾರ ಮುದ್ರೆ ಇರುತ್ತದೆ. ಇದಕ್ಕೆ ಮುದ್ರಾ ಚರಣವೆಂದು ಹೆಸರು.

**ದ್ವಾದಶ ಸ್ವರಸ್ಥಾನಗಳು**—ಸ್ವರಸಪ್ತಕದಲ್ಲಿರುವ ಹನ್ನೆರಡು ಸ್ವರಸ್ಥಾನಗಳು

**ದ್ವಾರಂ ಮಂಗತಾಯೂರ್** (೧೯೩೪)—ದ್ವಾರಂ ಮಂಗತಾಯೂರ್ ರವರು ದಕ್ಷಿಣ ಭಾರತದ ಪಿಟೀಲುವಾದ್ಯಗಾರರಾಗಿರುವ ಕೆಲವೇ ಕಲಾವಿದೆಯರಲ್ಲಿ ಒಬ್ಬರಾಗಿದ್ದಾರೆ. ಇವರು ಸಂಗೀತ ಕಲಾನಿಧಿ ಡಾ॥ ದ್ವಾರಂ ವೆಂಕಟಸ್ವಾಮಿಯವರ ಪುತ್ರಿಯಾಗಿ ಆಂಧ್ರ ಪ್ರದೇಶದ ವಿಜಯನಗರಂನಲ್ಲಿ ಜನಿಸಿ ತಂದೆಯ ನೆರಳಿನಲ್ಲಿ ಬೆಳೆದು ಬಂದರು. ತಂದೆಯವರಲ್ಲಿ ಮೆಟ್ರಿಕ್ಯುಲೇಷನ್ ತರಗತಿಯಲ್ಲಿ ಓದುತ್ತಿದ್ದಾಗಲೇ ಪಿಟೀಲು ವಾದನವನ್ನು ಕಲಿಯಲು ಆರಂಭಿಸಿದರು. ೧೯೫೧ ವಿಜಯನಗರಂ ಸಂಗೀತದ ಕಾಲೇಜಿನಲ್ಲಿ ಡಿಪ್ಲೊಮಾವನ್ನು ಪಡೆದು, ನಂತರ ಭಾರತ ಸರ್ಕಾರದ ವಿದ್ಯಾರ್ಥಿ ವೇತನವನ್ನು ಪಡೆದು ೧೯೬೦ ರಿಂದ ೧೯೬೩ರ ವರೆಗೆ ಮದ್ರಾಸಿನ ಕೇಂದ್ರ ಕರ್ಣಾಟಕ ಸಂಗೀತದ ಕಾಲೇಜಿನಲ್ಲಿ ವರಹೂರು ಮುತ್ತುಸ್ವಾಮಿ ಅಯ್ಯರ್ ರವರಲ್ಲಿ ಪ್ರೌಢ ಶಿಕ್ಷಣವನ್ನು ಪಡೆದರು. ತಂದೆಯವರ ಸಂಗಡ ಅನೇಕ ಕಚೇರಿಗಳಲ್ಲಿ ನುಡಿಸಿದರು ಮತ್ತು ಬಿ. ಆರ್. ಮಹಾಲಿಂಗಂರವರ ಅನೇಕ ಕಚೇರಿಗಳಿಗೆ ನುಡಿಸಿದರು. ಖ್ಯಾತಿಪಂತರಾದರು ತಂದೆಯವರ ಮರಣಾನಂತರ ಕೆಲವು ಕಾಲ ವಿಜಯನಗರದ ಸಂಗೀತದ ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದು ಈಗ ವಿಜಯವಾಡದ ಬಾನುಲಿ ಕೇಂದ್ರದ ಕಲಾವಿದೆಯಾಗಿದ್ದಾರೆ. ಇವರ ನುಡಿಕೆಯಲ್ಲಿ ನಾದ ಮಾಧುರ್ಯ ಅದ್ಭುತವಾದುದು.

**ದ್ವಾವಿಂಶತಿ ಗಮಕಗಳು**—೨೨ ಬಗೆಯ ಗಮಕಗಳನ್ನು ಪಾಲ್ಕುರಿಕೆ ಸೋಮನಾಥನು ತನ್ನ 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿ (೧೪ನೆ ಶ) ಹೇಳಿದ್ದಾನೆ. ಇತರ ಎಲ್ಲಾ ಲಾಕ್ಷಣಿಕರಿಗಿಂತ ಸೋಮನಾಥನು ಹೇಳಿರುವುದು ಹೆಚ್ಚು ಸಂಖ್ಯೆಯ ಗಮಕಗಳು. ಇತರರು ೭, ೧೦, ೧೫, ೧೯ ಗಮಕಗಳನ್ನು ಹೇಳಿದ್ದಾರೆ ಸೋಮನಾಥನು ಹೇಳಿರುವ ಗಮಕಗಳಲ್ಲಿ ಕೆಲವು ಹೊಸದು. ಇವುಗಳನ್ನು ಅವನಿಗಿಂತ ಹಿಂದಿನವರಾಗಲೀ ನಂತರದವರಾಗಲೀ ಹೇಳಿಲ್ಲ. ದ್ವಾವಿಂಶತಿ ಗಮಕಗಳು ಯಾವುವೆಂದರೆ—ಅಕ್ಷಿಪ್ತ, ಅಹಿತ, ಅದೀರ್ಘ, ಉಚ್ಚರಿತ, ಉಲ್ಲಸಿತ, ಉಲ್ಲಾಸಿತ, ಕರಸ್ಥಿತ, ಕುಂಚಿತ, ಕೋಮಲ, ಗುಂಫಿತ, ದೀರ್ಘ, ದೀರ್ಘಕಂಪಿತ, ದೀರ್ಘಿಕ, ದೀರ್ಘೋಲ್ಲಸಿತ, ಪ್ರಸ್ತುತ, ಭ್ರಮಿತ, ಮೂರ್ಧಿ, ಕ್ಷಿಪ್ತ, ಲಲಿತ, ಲಲಿತೋತ್ತಮ, ಸಮೋಲ್ಲಸಿತ ಮತ್ತು ಸೂಕ್ಷ್ಮಾಂತರ.

**ದ್ವಾವಿಂಶತಿ ಶ್ರುತಿಗಳು**—ಭಾರತೀಯ ಸಂಗೀತ ಪದ್ಧತಿಯಲ್ಲಿ ಅನಾದಿಕಾಲದಿಂದ ೧೨ ಸ್ವರಗಳಿಗೆ ನಿಯಮಿತವಾದ ೨೨ ಶ್ರುತಿಗಳ ಬಳಕೆ ರೂಢಿಯಲ್ಲಿದೆ. ಅತಿ ಪ್ರಾಚೀನ ಗ್ರಂಥಗಳಲ್ಲಿ ೨೨ ಶ್ರುತಿಗಳು ರಾಗಗಳ ಸಂಚಾರಗಳಿಗೆ ಆಧಾರವಾಗಿದೆ. ಭರತ ಮತ್ತು ಶಾರ್ಙ್ಗದೇವ ತಮ್ಮ ಗ್ರಂಥಗಳಲ್ಲಿ ೨೨ ಶ್ರುತಿಗಳ ಹೆಸರನ್ನು ಈ ರೀತಿ ಕೊಟ್ಟಿದ್ದಾರೆ—

ತೀವ್ರ, ಕುಮುದ್ವತಿ, ಮಂದಾ, **ಛಂದೋವತಿ**, ದಯಾವತಿ, ರಂಜನಿ, **ರತಿಕಾ**, ರೌದ್ರಿ, **ಕ್ರೋಧಾ**, ವಜ್ರಿಕಾ, ಪ್ರಸಾರಿಣಿ, ಪ್ರೀತಿ, **ಮಾರ್ಜನೀ**, ಕ್ಷಿತಿ, ರಕ್ತಾ, ಸಾಂದೀಪಿನಿ, **ಆಲಾಪಿನಿ**, ಮದಂತಿ, ರೋಹಿಣಿ, **ರಮ್ಯಾ**, ಉಗ್ರಾ ಮತ್ತು **ಕ್ಷೋಭಿಣಿ**.

ಕೆಳಗಡೆ ಗೆರೆ ಹಾಕಿರುವುವು ಸಪ್ತಸ್ವರಗಳ ನಿಯತ ಶ್ರುತಿಗಳು ಮತ್ತು ಈ ಸಪ್ತ ಸ್ವರಗಳು ಪುರಾತನ ಕಾಲದ ಷಡ್ಜಗ್ರಾಮದ ಸ್ವರಗಳು

ದ್ವಾವಿಂಶತಿ ಶ್ರುತಿಗಳ ಆಧುನಿಕ ಹೆಸರು ಮತ್ತು ಅಂತರ ಈ ರೀತಿ ಇವೆ—

| | |
|---|---|
| ಷಡ್ಜ | ೧ |
| ಏಕಶ್ರುತಿ ರಿಷಭ | ೨೫೬/೨೪೩ |
| ದ್ವಿಶ್ರುತಿ ರಿಷಭ | ೧೬/೧೫ |
| ತ್ರಿಶ್ರುತಿ ರಿಷಭ | ೧೦/೯ |
| ಚತುಶ್ರುತಿ ರಿಷಭ | ೯/೮ |
| ಕೋಮಲ ಗಾಂಧಾರ | ೩೨/೨೭ |
| ಸಾಧಾರಣ ಗಾಂಧಾರ | ೬/೫ |
| ಅಂತರ ಗಾಂಧಾರ | ೫/೪ |
| ತೀವ್ರ ಅಂತರ ಗಾಂಧಾರ | ೮೧/೬೪ |

| | |
|---|---|
| ಶುದ್ಧ ಮಧ್ಯಮ | ४/३ |
| ತೀವ್ರ ಶುದ್ಧ ಮಧ್ಯಮ | ೨೭/೨೦ |
| ಪ್ರತಿ ಮಧ್ಯಮ | ४५/३२ |
| ತೀವ್ರಪ್ರತಿಮಧ್ಯಮ ಅಥವಾ ಚ್ಯುತ ಪಂಚಮ | ೭४/४५ ಅಥವಾ ೭೨೯/೫೧೨ |
| ಪಂಚಮ | ३/೨ |
| ಏಕಶ್ರುತಿ ಧೈವತ | ೧೨೮/೮೧ |
| ದ್ವಿಶ್ರುತಿ ಧೈವತ | ೮/೫ |
| ತ್ರಿಶ್ರುತಿ ಧೈವತ | ೫/३ |
| ಚತುಶ್ರುತಿ ಧೈವತ | ೨೭/೧೬ |
| ಕೋಮಲ ಕೈಶಿಕಿ ನಿಷಾದ | ೧೬/೯ |
| ಕೈಶಿಕಿ ನಿಷಾದ | ೯/೫ |
| ಕಾಕಲಿ ನಿಷಾದ | ೧೫/೮ |
| ತೀವ್ರ ಕಾಕಲಿ ನಿಷಾದ ಅಥವಾ ಚ್ಯುತ ಷಡ್ಜ | ೨४३/೧೨೮ |

ಶ್ರುತಿಯು ಒಂದು ಸ್ಥಾಯಿಯ ಸೂಕ್ಷ್ಮವಾದ ವಿಭಾಗ. ಏಕಶ್ರುತಿ ಅಂತರವು ಮೂರು ವಿಧವಾಗಿದೆ ಒಂದು ಸೆಕೆಂಡಿಗೆ ಆಗುವ ಕಂಪನಗಳ ಸಂಖ್ಯೆಯಿಂದ ಶ್ರುತಿಯ ಪ್ರಮಾಣವನ್ನು ಗೊತ್ತುಮಾಡಬಹುದು. ಇವು ಆರೋಹಣ ಸ್ಥಾಯಿ ಕ್ರಮದಲ್ಲಿರುತ್ತವೆ. ೮೧/೮೧ ಶ್ರುತಿಯನ್ನು ಪ್ರಮಾಣಶ್ರುತಿ ಎನ್ನುತ್ತಾರೆ. ಎರಡು ಸ್ವರಗಳ ಮಧ್ಯೆ ಇರುವ ಅಂತರಕ್ಕೆ ಒಂದು ಶ್ರುತಿ ಅಂತರವೆನ್ನಬಹುದು ನ್ಯೂನಶ್ರುತಿ ಮತ್ತು ಪೂರ್ಣಶ್ರುತಿ ಎಂಬುವು ಇನ್ನೆರಡು ಶ್ರುತಿಗಳು. ನ್ಯೂನಶ್ರುತಿಯು ಪೂರ್ಣ ಶ್ರುತಿಗಿಂತ ಸ್ವಲ್ಪ ಕಡಿಮೆಯಿರುತ್ತದೆ. ಸ್ವರಸಪ್ತಕವನ್ನು ೨೨ ಶ್ರುತಿಗಳಲ್ಲಿ ಹಂಚ ಲಾಗಿದೆ. ಇವುಗಳ ಮಧ್ಯೆ ಇರುವ ಶ್ರುತಿ ಅಂತರವು ಒಂದೇ ಸಮನಾಗಿರುವುದಿಲ್ಲ. ಈ ೨೨ ಶ್ರುತಿಗಳ ಮೊತ್ತಕ್ಕೆ ಸ್ಥಾಯಿ ಎಂದು ಹೆಸರು.

ದ್ವಿಶ್ರುತಿ ಅಂತರವು ಎರಡು ಪ್ರಮಾಣಗಳನ್ನು ಹೊಂದಿದೆ. ಮೊದಲನೆಯದು ಪೂರ್ಣ ದ್ವಿಶ್ರುತಿ ಅಂತರ ಮತ್ತು ಎರಡನೆಯದು ನ್ಯೂನದ್ವಿಶ್ರುತಿ ಅಂತರ ಷಡ್ಜ ಮತ್ತು ರಿಷಭಗಳ ಮಧ್ಯೆ ನ್ಯೂನದ್ವಿಶ್ರುತಿ ಅಂತರವು ೯/೮ ಇರುತ್ತದೆ. ಚತುಶ್ರುತಿ ಅಂತರದ ಪ್ರಮಾಣ ಮತ್ತು ತ್ರಿಶ್ರುತಿ ಅಂತರದ ಪ್ರಮಾಣವು ಒಂದೇ ಸಮನಾಗಿರು ವುದು. ಪಂಚಶ್ರುತಿ ಅಂತರವು ३೨/೨೭ಕ್ಕೆ ಸಮನಾಗಿರುವುದು ಚತುಶ್ರುತಿ ರಿಷಭ ಮತ್ತು ಶುದ್ಧ ಮಧ್ಯಮಗಳ ಮಧ್ಯೆ ಒಂದು ಪಂಚಶ್ರುತಿ ಅಂತರವು ४/३ ಇರುತ್ತದೆ. ಷಟ್‌ಶ್ರುತಿ ಅಂತರವು ೬/೫ಕ್ಕೆ ಸಮನಾದುದು. ಅಂತರಗಾಂಧಾರ ಮತ್ತು ಪಂಚಮಗಳ ಮಧ್ಯೆ ಷಟ್‌ಶ್ರುತಿ ಅಂತರವಿದೆ. ಷಟ್‌ಶ್ರುತಿ ಅಂತರ ಮತ್ತು ಪಂಚಶ್ರುತಿ ಅಂತರಗಳಿಗಿರುವ ವ್ಯತ್ಯಾಸವು ಒಂದು ಪ್ರಮಾಣ ಶ್ರುತಿಯಾಗುತ್ತದೆ. ಪಂಚಶ್ರುತಿ ಮತ್ತು ಚತುಶ್ರುತಿ ಅಂತರಗಳಿಗಿರುವ ವ್ಯತ್ಯಾಸವು ಒಂದು ಪೂರ್ಣಶ್ರುತಿ

ಯಾಗುತ್ತದೆ. ಒಂದು ತ್ರಿಶ್ರುತಿ ಮತ್ತು ದ್ವಿಶ್ರುತಿ ಅಂತರಗಳಿಗಿರುವ ವ್ಯತ್ಯಾಸವು ಒಂದು ನ್ಯೂನಶ್ರುತಿಯಾಗುತ್ತದೆ. ೧೨ ಸ್ವರಸ್ಥಾನಗಳಲ್ಲಿ ೨೨ ಶ್ರುತಿಗಳನ್ನು ಹಂಚಿರುವುದು ಸಮರ್ಪಕವಾದ ಪದ್ಧತಿಯಾಗಿದೆ

ಪುರಾತನ ಸಂಗೀತ ಪದ್ಧತಿಯಲ್ಲಿ ೨೨ ಶ್ರುತಿಗಳನ್ನು ಎಲ್ಲಾ ಸ್ವರಗಳಿಗೆ ಹಂಚಲಾಗಿತ್ತು. ಆದರೆ ಸ ಮತ್ತು ಪ ಗಳು ಅವಿಕೃತ ಸ್ವರಗಳೆಂದಾದ ನಂತರ ಇವುಗಳಿಗೆ ಒಂದೊಂದು ಶ್ರುತಿಯನ್ನೂ, ಉಳಿದ ಐದು ಸ್ವರಗಳಿಗೆ ಒಂದೊಂದಕ್ಕೂ ೪ ಶ್ರುತಿಗಳಂತೆ ಹಂಚಲಾಯಿತು. ಅಂದರೆ ೪ × ೫ = ೨೦ + ೧ + ೧ = ೨೨ ಶ್ರುತಿಗಳಾದುವು. ಹೀಗೆ ಸ್ವರಸಪ್ತಕದ ದ್ವಾದಶಸ್ವರಸ್ಥಾನಗಳಿಗೆ ದ್ವಾವಿಂಶತಿ ಶ್ರುತಿಗಳೆಂದು ಸಿದ್ಧಾಂತವಾಗಿದೆ.

ಈ ಶ್ರುತಿಗಳನ್ನು ಸಂವಾದಿತ್ವದ ಆಧಾರದ ಮೇಲೆ ಸಿದ್ಧ ಮಾಡಲಾಯಿತು. ಅಂದರೆ ಸಂವಾದಿ ದ್ವಯ ಅಥವಾ ಸ–ಪ ಮತ್ತು ಸ–ಮ ಪದ್ಧತಿಯಿಂದ ನಿರ್ಧರಿಸಲಾಯಿತು. "ಷಡ್ಜ ಪಂಚಮಭಾವೇನ ಶ್ರುತಿ ದ್ವಾವಿಂಶತಿಂಜಗುಃ" ಎಂಬಂತೆ ಷಡ್ಜ ಪಂಚಮಭಾವದಿಂದ ೨೨ ಶ್ರುತಿಗಳು ಉಂಟಾಗಿವೆ ಎಂದು ಅಹೋಬಲನು 'ಸಂಗೀತ ಪಾರಿಜಾತ' ವೆಂಬ ಗ್ರಂಥದಲ್ಲಿ ಹೇಳಿದ್ದಾನೆ. ಒಂದು ರಾಗದಲ್ಲಿ ಬಳಸಲಾಗುವ ಸ್ವರಗಳು ಆ ರಾಗದ ಸ್ವರಸ್ಥಾನ ಅಥವಾ ಅಂತಸ್ಥನ್ನು ಹೊಂದುತ್ತವೆ ಮಿಕ್ಕಶ್ರುತಿಗಳು ಶ್ರುತಿಗಳಾಗಿಯೇ ಉಳಿಯುತ್ತವೆ. ಸಪ್ತಸ್ವರಗಳ ಮಧ್ಯೆ ಇರುವ ಶ್ರುತಿ ಅಂತರಗಳು ಈ ರೀತಿ ಇವೆ—ಒಂದು ಸ್ಥಾಯಿ, ಒಂದು ಪಂಚಮ, ಶುದ್ಧ ಮಧ್ಯಮ, ಅಂತರ ಗಾಂಧಾರ, ಸಾಧಾರಣ ಗಾಂಧಾರ ಇತ್ಯಾದಿ. ೮ ರಿಂದ ೯ ರವರೆಗೆ ಚತುಃಶ್ರುತಿಯೂ, ೯ ರಿಂದ ೧೦ ರವರೆಗೆ ತ್ರಿಶ್ರುತಿಯೂ, ೧೫ ರಿಂದ ೧೬ ರವರೆಗೆ ದ್ವಿಶ್ರುತಿಯೂ ಇರುತ್ತವೆ. ಇತರ ಶ್ರುತಿಗಳು ಶಾಸ್ತ್ರಜ್ಞಾನದ ದೃಷ್ಟಿಯಿಂದ ಮುಖ್ಯವಾದುವೇ ವಿನಾ ಪ್ರಾಯೋಗಿಕ ಸಂಗೀತದ ದೃಷ್ಟಿಯಿಂದ ಅಷ್ಟಾಗಿ ಮುಖ್ಯವಲ್ಲ.

**ದಿಕ್**—ದಿಕ್ ಎಂದರೆ ದಿಶಿ ಎಂದರ್ಥ. ೧೦ ಭೂತಸಂಖ್ಯೆಯನ್ನು ಸೂಚಿಸಲು ದಿಕ್ ಎಂಬ ಪದವನ್ನು ಬಳಸಲಾಗಿದೆ. ೭೨ನೆ ಮೇಳಕರ್ತ ಪದ್ಧತಿಯಲ್ಲಿ ಇದು ೧೦ನೆಯ ಚಕ್ರವನ್ನು ಸೂಚಿಸುತ್ತದೆ.

**ದಿಗ್ವಿಜಯ**—ರಾಗತಾಳಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ (೧೭ನೆ ಶ) ಹೇಳಿರುವ ೧೨೪ ತಾಳಗಳಲ್ಲಿ ಇದೊಂದು ಬಗೆಯ ತಾಳ.

**ದಿಗುಜಾರು**—ಅವರೋಹಣ ಕ್ರಮದ ಜಾರು. ಇದು ಉಲ್ಲಸಿತ ಗಮಕ. ಒಂದು ಸ್ವರಸ್ಥಾನದಿಂದ ಮತ್ತೊಂದು ಸ್ವರಸ್ಥಾನದ ಮಧ್ಯೆ ಇರುವ ಸ್ವರಕ್ಕೆ ಪ್ರಾಮುಖ್ಯತೆ ಕೊಡದೆ ಜಾರುವುದಕ್ಕೆ ದಿಗುಜಾರು ಎಂದು ಹೆಸರು.

**ದಿನಕರಕಾಂತಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ಸ

ಅ: ಸ ನಿ ದ ಪ ಮ ಗ ಸ

**ದಿನಗೇಯರಾಗ**—ಹಗಲು ವೇಳೆಯಲ್ಲಿ ಹಾಡಬಹುದಾದ ರಾಗ. ಕೆಲವು ರಾಗಗಳನ್ನು ದಿನಗೇಯರಾಗಗಳೆಂದೂ ಕೆಲವನ್ನು ರಾತ್ರಿಗೇಯರಾಗಗಳೆಂದೂ, ಮತ್ತೀ ಕೆಲವನ್ನು ಸಾರ್ವಕಾಲಿಕವೆಂದೂ ವರ್ಗೀಕರಿಸಲಾಗಿದೆ.

**ದಿನದ್ಯುತಿ**—ಈ ರಾಗವು ೨೦ನೇ ಮೇಳಕರ್ತ ನಠಭೈರವಿಯ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ಮ ರಿ ಗ ಸ

**ದಿರಾ**—ನಾರದ ಮತದಂತೆ ಇದು ೨೨ ಶ್ರುತಿಗಳಲ್ಲಿ ಮಧ್ಯಮದ ಮೊದಲನೆ ಶ್ರುತಿಯ ಹೆಸರು.

**ದಿಲೀಪಕ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯ ರಾಗ.

ಆ: ಸ ರಿ ಗ ರಿ ಮ ಪ ನಿ ದ ನಿ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದಿಲೀಪ್‌ಕುಮಾರ್ ರಾಯ್**—ಪ್ರಸಿದ್ಧ ಹಿಂದೀ ಸಾಹಿತಿಯಾಗಿದ್ದ ದ್ವಿಜೇಂದ್ರಲಾಲ್‌ರಾಯ್‌ರವರ ಪುತ್ರ. ಹಿಂದೂಸ್ಥಾನೀ ಸಂಗೀತ ವಿದ್ವಾಂಸ, ಗಾಯಕ ಮತ್ತು ಲೇಖಕ. ಇವರ ಗಾಯನವು ಶಾಸ್ತ್ರ ಶುದ್ಧತೆ ಮತ್ತು ಭಾವಕ್ಕೆ ಪ್ರಸಿದ್ಧವಾಗಿದೆ.

**ದಿಲೀಪ್‌ಚಂದ್ರವೇದಿ**—ಒಬ್ಬ ಪ್ರಸಿದ್ಧ ಹಿಂದೂಸ್ಥಾನಿ ಸಂಗೀತಶಾಸ್ತ್ರಜ್ಞ ಮತ್ತು ವಿದ್ವಾಂಸರು.

**ದಿಲ್‌ರೂಬ**—ಇದು ಉತ್ತರಭಾರತದಲ್ಲಿ ಹೆಚ್ಚು ಬಳಕೆಯಲ್ಲಿರುವ ಒಂದು ತಂತೀವಾದ್ಯ. ಸುಮಾರು ಮೂರು ಅಡಿ ಉದ್ದವಿರುವ ಮತ್ತು ನಾಲ್ಕು ಅಂಗುಲ ಅಗಲವಿರುವ ಕೊಡಕ್ಕೆ ಬಲವಾಗಿ ದಂಡಿಯ ಅಗಲದ ಎರಡರಷ್ಟು ಅಗಲದ ಪೊಳ್ಳು ಪೆಟ್ಟಿಗೆ ಜೋಡಿಸಲ್ಪಟ್ಟಿರುತ್ತದೆ. ಈ ಪೆಟ್ಟಿಗೆಯ ಮೇಲೆ ಎದೆ ಹಲಗೆಯ ಬದಲು ಚರ್ಮದ ಮುಚ್ಚಳಿಕೆ ಇರುತ್ತದೆ. ಈ ಮುಚ್ಚಳಿಕೆಯ ಮೇಲೆ, ಮಧ್ಯಭಾಗದಲ್ಲಿ ಕುದುರೆಯನ್ನು ಕೂರಿಸಲಾಗಿದೆ. ಕುದುರೆ ಮತ್ತು ಮೇರುವಿನ ಮೇಲೆ ಮುಖ್ಯವಾದ ನಾಲ್ಕು ತಂತಿಗಳು ಹಾದುಹೋಗುತ್ತವೆ. ಈ ತಂತಿಗಳ ಕೆಳಗೆ ಒಂದು ಪಿಳ್ಳುಕುದುರೆ ಯಿದೆ. ಅದರ ಮೇಲೆ ೨೨ ಅನುರಣನದ ತಂತಿಗಳನ್ನು ಬಿಗಿಯಲಾಗಿದೆ ಮುಖ್ಯ ತಂತಿಯ ಬಿರಡೆಗಳು ದಂಡಿಯ ಬಿಡಿಭಾಗದ ಮರದ ಜಗುಲಿಗೆ ಹಾಕಲ್ಪಟ್ಟಿರುತ್ತವೆ. ಈ ವಾದ್ಯಕ್ಕೆ ತಂತಿಗಳಿಂದ ದಂಡಿಗೆ ಬಿಗಿಯಲ್ಪಟ್ಟ ಬಾಗಿರುವ ೧೯ ಕಂಚಿನ ಮೆಟ್ಟಲು ಗಳಿರುತ್ತವೆ. ಕುದುರೆ ಬಾಲದ ಕೂದಲಿನ ಕಮಾನಿನಿಂದ ಈ ವಾದ್ಯವನ್ನು ನುಡಿಸ ಲಾಗುವುದು. ಕೆಲವು ವಾದ್ಯಗಳನ್ನು ದಂತದ ಕೆತ್ತನೆ ಪಟ್ಟಿಗಳಿಂದ ಅಲಂಕರಿಸಿರು

ತ್ತಾರೆ ವಾದ್ಯವನ್ನು ನೇರವಾಗಿಟ್ಟುಕೊಂಡು ಕೆಳಭಾಗದಲ್ಲಿ ನುಡಿಸುತ್ತಾರೆ. ತಂತಿಗಳನ್ನು ಸ ಪ ಸ ಮ ಗಳಿಗೆ ಶ್ರುತಿ ಮಾಡಿರುತ್ತಾರೆ. ಮಧ್ಯಮದ ತಂತಿಯು ಮುಖ್ಯವಾದುದು. ಕೆಳಗಿನ ಸ್ಥಾಯಿಯ ತಂತಿಗಳು ಹಿತ್ತಾಳೆಯವು ಮತ್ತು ಮಧ್ಯ ಸ್ಥಾಯಿಯ ತಂತಿಗಳು ಉಕ್ಕಿನವು.

**ದಿವ್ಯಕುಂತಲ**—ಈ ರಾಗವು ೪೮ನೆ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ದಿವ್ಯಗಂಧಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ದ ನಿ ಗ ಪ ಸ

ಅ: ಸ ನಿ ದ ಪ ಮ ಗ ರಿ ಸ

**ದಿವ್ಯಗಾಂಧಾರ**—ಈ ರಾಗವು ೧೮ನೆ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯರಾಗ.

ಆ: ಸ ಮ ರಿ ಪ ದ ನಿ ಸ

ಅ: ಸ ದ ನಿ ಪ ಮ ಗ ಸ ರಿ ಸ

**ದಿವ್ಯಗಾಂಧಾರಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ಸ

**ದಿವ್ಯತರಂಗಿಣಿ**—ಈ ರಾಗವು ೧೭ನೆ ಮೇಳಕರ್ತ ಸೂರ್ಯಕಾಂತದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ದ ಪ ಮ ಗ ರಿ ಸ

**ದಿವ್ಯತಾಳ**—ಇದು ಕೆಲವು ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ತಾಳ. ಇದು ಪುರಾತನ ಪದ್ಧತಿಯ ೧೦೮ ತಾಳಗಳ ಗುಂಪಿಗೆ ಸೇರಿಲ್ಲ.

**ದಿವ್ಯತೋರಣಿ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ

ಆ: ಸ ರಿ ಗ ಪ ದ ಸ

ಅ: ಸ ನಿ ದ ಮ ಗ ರಿ ಸ

**ದಿವ್ಯಧ್ವನಿ**—ಒಬ್ಬ ದೇವತೆಯು ನುಡಿಸುವ ಒಂದು ಬಗೆಯ ಮದ್ದಲೆ.

**ದಿವ್ಯನಾಮಸಂಕೀರ್ತನೆಗಳು**—ಭಗವಂತನ ಹಲವು ನಾಮಗಳು ಮತ್ತು

ಸ್ತುತಿಗಳನ್ನೊಳಗೊಂಡ ಹಾಡುಗಳು. ಇವನ್ನು ಭಜನೆಗಳಲ್ಲಿ ಹಾಡುತ್ತಾರೆ. ಇವುಗಳ ಸಂಗೀತವು ಸರಳವಾಗಿರುತ್ತದೆ. ಇದರಲ್ಲಿ ಒಂದು ಪಲ್ಲವಿ ಮತ್ತು ಹಲವು ಚರಣಗಳಿರುತ್ತವೆ. ಚರಣಗಳ ಧಾತುವು ಒಂದೇ ವಿಧವಾಗಿರುತ್ತದೆ. ಕೆಲವುಗಳಲ್ಲಿ ಇಡೀ ಹಾಡು ಒಂದೇ ವಿಧವಾಗಿರುತ್ತದೆ. ಶ್ರೀತ್ಯಾಗರಾಜರ ಯದುಕುಲ ಕಾಂಭೋಜಿ ರಾಗದ (ಝಂಪತಾಳ) ಶ್ರೀರಾಮ ಜಯರಾಮ ಎಂಬ ಕೀರ್ತನೆಯು ಇದಕ್ಕೆ ಒಳ್ಳೆಯ ನಿದರ್ಶನ. ಇಡೀ ಹಾಡು ಒಂದೇ ವಿಧವಾದ ಧಾತುವನ್ನು ಹೊಂದಿದ್ದರೆ ಅದಕ್ಕೆ ಏಕ ಧಾತು ದಿವ್ಯನಾಮಕೀರ್ತನವೆಂದು ಹೆಸರು. ಶ್ರೀತ್ಯಾಗರಾಜರ ಪಾಹಿರಾಮರಾಮ ಚಂದ್ರ ಎಂಬ ಶಂಕರಾಭರಣ ರಾಗದ (ಆದಿತಾಳ) ಕೀರ್ತನೆಯಲ್ಲಿ ಪಲ್ಲವಿಯ ಚರಣಗಳ ಧಾತುವು ಬೇರೆ ಬೇರೆಯಾಗಿದೆ. ಇಂತಹ ಕೀರ್ತನೆಗೆ ದ್ವಿಧಾತು ದಿವ್ಯನಾಮ ಕೀರ್ತನೆಯೆಂದು ಹೆಸರು. ಇದರಲ್ಲಿ ಪ್ರತಿ ಚರಣದ ಕೊನೆಯಲ್ಲಿ ಪಲ್ಲವಿಯನ್ನು ಹಾಡುವರು. ತ್ಯಾಗರಾಜರು ಸಂಸ್ಕೃತ ಮತ್ತು ತೆಲುಗಿನಲ್ಲಿ ಹಲವು ದಿವ್ಯನಾಮ ಕೀರ್ತನೆಗಳನ್ನು ರಚಿಸಿದ್ದಾರೆ. ವಿಜಯಗೋಪಾಲ ಎಂಬುವರು ಸಂಸ್ಕೃತದಲ್ಲಿ ಇಂತಹ ಕೀರ್ತನೆಗಳನ್ನು ರಚಿಸಿದ್ದಾರೆ. ಭಾಗವತರ ನೇತೃತ್ವದಲ್ಲಿ ಭಕ್ತರು ದಿವ್ಯನಾಮ ಕೀರ್ತನೆಗಳನ್ನು ಹಾಡುತ್ತಾ ಒಂದು ಸಭಾಂಗಣದ ಮಧ್ಯದಲ್ಲಿರುವ ದೀಪವನ್ನು ಪ್ರದಕ್ಷಿಣೆ ಮಾಡುವರು

**ದಿವ್ಯಪಂಚಮ** – ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಸ ಪ ಮ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದಿವ್ಯಪ್ರಬಂಧಗಳು** —ಹನ್ನೆರಡು ಮಂದಿ ಶ್ರೀವೈಷ್ಣವ ಆಳ್ವಾರರು ಹಾಡಿರುವ ೪೦೦೦ ತಮಿಳು ಭಕ್ತಿಗೀತಗಳಿಗೆ ದಿವ್ಯಪ್ರಬಂಧಗಳು, ನಾಲಾಯಿರ ಪ್ರಬಂಧಂ, ತಿರುವಾಯಿಮೊಳಿ, ದ್ರಾವಿಡವೇದ ಎಂಬ ಹೆಸರುಗಳಿವೆ. ಪೊಯ್‌ಗೈಆಳ್ವಾರ್, ಭೂತತ್ತಾಳ್ವಾರ್, ಪೆರಿಯಾಳ್ವಾರ್, ತಿರುಮಳಿಶೈಆಳ್ವಾರ್, ನಮ್ಮಾಳ್ವಾರ್, ಕುಲಶೇಖರಾಳ್ವಾರ್, ಪೇಯಾಳ್ವಾರ್, ತೊಂಡರಡಿಪ್ಪೊಡಿಆಳ್ವಾರ್, ತಿರುಪ್ಪಾಣಆಳ್ವಾರ್, ತಿರುಮಂಗೈಆಳ್ವಾರ್, ಆಂಡಾಳ್‌ದೇವಿ ಮತ್ತು ಮಧುರಕವಿಆಳ್ವಾರರ ಈ ಪ್ರಬಂಧಗಳನ್ನು ಶ್ರೀ ವೈಷ್ಣವ ದೇವಾಲಯಗಳಲ್ಲಿ ಹಾಡುತ್ತಾರೆ.

**ದಿವ್ಯಬೌಳಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ

ಅ: ಸ ದ ಪ ಮ ಗ ರಿ ಗ ಸ

**ದಿವ್ಯಾಭರಣ**—ಈ ರಾಗವು ೨೧ನೆ ಮೇಳಕರ್ತ ಕೀರವಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ಪ ಮ ಗ ರಿ ಸ

**ದಿವ್ಯಾಂಬರಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯ ರಾಗ.

ಆ: ಸ ಪ ಮ ಪ ದ ನಿ ಸ

ಅ: ಸ ಪ ನಿ ದ ಪ ಮ ಗ ರಿ ಸ

**ದಿವ್ಯಮತಿ**—ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ದ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದಿವ್ಯಲಘು**—ಇದು ದಿವ್ಯ ಸಂಕೀರ್ಣಜಾತಿ ಲಘುವಿನ ಹೆಸರು. ಇದು ಒಂದು ಘಾತವನ್ನೂ, ನಾಲ್ಕು ಬೆರಳೆಣಿಕೆಯನ್ನೂ ಒಳಗೊಂಡಿದೆ. ಇದರ ಒಂದಾವರ್ತಕ್ಕೆ ೬ ಅಕ್ಷರ ಕಾಲ.

**ದಿವ್ಯವರಾಟಿ**—ಇದು ಪುರಾತನ ತಮಿಳು ಸಂಗೀತದ ಕುರಿಂಜಿಯಾಳ್‌ನ ಒಂದು ಜನ್ಯರಾಗ ಮತ್ತು ಪಣ್‌ರಾಗ.

**ದಿವ್ಯಸೇನಾ**—ಈ ರಾಗವು ೫೪ನೆ ಮೇಳಕರ್ತ ಹೈಮವತಿಯ ಒಂದು ಜನ್ಯ ರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ಗ ರಿ ಮ ಗ ಸ

**ದಿವ್ಯಸಂಕೀರ್ಣಲಘು**—ಒಂದು ಘಾತ ಮತ್ತು ಐದು ಬೆರಳೆಣಿಕೆಗಳುಳ್ಳ ಮತ್ತು ಆರು ಅಕ್ಷರಕಾಲದ ಒಂದು ಬಗೆಯ ಲಘು. ಇದು ದ್ವಿತೀಯ ಲಘು ಪಂಚ ಜಾತಿಗೆ ಸೇರಿದೆ.

**ದಿವಿಕಾಮಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯ ರಾಗ.

ಆ: ಸ ಗ ರಿ ಗ ಮ ಪ ದ ಪ ಸ

ಅ: ಸ ನಿ ದ ಪ ಮ ರಿ ಸ

**ದಿವಿಟವಾದ್ಯ**—ಇದು ಎರಡು ಮುಖಗಳಿರುವ ಒಂದು ಡೋಲು. ಇದನ್ನು ಆಂಧ್ರದೇಶದ ಹಳ್ಳಿಗಾಡಿನ ಜನರು ಹೆಚ್ಚಾಗಿ ಉಪಯೋಗಿಸುತ್ತಾರೆ. ಇದರ ಬಲವನ್ನು ಒಂದು ಸಣ್ಣ ಕಡ್ಡಿಯಿಂದ ಮತ್ತು ಎಡವನ್ನು ಬಗ್ಗಿರುವ ಕಡ್ಡಿಯಿಂದ ಬಾರಿಸುತ್ತಾರೆ. ಇದು ಕರ್ಣಾಟಕದಲ್ಲಿ ಪ್ರಚಲಿತವಿರುವ ಮಾರಮ್ಮನ ಡೋಲಿನಂತಿದೆ.

**ದಿಶಿ**—೭೨ನೆ ಮೇಳಕರ್ತ ಪದ್ಧತಿಯ ಭೂತಸಂಖ್ಯೆ. ಇದು ೫೫–೬೦ ಮೇಳಗಳನ್ನು ಒಳಗೊಂಡಿರುವ ೧೦ನೆ ಚಕ್ರದ ಹೆಸರು.

ದಿಶಿ — ಭೂ — ಇದು ೧೦ನೆ ಚಕ್ರದ ೪ನೆ ಮೇಳವನ್ನು ಸೂಚಿಸುತ್ತದೆ.
(೫೮ನೆ ಮೇಳ)
ದಿಶಿ — ಗೋ — (೫೭) ,, — ೩ನೆ ,,
ದಿಶಿ — ಮಾ — (೫೯) ,, — ೫ನೆ ,,
ದಿಶಿ — ಪ — (೫೫) ,, — ೧ನೆ ,,
ದಿಶಿ — ಷಾ — (೬೦) ,, — ೬ನೆ ,,
ದಿಶಿ — ಶ್ರೀ — (೫೬) ,, — ೨ನೆ ,,

**ದ್ವಿಅನ್ಯಸ್ವರಭಾಷಾಂಗರಾಗ**—ಎರಡು ಅನ್ಯಸ್ವರಗಳನ್ನು ಹೊಂದಿರುವ ಭಾಷಾಂಗರಾಗ. ಉದಾ : ಹಿಂದೂಸ್ಥಾನಿ ಬೇಹಾಗ್. ಈ ರಾಗವು ೨೯ನೆ ಮೇಳ ಕರ್ತ ಧೀರಶಂಕರಾಭರಣದ ಒಂದು ಜನ್ಯರಾಗವಾಗಿದ್ದೂ ಅನ್ಯಸ್ವರಗಳಾದ ಪ್ರತಿ ಮಧ್ಯಮ ಮತು ಕೈಶಿಕಿ ನಿಷಾದಗಳನ್ನು ಹೊಂದಿದೆ.

**ದ್ವಿಕಾಲ**—(೧) ದ್ವಿಕಾಲವೆಂದರೆ ಎರಡು ಕಾಲವೆಂದರ್ಥ. ತಾನವರ್ಣಗಳನ್ನು ದ್ವಿಕಾಲಸಾಧಕಕಕ್ಕಾಗಿ ರಚಿಸಲಾಗಿದೆ.

(೨) ತಾಳದ ಒಂದೊಂದು ಕ್ರಿಯೆಗೆ ಎರಡು ಕಾಲವಿರುವುದು ದ್ವಿಕಾಲ (ನೋಡಿ : ತಾಳದಶಪ್ರಾಣಗಳು).

**ದ್ವಿಖಂಡಗೀತ**—ಎರಡು ಭಾಗಗಳಿರುವ ಅಥವಾ ಖಂಡಿಕಗಳಿರುವ ಗೀತ. ಕಲ್ಯಾಣಿರಾಗದ ಕಮಲಜದಳ ಎಂಬುದು ಇದಕ್ಕೆ ಉತ್ತಮ ನಿದರ್ಶನ

**ದ್ವಿಗುಣ**—ದ್ವಿತ್ವವಿರುವ ಗುಣ. ತಾರಷಡ್ಜದ ಕಂಪನವಪೌಲ್ಯವು ಮಧ್ಯಮ ಷಡ್ಜದ ಎರಡರಷ್ಟು ಆಗುತ್ತದೆ. ಅತಿತಾರಷಡ್ಜದ ಕಂಪನವಪೌಲ್ಯವು ತಾರಷಡ್ಜದ ಎರಡರಷ್ಟೂ, ಮಧ್ಯಮಷಡ್ಜದ ನಾಲ್ಕರಷ್ಟೂ ಆಗುತ್ತದೆ. ಹೀಗೆ ಒಂದು ಸ್ವರವು ಅದರ ಸಪ್ತಕದೊಂದಿಗೆ ದ್ವಿಗುಣತ್ವದ ಸಂಬಂಧವನ್ನು ಹೊಂದಿದೆ.

**ದ್ವಿಜಾವಂತಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ರಿ ಮ ಗ ಮ ಪ ದ ಸ̇
ಅ : ಸ̇ ನಿ ದ ಪ ಮ ಗ ರಿ ಗ ಸ

ಈ ರಾಗವು ಹಿಂದೂಸ್ಥಾನಿ ಸಂಗೀತದ ಕೊಡುಗೆ. ಹಿಂದೂಸ್ಥಾನಿ ಸಂಗೀತದಲ್ಲಿ ಸುಮಾರು ಹದಿನಾರನೆಯ ಶತಮಾನದಿಂದ ಪ್ರಸಿದ್ಧವಾಗಿದ್ದು ಕರ್ಣಾಟಕ ಸಂಗೀತದಲ್ಲಿ ಹದಿನೆಂಟನೆಯ ಶತಮಾನದ ಕೊನೆಯಿಂದ ಕಂಡುಬರುತ್ತದೆ. ಆ ಪದ್ಧತಿಯಲ್ಲಿ ಜಿಜಾವಂತ, ಜಿಜಾವಂತಿ, ಜುಜಾವಂತಿ, ಜೈಜಯಂತಿ, ಜಯಂತಿ, ಜೈಜಯವಂತಿ, ಜಯವಂತಿ ಮತ್ತು ವೈಜಯಂತಿ ಎಂಬ ನಾಮಾಂತರಗಳನ್ನು ಪಡೆದಿದೆ. ಕರ್ಣಾಟಕ ಸಂಗೀತದಲ್ಲಿ ಈ ರಾಗವು ೧೯ನೆ ಶತಮಾನದಲ್ಲೂ ಏಕರೂಪವಲ್ಲದ ಲಕ್ಷ್ಯಲಕ್ಷಣಗಳನ್ನು ಹೊಂದಿತ್ತು. ಇದರಲ್ಲಿ ಕೆಲವೇ ರಚನೆಗಳು ಮುತ್ತುಸ್ವಾಮಿದೀಕ್ಷಿತರ

ಅಖಿಲಾಂಡೇಶ್ವರೀಂ ಮತ್ತು ಚೇತಃ ಶ್ರೀಬಾಲಕೃಷ್ಣಂ ಮತ್ತು ಗೋವಿಂದಾಚಾರ್ಯನ ಅರೇರೆ ಜಯ ಜಯಸಾಕೇತಪುರವಾಸ ಎಂಬ ಲಕ್ಷಣಗೀತೆ. ದೀಕ್ಷಿತರ ಚೇತಃಶ್ರೀಬಾಲ ಕೃಷ್ಣಂ ಎಂಬ ಕೃತಿಯು ಹಿಂದೂಸ್ತಾನಿ ಸಂಗೀತದ ಜಯಜಯವಂತಿಯ ಈಗಿನ ಲಕ್ಷಣಗಳನ್ನು ಒಳಗೊಂಡಿದ್ದೂ ಧ್ರುಪದ್ ರಚನೆಯ ಶೈಲಿಯಲ್ಲಿದೆ.

ಈ ರಾಗವು ಸಾಧಾರಣ ಗಾಂಧಾರವನ್ನು ಅನ್ಯಸ್ವರವಾಗಿ ಹೊಂದಿರುವ ಭಾಷಾಂಗರಾಗ ಮತ್ತು ದೇಶ್ಯರಾಗ. ರಿ ಮ ಗಾ ರೀ ಗ ರಿ ಸಾ ಎಂಬ ಸ್ವರಸಮೂಹ ದಲ್ಲಿ ಈ ಸ್ವರವು ಕಂಡುಬರುತ್ತದೆ. ರಿಷಭ ಮತ್ತು ಮಧ್ಯಮವು ಜೀವಸ್ವರಗಳು. ಇವು ದೀರ್ಘಸ್ವರಗಳಾಗಿದ್ದೂ ಕಂಪಿತ ಗಮಕದೊಡನೆ ಹಾಡಲಾಗುವುದು. ರಿ ಗ ಮ ಗ ರೀ ಸ್ವರಸಮೂಹದಲ್ಲಿ ಗಾಂಧಾರವು ಕೆಲವು ಸಲ ಸಾಧಾರಣ ಗಾಂಧಾರವಾಗಿಯೂ, ಕೆಲವು ಸಲ ಅಂತರ ಗಾಂಧಾರವಾಗಿಯೂ ಕಂಡುಬರುತ್ತದೆ. ಸಾರ್ವಕಾಲಿಕರಾಗ. ಶೃಂಗಾರರಸ ಪ್ರಧಾನವಾದ ರಮಣೀಯವಾದ ರಾಗ.

**ದ್ವಿತೀಯ**—(೧) ಸಾಮಗಾನ ಮೇಳದಲ್ಲಿ ಅವರೋಹಣದ ಎರಡನೆಯ ಸ್ವರ ಎಂದರೆ ರಿಷಭ ಸ್ವರ.

(೨) ಪುರಾತನ ಪ್ರಸಿದ್ಧವಾದ ೧೦೮ ತಾಳಗಳಲ್ಲಿ ಒಂದು ತಾಳ. ಒಂದು ದ್ರುತ, ಲಘು ಮತ್ತು ದ್ರುತವನ್ನು ಹೊಂದಿದೆ ಮತ್ತು ಇದರ ಒಂದಾವರ್ತಕ್ಕೆ ೨ ಮಾತ್ರೆಗಳು.

**ದ್ವಿತೀಯ ಕಾಲ**—ಎರಡನೆಯ ಕಾಲ ಅಥವಾ ವೇಗ. ವಿಳಂಬವು ಪ್ರಥಮ ಕಾಲ. ಮಧ್ಯಮವು ದ್ವಿತೀಯ ಕಾಲ.

**ದ್ವಿತೀಯ ಕಾಮೋದ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಹತ್ತು ಪ್ರಸಿದ್ಧ ದೇಶೀರಾಗಗಳಲ್ಲಿ ಇದೊಂದು ರಾಗವಿಶೇಷ.

**ದ್ವಿತೀಯ ಕೇದಾರ**—ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ವಿಧವಾದ ಕೇದಾರರಾಗ ಮತ್ತು ಸಂಪೂರ್ಣರಾಗ. ನಿಷಾದವು ಗ್ರಹ, ನ್ಯಾಸ ಮತ್ತು ಅಂಶಸ್ವರ. ರಾತ್ರಿ ವೇಳೆಯಲ್ಲಿ ಹಾಡಬಹುದಾದ ರಾಗ.

**ದ್ವಿತೀಯ ಘನಪಂಚಕ**—ಕೇದಾರ, ನಾರಾಯಣಗೌಳ, ರೀತಿಗೌಳ, ಸಾರಂಗನಾಟ ಮತ್ತು ಭೌಳಿ ಈ ರಾಗಗಳಿಗೆ ದ್ವಿತೀಯ ಘನಪಂಚಕ ರಾಗಗಳೆಂದು ಹೆಸರು.

**ದ್ವಿತೀಯ ಪಂಚಮ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಪ ಸ

ಅ: ಸ ನಿ ದ ಪ ಮ ರಿ ಗ ಮ ರಿ ಸ

**ದ್ವಿತೀಯ ಬಂಗಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಹತ್ತು ಪ್ರಸಿದ್ಧ ದೇಶೀರಾಗಗಳಲ್ಲಿ ಒಂದು ರಾಗ.

**ದ್ವಿತೀಯ ರಾಗವರ್ಧನಿ**—ರಾಗಾಲಾಪನೆಯ ಎರಡನೆಯ ಮುಖ್ಯ ಭಾಗಕ್ಕೆ ರಾಗವರ್ಧನಿ ಎಂದು ಹೆಸರು. ಇದರ ಎರಡನೆಯ ಭಾಗಕ್ಕೆ ದ್ವಿತೀಯ ರಾಗವರ್ಧಿನಿ ಎಂದು ಹೆಸರು ಇದರಲ್ಲಿ ಸಂಚಾರಿಗಳು ಹೆಚ್ಚಾಗಿ ಮಧ್ಯಮ ಸ್ಥಾಯಿಯಲ್ಲಿದ್ದು ಆಗಾಗ್ಗೆ ಇತರ ಸ್ಥಾಯಿಗಳನ್ನು ಮುಟ್ಟುವುದುಂಟು.

**ದ್ವಿತೀಯಾಂಗ**—ಪಲ್ಲವಿಯ (ಮನೋಧರ್ಮ ಸಂಗೀತ) ಎರಡನೆಯ ಭಾಗ. ಈ ಭಾಗವು ಪದಗರ್ಭದಿಂದ ಮೊದಲಾಗಿ ಕೊನೆಯವರೆಗೂ ಇರುವ ಭಾಗವನ್ನು ಒಳಗೊಂಡಿದೆ ಒಂದಾವರ್ತವಿರುವ ಆದಿತಾಳದ ಪಲ್ಲವಿಯಲ್ಲಿ ದ್ವಿತೀಯಾಂಗದ ಪಲ್ಲವಿಯು ಎರಡು ದ್ರುತಗಳನ್ನು ಹೊಂದಿರುತ್ತದೆ. ಪಲ್ಲವಿಯ ಮಿಕ್ಕ ಭಾಗವು ಪ್ರಥಮಾಂಗವಾಗಿದೆ.

**ದ್ವಿತೀಯ ಲಲಿತ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ವಿಧವಾದ ಲಲಿತರಾಗ.

**ದ್ವಿತೀಯ ವಿದಾರಿ**—ರಾಗಾಲಾಪನೆಯ ಒಂದು ಭಾಗವಾದ ದ್ವಿತೀಯರಾಗ ವರ್ಧನಿಯ ಕೊನೆಯ ಭಾಗ.

**ದ್ವಿತೀಯ ಸೌರಾಷ್ಟ್ರ** – ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ವಿಧವಾದ ಸೌರಾಷ್ಟ್ರರಾಗ.

**ದ್ವಿತೀಯ ಸೈಂಧವಿ**—ಮೇಲೆ ಹೇಳಿದ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಬಗೆಯ ಸೈಂಧವಿರಾಗ.

**ದ್ವಿತಂತ್ರಿ**—ಸಂಗೀತರತ್ನಾಕರದಲ್ಲಿ ಉಕ್ತವಾಗಿರುವ ಎರಡು ತಂತಿಗಳಿರುವ ವೀಣೆ

**ದ್ವಿಧಾತುದಿವ್ಯನಾಮಸಂಕೀರ್ತನೆ**—ಈ ವಿಧವಾದ ಕೀರ್ತನೆಯಲ್ಲಿ ಚರಣದ ಸಂಗೀತವು ಪಲ್ಲವಿಯ ಸಂಗೀತದಿಂದ ಬೇರೆ ರೀತಿಯಲ್ಲಿರುತ್ತದೆ. ಇದನ್ನು ಹಾಡು ವಾಗ ಪ್ರತಿಚರಣದ ಕೊನೆಯಲ್ಲಿ ಪಲ್ಲವಿಯನ್ನು ಹಾಡಲಾಗುವುದು. ತ್ಯಾಗರಾಜರ ಶ್ರೀರಾಮಶ್ರೀರಾಮ ಎಂಬ ಸಹಾನಾರಾಗದ ಕೀರ್ತನೆಯು ಇದಕ್ಕೆ ಉದಾಹರಣೆ.

**ದ್ವಿತಾಳಪಲ್ಲವಿ**—ಎರಡು ಬೇರೆ ಬೇರೆ ತಾಳಗಳಲ್ಲಿ ಹಾಡಬಹುದಾದ ಪಲ್ಲವಿಗೆ ದ್ವಿತಾಳಪಲ್ಲವಿ ಎಂದು ಹೆಸರು ಬೇರೆ ಬೇರೆ ತಾಳಗಳಲ್ಲಿ ಹಾಡಿದಾಗ ಪದಗರ್ಭವು ಸರಿಯಾಗಿ ಸೇರುವಂತೆ ಇಂತಹ ಪಲ್ಲವಿಯನ್ನು ರಚಿಸಲಾಗಿದೆ. ಖಂಡಜಾತಿ ಅಟ ತಾಳದ ಸಮಗ್ರಹದಿಂದ ಆರಂಭವಾಗುವ ಪಲ್ಲವಿಯನ್ನು ವಿಳಂಬದಲ್ಲಿ ತಿಶ್ರಜಾತಿ ತ್ರಿಪುಟ ತಾಳದಲ್ಲಿ ಹಾಡಬಹುದು. ಆಗ ಪಲ್ಲವಿಯು ಅರ್ಧಬೆರಳಿನ ಎಣಿಕೆಯಲ್ಲಿ ಅನಾಗತ ಗ್ರಹದಲ್ಲಿ ಆರಂಭವಾಗುತ್ತದೆ. ಇದನ್ನು ಹಾಡುವಾಗ ಬಲಗೈಯಲ್ಲಿ ಮಧ್ಯಮಕಾಲ ದಲ್ಲಿ ಅಟತಾಳವನ್ನೂ ಎಡಗೈಯಲ್ಲಿ ಚೌಕಕಾಲದಲ್ಲಿ ತ್ರಿಪುಟತಾಳವನ್ನೂ ಎಣಿಸ ಬಹುದು. ಒಂದಾವರ್ತಕ್ಕೆ ಒಂದೇ ವಿಧವಾದ ಅಕ್ಷರ ಕಾಲವಿರುವ ಎರಡು ತಾಳ ಗಳನ್ನು ತೆಗೆದುಕೊಂಡರೆ ಅವುಗಳನ್ನು ಒಂದೇ ವಿಧವಾದ ಕಾಲದಲ್ಲಿ ಎಣಿಸಬಹುದು.

ದ್ವಿತಾಳ ಪಲ್ಲವಿಯನ್ನು ಹಾಡುವುದು ಶಾಸ್ತ್ರಜ್ಞಾನ ಮತ್ತು ಲಯಜ್ಞಾನದ ಪಾಂಡಿತ್ಯ ಮತ್ತು ಪ್ರತಿಭೆಗಳ ಪ್ರದರ್ಶನ.

**ದ್ವಿಧಾತು ಪ್ರಬಂಧ**—ಇದು ಉದ್ಗ್ರಾಹ ಮತ್ತು ಧ್ರುವ ಎಂಬ ಎರಡು ಭಾಗಗಳನ್ನು ಹೊಂದಿರುವ ಒಂದು ಬಗೆಯ ಸಂಗೀತ ರಚನೆ. ಜಯದೇವ ಕವಿಯ ಅಷ್ಟಪದಿಗಳು ದ್ವಿಧಾತು ಪ್ರಬಂಧಗಳಿಗೆ ಉದಾಹರಣೆ

**ದ್ವಿಪದಿ(ದ್ವಿಪದ)**—ಎರಡು ಪಾದಗಳಿರುವ ಪದ್ಯ ಇದು ಗೇಯ ನಾಟಕಗಳಲ್ಲಿ ಮತ್ತು ಸಂವಾದಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ ಕನ್ನಡದ ಯಕ್ಷಗಾನ ಪ್ರಸಂಗಗಳಲ್ಲಿ ದ್ವಿಪದಿಗಳು ಬರುತ್ತವೆ

**ದ್ವಿಪಾದ**—ಅರುಣಾಚಲ ಕವಿರಾಯರ ರಾಮ ನಾಟಕದಲ್ಲಿ ಅನೇಕ ಉತ್ತಮ ದ್ವಿಪಾದಗಳಿವೆ.

**ದ್ವಿಮುದ್ರಕಾರ**—ಎರಡು ಬಗೆಯ ಮುದ್ರೆಗಳನ್ನು ತನ್ನ ರಚನೆಗಳಲ್ಲಿ ಬಳಸಿರುವ ವಾಗ್ಗೇಯಕಾರ. ಭದ್ರಾಚಲರಾಮದಾಸರು ರಾಮದಾಸ, ಭದ್ರಶೈಲ ಅಥವಾ ಅದರ ಪರ್ಯಾಯ ಪದಗಳನ್ನೂ, ಗೋಪಾಲಕೃಷ್ಣ ಭಾರತಿಯು ಗೋಪಾಲಕೃಷ್ಣ ಮತ್ತು ಬಾಲಕೃಷ್ಣ ಎಂಬ ಅಂಕಿತಗಳನ್ನು ಬಳಸಿದ್ದಾರೆ.

**ದ್ವಿಮುದ್ರ ಪ್ರಬಂಧ**—ದ್ವಾದಶಮುದ್ರೆಗಳಲ್ಲಿ ಯಾವುದಾದರೂ ಎರಡು ಬಗೆಯ ಮುದ್ರೆಗಳನ್ನು ಹೊಂದಿರುವ ಸಂಗೀತ ರಚನೆ. ನಿತ್ಯಕಲ್ಯಾಣಿ ಎಂಬ ರಾಗ ಮಾಲಿಕೆಯು ವಾಗ್ಗೇಯಕಾರಮುದ್ರೆ ಮತ್ತು ರಾಗಮುದ್ರೆ ಇವೆರಡನ್ನೂ ಒಳಗೊಂಡಿದೆ. ದೀಕ್ಷಿತರ ಕೃತಿಗಳಲ್ಲೂ ಇದೇ ರೀತಿ ಎರಡು ಮುದ್ರೆಗಳು ಕಂಡುಬರುತ್ತವೆ.

**ದ್ವಿಮುಖ ಪ್ರಿಯ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ : ಸ ಗ ರಿ ಮ ಪ ನಿ ಸ̇

ಅ : ಸ̇ ನಿ ದ ಮ ಗ ರಿ ಸ

**ದ್ವಿಮುಖ ಮದ್ದಲೆ**—ಎರಡು ಮುಖಗಳಿರುವ ಚರ್ಮವಾದ್ಯ. ಉದಾ : ಮೃದಂಗ, ಡೋಲು, ಡೋಲಕ್, ಪಖಾವಜ್ ಇತ್ಯಾದಿ ದ್ವಿಮುಖವಾದ್ಯಗಳು.

**ದ್ವಿರದಗಾಮಿನಿ**—ಈ ರಾಗವು ೬೬ನೆ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ದ ನಿ ಸ̇

ಅ : ಸ̇ ನಿ ದ ಪ ಮ ರಿ ಸ

**ದ್ವಿಸ್ವರವಕ್ರರಾಗ**—ಆರೋಹಣಾವರೋಹಣಗಳೆರಡರಲ್ಲೂ ಎರಡು ವಕ್ರಸ್ವರಗಳಿರುವ ರಾಗ. ಉದಾ—ಆನಂದ ಭೈರವಿ.

**ದ್ವಿಸ್ವರವರ್ಜ್ಯರಾಗ**—ಸಪ್ತಸ್ವರಗಳಲ್ಲಿ ಎರಡು ಸ್ವರಗಳಿಲ್ಲದಿರುವ ರಾಗ ಅಂದರೆ ಔಡವರಾಗ. ಉದಾ : ಮೋಹನರಾಗ.

**ದ್ವಿಸ್ವರಶ್ರುತಿವಾದ್ಯ**— ಎರಡು ಶ್ರುತಿಸ್ವರಗಳನ್ನು ಕೊಡುವ ಶ್ರುತಿವಾದ್ಯ. ದೋತಾರ್‌ದಲ್ಲಿರುವಂತೆ ಇವೆರಡು ಸ್ವರಗಳು ಸಾರಣಿ ಮತ್ತು ಅನುಸಾರಣಿಯು ಒಂದೇ ಶ್ರುತಿಯಾಗಿರಬಹುದು ಅಥವಾ ಎರಡು ಷಡ್ಜಗಳಾಗಿರಬಹುದು ಅಥವಾ ಷಡ್ಜ ಮತ್ತು ಪಂಚಮವಾಗಿರಬಹುದು.

**ದ್ವಿಶ್ರುತಿ ಅಂತರ**—ಎರಡು ಶ್ರುತಿಗಳ ಮಧ್ಯೆ ಇರುವ ಅಂತರ. ಅಂತರವು ೧೬/೧೫ ಆಗಿದ್ದರೆ ಅದು ಪೂರ್ಣದ್ವಿಶ್ರುತಿಅಂತರ. ಇದರ ಮೌಲ್ಯವು ಸ್ವಲ್ಪ ಕಡಿಮೆ ಇದ್ದರೆ (೧೩೫/೧೨೮) ಆಗ ಇದೊಂದು ನ್ಯೂನದ್ವಿಶ್ರುತಿಅಂತರವಾಗುತ್ತದೆ.

**ದ್ವಿಶ್ರುತಿಧೈವತ**—ಇದು ಎರಡನೆ ಶ್ರುತಿಯ ಧೈವತ ಇದರ ಕಂಪನ ಪ್ರಮಾಣವು ೮/೫ ಇದು ತೋಡಿರಾಗದಲ್ಲಿ ಬರುತ್ತದೆ.

**ದ್ವಿಶ್ರುತಿ ರಿಷಭ** ಇದು ಎರಡನೆ ಶ್ರುತಿಯ ರಿಷಭ. ಇದರ ಕಂಪನ ಪ್ರಮಾಣವು ೧೬/೧೫. ಇದು ತೋಡಿರಾಗದಲ್ಲಿ ಬಳಕೆಯಲ್ಲಿದೆ.

**ದಿಂಡಿ** —ಇದೊಂದು ಬಗೆಯ ಸಂಗೀತವಾದ್ಯ.

**ದಿಂಡಿರ** —ಇದೊಂದು ವಿಧವಾದ ಸಂಗೀತವಾದ್ಯ.

**ದೀರ್ಘ** —ಒಂದು ಸ್ವರವು ಎರಡು ಕಾಲ ಘಟಕದ ಪ್ರಮಾಣವನ್ನು ಹೊಂದಿದ್ದರೆ ಅದು ದೀರ್ಘಸ್ವರವಾಗುತ್ತದೆ.

**ದೀರ್ಘ ಕಂಪಿತ**—ಇದು ಚತುಶ್ರುತಿ ಅಂತರದ ವ್ಯಾಪ್ತಿಯುಳ್ಳ ಕಂಪಿತ. ಆನಂದ ಭೈರವಿ ಮತ್ತು ಅಠಾಣ ರಾಗಗಳಲ್ಲಿ ಸಾಧಾರಣ ಗಾಂಧಾರದ ಕಂಪನವು ಇದಕ್ಕೆ ನಿದರ್ಶನ.

**ದೀರ್ಘತರಂಗಿಣಿ** ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ದ ಪ ಮ ಗ ಮ ರಿ ಗ ರಿ ಸ

**ದೀರ್ಘದರ್ಶಿ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ಮ ಸ

**ದೀರ್ಘನಂದಿನಿ**—ಈ ರಾಗವು ೪೦ನೆ ಮೇಳರಾಗ ನವನೀತದ ಒಂದು ಜನ್ಯರಾಗ.

ಆ: ಪ ದ ನಿ ಸ ಗ ಮ ರಿ ಮ ಪ ನಿ

ಅ: ದ ಪ ಮ ಗ ರಿ ಸ ನಿ ದ ಪ

**ದೀರ್ಘವಾಂಗಳಿ**—ಈ ರಾಗವು ೪೭ನೆ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ಗ ರಿ ಸ

**ದೀರ್ಘಿಕ**—ಈ ರಾಗವು ೭ನೆ ಮೇಳಕರ್ತ ಸೇನವತಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ದೀಕ್ಷಾಂಗಿ**—ಈ ರಾಗವು ೪೬ನೆ ಮೇಳಕರ್ತ ಷಡ್ವಿಧ ಮಾರ್ಗಿಣಿಯ ಒಂದು ಜನ್ಯರಾಗ.

ಆ: ಸ ರಿ ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ಸ ರಿ ಸ

**ದೀಕ್ಷಿತರು**—ಪ್ರಸಿದ್ಧ ವಾಗ್ಗೇಯಕಾರರು, ಹಾಗೂ ಸಂಗೀತದ ತ್ರಿಮೂರ್ತಿಗಳಲ್ಲೊಬ್ಬರಾದ ಮುತ್ತುಸ್ವಾಮಿದೀಕ್ಷಿತರನ್ನು (೧೭೭೬–೧೮೩೫) ದೀಕ್ಷಿತರು ಎಂದು ಹೇಳುವುದು ರೂಢಿ.

**ದೀಪಕ**—(೧) ಪುರಾತನ ಪ್ರಸಿದ್ಧವಾದ ೧೦೮ ತಾಳಗಳಲ್ಲಿ ಇದೊಂದು ಬಗೆಯ ತಾಳ. ಎರಡು ದ್ರುತಗಳು, ಎರಡು ಲಘುಗಳು ಮತ್ತು ಎರಡು ಗುರು ಇದರ ಅಂಗಗಳು. ಇದರ ಒಂದು ಆವರ್ತಕ್ಕೆ ೬ ಮಾತ್ರೆಗಳು.

(೨) ಬೃಹದ್ಧರ್ಮಪುರಾಣ, ಸಂಗೀತರತ್ನಾಕರ ಮುಂತಾದ ಪುರಾತನ ಗ್ರಂಥಗಳಲ್ಲಿ ಉಕ್ತವಾಗಿರುವ ೬ ಮುಖ್ಯ ರಾಗಗಳಲ್ಲಿ ಒಂದು ರಾಗ. ಇದು ೨೧ ರಾಗಾಂಗ ರಾಗಗಳಲ್ಲಿ ಒಂದು ರಾಗವೆಂದು ಸಂಗೀತ ಸುಧಾ ಎಂಬ ಗ್ರಂಥದಲ್ಲಿ ಹೇಳಿದೆ. ಇದು ಚತುರ್ದಂಡಿ ಪ್ರಕಾಶಿಕೆಯಲ್ಲೂ ಉಕ್ತವಾಗಿದೆ. ಇದಕ್ಕೆ ದೀಪಿಕ ಎಂದೂ ಹೆಸರಿದೆ.

(೩) ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಪ ಸ

ಅ: ಸ ನಿ ದ ನಿ ಪ ಮ ಗ ರಿ ಸ

ಇದೊಂದು ಉಭಯ ವಕ್ರರಾಗ. ತ್ಯಾಗರಾಜರ 'ಕಳಲನೇರ್ಚಿನ' ಎಂಬ ರಚನೆಯು ಈ ರಾಗದಲ್ಲಿರುವ ಪ್ರಸಿದ್ಧ ಕೃತಿ.

**ದೀಪಕಕರ್ಣ**—ಇದು ದೀಪಕರಾಗದ ಒಂದು ದಾಸಿರಾಗವೆಂದು ಬೃಹದ್ಧರ್ಮ ಪುರಾಣದಲ್ಲಿ ಹೇಳಿದೆ.

**ದೀಪಕ ಜ್ಯೋತಿ**—ಇದೊಂದು ಅಪರೂಪ ರಾಗ.

**ದೀಪರ**—ಈ ರಾಗವು ೧೦ನೆ ಮೇಳಕರ್ತ ನಾಟಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ದೀಪರಾಗ** ಪಾರ್ಶ್ವದೇವನ 'ಸಂಗೀತ ಸಮಯಸಾರ'ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದೀಪವಕ್ತ್ರ**—ಇದು ದೀಪಕರಾಗದ ಒಂದು ದಾಸಿರಾಗವೆಂದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿದೆ.

**ದೀಪವರ್ಣ**—ದೀಪಕರಾಗದ ಒಂದು ದಾಸಿರಾಗವೆಂದು ಬೃಹದ್ಧರ್ಮ ಪುರಾಣದಲ್ಲಿ ಹೇಳಿದೆ.

**ದೀಪಹಸ್ತ**—ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ದೀಪಕ ರಾಗದ ದಾಸಿರಾಗಗಳಲ್ಲಿ ಒಂದು ರಾಗ.

**ದೀಪ್ತ**—(೧) ಶಾರ್ಙ್ಗದೇವನು ೨೨ ಶ್ರುತಿಗಳಿಗೆ ಐದು ಜಾತಿ ಅಥವಾ ಲಕ್ಷಣಗಳಲ್ಲಿ ಒಂದು ದೀಪ್ತ ಎಂಬುದು. ದೀಪ್ತ ಎಂದರೆ ಹೊಳೆಯುವುದು. ಆಯತ, ಕರುಣ, ಮೃದು ಮತ್ತು ಮಧ್ಯ ಎಂಬುವು ಇತರ ನಾಲ್ಕು ಜಾತಿಗಳು.

(೨) ಪ್ಲುತಕ್ಕೆ ದೀಪ್ತವೆಂದು ಹೆಸರು.

**ದೀಪಿಕಾವಸಂತ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಪ ನಿ ಸ

ಅ: ಸ ದ ಪ ಮ ರಿ ಸ

**ದೀಪಿನಿ ಜಾತಿಪ್ರಬಂಧ**—ಆರು ಅಂಗಗಳಲ್ಲಿ ನಾಲ್ಕು ಅಂಗಗಳಿರುವ ಪ್ರಬಂಧ.

**ದೀಪ್ತಿಮತಿ**—ನಾರದನ ಪದ್ಧತಿಯಂತೆ ೨೨ ಶ್ರುತಿಗಳಲ್ಲಿ ಇದು ಎರಡನೆಯ ರಿಷಭ ಶ್ರುತಿಯ ಹೆಸರು.

**ದೀಪಾಕ್ಷಿ**—ಇದು ದೀಪಕ ರಾಗದ ಒಂದು ದಾಸಿರಾಗವೆಂದು ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿದೆ.

**ದ್ವೀಪವತಿ**—ಈ ರಾಗವು ೬೧ನೆ ಮೇಳಕರ್ತ ಕಾಂತಾಮಣಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ.ನಿ ಸ

ಅ: ಸ ನಿ ದ ಪ ಮ ರಿ ಸ

**ದುಗಾರ್**—ಈ ರಾಗವು ದಕ್ಷಿಣಾದಿ ಸಂಗೀತದ ಶುದ್ಧ ಸಾವೇರಿಯಂತಿದೆ. ಇದು ಶಂಕರಾಭರಣಮೇಳದ ಅಥವಾ ಬಿಲಾವಲ್‌ಥಾಟ್‌ನ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ದ ಪ ಮ ರಿ ಸ

ಈ ರಾಗದಲ್ಲಿ ಹಾಡಿರುವ 'ಧರ್ಮಶ್ರವಣವಿದೇತಕೆ' ಎಂಬ ಪುರಂದರದಾಸರ ಕೀರ್ತನೆಯು ಪ್ರಸಿದ್ಧವಾಗಿದೆ.

**ದುರ್ಬಲ ಸ್ವರಗಳು**—ಕೆಲವು ರಾಗಗಳಲ್ಲಿ ಒಂದೆರಡು ಸ್ವರಗಳು ದುರ್ಬಲವಾಗಿರಬಹುದು. ಇಂತಹ ಸ್ವರಗಳನ್ನು ಒತ್ತಿ ಹೇಳಲು ಸಾಧ್ಯವಿಲ್ಲ. ಇವು ಜಂಟಿ ಸ್ವರಗಳಾಗಿಯಾಗಲೀ, ದೀರ್ಘ ಸ್ವರಗಳಾಗಿಯಾಗಲೀ ಬರುವುದಿಲ್ಲ. ಆರಭಿರಾಗದ ಗಾಂಧಾರ ಸ್ವರವು ದುರ್ಬಲ ಸ್ವರಕ್ಕೆ ಒಂದು ಉತ್ತಮ ನಿದರ್ಶನ.

**ದುರ್ಯೋಧನ ವಧೆ**—ಇದೊಂದು ಕಥಕಳಿ ನಾಟಕ.

**ದುರಿತನಿವಾರಿಣಿ** – ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ : ಸ ಗ ರಿ ಗ ಮ ಪ ಮ ದ ಸ̇

ಅ : ಸ̇ ನಿ ದ ಪ ಮ ಗ ಂ ಗ ಸ

**ದುರುವತಾಳಂ**—ಭರತಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಹೇಳಿರುವ ನವತಾಳಗಳಲ್ಲಿ ಒಂದು ತಾಳ.

**ದುಷ್ಕರ** ಖಂಡ ಜಾತಿ ತ್ರಿಪುಟತಾಳದ ಒಂದು ಹೆಸರು. ಇದರ ಒಂದಾವರ್ತಕ್ಕೆ ೯ ಅಕ್ಷರಕಾಲ.

**ದ್ರುತ**—ಇದು ತಾಳದ ಷಡಂಗಗಳಲ್ಲಿ ಒಂದು ಅಂಗ. ಒಂದು ಘಾತ ಮತ್ತು ಒಂದು ವಿಸರ್ಜಿತದಿಂದ ಇದನ್ನು ಲೆಕ್ಕ ಮಾಡಲಾಗುವುದು. ಇದರ ಕಾಲಪ್ರಮಾಣವು ಎರಡು ಅಕ್ಷರಕಾಲ. ಇದರ ಚಿಹ್ನೆ ೦.

**ದ್ರುತಕಾಲ**—ವಿಳಂಬ ಮತ್ತು ಮಧ್ಯಮ ಕಾಲದ ನಂತರ ಬರುವ ಮೂರನೆಯ ಕಾಲ. ಇದರ ಗತಿಯು ತೀವ್ರವಾಗಿದೆ.

**ದ್ರುತಮೇರು**—ಇದು ತಾಳಪ್ರಸ್ತಾರದ ೧೯ ವಿಧಾನಗಳಲ್ಲಿ ಒಂದು ಬಗೆ.

**ದ್ರುತವರ್ಧನ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ಗ ಮ ಪ ದ ಸ̇

ಅ : ಸ̇ ನಿ ದ ಪ ಮ ರಿ ಗ ರಿ ಸ

**ದ್ರುತಶೇಖರ**—ಇದು ತಾಳ ಷೋಡಶಾಂಗಗಳಲ್ಲಿ ಒಂದು ಅಂಗ. ಇದರ ಕಾಲ ಪ್ರಮಾಣವು ೩ ಅಕ್ಷರಕಾಲ. ಇದಕ್ಕೆ ದ್ರುತ ವಿರಾಮವೆಂದು ಹೆಸರು. ಇದರ ಚಿಹ್ನೆಯು ೪

**ದ್ರುತಶೇಖರಮೇರು**—ತಾಳ ಪ್ರಸ್ತಾರದ ೧೯ ವಿಧಾನಗಳಲ್ಲಿ ಒಂದು ಬಗೆ.

**ದ್ರುತಿ**—(೧) ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ರಾಗ.

ಆ : ಸ ರಿ ಗ ಪ ಮ ದ ನಿ ಪ ದ ಪ ಸ̇

ಅ : ಸ̇ ನಿ ದ ಪ ಮ ರಿ ಗ ಮ ಗ ಸ

(೨) ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ

ಸಂಗೀತ ರಚನೆಗಳನ್ನು ವೇಗ ಗತಿಯಲ್ಲಿ ಹಾಡಿದಾಗ ಅಥವಾ ನುಡಿಸಿದಾಗ ಅವುಗಳಲ್ಲಿ ಕಂಡುಬರುವ ಒಂದು ಸೌಂದರ್ಯಕ್ಕೆ ದ್ರುತಿ ಎಂದು ಹೆಸರು.

**ದ್ರುವಕೀರ್ಣವ**—ಈ ರಾಗವು ೪೩ನೆ ಮೇಳಕರ್ತ ಗವಾಂಭೋದಿಯ ಒಂದು ಜನ್ಯರಾಗ

ಆ: ಸ ರಿ ಮ ಪ ನಿ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಗ ಸ

**ದ್ರುವರೂಪಕ**—ಇದು ಗೀತಗಳಲ್ಲಿ ಕಂಡುಬರುವ ಒಂದು ಬಗೆಯ ತಾಳ ಪ್ರಾರಂಭದಲ್ಲಿ ೨ ದ್ರುತ ಮತ್ತು ೨ ಲಘುಗಳಿದ್ದು ನಂತರ ರೂಪಕ ತಾಳವಿರುತ್ತದೆ. 'ಆರೆಯಾನಕ' ಎಂಬ ನಾಟರಾಗದ ಗೀತವು ಇದಕ್ಕೆ ಉತ್ತಮ ನಿದರ್ಶನ.

**ದ್ರುಹಿಣಪ್ರಿಯ**—ಈ ರಾಗವು ೧೮ನೆ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ̇

ಅ: ಸ̇ ನಿ ದ ಪ ರಿ ಸ

**ದುಂದುಭಿ**—ಇದೊಂದು ಕೋನಾಕಾರದಲ್ಲಿರುವ ದೊಡ್ಡ ನಗಾರಿ ಇದರ ಹೊಳವನ್ನು ಮಾವಿನ ಮರದಿಂದ ಮಾಡುತ್ತಾರೆ. ಬಗ್ಗಿದ ಒಂದು ದಪ್ಪಕೋಲಿನಿಂದ ಬಡಿದರೆ ಜೋರಾಗಿ ಶಬ್ದವುಂಟಾಗುತ್ತದೆ ದುಂದುಭಿಯನ್ನು ಬಾರಿಸುವವನಿಗೆ ದುಂದುಭ್ಯಾಘಾತ ಎಂದು ಹೆಸರು.

**ದುಂದುಭಿಪ್ರಿಯ**—ಈ ರಾಗವು ೪೮ನೆ ಮೇಳಕರ್ತ ದಿವ್ಯಮಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ಮ ಗ ರಿ ಸ

ತ್ಯಾಗರಾಜ ವಿರಚಿತ "ಲೀಲಗಾನು ಜೂಚು" ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ದುಃಖಘಂಟಾರ**—ಇದೊಂದು ಬಗೆಯ ಘಂಟಾರಾಗ. ಇದು ಶೋಕರಸ ಪ್ರಧಾನವಾದುದು. ಇದನ್ನು ಕಥಕಳಿನಾಟಕಗಳಲ್ಲಿ ಬಳಸುತ್ತಾರೆ.

**ದುಃಖರಾಗ**—(೧) ಪುರಾತನ ತಮಿಳು ಸಂಗೀತದ ಪಾಲೈಯಾಳ್‌ನ ಒಂದು ಜನ್ಯರಾಗ.

(೨) ಕಥಕಳಿ ನಾಟಕಗಳಲ್ಲಿ ಬಳಕೆಯಲ್ಲಿರುವ ಶೋಕರಸ ಪ್ರಧಾನವಾದ ರಾಗ.

**ದುಃಖವರಾಳಿ**—ಕಥಕಳಿ ಸಂಗೀತದಲ್ಲಿ ಬರುವ ದುಃಖದಿಂದ ಕೂಡಿದ ಒಂದು ರಾಗ.

**ದೂರ್ಧಖ್ಯಾಯ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ನಿ ಪ ಮ ರಿ ಗ ಮ ರಿ ಸ

**ದೂರ್ವಾಸರಾಯರು** (**ದೂರಪ್ಪದಾಸರು**) — ಇವರು ಸವಣೂರು ದಿವಾನ್ ಖಂಡೇರಾಯರ ಮಕ್ಕಳು ಇವರ ಅಂಕಿತ 'ಭಾಗ್ಯನಿಧಿ ವಿಠಲಾಂಕಿತ' ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿದ್ದರು. ಹಲವು ದೇವರ ನಾಮಗಳನ್ನು ರಚಿಸಿದ್ದಾರೆ.

**ದೆಹಲಿ** — ಭಾರತದ ರಾಜಧಾನಿಯಾದ ದೆಹಲಿಯು ಪುರಾತನ ಕಾಲದಿಂದಲೂ ಒಂದು ಪ್ರಮುಖ ಸಂಗೀತ ಕಲಾಕೇಂದ್ರವಾಗಿದೆ. ಮುಸ್ಲಿಂ ದೊರೆಗಳ ಕಾಲದಲ್ಲಿ ಇದು ಉಚ್ಛ್ರಾಯ ಸ್ಥಿತಿಯಲ್ಲಿತ್ತು ಪ್ರಸಿದ್ಧ ಸಂಗೀತ ವಿದ್ವಾಂಸನಾದ ಅಮೀರ್ ಖುಸ್ರುವು ಅಲ್ಲಾವುದ್ದೀನ್ ಖಿಲ್ಜಿಯ (೧೨೯೬–೧೩೧೬) ಆಸ್ಥಾನ ವಿದ್ವಾಂಸನಾಗಿದ್ದನು. ದಕ್ಷಿಣ ಭಾರತದ ಗೋಪಾಲನಾಯಕನೂ ಆಸ್ಥಾನದ ಮತ್ತೊಬ್ಬ ಪ್ರಮುಖ ಸಂಗೀತ ವಿದ್ವಾಂಸನಾಗಿದ್ದನು. ಇವರಿಬ್ಬರಿಗೂ ನಡೆದ ಚರಿತ್ರಾರ್ಹವಾದ ಸಂಗೀತ ಸ್ಪರ್ಧೆಯು ದೆಹಲಿಯಲ್ಲಿ ನಡೆಯಿತು. ಏಳು ದಿನಗಳ ಕಾಲ ಗೋಪಾಲ ನಾಯಕನು ಶ್ರುತಿ ಮತ್ತು ಗಮಕ ಪ್ರಧಾನವಾದ ಕರ್ಣಾಟಕ ಶೈಲಿಯಲ್ಲಿ ಹಾಡಿದನು. ಆಗ ಅಮೀರ್ ಖುಸ್ರುವು ಸಿಂಹಾಸನದ ಹಿಂದೆ ಯಾರಿಗೂ ಕಾಣದಂತೆ ಕುಳಿತು ಗೋಪಾಲನಾಯಕನ ಶೈಲಿಯನ್ನು ಅರಗಿಸಿಕೊಂಡು ಎಂಟನೆಯ ದಿನ ಅದೇ ಶೈಲಿಯ ಕಚೇರಿಗಾಯನ ಮಾಡಿ ಎಲ್ಲರನ್ನೂ ಅಚ್ಚರಿಗೊಳಿಸಿದನು ಎಂಬ ಒಂದು ಕತೆ ಪ್ರಚಲಿತವಾಗಿದೆ.

ಮೊಗಲ್ ಚಕ್ರವರ್ತಿಗಳಲ್ಲಿ ಬಾಬರ್ (೧೪೮೩–೧೫೩೦) ಮತ್ತು ಹುಮಾಯೂನ್ (೧೫೩೦–೧೫೫೬) ಸಂಗೀತ ಕಲೆಯ ಪ್ರೇಮಿಗಳೂ, ಪೋಷಕರೂ ಆಗಿದ್ದರು. ಅಕ್ಬರ್ ಮಹಾಶಯನು (೧೫೫೬–೧೬೦೫) ಸಂಗೀತಜ್ಞನಾಗಿದ್ದನು. ಐನಿ ಅಕ್ಬರಿ ಎಂಬ ಗ್ರಂಥದಲ್ಲಿ ಖ್ಯಾತ ಗಾಯಕ ತಾನ್‌ಸೇನನು ಮೊದಲ್ಗೊಂಡು ೩೬ ಪ್ರಮುಖ ಸಂಗೀತ ವಿದ್ವಾಂಸರು ಇವನ ಆಸ್ಥಾನದಲ್ಲಿದ್ದರೆಂದು ಹೇಳಿದೆ. ಜಹಾಂಗೀರ್ (೧೬೦೫–೧೬೨೭) ಮತ್ತು ಷಾಜಹಾನ್‌ನ (೧೬೨೭–೧೬೫೮) ಕಾಲದಲ್ಲಿ ಸಂಗೀತವು ಉತ್ತಮ ಸ್ಥಿತಿಯಲ್ಲಿತ್ತು. ಔರಂಗಜೇಬನ (೧೬೫೮–೧೭೦೭) ಕಾಲದಲ್ಲಿ ದೆಹಲಿಯು ಸಂಗೀತ ಕೇಂದ್ರವಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಆಸ್ಥಾನದ ಗಾಯಕರನ್ನೂ, ಸಂಗೀತ ವಿದ್ವಾಂಸರನ್ನೂ ಅವನು ಕೆಲಸದಿಂದ ತೆಗೆದು ಹಾಕಿದನು. ಅವರೆಲ್ಲರೂ ಸೇರಿ ಸಂಗೀತದ ಮರಣವನ್ನು ಸೂಚಿಸುವ ಶವದ ಪೆಟ್ಟಿಗೆಯನ್ನು ಹೊತ್ತು ಬಂದರಂತೆ. ಆಗ ಚಕ್ರವರ್ತಿಯು ದುಃಖಿಸುತ್ತಿದ್ದ ಸಂಗೀತಗಾರರನ್ನು ಕುರಿತು "ಸಂಗೀತದ ಪ್ರತಿಧ್ವನಿಯೂ ಕೇಳದಷ್ಟು ಆಳವಾಗಿ ಹಳ್ಳ ತೆಗೆದು ಪೆಟ್ಟಿಗೆಯನ್ನು ಹೂಳಿರಿ" ಎಂದನಂತೆ. ಆದರೂ ತನ್ನ ಪತ್ನಿಯರು ಮತ್ತು ಹೆಣ್ಣು ಮಕ್ಕಳ ಮನೋರಂಜನೆಗಾಗಿ ನರ್ತಕಿಯರು ಮತ್ತು

ಗಾಯಕಿಯರನ್ನೂ ನೇಮಿಸಿಕೊಂಡಿದ್ದನು. ಸಂಗೀತವನ್ನು ಪೋಷಿಸಿದ ಕೊನೆಯ ಚಕ್ರವರ್ತಿ ಮಹಮುದ್‌ಷಾನ ಆಸ್ಥಾನದಲ್ಲಿ ಖ್ಯಾತ ವಿದ್ವಾಂಸರಾಗಿದ್ದ ಅದಾರಂಗ್ ಮತ್ತು ಸಾದಾರಂಗ್ ಇದ್ದರು.

**ದೆಹಾಳಿ**— ಈ ರಾಗವು ೧೬ನೆಯ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಪ ರಿ ಸ

**ದೇವಕಾಂತ**- ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ಪ ನಿ ಸ

ಅ: ಸ ದ ಪ ಮ ರಿ ಸ

**ದೇವಕೇಳಿ**— ಬೃಹದ್ಧರ್ಮ ಪುರಾಣದಲ್ಲಿ ಉಕ್ತವಾಗಿರುವ ವಸಂತ ರಾಗದ ರಾಗಿಣಿಗಳ ಒಂದು ದಾಸಿರಾಗ

**ದೇವಕೋಟಿ**— ಈ ರಾಗವು ೫೦ನೆ ಮೇಳಕರ್ತ ನಾಮನಾರಾಯಣಿಯ ಒಂದು ಜನ್ಯರಾಗ

ಆ: ಸ ರಿ ಮ ಗ ಮ ಪ ನಿ ಸ

ಅ: ಸ ದ ಪ ಮ ರಿ ಗ ಸ

**ದೇವಕ್ರಿ**— ನಾರದನ ಸಂಗೀತ ಮಕರಂದ ಮತ್ತು ಸೋಮನಾಥನ ರಾಗ ವಿಬೋಧ ಎಂಬ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ಸ್ತ್ರೀರಾಗ.

**ದೇವಕ್ರಿಯ**— (೧) ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ

ಆ: ಸ ಗ ರಿ ಗ ಮ ಪ ದ ನಿ ದ ಸ

ಅ: ಸ ನಿ ದ ಪ ಮ ಗ ರಿ ಗ ಸ

ಇದೊಂದು ಉಪಾಂಗರಾಗ. ತ್ಯಾಗರಾಜರ 'ನಾಟಿ ಪೂಟ ಮರಚಿತಿವೊ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

(೨) ಇದೇ ಹೆಸರಿನ ಮತ್ತೊಂದು ರಾಗವು ೩೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗವಾಗಿದೆ.

ಆ: ಸ ರಿ ಗ ಮ ನಿ ದ ನಿ

ಅ: ಪ ದ ಮ ಗ ರಿ ಸ ನಿ

(೩) ದೀಕ್ಷಿತರ ಪಂಥದಲ್ಲಿ ಶುದ್ಧ ಸಾವೇರಿ ರಾಗಕ್ಕೆ ದೇವಕ್ರಿಯ ಎಂದು ಹೆಸರು. ಶ್ರೀ ಗುರುಗುಹ ತಾರ ಯಾಶುಮಾಂ ಎಂಬ ದೀಕ್ಷಿತರ ಕೃತಿಯು ಈ ರಾಗದಲ್ಲಿದೆ.

**ದೇವಕೃತಿ**— ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಕ್ರಿಯಾಂಗ ರಾಗಗಳಲ್ಲಿ ಇದೊಂದು ರಾಗ ಇದು 'ಸಂಗೀತ ಸುಧಾ' ಎಂಬ ಗ್ರಂಥದಲ್ಲೂ ಉಕ್ತವಾಗಿದೆ.

**ದೇವಕುರಂಜಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸಂ

ಅ: ಸಂ ನಿ ದ ಮ ಗ ರಿ ಸ

**ದೇವಕುಸುಮಾವಳಿ**—ಈ ರಾಗವು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ಸಂ

ಅ: ಸಂ ನಿ ಪ ಮ ಗ ರಿ ಸ

**ದೇವಕೂಟಿ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸಂ

ಅ: ಸಂ ದ ಪ ಮ ರಿ ಗ ರಿ ಸ

**ದೇವಗಾಂಧಾರ**—ನಾರದನ ಸಂಗೀತಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಸೂರ್ಯಾಂಶರಾಗ. ಪುರಂದರದಾಸರ 'ಪರಾಕು ಭೀಮನೆಂದು' ಎಂಬ ದೇವರನಾಮದಲ್ಲಿ ಈ ರಾಗವು ಬರುತ್ತದೆ.

**ದೇವಗಾಂಧಾರಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

ಕೆಲವು ವಿದ್ವಾಂಸರ ಪ್ರಕಾರ ಇದರ ಆರೋಹಣವು ಸ ರಿ ಮ ಪ ದ ನಿ ಸಂ, ಆದರೆ ಪ ದ ನಿ ಸ ಎಂಬ ಸ್ವರ ಸಮೂಹವು ಅಪರೂಪವಾಗಿ ಬರುತ್ತದೆ. ಇಲ್ಲಿಯೂ ಇದು ಮ ಪ ದಾ, ನಿ ಸಂ ರೀಂ ಎಂದು ಬರುತ್ತದೆ ವಿನಹಾ ನೇರವಾಗಿ ಮ ಪ ದ ನಿ ಸಂ ರಿಂ ಎಂದು ಬರುವುದಿಲ್ಲ.

ಚತುಶ್ರುತಿ ರಿಷಭ, ಅಂತರ ಗಾಂಧಾರ, ಶುದ್ಧಮಧ್ಯಮ, ಚತುಶ್ರುತಿ ಧೈವತ, ಕಾಕಲಿ ನಿಷಾದ ಮತ್ತು ಕೈಶಿಕಿ ನಿಷಾದವು ಈ ರಾಗದ ಸ್ವರ ಸ್ಥಾನಗಳು.

ಔಡವ ಸಂಪೂರ್ಣರಾಗ. ಏಕಾನ್ಯ ಸ್ವರ ಭಾಷಾಂಗರಾಗ. ಅನ್ಯಸ್ವರವಾದ ಕೈಶಿಕಿ ನಿಷಾದವು ಪ ದ ನಿ ದ ಮ ಪ ದ ಪ ಮತ್ತು ಪ ದ ನಿ ದ ಪ ಎಂಬ ಸ್ವರಗುಚ್ಛಗಳಲ್ಲಿ ಬರುತ್ತದೆ. ಚೌಕಕಾಲ ಪ್ರಯೋಗಗಳಲ್ಲಿ ಈ ರಾಗದ ವೈಶಿಷ್ಟ್ಯವು ಎದ್ದು ಕಾಣುತ್ತದೆ. ಅವರೋಹಣ ಕ್ರಮದಲ್ಲಿ ದ, ಗ ಮತ್ತು ರಿ ರಾಗಛಾಯಾಸ್ವರಗಳು. ಗಮಕ ವರಿಕ್ತ ರಕ್ತಿರಾಗ. ಸ ರಿ ಗ ಸಾ ವಿಶೇಷ ಸಂಚಾರ. ಸ ರಿ ಗ ಮಾ ; ಗ ರೀ ಎಂಬುದು ರಕ್ತಿ ಪ್ರಯೋಗ. ಗಮಕವರಿಕರಕ್ತಿರಾಗ. ಧೈರ್ಯ ಮತ್ತು ಉತ್ಸಾಹವನ್ನು ತುಂಬುವ

ವೀರರಸ ಪ್ರಧಾನರಾಗ. ರಿ ಮತ್ತು ದ ಕಂಪಿತ ಸ್ವರಗಳು. ಮಾ, ಗರೀ ಮತ್ತು ಸಾ, ನಿ ದಾ ಎಂಬ ವಿಳಂಬದ ಸಂಚಾರಿಗಳಲ್ಲಿ ತೀವ್ರ ಅಂತರಗಾಂಧಾರ ಮತ್ತು ತೀವ್ರ ಕಾಕಲಿ ನಿಷಾದಗಳು ಈ ರಾಗದ ವಿಶಿಷ್ಟ ಸ್ವರಗಳಾಗಿ ಕಂಡು ಬರುತ್ತವೆ. ರಿ, ಪ, ಧ ಗಳು ನ್ಯಾಸ ಸ್ವರಗಳು. ಪುರಾತನವಾದ ಸಾರ್ವಕಾಲಿಕರಾಗ. ಇದು ನಾರದನ 'ಸಂಗೀತ ಮಕರಂದ' ವೆಂಬ ಗ್ರಂಥದಲ್ಲಿ ಉಕ್ತವಾಗಿದೆ ಚೂರ್ಣಿಕೆಗಳನ್ನೂ, ಮಂಗಳ ಶ್ಲೋಕಗಳನ್ನೂ ಈ ರಾಗದಲ್ಲಿ ಹಾಡುತ್ತಾರೆ ತ್ರಿಶ್ರುತಿ ಧೈವತ ಮತ್ತು ಚತುಶ್ರುತಿ ಧೈವತಗಳೆರಡರ ಪ್ರಯೋಗವೂ ಈ ರಾಗದಲ್ಲಿದೆ ಇದರ ರಚನೆಗಳು ಸ, ರಿ, ಪ, ದ ಸ್ವರಗಳಿಂದ ಆರಂಭವಾಗುತ್ತವೆ ತ್ರಿಸ್ಥಾಯಿರಾಗ. ಈ ರಾಗದಲ್ಲಿ ಯಾವ ತಾನ ವರ್ಣಗಳೂ ಕಂಡು ಬಂದಿಲ್ಲ. ಶ್ರೀತ್ಯಾಗರಾಜರು ಮದ್ರಾಸಿಗೆ ಭೇಟಿ ಕೊಟ್ಟಿದ್ದಾಗ ಈ ರಾಗವನ್ನು ಎಂಟು ದಿನಗಳ ಕಾಲ ಹಾಡಿ ಪ್ರತಿದಿನದ ಹಾಡುಗಾರಿಕೆಯ ನಂತರ ಈ ರಾಗದಲ್ಲಿ ರಚಿಸಿರುವ ತಮ್ಮ ಒಂದು ಕೃತಿಯನ್ನು ಹಾಡಿದರು.

ರಚನೆಗಳು—

| | | | |
|---|---|---|---|
| ಕೃತಿ : | ಕ್ಷೀರಸಾಗರ ಶಯನ | — ಆದಿ — | ತ್ಯಾಗರಾಜ |
| | ಕೊಲುವೈಯುನ್ನಾಡೆ | — ಆದಿ — | ತ್ಯಾಗರಾಜ |
| | ವಿನರಾದ ನಾ ಮನವಿ | — ಆದಿ — | ತ್ಯಾಗರಾಜ |
| | ಕರುಣಾ ಸಮುದ್ರ | — ಆದಿ — | ತ್ಯಾಗರಾಜ |
| | ಸೀತಾವರ ಸಂಗೀತ | — ಆದಿ — | ತ್ಯಾಗರಾಜ |
| | ಮರವಕರಾ | — ಆದಿ — | ತ್ಯಾಗರಾಜ |
| | ತುಳಸಮ್ಮ ಮಾಯಿಂಟ | — ಆದಿ — | ತ್ಯಾಗರಾಜ |
| | ನಾಮೊರಾಲಗಿಂಪ | — ರೂಪಕ — | ತ್ಯಾಗರಾಜ |
| ದರು : | ಎವರು ಮನಕು (ನೌಕಾಚರಿತ್ರಂ) | — ಆದಿ — | ತ್ಯಾಗರಾಜ |
| ಕೃತಿ : | ಕ್ಷಿತಿಜಾರಮಣಂ | — ಆದಿ — | ಮುತ್ತುಸ್ವಾಮಿ ದೀಕ್ಷಿತರು |
| | ಸ್ವಾಮಿಕಿಸರಿ | — ಆದಿ — | ಮಾನಂಬುಚಾವಡಿ ವೆಂಕಟಸುಬ್ಬಯ್ಯರ್ |
| | ರಾಮರಾಮಪಾಹಿ | — ರೂಪಕ — | ಸ್ವಾತಿತಿರುನಾಳ್ ಮಹಾರಾಜ |
| | ನೀಸಹಾಯಮುಲೇನಿ | — ಆದಿ — | ತಿರುವೊಟ್ರಿಯೂರು ತ್ಯಾಗಯ್ಯರ್ |
| | ಎನೇರಮುಂ ಉಂದನ್ | — ಆದಿ — | ಗೋಪಾಲಕೃಷ್ಣ ಭಾರತಿ |

ಎಕ್ಕಾಲಮುಂ ಉಂದನ್ — ಆದಿ — ವೇದನಾಯಕಂ ಪಿಳ್ಳೈ

ತಿರುಪ್ಪುಗಳ್ :

ಮಾದರ್‌ಪಿರೈ — ರೂಪಕ — ಅರುಣಗಿರಿನಾಥರ್

ಪದ : ವೇಡುಕತೋ — ಆದಿ — ಕ್ಷೇತ್ರಜ್ಞ

**ದೇವಗಿರಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ̇

ಅ: ಸ̇ ನಿ ದ ಪ ಮ ಸ ರಿ ಸ

**ದೇವಗಿರಿ**—ಈಗಿನ ಆಂಧ್ರ ಪ್ರದೇಶದ ಉತ್ತರ ಭಾಗದಲ್ಲಿರುವ ದೌಲತಾಬಾದ್ ಹಿಂದಿನ ದೇವಗಿರಿಯಾಗಿತ್ತು. ಇದು ದೇವಗಿರಿಯ ಯಾದವರ ರಾಜಧಾನಿಯಾಗಿತ್ತು. ಇಲ್ಲಿ ಸುಮಾರು ೧೨೧೦–೧೨೪೭ರ ಕಾಲದಲ್ಲಿ ಪ್ರಸಿದ್ಧ ಲಕ್ಷಣ ಗ್ರಂಥವಾದ 'ಸಂಗೀತರತ್ನಾಕರ' ವನ್ನು ರಚಿಸಿದ ಶಾರ್ಙ್ಗದೇವನು ವಾಸಿಸುತ್ತಿದ್ದನು.

**ದೇವಗೀರ್ವಾಣಿ**—ಈ ರಾಗವು ೬೦ನೆಯ ಮೇಳಕರ್ತ ಚಿತ್ರಾಂಬರಿಯ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ಸ̇

ಅ: ಸ̇ ಪ ಮ ಗ ರಿ ಸ

**ದೇವಗುಪ್ತ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ಪ ಮ ಗ ಸ

**ದೇವಗುಪ್ತಿ**— ಇದು ದೇವಗುಪ್ತ ರಾಗದ ಮತ್ತೊಂದು ಹೆಸರು.

**ದೇವಘೋಷಪ್ರಿಯ**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ. ಇದೊಂದು ಧೈವತಾಂತ್ಯರಾಗ.

ಆ: ಧ̣ ನಿ ಸ ರಿ ಗ ಮ ಪ ದ

ಅ: ದ ಪ ಮ ಗ ರಿ ಸ ನ̣ಿ ಧ̣

**ದೇವದತ್ತ**—ಇಂದ್ರನು ಅರ್ಜುನನಿಗೆ ಕೊಟ್ಟ ಶಂಖದ ಹೆಸರು.

**ದೇವದುಂದುಭಿ**— ವಾಲ್ಮೀಕಿ ರಾಮಾಯಣದಲ್ಲಿ ಉಕ್ತವಾಗಿರುವ ಶುಭ ಸಮಯಗಳಲ್ಲಿ ಬಾರಿಸುತ್ತಿದ್ದ ದುಂದುಭಿ.

**ದೇವತಾಲಿ**—ಪುರಾತನ ತಮಿಳು ಸಂಗೀತದ ೧೬ ಮುಖ್ಯರಾಗಗಳು ಅಥವಾ ಪೆರುಂಪಣ್‌ಗಳಲ್ಲಿ ಒಂದು ರಾಗ.

**ದೇವನಾಯಕಿ**—ಈ ರಾಗವು ೬೯ನೆಯ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ
ಅ: ಸ ನಿ ದ ಮ ಗ ರಿ ಸ

**ದೇವರನಾಮ**—ಪಲ್ಲವಿ, ಅನುಪಲ್ಲವಿ ಮತ್ತು ಒಂದು ಅಥವಾ ಅನೇಕ ಚರಣಗಳೆಂಬ ಮೂರು ಭಾಗಗಳಿರುವ, ಕೃತಿಯನ್ನು ಮಾತು ಮತ್ತು ಧಾತುವಿನಲ್ಲಿ ಹೋಲುವ ಹರಿದಾಸರ ಹಾಡುಗಳಿಗೆ ದೇವರನಾಮವೆಂದು ಹೆಸರು. ಇದು ಕೃತಿಯ ಸ್ವರೂಪಕ್ಕೆ ಮೂಲವಾದುದು. ಕ್ರಿ. ಶ. ಹದಿನಾಲ್ಕನೆ ಶತಮಾನದಲ್ಲಿದ್ದ ನರಹರಿ ತೀರ್ಥರಿಂದ ಇಲ್ಲಿಯವರೆಗೆ ಕನ್ನಡನಾಡಿನ ವ್ಯಾಸಕೂಟ ಮತ್ತು ದಾಸಕೂಟದ ಸಂತರು ಕನ್ನಡದಲ್ಲಿ ರಚಿಸಿರುವ ದೇವರನಾಮಗಳು ಅನೇಕ ಸಾವಿರ ಇವೆ. ನಾಲ್ಕು ಪಾದಗಳಿರುವ ಚರಣಗಳೇ ದೇವರನಾಮಗಳಲ್ಲಿ ಹೆಚ್ಚು. ಕೆಲವಲ್ಲಿ ಹನ್ನೆರಡರವರೆಗೆ ಪಾದಗಳಿರುತ್ತವೆ. ಇಪ್ಪತ್ತನ್ನು ಮೀರಿದ ಚರಣಗಳುಳ್ಳ ದೇವರನಾಮಗಳೂ ಇವೆ. ಕೊನೆಯ ಚರಣದಲ್ಲಿ ವಾಗ್ಗೇಯಕಾರನ ಅಂಕಿತವಿರುತ್ತದೆ. ಭಕ್ತಿಯೇ ಇವುಗಳ ಮುಖ್ಯರಸ. ನೀತಿ, ತತ್ವ, ಸಮಾಜ ಸುಧಾರಣೆ, ಆಚಾರಸಂಹಿತೆ, ಸ್ತುತಿ, ಪ್ರಾರ್ಥನೆ, ವೈರಾಗ್ಯ, ಮುಮುಕ್ಷುತ್ವ, ಲೋಕರೀತಿವರ್ಣನ, ವೇದೋಪನಿಷತ್ತುಗಳ, ಶ್ರುತಿ ಸ್ಮೃತಿಗಳ, ಪುರಾಣೇತಿಹಾಸಗಳ ಸಾರವೇ ಇವುಗಳಲ್ಲಿದೆ. ನರಹರಿತೀರ್ಥ, ಶ್ರೀಪಾದರಾಜರು, ವ್ಯಾಸರಾಯರು, ಪುರಂದರದಾಸರು, ಕನಕದಾಸರು, ವೈಕುಂಠ ದಾಸರು, ವಾದಿರಾಜರು, ವಿಜಯದಾಸರು, ಜಗನ್ನಾಥದಾಸರು, ರಾಘವೇಂದ್ರ ಸ್ವಾಮಿಗಳು, ಪ್ರಸನ್ನ ವೆಂಕಟದಾಸರು, ಮಹೀಪತಿದಾಸರು, ಸುರಪುರದ ಆನಂದ ದಾಸರು, ಗೋಪಾಲದಾಸರು, ಮೋಹನದಾಸರು, ಹೆಳವನಕಟ್ಟೆ ಗಿರಿಯಮ್ಮ ಮುಂತಾದ ಪ್ರಮುಖರೂ ಇವರ ಪರಂಪರೆಯಲ್ಲಿ ನೂರಾರು ಇತರ ವಾಗ್ಗೇಯಕಾರರು ದೇವರನಾಮಗಳನ್ನು ರಚಿಸಿದ್ದಾರೆ. ದಾಸಕೂಟವು ಇಂದಿಗೂ ಜೀವಂತವಾಗಿದ್ದು ಹಲವು ಆಧುನಿಕ ವಾಗ್ಗೇಯಕಾರರು ಇಂದಿಗೂ ದೇವರನಾಮಗಳನ್ನು ರಚಿಸುತ್ತ ಬಂದಿದ್ದಾರೆ.

**ದೇವಮಣಿ**—ಈ ರಾಗವು ೩೩ನೆಯ ಮೇಳಕರ್ತ ಗಾಂಗೇಯ ಭೂಷಣಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ
ಅ: ಸ ನಿ ದ ಪ ಗ ರಿ ಸ

**ದೇವಮನೋಹರಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ
ಅ: ಸ ನಿ ದ ನಿ ಪ ಮ ರಿ ಸ

ಉಪಾಂಗರಾಗ: ರಿ, ಮ, ನಿ ಗಳು ಜೀವಸ್ವರಗಳು. ಸಾರ್ವಕಾಲಿಕರಾಗ. ತ್ರಿಸ್ಥಾಯಿರಾಗ.

ರಚನೆಗಳು—

| | | |
|---|---|---|
| ಎವರಿಕೈ | — | ತ್ಯಾಗರಾಜರು |
| ನೀಕೇಲನಾ | — | ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ |
| ಪಲುಕವದೇಮಿರಾ | — | ಮೈಸೂರು ವಾಸುದೇವಾಚಾರ್ಯ |
| ಇನ್ನಮು ತಾಮಸ | — | ಪೊನ್ನಯ್ಯಪಿಳ್ಳೆ |

**ದೇವಮಯರೂಪ**—ಪ್ರತಿ ರಾಗಕ್ಕೂ ಅದರ ನಾದಮಯರೂಪ ಅಥವಾ ಶಬ್ದ ಚಿತ್ರವುಂಟು. ಅದರ ವಿಶಿಷ್ಟ ಸ್ವರಗಳು, ಗಮಕಗಳು ಇತ್ಯಾದಿಗಳಿಂದ ಇದು ಪ್ರಕಟವಾಗುತ್ತದೆ. ಆ ರಾಗದ ದೇವತೆಯ ಮೂಲಕ ಕಂಡು ಬರುವುದು ದೇವಮಯರೂಪ. ಆ ದೇವತೆಯ ವಸ್ತ್ರಾಲಂಕಾರ, ವರ್ಣ, ಸೌಂದರ್ಯ, ಪರಿಸರ ಇತ್ಯಾದಿಗಳಿಂದ ಈ ರೂಪು ಕಂಡು ಬರುವುದು.

**ದೇವಮಾಲಾಕ**—ಈ ರಾಗವು ೪೩ನೆ ಮೇಳಕರ್ತ ಗವಾಂಭೋದಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ

ಅ: ಸ ನಿ ಪ ದ ಪ ಮ ಗ ರಿ ಸ

**ದೇವಮಾಳವಿ**—ಈ ರಾಗವು ೫೬ನೆ ಮೇಳಕರ್ತ ಷಣ್ಮುಖಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ

ಅ: ನಿ ದ ಪ ಮ ಗ ರಿ ಸ ನಿ

**ದೇವಮುಖಾರಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಮ ಪ ಮ ರಿ ಗ ಮ ರಿ ಸ

**ದೇವಮಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ದ ಪ ಮ ಗ ರಿ ಸ

**ದೇವರಂಜನಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ದೇವರಂಜಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ಮ ಸ

**ದೇವರಾಷ್ಟ್ರ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ

ಆ: ಸ ರಿ ಗ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದೇವವಾದ್ಯ**—ವೀಣೆ ಮುಂತಾದ ಹಿರಿಯ ವಾದ್ಯಗಳನ್ನು ದೇವವಾದ್ಯಗಳೆನ್ನುತ್ತಾರೆ.

**ದೇವಸಾಲಗ**—ಈ ರಾಗವು ೨೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ಗ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದೇವದಾಸಿ**—ಮಧ್ಯಯುಗದಲ್ಲಿ ಪ್ರಮುಖ ದೇವಾಲಯಗಳಲ್ಲಿ ನೃತ್ಯ ಸೇವೆ ಮಾಡಲು ನೇಮಕವಾಗಿದ್ದ ನೃತ್ಯ ಕಲಾವಿದೆಯರಿಗೆ ದೇವದಾಸಿಯರೆಂದು ಹೆಸರು. ಇವರು ನೃತ್ಯ ಮತ್ತು ಸಂಗೀತಕಲೆಗಳಲ್ಲಿ ಪರಿಣತರಾಗಿದ್ದರು.

**ದೇವಪಾಣಿ**—ದೇವರ ಸ್ತುತಿ ರೂಪವಾದ ಒಂದು ಬಗೆಯ ತಮಿಳು ಹಾಡು.

**ದೇವಲ್ ಕೆ. ಬಿ.**—The Hindu Musical Scale (1910) ಮತ್ತು Theory of Indian Music as Expounded by Somanatha (1916) ಎಂಬ ಗ್ರಂಥಗಳನ್ನು ರಚಿಸಿರುವ ಪ್ರಸಿದ್ಧ ಸಂಗೀತ ಶಾಸ್ತ್ರಜ್ಞ.

**ದೇವಣಭಟ್ಟ**—ಸಂಗೀತಮುಕ್ತಾವಳಿ ಎಂಬ ಗ್ರಂಥವನ್ನು ರಚಿಸಿರುವ ವಿದ್ವಾಂಸ. ಈತನು ಪ್ರಯುಕ್ತ ದೇವರಾಜನಿಂದ (೧೪೨೦) ಪೋಷಿತನಾಗಿದ್ದನು.

**ದೇವಾಮೃತವರ್ಷಿಣಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ಮ, ದ, ನಿ ಗಳು ಜೀವಸ್ವರಗಳು. ಸಮಗಮ ಮತ್ತು ಸ ದ ನಿ ಪ ವಿಶೇಷ ಪ್ರಯೋಗಗಳು. ಸಾರ್ವಕಾಲಿಕರಾಗ. ತ್ಯಾಗರಾಜರು 'ಎವರನಿ ನಿರ್ಣಯಿಂಚಿರಾ' ಎಂಬ ಕೃತಿಯನ್ನು ರಚಿಸಿ ಈ ರಾಗವನ್ನು ಅಮರಗೊಳಿಸಿದ್ದಾರೆ.

**ದೇವಾಮೃತವಾಹಿನಿ**—ಈ ರಾಗವು ೬೪ನೆ ಮೇಳಕರ್ತ ವಾಚಸ್ಪತಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ದ ನಿ ಸ

ಅ: ಸ ನಿ ದ ನಿ ಪ ಮ ಗ ರಿ ಸ

**ದೇವಾರವರ್ಧನಿ**—ಈ ರಾಗವು ಮಧ್ಯಯುಗದ ತಮಿಳು ಸಂಗೀತಕ್ಕೆ ಸೇರಿದ ಒಂದು ರಾಗ. ಇದು 'ಸಂಗೀತರತ್ನಾಕರ'ವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ದೇವಾಳ**—ಸಂಗೀತರತ್ನಾಕರ ಮತ್ತು ಸಂಗೀತಸುಧಾ ಎಂಬ ಗ್ರಂಥಗಳಲ್ಲಿ ಉಕ್ತವಾಗಿರುವ ಒಂದು ಉಪಾಂಗರಾಗ.

**ದೇವಾಶ್ರಮ**—ಈ ರಾಗವು ೫೩ನೆ ಮೇಳಕರ್ತ ಗಮನಶ್ರಮದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ದೇವುಡು ಅಯ್ಯರ್**—ಪ್ರಸಿದ್ಧ ವಾಗ್ಗೇಯಕಾರ ಕರೂರು ದಕ್ಷಿಣಾಮೂರ್ತಿ ಶಾಸ್ತ್ರಿಗಳ ಬಂಧು ಮತ್ತು ಪಿಟೀಲು ವಿದ್ವಾಂಸರು. 'ಗರ್ಭಪುರಿ' ಎಂಬ ಅಂಕಿತವಿರುವ ರಚನೆಗಳನ್ನು ಇವರಿಬ್ಬರೂ ಸೇರಿ ರಚಿಸಿದರು. ಶಾಸ್ತ್ರಿಗಳ ಸಾಹಿತ್ಯಕ್ಕೆ ದೇವುಡು ಅಯ್ಯರ್ ಧಾತುವನ್ನು ಒದಗಿಸಿದರು. ಕರೂರು ತಮಿಳುನಾಡಿನ ತಿರುಚಿರಪ್ಪಳ್ಳಿ ಜಿಲ್ಲೆಯ ಒಂದು ಸ್ಥಳ.

**ದೇವೇಂದ್ರಪ್ಪ ಬಿ.** (೧೮೯೯)—ದೇವೇಂದ್ರಪ್ಪನವರು ಶಿವಮೊಗ್ಗ ಜಿಲ್ಲೆಯ ಆಯನೂರಿನಲ್ಲಿ ಜನಿಸಿದರು. ಇವರ ತಂದೆ ಬಿ. ಎಸ್. ರಾಮಯ್ಯನವರು ಸ್ವಯಂ ಸಂಗೀತಗಾರರು ಮತ್ತು ಭರತನಾಟ್ಯದಲ್ಲಿ ಪರಿಣತರು ಆಗಿದ್ದರು. ದೇವೇಂದ್ರಪ್ಪ ನವರಿಗೆ ಗಾಯನ ಮತ್ತು ವಾದ್ಯದಲ್ಲಿ ಅವರ ತಂದೆಯಿಂದ ಶಿಕ್ಷಣ ದೊರಕಿತು. ನಂತರ ತಿಟ್ಟೆ ನಾರಾಯಣ ಅಯ್ಯಂಗಾರ್ಯರಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಬಿಡಾರಂ ಕೃಷ್ಣಪ್ಪನವರಲ್ಲಿ ಕಲಿಯಬೇಕೆಂಬ ಇಚ್ಛೆಯಿಂದ ಅವರ ಭಾವಚಿತ್ರವನ್ನು ಎದುರಿನಲ್ಲಿಟ್ಟುಕೊಂಡು ಕಟ್ಟುನಿಟ್ಟಾದ ಸಾಧನೆ ಮಾಡಿದರು. ಇವರ ೨೨ನೆ ವಯಸ್ಸಿನಲ್ಲಿ ಮಹಾರಾಜರ ವರ್ಷ ವರ್ಧಂತಿಯ ಸಂದರ್ಭದಲ್ಲಿ ಅರಮನೆಯಲ್ಲಿ ಜಲತರಂಗನ್ನು ಅದ್ಭುತವಾಗಿ ನುಡಿಸಿದರು ಕೃಷ್ಣರಾಜ ಒಡೆಯರು ಯಾರಲ್ಲಿ ಪಾಠವೆಂದು ಕೇಳಿದಾಗ ಅಲ್ಲೇ ಕುಳಿತಿದ್ದ ಬಿಡಾರಂ ಕೃಷ್ಣಪ್ಪನವರನ್ನು ತೋರಿಸಿದರು. ಕೃಷ್ಣಪ್ಪನವರು ತಬ್ಬಿಬ್ಬಾಗಿ ಅಂದಿನಿಂದ ಇವರನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಶಿಕ್ಷಣವನ್ನು ಮುಂದುವರಿಸಿದರು ದೇವೇಂದ್ರಪ್ಪ ನವರು ಹಿರಿಯ ಗಾಯಕರು ಮಾತ್ರವಲ್ಲದೆ ವೀಣೆ, ಪಿಟೀಲು, ಗೋಟು ವಾದ್ಯ, ಜಲತರಂಗ್, ಸಿತಾರ್, ದಿಲ್‌ರುಬಾ ಮುಂತಾದ ವಾದ್ಯಗಳನ್ನು ನುಡಿಸುವುದರಲ್ಲಿ ಪ್ರವೀಣರು. ೧೯೫೩ರಲ್ಲಿ ಚೀಣಾ ದೇಶಕ್ಕೆ ಸಾಂಸ್ಕೃತಿಕ ನಿಯೋಗದ ಸದಸ್ಯರಾಗಿ ಹೋಗಿ ಅಲ್ಲಿ ಹಲವು ಪ್ರಮುಖ ಸ್ಥಳಗಳಲ್ಲಿ ಜಲತರಂಗ್ ವಾದ್ಯವನ್ನು ನುಡಿಸಿದರು. ಇವರಿಗೆ ರಾಜ್ಯದ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯು

೧೯೬೩ರಲ್ಲೂ, ಕೇಂದ್ರದ ಪ್ರಶಸ್ತಿ ೧೯೬೪ರಲ್ಲೂ ದೊರಕಿವೆ. ೧೯೭೧ರಲ್ಲಿ ಬೆಂಗಳೂರಿನ ಗಾಯನ ಸಮಾಜವು 'ಸಂಗೀತ ಕಲಾರತ್ನ' ಎಂಬ ಬಿರುದನ್ನೂ, ಮಹಾರಾಜರು 'ಗಾನವಿಶಾರದ' ಎಂಬ ಬಿರುದನ್ನೂ ನೀಡಿ ಸನ್ಮಾನಿಸಿದರು. ಇವಲ್ಲದೆ 'ರಾಗಾಲಾಪನಚತುರ' ಮುಂತಾದ ಹಲವಾರು ಬಿರುದುಗಳು ಬಂದಿವೆ. ಇವಲ್ಲದೆ ೧೯೭೨ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಇವರಿಗೆ 'ಡಾಕ್ಟರೇಟ್' ಪದವಿಯನ್ನು ಕೊಟ್ಟು ಗೌರವಿಸಿದೆ.

ದೇವೇಂದ್ರಪ್ಪನವರು ಮಾರುತಿಯ ಪರಮಭಕ್ತರಾಗಿ ಸುಮಾರು ೪೮ ವರ್ಷಗಳಿಂದ ಹನುಮಜ್ಜಯಂತಿ ಉತ್ಸವವನ್ನು ಮೈಸೂರಿನಲ್ಲಿ ತಮ್ಮ ಮನೆಯಲ್ಲಿ ನಡೆಸಿಕೊಂಡು ಬರುತ್ತಿರುವುದಲ್ಲದೆ ಸಂಗೀತ ವಿದ್ವಾಂಸರಿಗೆ ಬಿರುದನ್ನಿತ್ತು ಸನ್ಮಾನಿಸುತ್ತ ಬಂದಿದ್ದಾರೆ.

ಇವರಿಗೆ ಶಿಷ್ಯರು ಅನೇಕ. ಚಕ್ರಕೋಡಿ ನಾರಾಯಣಶಾಸ್ತ್ರಿ, ಎ. ಬಿ. ರಮಾನಂದ್, ಎ. ಬಿ. ಉಮಾಪತಿ, ಪರಮಶಿವನ್, ಎಂ. ಎಸ್. ಗೋವಿಂದಸ್ವಾಮಿ, ಜಿ. ಆರ್. ದಾಸಪ್ಪ, ಎಂ. ಎಸ್. ರಾಮಯ್ಯ, ಪಿಟೀಲು ಶಿವರಾಮಯ್ಯ, ಎಂ. ಎಸ್. ಸುಬ್ರಹ್ಮಣ್ಯಂ ಪುತ್ರರಾದ ವೇಣುಗೋಪಾಲ್, ಲಕ್ಷ್ಮಣ್ ಮುಂತಾದವರು ಇವರಲ್ಲಿ ಪ್ರಮುಖರು.

**ದೇವೇಂದ್ರ ಮುರುಡೇಶ್ವರ್**—ಮುರುಡೇಶ್ವರರ ಜನ್ಮಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಕುಮಟಾ ತಾಲ್ಲೂಕಿನ ಮಸೂರ್. ಕಾರವಾರದ ಹೈಸ್ಕೂಲಿನ ವಿದ್ಯಾಭ್ಯಾಸದ ನಂತರ ಬೊಂಬಾಯಿಗೆ ಹೆಚ್ಚಿನ ವ್ಯಾಸಂಗಕ್ಕೆ ಹೋದರು. ಅಲ್ಲಿ ಫಯಾಜ್‌ಖಾನ್, ಅಬ್ದುಲ್‌ಕರೀಂಖಾನ್ ಮುಂತಾದವರ ಸಂಗೀತದಿಂದ ಪ್ರಭಾವಿತರಾಗಿ ಆರಂಭದ ಶಿಕ್ಷಣವನ್ನು ಮಾಸ್ಟರ್ ನವರಂಗ್‌ರವರಲ್ಲಿ ಪಡೆದು ಉಸ್ತಾದ್ ಅಹಮದ್ ಹುಸೇಖಾನರಲ್ಲಿ ತಬಲಾವನ್ನು ಕಲಿತು ಪ್ರವೀಣರಾದರು. ೧೯೪೧ರಲ್ಲಿ ಪನ್ನಾಲಾಲ್ ಘೋಷರ ವೇಣುವಾದನಕ್ಕೆ ಮಾರು ಹೋಗಿ ಅವರ ಶಿಷ್ಯರಾಗಿ ಎರಡು ವರ್ಷಗಳ ಕಾಲ ಕಲಿತರು. ೧೯೫೦ರಲ್ಲಿ ದೆಹಲಿ ಆಕಾಶವಾಣಿಯ ಕಲಾವಿದರಾದರು. ಪನ್ನಾಲಾಲ್‌ರ ಅಳಿಯಂದಿರಾದರು. ನಂತರ ಮುಂಬಯಿ ಆಕಾಶವಾಣಿಯಲ್ಲಿ ಕಲಾವಿದರಾಗಿ ಬಂದರು ಇವರ ಕೊಳಲು ವಾದನವು ತುಂಬುನಾದದಿಂದ ಇಂಪಾಗಿ ಮೈಮರೆಸುವಂತಹುದು. ಈಗ ಇವರಿಗೆ ಸುಮಾರು ೫೮ ವರ್ಷ ವಯಸ್ಸು.

**ದೇಶಕಾಕು**—ಒಂದು ರಾಗದಲ್ಲಿ ಅನ್ಯಸ್ವರದ ಛಾಯೆಯನ್ನು ಕೊಟ್ಟು ಆ ರಾಗದ ಸೌಂದರ್ಯವನ್ನು ಪ್ರಕಾಶಗೊಳಿಸುವ ವಿಧಾನ.

**ದೇಶಕಾರ್**—ಇದು ಹಿಂದೂಸ್ಥಾನಿ ಪದ್ಧತಿಯಲ್ಲಿ ಭಾವಭಟ್ಟನ ೨೦ ಥಾಟ್‌ಗಳಲ್ಲಿ ಒಂದು ಮೇಳರಾಗ.

**ದೇಶಕಾರಿ** – ಹನುಮಾನ್ ಮತದಂತೆ ಪುರುಷರಾಗವಾದ ಮೇಘರಾಗದ ಐದು ಸ್ತ್ರೀರಾಗಗಳಲ್ಲಿ ಇದೊಂದು ರಾಗದ ಹೆಸರು.

**ದೇಶಖಿ**—ಹಂಸವಿಲಾಸವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದೇಶರಂಜನಿ**—ಈ ರಾಗವು ೫೧ನೆ ಮೇಳಕರ್ತ ಯಾಗಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ದೇಶಲಗೌಡ**—ಸಂಗೀತಸಮಯಸಾರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಔಡವರಾಗ.

**ದೇಶಲಂ**—ತಿರುಪತಿಯ ತಾಳ್ಳಪಾಕಂ ವಾಗ್ಗೇಯಕಾರರ (೧೫ನೆ ಶ.) ಕೃತಿಗಳಲ್ಲಿ ಕಂಡುಬರುವ ಒಂದು ರಾಗ.

**ದೇಶವರಾಳಿ**—ಒಂದು ತೆಲುಗು ಗ್ರಂಥದಲ್ಲಿರುವ ಗೀತ ಗೋವಿಂದದ ೨೦ ನೆಯ ಅಷ್ಟಪದಿಯ ರಾಗ.

**ದೇಶವಾಳ**—ಗೌಡರಾಗದ ಒಂದು ಉಪಾಂಗರಾಗದ ಹೆಸರು.

**ದೇಶ್**—ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ದೇಶ**—ರಘುನಾಥನಾಯಕನೆ ಸಂಗೀತಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೨೦ ಶುದ್ಧರಾಗಗಳಲ್ಲಿ ಒಂದು ರಾಗ.

**ದೇಶದೇಶಾಖ್ಯ**—ನಾರದನ ಸಂಗೀತಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗಾಂಗರಾಗ.

**ದೇಶಾಕ್ಷರಿ** – ಭರತ ಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದೇಶಾಕ್ಕರಿ**—ಪುರಾತನ ತಮಿಳು ಸಂಗೀತದ ಪಾಲೈಯಾಳ್‌ನ ೨೧ ಜನ್ಯಗಳಲ್ಲಿ ಒಂದು ರಾಗ.

**ದೇಶಾಕ್ಷಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ಇದರಲ್ಲಿ ಗ ಗ ಗ ಗ ರಿ— ಸ ರಿ ಗ ರಿ ಸ — ಸ ನಿ ನಿ ದ ಸ ಎಂಬುದು ರಂಜಕ ಪ್ರಯೋಗ. ಸ ನಿ ದ ಪ ಎಂಬಲ್ಲಿ ಕೈಶಿಕಿ ನಿಷಾದವು ಅನ್ಯಸ್ವರವಾಗಿ ಬರುತ್ತದೆ. ಇದೊಂದು ಪುರಾತನವಾದ ಪ್ರಾತಃಕಾಲದ ರಾಗ. ಜಯದೇವನ ಗೀತ ಗೋವಿಂದದ ೯ನೆ ಅಷ್ಟಪದಿಯನ್ನು ಈ ರಾಗದಲ್ಲಿ ಹಾಡಲಾಗುವುದು. ಈ ರಾಗವು ನಾರದನ ಸಂಗೀತಮಕರಂದ ಮತ್ತು ಇತರ ಗ್ರಂಥದಲ್ಲಿ ಉಕ್ತವಾಗಿದೆ.

**ದೇಶಾಕ್ಷಿರಿ**—ಈ ರಾಗವು ೩೫ನೆ ಮೇಳಕರ್ತ ಶೂಲಿನಿಯ ಒಂದು ಜನ್ಯರಾಗ ವೆಂದು ಗಾನವಿದ್ಯಾ ಪ್ರಕಾಶಿನಿ ಎಂಬ ಗ್ರಂಥದಲ್ಲಿ ಹೇಳಿದೆ.

ಆ : ಸ ರಿ ಗ ಮ ದ ಸ

ಅ : ಸ ನಿ ದ ಪ ಮ ಗ ಮ ರಿ ಸ

**ದೇಶಾಖ್ಯ**—ಸಂಗೀತರತ್ನಾಕರ ಮತ್ತು ಸಂಗೀತಸಮಯಸಾರ ಎಂಬ ಗ್ರಂಥ ಗಳಲ್ಲಿ ಉಕ್ತವಾಗಿರುವ ಒಂದು ರಾಗ.

**ದೇಶಾವಾಳಿ**— ಈ ರಾಗವು ೫೫ನೆ ಮೇಳಕರ್ತ ಶ್ಯಾಮಲಾಂಗಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ನಿ ದ ಸ

ಅ : ಸ ನಿ ದ ಮ ಗ ರಿ ಸ

**ದೇಶಾಶಂ** —ಪುರಾತನ ಗ್ರಂಥಗಳಲ್ಲಿ ಉಕ್ತವಾಗಿರುವ ಆರು ಮುಖ್ಯ ರಾಗಗಳಲ್ಲಿ ಒಂದು ರಾಗ.

**ದೇಶಾಂಗರಾಗ** —ಮಧ್ಯಯುಗದಲ್ಲಿ ಭಾಷಾಂಗರಾಗಕ್ಕೆ ಪ್ರಚಲಿತವಿದ್ದ ಹೆಸರು.

**ದೇಶಿಕಾಚಾರ್ ವಿ.** (೧೯೨೪)—ದೇಶಿಕಾಚಾರ್ಯರು ಆಸ್ಥಾನ ವಿದ್ವಾಂಸ ರಾಗಿದ್ದ ಎಂ. ವೆಂಕಟೇಶ ಅಯ್ಯಂಗಾರ್ಯರ ಪುತ್ರನಾಗಿ ಮೈಸೂರಿನಲ್ಲಿ ಜನಿಸಿದರು. ನಾಡಿನ ಪ್ರಮುಖ ವೈಣಿಕರಾದ ವಿ. ದೊರೆಸ್ವಾಮಿ ಅಯ್ಯಂಗಾರ್ಯರ ಕಿರಿಯ ಸಹೋದರ. ಕೊಳಲಿನಲ್ಲಿ ತಂದೆಯವರಿಂದ ಶಿಕ್ಷಣ ಪಡೆದರು. ಮತ್ತು ವೀಣಾ ವಾದನವನ್ನು ವೈಣಿಕ ಪ್ರವೀಣ ವೆಂಕಟಗಿರಿಯಪ್ಪನವರಲ್ಲಿ ಕಲಿತರು. ಮೊಟ್ಟ ಮೊದಲು ಮೈಸೂರು ಕೃಷ್ಣಜಯಂತಿ ಉತ್ಸವದಲ್ಲಿ ವಿದ್ವಾಂಸರಿದ್ದ ಸಭೆಯಲ್ಲಿ ಕಚೇರಿಯಲ್ಲಿ ನುಡಿಸಿ ಯಶಸ್ವಿಯಾಗಿ ಅಲ್ಲಿಂದ ಮುಂದೆ ಮೈಸೂರು, ಬೆಂಗಳೂರು, ಮದ್ರಾಸ್ ಮುಂತಾದ ಬಾನುಲಿ ಕೇಂದ್ರಗಳಲ್ಲೂ, ಬೆಂಗಳೂರು, ಬೊಂಬಾಯಿ, ದೆಹಲಿ ಮುಂತಾದ ಕಡೆಗಳಲ್ಲೆಲ್ಲಾ ಕೊಳಲು ಕಚೇರಿಗಳಲ್ಲಿ ನುಡಿಸಿ ಕೀರ್ತಿಶಾಲಿ ಗಳಾಗಿದ್ದಾರೆ. ನಾದಮಾಧುರ್ಯ, ಉತ್ತಮ ಮನೋಧರ್ಮ, ಕುಶಲತೆಯಿಂದ ಕೂಡಿದ ಸ್ವರಕಲ್ಪನೆ ಮುಂತಾದುವು ಇವರ ವೇಣುವಾದನದ ಪ್ರಮುಖ ಅಂಶಗಳು. ಇವರು ವೇಣುವಾದನದಲ್ಲಿ ಹೇಗೆ ವಿಶಾರದರೋ ಅಂತೆಯೇ ವೈಣಿಕರೂ ಆಗಿದ್ದಾರೆ. ಮೈಸೂರಿನ ಲಲಿತಕಲಾ ಕಾಲೇಜಿನಲ್ಲಿ ಕೊಳಲು ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ದೇಶಿಕಿನ್ನರಿ** —ಸಂಗೀತರತ್ನಾಕರದಲ್ಲಿ ಉಕ್ತವಾಗಿರುವ ಒಂದು ಬಗೆಯ ಕಿನ್ನರಿವಾದ್ಯ.

**ದೇಶಿನೀ**—ನಾರದನ ಸಂಗೀತಮಕರಂದವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಸ್ತ್ರೀರಾಗ.

**ದೇಶಿಮುಖಾರಿ**—ಈ ರಾಗವು ೫೫ನೆ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ. ಇದಕ್ಕೆ ದೇಶ್ಯ ಮುಖಾರಿ, ದೇಶಮುಖಾರಿ ಎಂಬ ಹೆಸರುಗಳಿವೆ.

ಆ: ಸ ರಿ ಗ ರಿ ಗ ಮ ನಿ ದ ನಿ ಸ

ಅ: ಸ ನಿ ದ ಮ ಪ ಗ ರಿ ಸ

**ದೇಶೀಪ್ರಬಂಧ**—ದೇಶೀಸಂಗೀತದ ಒಂದು ಪ್ರಬಂಧ.

**ದೇಶೀರಾಗ**—ದೇಶೀ ಸಂಗೀತದಲ್ಲಿ ಬರುವ ಒಂದು ರಾಗ.

**ದೇಶೀಸಂಗೀತ**—ಭಾರತದ ವಿವಿಧ ಪ್ರಾಂತ್ಯಗಳಲ್ಲಿ ಪ್ರಚಲಿತವಿರುವ ಸಂಗೀತ

**ದೇಶೀಸಿಂಹಾರವಂ**—ಈ ರಾಗವು ಅಸಂಪೂರ್ಣ ಮೇಳಪದ್ಧತಿಯಂತೆ ೫೮ನೆಯ ಮೇಳಕರ್ತರಾಗ. ಇದು ಹೇಮವತಿ ರಾಗವಾಗುತ್ತದೆ.

**ದೇಶೀತಾಳಗಳು**—ದೇಶೀ ಸಂಗೀತದ ತಾಳಗಳು. ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಶಾರ್ಙ್ಗದೇವನು ೧೨೦ ತಾಳಗಳನ್ನು ಹೇಳಿದ್ದಾನೆ.

**ದೇಶಿಕಗೌರಿ**—ಇದು ದೇಶ್ಯಗೌರಿ ರಾಗದ ಮತ್ತೊಂದು ಹೆಸರು.

**ದೇಶಿಕತೋಡಿ**—ಇದೊಂದು ಜನ್ಯರಾಗ. ಪುರಂದರದಾಸರ 'ಇದೀಗ ಭಕುತಿಯು' ಎಂಬ ಕೃತಿಯು ಈ ರಾಗದಲ್ಲಿದೆ.

**ದೇಶಿಕ ಪ್ರಭಾವ ಪ್ರಕಾಶಿಕ ಕೀರ್ತನೆಗಳು**—ಅನಂತ ಭಾರತಿಯು (೧೮೪೫–೧೯೦೫) ದೇಶಿಕರನ್ನು ಕುರಿತು ರಚಿಸಿರುವ ಕೀರ್ತನೆಗಳು.

**ದೇಶಿಕ ಬಂಗಾಳ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ಮ ದ ನಿ ಸ

ಅ: ಸ ದ ಪ ಮ ಗ ರಿ ಸ

**ದೇಶಿಕ ದೇವಗಾನ**—ಭರತ ನಾಟ್ಟಿಯ ಶಾಸ್ತಿರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ದೇಶೀ**—ಪುರಾತನಕಾಲದಲ್ಲಿ ಭಾರತದ ಪ್ರಾಂತ್ಯಗಳನ್ನು ದೇಶಗಳೆಂದು ಕರೆಯುತ್ತಿದ್ದರು. ವಿವಿಧ ಪ್ರಾಂತ್ಯಗಳಲ್ಲಿ ಪ್ರಚಲಿತವಿದ್ದ ಸಂಗೀತಕ್ಕೆ ದೇಶೀ ಸಂಗೀತ ವೆಂದು ಹೆಸರು. ಇದು ತನಗೆ ತಾನಾಗಿಯೇ ವಿಕಾಸಗೊಂಡಿತು. ಹೃದಯ ರಂಜಕ ಮತ್ತು ಜನರಂಜನೆಯು ಇದರ ಮುಖ್ಯಲಕ್ಷಣ. ಇಂದಿನ ದೇಶೀ ಸಂಗೀತವು ಕಲಾ ಸಂಗೀತದ ಸಾರವಾಗಿದೆ. ಮಾರ್ಗ ಸಂಗೀತವು ಮುಖ್ಯವಾಗಿ ಗಾಯನಕ್ಕೆ ಸಂಬಂಧಿಸಿತ್ತು. ಆದರೆ ದೇಶೀ ಸಂಗೀತವು ಗೀತ, ವಾದ್ಯ, ನೃತ್ಯಗಳನ್ನು ಒಳಗೊಂಡಿತ್ತು. ಪುರಾತನ ಸಂಗೀತಶಾಸ್ತ್ರಗ್ರಂಥಗಳಲ್ಲಿ ಮಾರ್ಗರಾಗಗಳು, ದೇಶೀರಾಗಗಳು, ಮಾರ್ಗತಾಳಗಳು ಮತ್ತು ದೇಶೀತಾಳಗಳು, ಮಾರ್ಗ ಪ್ರಬಂಧಗಳು ಮತ್ತು ದೇಶೀ ಪ್ರಬಂಧಗಳು, ಮಾರ್ಗ ಮತ್ತು ದೇಶೀ ರಾಗಗಳ ವರ್ಗೀಕರಣ ಇತ್ಯಾದಿಗಳನ್ನು ಹೇಳಿದೆ. ಈ ವ್ಯತ್ಯಾಸವು ಸಾಹಿತ್ಯದಲ್ಲೂ ಕಂಡುಬರುತ್ತದೆ.

**ದೇಶ್ಯ ಆಂಧ್ರಾಳಿ**—ಈ ರಾಗವು ೯ನೆಯ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ಸ̇

ಅ: ಸ ದ ಪ ಮ ಗ ರಿ ಸ

**ದೇಶ್ಯಕಲ್ಯಾಣಿ**—ಈ ರಾಗವು ೬೫ನೆಯ ಮೇಳಕರ್ತ ಮೇಛಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ̇

ಅ: ಸ̇ ದ ಪ ಮ ರಿ ಸ

**ದೇಶ್ಯಕಮಾಚ್**—ಈ ರಾಗವು ೨೮ನೆಯ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಮ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ಸ

**ದೇಶ್ಯಕಾನಡ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ಪ ಗಾ ಮ ರಿ ಸ

**ದೇಶ್ಯಕಾಪಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ. ಇದು ಹಿಂದೂಸ್ಥಾನಿ ಕಾಪಿ ರಾಗವಾಗಿದೆ.

ಆ: ಸ ರಿ ಮ ಪ ನಿ ಸ̇

ಅ: ಸ̇ ನಿ ದ ನಿ ಪ ಮ ಗ ರಿ ಸ

**ದೇಶ್ಯಕ್ರಿಯ**—ದೇಶೀ ಪದ್ಧತಿಯ ತಾಳಗಳ ಅಂಗಗಳನ್ನು ಲೆಕ್ಕ ಮಾಡುವ ಕ್ರಿಯೆ.

**ದೇಶ್ಯಕ್ರಿಯಾಷ್ಟಕಗಳು**—ತಾಳಾಂಗಗಳನ್ನು ಎಣಿಸುವ ಎಂಟು ಬಗೆಯ ಕ್ರಿಯೆಗಳಾವುವೆಂದರೆ—

(೧) ಧ್ರುವಕ—ನಿಶ್ಶಬ್ದ ಕ್ರಿಯೆ

(೨) ಸರ್ಪಿಣಿ—ಬಲಗೈಯನ್ನು ಎಡಕ್ಕೆ ಚಲಿಸುವುದು

(೩) ಕೃಷ್ಯ—ಬಲಗೈಯನ್ನು ಎಡದಿಂದ ಬಲಕ್ಕೆ ಚಲಿಸುವುದು

(೪) ಪದ್ಮಿನಿ—ಅಂಗೈಯನ್ನು ಕೆಳಮುಖವಾಗಿಟ್ಟುಕೊಂಡು ಅದನ್ನು ಕೆಳಕ್ಕೆ ತರುವುದು.

(೫) ವಿಸರ್ಜಿತ—ಬಲಗೈಯನ್ನು ಬಲಕ್ಕೆ ಬೀಸುವುದು

(೬) ವಿಕ್ಷಿಪ್ತ—ಲೆಕ್ಕ ಮಾಡುತ್ತಾ ಕೈಬೆರಳುಗಳನ್ನು ಮುಡಿಚಿಕೊಳ್ಳುವುದು

(೭) ಪತಾಕ—ಅಂಗೈಯನ್ನು ಕೆಳಮುಖವಾಗಿಟ್ಟುಕೊಂಡು ಬಲಗೈಯನ್ನು ಮೇಲಕ್ಕೆ ಎತ್ತುವುದು

(೮) ಪತಿತ—ಮೇಲಕ್ಕೆತ್ತಿದ ಬಲಗೈಯನ್ನು ಕೆಳಕ್ಕೆ ತರುವುದು

**ದೇಶ್ಯಗಾನವಾರಿಧಿ**—ಈ ರಾಗವು ೬೦ನೆಯ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ಸ̇

ಅ: ಸ̇ ನಿ ಸ̇ ಪ ಮ ಗ ರಿ ಸ

**ದೇಶ್ಯಗೌರಿ**—ಈ ರಾಗವು ೫ನೆಯ ಮೇಳಕರ್ತ ಮಾನವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ̇

ಅ: ಸ̇ ದ ನಿ ಪ ಮ ಗ ರಿ ಸ

**ದೇಶ್ಯಗೌಳ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಸ ಪ ದ ನಿ ಸ̇

ಅ: ಸ̇ ನಿದ ಪ ಸ ರಿ ಸ

**ದೇಶ್ಯತೋಡಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ದೇಶ್ಯನಾಟಕುರಂಜಿ**—ಈ ರಾಗವು ೫೫ನೆ ಮೇಳಕರ್ತ ಶ್ಯಾಮಲಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ಪ ದ ಪ ಮ ಗ ರಿ ಸ

**ದೇಶ್ಯನಾರಾಯಣಿ**—ಈ ರಾಗವು ೬ನೆಯ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಸ̇

ಅ: ಸ̇ ನಿ ದ ನಿ ಪ ಮ ಗ ರಿ ಸ

**ದೇಶ್ಯಬ್ಯಾಗ್**–ಇದು ಹಿಂದೂಸ್ಥಾನಿ ಬೇಹಾಗ್ ರಾಗದ ಮತ್ತೊಂದು ಹೆಸರು.

**ದೇಶ್ಯಬ್ಯಾಗಡ**—ಈ ರಾಗವು ೧೯ನೆಯ ಮೇಳಕರ್ತ ಝುಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ̇

ಅ: ಸ̇ ನಿ ದ ಮ ಗ ರಿ ಸ

**ದೇಶ್ಯಬೇಗಡ**—ಈ ರಾಗವು ೧೯ನೆಯ ಮೇಳಕರ್ತ ಝಂಕಾರ ಧ್ವನಿಯ ಒಂದು ಜನ್ಯರಾಗ

ಆ: ಸ ಗ ಮ ಪ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ದೇಶ್ಯ ಬಂಗಾಳ**—ಈ ರಾಗವು ೮ನೆಯ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ̇

ಅ: ಸ̇ ದ ಪ ಮ ಗ ರಿ ಸ

**ದೇಶ್ಯಮನೋಹರಿ**—ಈ ರಾಗವು ೨೨ನೆಯ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ಪ ಮ ಗ ರಿ ಸ

**ದೇಶ್ಯಮಾರುವ**—ಈ ರಾಗವು ೫೪ನೆಯ ಮೇಳಕರ್ತ ವಿಶ್ವಂಭರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ̇

ಅ: ಸ̇ ನಿ ಪ ಮ ಗ ರಿ ಸ

**ದೇಶ್ಯಮಾಖಾರಿ**—ಈ ರಾಗವು ೨೫ನೆಯ ಮೇಳಕರ್ತ ಮಾರರಂಜನಿಯ ಒಂದು ಜನ್ಯರಾಗ.

ಆ: ಸ ರಿ ಗ ರಿ ಗ ಮ ನಿ ದ ನಿ ಸ̇

ಅ: ಸ̇ ನಿ ದ ಮ ಪ ಗ ರಿ ಸ

**ದೇಶ್ಯರೇಗುಪ್ತಿ ಅಥವಾ ದೇಶ್ಯರೇವಗುಪ್ತಿ**—ಈ ರಾಗವು ೧೫ನೆಯ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ರಿ ಮ ಪ ದ ನಿ ಸ̇

ಅ: ಸ ದ ನಿ ದ ಪ ಮ ಗ ಸ

**ದೇಶ್ಯಸಂಕೀರ್ಣಲಘು**—ಒಂದು ಘಾತ ಮತ್ತು ೯ ಬೆರಳೆಣಿಕೆಯನ್ನು ಒಳಗೊಂಡ ಒಂದು ಬಗೆಯ ಲಘು. ಇದಕ್ಕೆ ವರ್ಣಲಘು ಎಂದು ಹೆಸರು.

**ದೇಶ್ಯಸುರಟಿ**—ಈ ರಾಗವು ೬ನೆಯ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ.

ಆ: ಸ ಮ ರಿ ಗ ಮ ಪ ದ ನಿ

ಅ: ಪ ಮ ಗ ರಿ ಸ ನಿ

**ದೇಶ್ಯ ಶುದ್ಧ ಸಂಕೀರ್ಣಲಘು**—ಒಂದು ಘಾತ ಮತ್ತು ೧೫ ಬೆರಳೆಣಿಕೆಯನ್ನು ಒಳಗೊಂಡ ಒಂದು ಬಗೆಯ ಲಘು. ಇದಕ್ಕೆ ಕರ್ಣಾಟಕ ಲಘು ಎಂದು ಹೆಸರು.

**ದೇಶ್ಯಶ್ರೀ**—ಈ ರಾಗವು ೫೮ನೆಯ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ದ ಸ

ಅ: ಸ ನಿ ದ ಮ ಗ ರಿ ಸ

**ದೊರೆಸ್ವಾಮಿ ಎಂ. ಆರ್.** (೧೯೨೨) — ದೊರೆಸ್ವಾಮಿಯವರು ಕರ್ಣಾಟಕದ ಚಿಕ್ಕಮಗಳೂರಿನಲ್ಲಿ ಜನಿಸಿದರು. ಇವರ ತಂದೆ ರಾಮಚಂದ್ರಯ್ಯ ಇವರು ಮಗುವಾಗಿದ್ದಾಗಲೇ ಕಾಲವಾದುದರಿಂದ, ಚಿಕ್ಕಪ್ಪ ಹಳೇ ಮೈಸೂರಿನ ನಿವೃತ್ತ ಚೀಫ್ ಎಂಜಿನಿಯರ್ ರಂಗಯ್ಯನವರ ಆಶ್ರಯದಲ್ಲಿ ಬೆಳೆದರು ಬೆಂಗಳೂರಿನಲ್ಲಿದ್ದಾಗ ಪಕ್ಕದ ಮನೆಯಲ್ಲಿ ಹಾಕುತ್ತಿದ್ದಗ್ರಾಮಾಫೋನ್ ರಿಕಾರ್ಡುಗಳಲ್ಲಿ ಹಾಡನ್ನು ಕೇಳಿ ಆ ಹಾಡುಗಳನ್ನು ಶೀಟಿಯ ಮೂಲಕ ಅನುಕರಣೆ ಮಾಡುತ್ತಿದ್ದರು. ೧೯೩೩ರಲ್ಲಿ ಪಲ್ಲಡಂ ಸಂಜೀವರಾಯರ ಶಿಷ್ಯ ನರಸಿಂಗರಾಯರ ಮುಂದೆ ಅದೇ ರೀತಿ ಶೀಟಿ ಹಾಕಿ ಮೆಚ್ಚುಗೆ ಪಡೆದು ಅವರ ಶಿಷ್ಯರಾಗಿ ಮೂರು ವರ್ಷಗಳ ಕಾಲ ವೇಣುವಾದನವನ್ನು ಕಲಿತು ೧೯೩೮ರಲ್ಲಿ ಪ್ರಥಮ ಕಚೇರಿಯನ್ನು ಮಾಡಿದರು. ನಂತರ ಮದ್ರಾಸಿನ ಸಂಗೀತದ ಕಾಲೇಜಿನ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಬೆಂಗಳೂರಿನಲ್ಲಿ ಹಲವು ಕಚೇರಿಗಳಲ್ಲಿ ನುಡಿಸಿ ಹೆಸರುವಾಸಿಯಾದರು. ೧೯೫೦ರಲ್ಲಿ ಬೆಂಗಳೂರಿನಲ್ಲಿ ಚೌಡಯ್ಯನವರ ಅಯ್ಯನಾರ್ ಕಲಾಶಾಲೆಯಲ್ಲಿ ಅಧ್ಯಾಪಕರಾದರು ೧೯೫೪ರಲ್ಲಿ ಭಾರತದ ಸಾಂಸ್ಕೃತಿಕ ನಿಯೋಗದ ಜೊತೆಯಲ್ಲಿ ರಷ್ಯಕ್ಕೆ ಹೋಗಿ ಬಂದರು. ಇವರ ವೇಣುವಾದನದಲ್ಲಿ ಮಾಧುರ್ಯ, ಲಯಜ್ಞಾನ, ಉತ್ತಮ ಮನೋಧರ್ಮ ಅಪಾರವಾಗಿದೆ. ಇವರಿಗೆ ಶಿಷ್ಯರು ಅನೇಕ.

**ದೊರೆಸ್ವಾಮಿ ಆರ್. ಎನ್.** (೧೯೧೬)—ದೊರೆಸ್ವಾಮಿಯವರು ಅನೇಕ ಖ್ಯಾತ ಸಂಗೀತಗಾರರ ಹುಟ್ಟೂರಾದ ಹಾಸನ ಜಿಲ್ಲೆಯ ರುದ್ರಪಟ್ಟಣದಲ್ಲಿ ಜನಿಸಿದರು. ಇವರಿಗೆ ಉತ್ತಮ ಶಾರೀರವಿದ್ದುದನ್ನು ಗಮನಿಸಿದ ಇವರ ತಂದೆ ಪ್ರಾರಂಭದಲ್ಲಿ ಶತಾವಧಾನಿ ವೆಂಕಟರಾಮಯ್ಯನವರಲ್ಲಿ ಪ್ರಾರಂಭದ ಶಿಕ್ಷಣ ಕೊಡಿಸಿದರು. ನಂತರ ಬೆಟ್ಟದಪುರದ ಸೂರ್ಯನಾರಾಯಣರಾಯರಲ್ಲಿ ಕಲಿತು ಹೈಸ್ಕೂಲು ವಿದ್ಯಾಭ್ಯಾಸವನ್ನು ಮುಗಿಸಿ ಚಿದಂಬರದ ಅಣ್ಣಾಮಲೆ ವಿಶ್ವವಿದ್ಯಾನಿಲಯದ ಸಂಗೀತದ ಕಾಲೇಜಿಗೆ ಉನ್ನತ ಶಿಕ್ಷಣಕ್ಕಾಗಿ ಸೇರಿ, ಸೇಲಂ ದೊರೆಸ್ವಾಮಿ ಅಯ್ಯಂಗಾರ್ಯರಲ್ಲಿ ಮೂರು ವರ್ಷಗಳ ಕಾಲ ಕಲಿತರು. ಆದರೆ ಶಾರೀರವು ಒಡೆದು ಹೋದುದರಿಂದ ಊರಿಗೆ ಹಿಂತಿರುಗಿದರು. ನಂತರ ಚೆನ್ನಕೇಶವಯ್ಯನವರಲ್ಲಿ ವೀಣಾವಾದನವನ್ನೂ, ಚಿಕ್ಕರಾಮರಾಯರಲ್ಲಿ ಗಾಯನವನ್ನೂ ಸ್ವಲ್ಪಕಾಲ ಕಲಿತು ೧೯೩೯ ರಿಂದ ೧೨ ವರ್ಷಗಳ ಕಾಲ ವೆಂಕಟಗಿರಿಯಪ್ಪನವರಲ್ಲಿ ವೀಣೆಯಲ್ಲಿ ಶಿಕ್ಷಣ ಪಡೆದು ೧೯೪೨ರಲ್ಲಿ ಅವರ ಜೊತೆಯಲ್ಲಿ ಪ್ರಥಮ ಕಚೇರಿಯಲ್ಲಿ ನುಡಿಸಿದರು ನಂತರ ಆಕಾಶವಾಣಿಯ ಕೇಂದ್ರಗಳಲ್ಲೂ, ಭಾರತದ ಪ್ರಮುಖ ಸ್ಥಳಗಳಲ್ಲೂ

ಕಚೇರಿಗಳಲ್ಲಿ ನುಡಿಸಿ ಖ್ಯಾತರಾಗಿದ್ದಾರೆ. ೧೯೪೭ರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾದರು. ೧೯೫೧ ರಿಂದ ೧೯೭೩ರ ವರೆಗೆ ಮೈಸೂರಿನ ಮಹಾರಾಣಿ ಕಾಲೇಜಿನಲ್ಲೂ, ನಂತರ ಮೈಸೂರಿನ ಲಲಿತಕಲಾ ಕಾಲೇಜಿನಲ್ಲೂ ವೀಣೆ ಪ್ರಾಧ್ಯಾಪಕರಾಗಿದ್ದು ಅನೇಕ ಶಿಷ್ಯರನ್ನು ತಯಾರಿಸಿ ನಿವೃತ್ತರಾಗಿದ್ದಾರೆ. ಇವರ ವಾದನದಲ್ಲಿ ಹಿತವಾದ ಮೀಟು, ರಾಗವಿಸ್ತಾರ, ಉತ್ತಮವಾದ ಸ್ವರಕಲ್ಪನೆ, ಆಹ್ಲಾದಕರ ಶೈಲಿಗಳು ಪ್ರಮುಖವಾಗಿವೆ. ಇವರು ವಾಗ್ಗೇಯಕಾರರಾಗಿ ಹಲವು ಬಗೆಯ ಸಂಗೀತ ರಚನೆಗಳನ್ನು ಮಾಡಿದ್ದಾರೆ. ಇವರ ಬಿರುದುಗಳಲ್ಲಿ 'ವೈಣಿಕವಿದ್ಯಾವಾರಿಧಿ' ಒಂದು

**ದ್ವಂದತಾಳ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಒಂದು ತಾಳ. ಎರಡು ಲಘು, ಮೂರು ಗುರು, ಒಂದು ಲಘು, ಒಂದು ಪ್ಲುತ ಇದರ ಅಂಗಗಳು.

**ದ್ವಂದೋತ್ಪಲ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ಪ ದ ಪ ಮ ಗ ರಿ ಸ

**ಧ್ವಜೋನ್ನತ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ಪ ಮ ಗ ರಿ ಸ

**ದ್ವಯಾನುಗ**—ಗಾಯನ ಮತ್ತು ನೃತ್ಯಗಳೆರಡಕ್ಕೂ ಪಕ್ಕವಾದ್ಯವಾಗಿ ಉಪಯೋಗಿಸುವ ಸಂಗೀತ ವಾದ್ಯಕ್ಕೆ ದ್ವಯಾನುಗ ಎಂದು ಹೆಸರು. ಇದಕ್ಕೆ ಉಭಯಾನುಗ ಎಂದು ಶಿಲಪ್ಪದಿಕಾರಂ ಎಂಬ ತಮಿಳು ಗ್ರಂಥದ ವ್ಯಾಖ್ಯಾನಕೃತವಾದ ಅಡಿಯಾರ್‌ಕ್ಕನಲ್ಲಾರ್ ಹೆಸರಿಸಿದ್ದಾನೆ. ಶಾರ್ಙ್ಗದೇವನು ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಸಂಗೀತವಾದ್ಯಗಳನ್ನು ಅವುಗಳ ಬಳಕೆಯನ್ನು ಅನುಸರಿಸಿ ಈ ರೀತಿ ವರ್ಗೀಕರಿಸಿದ್ದಾನೆ—

(೧) **ಶುಷ್ಕಂ**—ತನಿಯಾಗಿ ನುಡಿಸುವ ವಾದ್ಯ. ಉದಾ : ವೀಣೆ

(೨) **ಗೀತಾನುಗಂ**—ಗಾಯನಕ್ಕೆ ಪಕ್ಕವಾದ್ಯವಾಗಿ ನುಡಿಸಲ್ಪಡುವ ವಾದ್ಯ. ಉದಾ : ಪಿಟೀಲು.

(೩) **ನೃತ್ತಾನುಗಂ**—ನೃತ್ಯದಲ್ಲಿ ಪಕ್ಕವಾದ್ಯವಾಗಿ ನುಡಿಸಲ್ಪಡುವ ವಾದ್ಯ ಉದಾ : ಕೊಳಲು.

(೪) **ದ್ವಯಾನುಗಂ**—ಗಾಯನ ಮತ್ತು ನೃತ್ಯಗಳೆರಡರಲ್ಲೂ ಪಕ್ಕವಾದ್ಯವಾಗಿ ನುಡಿಸಲ್ಪಡುವ ವಾದ್ಯ. ಉದಾ : ಮೃದಂಗ, ತಬಲ.

**ದ್ವೈತಚಿಂತಾಮಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ಗ ಮ ದ ನಿ ಸ

ಅ: ಸ ನಿ ಪ ದ ಮ ಗ ರಿ ಸ

**ದ್ವೈತಾನಂದಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸ

ಅ: ಸ ನಿ ದ ನಿ ಪ ಮ ರಿ ಸ

**ದ್ವೈತಪರಿಪೂರ್ಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನೀ

ಅ: ದ ಪ ಮ ರಿ ಮ ಗ ಸ

**ಧ**—ಧರ್ಮ, ಕುಬೇರ, ಬ್ರಹ್ಮ, ಚತುರ್ಮುಖ, ಧನ್ವಂತರಿ, ಘಟ, ಕಲಶ, ಧ್ಯಾನ, ಧ್ವನಿ, ಮನು, ಇಂದ್ರ, ಧನ, ಮನೆ, ಧಾನ್ಯ ಇತ್ಯಾದಿ ಅರ್ಥಗಳಿವೆ.

**ಧತಕುಂದ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಗ ಮ ನಿ ದ ನಿ ಸ

ಅ: ಸ ದ ಪ ಮ ರಿ ಸ

**ಧತ್ತಾತಾಳ**—ಸಂಗೀತರತ್ನಾಕರದಲ್ಲಿ ಉಕ್ತವಾಗಿರುವ ೧೨೦ ದೇಶೀತಾಳಗಳಲ್ಲಿ ಒಂದು ತಾಳ. ಎರಡು ಲಘು, ಎರಡು ದ್ರುತ, ಒಂದು ಲಘು, ಒಂದು ಗುರು ಇದರ ಅಂಗಗಳು.

**ಧನಕ್ರಿಯಧಾತು**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಸ

ಅ: ಸ ದ ಪ ಮ ಗ ರಿ ಸ

**ಧನಕೋಟಿ ಅಮ್ಮಾಳ್**—ಇವರು ಈ ಶತಮಾನದ ಪೂರ್ವಾರ್ಧದಲ್ಲಿದ್ದ ಅತ್ಯಂತ ಪ್ರಸಿದ್ಧ ಸಂಗೀತ ವಿದುಷಿ. ತಮಿಳುನಾಡಿನ ಕಾಂಚೀಪುರವು ಇವರ ಜನ್ಮಸ್ಥಳ. ಇವರ ಶಾರೀರವು ಬಹಳ ಸೊಗಸಾಗಿತ್ತು. ಕಾಂಚೀಪುರದ ದೇವಾಲಯದಲ್ಲಿ ಸರ್ವವಾದ್ಯ ಕಚೇರಿಯಲ್ಲಿ ಇವರಿಗೆ ಬಹು ಆಸಕ್ತಿಯಿದ್ದಿತು.

**ಧನಶಾಲಿನಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ಪ ಸ̇

ಅ: ಸ̇ ನಿ ದ ಪ ಮ ದ ಮ ಗ ರಿ ಸ

**ಧನಾಸರಿ**—ಚತುರ್ದಂಡಿ ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ದೇಶೀರಾಗ.

**ಧನಾಸಿ**—ಧನ್ಯಾಸಿರಾಗದ ಒಂದು ಹೆಸರು.

**ಧನಾಶ್ರೀ**—ಭರತ ನಾಟ್ಟಿಯ ಶಾಸ್ತಿರಂಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ. ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ

ಆ: ನಿ ಸ ಗ ಮ ಪ ನಿ ಸ̇

ಅ: ಸ ನಿ ದ ಪ ಮ ಗ ರಿ ಸ

ಸ್ವಾತಿ ತಿರುನಾಳ್ ಮಹಾರಾಜರ 'ಧೀಂತನನ' ಎಂಬ ತಿಲ್ಲಾನವು ಈ ರಾಗದಲ್ಲಿ ಪ್ರಸಿದ್ಧವಾಗಿದೆ.

**ಧನ್ನಾಸಿ**—ಧನ್ನಾಸಿ ರಾಗದ ಮತ್ತೊಂದು ಹೆಸರು. ಸಂಗೀತರತ್ನಾಕರ ಮತ್ತು ಸಂಗೀತ ಮಕರಂದ ಎಂಬ ಗ್ರಂಥಗಳಲ್ಲಿ ಉಕ್ತವಾಗಿದೆ.

**ಧನ್ಯಾಸಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ಔಡವ ಸಂಪೂರ್ಣ ಉಪಾಂಗರಾಗ. ಗಾಂಧಾರ, ನಿಷಾದಗಳು ಜೀವಸ್ವರಗಳು ಮತ್ತು ನ್ಯಾಸಸ್ವರಗಳು. . ಪ ನೀ ಸ̇ ದಾ ಪ ಎಂಬುದು ವಿಶೇಷ ಸಂಚಾರ. ತ್ರಿಸ್ಥಾಯಿರಾಗ. ಮಂಗಳಕರವಾದ ರಕ್ತಿರಾಗ. ಶ್ಲೋಕಗಳು, ಪದ್ಯಗಳು ಮತ್ತು ವಿರುತ್ತಗಳನ್ನು ಹಾಡಲು ಸೂಕ್ತವಾದ ರಾಗ. ಗೇಯನಾಟಕಗಳು ಮತ್ತು ನೃತ್ಯ ನಾಟಕಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ಪ್ರಾತಃಕಾಲದ ರಾಗ. ದೀನರಸ ಮತ್ತು ಕರುಣರಸ ಪ್ರಧಾನವಾದ ರಾಗ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | |
|---|---|---|---|
| ಲಕ್ಷಣಗೀತೆ | —ಜಯಕರುಣಾ | —ಧ್ರುವತಾಳ— | |
| ಪದವರ್ಣ | —ನೆನರುಂಚಿ | —ಅಟ್ಟತಾಳ | —ವೀಣಾ ಕುಪ್ಪಯ್ಯರ್ |
| | ಏಮಗುವಾ | —ಆದಿ | —ಮೈಸೂರು ವಾಸುದೇವಾಚಾರ್ಯ |
| ಕೃತಿ | —ನೀಚಿತ್ತಮು | —ಛಾಪು | —ತ್ಯಾಗರಾಜರು |
| | ಸಂಗೀತಜ್ಞಾನಮು | —ಆದಿ | —ತ್ಯಾಗರಾಜರು |

ರಾಮಾಭಿರಾಮಮನಸು —ಆದಿ —ತ್ಯಾಗರಾಜರು
ಧ್ಯಾನಮೇವರ ವೈನ —ಆದಿ —ತ್ಯಾಗರಾಜರು
ಶ್ಯಾಮಸುಂದರಾಂಗ —ರೂಪಕ —ತ್ಯಾಗರಾಜರು
ಶ್ರೀರಾಮದಾಸದಾಸೋಹಂ —ಛಾಪು —ತ್ಯಾಗರಾಜರು
ನಾಮಕೀರ್ತನೆ ಅನುದಿನ ಮಾಳ್ಪಗೆ—ಆದಿ — ಪುರಂದರದಾಸರು
ಮೀನಲೋಚನಿ —ಆದಿ — ಶ್ಯಾಮಾಶಾಸ್ತ್ರಿ
ಪರದೇವತೆ —ಆದಿ ಮುತ್ತುಸ್ವಾಮಿ ದೀಕ್ಷಿತರು
ಎವರುನ್ನಾರು —ಆದಿ —ವೀಣಾ ಕುಪ್ಪಯ್ಯರ್
ಜಪಾಕುಸುಮ —ರೂಪಕ —ಮುತ್ತಯ್ಯ ಭಾಗವತರು
ಪರಿಪಾಹಿಮಾಂಶ್ರೀಹೃಷೀಕೇಶ —ತ್ರಿಪಟ — ಮೈಸೂರು ವಾಸುದೇವಾಚಾರ್ಯ

ಅಷ್ಟಪದಿ — ತವಕರಕಮಲ —ಆದಿ —ಜಯದೇವ

**ಧನ್ಯಾಸಿಕಾ**—ಸೋಮನಾಥನ ರಾಗವಿಬೋಧವೆಂಬ ಗ್ರಂಥದಲ್ಲಿ ಕೊಟ್ಟಿರುವ ಧನ್ಯಾಸಿ ರಾಗದ ಹೆಸರು.

**ಧ—ನಿ (ಮೇಳ)**—ಇವು ೭೨ ಮೇಳಕರ್ತ ಪದ್ಧತಿಯಲ್ಲಿ ಪ್ರತಿ ಚಕ್ರದ ದ್ವಿತೀಯ ಮೇಳವನ್ನು ಸೂಚಿಸುವ ಸ್ವರಸಂಜ್ಞಾಕ್ಷರಗಳು. ಧ ನಿ ಶುದ್ಧ ಧೈವತ ಮತ್ತು ಕೈಶಿಕಿ ನಿಷಾದವನ್ನು ಸೂಚಿಸುತ್ತದೆ.

**ಧನ್ವಿ**—ಕಮಾನಿನಿಂದ ನುಡಿಸಲಾಗುವ ತಂತೀವಾದ್ಯಗಳು.

**ಧನ್ವಿಜ**—ಕಮಾನಿನಿಂದ ನುಡಿಸಲಾಗುವ ತಂತೀವಾದ್ಯಗಳಿಂದ ಹೊರಡುವ ನಾದ.

**ಧ—ನು (ಮೇಳ)** — ೭೨ ಮೇಳಕರ್ತ ಪದ್ಧತಿಯಲ್ಲಿ ಪ್ರತಿಚಕ್ರದ ಮೂರನೆಯ ಮೇಳವನ್ನು ಸೂಚಿಸುವ ಸ್ವರಸಂಜ್ಞೆ. ಇದು ಶುದ್ಧಧೈವತ ಮತ್ತು ಕಾಕಲಿನಿಷಾದವನ್ನು ಸೂಚಿಸುತ್ತದೆ.

**ಧನುಪ್ರಿಯ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ

ಅ: ಸ ನಿ ಪ ದ ಮ ಗ ರಿ ಸ

**ಧನುರ್ವೀಣಾ**—ಇದು ಕಮಾನಿನಿಂದ ನುಡಿಸಲಾಗುವ ಒಂದು ತಂತೀವಾದ್ಯ. ಇಂದಿನ ಪಿಟೀಲನ್ನು ಹೋಲುವ ಪುರಾತನ ಕಾಲದ ವಾದ್ಯ.

**ಧನ್ಯಕೃತಿ**—ಪುರಾತನ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಉಕ್ತವಾಗಿರುವ ೧೨ ಕ್ರಿಯಾಂಗ ರಾಗಗಳಲ್ಲಿ ಒಂದು ರಾಗ.

**ಧಮಾರ್**—ಶ್ರೀಕೃಷ್ಣನ ಬಾಲಲೀಲೆಗಳ ವಿಷಯವುಳ್ಳ ಹಿಂದೂಸ್ಥಾನೀ ಸಂಗೀತದ ಹಾಡುಗಳು.

**ಧರ್ಮಪುರೀಶ**—ಜಾವಳಿಗಳನ್ನು ರಚಿಸಿ ಪ್ರಸಿದ್ಧರಾದ ಧರ್ಮಪುರಿ ಸುಬ್ಬರಾಯರು ಬಳಸಿರುವ ಅಂಕಿತ.

**ಧರ್ಮಪ್ರಕಾಶಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ದ ಮ ಗ ರಿ ಸ

**ಧರ್ಮವತಿ**—ಈ ರಾಗವು ೫೯ನೆ ಮೇಳಕರ್ತ ರಾಗ ಅಂದರೆ ೧೦ನೆ ದಿಶಿ ಚಕ್ರದ ೫ನೆಯ ರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ರಾಗಾಂಗರಾಗ. ಚತುಶ್ರುತಿ ರಿಷಭ, ಸಾಧಾರಣ ಗಾಂಧಾರ, ಪ್ರತಿಮಧ್ಯಮ, ಚತುಶ್ರುತಿ ಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ರಿಷಭ, ಗಾಂಧಾರ, ನಿಷಾದಗಳು ರಾಗಛಾಯಾ ಮತ್ತು ಜೀವಸ್ವರಗಳು. ರಿಷಭ, ಮಧ್ಯಮ ಮತ್ತು ನಿಷಾದಗಳು ನ್ಯಾಸಸ್ವರಗಳು ಕರುಣ ಮತ್ತು ಭಕ್ತಿರಸ ಪ್ರಧಾನವಾದ ಸಾರ್ವಕಾಲಿಕ ಮತ್ತು ಮನೋಹರವಾದ ರಾಗ. ಮುತ್ತುಸ್ವಾಮಿದೀಕ್ಷಿತರ 'ಪರಂಧಾಮವತೀ,' ತಿರುವೋಟ್ರಿಯೂರು ತ್ಯಾಗಯ್ಯರ್‌ರವರ 'ದಾತವು ನೀವೇಗಾಕ', ವೀಣೆ ಶೇಷಣ್ಣನವರ ಆದಿತಾಳದ 'ತರಮುಗಾದುರ' ಮತ್ತು ಮೈಸೂರು ವಾಸುದೇವಾ ಚಾರ್ಯರ ರೂಪಕತಾಳದ 'ಭಜನ ಸೇಯರಾದಾ' ಎಂಬುವು ಈ ರಾಗದ ಸುಪ್ರಸಿದ್ಧ ಕೃತಿಗಳು.

**ಧರ್ಮಸೇನ**—ತೇವಾರಂ ಭಕ್ತಿಗೀತೆಗಳನ್ನು ಹಾಡಿರುವ ಅಪ್ಪರ್ ಜೈನ ಮತವನ್ನವಲಂಬಿಸಿದಾಗ ಪಡೆದ ಹೆಸರು.

**ಧವರ್ಾಣಿ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ಧರ್ಮಿಣಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ಪ ಮ ದ ಮ ಗ ರಿ ಸ

**ಧರಪಲ್ಲವ**—ಈ ರಾಗವು ೬೫ನೆ ಮೇಳಕರ್ತ ಮೇಚಕಲ್ಯಾಣಿಯ ಒಂದು ಜನ್ಯರಾಗ.

ಆ: ಸ ರಿ ಮ ಗ ಪ ನಿ ಸ

ಅ: ಸ ನಿ ದ ಪ ಮ ಗ ಮ ರಿ ಗ ರಿ ಸ

**ಧರಣಿಪ್ರಿಯಾ**—ಈ ರಾಗವು ೬ನೆ ಮೇಳಕರ್ತ ತಾನರೂಪಿಯ ಒಂದು ಜನ್ಯರಾಗ

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ಧರಣಿಮನೋಹರಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಪ ಸ

ಅ: ಸ ನಿ ದ ನಿ ಪ ಮ ಗ ಮ ರಿ ಸ

**ಧವಳಾ**—(೧) ಸೋಮನಾಥ ವಿರಚಿತ ರಾಗವಿಬೋಧವೆಂಬ ಗ್ರಂಥದಲ್ಲಿ ಈ ರಾಗವು ಶ್ರೀರಾಗ ಮೇಳದ ಒಂದು ಜನ್ಯರಾಗವೆಂದು ಹೇಳಿದೆ.

(೨) ೪, ೬ ಅಥವಾ ೮ ಪಾದಗಳಿರುವ ಒಂದು ಬಗೆಯ ಪ್ರಬಂಧ. ಇದನ್ನು ವಿವಾಹ ಮುಂತಾದ ಶುಭ ಸಂದರ್ಭಗಳಲ್ಲಿ ಹಾಡುತ್ತಾರೆ.

(೩) ದೇವಾಲಯದ ಪೂಜಾಕಾಲದಲ್ಲಿ ಸರ್ವವಾದ್ಯ ಸಂಗೀತದಲ್ಲಿ ಹಾಡಲಾಗುವ ಗಾಯನದ ಒಂದು ಅಂಶ.

**ಧವಳಕೇಸರಿ**—ಈ ರಾಗವು ೮ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ಪ ಮ ಗ ಸ

**ಧವಳಾಂಗ**—ಈ ರಾಗವು ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೪೯ನೆ ಮೇಳರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

ರಾಗಾಂಗರಾಗ. ಆರೋಹಣದಲ್ಲಿ ನಿಷಾದವರ್ಜ್ಯ. ಶೋಕರಸಪ್ರಧಾನವಾದ ರಾಗ. ಸಾರ್ವಕಾಲಿಕರಾಗ. ಮುತ್ತುಸ್ವಾಮಿದೀಕ್ಷಿತರ 'ಶೃಂಗಾರಾದಿ ನವರಸ'ವೆಂಬ ಕೃತಿಯು ಈ ರಾಗದಲ್ಲಿ ರಚಿತವಾಗಿದೆ.

**ಧವಳಾಂಗಿ**—(೧) ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ

ಅ: ಸ ನಿ ದ ಪ ಮ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಜನ್ಯವಾಗಿದೆ.

ಆ: ಸ ಮ ಗ ಮ ಪ ದ ನಿ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಧವಳಾಂಬರಿ**—ಈ ರಾಗವು ೪೯ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸಂ

ಅ: ಸಂ ನಿ ದ ಪ ಮ ಗ ರಿ ಸ

ಇದು ಬ್ರಹ್ಮಚಕ್ರದ ಮೊದಲನೆಯ ರಾಗ. ರಾಗಾಂಗರಾಗ. ಶುದ್ಧರಿಷಭ, ಅಂತರ ಗಾಂಧಾರ, ಪ್ರತಿಮಧ್ಯಮ, ಶುದ್ಧಧೈವತ, ಶುದ್ಧನಿಷಾದವು ಈ ರಾಗದ ಸ್ವರಸ್ಥಾನಗಳು. ಷಡ್ಜಸ್ವರವು ಗ್ರಹ, ಅಂಶ ಮತ್ತು ನ್ಯಾಸಸ್ವರ. ದೀನರಸ ಪ್ರಧಾನವಾದ ರಾಗ. ಸಾರ್ವಕಾಲಿಕ ಮತ್ತು ತ್ರಿಸ್ಥಾಯಿರಾಗ. ಮಹಾವೈದ್ಯನಾಥ ಅಯ್ಯರ್‌ರವರ ೭೨ ಮೇಳರಾಗ ಮಾಲಿಕೆಯಲ್ಲಿ ಈ ರಾಗ ಬರುತ್ತದೆ. ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ಈ ರಾಗದಲ್ಲಿ ಒಂದೊಂದು ಕೃತಿಯನ್ನು ರಚಿಸಿದ್ದಾರೆ.

**ಧವಳವಾಹಿನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಧವಳಸರಸೀರುಹ**—ಈ ರಾಗವು ೪೪ನೆ ಮೇಳಕರ್ತ ಭವಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ನಿ ಸಂ

ಅ: ಸಂ ನಿ ದ ಮ ಗ ರಿ ಸ

**ಧವಳಹಂಸಿ**—ಈ ರಾಗವು ೫೭ನೆ ಮೇಳಕರ್ತ ಸಿಂಹೇಂದ್ರ ಮಧ್ಯಮದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸಂ

ಅ: ಸಂ ನಿ ದ ಪ ಮ ಗ ರಿ ಸ

**ಧ್ವಜಕ್ರಿಯಾ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಸಂ

ಅ: ಸಂ ಧಿ ಪ ಮ ಗ ಮ ರಿ ಗ ರಿ ಸ

**ಧ್ವಜೋನ್ನತ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ಪ ಮ ಗ ರಿ ಸ

**ಧ್ವನಿ**—ದತ್ತಿಲಂ ಎಂಬ ಸಂಗೀತಶಾಸ್ತ್ರ ಗ್ರಂಥದಲ್ಲಿ ಇದನ್ನು ಶ್ರುತಿ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ೨೨ ಶ್ರುತಿಗಳು ಎನ್ನುವುದಕ್ಕೆ ಬದಲಾಗಿ ೨೨ ಧ್ವನಿಗಳು ಎಂದು ಹೇಳಿದೆ.

**ಧಾಟಿಮಂಜರಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ಪ ಮ ರಿ ಸ

**ಧಾತು**—ಸಂಗೀತ ರಚನೆಯ ಸಂಗೀತ ಭಾಗಕ್ಕೆ ಧಾತು ಎಂದು ಹೆಸರು. ಮಾತು ಎಂದರೆ ರಚನೆಯ ಸಾಹಿತ್ಯಭಾಗ.

**ಧಾತುಪ್ರಿಯ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಪ ಮ ಪ ದ ಸ̇

ಅ: ಸ̇ ನಿ ದ ಪ ಮ ಗ ಮ ರಿ ಸ

**ಧಾತುಪಂಚಮ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ಪ ಸ̇

ಅ: ಸ̇ ನಿ ದ ಪ ಮ ರಿ ಗ ಮ ರಿ ಸ

**ಧಾತುಮನೋಹರಿ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಪ ಮ ಪ ದ ನಿ ಸ̇

ಅ: ಸ̇ ನಿ ಪ ಮ ಗ ರಿ ಸ

**ಧಾತುವರ್ಧನಿ**—ಈ ರಾಗವು ೬೯ನೆ ಮೇಳಕರ್ತ ರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

೧೨ನೆ ಆದಿತ್ಯ ಚಕ್ರದ ಮೂರನೆಯ ಮೇಳ. ರಾಗಾಂಗರಾಗ ಷಟ್‌ಶ್ರುತಿರಿಷಭ, ಅಂತರ ಗಾಂಧಾರ, ಪ್ರತಿ ಮಧ್ಯಮ, ಶುದ್ಧ ಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ಸಾರ್ವಕಾಲಿಕ ಮತ್ತು ಶೃಂಗಾರ ಮತ್ತು ವೀರರಸ ಪ್ರಧಾನವಾದ ರಾಗ. ಈ ರಾಗದಲ್ಲಿ ಒಂದು ಲಕ್ಷಣ ಗೀತೆ, ಕೋಟೀಶ್ವರ ಅಯ್ಯರ್ ಮತ್ತು ಬಾಲಮುರಳಿಕೃಷ್ಣ ರಚಿಸಿರುವ ಒಂದೊಂದು ಕೃತಿಗಳಿವೆ. ಮಹಾವೈದ್ಯನಾಥ ಅಯ್ಯರ್‌ರವರ ೭೨ ಮೇಳ ರಾಗಮಾಲಿಕೆಯಲ್ಲಿ ಈ ರಾಗವು ಬರುತ್ತದೆ.

**ಧಾರ್ತಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ಧಾಮರಂಜನಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ದ ಸ

ಅ: ಸ ದ ಮ ಪ ಮ ರಿ ಗ ಸ

**ಧಾಮವತಿ**—ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೫೯ನೆ ಮೇಳದ ಹೆಸರು. ಇದು ಮೇಳಕರ್ತ ಧರ್ಮವತಿ ರಾಗವಾಗುತ್ತದೆ.

**ಧಾಳಿವರಾಳಿ**—ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೩೯ನೆ ಮೇಳದ ಹೆಸರು.

**ಧಿ**—(೧) ತಧಿತೊಂನ ಎಂಬ ಜತಿ ಅಕ್ಷರಗಳಲ್ಲಿ ಎರಡನೆಯದು.

(೨) ಸ್ವರಸಪ್ತಕದಲ್ಲಿ ಧಿ ಎಂಬುದು ಚತುಶ್ರುತಿ ಧೈವತ ಸ್ವರದ ಸಂಜ್ಞಾ ಸೂಚಕವಾಗಿದೆ.

(೩) ೨೨ ಶ್ರುತಿಗಳಲ್ಲಿ ಧಿ ಎಂಬುದು ದ್ವಿಶ್ರುತಿ ಧೈವತವನ್ನು ಸೂಚಿಸುತ್ತದೆ.

**ಧಿ—ನಿ (ಮೇಳ)**—೭೨ ಮೇಳಕರ್ತ ಪದ್ಧತಿಯಲ್ಲಿ ಪ್ರತಿ ಚಕ್ರದ ನಾಲ್ಕನೆಯ ಮೇಳವನ್ನು ಸೂಚಿಸುವ ಸಂಜ್ಞಾಕ್ಷರ. ಚತುಶ್ರುತಿ ಧೈವತ ಮತ್ತು ಕೈಶಿಕಿ ನಿಷಾದ ಸ್ವರಗಳನ್ನು ಸೂಚಿಸುತ್ತದೆ.

**ಧಿ—ನು (ಮೇಳ)**—೭೨ ಮೇಳಕರ್ತ ಪದ್ಧತಿಯಲ್ಲಿ ಪ್ರತಿ ಚಕ್ರದ ಐದನೆಯ ಮೇಳವನ್ನು ಸೂಚಿಸುವ ಸಂಜ್ಞಾಕ್ಷರ. ಧಿ—ನು ಎಂಬುದು ಚತುಶ್ರುತಿ ಧೈವತ ಮತ್ತು ಕಾಕಲಿ ನಿಷಾದ ಸ್ವರಗಳನ್ನು ಸೂಚಿಸುತ್ತವೆ.

**ಧೀಕರುಣಿ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ. ಚತುಸ್ವರ ವಕ್ರ ಆರೋಹಣವಿರುವ ಒಂದು ಅಪರೂಪ ರಾಗ.

ಆ: ಸ ರಿ ಮ ರಿ ಮ ಗ ಮ ದ ಪ ನಿ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ಧೀಮಾತಾಳ**—ಹಿಂದೂಸ್ಥಾನಿ ಸಂಗೀತ ಪದ್ಧತಿಯ ಒಂದು ತಾಳ. ಇದಕ್ಕೆ ಆ ಪದ್ಧತಿಯಲ್ಲಿ ಆದಿತಾಳವೆಂದು ಹೆಸರು.

**ಧೀರ**—ಸಂಕೀರ್ಣ ಜಾತಿ ಅಟತಾಳದ ಹೆಸರು. ಇದರ ಒಂದಾವರ್ತಕ್ಕೆ ೨೨ ಅಕ್ಷರಕಾಲ.

**ಧೀರಕಳಾ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ದ ಸ

ಅ: ಸ ನಿ ದ ಪ ಮ ಗ ರಿ ಸ

**ಧೀಲಾಕಾರಿ**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ನಿ ಪ ಮ ಗ ರಿ ಸ

**ಧೀರಕೌಂತಳಿ**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಧೀರಮತಿ**—(೧) ಈ ರಾಗವು ೧೩ನೆಯ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ̇

ಅ: ಸ̇ ದ ಮ ರಿ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಜನ್ಯವಾಗಿದೆ.

ಆ: ಸ ಗ ರಿ ಗ ಮ ಪ ಮ ನಿ ದ ಸ̇

ಅ: ಸ ನಿ ಪ ದ ಸ̇ ಪ ಮ ಗ ರಿ ಸ

**ಧೀರಸ್ವರೂಪಿಣಿ (ಧೀರಸ್ವರೂಪಿ)**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ದ ನಿ ದ ಪ ಮ ಗ ರಿ ಸ

**ಧೀರಶಂಕರಾಭರಣ**—ಈ ರಾಗವು ೨೯ನೆ ಮೇಳಕರ್ತ ರಾಗ. ೫ನೆ ಬಾಣ ಚಕ್ರದ ೫ನೆಯ ರಾಗ. ಚತುಶ್ರುತಿರಿಷಭ, ಅಂತರಗಾಂಧಾರ ಶುದ್ಧಮಧ್ಯಮ, ಚತುಶ್ರುತಿ ಧೈವತ ಮತ್ತು ಕಾಕಲಿನಿಷಾದವು ಈ ರಾಗದ ಸ್ವರಸ್ಥಾನಗಳು. ಅನೇಕ ಜನ್ಯರಾಗಗಳಿರುವ ರಾಗಾಂಗರಾಗ. ಸರ್ವಸ್ವರ ಗಮಕವರಿಕರಕ್ತಿರಾಗ. ಎಲ್ಲ ಸ್ವರಗಳೂ ರಾಗಛಾಯಾ ಸ್ವರಗಳು. ಸರ್ವರಸ ಪೋಷಿತ, ಸುಂದರ ಮತ್ತು ವ್ಯಾಪ್ತಿಯುಳ್ಳ ರಾಗ. ಪಾಶ್ಚಾತ್ಯ ಸಂಗೀತದಲ್ಲಿ ಈ ರಾಗದ ಸ್ವರಗಳಿಗೆ ವಿಶೇಷ ಪ್ರಾಮುಖ್ಯತೆ ಇದೆ. ಸಾರ್ವಕಾಲಿಕ ರಾಗ ಹಿಂದೂಸ್ಥಾನೀ ಸಂಗೀತದ ಬಿಲಾವಲ್ ರಾಗವನ್ನು ಹೋಲುತ್ತದೆ. ಪ್ರಾಚೀನ ತಮಿಳು ಸಂಗೀತದ ಪಳಮ್ ಪಂಚುರಂ ಎಂಬ ರಾಗದಂತಿದೆ. ಕರುಣ ಮತ್ತು ಶೃಂಗಾರರಸ ಪ್ರಧಾನ ರಾಗ. ತ್ರಿಸ್ಥಾಯಿರಾಗ, ಪಾಶ್ಚಾತ್ಯ ಸಂಗೀತ ಪದ್ಧತಿಯ ಮೇಜರ್ ಡಯಟೋನಿಕ್ ಸ್ಕೇಲ್ ಎಂಬುದಕ್ಕೂ ಈ ರಾಗಕ್ಕೂ ಸಾಮ್ಯವಿದೆ. ಈ ರಾಗದ ರಿಷಭ, ಗಾಂಧಾರ, ಮಧ್ಯಮ, ಪಂಚಮ ಮತ್ತು ಧೈವತ ಮೂರ್ಛನಗಳು ಕ್ರಮವಾಗಿ ಖರಹರಪ್ರಿಯ, ತೋಡಿ, ಕಲ್ಯಾಣಿ,

ಹರಿಕಾಂಭೋಜಿ ಮತ್ತು ನಠಭೈರವಿ ರಾಗಗಳನ್ನು ಉಂಟುಮಾಡುತ್ತವೆ. ಎಲ್ಲಾ ಸುಪ್ರಸಿದ್ಧ ವಾಗ್ಗೇಯಕಾರರ ರಚನೆಗಳು, ಎಲ್ಲಾ ವಿಧವಾದ ಸಂಗೀತ ರಚನೆಗಳು ಈ ರಾಗದಲ್ಲಿವೆ. ಈ ರಾಗದ ರಚನೆಗಳು ಸಾಮಾನ್ಯವಾಗಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ ಮತ್ತು ಪಂಚಮಗಳಲ್ಲಿ ಪ್ರಾರಂಭವಾಗುತ್ತವೆ. ಈ ರಾಗದ ಕೆಲವು ಪ್ರಸಿದ್ಧ ರಚನೆಗಳು—

| | | | |
|---|---|---|---|
| ಗೀತೆ — | ಆರೆದಶರಥ | —ಸಿಂಹನಂದನ | |
| ವರ್ಣ — | ಸಾಮಿನಿನ್ನೇ | —ಆದಿ | —ವೀಣಾ ಕುಪ್ಪಯ್ಯರ್ |
| | ಚಲಮೇಲ | —ಅಟ | —ಸ್ವಾತಿತಿರುನಾಳ್ ಮಹಾರಾಜ |
| ಪದವರ್ಣ — | ಮನವೀ | —ಆದಿ | —ಪೊನ್ನಯ್ಯಾಪಿಳ್ಳೈ |
| ಕೃತಿ — | ಎಂದುಕು ಪೆದ್ದಲ | —ಆದಿ | —ತ್ಯಾಗರಾಜರು |
| | ಎದುಟ ನಿಲಚಿತೆ | —ಆದಿ | —ತ್ಯಾಗರಾಜರು |
| | ಸ್ವರರಾಗ ಸುಧಾ | —ಆದಿ | —ತ್ಯಾಗರಾಜರು |
| | ಮರಿಯಾದಗಾದುರಾ | —ಆದಿ | —ತ್ಯಾಗರಾಜರು |
| | ಏಮಿನೇರಮು | —ಆದಿ | —ತ್ಯಾಗರಾಜರು |
| | ಸುಂದರೇಶ್ವರುನಿ | —ಆದಿ | —ತ್ಯಾಗರಾಜರು |
| | ಮನಸುಸ್ವಾಧೀನ | —ಛಾಪು | —ತ್ಯಾಗರಾಜರು |
| | ಭಕ್ತಿಭಿಕ್ಷ | —ರೂಪಕ | —ತ್ಯಾಗರಾಜರು |
| | ಬುದ್ಧಿರಾದು | —ಛಾಪು | —ತ್ಯಾಗರಾಜರು |
| | ಎಂದುಕಿಚಲಮು | —ಛಾಪು | —ತ್ಯಾಗರಾಜರು |
| | ಬಾಗುಮಿಾರಗನು | —ರೂಪಕ | —ತ್ಯಾಗರಾಜರು |
| | ಅಕ್ಷಯಲಿಂಗವಿಭೋ | —ಛಾಪು | —ಮುತ್ತುಸ್ವಾಮಿ ದೀಕ್ಷಿತರು |
| | ಪೋಗದಿರೆಲೊ ರಂಗ | —ಛಾಪು | —ಪುರಂದರದಾಸರು |
| | ಬಾಗುಮಿಾರಗನು | —ರೂಪಕ | —ವೀಣಾ ಕುಪ್ಪಯ್ಯರ್ |
| | ಮಹಿಮತೆಲಿಯ | —ರೂಪಕ | —ಅನಯ್ಯ |
| | ನಯತಿನಯತಿ | —ಆದಿ | —ಸ್ವಾತಿತಿರುನಾಳ್ ಮಹಾರಾಜ |
| | ಸರೋಜದಳನೇತ್ರಿ | —ಆದಿ | —ಶ್ಯಾಮಾಶಾಸ್ತ್ರಿ |
| | ದೇವಿ ಮಿಾನನೇತ್ರಿ | —ಆದಿ | —ಶ್ಯಾಮಾಶಾಸ್ತ್ರಿ |

| | | | |
|---|---|---|---|
| | ಶ್ರೀಹರಿಪಾದ | —ಅಟ | —ತಾಳ್ಳಪಾಕಂ ಚಿನ್ನಯ್ಯ |
| | ಸಹಜಗುಣರಾಮ | —ಆದಿ | —ಮುತ್ತಯ್ಯ ಭಾಗವತರು |
| | ಚಂದ್ರರೇಖಾವಿಭೂಷಿತೇ | —ಆದಿ | —ಮುತ್ತಯ್ಯ ಭಾಗವತರು |
| | ನನ್ನು ಬ್ರೋಚುಟಕೆವರುನ್ನಾರು | —ತ್ರಿಪುಟ | —ಮೈಸೂರು ವಾಸುದೇವಾಚಾರ್ಯ |
| | ದಾಮೋದರಮನಿಶಮಾಶ್ರಯೇಹಂ | —ತ್ರಿಪುಟ | —ಮೈಸೂರು ವಾಸುದೇವಾಚಾರ್ಯ |
| | ನೀದಯ ಎಟುಲ ಗಲ್ಗುನೋರಾಮ | —ತ್ರಿಪುಟ | —ಮೈಸೂರು ವಾಸುದೇವಾಚಾರ್ಯ |
| ಪದ— | ಚಲ್ಲನಾಯನು | —ತ್ರಿಪುಟ | —ಕ್ಷೇತ್ರಜ್ಞ |
| | ಎವ್ವಡೆ ಭಾವಾ | —ಮಿಶ್ರಲಘು | —ಕ್ಷೇತ್ರಜ್ಞ |
| | ದಾರಿನಿಜೂಚುಚುನ್ನದಿ | —ಝಂಪು | —ಮೂವ್ವಲೂರು ಸಭಾಪತಿ ಅಯ್ಯರ್ |
| | ಸ್ವರಜತಿ ಸಂಕೀರ್ಣಜಾತಿ | —ತ್ರಿಪುಟ | —ವೀಣೆ ಶೇಷಣ್ಣ |
| | ತಿಲ್ಲಾನ ನಾದಿರಿ ನಾದಿರಿ | —ಆದಿ | — ವೀಣೆ ಶೇಷಣ್ಣ |

**ಧೀರಸಾವೇರಿ**—ಈ ರಾಗವು ೭೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ದ ಪ ಮ ಗ ರಿ ಸ

**ಧೀವಕ್ರಿಯಾ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ಧೀಷಣಾರತಿ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ದ ಪ ದ ಮ ರಿ ಸ ನಿ ದ ನಿ ಸ

**ಧುನ್**—ಹಿಂದೂಸ್ಥಾನೀ ಸಂಗೀತದ ಜನಪ್ರಿಯ ಹಾಡು. ಉದಾ—ರಾಮಧುನ್.

**ಘೂನ** — ಭಕ್ತ ತುಳಸೀದಾಸ ವಿರಚಿತ ಅಂಜಲಿಕುಮಾರ ಎಂಬ ಗ್ರಂಥದಲ್ಲಿ ಉಕ್ತವಾಗಿದೆ.

**ಘುನಿಭಿನ್ನ ಷಡ್ಜ**—ಅಸಂಪೂರ್ಣ ಮೇಳ ಪದ್ಧತಿಯಂತೆ ೯ನೆ ಮೇಳಕರ್ತದ ಹೆಸರು.

**ಧು—ನು (ಮೇಳ)**—೭೨ ಮೇಳಕರ್ತ ಪದ್ಧತಿಯಂತೆ ಪ್ರತಿ ಚಕ್ರದ ೬ನೆ ಮೇಳದ ಸ್ವರಸಂಜ್ಞೆ. ಧು—ನು ಎಂಬುದು ಷಟ್‌ಶ್ರುತಿಧೈವತ ಮತ್ತು ಕಾಕಲಿ ನಿಷಾದವನ್ನು ಸೂಚಿಸುತ್ತವೆ.

**ಧ್ರುತರೂಪ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ಪ ಮ ಗ ಮ ರಿ ಗ ಸ

**ಧ್ರುತಿವರ್ಧನಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ಗ ಮ ಪ ದ ಸ

ಅ: ಸ ನಿ ದ ಪ ಮ ರಿ ಗ ರಿ ಸ

**ಧ್ರುವ** —(೧) ಭರತನ ನಾಟ್ಯಶಾಸ್ತ್ರದಲ್ಲಿ ಉಕ್ತವಾಗಿರುವ ಒಂದು ಬಗೆಯ ಸಂಗೀತ ರಚನೆ. ಇದು ನಾಟಕಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಧ್ರುವಗಳನ್ನು ಪ್ರವೇಶಿಕಿ, ಕ್ಷೇಪಕೀ, ಪ್ರಾಸಾದಕೀ, ಅಂತರ ಧ್ರುವಾ ಮತ್ತು ನೈಷ್ಕ್ರಾಮಿಕ ಧ್ರುವಾ ಎಂದು ವರ್ಗೀಕರಿಸಲಾಗಿದೆ. ಗಾಂಧಾರೋದೀಚ್ಯವ ಎಂಬ ಪುರಾತನ ರಾಗವನ್ನು ಧ್ರುವಗಾನದಲ್ಲಿ ಬಳಸುತ್ತಿದ್ದರು.

(೨) ಧ್ರುವವೆಂದರೆ ಪಲ್ಲವಿಯನ್ನು ಹೋಲುವ ಹಾಡಿನ ಪೀಠಿಕಾಭಾಗ. ಇದನ್ನು ಹಾಡಿನ ಪ್ರತಿಭಾಗದ ಕೊನೆಯಲ್ಲಿ ಒಟ್ಟಿಗೆ ಹಾಡುವರು. ಇಂತಹ ಭಾಗವು ಜಯದೇವನ ಗೀತಗೋವಿಂದ ಕಾವ್ಯದಲ್ಲಿ ಕಂಡು ಬರುತ್ತದೆ.

(೩) ಪುರಾತನ ಕಾಲದ ಪ್ರಬಂಧಗಳಲ್ಲಿ ಕಂಡುಬರುವ ನಾಲ್ಕು ಬಗೆಯ ಧಾತುಗಳಲ್ಲಿ ಧ್ರುವವು ಅತಿ ಮುಖ್ಯವಾದ ಅಂಗ. ಉದ್ಗ್ರಾಹ, ಮೇಳಾಪಕ ಮತ್ತು ಆಭೋಗ ಎಂಬುವು ಇತರ ಮೂರು ಅಂಗಗಳು.

(೪) ಮಾರ್ಗೀ ಪದ್ಧತಿಯಲ್ಲಿ ತಾಳಾಂಗಗಳನ್ನು ಎಣಿಸುವ ಮಾರ್ಗಕ್ರಿಯಾಷ್ಟಕ ಗಳಲ್ಲಿ ಧ್ರುವವು ಒಂದು ವಿಧವಾದ ಕ್ರಿಯೆ. ಬೆರಳಿನ ಎಣಿಕೆಯಿಂದ ಶಬ್ದವುಂಟಾಗು ವಂತೆ ಮಾಡುವ ಒಂದು ಸಶಬ್ದ ಕ್ರಿಯೆಗೆ ಧ್ರುವವೆಂದು ಹೆಸರು.

**ಧ್ರುವಕ**—ದೇಶೀಪದ್ಧತಿಯಂತೆ ತಾಳಾಂಗಗಳನ್ನು ಎಣಿಸುವ ಎಂಟು ಕ್ರಿಯೆ ಗಳಲ್ಲಿ ಧ್ರುವಕವು ಒಂದು ಕ್ರಿಯೆ. ಇದೂ ಸಹ ಬೆರಳುಗಳ ಕ್ರಿಯೆ. ಆದರೆ ನಿಶ್ಶಬ್ದ ಕ್ರಿಯೆ.

**ಧ್ರುವಗಾನ**— ಪುರಾತನ ಕಾಲದಲ್ಲಿ ನಾಟಕಗಳಲ್ಲಿ ಹಾಡಲಾಗುತ್ತಿದ್ದ ಧ್ರುವ ಸಂಗೀತ.

**ಧ್ರುವಚರಿತ್ರಂ**—ಕೇರಳವರ್ಮ ವಲಿಯು ಕೋಯಿಲ್ ತಂಪುರಾನ್ ವಿರಚಿತವಾದ ಒಂದು ಕಥಕಳಿನಾಟಕ.

**ಧ್ರುವತಾಳ** - ಸೂಳಾದಿ ಸಪ್ತತಾಳಗಳಲ್ಲಿ ಮೊದಲನೆಯ ತಾಳ. ೧ ಲಘು, ೧ ದ್ರುತ, ೧ ಲಘು, ೧ ಲಘು ಇದರ ಅಂಗಗಳು.

**ಧ್ರುವಪದ**—ಇದಕ್ಕೆ ಧ್ರುಪದ ಎಂದು ಹೆಸರು. ಇದು ಹಿಂದೂಸ್ಥಾನೀ ಸಂಗೀತ ಪದ್ಧತಿಯ ಒಂದು ಬಗೆಯ ಹಾಡು. ಈ ಗಾಯನ ಶೈಲಿಯು ಹದಿನೈದನೆಯ ಶತಮಾನದ ಸುಮಾರಿಗೆ ಗ್ವಾಲಿಯರ್‌ನ ರಾಜಾಮಾನ್‌ಸಿಂಗ್ ತೋಮರನಿಂದ (೧೪೮೬-೧೫೧೭) ಆವಿಷ್ಕಾರಗೊಂಡು ಪ್ರಚಾರದಲ್ಲಿ ಬೆಳೆದು ಬಂದಿತು. ಮಾನ್‌ಸಿಂಗ್ ತನ್ನ ರಾಣಿಯಾದ ಮೃಗನಯನಿಯ ತೃಪ್ತಿಗಾಗಿ, ಅನೇಕ ಧ್ರುಪದಗಳನ್ನು ರಚಿಸಿ ಈ ಗಾಯನ ಶೈಲಿಯ ವಿಶೇಷ ಪ್ರಚಾರಕ್ಕೆ ಕಾರಣೀಭೂತನಾದನೆಂದೂ, ಮುಂದೆ ರಾಜಾಮಾನನ ದರಬಾರಿನ ಗಾಯಕರಾದ ಶ್ರೀಚರಜನಾಯಕ ಮತ್ತು ಶ್ರೀ ಭಗವಾನ್ ಧೋಂಡ ಅವರು ಈ ಶೈಲಿಯು ಸಂಸ್ಕರಣ, ಪರಿಷ್ಕಾರ, ಪರಿಮಾರ್ಜನಗಳನ್ನು ಮಾಡಿದರೆಂದೂ ತಿಳಿದು ಬರುತ್ತದೆ. ಸ್ವತಃ ರಾಜಾಮಾನನು ಧ್ರುಪದ ಗಾಯನಕಲಾ ಕೋವಿದನಾಗಿದ್ದನು. ಅಕಬರ್ ಚಕ್ರವರ್ತಿಯ ಕಾಲಕ್ಕೆ ಸುಪ್ರಸಿದ್ಧ ಗಾಯನ ಕಲಾವಿದರಾದ ಸಂಗೀತ ಸಾಮ್ರಾಟ್ ತಾನ್‌ಸೇನ್, ಅವನ ಗುರುಹರಿದಾಸಸ್ವಾಮಿ, ವೈಜನಾಥ (ಬೈಜೂಬಾವರಾ), ಗೋಪಾಲ ನಾಯಕ ಮುಂತಾದವರು ಧ್ರುಪದ ಗಾಯನ ಕೋವಿದರಾಗಿದ್ದರು. ಧ್ರುಪದ ಗಾಯನ ಶೈಲಿಯು ಜನಪದ ಗೀತದಂತೆ, ಆರಾಧ್ಯ ದೇವತೆಗಳ ಪೂಜೆ, ಪುನಸ್ಕಾರಗಳ ಕಾಲಕ್ಕೆ ಮಾತ್ರ ಇದರ ಉಪಯೋಗವಾಗುತ್ತಿತ್ತು. ರಾಜಾಮಾನ್ ಸಿಂಗನಿಂದ ಶಾಸ್ತ್ರೀಯ ರೂಪವನ್ನು ಪಡೆಯಿತು. ಆಧುನಿಕ ಖ್ಯಾಲ್ ಗಾಯನ ಶೈಲಿಯ ಕಾಲದಲ್ಲೂ ಈ ಗಾಯನವು ತನ್ನ ಪರಂಪರಾಗತ ಸ್ಥಾನಮಾನಗಳನ್ನು ಕಾಯ್ದುಕೊಂಡು ಬಂದಿದೆ. ಧ್ರುಪದ ಗೀತವು ಸಾಧಾರಣವಾಗಿ ಹಿಂದಿ, ಉರ್ದು, ಮತ್ತು ಬ್ರಿಜ್ ಭಾಷೆಗಳಲ್ಲಿದ್ದು ಈ ಗಾಯನ ಶೈಲಿಯು ಪೌರುಷಯುಕ್ತ ಕಂಠಕ್ಕೆ ಸರಿಹೊಂದುತ್ತದೆ. 'ಅನೂಪ ಸಂಗೀತ ವಿಲಾಸ' ಎಂಬ ಗ್ರಂಥದಲ್ಲಿ ಹೇಳಿರುವಂತೆ ಧ್ರುಪದ ಗಾಯನದಲ್ಲಿ ಸ್ಥಾಯಿ, ಅಂತರಾ, ಸಂಚಾರ ಮತ್ತು ಆಭೋಗ ಎಂಬ ನಾಲ್ಕು ಹಂತಗಳಿವೆ. ಈ ಗಾಯನವು ಆಲಾಪ ಪದ್ಧತಿಯಲ್ಲಿ ಆರಂಭಗೊಳ್ಳುತ್ತದೆ. ನಂತರ ಧ್ರುಪದವನ್ನು ಅದರ ನಾಲ್ಕು ಹಂತಗಳಲ್ಲಿ ಹಾಡಿ ತರುವಾಯ ಧ್ರುಪದ ಗೀತೆಯ ಪ್ರಮುಖ ಶಬ್ದಗಳನ್ನು, ಭಿನ್ನ ಭಿನ್ನ ಲಯಕಾರಿಗಳಲ್ಲಿ ಪದಚ್ಛೇದ ಮಾಡಿ ರಾಗದ ರಸಭಾವವನ್ನು ವ್ಯಕ್ತಪಡಿಸಲಾಗುವುದು. ಪ್ರಾಚೀನ ಕಾಲದಲ್ಲಿ ಧ್ರುಪದ ಗಾಯಕನನ್ನು ಕಲಾವಂತನೆಂದು ಮನ್ನಿಸುತ್ತಿದ್ದರು. ಕಾಲಾನಂತರದಲ್ಲಿ ಈ

ಗಾಯನ ಶೈಲಿಯನ್ನು (೧) ಗೋಬರ್ ಹರಿವಾಣಿ ಅಥವಾ ಶುದ್ಧವಾಣಿ (೨) ಖಂಡಾರವಾಣಿ (೩) ಡಾಗೂರ್‌ವಾಣಿ ಮತ್ತು (೪) ನೋಹರ್‌ವಾಣಿ ಎಂಬ ಚತುರ್ವಾಣಿಗಳಾಗಿ ವಿಂಗಡಿಸಿದರು. ಈ ಗಾಯನವು ತ್ರಿಸ್ಥಾಯಿ ವ್ಯಾಪಕತ್ವವನ್ನು ಹೊಂದಿದೆ.

**ಧ್ರುವರೂಪಕ**—ಇದು ಗೀತಗಳಲ್ಲಿ ಕಂಡುಬರುವ ಒಂದು ಬಗೆಯ ಕಾಲ ಪ್ರಮಾಣ. ಧ್ರುವರೂಪಕ ತಾಳದಲ್ಲಿ ರಚಿಸಲ್ಪಟ್ಟಿರುವ ಒಂದು ಗೀತದಲ್ಲಿ ಎರಡು ದ್ರುತಗಳು ಮತ್ತು ಎರಡು ಲಘುಗಳು ಮೊದಲು ಇದ್ದು ನಂತರ ರೂಪಕ ತಾಳದ ಆವರ್ತಗಳು ಬರುತ್ತವೆ ಅಂದರೆ ದ್ರುತ, ಲಘು, ದ್ರುತ ಮತ್ತು ಲಘು ಇತ್ಯಾದಿ. ಎರಡು ಖಂಡಿಕೆಗಳಿರುವ ಗೀತದಲ್ಲಿ ಈ ಬಗೆಯ ಕಾಲ ಪ್ರಮಾಣವು ಎರಡನೆಯ ಭಾಗದ ಆರಂಭದಲ್ಲಿ ಕಂಡು ಬರುತ್ತದೆ. ಆರೆಯಾನಕ ಎಂಬ ನಾಟರಾಗದ ಗೀತವು ಇದಕ್ಕೆ ಉತ್ತಮ ನಿದರ್ಶನ.

**ಧ್ರುವವೀಣಾ** — ಇದು ೨೨ ಶ್ರುತಿಗಳನ್ನು ತೋರಿಸಿಕೊಡಲು ಉಪಯೋಗಿಸುವ ಪ್ರಯೋಗವೀಣೆ. ಇದರ ತಂತಿಗಳ ಶ್ರುತಿಗಳು ಸ್ಥಿರವಾಗಿರುತ್ತವೆ. ಇದಕ್ಕೆ ಅಚಲವೀಣೆ ಎಂದೂ ಹೆಸರು.

**ಧೂರ್ಜಟಿಪ್ರಿಯ**—ಈ ರಾಗವು ೩೦ನೆ ಮೇಳಕರ್ತ ನಾಗಾನಂದಿನಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ

ಅ: ಸ ನಿ ದ ಪ ಮ ರಿ ಸ

**ಧೂಡಿಮಲ್ಹಾರ್**—ಹಿಂದೂಸ್ಥಾನೀ ಸಂಗೀತದ ಒಂದು ರಾಗ.

**ಧೂಮಾಲ**—ಈ ರಾಗವು ೪೨ನೆ ಮೇಳಕರ್ತ ರಘುಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ

ಅ: ಪ ಮ ರಿ ಗ ರಿ ಸ

**ಧೂರ್ವಾಂಕಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ

ಆ: ಸ ರಿ ಮ ಪ ದ ಸ

ಅ: ಸ ನಿ ಪ ದ ಪ ಮ ಗ ರಿ ಸ

**ಧೂಸರವರ್ಣೆ**—ಈ ರಾಗವು ೧೯ನೆ ಮೇಳಕರ್ತ ಝುಂಕಾರಧ್ವನಿಯ ಒಂದು ಜನ್ಯರಾಗ.

ಆ: ಸ ರಿ ಪ ದ ನಿ ಸ

ಅ: ಸ ನಿ ದ ಪ ರಿ ಸ

**ಧೂತಿರಾಗ**—ಕೆಲವು ಗ್ರಂಥಗಳಲ್ಲಿ ಉಕ್ತವಾಗಿರುವ ರಾಗರಾಗಿಣಿ ಪರಿವಾರ ಪದ್ಧತಿಯ ವರ್ಗೀಕರಣಕ್ಕೆ ಸೇರಿದ ಒಂದು ರಾಗ.

**ಧೇನುಕ**—ಈ ರಾಗವು ನೇತ್ರಚಕ್ರದ ೩ನೆಯ ರಾಗ. ೯ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

ಶುದ್ಧರಿಷಭ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಶುದ್ಧಧೈವತ ಮತ್ತು ಕಾಕಲಿನಿಷಾದಗಳು ಈ ರಾಗದ ಸ್ವರಸ್ಥಾನಗಳು, ರಿಷಭ, ನಿಷಾದಗಳು ರಾಗ ಛಾಯಾ ಸ್ವರಗಳು. ಗಾಂಧಾರ, ನಿಷಾದಗಳು ಜೀವಸ್ವರಗಳು. ಗಾಂಧಾರ, ಧೈವತಗಳು ವಾದಿ ಸಂವಾದಿಗಳು. ಈ ರಾಗವು ತ್ಯಾಗರಾಜರ 'ತೆಲಿಯಲೇರು ರಾಮ' ಎಂಬ ಕೃತಿಯಿಂದ ಬೆಳಕಿಗೆ ಬಂದಿತು.

**ಧೈವತ**—ಇದು ಸಂಗೀತದ ಸಪ್ತಸ್ವರಗಳಲ್ಲಿ ಆರನೆಯ ಸ್ವರ. ಧ್ವನಿದಾರ್ಢ್ಯತೆಯನ್ನು ಹೊಂದಿ ವೀರರಸ ಪ್ರಚೋದಕವಾಗಿದೆ.

**ಧೈವತಿ**—ಇದು ಷಡ್ಜಗ್ರಾಮದ ಸಪ್ತ ಶುದ್ಧ ಜಾತಿಗಳಲ್ಲಿ ಒಂದು ಶುದ್ಧ ಜಾತಿ. ಇದು ಶಂಕರಾಭರಣ ರಾಗದ ನಿಷಾದ ಮೂರ್ಛನವಾಗುತ್ತದೆ ಮತ್ತು ಇದೊಂದು ವಿಕೃತ ಪಂಚಮಮೇಳ.

**ಧೈವತದ್ವಯ ಭಾಷಾಂಗರಾಗ**—ಕೋಮಲ ಮತ್ತು ತೀವ್ರ ಧೈವತವಿರುವ ಭಾಷಾಂಗರಾಗ. ಒಂದು ಧೈವತವು ಸ್ವಕೀಯ ಸ್ವರವಾಗಿಯೂ ಮತ್ತೊಂದು ಅನ್ಯಸ್ವರವಾಗಿಯೂ ಇರುತ್ತದೆ. ಭೈರವಿ ರಾಗವು ಇದಕ್ಕೆ ನಿದರ್ಶನ ಇದರಲ್ಲಿ ಶುದ್ಧಧೈವತವು ಸ್ವಕೀಯ ಸ್ವರವಾಗಿಯೂ, ಚತುಶ್ರುತಿ ಧೈವತವು ಅನ್ಯಸ್ವರವಾಗಿಯೂ ಇವೆ.

**ಧೈರ್ಯಂಕರಿ**—'ಕೀ ಟು ಹಿಂದೂ ಮ್ಯೂಸಿಕ್' (Key to Hindu Music) ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಜನ್ಯರಾಗ.

**ಧೈರ್ಯಮುಖಿ**—ಈ ರಾಗವು ೯ನೆ ಮೇಳಕರ್ತ ಧೇನುಕದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ಪ ಮ ಪ ರಿ ಗ

**ಧೈಯೋದಾರಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ಗ ಮ ಪ ನಿ ಸ̇

ಅ: ಸ ದ ಪ ಮ ರಿ ಗ ರಿ ಸ

**ಧೈವತಭೂಷಿತ**—ಸಂಗೀತಸುಧಾ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ಧ್ವಾರ್ಝುಂಕಾರ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ಧೌತಪಂಚಮ**—ಈ ರಾಗವು ಅಸಂಪೂರ್ಣ ಮೇಳಪದ್ಧತಿಯಲ್ಲಿ ೬೯ನೆಯ ಮೇಳವಾಗಿದೆ.

ಆ: ಸ ರಿ ಗ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ರಿ ಗಾ ಸ

ರಾಗಾಂಗರಾಗ. ಮುತ್ತುಸ್ವಾಮಿ ದೀಕ್ಷಿತರು ರಚಿಸಿರುವ 'ಮಾತಂಗೀ ಮರಕತಾಂಗಿ ಎಂಬ ಕೃತಿಯು ಈ ರಾಗದಲ್ಲಿದೆ.

**ಧಾಮ್ಯರಾಗ**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಧೌರೇಯಾಣಿ**—ಈ ರಾಗವು ೪೫ನೆ ಮೇಳಕರ್ತ ಶುಭಪಂತುವರಾಳಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಧೌಳ**—ಎರಡು ಮುಖಗಳಿರುವ ಒಂದು ದೊಡ್ಡ ಮದ್ದಳೆ.

**ಧೌಳಿಕಾ**—ಈ ರಾಗವು ಒಂದನೆ ಮೇಳಕರ್ತ ಕನಕಾಂಗಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ̇

ಅ: ಸ̇ ನಿ ದ ಪ ಮ ಗ ರಿ ಸ

**ಧೌಳಿಕಾಗೌಳ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ದ ನಿ ಸ̇

ಅ: ಸ̇ ನಿ ದ ನಿ ಪ ಗ ಮ ರಿ ಸ

**ಧಂಕಿಣಿ**—ನಟನಾದಿವಾದ್ಯ ರಂಜನಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ ವಿಶೇಷ. ಇದು ಢೇಂಕಿಕ ತಾಳವಾಗುತ್ತದೆ.

**ನ**—ಗಣಪತಿ, ಬುದ್ಧ, ಬುದ್ಧಿ, ಸ್ತೋತ್ರ, ಮುರ, ಬುಧ, ಜ್ಞಾನ, ವಾದ್ಯ, ತೆಳ್ಳಗಿರುವ, ಶೂನ್ಯ, ಸಮಾನವಾದ, ಸ್ತುತಿಸಲ್ಪಟ್ಟ, ನಿಷೇಧ, ಸಾದೃಶ್ಯ, ನಾಭಿ ಇತ್ಯಾದಿ ಅರ್ಥಗಳಿವೆ.

**ನ**—ಕುಡುಮಿಯಾಮಲೈ ಸಂಗೀತಶಾಸನದಲ್ಲಿ ಇದು ನಿಷಾದದ ಪ್ರಥಮ ಶ್ರುತಿಯ ಸಂಜ್ಞಾಕ್ಷರ. ಇತರ ನಾಲ್ಕು ಶ್ರುತಿಗಳ ಸಂಜ್ಞೆ ನಿ, ನು, ನೆ. ಇದು ಒ೩

ಮೇಳಕರ್ತ ಪದ್ಧತಿಯಲ್ಲಿ ಬಳಸಿರುವ ೩ ನಿಷಾದಗಳ ಮೊದಲ ಶ್ರುತಿಯ ಸಂಜ್ಞಾಕ್ಷರ. ಇದು ಶುದ್ಧನಿಷಾದ.

**ನಕ್ಕಿ**—ತಂತೀವಾದ್ಯಗಳನ್ನು ನುಡಿಸುವಾಗ, ತಂತಿಗಳನ್ನು ಮಿಾಟುವಾಗ ಬೆರಳಿಗೆ ಹಾಕಿಕೊಳ್ಳುವ ತಂತಿಯ ಸುತ್ತು ಅಥವಾ ಉಗುರು.

**ನಕುಲ**—ಎರಡು ತಂತಿಗಳಿರುವ ವೀಣೆ.

**ನಕ್ಕೇರ ಮತ್ತು ನಕ್ಕೇರಖಾನಾ** — ಇದೊಂದು ದೊಡ್ಡ ನಗಾರಿ. ಇದನ್ನು ಇಡಲು ಗೊತ್ತಾಗಿರುವ ಎತ್ತರವಾದ ಸ್ಥಳಕ್ಕೆ ನಕ್ಕೇರಖಾನಾ ಎಂದು ಹೆಸರು.

**ನಖಜ**—ತಂತೀವಾದ್ಯಗಳಲ್ಲಿ ತಂತಿಯನ್ನು ಮಿಾಟಿದಾಗ ಉಂಟಾಗುವ ನಾದ.

**ನಖಪ್ರಕಾಶಿನಿ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ದ ಪ ಸ

ಅ: ಸ ದ ನಿ ಪ ಮ ಗ ರಿ ಸ

**ನಗಚರ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಮ ಪ ದ ನಿ ದ ನಿ ಸ

ಅ: ಸ ನಿ ದ ಪ ಮ ರಿ ಸ

**ನಗಣ** —ಎಂಟು ಬಗೆಯ ಗಣಗಳಲ್ಲಿ ಮೂರು ಲಘುಗಳಿರುವ ಒಂದು ಗಣ. ೧೦೮ ತಾಳಗಳ ಶ್ಲೋಕಗಳನ್ನು ಗಣಗಳಲ್ಲಿ ಕೊಟ್ಟಿದೆ.

**ನಗರಕೀರ್ತನ**—ಇದು ಬಂಗಾಳದಲ್ಲಿ ಜನಪ್ರಿಯವಾಗಿರುವ ಒಂದು ಧಾರ್ಮಿಕ ಭಜನೆ ಕೀರ್ತನ ಗೋಷ್ಠಿಯು ನಗರದ ಬೀದಿಗಳ ಮೂಲಕ ವಾದ್ಯಗಳ ಸಹಿತ ಹಾಡುತ್ತ, ಕುಣಿಯುತ್ತ ಹೋಗುತ್ತಾರೆ.

**ನಗಾರಿ**—ಇದು ದೇವಸ್ಥಾನದ ಸೇವಾವಾದ್ಯ. ಮಠಾಧೀಶರ ಸಂಸ್ಥಾನಗಳಲ್ಲೂ, ಅರಮನೆಗಳಲ್ಲೂ ಹೆಚ್ಚಾಗಿ ಉಪಯೋಗದಲ್ಲಿದೆ. ದೇವರ ಉತ್ಸವಗಳಲ್ಲಿ ಗಾಡಿಯಲ್ಲಿ ನಗಾರಿಗಳನ್ನಿಟ್ಟು ಬಾರಿಸುತ್ತಾರೆ. ಇದು ಮುನ್ಸೂಚನೆಯ ವಾದ್ಯ. ಇದು ದೊಡ್ಡ ಬೋಗುಣಿಯ ಆಕಾರದಲ್ಲಿದೆ. ತಾಮ್ರದ, ಹಿತ್ತಾಳೆಯ ಅಥವಾ ಕಬ್ಬಿಣದ ರೇಕುಗಳನ್ನು ಮೊಳೆಗಳಿಂದ ಜೋಡಿಸಿ ಈ ಬೋಗುಣಿಯನ್ನು ತಯಾರಿಸುತ್ತಾರೆ. ಇವರ ಮೇಲ್ಭಾಗವು ಸುಮಾರು ಎರಡೂವರೆ–ಮೂರು ಅಡಿಗಳಷ್ಟು ಅಡ್ಡಗಲವಿರುತ್ತದೆ. ಬೋಗುಣಿಯ ಕೆಳಗಡೆ ಅಳತೆಗೆ ತಕ್ಕಂತೆ ಲೋಹದ ಬಳೆಗಳನ್ನು ಜೋಡಿಸಿ ಮೇಲಿನ ತೆರೆದ ಮುಖಕ್ಕೆ ಕುರಿ ಅಥವಾ ಆಡಿನ ಚರ್ಮವನ್ನು ಪಸರಿಸಿ, ಹತ್ತಿಯ ಹಗ್ಗಗಳಿಂದ ಈ ಬಳೆಗಳಿಗೆ ಬಿಗಿದಿರುತ್ತಾರೆ. ಚರ್ಮದ ಪಟ್ಟಿಗಳಿಂದ ಬಿಗಿಯುವುದೂ ಉಂಟು. ಅನೇಕ ದೇವಾಲಯಗಳ ಉತ್ಸವ ಅಥವಾ ರಥೋತ್ಸವ

ಸಂದರ್ಭದಲ್ಲಿ ರಥ ಹೊರಡುವ ವೇಳೆಗೆ ಮತ್ತು ರಥವು ಸ್ವಸ್ಥಾನಕ್ಕೆ ಬರುವವರೆಗೂ ನಗಾರಿಯನ್ನು ೨ ಕಡ್ಡಿಗಳಿಂದ ಬಾರಿಸಿ ನಾದವನ್ನುಂಟು ಮಾಡುತ್ತಾರೆ ಹಿಂದಿನ ಕಾಲದಲ್ಲಿ ರಣರಂಗಗಳಲ್ಲಿ ನಗಾರಿ ಅಥವಾ ಭೇರಿ ಮತ್ತು ದುಂದುಭಿಗಳನ್ನು ಬಾರಿಸಿ ಸೈನಿಕರನ್ನು ಹುರಿದುಂಬಿಸುತ್ತಿದ್ದರು. ಶತ್ರು ಸೈನ್ಯದಿಂದ ನಗಾರಿಯನ್ನು ವಶಪಡಿಸಿಕೊಳ್ಳುವುದು ಗೆಲುವಿನ ಕುರುಹು. ಅಂತಹ ಗೌರವವು ನಗಾರಿಗೆ ಸಲ್ಲುತ್ತಿತ್ತು.

**ನಗಾರಿ ಮಂಟಪ**—ತಮಿಳುನಾಡಿನ ಮಧುರೆಯ ತಿರುಮಲ ನಾಯಕನು (೧೭ನೆ ಶ.) ಶ್ರೀ ವಿಲ್ಲಿಪುತ್ತೂರಿನ ಆಂಡಾಳ್ ದೇವಿಯ ಪೂಜಾ ನಂತರ ಮಧ್ಯಾಹ್ನ ಊಟ ಮಾಡುವ ಪದ್ಧತಿಯನ್ನು ಅನುಸರಿಸುತ್ತಿದ್ದನು. ಆಗಿನ ಕಾಲದಲ್ಲಿ ದೂರವಾಣಿ ಅಥವಾ ತಂತೀ ಸಮಾಚಾರ ಪಡೆಯುವ ಅನುಕೂಲವಿರಲಿಲ್ಲ ಆದ್ದರಿಂದ ಮಧುರೈ ಮತ್ತು ಶ್ರೀ ವಿಲ್ಲಿಪುತ್ತೂರಿನ ದಾರಿಯ ಉದ್ದಕ್ಕೂ ಎಂದರೆ ಸುಮಾರು ೪೬ ಮೈಲಿದೂರ ಅಲ್ಲಲ್ಲಿ ನಗಾರಿ ಮಂಟಪವನ್ನು ನಿರ್ಮಿಸಿದನು. ಶ್ರೀ ವಿಲ್ಲಿಪುತ್ತೂರಿನ ದೇವಾಲಯದಲ್ಲಿ ಪೂಜೆ ಆದಕೂಡಲೇ ಅಲ್ಲಿಯ ನಗಾರಿಯನ್ನು ಬಾರಿಸುತ್ತಿದ್ದರು. ಇದನ್ನು ಮುಂದಿನ ನಗಾರಿ ಮಂಟಪಪವನು ಕೇಳಿದ ಕೂಡಲೇ ತನ್ನ ನಗಾರಿಯನ್ನು ಹೊಡೆಯುತ್ತಿದ್ದನು. ಆಗಿನ ಕೆಲವು ನಗಾರಿ ಮಂಟಪಗಳು ಇನ್ನೂ ಇವೆ. ರಸ್ತೆಯ ಬದಿಯಲ್ಲಿ ಇವುಗಳನ್ನು ನಿರ್ಮಿಸಿದ್ದರು. ಇವುಗಳ ಮೂಲಕ ತಿರುಮಲ ನಾಯಕನಿಗೆ ದೇವಾಲಯದಲ್ಲಿ ಪೂಜೆ ಆಗಿರುವುದು ಸುಮಾರು ಐದು ನಿಮಿಷಗಳಲ್ಲಿ ತಿಳಿಯುತ್ತಿತ್ತು.

**ನಚರ**—ಈ ರಾಗವು ೨೩ನೆ ಮೇಳಕರ್ತ ಗೌರೀಮನೋಹರಿಯ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ನಿ ದ ನಿ ಸ

ಅ: ಸ ನಿ ದ ಮ ಪ ಮ ರಿ ಗ ಸ

**ನಭಾವಮಧ್ಯ**—ಈ ರಾಗವು ೫೯ನೆ ಮೇಳಕರ್ತ ಧರ್ಮವತಿಯ ಒಂದು ಜನ್ಯರಾಗ.

ಆ: ಸ ರಿ ಮ ಪ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ನಟಿನ ದೀಪಕ**—ಈ ರಾಗವು ೪೧ನೆ ಮೇಳಕರ್ತ ಪಾವನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ

ಅ: ಸ ನಿ ಮ ಗ ರಿ ಗ ಸ

**ನಟಿನಪ್ರಿಯಾ**—ಈ ರಾಗವು ೨೨ನೆ ಮೇಳಕರ್ತ ಖರಹರಪ್ರಿಯದ ಒಂದು ಜನ್ಯರಾಗ.

ಆ: ಸ ಗ ರಿ ಗ ಮ ದ ನಿ ಸ

ಅ: ಸ ನಿ ಪ ಮ ಗ ರಿ ಸ

**ನಟನಾರಾಯಣಿ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ದ ಸ

ಅ: ಸ ನಿ ದ ಪ ಮ ಗ ಮ ರಿ ಸ

ಉಪಾಂಗರಾಗ. ಭಕ್ತಿರಸ ಪ್ರಧಾನವಾದ ಸಾರ್ವಕಾಲಿಕರಾಗ. ಋಷಭ ಧೈವತಗಳು ವಾದಿಸಂವಾದಿಗಳು. ದೀರ್ಘಋಷಭ, ಮಧ್ಯಮ ಧೈವತಗಳು ರಾಗ ಛಾಯಾ ಸ್ವರಗಳು. ಮುತ್ತುಸ್ವಾಮಿ ದೀಕ್ಷಿತರ 'ಮಹಾಗಣಪತೇ' ಎಂಬ ಕೃತಿಯು ಈ ರಾಗದಲ್ಲಿ ರಚಿತವಾಗಿದೆ.

**ನಟನಚಂದ್ರಿಕ**—ಕೀ ಟು ಹಿಂದೂ ಮ್ಯೂಸಿಕ್ ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ನಟನಾದಿ ವಾದ್ಯರಂಜನಂ**—ನಾಟ್ಯಶಾಸ್ತ್ರವನ್ನು ಕುರಿತ ಒಂದು ತಮಿಳು ಗ್ರಂಥ. ಇದನ್ನು ಗಂಗ ಮುತ್ತು ನಟುವನಾರ್ ಎಂಬುವರು ೧೯೦೨ರಲ್ಲಿ ಪ್ರಕಟಿಸಿದರು. ಸಿಂಹ ನಟನ ಎಂಬ ಅಪರೂಪವಾದ ನಾಟ್ಯವನ್ನು ಕುರಿತು ಈ ಗ್ರಂಥದಲ್ಲಿ ವಿವರಣೆಯನ್ನು ಕೊಡಲಾಗಿದೆ.

**ನಟಮಲ್ಲಾರಿ**—ಸೋಮನಾಥನ 'ರಾಗವಿಬೋಧ' ವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಉಪಯರಾಗ

**ನಟರಾಜ**—ನಾಟ್ಯದ ಪ್ರಥಮಾಚಾರ್ಯ ನಟರಾಜ ನಟರಾಜನ ಹೆಸರಿನಲ್ಲಿ ಇಡೀ ಬ್ರಹ್ಮಾಂಡವೇ ಅಡಗಿದೆ. ಶಿವತಾಂಡವದ ಅಗಾಧ ರೂಪವೇ ನಟರಾಜ. ಆಂಗಿಕ, ವಾಚಿಕ, ಆಹಾರ್ಯ ಹಾಗೂ ಸಾತ್ವಿಕ ಭಂಗಿಗಳನ್ನೊಳಗೊಂಡ ನೂರೆಂಟು ವಿಧದ ನೃತ್ಯಗಳು ಅಭಿನಯಿಸಲ್ಪಟ್ಟಾಗ ಅವನ ಅಂಗಗಳು ವಿಶ್ವವ್ಯಾಪಕವಾಗಿದ್ದು, ವಿಶ್ವದಗತಿ ನೃತ್ಯದ ತಾಳವಾಗಿತ್ತು. ಅದು ಅಸಾಮಾನ್ಯವೂ, ಅದ್ಭುತವೂ ಆಗಿತ್ತು. ಅದರಲ್ಲಿ ಧರ್ಮ ಮತ್ತು ಕಲೆಯ ಸುಂದರ ಸಮನ್ವಯವಿತ್ತು. ನಟರಾಜನ ನೃತ್ಯವು ಬ್ರಹ್ಮಾಂಡದ ಸೃಷ್ಟಿ-ಲಯಗಳನ್ನು ತೋರಿಸುವುದಲ್ಲದೆ ತನ್ನ ಸುತ್ತಲೂ ನರ್ತಿಸುವ ಪಿಶಾಚ ವೃಂದಗಳ ಇಲ್ಲವೇ ಆತ್ಮಗಳ ಅಲೆದಾಟವನ್ನು ಸೂಚಿಸುತ್ತದೆ. ಇವು ಜಗತ್ತನ್ನು ಬಿಡಲಾರವು. ಶಿವನಲ್ಲೂ ಸೇರಲಾರವು.

ನಾಟ್ಯವು ಶಿವನಿಂದ ಉಗಮವಾಯಿತೆಂದು ಪ್ರಚಲಿತವಿದ್ದರೂ ವೈಷ್ಣವ ಸಾಹಿತ್ಯವು ವಿಷ್ಣು-ಬ್ರಹ್ಮರು ನಾಟ್ಯದ ಮೂಲಪುರುಷರೆಂದು ಸಾರಿದೆ. ನಮಗೆ ಪುರಾಣದಲ್ಲಿ ಸಿಕ್ಕುವ ಒಂದು ಕತೆಯಂತೆ ಇಂದ್ರನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ಭೂಲೋಕದ ಜನರಿಗೆ ಸಂತೋಷಪ್ರದವಾದ, ನಾಲ್ಕು ವೇದಗಳಿಗೂ ಮಿಗಿಲಾದ ಐದನೆಯ ವೇದವನ್ನು ಸೃಷ್ಟಿಮಾಡುವಂತೆ ಕೇಳಿಕೊಂಡಾಗ ಬ್ರಹ್ಮನು

ನಾಲ್ಕು ವೇದಗಳನ್ನು ನೆನೆದು, ಋಗ್ವೇದದಿಂದ ಶಬ್ದಗಳನ್ನೂ, ಯಜುರ್ವೇದದಿಂದ ಅಭಿನಯವನ್ನೂ, ಸಾಮವೇದದಿಂದ ಸಂಗೀತವನ್ನೂ, ಅಥರ್ವವೇದದಿಂದ ರಸವನ್ನೂ ಸಂಗ್ರಹಿಸಿ ನಾಟ್ಯವೇದವನ್ನು ರಚಿಸಿ ಭರತಮುನಿಗ ಉಪದೇಶಿಸುತ್ತಾನೆ. ಭರತನು ಇದನ್ನು ತನ್ನ ನೂರು ಮಕ್ಕಳಿಗೆ ಉಪದೇಶಿಸುತ್ತಾನೆ. ಅವರು ಶೃಂಗಾರರಸ ಪ್ರಧಾನವಾದ ಕೈಶಿಕೀ ವೃತ್ತಿಯನ್ನು ಬಿಟ್ಟು ಉಳಿದೆಲ್ಲದರಲ್ಲೂ ಪಾಂಡಿತ್ಯವನ್ನು ಪಡೆಯುತ್ತಾರೆ. ಇದನ್ನರಿತ ಬ್ರಹ್ಮನು ಈ ವೃತ್ತಿಗಾಗಿ ಅಪ್ಸರಸ್ತ್ರೀಯರನ್ನು ಸೃಷ್ಟಿಸಿ, ನಂತರ ತಾನು ಹಿಂದೆ ಕಂಡಿದ್ದ ಪಾರ್ವತೀ-ಶಿವನ ನೃತ್ಯವನ್ನು ಅದರಲ್ಲಿಯ ಕೈಶಿಕೀ ವೃತ್ತಿಯನ್ನು ಭರತನಿಗೆ ತಿಳಿಸಲು, ಭರತನು ತನ್ನ ಮಕ್ಕಳಿಗೆ ಅದನ್ನು ತಿಳಿಸುತ್ತಾನೆ. ಅನಂತರ ಬ್ರಹ್ಮನು ತಾನು ಕಂಡಿದ್ದ ವೃತ್ತಿಗಳಲ್ಲಿ 'ಅಮೃತ ಮಂಥನ' ಎಂಬ ರೂಪಕ ಭೇದವನ್ನೂ 'ತ್ರಿಪುರದಾಹ'ವೆಂಬ ಡಿಮವನ್ನೂ ಶಿವನ ಎದುರಿಗೆ ಪ್ರದರ್ಶಿಸುವಂತೆ ಭರತನಿಗೆ ಆಜ್ಞಾಪಿಸಲು ಆತನು ತನ್ನ ಮಕ್ಕಳೊಂದಿಗೆ ತಮ್ಮ ಅಪಾರ ಪಾಂಡಿತ್ಯ ವನ್ನು ಶಿವನ ಸಮ್ಮುಖದಲ್ಲಿ ಪ್ರದರ್ಶಿಸುತ್ತಾನೆ. ಇದರಲ್ಲಿ ಮತ್ತಾವುದೋ ಭಾವದ ಲೋಪ - ಇರುವುದನ್ನು ಕಂಡ ಶಿವನು, ತನ್ನ ಸಂಧ್ಯಾಕಾಲದ ನರ್ತನದ ಕರಣ, ಅಂಗಹಾರಾದಿಗಳನ್ನು ನವ್ಯ ಪ್ರಯೋಗ ಮಾಡಲು ತಂಡುವಿಗೆ ತಿಳಿಸಲು, ತಂಡುವು ಈ ಪ್ರಯೋಗದಲ್ಲಿ ಯಶಸ್ವಿಯಾಗಿ ಅದನ್ನು ಭರತನಿಗೆ ಕಲಿಸುತ್ತಾನೆ (ಈ ಪ್ರಯೋಗವನ್ನು ಪಾರ್ವತಿಯು ಭರತಮುನಿಗೆ ಹೇಳಿ ಕೊಟ್ಟಳೆಂದು ಕೆಲವು ಗ್ರಂಥಗಳಲ್ಲಿದೆ) ಈ ಕತೆಯಂತೆ ಭರತಮುನಿಯು ನಾಟ್ಯವನ್ನು ಶಿವ ಮತ್ತು ಬ್ರಹ್ಮನಿಂದ ಕಲಿತನೆಂದು ತಿಳಿದುಬರುತ್ತದೆ.

ವಿಷ್ಣುಧರ್ಮೋತ್ತರ ಪುರಾಣದಂತೆ ರಾಕ್ಷಸರು ತಮ್ಮ ತಮಸ್ಸು ಮತ್ತು ರಜಸ್ಸೆಂಬ ಪ್ರಧಾನ ಗುಣಗಳಿಂದ ಪೀಡಿತರಾಗಿ, ನಾಲ್ಕು ವೇದಗಳನ್ನು ಅಪಹರಿಸಿ ಪಾತಾಳಕ್ಕೆ ಹೋಗುತ್ತಾರೆ. ಇದನ್ನು ಬ್ರಹ್ಮನಿಂದ ಅರಿತ ನಾರಾಯಣನು ಕೂಡಲೇ ಮೇಲೆದ್ದು ಜಲರಾಶಿಯ ಮೇಲೆ ಅಂಗಹಾರ ಮತ್ತು ಪಾದ ವಿನ್ಯಾಸಗಳಿಂದ ನರ್ತಿಸುತ್ತಾನೆ. ಲಕ್ಷ್ಮಿಯು ಕುತೂಹಲದಿಂದ ಇದನ್ನು ನೋಡುತ್ತಿದ್ದಂತೆಯೇ ನಾರಾಯಣನು ಹಯಗ್ರೀವನಾಗಿ ಪಾತಾಳಕ್ಕೆ ಹೋಗಿ ರಾಕ್ಷಸರನ್ನು ಕೊಂದು ವೇದಗಳನ್ನು ತಂದು ಬ್ರಹ್ಮನಿಗೆ ನೀಡಿ ಜಗತ್ತನ್ನು ಸೃಷ್ಟಿಸುವಂತೆ ಹೇಳಿ ಆದಿಶೇಷನ ಮೇಲೆ ಪವಡಿಸುತ್ತಾನೆ. ಲಕ್ಷ್ಮಿಯು ನಾರಾಯಣನ ನರ್ತನದ ವಿವರಗಳನ್ನು ಹೇಳುವಂತೆ ಬೇಡುತ್ತಾಳೆ. ಆಗ ನಾರಾಯಣನು ಮೂರು ಲೋಕದ ಅನುಕರಣವೂ ಈ ನೃತ್ತದಲ್ಲಿದೆ ಎಂದು ತಿಳಿಸಿ ಅದನ್ನು ಬ್ರಹ್ಮನಿಗೆ ಉಪದೇಶಿಸುತ್ತಾನೆ. ಅನಂತರ ಬ್ರಹ್ಮನು ಅದನ್ನು ರುದ್ರನಿಗೆ ಬೋಧಿಸುತ್ತಾನೆ. ರುದ್ರನು ಇದನ್ನು ನಾರಾಯಣನ ಸಂತೋಷಾರ್ಥವಾಗಿ ನರ್ತಿಸಿ ನಾಟ್ಯಾಚಾರ್ಯ ಎನ್ನಿಸಿಕೊಳ್ಳುತ್ತಾನೆ. ಮೋಹಿನಿ-ಭಸ್ಮಾಸುರನ ಕಥೆಯೂ ನಾರಾಯಣನ ನಾಟ್ಯದ ಪ್ರಭಾವವನ್ನು ಸೂಚಿಸುತ್ತದೆ.

ಶಿವನರ್ತನವನ್ನು ಕುರಿತು ಮತ್ತೊಂದು ಸುಂದರವಾದ ಕಥೆ ಪ್ರಚಲಿತವಾಗಿದೆ.

ಅರಣ್ಯದಲ್ಲಿರುವ ಋಷಿಗಳಿಗೆ ತಮ್ಮ ಜ್ಞಾನ, ಭಕ್ತಿಗಳ ಬಗ್ಗೆ ಮಹಾಗರ್ವ ಬಂದಿತು. ಆಗ ಶಿವನು ಯೋಗಿಯ ವೇಷ ಧರಿಸಿ ಒಂದು ವಾದ ವಿವಾದದಿಂದ ಋಷಿಗಳನ್ನು ಸೋಲಿಸುತ್ತಾನೆ ಅವರಿಗೆ ತುಂಬಾ ಸಿಟ್ಟು ಬಂದು. ಹೋಮಾಗ್ನಿಯಲ್ಲಿ ತಮ್ಮ ಮಂತ್ರ ಶಕ್ತಿಯಿಂದ ಹುಲಿಯೊಂದನ್ನು ಸೃಷ್ಟಿಸಿ ಶಿವನ ಮೇಲೆ ಬಿಡುತ್ತಾರೆ. ಶಿವನು ತನ್ನ ಕಿರು ಬೆರಳಿನ ಉಗುರಿನಿಂದ ಅದನ್ನು ಸೀಳಿ, ಚರ್ಮವನ್ನು ಸೊಂಟದಲ್ಲಿ ಸುತ್ತಿಕೊಳ್ಳುತ್ತಾನೆ. ನಂತರ ಋಷಿಗಳು ಉಗ್ರಸರ್ಪವೊಂದನ್ನು ಬಿಡುತ್ತಾರೆ. ಅದನ್ನು ಶಿವನು ತನ್ನ ಕೊರಳ ಆಭರಣವನ್ನಾಗಿ ಮಾಡಿಕೊಳ್ಳುತ್ತಾನೆ. ಇದರಿಂದ ಋಷಿಗಳ ಸಿಟ್ಟು ಮತ್ತಷ್ಟು ಹೆಚ್ಚಿ ಒಬ್ಬ ಕುರೂಪಿಕುಳ್ಳ ಪಿಶಾಚಿಯನ್ನು ಸೃಷ್ಟಿಸಿ ಅವನನ್ನು ನುಂಗಲು ಬಿಡುತ್ತಾರೆ. ಶಿವನು ಉಗ್ರನಾಗಿ ಪಿಶಾಚಿಯನ್ನು ಪಾದದಿಂದ ಮೆಟ್ಟಿ, ಅದರ ತಲೆಯ ಮೇಲೆ ನರ್ತಿಸ ತೊಡಗುತ್ತಾನೆ ಋಷಿಗಳು ಶರಣಾಗತ ರಾಗುತ್ತಾರೆ. ಹೀಗೆ ತಾಂಡವ ನೃತ್ಯಕ್ಕೆ ಸಂಬಂಧಿಸಿದ ಕತೆಗಳು ಅನೇಕವಾಗಿವೆ.

ಶೈವ ಪಂಥದ ಕಾರಣಾಗಮದಲ್ಲಿ ಆನಂದತಾಂಡವ, ಸಂಧ್ಯಾತಾಂಡವ, ಉಮಾತಾಂಡವ, ಗೌರೀತಾಂಡವ, ಕಾಳಿಕಾತಾಂಡವ, ತ್ರಿಪುರತಾಂಡವ, ಸಂಹಾರತಾಂಡವ ಎಂಬ ಏಳು ತಾಂಡವ ಸ್ವರೂಪಗಳ ವಿವರವಿದೆ. ಜಗತ್ತಿನ ಜೀವರುಗಳಿಗೆ ಸುಖ ಸಂತೋಷವನ್ನು ಉಂಟುಮಾಡುವುದು ಆನಂದತಾಂಡವ. ಸಂಜೆಯ ರೂಪದಲ್ಲಿ ನರ್ತಿಸುವುದು ಸಂಧ್ಯಾತಾಂಡವ ಶಿವ ಪ್ರದೋಷ ಸ್ತೋತ್ರ ದಲ್ಲಿರುವ ಸಂಧ್ಯಾತಾಂಡವದ ವರ್ಣನೆಯಂತೆ ಶೂಲಪಾಣಿಯಾದ ಶಿವನು ತ್ರಿಲೋಕ ಮಾತೆಯಾದ ಪಾರ್ವತಿಯನ್ನು ರತ್ನ ಖಚಿತ ಸಿಂಹಾಸನದ ಮೇಲೆ ಕೂರಿಸಿ, ಕೈಲಾಸ ಶಿಖರದ ಮೇಲೆ ನರ್ತಿಸುತ್ತಾನೆ. ಶಾರದೆಯು ವೀಣೆ ನುಡಿಸುತ್ತಾಳೆ. ಲಕ್ಷ್ಮಿಯು ಇಂಪಾದ ಗಾನದಿಂದ ಹಾಡುತ್ತಾಳೆ ಇಂದ್ರ, ಬ್ರಹ್ಮ, ವಿಷ್ಣು ಮುಂತಾದವರೆಲ್ಲ ತಾಳ, ಮದ್ದಲೆ, ಕೊಳಲುಗಳನ್ನು ನುಡಿಸುತ್ತಾರೆ. ಗಂಧರ್ವ, ಯಕ್ಷ, ಕಿನ್ನರ ಕಿಂಪುರುಷ, ವಿದ್ಯಾಧರ, ಉರಗ, ಸಿದ್ಧ, ಅಪ್ಸರೆಯರೆಲ್ಲ ಶಿವನ ನರ್ತನವನ್ನು ನೋಡುತ್ತಲೇ ಮೈಮರೆಯುತ್ತಾರೆ. ಆಗ ಸಂಧ್ಯಾ ಸಮಯ, ಶಿವನು ಶಾಂತಮೂರ್ತಿ ಯಾಗಿರುತ್ತಾನೆ ರಾಕ್ಷಸರನ್ನೂ, ದುಷ್ಟರನ್ನೂ ನಾಶಮಾಡುವುದು ಕಾಳಿತಾಂಡವ. ಲಯವೆಂದರೆ ನಾಶವನ್ನು ತೋರಿಸುವುದು ಸಂಹಾರತಾಂಡವ. ಗೌರಿಯೊಡನೆ ನರ್ತಿಸುವುದು ಗೌರೀತಾಂಡವ ಉಮೆಯೊಡನೆ ನರ್ತಿಸುವುದು ಉಮಾತಾಂಡವ.

ನಟರಾಜ ಸಹಸ್ರನಾಮದಲ್ಲಿ ಉದ್ದಂಡತಾಂಡವ, ಚಂಡತಾಂಡವ, ಊರ್ಧ್ವ ತಾಂಡವ, ಪಂಡಿತಸವ್ಯತಾಂಡವ, ಸಂಪನ್ನಮಹಾತಾಂಡವ, ವೈಭವಬ್ರಹ್ಮಾಂಡ ಕಾಂಡವಿಸ್ಫೋಟ, ಮಹಾಪ್ರಳಯತಾಂಡವ, ಮಹೋಗ್ರತಾಂಡವಾಭಿಜ್ಞ ಪರಿಭ್ರಮಣ ತಾಂಡವ ಎಂಬ ಒಂಭತ್ತು ಬಗೆಯ ತಾಂಡವಗಳ ಅಂಕಿತ ನಾಮಗಳಿವೆ. ಇವುಗಳಲ್ಲಿ ಶಿವನ ಗಂಭೀರ ತಾಂಡವವೇ ಉದ್ದಂಡತಾಂಡವ. ದುಷ್ಟರ ಮೇಲಿನ ಕೋಪದಿಂದ ನರ್ತಿಸಿದ್ದು ಚಂಡತಾಂಡವ. ಚಿದಂಬರನಾಟ್ಯ ಸಭೆಯಲ್ಲಿ ಕಾಳಿಯೊಡನೆ

ಸ್ಪರ್ಧಿಸಿ ಆಡಿದ್ದು ಊರ್ಧ್ವತಾಂಡವ. ಪಾಂಡ್ಯರಾಜನ ಪ್ರಾರ್ಥನೆಯಂತೆ ಎಡಗಾಲನ್ನು ಶಿಖರದ ಕಡೆಗೆ ಮಾಡಿ ನರ್ತಿಸುವುದು ಸವ್ಯತಾಂಡವ. ಚಿದಂಬರ ಕ್ಷೇತ್ರದಲ್ಲಿ ಭಕ್ತರ ಮುಕ್ತಿಸಿದ್ಧಿಗಾಗಿ ಆಡಿದ ಆನಂದತಾಂಡವವೇ ಮಹಾತಾಂಡವ. ಸಂಹಾರ ಕಾಲದಲ್ಲಿ ಆಡಿದುದು ಬ್ರಹ್ಮಾಂಡಕಾಂಡವಿಸ್ಫೋಟ ಮತ್ತು ಮಹಾಪ್ರಳಯ ತಾಂಡವಗಳು. ತ್ರಿಪುರದಹನ ಕಾಲದಲ್ಲಿ ನರ್ತಿಸುವುದು ಮಹೋಗ್ರತಾಂಡವ. ಸಂಧ್ಯಾಕಾಲದ್ದು ಪರಿಭ್ರಮಣತಾಂಡವ.

ಶ್ರೀ ಶಂಕರಾಚಾರ್ಯರ ಮಹಿಷಮರ್ದಿನಿ ಸ್ತೋತ್ರದಂತೆ ಶಿವ, ಪಾರ್ವತಿ, ಗಣಪತಿ, ನಂದಿ, ಭೃಂಗಿ, ಕೃಷ್ಣ, ಸರಸ್ವತಿ ದೇವತೆಗಳು ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದ ನಾಟ್ಯವನ್ನು ಮಾಡುತ್ತಾರೆ. ಶಿವನ ತ್ರಿಪುರ ತಾಂಡವದಲ್ಲಿ ಮೂರ್ತಿಯು ಹದಿನಾರು ಕೈಗಳನ್ನೂ, ಎಡಬಲದಲ್ಲಿ ಗೌರಿ ಹಾಗೂ ಸ್ಕಂದರನ್ನೂ ಹೊಂದಿರುತ್ತಾನೆ ಊರ್ಧ್ವತಾಂಡವ ಮತ್ತು ಆನಂದತಾಂಡವಗಳಲ್ಲಿ ಪಂಚಕ್ರಿಯೆಗಳಿಗೆ ಸಂಬಂಧಿಸಿದಂತೆ ಪಂಚದೇವತೆಗಳಾದ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ ಮತ್ತು ಸದಾಶಿವರ ಸಮ್ಮಿಳನಗಳ ಆನಂದತಾಂಡವವು ಕಾಣಬರುತ್ತದೆ.

ದಕ್ಷಿಣ ಭಾರತದ ಚಿದಂಬರವಂತೂ ನಟರಾಜನ ಮೂಲಸ್ಥಾನ. ಶಿವನ ನಾದಾಂತ ನೃತ್ಯವು ವಿಶ್ವಮಧ್ಯದಲ್ಲಿ ಸ್ಥಾಪಿತವಾಗಿರುವ ಚಿದಂಬರನ ಚಿನ್ನದ ಅರಮನೆಯಲ್ಲಿ ದೇವತೆಗಳಿಗೂ, ಋಷಿಗಳಿಗೂ ತೋರಿಸಲ್ಪಟ್ಟಿದೆಯೆಂದು ಹೇಳಲಾಗಿದೆ. ಚಿದಂಬರಂ ದೇವಾಲಯದ ಗೋಪುರದಲ್ಲಿ ೧೦೮ ಭಂಗಿಯ ತಾಂಡವಗಳಿದ್ದು, ನಟರಾಜನ ಬ್ರಹ್ಮಾಂಡದ ರೂಪವನ್ನು ತೋರಿಸುವಂತಹುದಾಗಿದೆ. ದಕ್ಷಿಣ ಭಾರತದ ದೇವಾಲಯಗಳಲ್ಲಿ ನಟರಾಜನ ಮೂರ್ತಿಗಳು ಎಲ್ಲೆಲ್ಲೂ ಕಾಣಸಿಕ್ಕುತ್ತವೆ. ನಾಲ್ಕು ಕೈಗಳಿಂದ ಸುಂದರಾಕಾರವಾಗಿ ನರ್ತಿಸುತ್ತಿರುವ ಅರ್ಧನಾರಿ ನಟೇಶ್ವರನಂತೂ ತುಂಬ ಅರ್ಥಗರ್ಭಿತವಾದುದು. ಬಾದಾಮಿ, ಬೇಲೂರು, ಹಳೇಬೀಡು, ಬಳ್ಳಿಗಾವೆ, ಗದಗ್, ಲಕ್ಕುಂಡಿ ಮುಂತಾದೆಡೆಯಿರುವ ದೇವಾಲಯಗಳಲ್ಲಿ ವಿವಿಧ ಭಂಗಿಗಳಲ್ಲಿ ನರ್ತಿಸುತ್ತಿರುವ ನಟರಾಜಮೂರ್ತಿಗಳಿವೆ. ನಟರಾಜನನ್ನು ಕುರಿತು ವಾಗ್ಗೇಯ ಕಾರರು ಅನೇಕ ಕೃತಿಗಳನ್ನು ರಚಿಸಿ ಸ್ತುತಿಸಿದ್ದಾರೆ.

**ನಟರಾಜನ್ ಎ.ಕೆ.ಸಿ.**—ಕ್ಲಾರಿನೆಟ್ ವಾದ್ಯದಲ್ಲಿ ಅದ್ವಿತೀಯರೆನಿಸಿದ ನಟರಾಜನ್ ಅವರ ತಂದೆ ಚಿನ್ನಕೃಷ್ಣನಾಯುಡುರವರ ಪ್ರೋತ್ಸಾಹದಿಂದ ಒಬ್ಬ ಅದ್ಭುತ ಕಲಾವಿದರಾದರು. ಇವರು ತಮಿಳುನಾಡಿನ ತಿರುಚಿರಪಳ್ಳಿಯಲ್ಲಿ ವಾಸವಾಗಿದ್ದಾರೆ. ಕರ್ಣಾಟಕ ಸಂಗೀತ ಕ್ಷೇತ್ರದಲ್ಲಿ ಚಿರಪರಿಚಿತರು. ಇವರ ವಾದನದಲ್ಲಿ ಬಿಸ್ಮಿಲ್ಲಾಖಾನರ ಶಹನಾಯ್‌ವಾದನದ ಲಯ ಮತ್ತು ಮಾಧುರ್ಯ ತುಂಬಿದೆ. ನಾಗಸ್ವರದಂತೆಯೇ ನುಡಿಸುತ್ತಾರೆ. ಇದು ಪಂಡಿತ ಪಾಮರ ರಂಜಕವಾಗಿದೆ.

**ನಟರಾಜನ್ ಎಸ್. ಪಿ.** (೧೯೩೩) — ತಮಿಳುನಾಡಿನ ತಂಜಾವೂರು

ಜಿಲ್ಲೆಯ ನೇಮಂ ಎಂಬ ಗ್ರಾಮದ ಎಸ್. ಪಂಚಾಪಕೇಶಅಯ್ಯರ್‌ರವರ ನಾಲ್ಕನೆಯ ಪುತ್ರನಾಗಿ ಜನಿಸಿದರು ದಿಂಡಿಗಲ್ ಗಣಪತಿ ಅಗ್ರಹಾರದಲ್ಲಿ ವಾಸಿಸುತ್ತಿದ್ದುದರಿಂದ ದಿಂಡಿಗಲ್ ಎಂಬ ಹೆಸರು ಅಂಟಿಕೊಂಡಿದೆ. ಇವರ ಹಿರಿಯ ಸಹೋದರ ಕಲ್ಯಾಣ ಸುಂದರಂ ನಟರಾಜನ್ನರ ಪ್ರಥಮಗುರು. ೧೯೫೫ ರಿಂದ ೫೮ರವರೆಗೆ ಟಿ. ಆರ್. ಮಹಾಲಿಂಗಂರವರಲ್ಲಿ ಉನ್ನತ ಶಿಕ್ಷಣ ಪಡೆದರು. ೧೯೫೮–೫೯ರಲ್ಲಿ ಕೇಂದ್ರ ಸರ್ಕಾರದ ಸಾಂಸ್ಕೃತಿಕ ನಿಯೋಗವೊಂದರೊಡನೆ ಚೀನಾ ಮತ್ತು ಇತರ ದೇಶಗಳಿಗೆ ಹೋಗಿ ಬಂದರು. ಮೃಣಾಲಿನಿ ಸಾರಾಭಾಯ್ ಮತ್ತು ಶಾಂತಾರಾವ್ ಇವರುಗಳ ನೃತ್ಯಗೋಷ್ಠಿಯ ಕಲಾವಿದರಾಗಿ ಅಮೆರಿಕಕ್ಕೆ ಮೂರು ಸಲ ಹೋಗಿಬಂದರು. ಇವರ ಕೊಳಲುವಾದನದಲ್ಲಿ ರಾಗಾಲಾಪನೆ, ನಯ ಮತ್ತು ಮಧುರವಾದ ಮನಮೋಹಕ ವಾದ ನುಡಿ, ಲಯದ ಮೇಲೆ ಸಂಪೂರ್ಣವಾದ ಹತೋಟಿ, ಉತ್ತಮ ರೀತಿಯ ಸ್ವರವಿನ್ಯಾಸ ಇವು ಪ್ರಮುಖವಾಗಿ ಕಂಡುಬರುತ್ತವೆ. ಇವರ ಶಿಷ್ಯರಲ್ಲಿ ಕೊಳಲಿನಲ್ಲಿ ರಾಜನಾರಾಯಣ್ ಮತ್ತು ರಾಧಾಮೋಹನ್ ಹಾಗೂ ಗಾಯನದಲ್ಲಿ ಎಸ್. ವಿಜಯಲಕ್ಷ್ಮಿ ಪ್ರಮುಖರು

**ನಟರಾಜ ಸುಂದರಂಪಿಳ್ಳೈ**—ಇವರು ಮುತ್ತುಸ್ವಾಮಿದೀಕ್ಷಿತರ ಕೃತಿಗಳನ್ನು ಅರಿತ ಮಹಾವಿದ್ವಾಂಸರಾಗಿದ್ದರು. 'ದೀಕ್ಷಿತರ್ ಕೀರ್ತನ ಪ್ರಕಾಶಿಕಾ' ಎಂಬ ತಮಿಳು ಗ್ರಂಥವನ್ನು ರಚಿಸಿ ಪ್ರಕಟಿಸಿದರು. ಇವರು ಈ ಶತಮಾನದ ಪೂರ್ವಾರ್ಧದಲ್ಲಿದ್ದರು.

**ನಟಯೋಷಿತ**—ನಾರದ ವಿರಚಿತ 'ಸಂಗೀತ ಮಕರಂದ' ಎಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ಪುರಾತನ ರಾಗ.

**ನಟಲಕ್ಷಣ** — ನಟನಾದವನು ರೂಪವಂತನೂ. ಮಧುರಭಾಷಿಯೂ, ಪಂಡಿತನೂ, ವಾಗ್ಮಿಯೂ, ಸಮರ್ಥನೂ, ಕುಲಾಂಗನಾಸುತನೂ, ಭರತಶಾಸ್ತ್ರ ಪರಿಜ್ಞಾನ, ಉಳ್ಳವನೂ, ಇಂಪಾದ ಶಾರೀರವುಳ್ಳವನೂ, ಸಂಗೀತ, ವಾದ್ಯ, ನೃತ್ಯಗಳನ್ನು ಚೆನ್ನಾಗಿ ಬಲ್ಲವನೂ, ಕಲ್ಪನಾ ಶಕ್ತಿಯುಳ್ಳವನೂ ಆಗಿರಬೇಕೆಂದು ನಂದಿಕೇಶ್ವರನ ಅಭಿನಯ ದರ್ಪಣವೆಂಬ ಗ್ರಂಥದಲ್ಲಿ ಹೇಳಿದೆ.

**ನಟವರ್ಧನಿ**—ಈ ರಾಗವು ೨೦ನೆ ಮೇಳಕರ್ತ ನಠಭೈರವಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ದ ನಿ ಸ

ಅ : ಸ ನಿ ಪ ಮ ರಿ ಗ ಮ ರಿ ಸ

**ನಟ್ಟ**—ಸಂಗೀತರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗ.

**ನಟ್ಟಾ**—(೧) ರಘುನಾಥನಾಯಕನ 'ಸಂಗೀತ ಸುಧಾ' ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೩೦ ಭಾಷಾಂಗ ರಾಗಗಳಲ್ಲಿ ಒಂದು ರಾಗ.

(೨) ವಿದ್ಯಾರಣ್ಯರ 'ಸಂಗೀತಸಾರವೆಂಬ' ಗ್ರಂಥದಲ್ಲಿ ಉಕ್ತವಾಗಿರುವ ೧೫ ಮೇಳಗಳಲ್ಲಿ ಒಂದು ಮೇಳ.

**ನಟ್ಟೆ ನಾರಾಯಣ** — ಸಂಗೀತಸುಧಾ ಮತ್ತು ಸಂಗೀತರತ್ನಾಕರವೆಂಬ ಗ್ರಂಥಗಳಲ್ಲಿ ಉಕ್ತವಾಗಿರುವ ೨೦ ಶುದ್ಧರಾಗಗಳಲ್ಲಿ ಒಂದು ರಾಗ. ತೆಲುಗು ಗ್ರಂಥವಾದ ರಾಗತಾಳಚಿಂತಾಮಣಿ ಎಂಬ ಗ್ರಂಥದಲ್ಲಿ ಈ ರಾಗವು ನಟ್ಟೆ ನಾರಾಯಣಿ ಎಂದು ಉಕ್ತವಾಗಿದೆ.

**ನಟಾಚಾರ್ಯ**— ನಾಟ್ಯವನ್ನು ಹೇಳಿಕೊಡುವ ಗುರು ಮತ್ತು ನಾಟ್ಯ ಪ್ರದರ್ಶನಗಳ ನಿರ್ದೇಶಕ.

**ನಟಾಭರಣ**—ಈ ರಾಗವು ೧೦ನೆ ಮೇಳಕರ್ತ ನಾಟಕಪ್ರಿಯದ ಒಂದು ಉಪಾಂಗ ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ

ಅ: ಸ ನಿ ದ ಪ ಮ ಗ ಮ ರಿ ಸ

ರಾಗಾಂಗರಾಗ. ಸಾರ್ವಕಾಲಿಕರಾಗ. ದೀನ ಮತ್ತು ಕರುಣರಸ ಪ್ರಧಾನವಾದ ರಾಗ. ಮುತ್ತುಸ್ವಾಮಿದೀಕ್ಷಿತರ 'ವಿಶ್ವನಾಥಂ ಭಜೇಹಂ' ಎಂಬ ಕೃತಿಯು ಈ ರಾಗದಲ್ಲಿ ರಚಿತವಾಗಿದೆ.

**ನಟಹಂಭೀರ**—ಸೋಮೇಶ್ವರನ ಮತದಂತೆ ಇದು ನಟನಾರಾಯಣ ರಾಗದ ಒಂದು ಸ್ತ್ರೀರಾಗ

**ನಟೇಶಪಿಳ್ಳೈ** —ತಮಿಳುನಾಡಿನ ಮಾಯಾವರಂ ನಟೇಶಪಿಳ್ಳೆಯವರು ಪ್ರತಿಭಾವಂತರೂ, ಪ್ರಸಿದ್ಧರೂ ಆದ ನಾಗಸ್ವರ ಕಲಾವಿದರಾಗಿದ್ದರು.

**ನಟೇಂದ್ರ**—ಇದೊಂದು ಬಗೆಯ ಕೊಳಲು. ಇದರ ಮುಖರಂಧ್ರಕ್ಕೂ ತಾರರಂಧ್ರಕ್ಕೂ ೯ ಅಂಗುಲ ಅಂತರವಿದೆ. ಮೊದಲ ಮತ್ತು ಏಳನೆಯ ರಂಧ್ರಗಳನ್ನು ಮುಚ್ಚಿ ನುಡಿಸಿದಾಗ ಮಂದ್ರಸ್ಥಾಯಿ ನಿಷಾದವು ನುಡಿಯುತ್ತದೆ.

**ನಡೆ** — ತಾಳಾವರ್ತದ ಪ್ರತಿಯೊಂದು ಲೆಕ್ಕದಲ್ಲಿ ಅಂತರ್ಗತವಾಗಿರುವ ವಿಶಿಷ್ಟವಾದ ಗತಿಗೆ ನಡೆ ಎಂದು ಹೆಸರು. ಇದು ತ್ರಿಶ್ರ, ಚತುರಶ್ರ, ಖಂಡ, ಮಿಶ್ರ ಅಥವಾ ಸಂಕೀರ್ಣವಾಗಿರಬಹುದು. ಪ್ರತಿಯೊಂದರ ಕಾಲಘಟಕವು ೩. ೪, ೫, ೭ ಮತ್ತು ೯ ವಿಭಾಗಗಳನ್ನು ಒಳಗೊಂಡಿರುತ್ತದೆ.

**ನಠಭೈರವಿ**—ಈ ರಾಗವು ೪ನೆ ಚಕ್ರದ ೩ನೆಯ ರಾಗ ಅಂದರೆ ೨೦ನೆ ಮೇಳಕರ್ತರಾಗ.

ಆ: ಸ ರಿ ಗ ಮ ಪ ದ ನಿ ಸ

ಅ: ಸ ನಿ ದ ಪ ಮ ಗ ರಿ ಸ

ಚತುಶ್ರುತಿ ರಿಷಭ, ಸಾಧಾರಣಗಾಂಧಾರ, ಶುದ್ಧಮಧ್ಯಮ, ಶುದ್ಧಧೈವತ ಮತ್ತು ಕೈಶಿಕಿ ನಿಷಾದಗಳು ಈ ರಾಗದ ಸ್ವರ ಸ್ಥಾನಗಳು. ಗ–ದ, ಗ–ನಿ, ಮ–ನಿ ವಾದಿ ಸಂವಾದಿಗಳು. ರಿ, ಗ, ಮ ಮತ್ತು ನಿ ರಾಗಛಾಯಾಸ್ವರಗಳು. ರಿ, ಮ, ಪ ಮತ್ತು ನಿ ನ್ಯಾಸಸ್ವರಗಳು. ಗ ಮತ್ತು ನಿ ಕಂಪಿತ ಸ್ವರಗಳು. ಮ ದ ನಿ ಸ ನೀ

ಎಂಬುದು ವಿಶೇಷ ಪ್ರಯೋಗ ಸರ್ವಸ್ವರ ಗಮಕ ವರಿಕ ರಕ್ತಿರಾಗ ಭಕ್ತಿರಸ ಪ್ರಧಾನವಾದ ಸಾರ್ವಕಾಲಿಕರಾಗ ಪ, ಧ, ನಿ ಸ್ವರಗಳಿಂದ ಈ ರಾಗದ ರಚನೆಗಳು ಪ್ರಾರಂಭವಾಗುತ್ತವೆ ಇದು ಪಂಚಮ ಮೂರ್ಛನಾಕಾರಕ ಮೇಳರಾಗ. ಇದೊಂದು ಪುರಾತನವಾದ ಷಡ್ಜಗ್ರಾಮದ ಪಂಚಮ ಮೂರ್ಛನರಾಗ. ಭೈರವಿ ರಾಗವು ಪ್ರಸಿದ್ಧವಾದ ಮೇಲೆ ಈ ರಾಗವು ಹಿಂದಕ್ಕೆ ಹೋಯಿತು. ಈ ರಾಗದ ಕೆಲವು ಪ್ರಸಿದ್ಧ ಕೃತಿಗಳು—

| | | | | |
|---|---|---|---|---|
| ಅಂಬೋರುದ ಪಾದಮೇ | — | ರೂಪಕ | — | ಕೋಟೇಶ್ವರ ಅಯ್ಯರ್ |
| ಪರುಲಸೇವಚೇಯುಟಚೆ | — | ರೂಪಕ | — | ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ |

**ನಟ್ಟುವತಾಳ**—ಇವು ನಟುವನಾರ್ ಅಥವಾ ನಾಟ್ಯಾಚಾರ್ಯರು ಉಪಯೋಗಿಸುವ ಲೋಹದ ತಾಳಗಳು. ಇವುಗಳಲ್ಲಿ ಒಂದು ಹಿತ್ತಾಳೆಯದು, ಮತ್ತೊಂದು ಉಕ್ಕಿನದು. ಎಡಗೈಯಲ್ಲಿ ಉಕ್ಕಿನತಾಳವನ್ನು ಹಿಡಿದು ಬಲಗೈಯಲ್ಲಿರುವ ಹಿತ್ತಾಳೆಯ ತಾಳದಿಂದ ಹೊಡೆದು ತಾಳ ಹಾಕುತ್ತಾರೆ.

**ನತ**—(೧) ಭರತನಾಟ್ಯದ ನಾಸಿಕ ಕರ್ಮಗಳಲ್ಲಿ ಇದೊಂದು ಬಗೆ. ಮೂಗಿನ ಸೊಳ್ಳೆಗಳು ಆಗಾಗ್ಗೆ ಶ್ಲಿಷ್ಟವಾಗುತ್ತಿದ್ದರೆ ಅದನ್ನು 'ನತ' ಎಂದು ಕರೆಯುವರು. ಇದು ಮದೋನ್ಮತ್ತತೆ, ಮದೋತ್ಕಂಪನಗಳಿಂದ ಕೂಡಿದ ಅಭ್ಯಾಸಗಳಲ್ಲಿಯೂ, ಮೆತ್ತಗೆ ತಡೆದು ತಡೆದು ಅಳುವುದರಲ್ಲಿಯೂ ಉಪಯೋಗವಾಗುವುದು.

(೨) ಭರತನಾಟ್ಯದ ಐದು ವಿಧವಾದ ಪಾರ್ಶ್ವಭೇದಗಳಲ್ಲಿ ಇದೊಂದು ಬಗೆ. ಸೊಂಟವು ಮುಂದಕ್ಕೆ ಬಾಗಿರುವಾಗ ಉಂಟಾಗುವ ಹಾಗೂ ಅಂಸವು ಹಿಂದಕ್ಕೆ ತಳ್ಳಲ್ಪಟ್ಟಂತೆ ಇರುವ ನಿಲುವು.

**ನರ್ತ**—ಸಂಗೀತ ರತ್ನಾಕರವೆಂಬ ಗ್ರಂಥದಲ್ಲಿ ಉಕ್ತವಾಗಿರುವ ಒಂದು ರಾಗದ ಹೆಸರು.

**ನರ್ತಕಿ**—(೧) ನರ್ತನ ಮಾಡುವವಳು.

(೨) ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ.

ಆ: ಸ ರಿ ಗ ಪ ದ ನಿ ಸ̇

ಅ: ಸ̇ ನಿ ದ ಪ ಗ ರಿ ಸ

(೩) ಇದೇ ಹೆಸರಿನ ಒಂದು ರಾಗವು ಪಾಲ್ಕುರಿಕೆ ಸೋಮನಾಥ ಕವಿಯ ಪಂಡಿತಾರಾಧ್ಯ ಚರಿತ್ರವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

**ನರ್ತನ ನಿರ್ಣಯ**— ಹಿಂದೂಸ್ಥಾನೀ ಸಂಗೀತ ಪದ್ಧತಿಯ ಆಚಾರ್ಯ ಪುರುಷನಾದ ಪುಂಡರೀಕ ವಿಠಲನು (೧೬ನೆ. ಶ) ರಚಿಸಿರುವ ನಾಟ್ಯಕ್ಕೆ ಸಂಬಂಧಿಸಿದ ಒಂದು ಸಂಸ್ಕೃತ ಗ್ರಂಥ. ಈ ಗ್ರಂಥವು ತಾಲಧೃಕ್, ಮೃದಂಗೀ, ಗಾಯಕ ಮತ್ತು

ನರ್ತಕ ಎಂಬ ನಾಲ್ಕು ಪ್ರಕರಣಗಳಿರುವ ಸುಮಾರು ೨೦೦೦ ಅನುಷ್ಟುಪ್ ಶ್ಲೋಕಗಳಿರುವ ಗ್ರಂಥ. ಮೊದಲನೆಯ ಪ್ರಕರಣವು ತಾಳಧಾರಿಯ ಲಕ್ಷಣ, ಪಾಟಾಕ್ಷರಗಳು, ವಾದ್ಯ ಪ್ರಧಾನವಾದ ಅಕ್ಷರಗಳು, ಹದಿಮೂರು ಪಾಟಾಲಂಕಾರಗಳು, ವಾದ್ಯಪ್ರಬಂಧದ ಹತ್ತು ಸಂಚುಗಳು, ವಾದ್ಯಪ್ರಬಂಧಗಳು, ಮಾರ್ಗ ದೇಶೀಲಕ್ಷಣ, ಚತುರಶ್ರಾದಿ ಐದು ಲಘು ಭೇದಗಳು, ತಾಳಾಂಗಗಳು, ೮೬ ದೇಶೀ ತಾಳಗಳ ಲಕ್ಷಣ ಇತ್ಯಾದಿಗಳನ್ನು ವಿವರಿಸುತ್ತದೆ. ಎರಡನೆಯದರಲ್ಲಿ ಮಾರ್ದಂಗಿಕನ ಲಕ್ಷಣ, ಅವರ ಗುಣದೋಷಗಳು, ಮೃದಂಗವನ್ನು ಶ್ರುತಿ ಮಾಡುವ ರೀತಿಗಳು, ಹಸ್ತವಿನ್ಯಾಸಗಳು, ವಾದನ ರೀತಿಗಳನ್ನು ಹೇಳಲಾಗಿದೆ. ಮೂರನೆಯದರಲ್ಲಿ ಗಾಯಕ ಲಕ್ಷಣ, ಗುಣದೋಷಗಳು, ನಾದೋತ್ಪತ್ತಿ, ತ್ರಿಸ್ಥಾನಗಳು, ಶ್ರುತಿ, ಸ್ವರಗಳು, ಗ್ರಾಮಗಳು ಮತ್ತು ಮೂರ್ಛನಾತಾನಗಳನ್ನೂ, ೬೬ ರಾಗ ಲಕ್ಷಣಗಳನ್ನೂ ಹೇಳಲಾಗಿದೆ. ಕಡೆಯ ನರ್ತನ ಪ್ರಕರಣದಲ್ಲಿ ಭರತನಾಟ್ಯಕ್ಕೆ ಸಂಬಂಧಿಸಿದ ವಿಷಯಗಳನ್ನು, ದೇಶೀ ನರ್ತನ ಪದ್ಧತಿಯಲ್ಲಿ ಪ್ರಸಿದ್ಧವಾಗಿದ್ದ ಹಲವು ನೃತ್ತ ಪ್ರಕಾರಗಳನ್ನು ವಿವರಿಸಲಾಗಿದೆ.

**ನನ್ನುಮಿಯಾ** —ಇವರು ತಂಜಾವೂರಿನ ಪ್ರಸಿದ್ಧ ಡೋಲಕ್ ವಾದಕರಾಗಿದ್ದರು. ಇವರು ದ್ರುತಗತಿಯಲ್ಲಿ ನುಡಿಸುತ್ತಿದ್ದ ಪುರಾನ್‌ಗಳನ್ನು ಇವರ ಸಮಕಾಲೀನರಾಗಿದ್ದ ಮೃದಂಗಂ ನಾರಾಯಣಸ್ವಾಮಿ ಅಪ್ಪಾ ಮುಂತಾದವರು ಬಹುವಾಗಿ ಮೆಚ್ಚಿಕೊಂಡಿದ್ದರು. ಛೋಟುಮಿಯಾ ಇವರ ಕಿರಿಯ ಸಹೋದರ. ಈ ಮುಸ್ಲಿಂ ಸಹೋದರರು ಪುದುಕೋಟೆಯ ಸಂಸ್ಥಾನ ವಿದ್ವಾಂಸರಾಗಿದ್ದರು. ತಲೈನಾಯರ್ ಸೋಮು ಭಾಗವತರಿಗೂ ನನ್ನುಮಿಯಾವಿಗೂ ನಡೆದ ಸಂಗೀತ ಸ್ಪರ್ಧೆಯು ಚರಿತ್ರಾರ್ಹವಾದ ವಿಷಯವಾಗಿದೆ. ಈ ಸಂದರ್ಭದಲ್ಲಿ ಸಾವೇರಿ ರಾಗದ 'ಗಿರ್‍ರನಿಪಲುಕು ನಾನಂದಿ ಮೃದಂಗ ಮೈನ' ಎಂಬ ಪಲ್ಲವಿಯು ಪ್ರಸಿದ್ಧವಾಯಿತು.

**ನಪುಂಸಕರಾಗ** —ನಾರದನ ಸಂಗೀತ ಮಕರಂದವೆಂಬ ಗ್ರಂಥದಲ್ಲಿ ನಾರದನು ರಾಗಗಳನ್ನು ಪುರುಷ, ಸ್ತ್ರೀ ಮತ್ತು ನಪುಂಸಕರಾಗಗಳೆಂದು ವರ್ಗೀಕರಿಸಿದ್ದಾನೆ.

**ನಭೋಮಣಿ**—ಅಸಂಪೂರ್ಣ ಮೇಳ ಪದ್ಧತಿಯಲ್ಲಿ ೪೦ನೆಯ ಮೇಳದ ಹೆಸರು. ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ.

ಆ : ಸ ರಿ ಗ ರಿ ಮ ಪ ಸ

ಅ : ಸ ನಿ ದ ಪ ಮ ಗ ರಿ ಸ

ಉಪಾಂಗರಾಗ. ಪಂಚಮವು ಅಂಶಸ್ವರ ಮತ್ತು ಗಾಂಧಾರವು ಜೀವಸ್ವರ. ಗ ಮತ್ತು ಮ ಕಂಪಿತ ಸ್ವರಗಳು. ಸ ಗ ರಿ ಗ ಮ ಎಂಬುದು ವಿಶೇಷ ಪ್ರಯೋಗ. ಕರುಣಾರಸ ಪ್ರಧಾನವಾದ ಸಾರ್ವಕಾಲಿಕರಾಗ. ಇದೊಂದು ಅಪೂರ್ವರಾಗ. ತ್ಯಾಗರಾಜರ ನಾಯೆಡ ವಂಚನ ಸೇಯಕುರ ಎಂಬ ಕೃತಿಯಿಂದ ಈ ರಾಗದ ಸ್ವರೂಪವು ಬೆಳಕಿಗೆ ಬಂದಿತು.

**ನಭೋಮಾರ್ಗಿಣಿ**—ಈ ರಾಗವು ೧೬ನೆ ಮೇಳಕರ್ತ ಚಕ್ರವಾಕದ ಒಂದು ಜನ್ಯರಾಗ.

ಆ: ಸ ಗ ಮ ಪ ದ ನಿ ಸ̇

ಅ: ಸ ದಾ ಪ ಮ ಗ ರಿ ಸ

**ನರ್ಮದ**—ಈ ರಾಗವು ೫೦ನೆ ಮೇಳಕರ್ತ ನಾಮನಾರಾಯಣಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ಮ ಗ ರಿ ಸ

**ನಯ**—ರಾಗಗಳನ್ನು ಘನ, ನಯ, ದೇಶ್ಯ ರಾಗಗಳೆಂದು ವರ್ಗೀಕರಣ ಮಾಡುವುದುಂಟು ನಯರಾಗಗಳೆಲ್ಲವೂ ರಕ್ತಿರಾಗಗಳು. ವಿಸ್ತಾರವಾಗಿ ರಾಗಾಲಾಪನೆ ಮತ್ತು ತಾನ ಅಥವಾ ಮಧ್ಯಮ ಕಾಲವನ್ನು ಹಾಡಲು ಯೋಗ್ಯವಾದ ರಾಗಗಳು ನಯರಾಗಗಳು. ಹೆಸರೇ ಸೂಚಿಸುವಂತೆ ನಯರಾಗವೆಂದರೆ ಮೃದುವಾದ ರಾಗ. ಘನ ಮತ್ತು ದೇಶ್ಯವಲ್ಲದ್ದು ನಯರಾಗ.

**ನಯರಂಜನಿ**—ಈ ರಾಗವು ೨೭ನೆ ಮೇಳಕರ್ತ ಸರಸಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ನಿ ಸ̇

ಅ: ಸ̇ ನಿ ಪ ನಿ ದ ಮ ಗ ರಿ ಸ

**ನಯಂ ವೆಂಕಟಸುಬ್ಬಯ್ಯರ್** — ಇವರು ಪ್ರಸಿದ್ಧಗಾಯಕ ಮತ್ತು ವಾಗ್ಗೇಯಕಾರರಾಗಿದ್ದ ಪಲ್ಲವಿದೊರೆಸ್ವಾಮಿ ಅಯ್ಯರ್‌ರವರ ಮಾತಾಮಹ. ನಯ ಶೈಲಿಯ ಹಾಡುಗಾರಿಕೆಗೆ ಪ್ರಸಿದ್ಧರಾಗಿದ್ದರು.

**ನಯಮಣಿ**—ಈ ರಾಗವು ೬೦ನೆ ಮೇಳಕರ್ತ ನೀತಿಮತಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ನಿ ಸ̇

ಅ: ಸ̇ ನಿ ದ ಮ ಗ ರಿ ಸ

**ನಯನ ಭಾಷಿಣಿ**—ಈ ರಾಗವು ೫೨ನೆ ಮೇಳಕರ್ತ ರಾಮಪ್ರಿಯದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ನಿ ದ ನಿ ಸ̇

ಅ: ಸ̇ ನಿ ದ ನಿ ಪ ಗ ಮ ಗ ಸ

**ನರಕೊಂಡ**—ಇದೊಂದು ಜಾನಪದ ವಾದ್ಯ. ಮಡಕೆಯಂತಿದೆ. ಇದರ ಒಳಭಾಗದಲ್ಲಿ ಒಂದು ತಂತಿ ಇದೆ. ಇದರ ಮುಖವನ್ನು ಆಡಿನ ಚರ್ಮದಿಂದ ಮುಚ್ಚಿದೆ. ಮಡಕೆಯ ಮಧ್ಯದಲ್ಲಿ ಒಂದು ಸಣ್ಣ ರಂಧ್ರವಿದೆ. ಇದರ ಮೂಲಕ ಒಂದು ಗುಂಡಿಯನ್ನು ಒಳಗೊಂಡ ಒಂದು ಲೋಹದ ಉಂಗುರವನ್ನು ಅಳವಡಿಸಲಾಗಿದೆ.

ಒಳಗಡೆ ಇರುವ ತಂತಿಯನ್ನು ಈ ಉಂಗುರಕ್ಕೆ ಕಟ್ಟಿದೆ. ಈ ತಂತಿಯು ವಾದ್ಯದ ಮೇಲ್ಭಾಗದಲ್ಲಿ ಮೂರು ಚೌಕನಾದ ಮರದ ತುಂಡಿನ ಮೂಲಕ ಹಾದು ಹೋಗಿದೆ. ಅವುಗಳ ತುದಿಯಲ್ಲಿ ಒಂದು ಹಿಡಿ ಇದೆ. ಇದನ್ನು ಮತ್ತೊಂದು ಮರದ ತುಂಡಿಗೆ ಅಳವಡಿಸಿದೆ. ಇದನ್ನು ತಿರುಗಿಸಿದರೆ ತಂತಿಯ ಶ್ರುತಿಯನ್ನು ಬದಲಾಯಿಸಬಹುದು. ಮಡಕೆಯ ಒಳಗಿನ ತಂತಿಗೆ ಸಣ್ಣ ಉಂಗುರಗಳಿವೆ. ವಾದ್ಯವನ್ನು ನುಡಿಸಿದಾಗ ಈ ಉಂಗುರಗಳು ತಂತಿಯ ಸಹಿತ ಕಂಪನಗೊಂಡು ಹಿತಕರವಾದ ನಾದ ಉಂಟಾಗುತ್ತದೆ ಇದನ್ನು ಸ್ವಲ್ಪ ಓರೆಯಾಗಿ ಹಿಡಿದು ನುಡಿಸುವರು. ದೂರದಲ್ಲಿರುವವರಿಗೆ ಸಂದೇಶವನ್ನು ಕಳುಹಿಸಲು ಇದನ್ನು ಬಳಸುವರು. ಇದು ಶ್ರುತಿವಾದ್ಯ ಮತ್ತು ತಾಳವಾದ್ಯ.

**ನರಭೈರವಿ**—ಗೋವಿಂದಾಚಾರ್ಯ ವಿರಚಿತ 'ಸಂಗ್ರಹ ಚೂಡಾಮಣಿ' ಎಂಬ ಗ್ರಂಥದಲ್ಲಿ ಉಕ್ತವಾಗಿರುವ ೨೦ನೆ ಮೇಳಕರ್ತ ರಾಗದ ಹೆಸರು. ನರ ಎಂಬ ಪದವು ಕಟಪಯಾದಿ ಸಂಖ್ಯಾ ಪದ್ಧತಿಯ ಪ್ರಕಾರ ೨೦ನ್ನು ಸೂಚಿಸುತ್ತದೆ. ಆದರೆ ೨೦ನೆ ಮೇಳಕರ್ತಕ್ಕೆ ನಠಭೈರವಿ ಎಂಬ ಹೆಸರನ್ನು ಅಂಗೀಕರಿಸಲಾಗಿದೆ.

**ನರಹರಿತೀರ್ಥ**—ನರಹರಿತೀರ್ಥರ ಪೂರ್ವಾಶ್ರಮದ ಹೆಸರು ಸ್ವಾಮಿಶಾಸ್ತ್ರಿ. ಇವರು ನ್ಯಾಯಾದಿ ಶಾಸ್ತ್ರಗಳಲ್ಲಿ ಪಂಡಿತವರೇಣ್ಯರು, ವಾದಾಗ್ರಣಿಗಳೆಂದು ಪ್ರಸಿದ್ಧರಾಗಿ ಒರಿಸ್ಸದ ಗಜಪತಿರಾಜರ ವಿದ್ಯಾಗುರುಗಳಾಗಿದ್ದುದಲ್ಲದೆ ಬೊಕ್ಕಸದ ಮುಖ್ಯಾಧಿಕಾರಿಗಳಾಗಿದ್ದರು ಶ್ರೀಮಧ್ವಾಚಾರ್ಯರು ಒರಿಸ್ಸಕ್ಕೆ ಬಂದಾಗ ಅವರೊಡನೆ ವಾದ ಮಾಡಿ, ಅವರ ನೈಜ ಪ್ರತಿಭೆ, ದೈವೀವರ್ಚಸ್ಸು ಮತ್ತು ಪಾಂಡಿತ್ಯಕ್ಕೆ ಮನಸೋತು ಅವರ ಪ್ರಮುಖ ನಾಲ್ವರು ಶಿಷ್ಯರಲಿ ಎರಡನೆಯವರಾಗಿ ಅವರಿಂದ ಸನ್ಯಾಸಗ್ರಹಣ ಮಾಡಿದರು. ಇವರ ಆಶ್ರಮನಾಮ ನರಹರಿತೀರ್ಥರೆಂದಾಯಿತು. ರಾಜಕುಮಾರನು ಪ್ರಾಪ್ತವಯಸ್ಕನಾಗುವವರೆಗೆ ಕಳಿಂಗ ದೇಶಾಧಿಪತ್ಯವನ್ನು ನಡೆಸಿ ಆಚಾರ್ಯರ ಆಜ್ಞೆಯಂತೆ ರಾಜನಿಂದ ಮೂಲ ರಾಮಸೀತಾ ವಿಗ್ರಹಗಳನ್ನು ಪಾರಿತೋಷಕವಾಗಿ ಪಡೆದು ಉಡುಪಿಗೆ ಬಂದು ಪದ್ಮನಾಭತೀರ್ಥರ ನಂತರ ಪೀಠವನ್ನೇರಿದರು (೧೨೦೫–೧೨೧೮). ಆ ಕಾಲದಲ್ಲಿ ಭಾಗವತ ಧರ್ಮಪ್ರಚಾರಕ್ಕಾಗಿ ಅನೇಕ ಕನ್ನಡ ದೇವರನಾಮಗಳನ್ನು ರಚಿಸಿದರು. ಆ ಪೈಕಿ ನಮಗೆ ದೊರಕಿರುವುದು ಮೂರೇ ಹಾಡು. ಎಂತು ಮರುಳಾದೆ, ನಾನೆಂತು ಮರುಳಾದೆ (ಆನಂದಭೈರವಿ–ಆದಿ), ಹರಿಯೇ, ಇದು ಸರಿಯೇ (ಶ್ರೀರಾಗ) ಮುಂತಾದ ಹಾಡಿನ ರಾಗವೂ ನಡೆಯೂ ಗಾನದೃಷ್ಟಿಯಿಂದ ಕಳೆಕಟ್ಟಿ ಬಂದಿದೆ. ನರಹರಿತೀರ್ಥರು ಹರಿದಾಸ ಕೂಟಕ್ಕೆ ಆದ್ಯ ಆಚಾರ್ಯರು.

**ನರಸಿಂಹಭಾಗವತರು**—ಇವರು ತ್ಯಾಗರಾಜರ ಶಿಷ್ಯರಾದ ತಿಲ್ಲೈಸ್ಥಾನಂ ರಾಮಅಯ್ಯಂಗಾರ್ಯರಲ್ಲಿ ಸಂಗೀತವನ್ನು ಕಲಿತು ಕಥಾಕಾಲಕ್ಷೇಪಗಳನ್ನು ಮಾಡುತ್ತಿದ್ದರು. ೧೯೦೮ರಲ್ಲಿ ತ್ಯಾಗರಾಜರ ೫೦೦ ಕೃತಿಗಳನ್ನು ತೆಲುಗಿನಲ್ಲಿ

ಪ್ರಕಟಿಸಿದರು. ಪಿಟೀಲು ಗೋವಿಂದಸ್ವಾಮಿಪಿಳ್ಳೆ ಮತ್ತು ಇತರ ವಿದ್ವಾಂಸರ ನೆರವಿನಿಂದ ತಿರುವೈಯ್ಯಾರಿನಲ್ಲಿ ತ್ಯಾಗರಾಜರ ಆರಾಧನೋತ್ಸವವನ್ನು ಪ್ರಪ್ರಥಮವಾಗಿ ಏರ್ಪಡಿಸಿ ಕಲ್ಯಾಣ ಮಹಲ್ಲಿನಲ್ಲಿ ೧೯೦೭ ರಿಂದ ಪ್ರಸಿದ್ಧ ವಿದ್ವಾಂಸರಿಂದ ಕಚೇರಿಗಳು ನಡೆಯುವಂತೆ ಮಾಡಿದರು. ಇವರ ಸಹೋದರ ಪಂಜು ಭಾಗವತರು ತ್ಯಾಗರಾಜರ ಜೀವನ ಚರಿತ್ರೆಯನ್ನು ಕುರಿತು ತಮಿಳಿನಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಿದರು.

**ನರಸಿಂಹಾಚಾರ್ ಎಂ.ಎ.** (೧೯೧೭)—ಇವರು ಮೈಸೂರಿನ ಮಂಡ್ಯಂ ಶ್ರೀ ವೈಷ್ಣವ ಕುಟುಂಬಕ್ಕೆ ಸೇರಿದ ದಿವಂಗತ ಎಂ. ಎ. ಕೃಷ್ಣಸ್ವಾಮಿ ಅಯ್ಯಂಗಾರ್ಯರ ಪುತ್ರರಾಗಿ ಜನಿಸಿದರು ಅಯ್ಯಂಗಾರ್ಯರು ರೈಲ್ವೇ ಇಲಾಖೆಯಲ್ಲಿ ಅಧಿಕಾರಿಯಾಗಿದ್ದೂ ಬಿಡಾರಂ ಕೃಷ್ಣಪ್ಪನವರ ರಾಮಮಂದಿರದ ಪ್ರಥಮ ಕಾರ್ಯದರ್ಶಿಯಾಗಿ ಸೇವೆಮಾಡಿ ಜನಪ್ರಿಯರಾಗಿದ್ದರು. ನರಸಿಂಹಾಚಾರ್ಯರು ತಮ್ಮ ಗಳನೆ ವಯಸ್ಸಿನಲ್ಲಿ ಮೈಸೂರಿನ ಶ್ರೀ ಕೃಷ್ಣಗಾಯನ ಪಾಠಶಾಲೆಯಲ್ಲಿ ಸಂಗೀತಾಭ್ಯಾಸವನ್ನು ಆರಂಭಿಸಿ ನಂತರ ಚಿದಂಬರದ ಸಂಗೀತದ ಕಾಲೇಜಿನಲ್ಲಿ ನಾಲ್ಕು ವರ್ಷಗಳ ಕಾಲ ಸಭೇಶ ಅಯ್ಯರ್, ಪೊನ್ನಯ್ಯಪಿಳ್ಳೆ ಮತ್ತು ಟಿ.ಕೆ ರಂಗಾಚಾರಿರವರಲ್ಲಿ ಉನ್ನತ ಶಿಕ್ಷಣ ಪಡೆದು ೧೯೪೦ರಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾಗಿ 'ಸಂಗೀತ ಭೂಷಣ' ಪ್ರಶಸ್ತಿಯನ್ನು ಪಡೆದರು. ನಂತರ ಮದ್ರಾಸ್, ತಿರುವಾಂಕೂರು, ದೆಹಲಿ ಮುಂತಾದ ಮುಖ್ಯ ನಗರಗಳಲ್ಲಿ ಹಲವು ಸಂಗೀತ ಕಚೇರಿಗಳನ್ನು ಮಾಡಿ ಹಿರಿಯ ವಿದ್ವಾಂಸರ ಪ್ರಶಂಸೆಯನ್ನು ಪಡೆದು ೧೯೪೩ರಲ್ಲಿ ಮೈಸೂರಿಗೆ ಬಂದು ಗಾನಕಲಾ ಮಂದಿರ ಎಂಬ ಸಂಗೀತ ಕಲಾಶಾಲೆಯನ್ನು ನಡೆಸಿಕೊಂಡು ಬಂದರು. ಮೈಸೂರು, ಧಾರವಾಡ, ತಿರುವಾಂಕೂರು ಮತ್ತು ದೆಹಲಿ ರೇಡಿಯೋ ಕೇಂದ್ರಗಳಿಂದ ಹಲವು ಸಲ ಹಾಡಿದ್ದಾರೆ. ಇದಲ್ಲದೆ ಕಾಶ್ಮೀರದಿಂದ ಸಿಲೋನ್‌ವರೆಗೂ ಪ್ರವಾಸ ಮಾಡಿ ಕಚೇರಿಗಳಲ್ಲಿ ಹಾಡಿದ್ದಾರೆ ಸಂಗೀತದ ಬಗ್ಗೆ ಹಲವು ಲೇಖನಗಳನ್ನು ಬರೆದಿದ್ದಾರೆ. ಕೆಲವು ವರ್ಷಗಳ ಕಾಲ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಸಂಗೀತಾಧ್ಯಾಪಕರಾಗಿದ್ದು ನಂತರ ಹಲವು ವರ್ಷಗಳ ಕಾಲ ಬೆಂಗಳೂರಿನ ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಸೇವೆಸಲ್ಲಿಸಿ ಈಗ ನಿವೃತ್ತರಾಗಿ ಬೆಂಗಳೂರಿನಲ್ಲಿ ನೆಲೆಸಿ ಗಾನಕಲಾಮಂದಿರವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಇವರ ಹಾಡುವ ಶೈಲಿಯಲ್ಲಿ ಕ್ರಮಬದ್ಧವಾದ ರಾಗಾಲಾಪನೆ, ನೆರವಲು, ಸ್ವರಕಲ್ಪನೆ ಮತ್ತು ಸಂಪ್ರದಾಯಬದ್ಧತೆ ಎದ್ದು ಕಾಣುವ ಅಂಶಗಳು. ಇವರ ಶಿಷ್ಯ ಶಿಷ್ಯೆಯರು ಅನೇಕ. ಅವರಲ್ಲಿ ಹಲವರು ಸಂಗೀತ ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದಾರೆ.

**ನರಸಿಂಹಾಚಾರ್ಲು**—ತಮಿಳುನಾಡಿನ ತೆನ್ಮಟಮ್ ಸಹೋದರರೆಂದು ಪ್ರಸಿದ್ಧರಾಗಿದ್ದವರಲ್ಲಿ ನರಸಿಂಹಾಚಾರ್ಲು ಹಿರಿಯರು. ಇವರು ಪಿಟೀಲು ವಿದ್ವಾಂಸರಾಗಿದ್ದರು. ಇವರ ತಮ್ಮ ವರದಾಚಾರ್ಲು ವೈಣಿಕರಾಗಿದ್ದರು. ಇವರು

ನಡೆಸುತ್ತಿದ್ದ ಕಚೇರಿಗಳು ಆಕರ್ಷಕವಾಗಿದ್ದುವು. ಮದ್ರಾಸಿನಲ್ಲಿ ತಿರುವೋಟ್ರಿಯೂರ್ ತ್ಯಾಗಯ್ಯರ್ ನಡೆಸುತ್ತಿದ್ದ ಸಂಗೀತೋತ್ಸವದಲ್ಲಿ ಇವರು ತಪ್ಪದೆ ಭಾಗವಹಿಸುತ್ತಿದ್ದರು. ಇವರು ತೆಲುಗಿನಲ್ಲಿ ಸಂಗೀತಾನಂದ ರತ್ನಾಕರವೆಂಬ ಸಂಗೀತ ವಿಷಯಿಕವಾದ ಒಂದು ಚಿಕ್ಕ ಪುಸ್ತಕವನ್ನು ಬರೆದು ಪ್ರಕಟಿಸಿದರು.

**ನರಸಿಂಹಮೂರ್ತಿ ಹೆಚ್. ಕೆ.** (೧೯೪೬)—ನರಸಿಂಹಮೂರ್ತಿಯವರು ಕರ್ಣಾಟಕದ ಹಾಸನ ಜಿಲ್ಲೆಯ ಚನ್ನರಾಯಪಟ್ಟಣದಲ್ಲಿ ಜನಿಸಿದರು. ಇವರ ತಂದೆ ಮೈಸೂರಿನ ವೆಂಕಟೇಶದೇವರ ಶಿಷ್ಯರಾಗಿದ್ದರು. ಮೂರ್ತಿಯವರಿಗೆ ಅವರ ದೊಡ್ಡಪ್ಪ ಹೆಚ್. ಎಸ್. ರಾಮಚಂದ್ರರಾವ್ ಪ್ರಥಮ ಗುರು. ನಂತರ ಹೆಚ್. ಟಿ. ಪುಟ್ಟಸ್ವಾಮಯ್ಯ ಮತ್ತು ಹೆಚ್. ವಿ. ಕೃಷ್ಣಮೂರ್ತಿಯವರಲ್ಲಿ ಪಿಟೀಲು ವಾದನವನ್ನು ಕಲಿತು ಕಾಲೇಜು ಶಿಕ್ಷಣಕ್ಕಾಗಿ ಮೈಸೂರಿಗೆ ಹೋಗಿ ಅಲ್ಲಿ ಒಂದು ವರ್ಷ ಮುತ್ತಣ್ಣನವರಲ್ಲೂ, ಟಿ ಪುಟ್ಟಸ್ವಾಮಯ್ಯನವರಲ್ಲೂ ಶಿಕ್ಷಣ ಪಡೆದು ನಂತರ ಮದ್ರಾಸಿಗೆ ಹೋಗಿ ಪರೂರು ಗೋಪಾಲಕೃಷ್ಣನ್‌ರವರಲ್ಲಿ ನಾಲ್ಕು ವರ್ಷಗಳ ಕಾಲ ಶಿಕ್ಷಣ ಪಡೆದರು. ೧೯೬೪ರಲ್ಲಿ ಮದ್ರಾಸಿನ ಕೇಂದ್ರ ಸಂಗೀತದ ಕಾಲೇಜಿನಲ್ಲಿ ವಿದ್ವಾನ್ ಪದವಿಯನ್ನು ಪ್ರಥಮ ದರ್ಜೆಯಲ್ಲಿ ಪಡೆದುದಲ್ಲದೆ ೧೯೬೬ರಲ್ಲಿ ಬಿಎಸ್.ಸಿ. ಪದವೀಧರರಾದರು. ೧೯೬೪ರಲ್ಲಿ ಆಕಾಶವಾಣಿ ಸಂಗೀತ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಪಡೆದರು. ಕರ್ಣಾಟಕದ ಮತ್ತು ಹೊರಗಡೆ ಪ್ರಾಂತ್ಯಗಳ ಹಿರಿಯ ವಿದ್ವಾಂಸರಿಗೆ ಪಕ್ಕವಾದ್ಯವನ್ನು ನುಡಿಸಿದ್ದಾರೆ. ಈಗ ಮೈಸೂರು ಆಕಾಶವಾಣಿ ನಿಲಯದ ಕಲಾವಿದರಾಗಿ ಕೆಲಸ ಮಾಡುತ್ತಿದ್ದಾರೆ.

**ನಲ್ಲತರಂಗ**—ಇದು ೧೯ ಕೊಳವೆಗಳಿರುವ ಒಂದು ಸುಷಿರವಾದ್ಯ. ಇದನ್ನು ಆರ್ಗನ್ ವಾದ್ಯದ ತತ್ವದ ಆಧಾರದ ಮೇಲೆ ರಚಿಸಲಾಗಿದೆ. ಪ್ರತಿಕೊಳವೆಯನ್ನು ಒಂದು ಗುಂಡಿಯನ್ನು ಒತ್ತಿ ತೆರೆಯಲಾಗುತ್ತದೆ. ಇದನ್ನು ಕಿದಿಯನ್ನು ಒತ್ತಿ ನುಡಿಸಲಾಗುವುದು.

**ನಳಂಗು**—ಇದೊಂದು ಮದುವೆಯ ಹಾಡು.

**ನಳಿನಕಾಂತಿ**—ಈ ರಾಗವು ೨೯ನೆ ಮೇಳಕರ್ತ ಧೀರಶಂಕರಾಭರಣದ ಒಂದು ಜನ್ಯರಾಗ.

ಆ : ಸ ಗ ರಿ ಮ ಪ ನಿ ಸ಼

ಅ : ಸ಼ ನಿ ಪ ಮ ಗ ರಿ ಸ

ಉಪಾಂಗರಾಗ. ಗಾಂಧಾರ ನಿಷಾದಗಳು ವಾದಿ ಸಂವಾದಿಗಳು. ಮಿಕ್ಕ ಸ್ವರಗಳು ರಾಗಛಾಯಾಸ್ವರಗಳು. ಭಕ್ತಿರಸ ಪ್ರಧಾನವಾದ ಸಾರ್ವಕಾಲಿಕರಾಗ. ತ್ಯಾಗರಾಜರ 'ಮನವ್ಯಾಲಗಿಂಚರಾ' ಎಂಬ ರಚನೆಯು ಈ ರಾಗದ ಪ್ರಸಿದ್ಧ ಕೃತಿ.

**ನಳಿನಕುಸುಮಾವಳಿ**—ಈ ರಾಗವು ೬೯ನೆ ಮೇಳಕರ್ತ ಧಾತುವರ್ಧನಿಯ ಒಂದು ಜನ್ಯರಾಗ.

ಆ : ಸ ರಿ ಗ ಮ ಪ ಮ ಪ ಸ

ಅ : ಸ ನಿ ದ ನಿ ಪ ಮ ರಿ ಸ

**ನಳಿನಭ್ರಮರಿ**—ಈ ರಾಗವು ೫೮ನೆ ಮೇಳಕರ್ತ ಹೇಮವತಿಯ ಒಂದು ಜನ್ಯರಾಗ.

ಆ : ಸ ರಿ ಮ ಪ ದ ನಿ ಸ

ಅ : ಸ ನಿ ದ ನಿ ಪ ಮ ರಿ ಸ

**ನಳಿನಸುಖಿ**—ಈ ರಾಗವು ೩೪ನೆ ಮೇಳಕರ್ತ ವಾಗಧೀಶ್ವರಿಯ ಒಂದು ಜನ್ಯರಾಗ

ಆ : ಸ ಮ ಗ ಮ ಪ ದ ನಿ ದ ಸ

ಅ : ಸ ನಿ ದ ಪ ಮ ಗ ಮ ರಿ ಸ

**ನಳಿನಹಂಸಿ**—ಈ ರಾಗವು ೫೮ನೆ ಮೇಳಕರ್ತ ಶೂಲಿನಿಯ ಒಂದು ಜನ್ಯ ರಾಗ.

ಆ : ಸ ರಿ ಗ ಮ ಪ ನಿ ದ ಸ

: ಸ ನಿ ದ ಪ ಮ ರಿ ಸ

**ನಳಿನೀ ಪದ್ಮಕೋಶ ಹಸ್ತ**—ಇದು ಭರತನಾಟ್ಯದ ಒಂದು ವಿಶೇಷ ಮುದ್ರೆ. ಎರಡು ಪದ್ಮಕೋಶ ಹಸ್ತಗಳು ಕೆಳಮುಖವಾಗಿ ಮತ್ತು ಮೇಲ್ಮುಖವಾಗಿ ಆಡಿಸಿದಾಗ ಅದು ಪದ್ಮಕೋಶ ಹಸ್ತವಾಗುತ್ತದೆ.

**ನಷ್ಟ**—ಇದು ೧೪ ಬಗೆಯ ಪ್ರಸ್ತಾರಗಳಲ್ಲಿ ಒಂದು ವಿಧ. ಪ್ರಸ್ತಾರಗಳನ್ನು ಒಂದು ಯೋಜನಾರೀತ್ಯಾ ಕಲ್ಪಿಸಲಾಗುವುದು. ಪ್ರಸ್ತಾರದ ಕ್ರಮ ಸಂಖ್ಯೆಯು ತಿಳಿದರೆ ಅದರ ಅಂಗಗಳ ಕ್ರಮ ರೀತಿಯನ್ನು ಹೇಳಬಹುದು. ತಾಳದಶ ಪ್ರಾಣಗಳಲ್ಲಿ ಪ್ರಸ್ತಾರವು ಕೊನೆಯ ಪ್ರಾಣ. ಇದಕ್ಕೆ ನಷ್ಟವೆಂದು ಹೆಸರು ಇದರ ವಿರುದ್ಧ ವಾದುದು ಉದ್ದಿಷ್ಟ ಪ್ರಸ್ತಾರದ ರಚನೆ ಅಥವಾ ಸ್ವರೂಪವು ತಿಳಿದರೆ ಅದರ ಕ್ರಮಸಂಖ್ಯೆಯನ್ನು ಗೊತ್ತುಮಾಡಬಹುದು. ಒಂದು ಮೇಳದ ಸ್ವರಗಳು ತಿಳಿದರೆ ಅದರ ಕ್ರಮ ಸಂಖ್ಯೆಯನ್ನು ಹೇಳಬಹುದು. ಇದು ಉದ್ದಿಷ್ಟವಾಗುತ್ತದೆ. ನಷ್ಟ ಮತ್ತು ಉದ್ದಿಷ್ಟವನ್ನು ೫೦೪೦ ಸ್ವರಪ್ರಸ್ತಾರಗಳಿಗೆ ಅನ್ವಯಿಸಬಹುದು. ಸ್ವರ ಪ್ರಸ್ತಾರಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಬೆಳೆಸಲಾಗಿದೆ. ಸ್ವರಪ್ರಸ್ತಾರದ ಕ್ರಮಸಂಖ್ಯೆಯು ತಿಳಿದರೆ ಆ ಪ್ರಸ್ತಾರ ಅಥವಾ ನಷ್ಟದ ಸ್ವರಗಳನ್ನು ಗೊತ್ತುಮಾಡ ಬಹುದು. ಹಾಗೆಯೇ ಒಂದು ಪ್ರಸ್ತಾರದ ಸ್ವರಗಳು ತಿಳಿದರೆ ಅದರ ಉದ್ದಿಷ್ಟ ಅಥವಾ ಕ್ರಮಸಂಖ್ಯೆಯನ್ನು ಗೊತ್ತುಮಾಡಬಹುದು. ಪ್ರಾಯೋಗಿಕ ಸಂಗೀತದಲ್ಲಿ ನಷ್ಟ ಮತ್ತು ಉದ್ದಿಷ್ಟಗಳ ಉಪಯೋಗವು ತೀರ ಸ್ವಲ್ಪವೇ ಆದರೂ ಮನುಷ್ಯನ ಬುದ್ಧಿಶಕ್ತಿಯು ತಾಳ ಮತ್ತು ನಡೆಗಳ ಲೆಕ್ಕಾಚಾರದಲ್ಲಿ ಎಷ್ಟು ಉನ್ನತ ಮಟ್ಟವನ್ನು ಮುಟ್ಟಬಹುದು ಎಂಬುದನ್ನು ತೋರಿಸುತ್ತದೆ.

**ನಕ್ಷತ್ರಮಾಲಾ**—ಈ ರಾಗವು ೧೮ನೆಯ ಮೇಳಕರ್ತ ಹಾಟಕಾಂಬರಿಯ ಒಂದು ಜನ್ಯರಾಗ.

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ನವಗ್ರಹಕೀರ್ತನೆಗಳು**—ಮುತ್ತುಸ್ವಾಮಿದೀಕ್ಷಿತರು ರಚಿಸಿರುವ ನವಗ್ರಹ ಕೀರ್ತನೆಗಳು ಅಥವಾ ವಾರದ ಕೀರ್ತನೆಗಳು ಕರ್ಣಾಟಕ ಸಂಗೀತಕ್ಕೆ ಅಮೂಲ್ಯವಾದ ಕೊಡುಗೆಗಳು. ಇವು ನವಾವರಣ ಕೃತಿಗಳು ಮತ್ತು ಗುರುಗುಹ ಕೃತಿಗಳು ಅಥವಾ ಸುಬ್ರಹ್ಮಣ್ಯ ಸಪ್ತಕಗಳಿಂದ ಪ್ರತ್ಯೇಕವಾದ ಸಮುದಾಯ ಕೃತಿಗಳು. ಇತ್ತೀಚಿಗೆ ಪ್ರಕಟವಾಗಿರುವ ಗುರುಗುಹ ಗಾನಾಮೃತ ವರ್ಷಿಣಿ–ಬಾಗ II—ಎಂಬ ಗ್ರಂಥದಲ್ಲಿ ಎರಡು ಛಾಯಾಗ್ರಹಗಳನ್ನು ಕುರಿತು ಕೀರ್ತನೆಗಳಿವೆ. ಮನೋಹರಿರಾಗದಲ್ಲಿ (ರೂಪಕ) ರುವ 'ಸ್ಮರಾಮ್ಯಹಂಸದಾರಾಹುಂ' ಮತ್ತು ಚಾಮರ ರಾಗದಲ್ಲಿರುವ (ರೂಪಕ) 'ಮಹಾಸುರಂ ಕೇತುಮಹಂ' ಎಂಬ ಕೀರ್ತನೆಗಳು ರಾಹು ಮತ್ತು ಕೇತುವನ್ನು ಕುರಿತ ಕೀರ್ತನೆಗಳು. ಇವು ದೀಕ್ಷಿತರಿಂದ ರಚಿಸಲ್ಪಟ್ಟಿರುವ ವಿಷಯದಲ್ಲಿ ಸಂದೇಹವನ್ನು ಹಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಸುಬ್ಬರಾಮ ದೀಕ್ಷಿತರ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಗ್ರಂಥದಲ್ಲಿ ಇವೆರಡು ಕೃತಿಗಳು ಕಂಡು ಬರುವುದಿಲ್ಲ. ಇತರ ಏಳು ಕೀರ್ತನೆಗಳನ್ನು ಸ್ವರಮಟ್ಟು ಸಹಿತ ಕೊಡಲಾಗಿದೆ.

ಈ ಕೀರ್ತನೆಗಳನ್ನು ರಚಿಸಲು ಕಾರಣವಾದ ಸಂದರ್ಭವನ್ನು ಇಲ್ಲಿ ಸ್ಮರಿಸಬಹುದು. ಪ್ರಚಲಿತವಿರುವ ಕತೆಯಂತೆ ದೀಕ್ಷಿತರ ಶಿಷ್ಯರಾಗಿದ್ದ ಶುದ್ಧಮದ್ದಲಂ ತಂಬಿಯಪ್ಪ ಎಂಬುವರಿಗೆ ವಿಪರೀತವಾದ ಉದರಶೂಲೆ ಉಂಟಾಗಿ ಎಷ್ಟು ಔಷದೋಪಚಾರ ಮಾಡಿದರೂ ಶಮನವಾಗಲಿಲ್ಲ. ಒಬ್ಬ ಜ್ಯೋತಿಷ್ಯರು ಗ್ರಹಶಾಂತಿ ಮಾಡಬೇಕೆಂದು ಹೇಳಿದರು. ಆಗ ಗುರುವಾದ ಮುತ್ತುಸ್ವಾಮಿದೀಕ್ಷಿತರನ್ನು ಮುಂದೇನು ಮಾಡಬೇಕೆಂದು ಕೇಳಿದರು. ಶಿಷ್ಯನ ಕಷ್ಟವನ್ನು ನೋಡ ಲಾರದೆ ಗ್ರಹಕೀರ್ತನೆಗಳನ್ನು ರಚಿಸಿ ಕೊಡುವುದಾಗಿಯೂ, ಅವುಗಳನ್ನು ಒಂದು ವಾರ ಭಕ್ತಿಯಿಂದ ಹಾಡಬೇಕೆಂದು ಹೇಳಿದರು. ಅಂತೆಯೇ ಅವರು ರಚಿಸಿದ ಕೀರ್ತನೆಗಳನ್ನು ತಂಬಿಯಪ್ಪ ಭಕ್ತಿಯಿಂದ ಒಂದುವಾರ ಹಾಡಿದರು. ಅವರು ಉದರಶೂಲೆಯಿಂದ ಬಿಡುಗಡೆ ಹೊಂದಿದರು. ಇದಲ್ಲದೆ ಇತರರ ಉದರ ಶೂಲೆಯನ್ನು ವಾಸಿ ಮಾಡುವ ಶಕ್ತಿಯನ್ನು ಪಡೆದರು. ನಾವು ಈ ಕತೆಯನ್ನು ನಂಬುವುದಾದರೆ ಗ್ರಹಕೀರ್ತನೆಗಳಿಗೆ ಇನ್ನೂ ಆ ಶಕ್ತಿಯಿದೆ ಎನ್ನಬಹುದು. ಈ ಕೃತಿಗಳು ಯಾವುವೆಂದರೆ—

| | | | | |
|---|---|---|---|---|
| ಸೂರ್ಯ | —ಭಾನುವಾರ | — ಸೂರ್ಯಮೂರ್ತೇ | —ಸೌರಾಷ್ಟ್ರ | — ಧ್ರುವ |
| ಚಂದ್ರ | —ಸೋಮವಾರ | — ಚಂದ್ರಂಭಜ | —ಅಸಾವೇರಿ | —ಮಠ್ಯ |
| ಅಂಗಾರಕ | —ಮಂಗಳವಾರ | — ಅಂಗಾರಕಂ | —ಸುರಟಿ | —ರೂಪಕ |

| | | | |
|---|---|---|---|
| ಬುಧ | —ಬುಧವಾರ — | ಬುಧಮಾಶ್ರಯಾಮಿ | —ನಾಟಕುರಂಜಿ—ಝಂಪ |
| ಗುರು | —ಗುರುವಾರ — | ಬೃಹಸ್ಪತೇ | —ಅಠಾಣ — ತ್ರಿಪುಟ |
| ಶುಕ್ರ | —ಶುಕ್ರವಾರ — | ಶ್ರೀ ಶುಕ್ರ | —ಫರಜ್ — ಅಟ |
| ಶನಿ | —ಶನಿವಾರ — | ದಿವಾಕರತನೂಜಂ | —ಯದುಕುಲ ಕಾಂಭೋಜಿ—ಏಕ |

'ಸೂರ್ಯಮೂರ್ತೇ ನಮೋಸ್ತುತೇ' ಎಂಬುದು ಮೊದಲನೆಯ ಕೃತಿ. ಸೂರ್ಯ ಆರ್ಯವಿನುತ, ಆರೋಗ್ಯಾದಿ ಫಲದ, ಸೋಮಾದಿಗ್ರಹ ಶಿಖಾಮಣೀ, ಭಾರತೀಶ ಹರಿಹರಾತ್ಮನೇ ಇತ್ಯಾದಿ ಗುಣವಾಚಕಗಳನ್ನು ಬಳಸಲಾಗಿದೆ. ಸೂರ್ಯಸ್ತುತಿಯು ಸೌರಾಷ್ಟ್ರರಾಗದಲ್ಲಿದೆ ದೀಕ್ಷಿತರ ಪಂಥದ ಪ್ರಕಾರ ಈ ರಾಗವು ಒಂದು ಸಂಪೂರ್ಣ ಸಾರ್ವಕಾಲಿಕರಾಗ ಇದರ ಪಂಚಶ್ರುತಿ ಧೈವತವು ಸೂರ್ಯನ ಅಸಾಮಾನ್ಯ ಪ್ರಕಾಶ ಮತ್ತು ಶಕ್ತಿಯನ್ನು ತರುತ್ತದೆ. ಶುದ್ಧ ಮಧ್ಯಮದಿಂದ ಶುದ್ಧರಿಷಭಕ್ಕೆ ಹೋಗುವ ಜಾರು ಭಕ್ತಿಭಾವವನ್ನು ಸೂಚಿಸುತ್ತದೆ. ಮಧ್ಯಸ್ಥಾಯಿಯಿಂದ ಮಂದ್ರ ಪಂಚಮಕ್ಕೆ ಹೋಗುವ 'ನಮೋಸ್ತುತೇ' ಎಂಬ ಪದವು ಭಕ್ತನ ವಿನೀತ ಭಾವದ ಪ್ರತೀಕವಾಗಿದೆ. ಸೌರಾಷ್ಟ್ರರಾಗವು ಮುಖ್ಯಗ್ರಹವಾದ ಸೂರ್ಯನನ್ನು ಸ್ತುತಿಸಲು ಸೂಕ್ತವಾದ ರಾಗವಾಗಿರುವುದರಿಂದ ದೀಕ್ಷಿತರು ಅದನ್ನು ಬಳಸಿರುವುದನ್ನು ಗಮನಿಸ ಬಹುದು. ಇದರ ತಾಳವು ಸೂಳಾದಿ ತಾಳಗಳಲ್ಲಿ ಮೊದಲನೆಯದು.

ಸೂರ್ಯನು ಶಕ್ತಿ ಮತ್ತು ಪ್ರಕಾಶದ ದ್ಯೋತಕವಾದರೆ ಚಂದ್ರನು ಪ್ರಕೃತಿಯ ಸೌಂದರ್ಯ ಮತ್ತು ಸಂತೋಷವನ್ನು ನೀಡುವ ಗ್ರಹ. ಇವನು 'ಚಂದ್ರಮಾ ಮನಸೋ ಜಾತ:' ಎಂಬಂತೆ ವಿರಾಟ್ ಪುರುಷನ ಮನಸ್ಸಿನಿಂದ ಸೃಷ್ಟಿಯಾದವನು. ದೀಕ್ಷಿತರು 'ಚಂದ್ರಂ ಭಜಮಾನಸ–ಸಾಧು ಹೃದಯ ಸದೃಶಮ್' ಎಂದು ಎರಡನೆಯ ಕೃತಿಯನ್ನು ಪ್ರಾರಂಭಿಸುತ್ತಾರೆ. ಈ ಕೃತಿಯು ಶೀತಕಿರಣಕ್ಕೆ ಸೂಕ್ತವಾದ, ಮೃದುವಾದ ಅಸಾವೇರಿರಾಗದಲ್ಲಿದೆ. ಇದು ಎರಡನೆಯ ಸುಂದರ ಗ್ರಹವಾದ ಚಂದ್ರನನ್ನು ಸ್ತುತಿಸಲು ಸೂಕ್ತವಾದ ರಕ್ತಿರಾಗ. ಇದು ಸೂಳಾದಿ ತಾಳಗಳಲ್ಲಿ ಎರಡನೆಯದಾದ ಮಠ್ಯತಾಳದಲ್ಲಿದೆ. ಈ ಕೃತಿಯಲ್ಲಿ ಬಳಸಿರುವ ೩೩ ಅನುಸ್ವಾರಗಳು ಚಂದ್ರನಿಂದ ಉಂಟಾಗುವ ಅನುಭವ ವೇದ್ಯವಾದ ಆಹ್ಲಾದದ ಪ್ರತೀಕಗಳಾಗಿವೆ.

ಮೂರನೆಯದು ಮಂಗಳ ಗ್ರಹದ ಕೃತಿಯು, ಅಂಗಾರಕ ಮಾಶ್ರಯಾಮ್ಯಹಂ— ವಿನತಾಶ್ರಿತ ಜನಮಂದಾರಂ । ಮಂಗಳವಾರ ಭೂಮಿಕುಮಾರಂ–ವಾರಂವಾರಮ್ ॥" ಎಂದು ಆರಂಭವಾಗುತ್ತದೆ. ಮಂಗಳವಾರ ಎಂದಿದ್ದರೂ ಇದು ಅಮಂಗಳವಾರ. ಆದಿನ ಯಾವ ಶುಭಕಾರ್ಯಗಳನ್ನೂ ಮಾಡುವುದಿಲ್ಲ. ಈ ಗ್ರಹಸ್ತುತಿಗೆ ಸುರಟಿ ರಾಗವನ್ನು ಬಳಸಿದೆ. ಇದು ಮಂಗಳವನ್ನು ಹಾಡಲು ಬಳಸುವ ರಾಗವಾದರೂ ಇನ್ನೊಂದು ದೃಷ್ಟಿಯಲ್ಲಿ ಇದು ಅಮಂಗಳಕರ ರಾಗ. ಗುರುವು ಶಿಷ್ಯನಿಗೆ ಈ ರಾಗವನ್ನು ಹೇಳಿ ಕೊಡುವುದಿಲ್ಲ. ಇದು ಹಿಂದಿನ ಸಂಪ್ರದಾಯ. ಮಂಗಳವೆಂಬ

ಹೆಸರಿದ್ದರೂ ಅಮಂಗಳಕರವಾದ ಗ್ರಹದ ಕೀರ್ತನೆಯನ್ನು ಮಂಗಳವೂ, ಅಮಂಗಳವೂ ಆದ ರಾಗದಲ್ಲಿ ರಚಿಸಿರುವುದು ಗಮನಾರ್ಹ. ತಾಳವೂ ಸಹ ವಿಲಕ್ಷಣವಾದ ಸೂಳಾದಿ ತಾಳಗಳಲ್ಲಿ ಮೂರನೆಯದಾದ ರೂಪಕ ತಾಳವನ್ನು ಬಳಸಲಾಗಿದೆ.

ನಾಲ್ಕನೆಯ ಗ್ರಹವು ಬುಧ. ಈ ಕೃತಿಯು 'ಬುಧಮಾಶ್ರಯಾಮಿ ಸತತಂ। ಸುರಾದಿನುತಂ ಚಂದ್ರತಾರಾಸುತಂ॥' ಎಂದು ಆರಂಭವಾಗುತ್ತದೆ ಕನ್ಯಾಧಿಪ, ಮಧುರ ಕವಿತಾಪ್ರದ, ಸದಾನಂದ ಸಹಿತನಾದ ಬುಧಗ್ರಹವನ್ನು ಸ್ತುತಿಸಲು ರಕ್ತಿರಾಗವಾದ ನಾಟಕುರಂಜಿಯನ್ನು ನಾಲ್ಕನೆಯ ತಾಳವಾದ ಝಂಪತಾಳವನ್ನು ಬಳಸಿರುವುದು ಗಮನಾರ್ಹ.

ಐದನೆಯ ಗ್ರಹವು ಗುರು ಅಥವಾ ಬೃಹಸ್ಪತಿ. ಕೀರ್ತನೆಯು 'ಬೃಹಸ್ಪತೇ ತಾರಾಪತೇ। ಬ್ರಹ್ಮಾಜಾತೇ ನಮೋಸ್ತುತೇ॥ ಎಂದು ಆರಂಭವಾಗುತ್ತದೆ. 'ನಿರಾಮಯಾಯ' ಎಂದು ಹೇಳಿರುವುದು ತಂಬಿಯಪ್ಪನಿಗೆ ರೋಗವು ವಾಸಿಯಾಗಿರುವುದನ್ನು ಸೂಚಿಸಬಹುದು. ಮಹಾಬಲ ಮತ್ತು ಜಗತ್ರಯ ಗುರುವಾದ ಬೃಹಸ್ಪತಿಯನ್ನು ಸ್ತುತಿಸಲು ದೀಕ್ಷಿತರು ಅಠಾಣರಾಗವನ್ನೂ ತ್ರಿಪುಟ ತಾಳವನ್ನೂ ಬಳಸಿದ್ದಾರೆ. ಚತುಶ್ರುತಿ ಧೈವತವು ಅಂಶ ಮತ್ತು ನ್ಯಾಸಸ್ವರ ವಾಗಿರುವುದು, ಮತ್ತು ಒಂದೇ ಸ್ಥಾಯಿಯಲ್ಲಿ ದಾಟುಸ್ವರ ಪ್ರಯೋಗಗಳು ಈ ಗ್ರಹದ ಮಹತ್ವವನ್ನು ಸೂಚಿಸುತ್ತವೆ. ಇದರ ರಸವು ಅದ್ಭುತ. ಆದ್ದರಿಂದ ಅಠಾಣ ರಾಗವನ್ನು ಐದನೆಯ ಗ್ರಹದ ಸ್ತುತಿಯಲ್ಲಿ ಬಳಸಲಾಗಿದೆ.

ಆರನೆಯ ಗ್ರಹವು ಶುಕ್ರ. ಈ ಕೀರ್ತನೆಯ ಪಲ್ಲವಿಯು ಹೀಗಿದೆ. "ಶ್ರೀ ಶುಕ್ರ ಭಗವಂತಂ। ಚಿಂತಯಾಮಿ ಸತತಂ। ಸಕಲ ತತ್ವಜ್ಞಂ॥ ಈ ಕೀರ್ತನೆಯಲ್ಲಿ ಹೋರಾ, ದ್ರೇಕ್ಕಾಣ ಇತ್ಯಾದಿ ಜ್ಯೋತಿಷ್ಯಶಾಸ್ತ್ರದ ಹಲವು ಪದಗಳನ್ನು ಬಳಸಲಾಗಿದೆ. ಶುಕ್ರನು ದೈತ್ಯಗುರು. ಆದ್ದರಿಂದ ದೀಕ್ಷಿತರು ದೇಶಿಯರಾಗದ ಫರಜ್‌ರಾಗವನ್ನು ಬಳಸಿದ್ದಾರೆ. ಕವಿ, ಕಳತ್ರ ಕಾರಕ ಮತ್ತು ಸಂಗೀತಕಾರಕನಾದ ಶುಕ್ರನ ಸ್ವಭಾವಕ್ಕೆ ತಕ್ಕ ರಕ್ತಿರಾಗವನ್ನು ಬಳಸಿದ್ದಾರೆ. ಆರನೆಯ ಗ್ರಹಕೀರ್ತನೆಗೆ ಆರನೆಯ ತಾಳವಾದ ಅಟತಾಳವನ್ನು ಬಳಸಿದ್ದಾರೆ.

ಏಳನೆಯ ಗ್ರಹವು ಶನಿ. 'ದಿವಾಕರ ತನುಜಂ—ಶನೈಶ್ಚರಂ। ಧೀರತರಂ ಸಂತತಂ ಚಿಂತಯೇ'॥ ಎಂದು ಶನಿ ಕೀರ್ತನೆಯು ಆರಂಭವಾಗುತ್ತದೆ. ಇದು ಅನೇಕ ದೇಶಗಳ ಸಂಗೀತದಲ್ಲಿ ಕಂಡು ಬರುವ ಯದುಕುಲ ಕಾಂಭೋಜಿರಾಗದಲ್ಲಿದೆ. ಇದರ ಧಾತು ಮಾತಿನ ರಸ ಮತ್ತು ಭಾವವನ್ನು ಸೂಚಿಸುತ್ತದೆ. ಇದರ ವಿಳಂಬ ಕಾಲವು, 'ಶನಿಃ ಮಂದಃ' ಎಂಬುದಕ್ಕೆ ಸರಿಯಾಗಿದೆ. ಇದರ ತಾಳವೂ ಸಹ ಏಳನೆಯ ಏಕತಾಳವಾಗಿದೆ

ಏಳು ಮುಖ್ಯ ಗ್ರಹಗಳ ಕೀರ್ತನೆಗಳ ನಂತರ ಛಾಯಾಗ್ರಹಗಳಾದ ರಾಹು ಮತ್ತು ಕೇತುವಿನ ಕೀರ್ತನೆಗಳಿವೆ. ಈ ಗ್ರಹಗಳ ಹೆಸರಿನಲ್ಲಿ ವಾರದ ದಿನಗಳಿಲ್ಲ.

ಈ ಕೀರ್ತನೆಗಳು ಪ್ರತಿಮಧ್ಯಮ ರಾಗಗಳಾದ ಮನೋಹರಿ ಮತ್ತು ಜಾವಳಿ ರಾಗಗಳಲ್ಲಿವೆ. ಪ್ರತಿ ಮಧ್ಯಮ ಸ್ವರವು ಕ್ಷುದ್ರಗ್ರಹಗಳ ಸ್ವಭಾವಕ್ಕೆ ಸೂಕ್ತವಾದ ವಕ್ರತ್ವವನ್ನು ಸೂಚಿಸುತ್ತದೆ. ಇವೆರಡಕ್ಕೂ ವಿಲಕ್ಷಣ ತಾಳವಾದ ರೂಪಕವನ್ನು ಬಳಸಲಾಗಿದೆ ಎಂಬುದು ಗಮನಾರ್ಹ.

**ನವಪಲ್ಲವಿ**—ಈ ರಾಗವು ೫೧ನೆ ಮೇಳಕರ್ತ ಕಾಮವರ್ಧನಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ನಿ ಪ ದ ಪ ಸ

ಅ: ಸ ನಿ ದ ಪ ದ ಮ ಗ ಸ

**ನವಭಾಸುರ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಪ ನಿ ಸ

ಅ: ಸ ನಿ ದ ಮ ಗ ರಿ ಮ ಸ

**ನವಮಾಲಿ**—ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.

**ನವನೀತ ಪಂಚಮ**—ಈ ರಾಗವು ೨೪ನೆ ಮೇಳಕರ್ತ ವರುಣಪ್ರಿಯದ ಒಂದು ಜನ್ಯರಾಗ.

ಆ: ಸ ಗ ಮ ದ ಪ ದ ನಿ ಸ

ಅ: ಸ ನಿ ಪ ಮ ರಿ ಸ

**ನವರಸ ಅಂಧಾಳಿ**—ಈ ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಒಂದು ಜನ್ಯರಾಗ

ಆ: ಸ ಗ ರಿ ಗ ಮ ಪ ದ ಸ

ಅ: ಸ ದ ಪ ಮ ಗ ರಿ ಗ ಸ

**ನವರತ್ನ ಭೂಷಿಣಿ**—ಈ ರಾಗವು ೬೩ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಸ

ಅ: ಸ ನಿ ದ ಪ ಮ ಗ ರಿ ಸ

**ನವರತ್ನ ವಿಲಾಸ**—ಈ ರಾಗವು ೬೦ನೆ ಮೇಳಕರ್ತ ಲತಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ದ ಪ ಸ

ಅ: ಸ ದ ಪ ಮ ಗ ಮ ರಿ ಸ

**ನವರಸ**—ಈ ರಾಗವು ೧೫ನೆ ಮೇಳಕರ್ತ ಮಾಯಾಮಾಳವ ಗೌಳದ ಒಂದು ಜನ್ಯರಾಗ.

ಆ: ಸ ರಿ ಗ ಮ ನಿ ದ ನಿ ಸ

ಅ: ಸ ನಿ ಪ ಮ ರಿ ಸ

**ನವರಸ ಕನ್ನಡ**—ಈ ರಾಗವು ೨೮ನೆ ಮೇಳಕರ್ತ ಹರಿಕಾಂಭೋಜಿಯ ಒಂದು ಜನ್ಯರಾಗ

ಆ: ಸ ಗ ಮ ಪ ಸ

ಅ: ಸ ನಿ ದ ಮ ಗ ರಿ ಸ

ಉಪಾಂಗರಾಗ. ಸ್ವರಾಂತರ ಷಾಡವ ರಾಗಕ್ಕೆ ಒಂದು ಅಪರೂಪವಾದ ನಿದರ್ಶನ. ಗ, ಮ, ರಿ ಗಳು ರಾಗ ಛಾಯಾಸ್ವರಗಳು. ಭಕ್ತಿರಸ ಪ್ರಧಾನವಾದ ರಮಣೀಯವಾದ ರಾಗ. ತ್ಯಾಗರಾಜರು 'ನಿನ್ನು ವಿನಾನಾಮದೇಂದು' ಮತ್ತು 'ಪಲುಕ ಕಂಡ ಚಕ್ಕೆರನು' ಎಂಬ ಎರಡು ಕೃತಿಗಳನ್ನು ರಚಿಸಿ ಈ ರಾಗವನ್ನು ಅಮರಗೊಳಿಸಿದ್ದಾರೆ. ಈ ರಾಗವು ತ್ಯಾಗರಾಜರ ಕೊಡುಗೆ ಸಾರ್ವಕಾಲಿಕರಾಗ. ನೀಪಾದ ಮುಲೇಗ ತಿಯನಿ ಎಂಬ ಕೃತಿಯನ್ನು ರಾಮನಾಡ್ ಶ್ರೀನಿವಾಸಯ್ಯಂಗಾರ್ಯರು ಈ ರಾಗದಲ್ಲಿ ರಚಿಸಿದ್ದಾರೆ.

**ನವರಸ ಕುಂತಳಿ**—ಈ ರಾಗವು ೪೦ನೆ ಮೇಳಕರ್ತ ನವನೀತದ ಒಂದು ಜನ್ಯರಾಗ

ಆ: ಸ ಮ ಪ ದ ನಿ ಸ

ಅ: ಸ ನಿ ದ ಪ ದ ಮ ಗ ರಿ ಸ

**ನವರಸ ಕಲಾನಿಧಿ**—ಈ ರಾಗವು ೨೮ನೆ ಹರಿಕಾಂಭೋಜಿ ಮೇಳದ ಒಂದು ಜನ್ಯರಾಗ.

ಆ: ಸ ರಿ ಮ ಪ ಸ ನಿ ಸ

ಅ: ಸ ನಿ ದ ಪ ಮ ಗ ರಿ ಸ

**ನವರಸ ಗಾಂಧಾರಿ**—ಈ ರಾಗವು ೫೦ನೆ ನಾಮನಾರಾಯಣಿ ಮೇಳದ ಒಂದು ಜನ್ಯರಾಗ.

ಆ: ಸ ರಿ ಗ ಮ ಪ ಮ ದ ನಿ ಸ

ಅ: ಸ ನಿ ದ ಮ ಗ ರಿ ಸ

**ನವರಸ ಚಂದ್ರಿಕೆ**—(೧) ಈ ರಾಗವು ೧೩ನೆ ಮೇಳಕರ್ತ ಗಾಯಕಪ್ರಿಯದ ಒಂದು ಜನ್ಯರಾಗ

ಆ: ಸ ರಿ ಗ ಪ ಮ ಪ ಸ

ಅ: ಸ ದ ಪ ಮ ಗ ರಿ ಸ

(೨) ಇದೇ ಹೆಸರಿನ ಮತ್ತೊಂದು ರಾಗವು ೪೯ನೆ ಮೇಳಕರ್ತ ಧವಳಾಂಬರಿಯ ಜನ್ಯವಾಗಿದೆ.

ಆ: ಸ ರಿ ಗ ಮ ದ ನಿ ಸ

ಅ: ಸ ದ ಪ ಗ ರಿ ಸ

**ನವರಸ ಬಂಗಾಳ**—ಈ ರಾಗವು ೪೭ನೆ ಮೇಳಕರ್ತ ಸುವರ್ಣಾಂಗಿಯ ಒಂದು ಜನ್ಯರಾಗ.

ಆ: ಸ ರಿ ಗ ಮ ದ ಪ ದ ನಿ ಸ

ಅ: ಸ ನಿ ದ ಮ ಗ ಸ

**ನವರಸಗಳು**—ಸಾಹಿತ್ಯ, ನಾಟಕ, ನಾಟ್ಯ ಮತ್ತು ಸಂಗೀತದಲ್ಲಿ ಒಂಬತ್ತು ಬಗೆಯ ರಸಗಳನ್ನು ಶಾಸ್ತ್ರಜ್ಞರು ಹೇಳಿದ್ದಾರೆ. ಅವು: ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ, ಶಾಂತ ಭಕ್ತಿಯನ್ನು ಹತ್ತನೆಯದೆಂದೂ, ಹನ್ನೊಂದನೆಯದೆಂದೂ, ದೇಶಪ್ರೇಮವನ್ನು ವಾತ್ಸಲ್ಯವನ್ನು ಹನ್ನೆರಡನೆಯದೆಂದೂ, ಕೆಲವರು ಪರಿಗಣಿಸುತ್ತಾರೆ ಶೃಂಗಾರ ರಸಕ್ಕೆ ರಸರಾಜವೆಂದು ಹೆಸರು.

**ನವರಸಂ**—ಕೇರಳದ ಕಥಕಳಿ ಸಂಗೀತದಲ್ಲಿ ಬರುವ ಒಂದು ರಾಗ.

**ನವರೋಜ್**—ಈ ರಾಗ ೨೯ನೆ ಮೇಳಕರ್ತ ಧೀರ ಶಂಕರಾಭರಣದ ಒಂದು ಜನ್ಯರಾಗ.

ಆ: ಪ ಧ ನಿ ಸ ರಿ ಗ ಮ ಪ

ಅ: ಮ ಗ ರಿ ಸ ನಿ ಧ ಪ

ಮಧ್ಯಸ್ಥಾಯಿರಾಗ. ಪ್ರಸಿದ್ಧವಾದ ಪಂಚಮಾಂತ್ಯರಾಗ. ಗಮಕ ವರಿಕ ರಕ್ತಿರಾಗ ಧೈವತ ಗಾಂಧಾರಗಳು ವಾದಿಸಂವಾದಿಗಳು. ರಿಷಭ, ಗಾಂಧಾರ, ಧೈವತಗಳು ನ್ಯಾಸ ಮತ್ತು ಜೀವಸ್ವರಗಳು. ದೀನರಸ ಪ್ರಧಾನವಾದರಾಗ. 'ಇದು ಅರೇಬಿಯಾ ಮತ್ತು ಪರ್ಷಿಯಾ ದೇಶಗಳಲ್ಲಿ ಪ್ರಾಚೀನರಾಗವಾಗಿದ್ದು ಭಾರತಕ್ಕೆ ೧೬ನೆ ಶತಮಾನದಲ್ಲಿ ಬಂದಿತು. ಕರ್ಣಾಟಕ ಸಂಗೀತದಲ್ಲಿ ಸುಮಾರು ೧೫೦ ವರ್ಷಗಳಿಂದ ಇದೆ. ಇದು ಜನಪದ ಸಂಗೀತದಲ್ಲೂ ವಿವಾಹದ ಹಾಡುಗಳಲ್ಲೂ ಕಂಡು ಬರುತ್ತದೆ. ವೆಂಕಟಮಖಿಯ ಕಲುವುಣ ರಖ್ಖಣ ಎಂಬ ಧ್ರುವತಾಳದ ಗೀತೆ, ಮುತ್ತುಸ್ವಾಮಿ ದೀಕ್ಷಿತರ ಹಸ್ತಿವದನಾಯ ನಮಸ್ತುಭ್ಯಂ (ಮಿಶ್ರ ಏಕ) ಎಂಬ ಕೃತಿ, ಸುಬ್ಬರಾಮ ದೀಕ್ಷಿತರ ಸಂಚಾರಿಗಳು, ಸ್ವಾತಿತಿರುನಾಳ್ ಮಹಾರಾಜರ ಸೇವೇನನು (ಛಾಪು) ಎಂಬ ಕೃತಿ, ಕ್ಷೇತ್ರಜ್ಞನ ಏಲವಚ್ಚಿತಿವೇ ಎಂಬ ಪದ ಈ ರಾಗದಲ್ಲಿವೆ.

**ನವರತ್ನಗಳು**—ಅಕ್ಬರ್ ಚಕ್ರವರ್ತಿಯ ಆಸ್ಥಾನದಲ್ಲಿ ಒಂಬತ್ತು ಶ್ರೇಷ್ಠ ವಿದ್ವಾಂಸರಿದ್ದರು. ತಾನ್‌ಸೇನನು ಅವರಲ್ಲಿ ಅತ್ಯಂತ ಶ್ರೇಷ್ಠನಾಗಿದ್ದನು. ಅಬುಲ್ ಫಜಲ್ ಮತ್ತು ರಾಜಾ ಬೀರಬಲ್ಲನು ನವಮಣಿಗಳೆಂಬ ವಿದ್ವಾಂಸರ ಕೂಟಕ್ಕೆ ಸೇರಿದವರಾಗಿದ್ದರು.

**ನವರತ್ನಮಾಲಾ**—ತಿರುವಾಂಕೂರಿನ ಸ್ವಾತಿತಿರುನಾಳ್ ಮಹಾರಾಜರು ರಚಿಸಿರುವ ಒಂಬತ್ತು ಕೃತಿಗಳ ಮಾಲಿಕೆ. ಶ್ರವಣ, ಕೀರ್ತನ, ಸ್ಮರಣೆ, ಪಾದಸೇವನ, ಅರ್ಚನ, ವಂದನೆ, ದಾಸ್ಯ, ಸಖ್ಯ, ಆತ್ಮನಿವೇದನೆ ಎಂಬ ನವವಿಧ ಭಕ್ತಿಯನ್ನು ಕುರಿತು ಈ ಕೃತಿಗಳನ್ನು ರಚಿಸಲಾಗಿದೆ.

**ನವರತ್ನಮಾಲಿಕಾ**—ಶ್ಯಾಮಾಶಾಸ್ತ್ರಿಗಳು ಮಧುರೈಮೀನಾಕ್ಷಿ ಅಮ್ಮನನ್ನು ಕುರಿತು, ಒಂಬತ್ತು ಕೃತಿಗಳನ್ನು ರಚಿಸಿ ಅಮ್ಮನವರ ಸನ್ನಿಧಿಯಲ್ಲಿ ಹಾಡಿದರು. ಅವರ ಶಿಷ್ಯ ಅಲಸೂರು ಕೃಷ್ಣಯ್ಯರ್ ಇವುಗಳನ್ನು ಸ್ವರ ಲಿಪಿತ ಸಹಿತ ಬರೆದು ಕೊಂಡರು. ಇವುಗಳಲ್ಲಿ ಏಳು ಕೃತಿಗಳು ಬಹುಪ್ರಸಿದ್ಧವಾಗಿವೆ —

| | | | | | | |
|---|---|---|---|---|---|---|
| ೧. | ಸರೋಜದಳ ನೇತ್ರಿ | — | ಶಂಕರಾಭರಣ | — | ಆದಿ |
| ೨. | ಮರಿವೇರೆಗತಿ | — | ಆನಂದ ಭೈರವಿ | — | ಛಾಪು |
| ೩. | ನನ್ನು ಬ್ರೋವುಲಲಿತ | — | ಲಲಿತ | — | ಛಾಪು |
| ೪. | ದೇವಿ ಮೀನನೇತ್ರಿ | — | ಶಂಕರಾಭರಣ | — | ಆದಿ |
| ೫. | ಮೀನಲೋಚನಬ್ರೋವ | — | ಧನ್ಯಾಸಿ | — | ಛಾಪು |
| ೬. | ದೇವೀ ನೀ ಪಾದ ಸಾರಸ | — | ಕಾಂಭೋಜಿ | — | ಆದಿ |
| ೭. | ಮಾಯಮ್ಮಯನಿ | — | ಆಹಿರಿ | — | ಆದಿ |

**ನವರಾತ್ರಿ ಕೀರ್ತನೆಗಳು**—ತಿರುವನಂತಪುರದಲ್ಲಿ ನವರಾತ್ರಿ ಉತ್ಸವದ ಒಂಬತ್ತು ದಿನಗಳಲ್ಲಿ ಹಾಡಲು ಸ್ವಾತಿ ತಿರುನಾಳ್ ಮಹಾರಾಜರು ಒಂಬತ್ತು ಕೃತಿಗಳನ್ನು ರಚಿಸಿದರು. ಇವುಗಳನ್ನು ಪ್ರತಿವರ್ಷವೂ ನಡೆಯುವ ನವರಾತ್ರಿ ಉತ್ಸವ ಸಂದರ್ಭದಲ್ಲಿ ಹಾಡುತ್ತಾರೆ. ಇವು ಯಾವುವೆಂದರೆ—

| | | | | |
|---|---|---|---|---|
| ದೇವಿ ಜಗಜ್ಜನನಿ | — | ಶಂಕರಾಭರಣ | — | ಮೊದಲ ದಿನ |
| ಪಾಹಿಜನನಿ | — | ಕಲ್ಯಾಣಿ | — | ಎರಡನೆ ದಿನ |
| ದೇವೀ ಪಾವನೆ | — | ಸಾವೇರಿ | — | ಮೂರನೆ ದಿನ |
| ಭಾರತಿ ಮಾಮವ | — | ತೋಡಿ | — | ನಾಲ್ಕನೆ ದಿನ |
| ಜನನಿ ಮಾಮವ | — | ಭೈರವಿ | — | ಐದನೆ ದಿನ |
| ಸರೋರುಹ ಹಾಸನ ಜಾಯೇ | — | ಪಂತುವರಾಳಿ | — | ಆರನೆ ದಿನ |
| ಜನನಿ ಪಾಹಿಸದಾ | — | ಶುದ್ಧ ಸಾವೇರಿ | — | ಏಳನೆ ದಿನ |
| ಪಾಹಿಜನನಿ ಸತತಂ | — | ನಾಟಕುರಂಜಿ | — | ಎಂಟನೆ ದಿನ |
| ಪಾಹಿ ಪರ್ವತ ನಂದಿನಿ | — | ಆರಭಿ | — | ಒಂಬತ್ತನೇ ದಿನ |

**ನವವಿಧ ಭಕ್ತಿ**—ಭಾಗವತದಲ್ಲಿ ಹೇಳಿರುವ ಒಂಬತ್ತು ಬಗೆಯ ಭಕ್ತಿ ಯಾವುವೆಂದರೆ—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯ ಮಾತ್ಮನಿವೇದನಂ ॥

೧. ಶ್ರವಣ ೨. ಕೀರ್ತನೆ ೩. ಸ್ಮರಣ ೪. ಪಾದಸೇವನ ೫. ಅರ್ಚನ ೬ ವಂದನ ೭. ದಾಸ್ಯ ೮. ಸಖ್ಯ ೯. ಆತ್ಮನಿವೇದನ.

**ನವಿರ್**—ಕರುಣಾಮೃತಸಾಗರಂ ಎಂಬ ತಮಿಳು ಗ್ರಂಥದಲ್ಲಿ ಉಕ್ತವಾಗಿರುವ ಮರುದಯಾಳ್ ಎಂಬ ಪುರಾತನ ಮೇಳದ ಒಂದು ಜನ್ಯರಾಗ.

**ನವಸಂಧಿನೃತ್ಯ**—ದೇವಾಲಯಗಳ ಬ್ರಹ್ಮೋತ್ಸವದ ಮೊದಲನೆಯ ದಿನ ಅಂದರೆ ಧ್ವಜಾರೋಹಣದಂದು ಈ ಒಂಬತ್ತು ನೃತ್ಯಗಳನ್ನು ನಿರ್ದಿಷ್ಟವಾದ ದೇವತೆಗಳ ಪ್ರೀತ್ಯರ್ಥವಾಗಿ ಆಡುವ ಸಂಪ್ರದಾಯವಿತ್ತು. ಅವುಯಾವುವೆಂದರೆ—

| | | | |
|---|---|---|---|
| ೧. | ಬ್ರಹ್ಮ | — ಮಧ್ಯ | — ಸಮಪಾದ (ಕಮಲ ನೃತ್ಯ) |
| ೨. | ಇಂದ್ರ | — ಪೂರ್ವ | — ಭುಜಂಗ (ಭುಜಂಗ ಚಿತ್ತ) |
| ೩. | ಅಗ್ನಿ | — ಆಗ್ನೇಯ | — ಮೌದಲ ನೃತ್ತ |
| ೪. | ಯಮ | — ದಕ್ಷಿಣ | — ದಂಡಪಾದನೃತ್ತ |
| ೫. | ನೈಋತಿ | — ನೈಋತ್ಯ | — ಭುಜಂಗತ್ರಾಸ |
| ೬. | ವರುಣ | — ಪಶ್ಚಿಮ | — ಕುಂಚಿತ |
| ೭. | ವಾಯು | — ವಾಯುವ್ಯ | — ಭುಜಂಗಲಲಿತ |
| ೮. | ಕುಬೇರ | — ಉತ್ತರ | — ಸಂಧ್ಯ ನೃತ್ತ (ಅಂಕುಚಿತ ಪಾದ) |
| ೯. | ಈಶಾನ | — ಈಶಾನ್ಯ | — ಊರ್ಧ್ವಪಾದ (ಬ್ರಹ್ಮರಿಕ ಮತ್ತು ಮರ್ಮನಿ ನೃತ್ತ) |

**ನವಸಂಧಿ ಪೂಜೆಗಳು**—ನವಸಂಧಿಗಳ ವಿವಿಧ ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಪೂಜೆಗಳು. ಶ್ಲೋಕಗಳು ಮತ್ತು ಚೂರ್ಣಿಕೆಗಳು, ಜತಿಗಳು, ರಾಗಗಳು ಮತ್ತು ಪಣ್‌ಗಳಗಾನ, ಗೊತ್ತಾದ ತಾಳಗಳಲ್ಲಿ ಹಾಡುವುದು, ಗೊತ್ತಾದ ವಾದ್ಯಗಳನ್ನು ನುಡಿಸುವುದು, ಗೊತ್ತಾದ ನೃತ್ಯಗಳನ್ನಾಡುವುದು ಇವೆಲ್ಲವೂ ನವಸಂಧಿ ಪೂಜೆ ಎನಿಸಿಕೊಂಡಿವೆ. ಇವುಗಳಿಗೆ ಸಂಧಿ ಜತಿಗಳೂ, ಸಂಧಿವಾದ್ಯಗಳು, ಸಂಧಿ ರಾಗಗಳು ಮತ್ತು ಪಣ್‌ಗಳೆಂದು ಹೆಸರು.

**ನವಸೂತಿಕ**—ಈ ರಾಗವು ೭ನೆ ಮೇಳಕರ್ತ ಹನುಮತೋಡಿಯ ಒಂದು ಜನ್ಯರಾಗ,

ಆ: ಸ ರಿ ಗ ದ ನಿ ಸ

ಅ: ಸ ನಿ ದ ಗ ರಿ ಸ

**ನವತಾಳಗಳು**—(೧) ಭರತ ಶಾಸ್ತಿರಂ—ಎಂಬ ತಮಿಳು ಗ್ರಂಥದಲ್ಲಿ ಈ ಒಂಬತ್ತು ತಾಳಗಳನ್ನು ಹೇಳಿದೆ—ಅರಿತಾಳ, ಅರುಮತಾಳ, ಸಮತಾಳ, ಜಯತಾಳ ಚಿತ್ತಿರತಾಳ, ದುರುವತಾಳ, ನಿವಿರ್ತತಾಳ, ಪದಮತಾಳ, ವಿಡತಾಳ.

(೨) ಪಿಂಗಳ ನಿಘಂಟು—ಎಂಬ ಗ್ರಂಥದಲ್ಲಿ ಈ ತಾಳಗಳನ್ನು ಹೇಳಿದೆ—ಸಮತಾಳ, ಅರುಮತಾಳ, ಅಟ್ಟಿತಾಳ, ಪದಿಮತಾಳ, ಜಯತಾಳ, ಮಟ್ಟೆಯತಾಳ, ವಿಡತಾಳ, ನಿವೃತ್ತತಾಳ, ದುರುವತಾಳ.

**ನವಸಂಧಿ ತಾಳಗಳು**—ಇವು ದೇವಾಲಯಗಳ ನವಸಂಧಿ ಪೂಜಾ ಸಮಯದಲ್ಲಿ ಬಳಸುವ ಒಂಬತ್ತು ಬಗೆಯತಾಳ. ನವಸಂಧಿಗಳು ಯಾವುವೆಂದರೆ—

ಬ್ರಹ್ಮ, ಇಂದ್ರ, ಅಗ್ನಿ, ಯಮ, ನೈಋತಿ, ವರುಣ, ವಾಯು, ಕುಬೇರ ಮತ್ತು ಈಶಾನ. ನವಸಂಧಿ ತಾಳಗಳು ಯಾವುವೆಂದರೆ—

| | | |
|---|---|---|
| ಬ್ರಹ್ಮ | — ಮಧ್ಯ | — ಬ್ರಹ್ಮತಾಳ |
| ಇಂದ್ರ | — ಪೂರ್ವ | — ಇಂದ್ರ (ಸಮ) |
| ಅಗ್ನಿ | — ಆಗ್ನೇಯ | — ಮಟ್ಟಾಪಸನ |
| ಯಮ | — ದಕ್ಷಿಣ | — ಭೃಂಗಿ (ಅಸಮ) |
| ನೈಋತಿ | — ನೈಋತ್ಯ | — ನೈಋತಿ (ಭ್ರಮರ, ಮಲ್ಲ) |
| ವರುಣ | — ಪಶ್ಚಿಮ | — ನವ |
| ವಾಯು | — ವಾಯುವ್ಯ | — ಬಲಿ |
| ಕುಬೇರ | — ಉತ್ತರ | — ಕೊಟ್ಟರಿ |
| ಈಶಾನ | — ಈಶಾನ್ಯ | — ಟಕ್ಕರಿ |

**ನವಾವರಣ ಕೀರ್ತನೆಗಳು**—ಮುತ್ತುಸ್ವಾಮಿ ದೀಕ್ಷಿತರು ತಿರುವಾರೂರು ದೇವಾಲಯದ ಕಮಲಾಂಬಾ ಅಮ್ಮನವರನ್ನು ಕುರಿತು ರಚಿಸಿರುವ ಒಂಬತ್ತು ಕೀರ್ತನೆಗಳು ದೇವಿಯ ನವಾವರಣ ಪೂಜೆಗೆ ಸಂಬಂಧಿಸಿದ ಸಮುದಾಯ ಕೀರ್ತನೆಗಳು ಇವುಗಳಿಗೆ ವಿಭಕ್ತಿ ಕೀರ್ತನೆಗಳೆಂದು ಹೆಸರು.

| **ಆವರಣದ ಸಂಖ್ಯೆ** | **— ಕೀರ್ತನೆ** | **— ರಾಗ** | **— ತಾಳ** | **— ವಿಭಕ್ತಿಯ ಸಂಖ್ಯೆ** |
|---|---|---|---|---|
| **ಧ್ಯಾನಕೀರ್ತನೆ** | — ಕಮಲಾಂಬಿಕೆ | — ತೋಡಿ | — ರೂಪಕ | |
| ಪ್ರಥಮಾವರಣ | –ಕಮಲಾಂಬಾ ಸಂರಕ್ಷತು | –ಆನಂದಭೈರವಿ | –ತ್ರಿಪುಟ | –ಪ್ರಥಮಾ ವಿಭಕ್ತಿ |
| ದ್ವಿತೀಯಾ ,, | –ಕಮಲಾಂಬಾಂ ಭಜರೇ | –ಕಲ್ಯಾಣಿ | –ಆದಿ | –ದ್ವಿತೀಯಾ ,, |
| ತೃತೀಯಾ ,, | –ಕಮಲಾಂಬಿಕಾಯಾ | –ಶಂಕರಾಭರಣ | –ರೂಪಕ | –ತೃತೀಯಾ ,, |
| ಚತುರ್ಥಾ ,, | –ಶ್ರೀಕಮಲಾಂಬಿಕಾಯೈ | –ಕಾಂಭೋಜಿ | –ಅಟ | –ಚತುರ್ಥೀ ,, |
| ಪಂಚಮಾ ,, | –ಶ್ರೀಕಮಲಾಂಬಾಯಾಃ– | ಭೈರವೀ | –ಝಂಪ | –ಪಂಚಮಿ ,, |
| ಷಷ್ಟಾ ,, | –ಶ್ರೀಕಮಲಾಂಬಿಕಾಯಾಃ | –ಪುನ್ನಾಗವರಾಳಿ | –ತಿಶ್ರಏಕ | –ಷಷ್ಟೀ ,, |
| ಸಪ್ತಮಾ ,, | –ಕಮಾಲಾಂಬಿಕಾಯಾಂ | –ಸಹಾನ | –ತ್ರಿಪುಟ | –ಸಪ್ತಮೀ ,, |
| ಅಷ್ಟಮಾ ,, | –ಶ್ರೀಕಮಲಾಂಬಿಕೇ | –ಘಂಟಾ | –ಆದಿ | –ಸಂ. ಪ್ರ ,, |
| ನವಾ ,, | –ಶ್ರೀಕಮಲಾಂಬ ಜಯತಿ | –ಆಹಿರಿ | –ಏಕ | –ಸಂ ಪ್ರ ,, |
| **ಮಂಗಳ ಕೀರ್ತನೆ** | —ಶ್ರೀಕಮಲಾಂಬಿಕೆ | –ಶ್ರೀ | –ಖಂ. ಏಕ– | |

**ನವಾಭರಣ**—ರಾಗತಾಳ ಚಿಂತಾಮಣಿ ಎಂಬ ತೆಲುಗು ಗ್ರಂಥದಲ್ಲಿ ಉಕ್ತವಾಗಿರುವ ಒಂದು ತಾಳ.



ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯರು 1925ರಲ್ಲಿ ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನ ವೆಂಕಟಯ್ಯನ ಛತ್ರ ಎಂಬ ಗ್ರಾಮದಲ್ಲಿ ಹುಟ್ಟಿದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡಿ 1947ರಲ್ಲಿ ಬಿ.ಎ. ಆನರ್ಸ್ ಪದವಿಯನ್ನೂ, 1961ರಲ್ಲಿ ಕಾಶಿ ವಿಶ್ವವಿದ್ಯಾನಿಲಯದ ಎಂ.ಎ. ಪದವಿಯನ್ನೂ, 1962ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಿ.ಎಡ್. ಪದವಿಯನ್ನೂ ಪಡೆದರು. "ಹೊಯ್ಸಳರ ಯುಗದ ಜನಜೀವನ" (ಕ್ರಿ.ಶ. 1000–1300) ಎಂಬ ಪ್ರೌಢ ಪ್ರಬಂಧವನ್ನು ರಚಿಸಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪದವಿಯನ್ನು ಪಡೆದರು. 1947ರಲ್ಲಿ ತಮಿಳುನಾಡಿನ ಪ್ರೌಢಶಾಲೆಯೊಂದರಲ್ಲಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಆಚಾರ್ಯರು ಅನಂತರ ಕರ್ನಾಟಕ ಪ್ರೌಢಶಾಲೆಗಳಲ್ಲಿ ಮತ್ತು ಕಿರಿಯ ಕಾಲೇಜುಗಳಲ್ಲಿ ತಮ್ಮ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ಸಂಗೀತದ ಬಗ್ಗೆ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡಿರುವ ಶ್ರೀ ಆಚಾರ್ಯರು ಸಂಗೀತಶಾಸ್ತ್ರ ಮತ್ತು ಸಂಗೀತ ವಿದ್ವಾಂಸರನ್ನು ಕುರಿತು ಕೆಲವು ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಪ್ರೊ. ವಿ. ರಾಮರತ್ನಂ ಅವರೊಂದಿಗೆ "ಕರ್ಣಾಟಕ ಸಂಗೀತ ಸುಧಾ" ಕೃತಿಯನ್ನು ರಚಿಸಿದ್ದಾರೆ.

ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾನಿಲಯ

ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾನಿಲಯ

## ಸಂಗೀತಶಾಸ್ತ್ರ ಕೃತಿಗಳು

1. ಕರ್ಣಾಟಕ ಸಂಗೀತ ಸುಧಾ—ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ
ವಿ. ರಾಮರತ್ನಂ
2. ನೌಕಾಚರಿತ್ರೆ—ಸಂ : ಆರ್. ಎನ್. ದೊರೆಸ್ವಾಮಿ, ವಿ. ರಾಮರತ್ನಂ
3. ಪಲ್ಲಕಿ ಸೇವಾ ಪ್ರಬಂಧಂ— ಸಂ : ಎಂ. ವಿ. ರತ್ನ, ವಿ. ರಾಮರತ್ನಂ
4. ಸಂಗೀತಶಾಸ್ತ್ರ ಪರಿಚಯ—ಭಾಗ ೧, ೨ . ವಿ. ರಾಮರತ್ನಂ
ಆರ್. ಎನ್. ದೊರೆಸ್ವಾಮಿ
5. ಕೀರ್ತನ ದರ್ಪಣ—ಭಾಗ ೧, ಸಂ : ವಿ. ರಾಮರತ್ನಂ
ಆರ್. ಎಲ್. ಅನಂತರಾಮಯ್ಯ
6. ಕೀರ್ತನ ದರ್ಪಣ—ಭಾಗ ೨, ಸಂ : ವಿ. ರಾಮರತ್ನಂ
ಆರ್ ಎಲ್. ಅನಂತರಾಮಯ್ಯ
ಎಂ. ವಿ. ರತ್ನ
7. ವೀಣಾವೆಂಕಟಗಿರಿಯಪ್ಪನವರ ಕೃತಿಗಳು—ಆರ್. ಎನ್. ದೊರೆಸ್ವಾಮಿ
ವಿ. ಅಮೃತಾ
8. ಟಿ. ಚೌಡಯ್ಯನವರ ಕೃತಿಗಳು—ವಿ. ರಾಮರತ್ನಂ
9. ಸಂಗೀತ ರತ್ನಾಕರ—ಸಂ : ೧ ಪ್ರೊ. ರಾ. ಸತ್ಯನಾರಾಯಣ
10. ಸಂಗೀತ ದರ್ಪಣ—ವಿ. ರಾಮರತ್ನಂ




ರಕ್ಷಾಕವಚ ಮುದ್ರಣ : ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು